# ಚಿತ್ಪ್ರಭೆ

## ಸಂಸ್ಮರಣ ಸಂಪುಟ

೧೯೭೨

ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲಾ ನಂ. ೫೦

# ಚಿತ್ಪ್ರಭೆ

( ಸಂಸ್ಮರಣ ಸಂಪುಟ )

ಸಂಪಾದಕರು :

ಜಿ. ಎಚ್. ಹನ್ನೆರಡುಮಠ
M. A.



೧೯೭೨

# ಪರಿವಿಡಿ

## ಭಾಗ : ೪

## ಪೂಜ್ಯ ಜಗದ್ಗುರುಗಳ ನೆನಹಿನಲ್ಲಿ ಚಿಂತನಪ್ರಭೆ

ವಿಷಯ ಪುಟ

## ಭಾಗ : ೫

## ಪೂಜ್ಯ ಜಗದ್ಗುರುಗಳವರ ವಿಚಾರ ಪ್ರಭೆ

| ವಿಷಯ | ಪುಟ |
| --- | --- |





# ಮುನ್ನುಡಿ

'ಚಿತ್‌ಪ್ರಭೆ' ಎಂಬ ಗ್ರಂಥವನ್ನು ಕುರಿತು ಕೆಲವು ವಿಚಾರಗಳನ್ನಿಲ್ಲಿ ಸಂತೋಷದಿಂದ ಮಂಡಿಸಿದ್ದೇನೆ.

ರಾಜ್ಯಕ್ಕೆ ಯೋಗ್ಯ ಆಡಳಿತಗಾರ ಬೇಕು. ಮಠಕ್ಕೆ ಉಚಿತ ಗುರು ಬೇಕು. ಇದು ಪೂರೈಸದೆ ಹೋದರೆ ರಾಜ್ಯ ವ್ಯಾಜವಾಗುತ್ತದೆ. ಮಠ ಅಟಮಟವಾಗುತ್ತದೆ.

ರಾಜ್ಯಕ್ಕೆ ಮಹತ್ವವಿದ್ದಂತೆ ಇಂದು ಮಠಗಳಿಗೂ ಮಹತ್ವವಿದೆ. ಏಕೆಂದರೆ ನಾವಿರುವದು ಸೆಕ್ಯುಲರ್ ರಾಜ್ಯದಲ್ಲಿ. ಧರ್ಮದ ಬಗ್ಗೆ ಸರಕಾರದಿಂದ ತಿರಸ್ಕಾರವೂ ಇಲ್ಲ. ಪುರಸ್ಕಾರವೂ ಇಲ್ಲ. ಇಂಥ ಸಮಯದಲ್ಲಿ ಧರ್ಮವು ಅಧರ್ಮವಾಗದಂತೆ ನೋಡಿ-ಕೊಳ್ಳುವ ಹೊಣೆ ಮಠಗಳ ಮೇಲೆ ಬೀಳುತ್ತದೆ. ಅವು ಬರಿ ಧರ್ಮದ ಬಾಹ್ಯಾಂಗದಲ್ಲಿ ಆಸಕ್ತಿ ವಹಿಸಿದರೆ ಧಾರ್ಮಿಕ ಜೀವನ ಯಾಂತ್ರಿಕವಾಗಿ "ರಸೋ ವೈ ಸಃ" ಎಂಬ ಅನುಭವವೇ ಲುಪ್ತವಾಗುತ್ತದೆ. ಅವು ಬರಿ ಮತಾಭಿಮಾನದ ಮುಸುಕಿನಲ್ಲಿ ಸಿಕ್ಕು ಬಿದ್ದಿದ್ದರೆ ಧರ್ಮದಲ್ಲಿದ್ದ ಆಧ್ಯಾತ್ಮ ಕಾಣದಾಗಿ ಜ್ಞಾನವೂ ದೃಷ್ಟಿವೈಶಾಲ್ಯವೂ ಇಲ್ಲದಾಗಿ ಮಠಗಳು ಋತದ ಕೋಟೆಗಳಾಗುವದರ ಬದಲು ಅನೃತದ ಕೋಟೆಗಳಾಗ-ಬಹುದು.

ಇಲ್ಲಿ ಮೂರುಸಾವಿರ ಮಠದ ಭಾಗ್ಯವನ್ನು ನೆನೆಸುವ ಹಾಗಿದೆ, ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಸ್ವಾಮಿಜಿಯವರು ಆದರ ಕಡೆಗೆ ನಾಡಿನ ಮಹಾಜನರ ಚಿತ್ತವನ್ನು ಸೆಳೆದಿದ್ದಾರೆ. ಹುಟ್ಟಿನಿಂದ, ಶಿವಯೋಗ ಮಂದಿರಕ್ಕಾಗಿ ಅವರ ಆಯ್ಕೆಯಿಂದ, ಅದಕ್ಕೂ ಹೆಚ್ಚಾಗಿ ಇವರೇ ಮೂರುಸಾವಿರ ಮಠದ ಪೀಠಕ್ಕೆ ತಮ್ಮ ತರು-ವಾಯ ಬರಬೇಕೆಂದು ಲಿಂಗೈಕ್ಯ ಜಗದ್ಗುರು ಗುರುಸಿದ್ಧರಾಜಯೋಗೀಂದ್ರರು ಮಾಡಿದ ಸಂಕಲ್ಪದಿಂದ ಸ್ವಾಮಿಜಿಯವರ ಯೋಗ್ಯತೆಯ ಕಲ್ಪನೆ ಸಹಜವಾಗಿ ಆಗಬಲ್ಲದು. ಪೀಠದಿಂದ ಅವರೆಸಗಿದ ಕಾರ್ಯ ಅದ್ಭುತವಾಗಿದೆ. ಕಾರ್ಯಗೌರವವನ್ನು ಹುಡುಕಿಕೊಂಡು ಅವರು ಹೋದವರಲ್ಲ. ಇದ್ದಲ್ಲಿ ಮಹತಿ ನಡೆದು ಬಂದರೆ ಅದನ್ನು ತಮ್ಮ ಧ್ಯೇಯಕ್ಕಾಗಿ ತಿರುಗಿಸಲು ಅವರು ಮರೆಯುವದಿಲ್ಲ. ದಿಲ್ಲಿಯಲ್ಲಿ ಜರುಗಿದ ಸಮ್ಮೇಲನ, ಕಿಯೋಟೋದಲ್ಲಿ ನೆರೆದ ಜಾಗತಿಕ ಸಮ್ಮೇಲನದಲ್ಲಿ ಜಗದ್ಗುರುಗಳು ಭಾಗವಹಿಸಿ ಅಧಿಕಾರವಾಣಿಯಿಂದ ತಮ್ಮ ಸಂದೇಶವನ್ನಿತ್ತರು. ಅದೇ ರೀತಿಯಾಗಿ ಪಾಂಡಿಚೇರಿಯ ಶ್ರೀ ಅರವಿಂದಾಶ್ರಮವನ್ನೂ ಮಹಾಮಾತೆಯವರ ವ್ಯಕ್ತಿತ್ವವನ್ನೂ ಪ್ರತ್ಯಕ್ಷ ಕಾಣಬೇಕೆಂಬ ಜಿಜ್ಞಾಸೆಯಾದಾಗ ಓರ್ವ ಜಿಜ್ಞಾಸುವಾಗಿ ಅವರು ಅಲ್ಲಿಗೆ ಹೋಗಿ ಬಂದರು. ಶ್ರೀ ಜಗದ್ಗುರುಗಳ ಬಗ್ಗೆ ಆದರವಿದ್ದ ಗಣ್ಯ ಸಾಹಿತಿಗಳೆಲ್ಲ

ತುಂಬಿದಂತಃಕರಣದಿಂದ ಈ ಗ್ರಂಥಕ್ಕಾಗಿ ಬರೆದಿದ್ದಾರೆ, ಶ್ರೀ ಜಗದ್ಗುರುಗಳು ಮೂರು ಸಾವಿರ ಮಠದಲ್ಲಿ ಯೋಚಿಸಿದ ಹನ್ನೆರಡು ವರ್ಷಗಳ ಕಾರ್ಯಮಹತಿಯನ್ನು ಬಣ್ಣಿಸಲು ಈ ಅಭಿನಂದನ ಗ್ರಂಥದ ಯೋಜನೆಯಾಗಿದೆ. ಆದರೆ ಅಭಿನಂದನೆಗಿಂತ ಇದು ಅಭಿವಂದನ ಗ್ರಂಥ. ಪವಿತ್ರ ಭಾವನೆಗಳು ಇಲ್ಲಿಯ ಲೇಖನಗಳಲ್ಲೆಲ್ಲ ತುಂಬಿ ಕೊಂಡಿವೆ.

'ಚಿತ್‌ಪ್ರಭೆ'ಯು ಮಿಂಚುಗಳ ಗೊಂಚಲಾಗುವಂತೆ ಸಂಪಾದಕರು ಏರ್ಪಾಡು ಮಾಡಿದ್ದಾರೆ. ಮೊದಲನೆಯ ಭಾಗದಲ್ಲಿ ಜಗದ್ಗುರುಗಳ ವ್ಯಕ್ತಿತ್ವದ ಅನೇಕ ಪೈಲುಗಳನ್ನು ಕುರಿತು ಪಕ್ಷಿನೋಟಗಳಿವೆ. ಕವನಗಳಲ್ಲಿಯೂ ಗದ್ಯ ಚಿತ್ರಗಳಲ್ಲಿಯೂ ಅವು ರೂಪಗೊಂಡಿವೆ. ಅಲ್ಲಲ್ಲಿ ಬಂದ ಉಕ್ತಿಸರಣಿ ಅತಿಶಯೋಕ್ತಿಯ ದಾರಿಯುಪೆಂದೆನಿಸಿದರೆ ಅವು ಪ್ರೀತಿಯ ಉದ್ಗಾರಗಳೆಂಬುದನ್ನು ಓದುಗರು ನೆನೆಯಬೇಕು. ಪ್ರೀತಿಗೆ ಎಂತಹ ಅತಿಶಯವೂ ಅಲ್ಪವೇ.

ಎರಡನೆಯ ಭಾಗದಲ್ಲಿ ಪೂಜ್ಯ ಜಗದ್ಗುರುಗಳ ಸಾಹಿತ್ಯ ಕೃತಿಗಳನ್ನು ಕುರಿತು ವಿವೇಚನೆಗಳಿವೆ. ಅವರು ಕವಿಗಳಾದಂತೆ ಗದ್ಯ ಲೇಖಕರೂ ವಾಗ್ಮಿಗಳೂ ಆಗಿದ್ದಾರೆ. ಅವರ ಲಾವಣಿ-ಕಂದ–ನಾಮಾವಳಿ–ಭಾವಗೀತಗಳ ಪರಿಚಯವನ್ನು ವಿವಿಧ ಲೇಖಕರು ಚೆನ್ನಾಗಿಯೇ ಮಾಡಿದ್ದಾರೆ. ಜಗದ್ಗುರುಗಳ ' ರತ್ನಪಕ್ಷಿ ' ಕವನವನ್ನು ಕುರಿತು ಜಕನಿ ಯವರು ಮಾಡಿದ ವಿವೇಚನೆಯನ್ನು ಕುತೂಹಲದಿಂದೋದಿದೆ. ಏಕೆಂದರೆನನ್ನ ' ಕಲೋ, ಪಾಸಕ ಎಂಬ ಸಂಗ್ರಹದಲ್ಲಿ ರತ್ನಪಕ್ಷಿಯನ್ನು ಕುರಿತು ನನ್ನದೂ ಒಂದು ದೀರ್ಘ ಕವನವಿದೆ, ಅರ್ಥಾತ್ ಎರಡೂ ಕವನಗಳ ಹೊಳವು ಬೇರೆ ಬೇರೆಯಾಗಿದೆ. ಪೂಜ್ಯ ಜಗದ್ಗುರುಗಳ **ಆಶೀರ್ವಾಣಿ** ಹಾಗು **ಅಮೃತಬಿಂದು** ಮತ್ತು **ಅಪ್ಪಯ್ಯ ಸ್ವಾಮಿಗಳ ಚರಿತೆ** ಎಂಬ ಗದ್ಯ ಕೃತಿಗಳ ಪರಿಚಯವೂ ಇಲ್ಲಿ ಸ್ವಾರಸ್ಯಮಯವಾಗಿ ಬಂದಿದೆ. ಒಟ್ಟಾರೆ ಇಲ್ಲಿ ಅವರ ಮಹೋನ್ನತ ವಿಚಾರಧಾರೆ ಹಾಗು ಉದಾತ್ತ ಭಾವನಾಲಹರಿ ಪರಿಣಾಮಕಾರಿಯಾಗಿ ಮೂಡಿ ಬಂದಿವೆ.

ಮೂರನೆಯ ಭಾಗದಲ್ಲಿ ಪೂಜ್ಯ ಜಗದ್ಗುರುಗಳ ನೆನಹಿನಲ್ಲಿ ಬಂದ ಕಾವ್ಯಪ್ರಭೆ ಯಿದೆ. ಇಲ್ಲಿ ಕಿರಿಕಿರಿಯರ ಇಂಚರಗಾಣ್ಕೆಯಿದೆ. ನಾಲ್ಕನೆಯ ಭಾಗದಲ್ಲಿ ಚಿಂತನ ಪ್ರಭೆಯಿದೆ. ಒಂದು ದೃಷ್ಟಿಯಿಂದ ಈ ಗ್ರಂಥದಲ್ಲಿ ಇದು ಅತಿ ಮಹತ್ವದ ಭಾಗವಾಗ ಬಹುದು. ಇಲ್ಲಿರುವ ಲೇಖನಗಳು ಬರಿ ಪರಿಣತರು ಬರೆದ ಲೇಖನಗಳಲ್ಲ, ಬಹುತೇಕ ಇಂಥವರು ಸಾಕಷ್ಟು ಪರಿಶ್ರಮ ವಹಿಸಿ ಬರೆದ ಲೇಖನಗಳೂ ಇಲ್ಲಿವೆ. ಈ ಅಭಿನಂದನ ಗ್ರಂಥ ಈ ಮೂಲಕ ಅಭಿನಂದನಾರ್ಹವಾಗಿದೆ.

ಈ ಭಾಗದಲ್ಲಿ ಮೆಚ್ಚಿಗೆಯಾಗುವ ಇನ್ನೊಂದು ಮಾತೆಂದರೆ ವೀರಶೈವವನ್ನಲ್ಲದೆ ಇನ್ನುಳಿದ ವಿಷಯಗಳ ಮೇಲೂ ಇಲ್ಲಿ ಲೇಖನಗಳಿರುವದು. ಶೈವ–ಜೈನ ದರ್ಶನಗಳು ಹಾಗು "ಅದ್ವೈತ ಹಾಗು ಪಾಶ್ಚಾತ್ಯ ತತ್ವಜ್ಞಾನ" ಎಂಬ ಲೇಖನಗಳು ಈ ಮಾದರಿಯವು.

ಪೂಜ್ಯ ಜಗದ್ಗುರುಗಳ 'ವಿಚಾರ ಪ್ರಭೆ'ಯೆಂಬ ಐದನೆಯ ಭಾಗದಲ್ಲಿ ಅವರ ಗದ್ಯ-ಪದ್ಯ ಕೃತಿಗಳಿಂದ ಆಯ್ದು ಕವನ-ಭಾಷಣಗಳನ್ನು ಕೊಡಲಾಗಿದೆ. ಇಲ್ಲಿ ಅವರ ಉದಾತ್ತ ವ್ಯಕ್ತಿತ್ವದ ಕಲ್ಪನೆ ಮನದಲ್ಲಿ ಬಿಂಬಿಸುವಂತೆ ಸ್ಪಷ್ಟವಾಗುತ್ತದೆ.

ಇಡೀ ಗ್ರಂಥವನ್ನು ಪರಿಶೀಲಿಸಿದಾಗ ಸತ್ವಯುತವಾದ ಒಂದು ಹಿರಿಯ ಸಂಸ್ಥೆಗೆ ಉಚಿತ ಜಗದ್ಗುರುಗಳು ದೊರೆತು ಹನ್ನೆರಡು ವರ್ಷ ಸಲ್ಲಿಸಿದ ಆದರ್ಶ ಸೇವೆಯನ್ನು ನೆನೆದು ಸಂತೋಷ ಸದಭಿಮಾನಗಳು ನಮ್ಮಲ್ಲಿ ಸಹಜವಾಗಿಯೇ ಜಾಗೃತವಾಗುತ್ತವೆ.

ಭಕ್ತವೃಂದಕ್ಕೂ ಹೊಸ ದೃಷ್ಟಿಯು ಆವಶ್ಯಕತೆಯೆನಿಸಿ ಸೌಹಾರ್ದದ ವಾತಾವರಣದಲ್ಲಿ ಅದನ್ನು ಸ್ವಾಗತಿಸಿದಾಗ ಪ್ರಗತಿ ಇನ್ನಷ್ಟು ತೀವ್ರವಾಗಿ ಸಾಗಿಬರುತ್ತದೆ. ಬರಲಿರುವ ಹನ್ನೆರಡು ವರ್ಷಗಳ ಪಟ್ಟದಲ್ಲಿ ಈ ಶ್ರೇಯಸ್ಸು ಮೂರುಸಾವಿರ ಮಠದ್ದಾಗುವದರಲ್ಲಿ ಸಂಶಯವಿಲ್ಲ. ಈ ಸಫಲತೆಯನ್ನು ಸಂತೋಷದಿಂದ ಎದುರು ನೋಡುವೆವು.

ಕೊನೆಯದಾಗಿ ಮೂರುಸಾವಿರಮಠದ ಗುರುಪೀಠವನ್ನಲಂಕರಿಸಿದ ಪೂಜ್ಯ ಜಗದ್ಗುರುಗಳಿಗೆ ನನ್ನ ಆದರದ ವಂದನೆಗಳನ್ನು ಸಲ್ಲಿಸಿ ಈ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

ವೃಂದಾವನ, ವೈಟ್‌ಫೀಲ್ಡ್
ಬೆಂಗಳೂರು
೧-೩-೧೯೭೨

ವಿನಾಯಕ ಕೃಷ್ಣ ಗೋಕಾಕ

# ಸಂಪಾದಕರ ಮಾತು

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಹುಬ್ಬಳ್ಳಿಯ ಮೂರುಸಾವಿರಮಠದ ಶೂನ್ಯ ಸಿಂಹಾಸನವನ್ನು ಆರೋಹಣ ಮಾಡಿ ಒಂದು ಪಟ್ಟ-ಅಂದರೆ ಹನ್ನೆರಡು ವರ್ಷಗಳ ಅವಧಿ ಮುಕ್ತಾಯವಾಯಿತು. ಈ ಕಾಲ ಮೂರುಸಾವಿರಮಠದ ಇತಿಹಾಸದಲ್ಲೇ ಶಿಖರಸದೃಶವಾಗಿದೆಯೆಂದು ನಾಡಿನ ಸಕಲ ಸದಭಿಮಾನಿಗಳೆಲ್ಲರೂ ಬಲ್ಲರು. ಪೂಜ್ಯ ಜಗದ್ಗುರುಗಳ ಮಿಂಚಿನ ವೇಗದ ಕಾರ್ಯತತ್ಪರತೆಯಿಂದ ಮೂರುಸಾವಿರಮಠ ಆಧ್ಯಾತ್ಮಿಕವಾಗಿ, ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ, ಸಾಮಾಜಿಕವಾಗಿ ಆಕಾಶನೌಕೆಯ ವೇಗದಿಂದ ಮುನ್ನಡೆಯುತ್ತಿದೆ. ಶ್ರೀಗಳು ಒಂದು ವ್ಯಕ್ತಿಯಾಗಿರದೇ ಶಕ್ತಿಯಾಗಿದ್ದಾರೆ. ಅನಂತ ಸಾಮರ್ಥ್ಯಗಳ ಸಂಗಮವಾಗಿದ್ದಾರೆ. ಅವರ "ವ್ಯಕ್ತಿ ಶಕ್ತಿ" (Man power) ಆಂತರಿಕವಾಗಿ ಆರ್ಷಪ್ರತಿಭೆಯ ತೇಜಸ್ಸನ್ನೂ, ಬಾಹ್ಯದಲ್ಲಿ ಮಹೋಜ್ವಲ ಕ್ರಿಯಾಸಾಮರ್ಥ್ಯದ ಓಜಸ್ಸನ್ನೂ ಒಗ್ಗೂಡಿಸಿಕೊಂಡ ಸಮುಸಮನ್ವಯ ಸಾಮರಸ್ಯವಾಗಿದೆ. ಅವರೊಂದು ನಗುವ ನಂದಾದೀಪ. ಅರಳಿದ ವಜ್ರಪುಷ್ಪ. ನಿರಂತರ ಕಾರ್ಯತತ್ಪರತೆಯ ಜೋಗದ ಜಲಪಾತ. ಮೂರುಸಾವಿರಮಠದ ಪರಂಪರೆ ಸಕಲ ಧರ್ಮಗಳನ್ನು ಅಪ್ಪಿಕೊಂಡಿದೆ, ಆಶ್ರಯನೀಡಿದೆ. ಈ ಸರ್ವಧರ್ಮ ಸಮಾನ ಮನೋಭೂಮಿಕೆ ಪೂಜ್ಯ ಜಗದ್ಗುರುಗಳಲ್ಲಿ ಇನ್ನೂ ಪಲ್ಲವಿಸಿ ಸಂಪೂರ್ಣ ವಿಕಾಸವನ್ನು ಹೊಂದಿ ಆದರಣೀಯವಾಗಿ ಕಂಗೊಳಿಸಿದೆ. ವಿಶ್ವದ ಅನೇಕ ಸಾಗರಗಳನ್ನು ದರ್ಶಿಸಿದ ಅವರಿಗೆ ಬಹುತ್ವದಲ್ಲಿ ಏಕತ್ವದ ಅಮರ ಸಿದ್ಧಾಂತ ದೃಗ್ಗೋಚರವಾಗಿದೆ. ವಿಶ್ವದ ಸರ್ವಧರ್ಮಗಳ ಅಧ್ವರ್ಯುಗಳು ಅಣ್ವಸ್ತ್ರ ಯುಗದ ಈ ಗಂಡಾಂತರದಲ್ಲಿ ನಿದ್ರಾಸಕ್ತರಾಗದೇ, ಎಲ್ಲರೂ ಸಕ್ರಿಯವಾಗಿ ಒಗ್ಗೂಡಿ ವಿಶ್ವಧರ್ಮ ಸಂಸ್ಥೆ (World Parliament of Religions) ಯೊಂದನ್ನು ಸ್ಥಾಪಿಸಿ, ತನ್ಮೂಲಕವಾಗಿ ಕೂಟಯುದ್ಧಗಳನ್ನೂ ಕುಹಕಯುದ್ಧಗಳನ್ನೂ ನಿಲ್ಲಿಸಿ ಅಶಾಂತಿಗೆ ಕೊನೆಯ ಪರದೆ ಎಳೆಯಬೇಕೆಂದು ಜಪಾನಿನ ಸರ್ವಧರ್ಮಗಳ ಶಾಂತಿ ಪರಿಷತ್ತಿನಲ್ಲಿ (Inter-national Inter–religious Peace Conference) ಘೋಷಿಸಿ ಬಂದಿದ್ದಾರೆ. ಇವರ ಸಕಾಲಿಕ. ಸೂಚನೆಯನ್ನು ವಿಶ್ವದ ನಾಲ್ವತ್ತು ರಾಷ್ಟ್ರಗಳ ನೇತಾರರು ಹೃದಯತುಂಬಿ ಸ್ವಾಗತಿಸಿದ್ದಾರೆ.

ಪೂಜ್ಯ ಜಗದ್ಗುರುಗಳು ಕನ್ನಡ ನಾಡಿನ ಸ್ವಾಮಿಗಳಲ್ಲಿ ವಿಶಿಷ್ಟವಾದ ವ್ಯಕ್ತಿತ್ವವನ್ನು ಪಡೆದವರು. ಇವರ ಈ ವ್ಯಕ್ತಿವೈಶಾಲ್ಯದಲ್ಲಿ ವೈಪರೀತ್ಯತೆಯಾಗಲಿ, ಜಾತಿ-ಮತ ಪಕ್ಷ-ಪಂಗಡಗಳಲ್ಲಿ ಪಾರ್ಶ್ವ ಭಾವನೆಯಾಗಲಿ ತೋರದು. ಇವರದು ಸರ್ವ ಸಾಮಂಜ

ಸ್ಯತೆಯುಳ್ಳ ಸಮನ್ವಯ ಪ್ರಕೃತಿ. ಹಳದು–ಹೊಸದು, ಮೂಡಣ–ಪಡುವಣ, ಶೀಲಾಚಾರ–ಶಿಷ್ಟಾಚಾರ, ಪ್ರಜ್ಞೆ–ಪ್ರಯೋಗ, ವಿಜ್ಞಾನ–ಸುಜ್ಞಾನ, ದ್ವೈತ–ಅದ್ವೈತ ಈ ವಿಭಿನ್ನ ದರ್ಶನ ಮಾಲಿಕೆಯಲ್ಲಿ ಇವರದು ಸರ್ವ ಸಂಗ್ರಾಹ್ಯವಾದ ಮತಿವಂತಿಕೆ. ಬೆಳಕು ಯಾವ ಮೂಲೆಯಿಂದಲೇ ಬರಲಿ ಅದು ಬೇಕು ಎಂದು ಬರಮಾಡಿಕೊಳ್ಳುವ ಸಹೃದಯತೆ ಇವರ ಬಾಳಿನ ನಂದಾದೀಪ. ಆ ದೀಪ ಶಿವಯೋಗ ಮಂದಿರದಲ್ಲಿ ಓದಿದೆ. ಕಾಶಿಯಲ್ಲಿ ಹಿಗ್ಗಲಿಸಿದೆ, ಹುಬ್ಬಳ್ಳಿಯಲ್ಲಿ ಪ್ರಜ್ವಲಿಸಿದೆ, ಜಪಾನಿನಲ್ಲಿ ಪ್ರಕಂಪನಗೊಳಿಸಿದೆ. ಎಂತಾದರೂ ಅದು ದೀಪವೇ ! ಎಂದಾದರೂ ಅದು ಜ್ಯೋತಿಯೇ ! ಅನುಭಾವ ಪರಂಜ್ಯೋತಿಯೆ ಆ ಗಂಗಾಧರ ಹೆಸರಿನ ಉಸಿರು !!! ಆ ಅವರ ಸೀಮಾತೀತ ಸಹೃದತೆಯಲ್ಲಿ ವಿಶ್ವದ ಜ್ಞಾನ ಶಿಖರಗಳನ್ನು ಕಂಡರಸುವ ವಿಸ್ಮಯತೆ ತುಂಬಿದೆ. ಕಾರ್ಯೋತ್ಸಾಹದ ಜಲಪಾತ ಧುಡುಮ್ಮಿರಿದಾಡಿದೆ. ಮಾತೃಹೃದಯದ ಕರುಣಾರ್ದ್ರ ರಸಚೇತನ ಕೈಚಾಚಿ ಬಾರೆಂದು ಕರೆದಿದೆ.

ಪೂಜ್ಯ ಮಹಾಸ್ವಾಮಿಗಳು ಜಗದ್ಗುರು ಶ್ರೀ ಮೂರುಸಾವಿರ ಮಠದ ನಿರಂಜನ ಪೀಠವನ್ನಲಂಕರಿಸಿ ಹನ್ನೆರಡು ವರುಷಗಳು ಸಂದವು. ಇದಕ್ಕೆ ಒಂದು ಘಟ್ಟ, ಇಲ್ಲವೆ ಪಟ್ಟವೆಂದು ಹೆಸರು. ಇನ್ನು ದ್ವಿತೀಯ ಮಜಲಿನಲ್ಲಿ ಅವರು ಕಾಲಿರಿಸಿರುವ ಈ ಸಂಕ್ರಮಣಾವಸ್ಥೆಯಲ್ಲಿ ಅವರ ಜೀವನದ ಸಾಧನೆ–ಸಿದ್ಧಿಗಳ ವಿವಿಧ ರಂಗಗಳ ಬಗ್ಗೆ ಸಿಂಹಾವಲೋಕನ ಗೈಯುವದೆ ಈ ನಮ್ಮ 'ಚಿತ್‌ಪ್ರಭೆ'ಯ ಗುರಿಯಾಗಿದೆ, ಇದು ಪೂಜ್ಯ ಜಗದ್ಗುರುಗಳಿಗೆ ಸಮಸ್ತ ಕನ್ನಡಿಗರ ಕೊಡುಗೆ, ಜ್ಞಾನದ ಉಡುಗೊರೆ. ಅವರು ಸಾಧಿಸಿ ತೋರಿದ ಮಹಾಪರಿಶ್ರಮದ ಹಾಗೂ ಜೀವನ ವಿವೇಕದ ಸಮಗ್ರ ಪರಿಚಯವನ್ನು ನೀಡುವದಂತೂ ಇಲ್ಲಿ ಅಸಾಧ್ಯ. ಅದರ ಹಕ್ಕಿನೋಟವನ್ನು ಮಾತ್ರ ಈ ಗ್ರಂಥದಲ್ಲಿ ತೋರಬಲ್ಲವರಾಗಿದ್ದೇವೆ.

ಚಿತ್ಪ್ರಭೆ ಐದು ಎಸಳುಗಳಲ್ಲಿ ಅರಳಿದೆ. ಜೀವನಪ್ರಭೆ, ಸಾಹಿತ್ಯಪ್ರಭೆ, ಕಾವ್ಯಪ್ರಭೆ, ಚಿಂತನಪ್ರಭೆ, ವಿಚಾರಪ್ರಭೆ ಇವೆ ಆ ಪಂಚವಿಧ ಜ್ಯೋತಿರ್ದಲಗಳು. ಇಲ್ಲಿ ಪೂಜ್ಯ ಜಗದ್ಗುರುಗಳ ಜೀವನರಂಗ – ಕಾರ್ಯರಂಗಗಳ ಪರಿಚಯ, ಅವರ ಗ್ರಂಥಗಳ ವಿಮರ್ಶೆ, ಕವಿಗಳಿಂದ ಭಾವ ಸಮರ್ಪಣೆ, ಪಂಡಿತರಿಂದ ವೀರಶೈವ ಸಾಹಿತ್ಯ – ದರ್ಶನಗಳ ಮೀಮಾಂಸೆಗಳು. ಜಗದ್ಗುರುಗಳ ವಿಚಾರ, ಅನುಕ್ರಮವಾಗಿ ಉಜ್ಜೀವನಗೊಂಡಿವೆ.

ಈ ಗ್ರಂಥದ ಸಂಪಾದನೆ ತುಂಬ ಪರಿಶ್ರಮದ ಕಾರ್ಯ; ಅಷ್ಟೇ ಎಚ್ಚರಿಕೆಯ ಉದ್ಯಮ. ದ್ವಾದಶ ವಾರ್ಷಿಕೋತ್ಸವ ಸಮಿತಿಯವರು ನನ್ನನ್ನು ಈ ಪವಿತ್ರ ಕಾರ್ಯಕ್ಕೆ ಆಯ್ಕೆ ಮಾಡಿದ್ದಕ್ಕಾಗಿ ಅವರಿಗೆ ನನ್ನ ಧನ್ಯವಾದಗಳು ಮೀಸಲು. ನಾನು ಕೇಳಿದ ಸಂಗತಿಗಳಿಗೆಲ್ಲ ನೆರವು ನೀಡಿದ ಮಹಾಪೂಜ್ಯ ಜಗದ್ಗುರುಗಳ ಪಾದಾರವಿಂದಗಳಲ್ಲಂತೂ ನಾನು ತ್ರಿಕಾಲದಲ್ಲಿ ಚಿರಋಣಿ. ಅವರ ನನ್ನ ಒಡನಾಟ ಹನ್ನೆರಡು ವರ್ಷಗಳಿಂದ ಅರಳಿಬಂದಿದೆ. ಅವರ ವಟವೃಕ್ಷದ ಆಶ್ರಯದಲ್ಲಿ ನಾನು ನನ್ನ ಬದುಕನ್ನು ಬೆಳಸಿಕೊಂಡಿದ್ದೇನೆ. ಅದರ ಬೆಳಸೇ ಈ ವಿದ್ವದ್ಗ್ರಂಥದ ಮಹೋದ್ಯಮ, ನನ್ನ

ಮೊದಲ ಕವನ ಸಂಕಲನ 'ಕಾವ್ಯಕಲಾಪಿ'ಗೆ ಮುನ್ನುಡಿ ನೀಡಿದ ಅವರು ಮಠದ ಸಾಹಿತ್ಯಿಕ ಚಟುವಟಿಕೆಗಳನ್ನು ನನ್ನ ಪಾಲಿಗೆ ಮೀಸಲಿರಿಸಿದರು. 'ಪರಂಜ್ಯೋತಿ' ಯನ್ನು ಅನುಗ್ರಹಿಸಿದರು. ಇಂದು ಈ ಸಂಪಾದನೆ ! ಇದಕ್ಕೆಲ್ಲ ನಾನು ದೊಡ್ಡವನಲ್ಲ ; ಆದರೆ ಅವರ ಹೃದಯ ದೊಡ್ಡದು.

ನನ್ನ ಕರೆಗೆ ಓಗೊಟ್ಟು ತಮ್ಮ ಸಾಹಿತ್ಯ ಸೇವೆ ಸಲ್ಲಿಸಿದ ಈ ಸಂಪುಟದ ಲೇಖಕ ರನ್ನಂತೂ ನಾನು ಮರೆಯಕೂಡದು. ಅವರಿಗೆ ಮೂರುಸಾವಿರಮಠದ 'ಹುಚ್ಚ' ನಿಚ್ಚಳದ ಬೆಳಗು ನೀಡಲಿ. ಸಂಯುಕ್ತ ಕರ್ನಾಟಕ ಅಚ್ಚುಕೂಟದ ಅಧಿಕಾರಿಗಳು ಈ ಗ್ರಂಥ ನಿರ್ದೋಷತೆಯಿಂದ ರೂಪುಗೊಳ್ಳುವಲ್ಲಿ ತುಂಬ ಕಷ್ಟಪಟ್ಟಿದ್ದಾರೆ. ಅವರ ಆ ಕಾಯಕಯೋಗಕ್ಕೆ ನಾನು ಮೌನದಿಂದಲೇ ಮಣಿದಿದ್ದೇನೆ. ನನಗೆ ಬಂದ ಎಲ್ಲ ಲೇಖನಗಳನ್ನೂ ಇಲ್ಲಿ ಪ್ರಸಿದ್ಧಿಸಲು ಸಾಧ್ಯವಾಗಲಿಲ್ಲ, ಕಾರಣ ಕೆಲವರು ಸಾಹಿತಿಗಳ ಲೇಖನಗಳು ತಡವಾಗಿ ನನ್ನ ಹಸ್ತಗತವಾದುದರಿಂದ ಅವುಗಳನ್ನು ಇಲ್ಲಿ ಬಳಸಿಕೊಳ್ಳಲು ಅಸಾಧ್ಯವಾಯಿತು. ಆದರೂ ಅದನ್ನು 'ಪರಂಜ್ಯೋತಿ'ಗಾಗಿ ಬಳಸಿಕೊಳ್ಳುವೆ.

ನಾಡಿನ ಸುಪ್ರಸಿದ್ಧ ಸಾಹಿತಿಗಳಾದ ಡಾ. ವ್ಹಿ. ಕೆ. ಗೋಕಾಕರು ಪ್ರಭಾವ ಪೂರ್ಣ ಸುಂದರ ಮುನ್ನುಡಿ ಬರೆದು ಚಿತ್ಪ್ರಭೆಗೆ ಕಳೆ ನೀಡಿದ್ದಾರೆ. ಅವರಿಗೆ ನನ್ನ ಹಾರ್ದಿಕ ವಂದನೆಗಳು.

ಕನ್ನಡನಾಡಿನ ಸಹೃದಯರು ಈ ಗ್ರಂಥವನ್ನು ಓದಿ ಮೆಚ್ಚಿಕೊಂಡರೆ ನನ್ನ ಪರಿಶ್ರಮಕ್ಕೆ ಅದೇ ತಕ್ಕ ಬಹುಮಾನ.

ಸಕಾಲಕ್ಕೆ, ಸುಂದರವಾಗಿ ಮುದ್ರಿಸಿ ಕೊಟ್ಟ "ಸಂಯುಕ್ತ ಕರ್ನಾಟಕ" ದ ಮುದ್ರಣಾಲಯದವರಿಗೆ ನಮ್ಮ ಹಾರ್ದಿಕ ಅಭಿವಂದನೆಗಳು.

ಹುಬ್ಬಳ್ಳಿ
೬-೩-೧೯೭೨

—ಪ್ರೊ. ಜಿ. ಎಚ್. ಹನ್ನೆರಡುಮಠ, ಎಂ.ಎ,

(ಸಂಪಾದಕರು : ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ
ಮಹಾಸ್ವಾಮಿಗಳ ಪೀಠಾರೋಹಣದ
ದ್ವಾದಶ ವಾರ್ಷಿಕ ಮಹೋತ್ಸವ ಸಮಿತಿ)

# ಗಂಗಾಧರ ಹೆಸರು ಸಾರ್ಥಕ

ಡಿ. ಎಸ್. ಕರ್ಕಿ

'ಗಂಗಾಧರ' ಹೆಸರಿದು ಸಾರ್ಥಕ ನಿಜ
ಪೂಜ್ಯ 'ಜಗದ್ಗುರು' ಸನ್ನಿಧಿಗೆ.
ಶಿವ ಗಂಗಾಜಲ ಶಿರದಲಿ ಧರಿಸಿದ
'ರಾಜಯೋಗಿ' ಇಂದ್ರಗೆ ಕವಿಗೆ.

ಇಳಿದು ಬಹುದು ವಾತ್ಸಲ್ಯ ಸಲಿಲವದೊ
'ಮೂರು ಸಾವಿರದ' ಸೋಪಾನ
ಸರಳ ಕಾವ್ಯ ಗಂಗಾಜಲ ಸುಳಿದಿದೆ
'ಪಥಿಕ'ರಿಗಿದು 'ಸಂಸ್ಕೃತಿ ದಾನ'

ಮಧುರ ನೀತಿಯಿದೆ ಕಂದ ಗೀತದಲಿ
ಕೋ 'ಹೂ ಬಳ್ಳಿಯು ಹೂಮಾಲೆ'
ಶಿವ ಸುಂದರ ಬಂಧುರ ಭಾವದೊಳದು
ತರುವುದು ತಿಳಿ ಆನಂದವನೆ.

'ಆಶೀರ್ವಾಣಿ'ಯು ತಾನತಾನದಲಿ
ತೇಲಿ ಬಹುದು ತಾ ಗದ್ಯದೊಳೆ
ಸೂಸುವದದು ಸವಿ ಸುಪ್ರಭಾತದಲಿ
ದೃಷ್ಟಿ ಎತ್ತಿ ಆತ್ಮಶ್ರೀಗೆ.

ಹನ್ನೆರಡನೆಯೀ ಪೀಠಾರೋಹಣ
ಸಂಭ್ರಮ ಸಚ್ಚಿತ್ತದ ಶ್ರುತಿಗೆ
ಸ್ಪಂದಿಸುತಿದೆ ಆನಂದದ ಛಂದದಿ
ಎತ್ತರೆತ್ತರ ಮಹೋನ್ನತಿಗೆ ☐

# ಶ್ರೀ ಜಗದ್ಗುರುಗಳ ದಿವ್ಯಸನ್ನಿಧಿಗೆ

ಎಸ್. ಡಿ. ಇಂಚಲ

೧

ಆತ್ಮಾನುಭೂತಿಯ ಅಮರ ಕೇಂದ್ರವು ತಾನು
ಮೂರುಸಾವಿರ ಮಠದ ದಿವ್ಯ ಪೀಠ
ಕರುನಾಡಿನುತ್ತರದ ಬಿತ್ತರದ ಬಾಂದಳದಿ
ಕಂಗೊಳಿಸುತಿದೆ ನೋಡು ರಮ್ಯ ನೋಟ !
ನಾಡಿನರುಣೋದಯದ ಹೊಂಗಿರಣಗಳ ಚೆಲ್ಲಿ
ಬೆಳಗುತಿದೆ ಸದ್ಧರ್ಮ ಜ್ಯೋತಿಯಾಗಿ
ನಾಡವರ ದುಃಖ ದುಮ್ಮಾನಗಳ ಸಂತಯಿಸಿ
ನೊಂದವರ ಬಾಳಿನಲಿ ಬೆಳದಿಂಗಳಾಗಿ.

೨

ಮೂರು ಸಾವಿರ ಗಣಂಗಳಿಗೆ ಗುರುತರವಾದ
ಕಾರ್ಯಸ್ಫೂರ್ತಿಯ ನೀಡಿ ಬೆಳಕನೂಡಿ
ವೀರವೈರಾಗ್ಯಮಯ ಶೂನ್ಯ ಸಿಂಹಾಸನದಿ
ಮೆರೆದ ಪೂಜ್ಯರಿಗೆ ಇನ್ನೆಲ್ಲಿ ಸರಿಜೋಡಿ !
ರಾಜಯೋಗೀಂದ್ರ ಶ್ರೀ ಗುರುವೆ ಗಂಗಾಧರನೆ
ಅಭಿನವಾಲ್ಲಮನಂತೆ ನುಡಿದು ನಡೆದು
ಮಾನವ್ಯ ಧರ್ಮವನ್ನುದ್ಧರಿಸಲೆಂದು ನೀ
ದುಡಿದು ಹಣ್ಣಾಗುತಿಹೆ ತಪಕೆ ಸಂದು

೩

ವಿಶ್ವಧರ್ಮದ ಆಗ್ರ ಸಮ್ಮೇಳನದಿ ದಿವ್ಯ
ಪೀಠದಲಿ ಮಂಡಿಸಿದ ಪೂಜ್ಯರೇನು
ವೀರಶೈವದ ವಿಶ್ವದೃಷ್ಟಿಯನು ಪ್ರಥಮದಲಿ
ವಿಸ್ತರಿಸಿದಂಥ ಎದೆ ನಿಮ್ಮದೇನು !
ಸತ್ಯ ಧರ್ಮದ ಋತದ ಶಿವದ ಧ್ವಜವನ್ನೆತ್ತಿ
ಮಾನವೀಯತೆಯನ್ನೆ ನಿತ್ಯ ಬೆಳಗಿ
ಸಂಯಮದಿ ಸತ್ಯ–ಸೌಂದರ್ಯಮಯ ಸಂಸ್ಕೃತಿಯ
ಬಿತ್ತರಿಸಲೆತ್ನಿಸಿದ ಕರ್ಮಯೋಗಿ !

೪

ಗುರುಕುಮಾರೇಶ್ವರನ ಅಂದಿನಾ ಕನಸನ್ನು
ಇಂದು ನನಸಾಗಿಸಿದ ಪುಣ್ಯಭಾನು !
ಸಂಪ್ರದಾಯದ ತೆರೆಯ ಸರಿಸಿ ಸಾಗರದಾಚೆ
ಕ್ರಾಂತಿದರ್ಶನ ಗೈದ ಧೀರ ನೀನು.
ತಮ್ಮ ಕಣ್ಣೆರಿಕೆಯಲಿ ಪ್ರಜ್ವಲಿಸುತಿದೆ ಹೊತ್ತಿ
ಆ 'ಪರಂಜ್ಯೋತಿ' ಸನ್ಮತಿಯ ಬೀರಿ
ಧರ್ಮಜಾಗ್ರುತಿಗಾಗಿ ನಾಡಿನುನ್ನತಿಗಾಗಿ
ಸರ್ವಧರ್ಮಗಳ ಕಲ್ಯಾಣ ಕೋರಿ.

೫

ಚಂದ್ರಲೋಕದ ಸಿರಿಯ ಸೂರೆಗೈಯ್ಯುವ ಭರದಿ
ವಿಜ್ಞಾನದೊಡಲನ್ನೆ ಬಗಿದು ಬೀಗಿ
ದೈತ್ಯ ಶಕ್ತಿಯ ಕ್ರೂರ ಶಸ್ತ್ರಾಸ್ತ್ರಗಳ ತುಡುಕಿ
ವಿಶ್ವಮೋಥಕೆ ನಿಂತ ರಾಷ್ಟ್ರಗಳಿಗೆ,
ವಿಶ್ವಶಾಂತಿಯ ಧರ್ಮದರ್ಶನವ ಬೋಧಿಸಿದ
ಶಾಂತಿದೂತನು ಎಂದು ಹೇಳಬೇಕೆ ?
ಕಾಲಧರ್ಮವ ನುಡಿದ ಸತ್ಯ ಪಥವನೆ ಹಿಡಿದ
ಧರ್ಮದರ್ಶಿಗಳೆಂದು ಹೊಗಳಲೇಕೆ ?

೧

ಹನ್ನೆರಡು ವರುಷಗಳ ಅವಧಿಯಲಿ ಶ್ರೀಮಠವು
ಉನ್ನತಾದರ್ಶಗಳ ಶಿಖರವೇರಿ
ಶೈಕ್ಷಣಿಕ ಸಾಹಿತಿಕ, ಸಾಂಸ್ಕೃತಿಕ ಪ್ರಗತಿಯನು
ಸಾಧಿಸಿದ ಚೈತನ್ಯಮೂರ್ತಿ ಸ್ಫೂರ್ತಿ !
ಕಾಯಕವೆ ಕೈಲಾಸವೆಂಬ ಅಣ್ಣನ ನುಡಿಗೆ
ಸಾಕ್ಷಿಯಾಗಿದೆ ತಮ್ಮ ಸಿದ್ಧಿ ತಾನು
ಜನಮನೋಮಂದಿರದ ರತ್ನಸಿಂಹಾಸನದಿ
ನೀವೇ ಮಂಡಿಸಿದ ಸಿರಿ ಹೇಳಲೇನು !

೨

ಇಂದಿನೀ ಉತ್ಸವದಿ ಹಾಲುದಿಸಿ ಬಂದಂತೆ
ಭಕ್ತವೃಂದದ ಹೃದಯ ತುಂಬಿ ಬಂತು !
ಉತ್ಸಾಹ ಸಾಗರವೆ ಉಕ್ಕೇರಿ ಹರಿಯುತಿದೆ
ಜನತೆಯನುರಾಗಕ್ಕೆ ಮೇರೆ ಎಂತು ?
ಆಯುರಾರೋಗ್ಯ ಸರ್ವಮಂಗಳ ಭಾಗ್ಯ
ದೈವಾನುಗ್ರಹ ತಮಗೆ ದೊರೆಯಲೆಂದು
ಶ್ರೀಮಠದ ಶುಭಕೀರ್ತಿ ನಿತ್ಯ ಹರಡಲಿ ಪೂರ್ತಿ
ಎಂದು ಹಾರೈಸುವೆನು ಕಾವ್ಯಬಂಧು !

□

# ಮಹಾದ್ವಾರ

ಎನ್ಕೆ

ಇದು ಮಹಾದ್ವಾರ ಇದು ಭಕ್ತ ಮುಕ್ತದ್ವಾರ
ಇದು ಮುಮುಕ್ಷುಗಳಿರವಿಗಾರಪಾರ ॥

ಇದು ಮಹಾದ್ವಾರ ಗೌರಿಶಂಕರ ಶಿಖರದುನ್ನತಿಕೆ
ವಿಶ್ವ ವೈಶಾಲ್ಯ ಜಾತ್ಯತೀತೆಯೊಂದು ಹೆಗ್ಗಳಿಕೆ
ಶರಣ ಜನ ಪೂಣ್ಕೆ ಕಾಣ್ಕೆಗಳು ಬಾನೆತ್ತರಕೆ
ಏಣಿ ಹಾಕಿವೆ ಶ್ರೇಣಿಗೊಂಡ ಕರುಮಾಡಕ್ಕೆ ॥

ಮೂರುಸಾವಿರಮಠದ ಸಾವಿರದ ವತ್ಸರದ
ಪುಣ್ಯ, ಪುರುಷಾಕಾರ ತಾಳಿ ಬಾಳಿನ ಹದದ
ಹಾದಿಯನರುಹಿ, ಮರೆವಿನಲರಿವನಿರಿಸುವ ಮುದದ
ಮೂರ್ತಿ, ಜಗದ್ಗುರುವಿನ ಕೀರ್ತಿ ಕೈವಲ್ಯದ ॥

ಸಮತೆ ಏಕತೆ ಮಾನವೀಯತೆಗೆ ಮಿಗಿಲಾಗಿ
ಜಗದಗಲಯೆದೆಯಗಲ ಹೆಗಲಿಂಗೆ ಹೆಗಲಾಗಿ
ಅಲ್ಲಿ ಸಲುಪೊಲು ಇಲ್ಲಿ ಸಮೆವ ಕಮ್ಮಟವಾಗಿ
ತಲೆಯೆತ್ತಿ ನಿಂತಿದೆ ಕಾಲ ಹಗಲಿಂಗೆ ಹಗಲಾಗಿ ॥

□

— ಶಿವಯೋಗಮಂದಿರದಲ್ಲಿ —



ವಟುಜೀವನ
೧೯೩೪



ಸಾಧಕ ಜೀವನ
೧೯೪೬

## ಕಾಶಿಯ ಹಿಂದು ವಿಶ್ವವಿದ್ಯಾಲಯದಲ್ಲಿ



ಕಾವ್ಯತೀರ್ಥ "ಸಾಹಿತ್ಯರತ್ನ"
ಪದವಿ ಪಡೆದಾಗ
೧೯೫೧-೫೨



"ವೇದಾಂತ ಶಾಸ್ತ್ರಿ"
ಉತ್ತೀರ್ಣರಾದಾಗ
೧೯೫೪



"ವೇದಾಂತಾಚಾರ್ಯ"
ಪದವಿ ಪಡೆದಾಗ
೧೯೫೭

ಕಾಶಿಯ ವಿದ್ಯಾರ್ಥಿ ಜೀವನದಲ್ಲಿ





ಸಹಾಧ್ಯಾಯಿಗಳೊಂದಿಗೆ



ಕಾಶಿಯಲ್ಲಿಯ ಸಹಾಧ್ಯಾಯಿಗಳೊಂದಿಗೆ



ಚಿತ್ತರಗಿ, ಇಲಕಲ್ಲ ಸಂಸ್ಥಾನಮಠಕ್ಕೆ
ಉತ್ತರಾಧಿಕಾರಿಗಳಾಗಿದ್ದಾಗ



ಹುಬ್ಬಳ್ಳಿ ಜಗದ್ಗುರು ಮೂರುಸಾವಿರಮಠಕ್ಕೆ ಉತ್ತರಾಧಿಕಾರಿಗಳೆಂದು ನಿಯಾಮಕರಾದಾಗ ಲಿಂ. ಜಗದ್ಗುರು ಗುರುಸಿದ್ಧರಾಜಯೋಗೀಂದ್ರರ ದಿವ್ಯಸನ್ನಿಧಿಯಲ್ಲಿ—



ಹುಬ್ಬಳ್ಳಿ ಜಗದ್ಗುರು ಮೂರುಸಾವಿರಮಠದ ಪೀಠಾರೋಹಣಕ್ಕಿಂತ ಪೂರ್ವದಲ್ಲಿ ವಿನೋಬಾ ಭಾವೆಯವರೊಡನೆ



ಶ್ರೀ ಚಿಕ್ಕವೀರಯ್ಯನವರ ಮನೆಯಿಂದ ಹುಬ್ಬಳ್ಳಿಯಲ್ಲಿ
ಉತ್ಸವ ಹೊರಡುವದಕ್ಕಿಂತ ಪೂರ್ವದಲ್ಲಿ



ಶ್ರೀ ಜಗದ್ಗುರು ಮೂರುಸಾವಿರಮಠದ
ಪೀಠಾರೋಹಣ ಪೂರ್ವದಲ್ಲಿ
೧೯೫೮



ಶ್ರೀ ಜಗದ್ಗುರು ಮೂರುಸಾವಿರಮಠದ
ಪೀಠಾರೋಹಣ
೧೯೫೮



ಪಟ್ಟಾಭಿಷೇಕ ಸಮಾರಂಭದಲ್ಲಿ ಅಡ್ಡಪಲ್ಲಕ್ಕಿ ಮಹೋತ್ಸವ
೧೯೫೮



ಹುಬ್ಬಳ್ಳಿ, ಅಡ್ಡಪಲ್ಲಕ್ಕಿ ಮಹೋತ್ಸವದಲ್ಲಿ ಜನಸ್ತೋಮ
೧೯೫೮



ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು
ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
ಮೂರುಸಾವಿರಮಠ ಹುಬ್ಬಳ್ಳಿ
೧೯೩೮

# ಮುನ್ನಡೆದ ಮೂರುಸಾವಿರ ಮಠ

ಜಿ. ಎಚ್. ಹನ್ನೆರಡುಮಠ

ಇಂದಿಗೆ ನಾಲ್ವತ್ತು ವರ್ಷಗಳ ಹಿಂದಿನ ಕಥೆ ! ಅದೊಂದು ಅಪೂರ್ವ ಕಥೆ !! ಸತ್ಯ ಕಥೆ !!! ಮಹಾತಪಸ್ವಿಗಳಾದ, ಪ್ರಚಂಡ ವೈರಾಗ್ಯದ ವಜ್ರಗಣಿಗಳಾದ ಪೂಜ್ಯ ಹಾನಗಲ್ಲ ಕುಮಾರಸ್ವಾಮಿಗಳು ಮೈಸೂರ ಸೀಮೆಯ ಸಸಿವಾಳಕ್ಕೆ ದಯಮಾಡಿಸಿದ್ದಾರೆ. ಸಸಿವಾಳ ಪಾವನ ಪುಣ್ಯಕ್ಷೇತ್ರವಲ್ಲವೆ ? ಒಂದು ಕಾಲಕ್ಕೆ ಬೆಂಕಿಯ ಕೆಂಡದಂತೆ ರಾರಾಜಿಸಿ, ಪವಾಡ ಪುರುಷರಾಗಿ ಬಾಳಿದ ಚಿತ್ತರಗಿ ಪೀಠದ ವಿಖ್ಯಾತ ವಿಜಯಮಹಾಂತ ಶಿವಯೋಗಿಗಳು ಜನ್ಮವೆತ್ತಿದ ಅಗ್ನಿಕುಂಡವಲ್ಲವೆ ? ಹಾನಗಲ್ಲ ಶ್ರೀಗಳು ಅಲ್ಲಿ ಬಂದುದು ; ಕೈವಲ್ಯದ ಬಳಿಗೆ ಕೈವಲ್ಯ ಬಂದಂತಾಯಿತು. ಪರಂಜ್ಯೋತಿಯ ಬಳಿಗೆ ಪರಂಜ್ಯೋತಿ ಬಂದಂತಾಯಿತು. ವಿಜಯಮಹಾಂತ ಶಿವಯೋಗಿಗಳ ಪೂರ್ವಾಶ್ರಮದಲ್ಲಿದ್ದ ಅವರ ಅಣ್ಣ ಬಸವಲಿಂಗಯ್ಯ ನಿತ್ಯಪೂಜಾಪ್ರೇಮಿ. ಸತ್ಯ ಸಂಪನ್ನ. ಆತನ ಮೊಮ್ಮಗನೆ ಮರುಳಸಿದ್ಧಯ್ಯ. ಅವನೇ ಸ್ವಾಮಿಗಳನ್ನು ಸಾದರದಿಂದ ಬರಮಾಡಿಕೊಂಡ. ಆ ಮನೆತನದ ಹೆಸರು ಕೊಳಗಲ್ಲ ಹಿರಿಯ ಮಠವೆಂದು. ಯಾವ ಬಳ್ಳಿಯಲ್ಲಿ ಯಾವ ಕಾಯಿ ಆಗಬೇಕೋ ಅದೇ ಆಗಬೇಕಲ್ಲವೆ ? ದ್ರಾಕ್ಷಿಯ ಬಳ್ಳಿಯಲ್ಲಿ ಎಂದಾದರೂ ಹಾಗಲಕಾಯಿ ಬಿಟ್ಟೀತೆ ? ಆದ್ದರಿಂದ ಪೂಜ್ಯ ಸ್ವಾಮಿಗಳು ಅವನಿಗೆ– "ಮರುಳಸಿದ್ಧಯ್ಯ, ನಿಮ್ಮ ಮನೆ ಪ್ರಾಸಾದಿಕರ ರಕ್ತಸಂಬಂಧವುಳ್ಳ ಕ್ಷೇತ್ರವಾಗಿದೆ. ವಿಜಯಮಹಾಂತ ಶಿವಯೋಗಿಗಳು ಜನಿಸಿದ ಅವತಾರ ಭೂಮಿಯಾಗಿದೆ. ನಿನ್ನ ಬಳ್ಳಿಯ ಒಂದು ಹೂವು ನಮಗೆ ಬೇಕು. ಆದ್ದರಿಂದ ನಿನ್ನ ಮಗನನ್ನು ನಮ್ಮ ಶಿವಯೋಗಮಂದಿರಕ್ಕೆ ಅರ್ಪಿಸುವೆಯಾ ? " ಎಂದು ಕೇಳಿದರು.

ಈ ಮಾತಿಗೆ ಮರುಳಸಿದ್ಧಯ್ಯನ ಎದೆ ನಡುಗಿಹೋಯಿತು. ಇದ್ದ ಒಬ್ಬನೆ ಒಬ್ಬ ಮಗ. ಕೊಡಲೆಂತು ಸಾಧ್ಯ ? ಅಲ್ಲದೆ ಆತನ ಹೆಂಡತಿ ಚನ್ನಮ್ಮ ವಿನಯದಿಂದಲೆ ತನ್ನ ಅಸಮ್ಮತಿ ಸೂಚಿಸಿದಳು. ಎಷ್ಟಾದರೂ ಹೆಣ್ಣು ಕರುಳಲ್ಲವೆ ? ತನ್ನ ಕರುಳ ಬಳ್ಳಿಯನ್ನು ಹರಿದು ಹೇಗೆ ತಾನೆ ಕೊಟ್ಟಾಳು ? ದಂಪತಿಗಳ ಮನೋವೇದನೆಯನ್ನು ಅರ್ಥಮಾಡಿಕೊಂಡು ತ್ರಿಕಾಲಜ್ಞಾನಿಗಳಾದ ಹಾನಗಲ್ಲ ಕುಮಾರಸ್ವಾಮಿಗಳು ಹೇಳಿ–

ವರು— "ಅಂಜಬೇಡಿರಿ, ಈ ಮಗೆ ನಿಮಗೇ ಇರಲಿ. ಮುಂದಿನ ಫಾಲ್ಗುಣ ಬರುವ ವರ ಒಳಗಾಗಿ ನಿಮಗೆ ಒಬ್ಬ ಮಹಾ ಪುತ್ರರತ್ನ ಜನಿಸುತ್ತಾನೆ. ಅವನನ್ನು ನಮ್ಮ ಶಿವಯೋಗಮಂದಿರಕ್ಕೆ ಅರ್ಪಿಸಬೇಕು. ಮರೆಯಕೂಡದು" ಎಂದು ಅಪ್ಪಣೆ ನೀಡಿದರು. ಈ ಮಾತಿಗೆ ಒಡಂಬಟ್ಟು ದಂಪತಿಗಳಿಬ್ಬರೂ ಹರ್ಷಾತಿರೇಕದಿಂದ ಉಬ್ಬಿ, ವಚನ ನೀಡಿ ಸಾಷ್ಟಾಂಗ ಹಾಕಿದರು. ಶಿವಯೋಗಿಗಳು ಅವರ ವಚನದ ನಿರ್ಧಾರವನ್ನು ತೆಗೆದು ಕೊಂಡು ನಡೆದುಬಿಟ್ಟರು.

ಕಾಲಕ್ರಮ ಗತಿಸಿತು. ಹಗಲು ರಾತ್ರಿ ಸರಿದವು. ಋತುಗಳು ಉರುಳಿದವು. ಶಿವಯೋಗಿಗಳು ತಮ್ಮ ಆರ್ಷವಾಣಿಯನ್ನು ಅರುಹಿಹೋದಂತೆ ಒಂದು ವರ್ಷ ಒಳ ಗಾಗಿ ಮುದ್ದುಮಗ ಉದಯನಾದ! ಅಂತರಾತ್ಮದ ಅಗ್ನಿಪರ್ವತ ಮುಗ್ಧ ಕೂಸಿನ ತೆರವಲ್ಲಿ ಪ್ರಕಟಗೊಂಡಂತೆ ಚೈತನ್ಯಾತ್ಮಕನಾಗಿದ್ದ !! ಆ ಮಗನಿಗೆ ವಿಜಯಮಹಾಂತ ಶಿವಯೋಗಿಗಳ ನೆನಹಿನಲ್ಲೇ "ಮಹಾಂತೇಶ"ನೆಂದು ನಾಮಕರಣ ಮಾಡಿದರು.

ಐದು ವರ್ಷಗಳು ಕಳೆದವು. ದಂಪತಿಗಳಿಬ್ಬರಿಗೆ ಮಹಾಂತ ಬೆಣ್ಣೆಯ ಚಂಡಾ- ಗಿದ್ದ. ಅರುಹಿನ ಅರಗಿಳಿಯಾಗಿದ್ದ. ಪ್ರೇಮದ ಜೇಂಗೊಡವಾಗಿದ್ದ. ಅವರು ತಮ್ಮ ಗಾಢವಾದ ಪುತ್ರವಾತ್ಸಲ್ಯದಲ್ಲಿ ತಾವು ಹಿಂದೆ ನೀಡಿದ್ದ ವಚನ ಮರೆತೇಬಿಟ್ಟರು. ಅತ್ತ ಹಾನಗಲ್ಲ ಶಿವಯೋಗಿಗಳು ಲಿಂಗೈಕ್ಯರಾದರು. ಅಂದಮೇಲೆ ಅವರಿಗೆ ಕೇಳುವವ ರಾದರೂ ಯಾರು ?

ಒಂದು ದಿನ ಮಹಾಂತ ಅಡುಗೆ ಮನೆಯಲ್ಲಿ ಮೊಸರನ್ನವನ್ನು ಸೇವಿಸುತ್ತಿದ್ದಾನೆ ಹೊರಮನೆಯಲ್ಲಿ ದಂಪತಿಗಳು ಮಂಡಿಸಿದ್ದಾರೆ. ತಕ್ಷಣವೇ ಮರುಳಸಿದ್ಧಯ್ಯ- ನವರಿಗೆ ತಾವು ಶಿವಯೋಗಿಗಳಿಗೆ ಇತ್ತ ವಚನ ನೆನಪಾಗಿ ಹೆಂಡತಿ ಚನ್ನಮ್ಮನಿಗೆ ಕೇಳಿದರು.—

"ಚನ್ನೂ, ನಮ್ಮ ಮಹಾಂತೇಶನಿಗೆ ಐದು ವರ್ಷ ತುಂಬಿದವು. ಅವನನ್ನು ಶಿವಯೋಗಮಂದಿರಕ್ಕೆ ಒಪ್ಪಿಸಿ ಬರೋಣ. ಸ್ವಾಮಿಗಳಿಗೆ ವಚನ ಕೊಟ್ಟಿದ್ದು ನೆನಪಿದೆಯೆ ?"

ಈ ಮಾತಿಗೆ ಚೆನ್ನಮ್ಮ— "ನೆನಪಿದೆ ಸ್ವಾಮಿ. ಆದರೆ ಅದಕ್ಕೇಕೆ ಚಿಂತೆ ಮಾಡು ತ್ತೀರಿ ? ಹೇಗೂ ಕುಮಾರ ಸ್ವಾಮಿಗಳು ಲಿಂಗೈಕ್ಯರಾಗಿ ಬಿಟ್ಟಿದ್ದಾರೆ. ನಮ್ಮ ಮಗ ನನ್ನು ಕೊಡೆಂದು ಕೇಳುವವರಾದರೂ ಯಾರು ? ಹೋಗಲಿ ಬಿಡಿರಿ. ಆ ವಿಚಾರ ತಗೀಬೇಡಿರಿ" ಎಂದಳು.

ಆದರೂ ಮರುಳಸಿದ್ಧಯ್ಯನವರಿಗೆ ಸಮಾಧಾನವಾಗಲಿಲ್ಲ. ಮರುಳಿ ಕೇಳಿದರು—

"ಈ ರೀತಿ ನಾವು ಸುಮ್ಮನೆ ಇರುವದು ತಪ್ಪಾದೀತು ಚನ್ನೂ ; ನಾವು ವಚನ ಕೊಟ್ಟಿದ್ದು ಸುಳ್ಳೇ ? ಅವರು ಲಿಂಗೈಕ್ಯರಾದರೂ ಅವರ ಆತ್ಮ ಸುಮ್ಮನಿದ್ದೀತೆ ?"

ಪತಿಯ ಮಾತು ನಡೆಯುತ್ತಿದ್ದಂತೆ ಚನ್ನಮ್ಮ ಹೇಳಿದಳು.— "ಸ್ವಾಮಿ, ನಿಮ- ಗೇನು ಮಕ್ಕಳು ಬೇಸರವಾಗಿವೆಯೆ ? ಇದ್ದ ಕಂದಮ್ಮನನ್ನು ಕರಳು ಹರಿದು ಕಾಡಿಗೆ

ಅಟ್ಟುವಿರಾ ? ನನಗಂತೂ ಮನಸಿಲ್ಲ. ನೀವು ತಿಳಿದಂತೆ ಮಾಡಿರಿ. ನನ್ನನ್ನು ಕೇಳ-ಬೇಡಿರಿ" ಎಂದಳು.

ಇಷ್ಟರಲ್ಲಿ ಅಡುಗೆ ಮನೆಯಿಂದ— "ಅವ್ವಾ...ಅವ್ವಾ...ಅವ್ವಾ...."ಎಂದು ಸಂಕಟದಿಂದ ಕೂಗು ಕೇಳಿಬಂದಿತು. ಚನ್ನಮ್ಮ ಭರ್ರನೆ ಓಡಿಹೋಗಿ–– "ಏನಾಯ್ತು ಮಗು ? ಏನಾಯ್ತು ಮಾಂತೇಶಾ? " ಎಂದು ಮಗನನ್ನು ಕೇಳಿದಳು. ಆತ— " ಅವ್ವಾ ನನ್ನ ಕಣ್ಣೇ ಕಾಣೆಸವು... ಕಣ್ಣೇ ಕಾಣೆಸವು" ಎಂದು ಅಳಹತ್ತಿದ. ಮಗು ಮಹಾಂತೇಶನ ಕಣ್ಣುಗಳು ದಟ್ಟವಾಗಿ ಮುಚ್ಚಿವೆ. ಕಣ್ಣೀರುಗಳು ಸುರಿಯುತ್ತಿವೆ. ಮುಂದಿನ ಮೊಸರನ್ನ ಚೆಲ್ಲಾಪಿಲ್ಲಿಯಾಗಿದೆ. ಆತನ ರೋದನ ಇನ್ನೂ ಹೆಚ್ಚಾಯ್ತು–– " ಅವ್ವಾ...ಅವ್ವಾ...ನೋವು...ನೋವು..." ಎಂದು ಚೀರಿ ಅಳಹತ್ತಿದ.

ಈ ಅರಿಷ್ಟ ಫಲದ ಸೂಕ್ಷ್ಮವನ್ನು ಅರಿತ ಮರುಳಸಿದ್ಧಯ್ಯನವರು—

" ಚನ್ನೂ... ಇದು ಸ್ವಾಮಿ ಲೀಲೆ, ಈಗಾದರೂ ಒಪ್ಪು. ಮಗನನ್ನು ಮಂದಿ-ರಕ್ಕೆ ಒಪ್ಪಿಸುವೆನೆಂದು ಬೇಡಿಕೊ" ಎಂದಳು.

ಅದಕ್ಕೆ ಅವಳು— ' ಸುಮ್ಮನಿರಿ. ಮತ್ತೆ ಅದೇ ಮಾತು. ನನಗೊಂದು ಸಂಕಟ, ನಿಮಗೊಂದು ಸಂಕಟ ! ಏನೋ ಕಣ್ಣಲ್ಲಿ ಕಸಬಿದ್ದು ನೋವಾಗಿರಬೇಕು. ಅದಕ್ಕೇಕೆ ಇಷ್ಟು ದೊಡ್ಡ ಪುರಾಣ ?" ಎಂದಳು.

ಚನ್ನಮ್ಮನು ಮಗನ ಕಣ್ಣುಗಳನ್ನು ಹಸನಾಗಿ ತೊಳೆದಳು. ಕಣ್ಣಲ್ಲಿ ತೂಪಿರಿದು ತುಪ್ಪಸುರಿದಳು. ದೇವರ ಮುಂದೆ ದೀಪ ಹಚ್ಚಿದಳು. ಎಲ್ಲ ಉಪಚಾರಗಳನ್ನೂ ಮಾಡಿದಳು. ಆದರೆ ಮಗನ ಕಣ್ಣುಗಳು ಕಾಣಲೇ ಇಲ್ಲ ! ನಿರಾಶಳಾಗಿ ಮಗುವನ್ನು ತೊಡೆಯ ಮೇಲೆ ಹಾಕಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಎದೆಗಪ್ಪಿಕೊಂಡು ರೋದಿಸತೊಡಗಿದಳು. ಆಗ—" ವಿಜಯ ಮಹಾಂತೇಶಾ...ಚಿತ್ತರಗಿ ದೊರೆಯೇ... ಮಗನ ಕಣ್ಣು ತೆರೆಯಪ್ಪಾ" ಎಂದು ಬೇಡಿದಳು. ಆಶ್ಚರ್ಯದ ಸಂಗತಿಯೆಂದರೆ ಆ ಕ್ಷಣವಲ್ಲೇ ಮಗನ ಕಣ್ಣುಗಳು ನಿಚ್ಚಳವಾದವು. ಆದರೆ ಚನ್ನಮ್ಮನ ಕಣ್ಣುಗಳು ಇಂಗಿ ಕಾಣದಂತಾದವು ! ಅವಳು ಹೌಹಾರಿ—" ಮಹಾಂತೇಶಾ....ಮಹಾಂತೇಶಾ... ಹಾನಗಲ್ಲ ಕುಮಾರೇಶಾ..." ಎಂದು ಕೂಗಿದಳು.

ಹೆಂಡತಿಯ ಈ ಮುಗ್ಧ ವಾತ್ಸಲ್ಯಕ್ಕೆ ಮರುಳಸಿದ್ಧಯ್ಯ ಮನದಲ್ಲೇ ಮುಗುಳುನಗೆ ನಕ್ಕು, ಮೌನದಿಂದಲೆ ಸ್ನಾನ ಮಾಡಿ ಪೂಜೆಗೈದು ತೀರ್ಥಜಲ ತೆಗೆದುಕೊಂಡು ಬಂದ. ಮಗನನ್ನು ಮಂದಿರಕ್ಕೆ ಕೊಡುವದಾಗಿ ಹೆಂಡತಿಯ ಕಡೆಯಿಂದ ಆಣೆ ಪ್ರಮಾಣ ಮಾಡಿಸಿದ. ತೀರ್ಥಜಲವನ್ನು ಭಸ್ಮವನ್ನೂ ಇಬ್ಬರ ಕಣ್ಣುಗಳಿಗೂ ಲೇಪಿಸಿದ. ಆಗ ಅವರೀರ್ವರ ಕಣ್ಣುಗಳು ಮೊದಲಿನಂತೆಯೇ ದೇದೀಪ್ಯಮಾನವಾದವು ! ಸೂರ್ಯೋದಯದಲ್ಲಿ ಕಮಲಗಳು ಅರಳುವಂತೆ ಅರಳಿದವು !!

ಮುಂದೇನು ? ಹೆಚ್ಚಿನ ವಿಚಾರಕ್ಕೆ ಆಸ್ಪದವೇ ಉಳಿಯಲಿಲ್ಲ. ದಂಪತಿಗಳಿಬ್ಬರೂ ಭಾರವಾದ ಎದೆಯಿಂದ, ಕಣ್ಣೀರ ಕೊರಗಿನಿಂದ, ಕರುಳಿನ ಆಕ್ರಂದನದಿಂದ ಐದು

ವರ್ಷದ ಮಗು ಮಹಾಂತೇಶನನ್ನು ಶಿವಯೋಗಮಂದಿರಕ್ಕೆ ಅರ್ಪಿಸಲು ಬಂದಿದ್ದಾರೆ. ಅದು ಶಾ. ಶ. ೧೮೫೪. ಕ್ರಿಸ್ತಾಬ್ದ ೧೯೩೨ ವಸಂತಋತು. ದವನದ ಹುಣ್ಣಿವೆಯ ಎಡಬಲ. ಚೈತ್ರದ ಚಲುವು ಚಿಮ್ಮಿ ಬರುವ ಹರ್ಷಕಾಲ. ಅಪೂರ್ವ ವನಶ್ರೀ ಹಾಗೂ ಯೋಗಶ್ರೀಗಳಿಂದ ಶಿವಯೋಗಮಂದಿರ ಪಾವನ ಪುಣ್ಯಶ್ರೀಯಾಗಿದೆ. ಶ್ರೀಮಂತವಾಗಿದೆ. ಶೃಂಗಾರವಾಗಿದೆ. ಅಲ್ಲಿಯ ಮಾತಿನಲ್ಲಿ ಮೌನ ಅಡಗಿದೆ. ಮೌನದಲ್ಲಿ ಮಂತ್ರ ನೆಲೆಸಿದೆ. ಆ ಯೋಗವಿತಾನದ ಮರ–ಗಿಡ–ಬಳ್ಳಿ–ಪಕ್ಷಿ–ಮೃಗ–ಜಲರಾಶಿ–ವನರಾಶಿಗಳೆಲ್ಲ ವಿಜಯಮಹಾಂತೇಶನನ್ನೇ ಧ್ಯಾನಿಸುತ್ತಿವೆ. ಹಾನಗಲ್ಲ ಕುಮಾರ ಮಹಾಯೋಗಿಯನ್ನೇ ಆರಾಧಿಸುತ್ತಿಸುತ್ತಿವೆ. ಏನು ಸೌಂದರ್ಯ ! ಏನು ವೈಭವ !! ಎಷ್ಟೊಂದು ಅಪೂರ್ವ ಚಲುವಿನ ವೈರಾಗ್ಯವಾರಾಶಿ ! ! !

ದಂಪತಿಗಳಿಬ್ಬರು ಕುಮಾರಸ್ವಾಮಿಗಳ ಗದ್ದುಗೆಯ ಎದುರಿಗೆ ಮಂಡಿಸಿದ್ದಾರೆ. ಭಯಭರಿತ ಮಹಾಮೌನದಲ್ಲಿ ಎದೆಯೊಡೆದು ಕುಳಿತಿದ್ದಾರೆ. ತಮ್ಮ ಆತ್ಮ ಪ್ರೇಮವನ್ನೆ ಕಾಸಿ ಕುಡಿಸಿ ಕೆನೆತೆಗೆದಂತೆ ಮಗು ಮಹಾಂತೇಶನನ್ನು ಗದ್ದುಗೆಯ ಮುಂದೆ ಮಲಗಿಸಿದ್ದಾರೆ. ಕೊನೆಯ ಬಾರಿಗೆ ಸಮರ್ಪಿಸಿದ್ದಾರೆ.

ಆಗ ಮರುಳಸಿದ್ಧಯ್ಯನವರು— ಕುಮಾರ ಮಹಾಸ್ವಾಮಿಗಳೆ; ತಾವು ನಮ್ಮ ಸಸಿವಾಳಕ್ಕೆ ಬಂದಿರಿ. ನಮ್ಮಿಂದ ಜನನವಾಗಲಿರುವ ಮಗನನ್ನು ಮಂದಿರಕ್ಕೆ ಅರ್ಪಿಸಲು ಅಣತಿ ನೀಡಿದಿರಿ. ಇಂದು ನಿಮ್ಮ ಅಪ್ಪಣೆಯಂತೆ ಕಂದಮ್ಮನನ್ನು ತಂದಿದ್ದೇನೆ. ಸ್ವೀಕರಿಸಿರಿ.'

—ಎಂದರು. ನಗುನಗುತ್ತಲೆ ಮಹಾತ್ಯಾಗವನ್ನು ಗೈದರು. ತಾಯಿ ಚೆನ್ನಮ್ಮನೂ– " ತಂದೇ...ಸ್ವೀಕರಿಸಿರಿ....ಸ್ವೀಕರಿಸಿರಿ..." ಎನ್ನುತ್ತ ನಮಿಸಹೋದಳು. ಅವಳ ಎದೆಯನ್ನು ಸೀಳಿ ಕಣ್ಣೀರುಗಳು ಧಾರಾಕಾರವಾಗಿ ಪುಟಿಯುತೊಡಗಿದವು. ಸೆರಗು ಮುಚ್ಚಿ ಪಕ್ಕಕ್ಕೆ ಸರಿದಳು. ಮುಗ್ಧ ಆಕಳು ರೋದಿಸಿದಂತೆ ರೋದಿಸತೊಡಗಿದಳು. ಆ ಮಹಾತಾಯಿ ಮಹಾಸಂಕಟದಿಂದ ಒರಲತೊಡಗಿದಳು. ಅವಳ ಆ ಕಣ್ಣೀರಿನ ಕೂಗಿಗೆ ಶಿವಯೋಗಮಂದಿರವೂ ಮೂಕವಿಸ್ಮಿತವಾಯಿತು. ಕಂಬನಿದುಂಬಿ— " ಶಾಂತಳಾಗು ತಾಯಿ...ಶಾಂತಳಾಗು..." ಎಂದು ಹೇಳಿತು.

ದಂಪತಿಗಳು ಕೊನೆಯ ಬಾರಿಗೆ ಮಗುವನ್ನು ಗುರುಕುಲಕ್ಕೆ ಬಿಟ್ಟು ಬಂದರು. ಅತ್ತ ಮಗು ಮಹಾಂತೇಶ ಯೋಗದ ಆತ್ಮದಲ್ಲಿ ಯೋಗ ಸೇರಿದಂತೆ, ಜ್ಞಾನದಲ್ಲಿ ಜ್ಞಾನ ಬೆಸುಗೆಯಾದಂತೆ ನಗುನಗುತ್ತಲೆ ಮಂದಿರ ಸೇರಿದ. ಇತ್ತ ತಂದೆ ತಾಯಿಗಳು ತಮ್ಮ ಮಗು ಮಹಾಂತೇಶನ ಮೇಲೆ ಕೊನೆಯ ಬಾರಿಗೆ ಕೈ ಆಡಿಸಿ, ಕೊನೆಯ ಮುದ್ದು ಕೊಟ್ಟು, ತಾಳಲಾರದ ತಾಪ ಹೊತ್ತು ಮರಳಿದರು. !

ಆ ಐದು ವರ್ಷದ ಮಹಾಂತೇಶನೇ ಮುಂದೆ ಮಹಾಜ್ಞಾನಿ, ಮಹಾಸಮರ್ಥ, ದಿವ್ಯತೇಜೋಮೂರ್ತಿಯಾಗಿ ರಾರಾಜಿಸಿದ. ಕಂಡವರ ಕಣ್ಮಣಿಯಾದ, ಮಂದಿರದ ಮಹಾಯೋಗಿಗಳ ಪ್ರಾಂಜಲ ಜ್ಞಾನಚಕ್ಷುವಿನ ಕಣ್ಗಾರಿಕೆಯಲ್ಲಿ ಕಸುವಿನಿಂದ ಬೆಳೆದ,

ಚೈತನ್ಯದ ಕಾರಂಜಿಯಾಗಿ, ನವೋದಯದ ಅಮರಪುಷ್ಪವಾಗಿ ಪ್ರಬುದ್ಧನಾದ. ಶಿವಯೋಗಮಂದಿರದಲ್ಲಿ ಹಾಗೂ ಕಾಶಿಯಲ್ಲಿ ಅಧ್ಯಯನ ಗೈದು ಪ್ರಕಾಂಡ ಪಂಡಿತನೂ ಪ್ರಖ್ಯಾತ ಋಷಿಕವಿಯೂ ಪ್ರಬುದ್ಧ ಜ್ಞಾನಿಯೂ ಆದ. ಆತನೇ ಇಂದು ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾ ಸ್ವಾಮಿಯಾಗಿದ್ದಾನೆ ! ಹುಬ್ಬಳ್ಳಿಯ ಜಗದ್ಗುರು ಮೂರುಸಾವಿರಮಠದ ಮಹಾ ಸಿಂಹಾಸನವನ್ನು ಸಾಲಂಕಾರ ವೈಭವದಿಂದ ಆರೋಹಿಸಿದ್ದಾನೆ !! ತನ್ನ ಕರ್ಮಯೋಗ ಜ್ಞಾನಯೋಗಗಳ ಪ್ರಭಾವದಿಂದ ಮೂರುಸಾವಿರಮಠವನ್ನು ಇಂದಿನ ವೈಜ್ಞಾನಿಕ ಪ್ರಪಂಚದಲ್ಲಿ ಮುನ್ನಡೆಸಲು ಕಾರಣೀಭೂತನಾಗಿದ್ದಾನೆ !!! ಜಪಾನದ ಸರ್ವಧರ್ಮ ಶಾಂತಿಪರಿಷತ್ತಿನಲ್ಲಿ ಭಾರತದ ಬಾವುಟ ಹಾರಿಸಿ ಬಂದ ವಿಖ್ಯಾತ ವಿರಾಟ್ ಪುರುಷನಾಗಿದ್ದಾನೆ !!!! □

## ಗತಯುಗದ ಪಕ್ಷಿನೋಟ

### ಶಿರಸಿ ಶಿಲಾಶಾಸನ

ಮೂರುಸಾವಿರಮಠದ ಉದಯ ಎಂದು ? ಈ ಮಹಾಪೀಠದ ಪೂರ್ವ ಪೀಠಾಚಾರ್ಯರಾರು ? ಇದರ ಉಜ್ವಲ ಇತಿಹಾಸಯಾನದಲ್ಲಿ ಮೈಲುಗಲ್ಲುಗಳು ಯಾವವು ?—ಈ ಎಲ್ಲ ಪ್ರಶ್ನೆಗಳಿಗೂ ಕಾಲಗರ್ಭವೆ ಉತ್ತರ ನೀಡಬೇಕು. ಆದರೆ ಈಗ ದೊರೆತ ಕೆಲವೊಂದು ಖಚಿತ ಆಧಾರಗಳಿಂದ ಇದರ ಪೂರ್ವಕಾಲವನ್ನು ಉತ್ಖನನ ಮಾಡಿ ಕೆಲಮಟ್ಟಿಗೆ ಕಂಡುಕೊಳ್ಳಬಹುದಾಗಿದೆ. ಪ್ರೊ. ವರದರಾಜ ಉಮರ್ಜಿ ಯವರು ಬೆಳಕಿಗೆ ತಂದ ಕಲಚೂರ್ಯರ ಹನ್ನೆರಡನೆ ಶತಮಾನದ ಶಿರಸಿ ಶಿಲಾಲೇಖ ದಲ್ಲಿ ಮೂರುಸಾವಿರಮಠದ ಉಲ್ಲೇಖ ಮೊದಲಬಾರಿಗೆ ಗೋಚರವಾಗಿದೆ. ಹನ್ನೆರಡ ನೆಯ ಶತಮಾನಕ್ಕಾಗಲೇ ರಾಷ್ಟ್ರಮಾನ್ಯ ಶಿಲಾಲಿಪಿಯಲ್ಲಿ ಸ್ಥಾನನಿರ್ದೇಶನವನ್ನು ಕಂಡು ಕೊಳ್ಳಬೇಕಾದರೆ, ಆ ಕಾಲಕ್ಕಾಗಲೇ ಈ ಪೀಠ ಬೆಳೆಯುವ ಸ್ಥಿತಿಯಲ್ಲಿರದೇ ಪ್ರಬುದ್ಧವಾಗಿ ಬೆಳೆದ, ಪರಂಪರಾಗತವಾಗಿ ಪ್ರತಿಷ್ಠಿತವಾದ ಸ್ಥಾನವಾಗಿರಲಿಕ್ಕೆ ಸಾಕು. ೧೨ನೆಯ ಶತಮಾನದ ಅನುಭವಮಂಟಪದ ಮಹಾಕ್ರಾಂತಿಗೂ ಶಿರಸಿ ಶಿಲಾಲೇಖದ ಈ ಉಲ್ಲೇಖಕ್ಕೂ ತಾಳೆ ಹಿಡಿದು ನೋಡಿದರೆ, ಇದರ ಇನ್ನೂ ಪೂರ್ವಸೂಚನೆ ಸುವ್ಯಕ್ತವಾಗುತ್ತದೆ. ಅಲ್ಲದೆ ಬಸವಾದಿಪ್ರಮಥರ ವಚನಕ್ರಾಂತಿ ಪ್ರಫುಲ್ಲಿತವಾಗಿ ಪ್ರಾಮಾಣ್ಯತೆಯನ್ನು ಹೊಂದುವದಕ್ಕಿಂತ ಪೂರ್ವದಲ್ಲಿ ವೀರಶೈವವು ಅನೇಕ ಶೈವಪಂಥ

ಗಳಲ್ಲಿ ಹರಿದು ಹಂಚಿಹೋದುದು ನಿರ್ವಿವಾದ ಸಂಗತಿಯಾಗಿದೆ. ಆಗ ಕಾಳಾಮುಖ, ಪಾಶುಪತ. ಲಾಕುಲೀಶ ಮೊದಲಾದ ಶೈವಪರಂಪರೆಗಳನ್ನು ಗುರುತಿಸಬಹುದು. ಶೈವ ಮೂಲದ ತಾಯಿಬೇರಿನಿಂದ ಈ ಮಠ ಬಹು ಪುರಾತನ ಕಾಲದಿಂದ ಬೆಳೆದುಬಂದು, ಹನ್ನೆರಡನೆಯ ಶತಮಾನದ ಶಿವಶರಣರ ಪರಿಷ್ಕಾರಯುಗದಲ್ಲಿ ಪರಿಷ್ಕರಣಗೊಂಡು, ಅಲ್ಲಮಸಂಪ್ರದಾಯದ ಶೂನ್ಯಸಿಂಹಾಸನ ಪೀಠವಾಗಿ ಉತ್ಕ್ರಾಂತಿಯಾಗಿರಬೇಕೆಂದು ನಮ್ಮ ಊಹೆಯ ಕುದುರೆಯನ್ನು ಓಡಿಸಬಹುದಾಗಿದೆ. ಈ ವಿಚಾರಸಾಮಗ್ರಿ, ಇನ್ನೂ ಕೆಲವು ಸಾಧಾರಸಾಮಗ್ರಿಗಳಿಂದ ಮೂರುಸಾವಿರಮಠವು ಇಂದಿಗೆ ಎಂಟುನೂರು ವರ್ಷಗಳ ಪೂರ್ವದಲ್ಲಿ ಅಸ್ತಿತ್ವದಲ್ಲಿದ್ದು, ಆ ಕಾಲದ ಕನ್ನಡನಾಡಿನ ಅಪೂರ್ವ ಕೇಂದ್ರಸ್ಥಾನವಾಗಿತ್ತೆಂದು ಹೇಳಬಹುದಾಗಿದೆ.

## ಎಂಟುನೂರು ವರ್ಷಗಳ ಹಿಂದಿನ ಹುಬ್ಬಳ್ಳಿ

ಗ್ಯಾಜೆಟ್ಟಿನಲ್ಲಿ ಹುಬ್ಬಳ್ಳಿಗೆ "ಪುಬ್ಬಳ್ಳಿ"ಯೆಂಬ ನಿರ್ವಚನ ದೊರೆಯುತ್ತದೆ. ಬಹುಶಃ ; ಪೂರ್ವದ+ಹಳ್ಳಿ "ಪುಬ್ಬಳ್ಳಿ"ಯಾಗಿರಬೇಕೆಂದು ಒಂದು ಅಭಿಪ್ರಾಯ. ಆದರೆ ಕಲಚೂರ್ಯರ ೧೨ನೆಯ ಶತಮಾನದ "ಶಿರಸಿ ಶಾಸನ"ದಲ್ಲಿ "ಪೂವಳ್ಳಿ" ಎಂದು ಉಲ್ಲಿಖಿತವಾಗಿದೆ. ಪೂವಳ್ಳಿಯೆಂದರೆ ಪೂರ್ವದ ಹಳ್ಳಿಯೆಂದಾಗದೆ ಹೂವಿನ ಹಳ್ಳಿಯೆಂದೇ ಆಗುವದಿಲ್ಲವೆ ? ಬಹುಶಃ ಈ ನಗರ ಚಿಕ್ಕಹಳ್ಳಿಯ ಸ್ವರೂಪದಲ್ಲಿ ಒಂಬತ್ತು ಇಲ್ಲವೆ ಹತ್ತನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿ ಇದ್ದಿರಬಹುದಾಗಿದೆಯೆಂದು ಪ್ರೊ. ವರದರಾಜ ಉಮರ್ಜಿಯವರ ಶಿರಸಿ ಶಿಲಾಲೇಖದ ಪ್ರಸ್ತಾಪದಿಂದ ನಾವು ಕಂಡುಕೊಳ್ಳಬಹುದಾಗಿದೆ. ಅಲ್ಲದೆ ಶಿರಸಿ ಶಾಸನದಲ್ಲಿ "ಪೂವಳ್ಳಿ"ಯೆಂಬುದು ಮೂರುಸಾವಿರಮಠದ ಸಂಬಂಧದಲ್ಲಿ ಉಕ್ತವಾದದ್ದರಿಂದ, ಅದು ೧೨ನೆಯ ಶತಮಾನದಿಂದಲೂ ಲಿಂಗಾಯತ ಸಮಾಜದ ಕೇಂದ್ರವಾಗಿತ್ತೆಂದು ಕಲ್ಲೂರ ಸಂಗಣ್ಣನವರು ತಮ್ಮ "ಹೊಂಬೆಳಗು" ಗ್ರಂಥದಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಇಲ್ಲಿ ನಮಗೆ ಹುಬ್ಬಳ್ಳಿಯ ಪುರಾತನತೆ, ಅದರ ಪರಂಪರೆ ಮುಖ್ಯವಾಗಿರದೇ ಅದಕ್ಕೆ ಹೊಂದಿಕೊಂಡು ಬಂದ ಮೂರುಸಾವಿರಮಠದ ಪ್ರಾಚೀನತೆ ಮುಖ್ಯ. ಹುಬ್ಬಳ್ಳಿ ಇಂದಿನಂತೆ ಗಡಿಬಿಡಿಯ–ಗದ್ದಲದ–ಗಲ್ಲಿಗುಲ್ಲಿಯ ರಂಭಾಟದ ನಗರವಾಗಿರದೇ ಒಂದು ಸುರಸುಂದರ ತಪೋವನದಂತೆ ಪ್ರಶಾಂತವಾಗಿದ್ದ ಹೂವಿನಹಳ್ಳಿಯೇ ಆಗಿರಬೇಕು. ಆ ಹಳ್ಳಿಯ ಹೊರವಲಯದ ಅರಣ್ಯದಲ್ಲಿ ನೈಸರ್ಗಿಕವಾದ ಒಂದು ದೊಡ್ಡ ಸರೋವರವೂ ಇತ್ತು. ಅದೇ ಈಗ ಗಂಗಾಧರ ಹಾಯಸ್ಕೂಲಿನ ಆಟದ ಬಯಲಾಗಿದೆ, ಈ ಸರೋವರವು ಲತಾಮಂಟಪಗಳಿಂದಲೂ. ಸುಮನೋಹರ ಸೃಷ್ಟಿಯ ಶ್ರೀಮಂತಿಕೆಯಿಂದಲೂ. ಏಕಾಂತತೆಯಿಂದಲೂ ಅರಣ್ಯಸದೃಶವಾಗಿತ್ತು. ಸಾಧಕರಿಗೆ ಅಮೃತಪ್ರಾಯವಾಗಿತ್ತು. ಇದರ ದಡದಲ್ಲೇ ಬಹುಪುರಾತನಕಾಲದಿಂದ ತಪೋವನವೊಂದು ಮೈದಾಳಿರಲಿಕ್ಕೆ ಸಾಕು. ಅದೇ ತಪೋವನದ ಗವಿಯಲ್ಲಿ ಉಗ್ರ ಅನುಷ್ಠಾನಗೈದು ಲಿಂಗೈಕ್ಯರಾದ

ಜಗದ್ಗುರು ಗುರುಸಿದ್ಧರಾಜಯೋಗೀಂದ್ರರ ಜಾಗೃತಸಮಾಧಿ ಇಂದಿಗೂ ಈ ಮಠದ ಬಲಭಾಗಕ್ಕೆ ಇದೆ. ಹುಬ್ಬಳ್ಳಿ ನಗರದ ಭಾವುಕರಿಗೆ ಇದೊಂದು ಅಪೂರ್ವ ಧಾರ್ಮಿಕ ಕೇಂದ್ರವಾಗಿದೆ.

## ಪೂರ್ವದ ಮಠ

ಈ ಮಠದ ಪೂರ್ವಿಸ್ಥಾನವು ಇಂದಿನ "ಓಲೆಮಠ"ದಲ್ಲಿ ಇತ್ತೆಂದು ಹಿರಿಯರಿಂದ ಮುಖೋದ್ಗತವಾಗಿ ತಿಳಿದುಬಂದ ಸಂಗತಿಯಾಗಿದೆ. ಅದು ಅಂದು "ಓಲೆಮಠ"ವಾಗಿರದೇ ಪೂರ್ವದ ಮೂರುಸಾವಿರಮಠವಾಗಿತ್ತು. ಜಗದ್ಗುರು ಗುರುಸಿದ್ಧರಾಜ-ಯೋಗೀಂದ್ರರು ಸರೋವರದ ದಂಡೆಯ ಮೇಲೆ ಅನುಷ್ಠಾನಮಾಡಿ ಲಿಂಗೈಕ್ಯರಾದ ಮೇಲೆ ಅಲ್ಲೊಂದು ಸ್ಮಾರಕಮಂದಿರ ಸ್ಥಾಪಿಸಲಾಯಿತೆಂದೂ, ಆಗ ಮೂರುಸಾವಿರ ಮಠವು ಅಲ್ಲಿಗೆ ಸ್ಥಳಾಂತರವಾಯಿತೆಂದೂ, ಮತ್ತು ತನ್ನ ಪೂರ್ವದ ಮಠವನ್ನು ತಾಳೆಯೋಲೆ ಗ್ರಂಥಗಳನ್ನು ಸಂಗ್ರಹಿಸಿ ಇಡುವ ಓಲೆಮಠವಾಗಿ ಉಪಯೋಗಿಸಿತೆಂದೂ ಜನಜನಿತವಾಗಿ ವದಂತಿ ಇದೆ. ಸದ್ಯದಲ್ಲಿ ಅರಮನೆಯಂತೆ ವಿರಾಜಮಾನವಾದ ಮೂರುಸಾವಿರಮಠದ ಪರಂಪರೆ ಅಪೂರ್ವವಾಗಿದೆ, ಉಜ್ವಲವಾಗಿದೆ, ಅದಕ್ಕೆ ಸಾಧಾರಪ್ರಮಾಣಗಳನ್ನು ಕಾಲಪುರುಷನೇ ಒದಗಿಸಬೇಕು.

## 'ಮೂರುಸಾವಿರ' ಹೆಸರಿನ ಮೂಲವೆಲ್ಲಿ?

ಅಲ್ಲಮಪ್ರಭುದೇವರ ಶೂನ್ಯಪೀಠದ ಪರಂಪರೆಯಲ್ಲಿ ಅನೇಕ ಜಗದ್ಗುರು ಪೀಠಗಳೂ ನಿರಂಜನ ಪೀಠಗಳೂ ಕನ್ನಡನಾಡಿನಲ್ಲಿ ಮೈದಾಳಿದವು. ಕೊನೆಗೆ ಕಲ್ಯಾಣದ ರಕ್ತಕ್ರಾಂತಿಯಾಯಿತು. ಆಗ ಅಲ್ಲಿಯ ಮೂರುಸಾವಿರ ಜನ ಭಕ್ತಮಾಹೇಶ್ವರರು ಆಶ್ರಯಕ್ಕೆಂದು "ಪೂವಳ್ಳಿ"ಗೆ ಬಂದು, ಇಲ್ಲಿಯ ಪುರಾತನ ಧರ್ಮಪೀಠದಲ್ಲಿ ತಂಗಿದರು. ಈ ಐತಿಹಾಸಿಕ ಘಟನೆಯ ಪರಿಣಾಮವಾಗಿ ಇದು ಮೂರುಸಾವಿರಮಠವಾಯಿತೆಂದು ಹಲವರ ಅಭಿಪ್ರಾಯ. ಇನ್ನು ಕೆಲವರು ಇದನ್ನು ಮತ್ತೊಂದು ರೀತಿಯಾಗಿ ಹೇಳಿದ್ದಾರೆ. ದ್ವಿತೀಯ ಪ್ರಭುದೇವರೆನಿಸಿದ ಶ್ರೀ ಎಡೆಯೂರ ಸಿದ್ಧಲಿಂಗ ಶಿವಯೋಗಿಗಳವರು ಹದಿನೈದನೆಯ ಶತಮಾನದ ಉತ್ತರಾರ್ಧದಲ್ಲಿ ಏಳುನೂರು ಚರಮೂರ್ತಿಗಳೊಂದಿಗೆ ಸಂಚಾರಕ್ಕೆ ಹೊರಟು, ವೀರಶೈವಧರ್ಮದ ಪುನರುಜ್ಜೀವನವನ್ನು ಮಾಡಿದರು. ಈ ಏಳುನೂರು ಚರಮೂರ್ತಿಗಳ ಕರಸಂಜಾತರಾಗಿ ಮೂರುಸಾವಿರ ವಿರಕ್ತಮಾಹೇ-ಶ್ವರರ ಗುಂಪು ಹುಬ್ಬಳ್ಳಿಗೆ ಬಂದು, ಅಲ್ಲಿಯ ವಿರಕ್ತಪೀಠದ ಆಶ್ರಯದಲ್ಲಿ ನೆಲೆನಿಂತು ಧರ್ಮ ಪ್ರಚಾರ ಕೈಗೊಂಡಿತು. ಅಂದಿನ ಕಾಲದಲ್ಲಿ ನಡೆದ ಮುಸಲ್ಮಾನರ ಪ್ರಬಲ ಪಾಶವೀವೃತ್ತಿಗಳಿಗೆ ಧಾರ್ಮಿಕ ಭದ್ರಕೋಟೆಯನ್ನು ನಿರ್ಮಾಣಗೊಳಿಸಿತು. ಅಂದಿನಿಂದಲೇ ಈ ಅಲ್ಲಮಪ್ರಭು ಸಂಪ್ರದಾಯದ ಪೀಠಕ್ಕೆ ಮೂರುಸಾವಿರ ಮಠವೆಂದು ನಾಮಕರಣವಾಯಿತೆಂದು ಇನ್ನು ಕೆಲವರ ಅಭಿಪ್ರಾಯ. ಈ ಎರಡರಲ್ಲದೆ

ಇನ್ನೂ ಒಂದು ಅಭಿಪ್ರಾಯ ಇತ್ತೀಚೆಗೆ ಬಳಕೆಗೆ ಬಂದಿದೆ. ಹದಿನೆಂಟನೆಯ ಶತಮಾನದ ಮೊದಲು ಕಾಲುಭಾಗದಲ್ಲಿ, ಮೊಗಲರ-ಮುಸಲ್ಮಾನರ ಹಾಗೂ ಮರಾಠಿಗರ ದಬ್ಬಾಳಿಕೆ ಪುಂಡಾಟಗಳಲ್ಲಿ ಕನ್ನಡಿಗರು ಕಂಗೆಟ್ಟರೆಂದೂ. ಇದೇ ಸಮಯಕ್ಕೆ ಕರ್ನಾಟಕದಲ್ಲಿ ಹನ್ನೆರಡು ಸಾವಿರ ವಿರಕ್ತರದೊಂದು ತಂಡ, ಆರುಸಾವಿರ ವಿರಕ್ತರದೊಂದು ಗಣ, ಮೂರುಸಾವಿರ ವಿರಕ್ತರದೊಂದು ಗುಂಪು ಧರ್ಮಸಂಗ್ರಹ ಕಾರ್ಯದಲ್ಲಿ ತೊಡಗಿತೆಂದೂ, ಆಗ ಮೂರು ಸಾವಿರ ವಿರಕ್ತರ ಗುಂಪು ಚಿತ್ರದುರ್ಗ ಮಾರ್ಗವಾಗಿ ಉತ್ತರ ಕರ್ನಾಟಕದ ನಡುಮನೆಯಂತಿರುವ ಹುಬ್ಬಳ್ಳಿಗೆ ಬಂದಿತೆಂದೂ; ಇವರೇ ಮಹಾ ತಪಸ್ವಿಯೂ ಮೇಧಾವಿಯೂ ಆದ ಶ್ರೀ ಸಿದ್ಧಶಿವಯೋಗಿಯನ್ನು ಇಲ್ಲಿ ನೆಲೆಗೊಳಿಸಿದರೆಂದೂ ಎಸ್. ಡಿ. ಇಂಚಲರು 'ಸುಕುಮಾರ' ದಲ್ಲಿ ಅಭಿಪ್ರಾಯ ಇತ್ತಿದ್ದಾರೆ. ಕಲ್ಲೂರ ಸಂಗಣ್ಣನವರು ಈ ಅಭಿಪ್ರಾಯವನ್ನು 'ಹೊಂಬೆಳಗು' ಗ್ರಂಥದಲ್ಲಿ ಎತ್ತಿಕೊಂಡಿದ್ದಾರೆ. ಪ್ರೊ. ಸ. ಸ. ಮಾಳವಾಡರು 'ಕನ್ನಡಿಗ'ದ ವಿಶೇಷ ಸಂಚಿಕೆಯಲ್ಲೂ ಇದನ್ನು ಉಲ್ಲೇಖಿಸಿದ್ದಾರೆ. ಆದರೆ ಈ ಅಭಿಪ್ರಾಯಕ್ಕೆ ಪ್ರಬಲವಾದ ಆಧಾರ ಪ್ರಮಾಣಗಳನ್ನು ಯಾರೂ ಕಾಣಿಸಿಲ್ಲ. ಇದು ಕೇವಲ ಊಹೆಯ ವಿಷಯ. ನಮಗೆ ಸಮ್ಮತವಾದುದು ಈ ಮಾರ್ಗದಲ್ಲಿ ಮೊದಲನೆಯ ಅಭಿಪ್ರಾಯ. ಇದಕ್ಕೆ ಶಿರಸಿಯ ಶಿಲಾಲೇಖವೇ ನೇರ ಉತ್ತರ ಒದಗಿಸಬಲ್ಲದು. 'ಮೂರುಸಾವಿರ ಮಠದ' ದ ಹೆಸರು ಹನ್ನೆರಡನೆಯ ಶತಮಾನಕ್ಕಾಗಲೆ ಲೋಕವಿದಿತವಾಗಿತ್ತು.

## ಶಾಖಾಮಠಗಳು

ಕರ್ನಾಟಕದ ಬಹುಭಾಗದಲ್ಲಿ ಹಾಗೂ ಆಂಧ್ರ-ತಮಿಳು-ಮಹಾರಾಷ್ಟ್ರ ಪ್ರಾಂತಗಳ ಸೀಮೆಗಳಲ್ಲಿ ಕುಮಾರ ಸಮಯಕ್ಕೆ ಒಳಪಟ್ಟ ಮಠಗಳೆಲ್ಲವೂ ಹುಬ್ಬಳ್ಳಿ ಮೂರು ಸಾವಿರಮಠದ ಶಾಖಾಮಠಗಳು. ಕಾರವಾರ, ಬೆಳಗಾಂವಿ, ಧಾರವಾಡ, ವಿಜಾಪೂರ. ಕೊಲ್ಲಾಪೂರ ಜಿಲ್ಲೆಗಳಲ್ಲಿ ಹಾಗೂ ಹಳೇಮೈಸೂರ ಜಿಲ್ಲೆಗಳಲ್ಲಿ ಇವರ ಶಾಖಾಮಠಗಳನ್ನು ವಿಶೇಷ ಪ್ರಮಾಣದಿಂದ ಕಾಣಬಹುದಾಗಿದೆ. ಸದ್ಯದ ಮಠದಲ್ಲಿ ಹದಿನೇಳು ಗದ್ದುಗೆಗಳು ಮಾತ್ರ ದೊರೆಯುತ್ತವೆ. ಇದರಿಂದ ಈ ಮಠದ ಚರಿತ್ರ ಇಷ್ಟೇ ಎಂದು ಹೇಳುವದು ಸರಿಯಲ್ಲ. ಕಾರಣ ಇದರ ಅನೇಕ ಪೀಠಾಚಾರ್ಯರು ಅನೇಕ ಉಪಮಠಗಳಲ್ಲಿ ಇದ್ದುದರಿಂದ ಅವರ ಸಮಾಧಿಸ್ಥಾನಗಳು ಅಲ್ಲಲ್ಲಿ ಚಲ್ಲವರಿದುದು ಸ್ವಾಭಾವಿಕ. ಅಷ್ಟೇ ಅಲ್ಲ, ಇತಿಹಾಸದ ಪತನ ಕಾಲಕ್ಕೆ ಅನೇಕ ಸಲ ಪೀಠಾಚಾರ್ಯರನ್ನು ನಿಯಮಿಸದೆ ಹಾಗೇ ಈ ಪೀಠ ಕೆಲ ಕಾಲ ಬಾಳಿರಲೂ ಸಾಕು. ಈ ದುರ್ದೆಶೆಯನ್ನು ಕರ್ನಾಟಕದ ಬಹುತೇಕ ಪ್ರಾಚೀನ ಮಠಗಳು ಅನುಭವಿಸಿವೆ. ಚಿತ್ತರಗಿಯ ಪೀಠವಾದರೂ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಆಗಮನದ ವರೆಗೆ ಕಾಲಗರ್ಭದಲ್ಲಿ ಮೌನತಾಳಿರಲಿಲ್ಲವೆ? ಇನ್ನೂ ದುರ್ದೈವದ ಸಂಗತಿಯೆಂದರೆ ಈಗ ನಮಗೆ ಆರು ಜಗದ್ಗುರುಗಳ ಹೆಸರುಗಳು ಮಾತ್ರ ದೊರೆತಿವೆ. ಉಳಿದವರನ್ನೆಲ್ಲ

ಇತಿಹಾಸವೇ ತಿಂದುಹಾಕಿದೆ ! ಈಗಿರುವ ಜಗದ್ಗುರುಗಳು ಈ ದೊರೆತ ಮಾಲಿಕೆಯಲ್ಲಿ ಏಳನೆಯವರಾಗುತ್ತಾರೆ. □

# ಲಿಂಗೈಕ್ಯ ಗುರುಸಿದ್ಧರಾಜಯೋಗೀಂದ್ರರು

## ಸಮಾಜಾನುರಾಗಿ ಗಂಗಾಧರ ರಾಜಯೋಗಿ

ದಿ. ೧೦-೨-೧೯೦೧ ರಂದು ಶ್ರೀ ಮೂರುಸಾವಿರ ಮಠದ ಜಗದ್ಗುರು ಪೀಠವನ್ನು ಅಲಂಕರಿಸಿದ ಈ ಮಹಿಮರು ೧೯ ವರ್ಷಕಾಲ ಆಳಿಕೆಗೈದು ಅಮರರಾದರು. ಇವರು ಲಿಂಗೈಕ್ಯ ಜಗದ್ಗುರು ಗುರುಸಿದ್ಧರಾಜಯೋಗೀಂದ್ರರಿಗಿಂತಲೂ ಹಿಂದಿನವರು. ಕಾಶಿ ಹಿಂದೂ ವಿಶ್ವವಿದ್ಯಾಲಯದ ಪ್ರಕಾಂಡ ವ್ಯಾಕರಣ ಪಂಡಿತರು. ಇವರ ಸಮಗ್ರ ಬಾಳು ಸಮಾಜ ಸೇವೆಗೆ ಮೀಸಲಾಯಿತು. "ಸಮಾಜ ಸೇವೆಯೆ ಸದಾಶಿವನೊಲುಮೆಯಯ್ಯಾ !" ಎಂದು ಘೋಷಿಸಿದರು. ಮುಂದೆ ಅಂತರಿಕ್ಷವಾಹನವೇಗದಿಂದ ಮುನ್ನಡೆಯಲಿರುವ ಈ ಪೀಠದ ಪ್ರಚಂಡ ಪ್ರಗತಿಗೆ ಇವರು ತೆರೆಯ ಹಿಂದಿನಿಂದ ತಳಗಲ್ಲುಗಳನ್ನು ಸರಿಪಡಿಸಿದರು. ಅಂದಿನ ನಿಷ್ಕಾಮ ಸಮಾಜ ಸೇವಕರಾದ-ರಾ. ಬ. ಅರಟಾಳ ರುದ್ರಣ್ಣಗೌಡರು, ಸರ್. ಕೆ. ಪಿ. ಪುಟ್ಟಣ್ಣಸೆಟ್ಟರು, ಶ್ರೀಮಂತ ಲಿಂಗರಾಜರು ಸರದೇಸಾಯಿ-ಶಿರಸಂಗಿ, ರಾ. ಬ. ಶ್ರೀಮಂತ ವಾರದ ಮಲ್ಲಪ್ಪಣ್ಣನವರು ಇವರಿಗೆ ಜಗದ್ಗುರುಗಳು ಅಂತಃಪ್ರೇರಣೆಯನ್ನು ನೀಡಿ ಅವರ ಸಮಾಜ ಸೇವೆ ವೃದ್ಧಿಯಾಗಲು ಆಶೀರ್ವದಿಸಿದರು. ತಮ್ಮ ಜೀವನಾವಧಿಯಲ್ಲಿ ಲಕ್ಷಾವಧಿ ಹಣವನ್ನು ಸಮಾಜಕ್ಕೆ, ಸಂಘ-ಸಂಸ್ಥೆಗಳಿಗೆ, ಶಿಕ್ಷಣಕ್ಕೆ ದಾನವಿತ್ತರು. ಹುಬ್ಬಳ್ಳಿಯಲ್ಲಿ "ಶ್ರೀಜಗದ್ಗುರು ಗಂಗಾಧರ ಜಿನಿಂಗ್ ಆ್ಯಂಡ್ ಪ್ರೆಸಿಂಗ್ ಫ್ಯಾಕ್ಟರಿ" ಸ್ಥಾಪಿಸಿದರು. ಮಾತ್ರವಲ್ಲ ಕರ್ನಾಟಕದ ಇತಿಹಾಸದಲ್ಲೇ ಮೊಟ್ಟಮೊದಲ ಬಾರಿಗೆ "ಧರ್ಮತರಂಗಿಣಿ" ಎಂಬ ಮಾಸ ಪತ್ರಿಕೆ ಆರಂಭಿಸಿದರು: ಅದಕ್ಕೆ ಸ್ವತಂತ್ರ ಮುದ್ರಣಾಲಯವನ್ನು ಅಣಿಗೊಳಿಸಿದರು.

## ಶಿಕ್ಷಣಪ್ರೇಮಿ ಗುರುಸಿದ್ಧರಾಜಯೋಗಿ

ವಾಣಿಜ್ಯಕೇಂದ್ರವಾದ ಹುಬ್ಬಳ್ಳಿ ನಗರವನ್ನು ಶಿಕ್ಷಣಕೇಂದ್ರವಾಗಿಯೂ ಪರಿನಿರ್ಮಿಸುವಲ್ಲಿ ಲಿಂಗೈಕ್ಯ ಗುರುಸಿದ್ಧರಾಜಯೋಗೀಂದ್ರರು ಪರಿಶ್ರಮಿಸಿದರು, ವಿಜಯ ಸಾಧಿಸಿದರು. ಮಹಾಕಾರ್ಯವೊಂದರ ಮಹಾಶಿಲ್ಪಿಯಾದರು. ಇಂದಿನ ಈ ನಗರದ

ಬೃಹತ್ ಶಿಕ್ಷಣ ಸಂಸ್ಥೆಗಳೆಲ್ಲ ಈ ಮಹಾಮಹಿಮರಿಗೆ ಚಿರಋಣಿಯಾಗದೆ ಗತ್ಯಂತರ–ವಿಲ್ಲ ! ಇವರು ತಮ್ಮ ತನು–ಮನ–ಧನಗಳನ್ನು ಹುಬ್ಬಳ್ಳಿ ನಗರಕ್ಕೆ ಸವೆಸಿ ಅದಕ್ಕೆ ಸಾಂಸ್ಕೃತಿಕ ಹರವನ್ನೂ ಶೈಕ್ಷಣಿಕ ವೈಶಾಲ್ಯತೆಯನ್ನೂ ತಂದುಕೊಟ್ಟರು.

## ಸಂಪತ್ತಿನ ದಾನ

ಧನದ ಸದ್ವಿನಿಯೋಗದಿಂದ ಏನು ತಾನೆ ಸಾಧಿಸಲಿಕ್ಕಿಲ್ಲ ? ಲಿಂಗೈಕ್ಯ ಜಗದ್ಗುರು ಗುರುಸಿದ್ಧರಾಜಯೋಗೀಂದ್ರರು ಸಮಾಜದ ಸರ್ವೋನ್ನತಿಗಾಗಿ ತಮ್ಮ ಜಗದ್ಗುರು ಪೀಠದ ಪ್ರಚಂಡ ಭಾಂಡಾರವನ್ನೇ ಹೊರತೆಗೆದರು. ಸತ್ಕಾರ್ಯಕ್ಕೆ ಸೂರೆಮಾಡಿದರು. ಕರ್ನಾಟಕದಲ್ಲಿ ಶ್ರೀಮಂತ ಮಠವೆಂದು ಪ್ರಖ್ಯಾತ ಹೊಂದಿದ ಈ ಪೀಠ ಸಾಮಾಜಿಕ–ವಾಗಿ–ಶೈಕ್ಷಣಿಕವಾಗಿ–ಧಾರ್ಮಿಕವಾಗಿ–ಸಾಂಸ್ಕೃತಿಕವಾಗಿ–ಕಲಾತ್ಮಕವಾಗಿ ಉಜ್ಜೀವನ–ಗೊಂಡು ಹಸನ್ಮುಖಿಯಾಯಿತು. ನಿರಂತರ ಕಾಯಕ ತತ್ಪರವಾಯಿತು.

ಶಿಕ್ಷಣರಂಗವೆ ಜಗದ್ಗುರು ಗುರುಸಿದ್ಧರಾಜಯೋಗೀಂದ್ರರ ಚೊಚ್ಚಲು ಮಗುವಾಗಿತ್ತು. ಇವರು ಕೆ. ಎಲ್. ಈ ಸೊಸೈಟಿಯ ಸಂಚಾಲಕರನ್ನು ಪ್ರೇರೇಪಿಸಿ ಹುಬ್ಬಳ್ಳಿಯಲ್ಲಿ ಶ್ರೀಕಾಡಸಿದ್ಧೇಶ್ವರ ಕಾಲೇಜು ಸ್ಥಾಪಿಸಲು ೮೦,೦೦೦ ರೂಪಾಯಿಗಳನ್ನು ದಾನನೀಡಿದರು. ಅಲ್ಲದೆ ವಾಣಿಜ್ಯಕೇಂದ್ರವಾದ ಹುಬ್ಬಳ್ಳಿಗೆ ವಾಣಿಜ್ಯವಿದ್ಯಾಲಯವೊಂದು ಅತ್ಯವಶ್ಯಕವೆಂದು ಮನದಂದು, ಶ್ರೀ ಜಗದ್ಗುರು ಗಂಗಾಧರ ಕಾಮರ್ಸ ಕಾಲೇಜನ್ನು ಸಂಸ್ಥಾಪಿಸಿದರು. ಅದಕ್ಕೆ ತಮ್ಮ ಉದಾರ ಹಸ್ತದಿಂದ ಒಂದು ಲಕ್ಷ ರೂಪಾಯಿಗಳನ್ನು ಕೊಡಮಾಡಿದರು. ಈ ಎರಡು ಉಚ್ಚವಿದ್ಯಾಲಯಗಳಿಂದ ಹುಬ್ಬಳ್ಳಿ ಶರವೇಗದಿಂದ ಮುನ್ನಡೆಯಲು ಆರಂಭವಾಯಿತು. ಮುಂದೆ ಅನೇಕ ಕಾಲೇಜಗಳು. ಕರ್ನಾಟಕ ಮೆಡಿಕಲ್ ಕಾಲೇಜಿನಂಥ ಹೆಮ್ಮೆಯ ಸಂಸ್ಥೆಗಳು ಮೈದಾಳಲು ಪೂರ್ವ ಪ್ರೇರಣೆಯಾಯ್ತು.

ಇದಲ್ಲದೆ ಕನ್ನಡ ನಾಡಿನ ಇನ್ನೂ ನೂರಾರು ಸಂಘ–ಸಂಸ್ಥೆಗಳು ಇವರಿಂದ ಪೋಷಿತವಾದವು. ಬೆಳಗಾವಿಯಲ್ಲಿ ಪೂಜ್ಯ ನಾಗನೂರ ರುದ್ರಾಕ್ಷಿ–ಮಠದ ಶಿವಬಸವ ಸ್ವಾಮಿಗಳು ಆರಂಭಿಸಿದ ಜಗದ್ಗುರು ಗುರುಸಿದ್ಧೇಶ್ವರ ಪ್ರಸಾದನಿಲಯಕ್ಕೆ ಜಗದ್ಗುರುಗಳು ೬೦,೦೦೦ ರೂಪಾಯಿಗಳನ್ನು ದೇಣಿಗೆ ನೀಡಿದರು. ಆ ಪ್ರಸಾದನಿಲಯ ಇಂದು ಕರ್ನಾಟಕದಲ್ಲಿ ಅಪೂರ್ವ ಪ್ರಖ್ಯಾತಿಯನ್ನು ಸಾಧಿಸಿದೆ. ಇದಲ್ಲದೆ ಶ್ರೀಗಳು ಅನೇಕ ಶಿಕ್ಷಣ ಸಂಸ್ಥೆಗಳಿಗೆ ಲಕ್ಷಾವಧಿ ನಿಧಿಯನ್ನು ನೀಡಿದರು. ದೇಶವಿದೇಶಗಳಲ್ಲಿ ಅಭ್ಯಸಿಸುವ ವಿದ್ಯಾರ್ಥಿಗಳಿಗೆ ದುಡ್ಡಿನ ನೆರವು ಸಲ್ಲಿಸಿದರು. ಶಿಕ್ಷಣ ಸಂಸ್ಥೆಗಳಿಗೆ ಹಾಗೂ ಶಿಕ್ಷಣ ಕಾರ್ಯಕ್ಕೆ ಅವರು ತಮ್ಮ ಜೀವನಾವಧಿಯಲ್ಲಿ ೧೫,೦೦೦೦೦ ಕ್ಕಿಂತಲೂ ಹೆಚ್ಚು ರೂಪಾಯಿಗಳನ್ನು ದಾನ ನೀಡಿದರು.

ಇವರು ಶ್ರೀ ಜಗದ್ಗುರು ಗಂಗಾಧರ ಶಿವಾದ್ವೈತ ಗ್ರಂಥಸಂಶೋಧನ ಸಂಸ್ಥೆಯನ್ನು ಆರಂಭಿಸಿದರು. ವೀರಶೈವಾನಂದಚಂದ್ರಿಕಾ, ರಘುವಂಶರಹಸ್ಯ, ಸ್ವತಂತ್ರ

ಸಿದ್ಧಲಿಂಗೇಶ್ವರ ವಚನ, ಕಾಡಸಿದ್ಧೇಶ್ವರ ವಚನ, ಸಿದ್ದೇಶ್ವರ ವಚನ, ಹರೀಶ್ವರ ಪ್ರಶಸ್ತಿ, ಲಿಂಗಲೀಲಾವಿಲಾಸಚಾರಿತ್ರ, ನೀತಿಶತಕ ಮೊದಲಾದ ಉದ್ಗ್ರಂಥಗಳನ್ನು ಬೆಳಕಿಗೆ ತಂದರು. ಮಠದಲ್ಲಿ ಸಾವಿರಾರು ತಾಳೋಲೆ ಗ್ರಂಥಗಳನ್ನು ಕಾಪಾಡಿಕೊಂಡು ಬಂದರು.

ಪೂಜ್ಯ ಗುರುಸಿದ್ಧರಾಜಯೋಗೀಂದ್ರರ ವ್ಯಕ್ತಿತ್ವ ಹಲವು ವಿಧ. ತಮ್ಮ ಗುರುಗಳು ಸ್ಥಾಪಿಸಿದ "ಶ್ರೀ ಜಗದ್ಗುರು ಗಂಗಾಧರ ಜಿನಿಂಗ ಮತ್ತು ಪ್ರೆಸಿಂಗ ಫ್ಯಾಕ್ಟರಿ" ಯನ್ನು ಸಮರ್ಥರೀತಿಯಿಂದ ನಡೆಸಿಕೊಂಡು ಬಂದರು. ಅದರ ವರ್ಷಂಪ್ರತಿ ಉತ್ಪನ್ನದಲ್ಲಿ ಕೆಲಭಾಗವನ್ನು ಕೆ. ಎಲ್. ಈ ಸೊಸೈಟಿಗೆ ತಲುಪಿಸಲು ಮರೆಯಲಿಲ್ಲ. ಫ್ಯಾಕ್ಟರಿಯ ವರಮಾನ ಮೊದಲಿಗಿಂತಲೂ ಅಧಿಕವಾಗಿ ಬರುವಂತೆ ಪ್ರಯತ್ನಿಸಿದರು. ಇದರಿಂದ ದೊಡ್ಡ ಪ್ರಮಾಣದಲ್ಲಿ ಬಡಕುಟುಂಬಗಳು ಬದುಕಿಕೊಂಡಿರಲು ಆಶ್ರಯದೊರೆಯಿತು.

ವಿದ್ಯಾರ್ಥಿಗಳ ವಸತಿಗೃಹ ಸೌಕರ್ಯದ ಅವಶ್ಯಕತೆ ಇದ್ದುದನ್ನು ಅರಿತು, ೩೦,೦೦೦ ರೂಪಾಯಿಗಳ ವೆಚ್ಚದಿಂದ ವಸತಿಸೌಧವನ್ನು ಸುಧಾರಣೆಗೊಳಿಸಿದರು. ಮಠದ ಕರ್ತೃ ಗದ್ದುಗೆಯ ಮಹಾಮಂಟಪವನ್ನು ಅಪಾರ ವೆಚ್ಚದಿಂದ ಸಾಲಂಕಾರ ವೈಭವದಲ್ಲಿ ಕಟ್ಟಿಸಿದರು.

ಇವರ ಕಾರ್ಯಜೀವನದ ಪರಮೋಚ್ಚ ಸಾಧನೆಯೆಂದರೆ ಘಟಪ್ರಭೆಯಲ್ಲಿ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಚಿಕಿತ್ಸಾಲಯದ ಸ್ಥಾಪನೆ. ಅದಕ್ಕಾಗಿ ೨,೦೦,೦೦೦ ರೂಪಾಯಿಗಳನ್ನು ದೇಣಿಗೆ ನೀಡಿದ್ದು ಇವರ ಕರುಣಾಳು ಬಾಳಿನ ಭವ್ಯ-ದ್ಯೋತಕವಾಗಿದೆ. ಈ ಆರೋಗ್ಯಧಾಮಕ್ಕೆ ಶ್ರೀ ಜಗದ್ಗುರು ಮೂರುಸಾವಿರಮಠದ ಪೀಠಾಧೀಶ್ವರರೆ ಶಾಶ್ವತ ಅಧ್ಯಕ್ಷರಾಗಿದ್ದಾರೆ.

ಇವರ ನೂರಾರು ಸೇವಾಧರ್ಮಗಳನ್ನು ಪರಿಗಣಿಸಿ ಹೇಳುವದು ಅಸಾಧ್ಯಮಾತು. ಶ್ರೀ ಜಗದ್ಗುರು ಗಂಗಾಧರ ಗಾಂಧಿ ಸ್ಮಾರಕ ನೇತ್ರ ಚಿಕಿತ್ಸಾ ತರಬೇತಿ ಕೇಂದ್ರಕ್ಕೆ ೧೦,೦೦೦ ರೂಪಾಯಿಗಳನ್ನು ಕೊಡಮಾಡಿದರು. ಹುಬ್ಬಳ್ಳಿಯ ಸಿಕ್ಕಲಿಗಾರರು ಹಿಂದೂ ಧರ್ಮಬಿಟ್ಟು ಮತಾಂತರ ಹೊಂದದಂತೆ ಅವರನ್ನು ಕಾಪಾಡಿದರು.

ಶಿವಯೋಗ ಮಂದಿರದಂತಹ ಉದಾತ್ತ ಸಂಸ್ಥೆಗೆ ಅಧ್ಯಕ್ಷರಾಗುವದಕ್ಕೂ ಮೇಲ್ತರಗತಿಯ ಯೋಗ್ಯತೆ ಬೇಕಲ್ಲವೆ ? ಈ ಸ್ಥಾನವನ್ನು ಪೂಜ್ಯ ಜಗದ್ಗುರುಗಳು ಬಹುಕಾಲದವರೆಗೆ ಅಲಂಕರಿಸಿದರು. ಮಂದಿರದ ಪುರೋಭಿವೃದ್ಧಿಗಾಗಿ ಸರ್ವವಿಧದಿಂದಲೂ ದುಡಿದರು.

ಅಲ್ಲದೆ ತಮ್ಮ ಮಠದಲ್ಲಿ ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಲದ ಸ್ಥಾಪನೆಯನ್ನು ಮಾಡಿ ಅದಕ್ಕೆ ಭದ್ರ ಬುನಾದಿಯನ್ನು ಹಾಕಿಕೊಟ್ಟರು, ಒಂದು ಶಾಶ್ವತವಾದ ದೊಡ್ಡ ನಿಧಿಯನ್ನು ಅದಕ್ಕೆ ಇಡದೇ ಗತ್ಯಂತರವಿರಲಿಲ್ಲ. ೧ ಲಕ್ಷ ೧೦ ಸಾವಿರ ರೂಪಾಯಿಗಳನ್ನು ಅದಕ್ಕಾಗಿ ಮೀಸಲುಧನವೆಂದು ತೆಗೆದಿರಿಸಿದರು, ಅದರ ಅಂಗವಾಗಿ ಪ್ರಾಕ್ತನ ಸಂಶೋಧನ ಕೇಂದ್ರವನ್ನೂ, ಅಧ್ಯಾತ್ಮ ಮಹಾವಿದ್ಯಾಲಯ

(College of Divinity) ವನ್ನೂ ಸ್ಥಾಪಿಸುವ ಆಕಾಂಕ್ಷೆ ಪೂಜ್ಯರಿಗೆ ಇದ್ದವು. ಆದರೆ ಕಾಲಪುರುಷ ಅದಕ್ಕೆ ಅಪ್ಪಣೆ ನೀಡಲಿಲ್ಲವೆಂದು ಕಾಣುತ್ತದೆ. ತಮ್ಮ ೬೦ ನೆಯ ವಯಸ್ಸಿನಲ್ಲಿ ದಿ. ೧೭–೨–೧೯೫೮ ರಂದು "ಶಿವಯೋಗ"ದ ದಿನವೇ ಲಿಂಗೈಕ್ಯರಾದರು ! ಒಟ್ಟಿನಲ್ಲಿ ಇವರು ತಮ್ಮ ಬಾಳಿನಲ್ಲಿ ಉದಾರದಾನಿಗಳೆಂದೂ. ವಿದ್ಯಾಪ್ರೇಮಿಗಳೆಂದೂ ಹೆಸರು ಗಳಿಸಿದರು.

### ಸಾವಿರ ಧನ್ಯವಾದಗಳು !

ಪೂಜ್ಯ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು ತಮ್ಮ ಅಂತ್ಯಕಾಲದಲ್ಲಿ ತಮ್ಮ ಜೀವನಾವಧಿಯಲ್ಲೇ ಅತ್ಯಂತ ಶ್ರೇಷ್ಠವಾದ. ಇಡೀ ನಾಡಿಗೇ ಅಭಿಮಾನಾಸ್ಪದವಾದ ಮಹತ್ ಕಾರ್ಯವೊಂದನ್ನು ಮಾಡಿಬಿಟ್ಟರು. ಅದೆಂದರೆ. ಬೀಜದಲ್ಲೇ ಫಲದ ಬೆಲೆಯನ್ನು ಕಂಡುಕೊಂಡಂತೆ, ತಮ್ಮ ಉತ್ತರಾಧಿಕಾರಿಗಳಾಗಿ ಇಲಕಲ್ಲದ ವಿಜಯ ಮಹಾಂತದೇವರನ್ನು ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರರೆಂದು ಆಯ್ಕೆ ಮಾಡಿದರು. ಇಂಥ ಸಮರ್ಥರಾದ ಘನಮಹಿಮರೊಬ್ಬರನ್ನು ಆಯ್ಕೆ ಮಾಡಿ, ಭವಿಷತ್ತನ್ನು ಯೋಜಿಸಿದ್ದಕ್ಕಾಗಿ ಸಕಲ ನಾಡಿನ ಭಾವುಕರೆಲ್ಲ ಅವರಿಗೆ ಸಾವಿರ ಧನ್ಯವಾದಗಳನ್ನು ಹೇಳಿದರೂ ಕಡಿಮೆಯೇ ! □

## ನೂತನ ಯುಗಾರಂಭ

ಕ್ರಿಸ್ತಾಬ್ಧ ೧೯೫೮ ಮೇ, ಒಂದು, ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರ ಮಠದ ಇತಿಹಾಸದಲ್ಲಿ ನವಯುಗಾರಂಭವಾಯಿತು !! ಅಂದೆ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರರಾಜಯೋಗೀಂದ್ರ ಮಹಾಸ್ವಾಮಿಗಳು ಅಲ್ಲಮಪ್ರಭು ಸಂಪ್ರದಾಯದ ಶೂನ್ಯ ಸಿಂಹಾಸನಾರೋಹಣವನ್ನು ಗೈದರು !!!

ಪರಮ ತಪಸ್ವಿಗಳಾದ ಚಿತ್ತರಗಿಯ ವಿಜಯಮಹಾಂತ ಶಿವಯೋಗಿಗಳ ಪೂರ್ವಾಶ್ರಮದ ಮನೆತನದಲ್ಲಿ ಮಹಾತಪಸ್ವಿಗಳಾದ ಹಾನಗಲ್ಲ ಕುಮಾರಸ್ವಾಮಿಗಳ ಆಶೀರ್ವಾದದಿಂದ ಜನಿಸಿದವರಲ್ಲವೆ ಇವರು ? ಯಾವ ಮೂಲದಿಂದ ಏನು ಸ್ಫುರಿಸಬೇಕೊ ಅದೇ ಪ್ರಕಟವಾಗಬೇಕಲ್ಲವೆ ? ಸೂರ್ಯನಿಂದ ಪ್ರಕಾಶವಲ್ಲದೆ ಕತ್ತಲೆಯೊಂದಾದರೂ ಹೊರಹೊಮ್ಮೀತೆ ?

## ದಿವ್ಯಜೀವನಯಾತ್ರೆ

ಇವರ ಪೂರ್ವಾಶ್ರಯದ ಹೆಸರು ಮಹಾಂತೇಶ. ಐದು ವರ್ಷದ ಬೆಂಕಿಯು ಚೆಂಡಾದ ಮಗು ಮಹಾಂತೇಶನನ್ನು ತಂದೆ ತಾಯಿಗಳು ಶಿವಯೋಗಮಂದಿರಕ್ಕೆ ಬಂದು, ಹಾನಗಲ್ಲ ಕುಮಾರಸ್ವಾಮಿಗಳ ಗದ್ದುಗೆಗೆ ಸಮರ್ಪಿಸಿ ಮರಳಿದರು. ಅಂದಿನಿಂದಲೆ ಮಗು ಮಹಾಂತನಾಗುವ ವರೆಗೆ, ಮಹಾಂತ ಗಂಗಾಧರನಾಗುವ ವರೆಗೆ ದೈವೀ ಜೀವನ ಯಾತ್ರೆ ಆರಂಭವಾಯಿತು. ಶಿವಯೋಗಮಂದಿರದಲ್ಲೊಂದು ಪುಟ್ಟ ನಂದಾದೀವಿಗೆ ಹೊತ್ತಿಕೊಂಡಿತು ! ತನ್ನ ಪ್ರಸನ್ನ ಪ್ರಶಾಂತ ಶೀತಲ ಹೊಂಗಿರಣಗಳನ್ನು ಎಲೆ-ಬಳ್ಳಿ-ಚಿಗುರು-ಮೊಗ್ಗು-ಮಿಡಿಗಳ ಮೇಲೆ ತೂರಹತ್ತಿತ್ತು !!

ಮಹಾಂತೇಶನ ಶಿವಯೋಗಮಂದಿರದ ಹದಿನಾರು ವರ್ಷಗಳ ಜೀವನಯಾತ್ರೆ ರಸದುಂಬಿದ ಎಳದೆಂಗಿನಂತೆ. ಉದಾತ್ತವೂ ಆಕರ್ಷಕವೂ ಆಗಿತ್ತು. ಆತ ಕೆಲಕಾಲ ದಲ್ಲೇ ಕನ್ನಡ-ಹಿಂದಿ-ಸಂಸ್ಕೃತಗಳಲ್ಲಿ ಪ್ರಾಜ್ಞನಾದ. ಮಂದಿರದ ನಕ್ಷತ್ರಗಳಲ್ಲಿ ಶುಕ್ರ-ತಾರೆಯಂತೆ ರಾರಾಜಿಸಿದ. ಅಧ್ಯಯನ-ಯೋಗಗಳೊಂದಿಗೆ ಬಹುವಿಧ ಚಟುವಟಿಕೆ ಗಳಲ್ಲಿಯೂ ಭಾಗವಹಿಸಿದ 'ಪಥಿಕ' ಕವನ ಸಂಗ್ರಹವನ್ನೂ ಅನೇಕ ನಾಮಾವಳಿಗಳನ್ನೂ ಜೀವನಚರಿತ್ರೆಗಳನ್ನೂ ಬರೆದು ಅಚ್ಚು ಹಾಕಿಸಿದ. ಈತನ ಕವಿತೆ-ಲೇಖನಗಳು ಶರಣ ಸಾಹಿತ್ಯ, ನವಸಂದೇಶ, ಅಮರವಾಣಿ, ಕರ್ಮವೀರ, ಜೀವನ, ಸದ್ಧರ್ಮದೀಪಿಕೆ. ಜಯ ಕರ್ನಾಟಕ ಮೊದಲಾದ ಉಚ್ಚ ಪತ್ರಿಕೆಗಳಲ್ಲಿ ಪ್ರಕಟಗೊಂಡವು. ಜಿಜ್ಞಾಸುಗಳನ್ನೂ ರಸಿಕರನ್ನೂ ಕೆರಳಿಸಿದವು. ಈತನ ವ್ಯಕ್ತಿಸಾಮರ್ಥ್ಯವನ್ನು ಮನದಂದ ಮಂದಿರದ ನಿಯೋಜಕರು ' ಸುಕುಮಾರ ' ಪತ್ರಿಕೆಯ ಸಂಪಾದಕರನ್ನಾಗಿ ಮಾಡಿಬಿಟ್ಟರು. ಅಲ್ಪಾ ವಧಿಯ ಈ ಯಶೋಯಾತ್ರೆ ಮುಂದಿನ ಧರ್ಮಜೀವನದ ವಿಶ್ವಯಾತ್ರೆಗೆ ಮೂಲ ಬೀಜವಾಗಿತ್ತು ! ಮಾತನರಿಯದ ಮಂತ್ರವಾಗಿತ್ತು.

## ಮಹಾವಾಕ್ಯ

ಇವರ 'ಪಥಿಕ' ಕವನ ಸಂಗ್ರಹಕ್ಕೆ ಮುನ್ನುಡಿ ಬರೆಯುತ್ತ ಲಿಪಿಸಿದ ಶ್ರೀ ನಿಡು ಮಾಮಿಡಿ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರ ಈ ಮಹಾ ವಾಕ್ಯ ಬಾಲಕ ಮಹಾಂತೇಶನ ಜೀವನಕ್ಕೆ ಹಿಡಿದ ಕೈಗನ್ನಡಿಯಾಗಿದೆ—

"ಕವಿ ತನ್ನ ಸಾಧನೆಯನ್ನು ಮನಮುಟ್ಟಿ ಮಾಡಿದ್ದಾನೆ. ಶಿವಯೋಗ ಮಂದಿರ ದಲ್ಲಿ ಓದುವಾಗ ಕಾಲವನ್ನು ವೃಥಾ ಕಳೆದಿಲ್ಲ. ಅಲ್ಲಿಗೆ ತಾನು ಬಂದ ಧ್ಯೇಯವೇನೆಂ-ಬುದನ್ನು ಚನ್ನಾಗಿ ಅರಿತು, ತನ್ನ ಸಾಧನೆಯಲ್ಲಿ ನುರಿತಿದ್ದಾನೆ. ತನ್ನ ಬುದ್ಧಿಯನ್ನು ಬಿತ್ತಿ ರಿಸಿದ್ದಾನೆ. ತನ್ನ ಬಾಳನ್ನು ಎತ್ತರಿಸಿದ್ದಾನೆ— ಶಿವಯೋಗ ಮಂದಿರದ ಸಾಧಕವೃಂದ ಕ್ಕೆಲ್ಲ ಶ್ರೀಮಹಾಂತ ದೇವರು ಒಬ್ಬ ಮಹಾ ಆದರ್ಶ ಸಾಧಕ. ಸರ್ವರಿಗೂ ಸಾಧ್ಯ ವಾಗದ ಸಾಹಿತ್ಯಾಭಿರುಚಿಯನ್ನು ಸುಲಭವಾಗಿ ಬೆಳೆಸಿಕೊಂಡಿದ್ದಾರೆ. ನೂತನ ಮಾನ ವೀಯತೆಯ ಉನ್ನತಮಟ್ಟವನ್ನು ಮನವರಿಕೆ ಮಾಡಿಕೊಂಡಿದ್ದಾರೆ......"

ಇವರೇ ಮತ್ತೆ ಹೇಳಿದ್ದಾರೆ ...

"...ಶ್ರೀಮಹಾಂತದೇವರು ಮಹಾಕವಿಯಾಗುವ ಮಹಾಂತ ಕೀರ್ತಿ ಕಾಯ್ದಿದೆ. ಅವರ ಪ್ರಾಣವಾಯು ಅದೇ ಸಂದೇಶವನ್ನು ಹೊತ್ತುತಂದು ಉಸುರುತಿದೆ."

## ಕಾಶಿಯಲ್ಲಿ ಎಂಟು ವರ್ಷ

ಹಿಂದು ವಿಶ್ವವಿದ್ಯಾಲಯದ ವಿಖ್ಯಾತ ಪ್ರಾಚಾರ್ಯರಾದ ಪಂ. ಲಕ್ಷ್ಮಿನಾಥ ಝಾ. ಪಂ. ರಾಮಚಂದ್ರ ದೀಕ್ಷಿತ, ಕವಿತಾ ಚಕ್ರವರ್ತಿ, ಮಹಾದೇವ ಪಾಂಡೆಯ ಮೊದಲಾದ ವಿದ್ವನ್ಮಣಿಗಳ ನೇರ ಸಂಪರ್ಕದಲ್ಲಿ ಮಹಾಂತೇಶ ದೇವರು ತಮ್ಮ ಉಚ್ಚ ವ್ಯಾಸಂಗವನ್ನು ಕಾಶಿಯಲ್ಲಿ ಮುಂದುವರಿಸಿದರು.ಅವರ ಪ್ರತಿಭೆಗೆ ಮೆಚ್ಚಿ ವಿಶ್ವವಿದ್ಯಾಲಯವು ಶಿಷ್ಯವೇತನ ನೀಡಿತು. ಕೆಲಕಾಲದಲ್ಲೇ ಅವರು ಕಲ್ಕತ್ತಾ ವಿಶ್ವವಿದ್ಯಾಲಯದ 'ಕಾವ್ಯತೀರ್ಥ'. ಢಾಕಾ ವಿಶ್ವವಿದ್ಯಾಲಯದ 'ಸಾಹಿತ್ಯ ರತ್ನ' ಹಾಗೂ ಕಾಶಿ ಹಿಂದೂ ವಿಶ್ವವಿದ್ಯಾಲಯದ "ವೇದಾಂತಾಚಾರ್ಯ" ಪರೀಕ್ಷೆಗಳಲ್ಲಿ ವಿಜಯದ ಜಯಭೇರಿ ಹೊಡೆದರು. ಅಲ್ಲದೆ ಅಲಹಾಬಾದ ವಿಶ್ವವಿದ್ಯಾಲಯದಲ್ಲಿ ಆಂಗ್ಲ ಶಿಕ್ಷಣವನ್ನು ಸಂಪಾದಿಸಿದರು. ಬನಾರಸ ವಿಶ್ವವಿದ್ಯಾಲಯದ ಇಂಟರದ ವರೆಗೆ ಓದಿದರು. ಹೀಗಾಗಿ ಅವರಿಗೆ ಕನ್ನಡ–ಹಿಂದಿ–ಸಂಸ್ಕೃತ–ಇಂಗ್ಲಿಷ ಭಾಷೆಗಳಲ್ಲಿ ಪ್ರೌಢಿಮೆ ತಾನೇತಾನಾಗಿ ಬಂದಿತು. ಪೌರ್ವಾತ್ಯ–ಪಾಶ್ಚಾತ್ಯ ಕಾವ್ಯ–ಸಾಹಿತ್ಯ–ತತ್ವಜ್ಞಾನ–ವಿಚಾರ–ಪ್ರಣಾಲಿಕೆ–ಆಚಾರ ವೈವಿಧ್ಯ–ಸಾಮಾಜಿಕ ಸ್ಥಿತ್ಯಂತರಗಳ ಸೂಕ್ಷ್ಮ ಅನುಭವ ದೊರೆಯಿತು. ಈ ಪ್ರಚಂಡ ಜ್ಞಾನಸಾಮಗ್ರಿ ಅವರ ಮುಂದಿನ ಬಾಳಿಗೆ ದೈವವೇ ಸಿದ್ಧಪಡಿಸಿದ ಬುತ್ತಿಯೆಂಬುದು ಅವರಿಗೇ ತಿಳಿದಿರಲಿಲ್ಲ.

## Yogiraja of Karnatak

ಮಹಾಂತದೇವರ ವ್ಯಾಸಂಗ ಮಾರ್ಗದಲ್ಲಿ ಅವರ ಸಾಹಿತ್ಯ ಕೃಷಿ ನಿಲ್ಲಲಿಲ್ಲ. ಸಚೇತನವಾಗಿ ಪಲ್ಲವಿಸಿತು. ಕನ್ನಡ. ಸಂಸ್ಕೃತ. ಹಿಂದಿ, ಇಂಗ್ಲಿಷ ಭಾಷೆಗಳಲ್ಲಿ ಗ್ರಂಥಗಳನ್ನೂ ಲೇಖನಗಳನ್ನೂ ಬರೆದರು. ಲೇಖನ ಹಾಗೂ ಕವನಗಳು ಭಾರತದ ವಿವಿಧ ಪತ್ರಿಕೆಗಳಲ್ಲಿ ಪ್ರಕಟಗೊಂಡವು. ಇವರು ತಮ್ಮ ಆರಾಧ್ಯದೇವರಾಗಿರುವ ಹಾನಗಲ್ಲ ಕುಮಾರಸ್ವಾಮಿಗಳ ಮೇಲೆ ಇಂಗ್ಲಿಷಿನಲ್ಲಿ Yogiraja of Karnatak ಎಂಬ ಪುಟ್ಟ ಹೊತ್ತಿಗೆಯನ್ನು ಬರೆದರು. ಅದು ಕಾಶಿಯ ಎಲ್ಲ ಪಂಡಿತ ಪ್ರಾಚಾರ್ಯರ ವರ್ಗದಲ್ಲಿ ಹಾಗೂ ಕನ್ನಡ ನಾಡಿನ ಜಿಜ್ಞಾಸುಗಳ ಕೂಟದಲ್ಲಿ ತುಂಬ ಪ್ರಚಾರವಾಯಿತು. ಇವರ "ಪೂಮಾಲೆ" ಕಾವ್ಯಸಂಕಲನ ಇದೇ ಸಮಯದಲ್ಲಿ ಸೃಜನವಾಯಿತು. ಅದರಲ್ಲಿ 'ಪಥಿಕ'ಕ್ಕಿಂತಲೂ ಭಾವದಲ್ಲಿ ಅನುಭವದಲ್ಲಿ ಬಿಗುವಿನಲ್ಲಿ ಒಂದು ಹೆಜ್ಜೆ ಪ್ರಗತಿಯನ್ನು ಗುರುತಿಸಬಹುದು. ಇದರಲ್ಲಿಯ ಕವನಗಳು ಭಾವಗೀತೆಯ ರಸಾರ್ದ್ರತೆಯಿಂದ ಮೈದುಂಬಿವೆ. ಸಾರ್ಥಕ ಅನುಭವ ಸಾಹಿತ್ಯವನ್ನು ಒದಗಿಸಿವೆ. 'ಪೂದೋಟ...'ಎಂಬ ಕಥಾ ಸಂಗ್ರಹವೂ ಇದೇ ಸಮಯದಲ್ಲಿ ವಿರಚಿತವಾಯಿತು.

ಇವರು ೧೯೫೫ ರಿಂದಲೇ ಚಿತ್ರಗಿ ಇಲಕಲ್ಲ ಪೀಠದ ಅಧಿಕೃತ ಅಧಿಕಾರಿಗಳಾಗಿದ್ದರು. ವಿಜಯ ಮಹಾಂತದೇವರೆಂದು ನಾಮಕರಣವಾಯ್ತು. ಕಾಶಿಯಲ್ಲಿಯ ಇವರ ಎಂಟು ವರ್ಷಗಳ ವ್ಯಾಸಂಗಕ್ಕೆ ಚಿತ್ರಗಿ ಪೀಠದಿಂದ ದುಡ್ಡಿನ ಸಹಾಯ ದೊರೆಯಿತು. ಹಿಂದು ವಿಶ್ವವಿದ್ಯಾಲಯ ಇವರಿಗೆ ಶಿಷ್ಯವೇತನವನ್ನೂ ಕೊಡಮಾಡಿತ್ತು. ಕಾಶಿಯಲ್ಲಿ ಎಂದಿಗೂ ಸಾಮೂಹಿಕ ದಾಸೋಹದಲ್ಲಿ ಪ್ರಸಾದ ಸೇವಿಸಲಿಲ್ಲ. ಎಂಟು ವರ್ಷ ಕಾಲ ಸ್ವಯಂಪಾಕದಿಂದಲೆ ಕಳೆದರು. ತಮ್ಮ ಶಿಷ್ಯವೇತನದ ಹಣದಿಂದ ಮತ್ತೆ ಅನೇಕ ಬಡವಿದ್ಯಾರ್ಥಿಗಳಿಗೆ ಅನ್ನ–ಆಶ್ರಯ–ಗ್ರಂಥಗಳನ್ನು ಒದಗಿಸಿದರು.

## ತಾರು ಬಂದಿತು !

ಜೀವನವೆಂದರೆ ಅನೇಕ ರಹಸ್ಯಗಳ ಕೂಟವಲ್ಲವೆ? ಕಾಲಗರ್ಭದಲ್ಲಿ ಯಾವ ಕಾಲಕ್ಕೆ ಏನು ಘಟಿಸುತ್ತದೆಯೊ ಆ ಕಾಲಪುರುಷನಿಗೇ ಗೊತ್ತು ! ವಿಜಯ ಮಹಾಂತ ದೇವರು ಚಿತ್ರಗಿ ಪೀಠದ ಮರಿದೇವರಾಗಿ ಕಾಶಿಯಲ್ಲಿ ಅಧ್ಯಯನ ಪೂರೈಸಿದರು, ಇತ್ತ ಹುಬ್ಬಳ್ಳಿಯ ಜಗದ್ಗುರು ಮೂರುಸಾವಿರಮಠದ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು ಅನೇಕ ವರ್ಷಗಳವರೆಗೆ ಅತ್ಯಂತ ಗುಪ್ತವಾಗಿ ಆದರೆ ಅಷ್ಟೇ ದಕ್ಷತೆಯಿಂದ ಮಹಾಂತದೇವರ ಚಟುವಟಿಕೆಗಳ ಮೇಲೆ ಕಣ್ಣಿರಿಸಿದ್ದರು. ಕಾಶಿಗೆ ಕೆಲವು ನಿಕಟವರ್ತಿಗಳನ್ನೂ ಗುಪ್ತವಾಗಿ ಕಳಿಸಿ, ಅವರಿಂದ ವಿಜಯ ಮಹಾಂತ ದೇವರ ದೈನಂದಿನ ಜೀವನದ ಪಾವಿತ್ರ್ಯವನ್ನು ಪರೀಕ್ಷಿಸಿದ್ದರು ! ಮಹಾಂತದೇವರ ಜ್ಞಾನಸಂಪತ್ತು, ಸಾಹಿತ್ಯಸಮೃದ್ಧಿ, ಕಾರ್ಯಕುಶಲತೆ, ಅಮಿತೋತ್ಸಾಹಗಳು ಪೂಜ್ಯ ಗುರುಸಿದ್ಧ ರಾಜಯೋಗೀಂದ್ರ ಜಗದ್ಗುರುಗಳ ಮೇಲೆ ಆಳವಾದ ಪ್ರಭಾವಮುದ್ರೆಯನ್ನು ಬೀರಿದ್ದವು. ಇಡೀ ಕರ್ನಾಟಕದ ತಳಬುಡ ಸೋಸಿ ನೋಡಿ ಕೊನೆಗೆ ವಿಜಯ ಮಹಾಂತದೇವರೆ ಯೋಗ್ಯ ವಟುಗಳೆಂಬ ನಿರ್ಣಯಕ್ಕೆ ಬಂದರು. ಆಗಲೇ ಅವರಿಗೆ ವೃದ್ಧಾಪ್ಯ, ದೇಹಾಲಸ್ಯ ತಮ್ಮ ಅಂತ್ಯಯಾತ್ರೆಯ ಪೂರ್ವ ಸೂಚನೆ ಅವರಿಗೆ ತಿಳಿಯಿತೆಂದು ಕಾಣುತ್ತದೆ. ಇನ್ನು ತಮಗೆ ಸಮರ್ಥನಾದ ಉತ್ತರಾಧಿಕಾರಿಯನ್ನು ಆಯ್ಕೆ ಮಾಡುವದು ಅವರ ಮುಖ್ಯ ಕರ್ತವ್ಯವೆ ಆಯಿತು. ತಾವಿದ್ದಾಗಲೆ ಈ ಕಾರ್ಯ ಕೈಗೂಡತಕ್ಕದ್ದೆಂದು ನಿರ್ಣಯಿಸಿ ನೇರವಾಗಿ ಕಾಶಿಗೆ ತಾರು ಮಾಡಿದರು.

ಅತ್ತ ವಿಜಯ ಮಹಾಂತದೇವರು ತಾರು, ಸ್ವೀಕರಿಸಿ, ಭಗವಂತನ ಲೀಲಾ ವೈಭವದ ರಹಸ್ಯವನ್ನು ನೆನೆಯುತ್ತ ಹುಬ್ಬಳ್ಳಿಗೆ ಪ್ರಯಾಣ ಗೈದರು. ಜಗದ್ಗುರುಗಳ ಅಭೀಪ್ಸೆಯನ್ನು ಅರಿತು ದಿಙ್ಮೂಢರಾದರು. ತಮ್ಮ ಬಾಳಿನ ಆಗುಹೋಗುಗಳ ನಿರ್ಣಯವನ್ನು ಪ್ರಾಮಾಣಿಕವಾಗಿ ವಿಜಯ ಮಹಾಂತ ಶಿವಯೋಗಿಯ ಪದತಲದ ಮೇಲೆಯೆ ಅರ್ಪಿಸಿದರು. ಶಿವಯೋಗಿ ಎಂದಾದರೂ ಮಹಾ ಕಾರ್ಯಕ್ಕೆ ಬೇಡ ವೆಂದಾನೆಯೆ ? ತನ್ನ ಪೀಠದ ಶ್ರೇಷ್ಠ ಮೂರ್ತಿಯನ್ನು ನಗುನಗುತ್ತಲೆ ದಾನ ನೀಡಿದ !

## ಕಣ್ಣೀರ ಕಾವಲಿ

ಚಿತ್ತರಗಿಯ ವಿಜಯ ಮಹಾಂತದೇವರು ಚಿತ್ತರಗಿ ಪೀಠದ ಎಲ್ಲ ೫೬ ಮಠಗಳ ಭಕ್ತರೆಲ್ಲರ ಪರಮಪ್ರೀತಿಗೆ ಪಾತ್ರರಾಗಿದ್ದರು. ನಮ್ಮ ಮಠಕ್ಕೆ ಯೋಗ್ಯಪಟ್ಟ ದೊರೆತನೆಂದು ಮಹಾಸಂತಸದಲ್ಲಿದ್ದರು. ಆದರೆ ಹುಬ್ಬಳ್ಳಿಯ ಜಗದ್ಗುರುಗಳು ತಮ್ಮ ಪಟ್ಟವನ್ನು ಮುತ್ಸದ್ದಿತನದ ಲೀಲಾಜಾಲದಿಂದ ಕಸಿದುಕೊಂಡದ್ದನ್ನು ಕೇಳಿ ಸಂಕಟದಿಂದ ಒರಲಿದರು. ಭೋ ಎಂದು ಅತ್ತರು. ಕಣ್ಣೀರು ಕೋಡಿಯೊಡೆದು ಸುರಿಸಿದರು. ಕೆಲವರು ಸಿಡಿಮಿಡಿಗೊಂಡು ಸಿಟ್ಟಾದರು. ಆದರೂ ಪರಮಾತ್ಮನ ಇಚ್ಛೆಗೆ ವಿರುದ್ಧ ಹೋಗುವದಾದರೂ ಹೇಗೆ ?

ಇತ್ತ ಹುಬ್ಬಳ್ಳಿ ಜಗದ್ಗುರು ಪೀಠಕ್ಕೆ ವಿಜಯ ಮಹಾಂತ ದೇವರನ್ನು ಆಯ್ಕೆ ಮಾಡಿದ ಬಗ್ಗೆ "ಸಂಯುಕ್ತ ಕರ್ನಾಟಕದ" ಪತ್ರಿಕೆ ದಿ. ೧–೫–೧೯೫೮ ರ ಸಂಚಿಕೆಯಲ್ಲಿ ಈ ರೀತಿ ಅಭಿಪ್ರಾಯ ವ್ಯಕ್ತಮಾಡಿತು—

— "ಇಂಥ ಯೋಗ್ಯತಾ ಸಂಪನ್ನರು ಮಠದ ಪೀಠವನ್ನು ಅಲಂಕರಿಸುವಂತೆ. ಲಿಂಗೈಕ್ಯ ಜಗದ್ಗುರು ಶ್ರೀ ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳು ಇವರನ್ನು ಭಾವೀ ಜಗದ್ಗುರುಗಳೆಂದು ಯೋಜನೆ ಮಾಡಿ, ಭಕ್ತರ ಮೇಲೆ ಉಪಕಾರ ಮಾಡಿರುವರು. ಲಿಂಗೈಕ್ಯ ಗುರುಗಳ ಪ್ರೀತಿ–ವಿಶ್ವಾಸಗಳನ್ನು ಗಳಿಸಿದಂತೆಯೇ ಭಕ್ತರ ಪ್ರೀತಿ–ವಿಶ್ವಾಸಗಳನ್ನು ಶ್ರೀಗಳು ಗಳಿಸಿರುವರು."

## ಮಹಾ ಪಟ್ಟಾಭಿಷೇಕ

ಪೂಜ್ಯ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರು ತಮ್ಮ ಉತ್ತರಾಧಿಕಾರಿಗಳಾದ ವಿಜಯ ಮಹಾಂತದೇವರಿಗೆ— "ನಿಜವಾಗಿಯೂ ಮಹಾ ಜಗದ್ಗುರುವಾಗು. ಲೋಕವನ್ನು ಬಾಳಿಸು" ಎಂದು ಅಣತಿ ನೀಡಿ ಲಿಂಗೈಕ್ಯರಾದರು. ತಮ್ಮ ಗುರುಗಳ ಅಪ್ಪಣೆಯನ್ನು ಇವರು ತಮ್ಮ ರೋಮ ರೋಮದಲ್ಲಿ ತುಂಬಿಕೊಂಡರು.

ದಿನಾಂಕ ೧–೫–೧೯೫೮ ! ಪೂಜ್ಯ ವಿಜಯ ಮಹಾಂತದೇವರು ಹುಬ್ಬಳ್ಳಿಯ ಶ್ರೀ ಮೂರುಸಾವಿರಮಠದ ಮಹೋನ್ನತ ಮಠವನ್ನು ಆರೋಹಣ ಮಾಡಿದರು !! ಅಂದಿನಿಂದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳೆಂದು ನಾಮಾಂಕಿತರಾದರು !!! ತಮ್ಮ ಚಿರಂತನ ಬಾಳಿನ ಧರ್ಮ ಕಾಳಗಕ್ಕೆ ಆತ್ಮಖಡ್ಗದಿಂದ ಸನ್ನದ್ಧರಾಗಿ ನಿಂತರು. □

# ಬೆಳಗುತಿದೆ ಪರಂಜ್ಯೋತಿ

ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು—'ಒಂದು ವ್ಯಕ್ತಿಯಲ್ಲ; ಶಕ್ತಿಯಾಗಿದ್ದಾರೆ' ಎಂಬುದನ್ನು ನಾಡು ಮನಗಂಡಿದೆ. ಜಗದ್ಗುರು ಪೀಠದಿಂದ ಅವರು ದೊಡ್ಡವರಾಗಿಲ್ಲ. ಕರ್ತೃತ್ವಶಕ್ತಿ ಪಡೆದುಕೊಂಡು ಜಗದ್ಗುರು ಪೀಠಕ್ಕೆ ಕಳೆತಂದಿದ್ದಾರೆ. ಬೃಹತ್ ಪೀಠದ ಬೆಳಕನ್ನು ಬೆಳಗಿಸಿದ್ದಾರೆ. ಇದಕ್ಕೆ ವ್ಯಕ್ತಿ ಶಕ್ತಿ ( Man power ) ಎನ್ನುವದು. ಇದಿಲ್ಲವಾದರೆ ಮಠಗಳು ಮಸಣಗಳಾಗುತ್ತವೆ. ಆಶ್ರಮಗಳು ಆಮಿಷಗಳಾಗುತ್ತವೆ, ದೇವಾಲಯಗಳು ಪ್ರೇತಾಲಯಗಳಾತ್ತವೆ. ಪೂಜ್ಯ ಜಗದ್ಗುರುಗಳ ವ್ಯಕ್ತಿತ್ವದ ಬಹುಮುಖಗಳನ್ನು ಅಳೆದು ಹೇಳುವದು ಸಾಧ್ಯವಿಲ್ಲ. ಕಾರಣ ಮಾನವ ಮಾನದಂಡದಿಂದ ಅತೀತರಾದ ಮಹಾಪ್ರಾಜ್ಞರು ಅವರಾಗಿದ್ದಾರೆ. ಅನೇಕ ಮಹಾಶಕ್ತಿಗಳ ಸಂಚಯ ಅವರಾಗಿದ್ದಾರೆ. ಅವರೊಬ್ಬರು ಜೀವಂತವಾದ ಮಹಾಸಂಸ್ಥೆ. ಬಿಡುವಿಲ್ಲದ ಕಾರಖಾನೆ. ತೆರಪಿಲ್ಲದ ಪಾವನಗಂಗಾ ಪ್ರವಾಹ. ಅವರ ವ್ಯಕ್ತಿತ್ವದ ಅನಂತತೆಯಲ್ಲಿ ಸಮಗ್ರತೆಯಿದೆ. ಸಮಗ್ರತೆಯಲ್ಲಿ ಸಮತೂಕವಿದೆ. ಇದುವೆ ದಿವ್ಯಜೀವನದ ಸೂತ್ರವಲ್ಲವೆ ?

## ಹನ್ನೆರಡು ವರ್ಷಗಳು

ಶಕೆ ೧೯೭೦ ಕ್ಕೆ ಮಹಾಸ್ವಾಮಿಗಳ ಒಂದು ಪಟ್ಟ— ಎಂದರೆ ಹನ್ನೆರಡು ವರ್ಷಗಳ ಕಾಲಾವಧಿ ಮುಗಿಯಿತು. ಇನ್ನು ದ್ವಿತೀಯ ಘಟ್ಟದಲ್ಲಿ ಕಾಲಿರಿಸಲಿದ್ದಾರೆ. ಈ ಹನ್ನೆರಡು ವರ್ಷಗಳಲ್ಲಿ ಅವರು ಬಾಳಿದ್ದೇನು ? ಬೆಳಗಿದ್ದೇನು ? ಲೋಕಕ್ಕೆ ಆತ್ಮ-ಸಾಕ್ಷಿಯಾಗಿ ತೋರಿದ್ದೇನು ? ಅವರ ಕಾರ್ಯಕ್ಷಮತೆಯ ವಿವಿಧ ನೋಟಗಳಾವವು ? ಅವರ ಆಳಿಕೆಯಲ್ಲಿ ಜಗದ್ಗುರು ಪೀಠ ಪ್ರಾಮಾಣಿಕವಾಗಿ ಮುನ್ನಡೆದಿದೆಯೆ ?—ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳಲು ಈ ಲೇಖನ ಹವಣಿಸಿದೆ.

## ಬಹುವಿಧ ವ್ಯಕ್ತಿತ್ವ

ಪೂಜ್ಯ ಜಗದ್ಗುರುಗಳು ವ್ಯಕ್ತಿಮಾತ್ರವಾದರೂ ಅನೇಕ ಶಕ್ತಿಗಳ ಸಂಚಯವಾಗಿದ್ದಾರೆ. ಅವರ ಈ ಬಹುವಿಧ ಸಾಮರ್ಥ್ಯದಲ್ಲಿ ಒಂದು ಪ್ರಧಾನ ಲಕ್ಷಣವನ್ನು ಎಲ್ಲರೂ ಗಮನಿಸಬಹುದು. ಅದೆಂದರೆ ಅವರ ಕಾರ್ಯ ಕೌಶಲದ ಮಿಂಚಿನವೇಗ. ಯಾವುದೇ ಯೋಜನೆ, ಯಾವುದೇ ವಿಚಾರ ಅವರ ಅಂತರಂಗದಲ್ಲಿ ಪರಿಸ್ಫೂರ್ತಿಗೊಳ್ಳುವದೊಂದೇ ತಡ, ತಕ್ಷಣವೇ ಕಾರ್ಯರಂಗಕ್ಕೆ ಇಳಿದುಬಿಡುತ್ತವೆ. ಆಮೆಯ

ಮುಂದಗಮನ ಅವರಿಗೆ ಒಗ್ಗದು. ಅವರ ಕ್ರಿಯಾ ಸಾಮರ್ಥ್ಯ ಒಂದು ಪ್ರಬಲವಾದ ಅಸ್ತ್ರವಾಗಿದೆ. ಲೋಕದ ಸಿಹಿ–ಕಹಿಗಳನ್ನು ನಗುನಗುತ್ತ ಎದುರಿಸಿ, ಪ್ರತಿರೋಧ ಶಕ್ತಿಗಳನ್ನು ತಮ್ಮ ದೈವೀ ಶಕ್ತಿಯಿಂದ ನಿಷ್ಫಲಗೊಳಿಸಿ, ಆಕಾಶ ನೌಕೆಯ ತೀಕ್ಷ್ಣವೇಗ ದಿಂದ ಮುನ್ನಗ್ಗಬಲ್ಲ ವೈಜ್ಞಾನಿಕ ಲೋಕದ ರಸಋಷಿ ಅವರಾಗಿದ್ದಾರೆ. ಒಳಗೊಂದು ಹೊರಗೊಂದು ಎಂದಿಗೂ ಅವರಿಗಿಲ್ಲ. ಅವರೊಂದು ಬಯಲು ಬಂಗಾರ. ಅರಳಿದ ವಜ್ರಪುಷ್ಪ. ಬೆಳಗುವ ರತ್ನದೀಪ.

## ಜೋಗದ ಜಲಪಾತ

ಹಗಲೆನ್ನದೆ ರಾತ್ರಿಯೆನ್ನದೆ ಓತಪ್ರೋತವಾಗಿ ಅವರು ಧಾರ್ಮಿಕ–ಸಾಮಾಜಿಕ–ಸಾಂಸ್ಕೃತಿಕ–ಸಾಹಿತ್ಯಕ–ವೈಜ್ಞಾನಿಕ ರಂಗಗಳಲ್ಲಿ ನಿರ್ಮಲ ಸೇವೆಯನ್ನು ನೀಡುತ್ತಿದ್ದಾರೆ. ಜೋಗದ ಜಲಪಾತವಾಗಿದ್ದಾರೆ. ಏಕಕಾಲಕ್ಕೆ ನಾಲ್ಕೆಂಟು ಕಡಗೆ ಗಮನವಿರಿಸಿ, ಹತ್ತಾರು ಕಾಯಕಗಳಲ್ಲಿ ತತ್ಪರರಾಗಬಲ್ಲ ವಿಚಿತ್ರ ವ್ಯಕ್ತಿಕೌಶಲ ಅವರಿಗಿದೆ. ಇದು ಅವರಿಗೆ ದೇವರಿತ್ತ ವರದಾನ. ಎಂದಿಗೂ ಯಾವ ಭಕ್ತರೂ ಜಗದ್ಗುರುಗಳು ಬೇಸರಿಕೆಯಿಂದ ಬಳಲಿದ್ದನ್ನು, ಆಕಳಿಸಿದ್ದನ್ನು, ಮುಖ ಸಪ್ಪಗೆ ಮಾಡಿದ್ದನ್ನು ಇಲ್ಲವೆ ಕ್ರೋಧದಿಂದ ಕುಪಿತರಾದುದನ್ನು ನೋಡಿಲ್ಲ. ಚಿರಂತರವೂ ಜ್ಯೋತಿರ್ಮಯವಾದ ಅಮೃತ ಚಂದ್ರ ನಂತೆ ಅವರ ಪ್ರಸನ್ನಮುಖ ಎಲ್ಲರನ್ನೂ ಅಪ್ಪಿಕೊಂಡಿದೆ. ಎಂದಿಗೂ ಅವರು ಮರೆತುಕೂಡ ಜಾತಿಭೇದವನ್ನು ತೋರಿಲ್ಲ, ಪರಧರ್ಮದವರನ್ನು ನಿಂದಿಸಿಲ್ಲ. ಒಂದರ್ಥದಲ್ಲಿ ಅವರು ತಮ್ಮ ಜ್ಞಾನಸೌಧದ ಎಲ್ಲ ಬಾಗಿಲುಗಳನ್ನೂ ತೆರೆದಿದ್ದಾರೆ. ಸರ್ವಧರ್ಮಗಳ ಸರ್ವ ದೇಶಕಾಲಗಳ, ಸಮಸ್ತ ಮಾನವರ ವಿಚಾರ ಶ್ರೀಮಂತಿಕೆಯನ್ನು ಸ್ವಾಗತಿಸಿದ್ದಾರೆ. ತಮ್ಮದನ್ನಾಗಿ ಮಾಡಿಕೊಂಡಿದ್ದಾರೆ. ಹೀಗಾಗಿ ಅವರು ಅನೇಕರಂತೆ ಒಂದು ಬಾವಿ ಯಲ್ಲಿ ಮಾತ್ರ ಈಜಿದ ಮಂಡೂಕವಾಗದೆ ಸಾಗರದ ತೆರೆಗಳೊಂದಿಗೆ ಆಡಿದ ಹಂಸ ಪಕ್ಷಿಯಾಗಿದ್ದಾರೆ.

## ಕರ್ಮಯೋಗ

ಜಗದ್ಗುರುಗಳ ಜೀವನದಲ್ಲಿ ಕರ್ಮಯೋಗವು ಪುಸ್ತಕದಲ್ಲಿ ಮಾತ್ರ ಉಳಿದು ಕೊಂಡ ತತ್ತ್ವವಾಗಿಲ್ಲ. ಅವರ ರಕ್ತದ ಅರ್ಥವೆ ಕರ್ಮಯೋಗವಾಗಿದೆ. ಜ್ಞಾನ ಸಿಂಧುವಿನ ಕ್ರಿಯಾಪ್ರಪಾತವಾಗಿದೆ. ಹನ್ನೆರಡು ವರ್ಷಗಳ ಹಿಂದೆ ಜಗದ್ಗುರು ಮೂರುಸಾವಿರಮಠವನ್ನು ನೋಡಿದವರು ಇಂದು ಹೊಸದಾಗಿ ನೋಡಿದರೆ ಬೆಕ್ಕಸ-ಬೆರಗಾಗುವಂತಿದೆ. ೧೦–೧೫ ಲಕ್ಷ ರೂಪಾಯಿಗಳ ಪ್ರಚಂಡ ಸೌಧಗಳು ಅಲ್ಲಿ ಕೂಗುತ್ತ ಮೇಲೆದ್ದಿವೆ. ಆತ್ಮದ ಭವ್ಯತೆಗೆ ಚಾಕ್ಷುಷ ದರ್ಶನೀಯತೆಯನ್ನು ಒದಗಿಸಿವೆ. ಈ ಎಲ್ಲ ಮಹಾಮಂದಿರಗಳು ಅಲಂಕಾರಕ್ಕಾಗಿ ಮಾತ್ರ ಮೇಲೆದ್ದ ನಿರುಪಯುಕ್ತ ಆಲಯಗಳಲ್ಲ. ಶಿಕ್ಷಣ–ಸಂಸ್ಕೃತಿ–ಧರ್ಮ–ಜ್ಞಾನ–ಅನುಭವಗಳ ಪ್ರಸಾರಕ್ಕೆ ಕೇಂದ್ರ

ಪ್ರಾಯವಾಗಿವೆ. ಇವುಗಳಲ್ಲಿ ವಿದ್ಯಾರ್ಥಿನಿಲಯ, ಪ್ರಾರ್ಥನಾಮಂದಿರ, ಪ್ರಸಾದಮಂದಿರ, ಕಲ್ಯಾಣಮಂಟಪ, ಅನುಭವ ಮಂಟಪ, ಸಂಸ್ಕೃತ ವಿದ್ಯಾಲಯ, ಗ್ರಂಥಾಲಯ. ಸಂಶೋಧನ ಸಂಸ್ಥೆ, ಪರಂಜ್ಯೋತಿ ಕಾರ್ಯಾಲಯ, ಮುದ್ರಣಾಲಯ, ಪ್ರಾಥಮಿಕ ಶಾಲೆಗಳು, ಬಾಲಿಕೆಯರ-ಬಾಲಕರ ಮಾಧ್ಯಮಿಕ ಶಾಲೆಗಳು, ಮಹಿಳಾ ಕಾಲೇಜ, ಜನರಲ್ ಹಾಸ್ಟೆಲ್, ಕುಮಾರೇಶ್ವರ ಶಿವಯೋಗಿ ಸಂಘ, ವಿದ್ಯಾವರ್ಧಕ ಸಂಘ, ವೈದಿಕ ಜ್ಯೋತಿಷ ಪಾಠಶಾಲೆ, ಗೋ–ಶಾಲೆ, ಅತಿಥಿಮಂದಿರ, ಅಂಚೆಮನೆ. ಮಠದ ಕೇಂದ್ರ ಕಚೇರಿ, ಸ್ವಾಮಿಗಳು ದರ್ಶನವನ್ನೀಯುವ ಚೇಂಬರ, ಮೀಟಿಂಗ ಹಾಲ್, ಸ್ವಾಮಿಗಳ ಪೂಜಾಮಂದಿರ–ಧ್ಯಾನಮಂದಿರ–ಅಧ್ಯಯನ ಮಂದಿರಗಳು, ಗ್ರಂಥಭಾಂಡಾರ, ತಾಳೋಲೆಗಳ ಸಂಗ್ರಹಾಲಯ. ಸ್ಟೋರ ಹೌಸ, ಜಗದ್ಗುರು ಧರ್ಮಪ್ರಸಾರಕ ಮಂಡಳ, ಜಗದ್ಗುರು ಗುರುಸಿದ್ಧೇಶ್ವರ ಪ್ರಕಾಶನ ಸಂಸ್ಥೆಗಳು ನೆಲೆಸಿವೆ. ಪ್ರತಿಯೊಂದು ಸಂಸ್ಥೆಯೂ ಜಗದ್ಗುರಗಳ ನೇರಮಾರ್ಗದರ್ಶನದಲ್ಲಿ ಕಾರ್ಯನಿರತವಾಗಿರುತ್ತದೆ. ಜಗದ್ಗುರುಗಳು ಈ ಎಲ್ಲ ಆಂತರಿಕ ಸಂಸ್ಥೆಗಳಲ್ಲದೆ ಕನ್ನಡನಾಡಿನ ಹೊರನಾಡಿನ ನೂರಾರು ಸಂಸ್ಥೆಗಳನ್ನು ಸಮರ್ಥರೀತಿಯಿಂದ ನೋಡಿಕೊಂಡು ಹೋಗುತ್ತಾರೆ. ಅವುಗಳಲ್ಲಿ ಘಟಪ್ರಭೆಯ ಆರೋಗ್ಯಧಾಮ ಹಾಗೂ ಶಿವಯೋಗಮಂದಿರಗಳನ್ನು ಹೆಸರಿಸಬಹುದು. ನಾಡಿನ ಅನೇಕ ಶಿಕ್ಷಣ ಸಂಸ್ಥೆಗಳೂ, ಕಾಲೇಜುಗಳೂ, ಧಾರ್ಮಿಕ ಸಂಸ್ಥೆಗಳೂ, ಮಠಮಾನ್ಯಗಳೂ, ಸಾಮಾಜಿಕ ಸಂಘಗಳೂ, ಸಾಂಪತ್ತಿಕ ನಿಯೋಜನೆಗಳೂ, ಬ್ಯಾಂಕುಗಳೂ. ಪತ್ರಿಕೆಗಳೂ ಜಗದ್ಗುರುಗಳ ದಕ್ಷ ಮಾರ್ಗದರ್ಶನವನ್ನೂ ಆಶೀರ್ವಾದವನ್ನೂ ಮೇಲಿಂದ ಮೇಲೆ ಪಡೆಯುತ್ತವೆ. ಅಂಥವುಗಳಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಕೆ. ಎಲ್. ಈ. ಸಂಸ್ಥೆ, ಪ್ರಮುಖ ವಾಣಿಜ್ಯ ಸಂಘಗಳು ಮೊದಲಾದವುಗಳನ್ನು ಗಮನಿಸಬಹುದು.

## ಜ್ಞಾನಯೋಗ

ಜಗದ್ಗುರುಗಳು ಮೂಲತಃ ಜ್ಞಾನಜೀವಿಗಳು, ಶಿಕ್ಷಣಪ್ರೇಮಿಗಳು, ಜ್ಞಾನ ಪ್ರಸಾರವೆಂದರೆ ಅವರ ಮೈ ಉಬ್ಬುತ್ತದೆ. ಇಮ್ಮಡಿ ಮುಮ್ಮಡಿ ಉತ್ಸಾಹ ಪುಟಿಯುತ್ತದೆ. ಇದಕ್ಕಾಗಿ ಅನೇಕ ಶಾಲೆ–ಕಾಲೇಜುಗಳನ್ನು ಸ್ಥಾಪಿಸಿದರು. ಅವುಗಳಿಗಾಗಿ ಹತ್ತಾರು ಲಕ್ಷ ಹಣವನ್ನು ಮಠದಿಂದ ವಿನಿಯೋಗಿಸಿದರು. ಲಕ್ಷಾವಧಿ ಹಣವನ್ನು ಭಕ್ತಮಂಡಲಿಯಿಂದ ಕೊಡಿಸಿದರು. ಜಗದ್ಗುರು ಗುರುಸಿದ್ಧೇಶ್ವರ ಗ್ರಂಥಮಾಲೆಯಿಂದ ಅನೇಕ ಉದ್ಗ್ರಂಥಗಳನ್ನು ಬೆಳಕಿಗೆ ತಂದಿದ್ದಾರೆ. ಅವುಗಳಲ್ಲಿ ವಿಶೇಷಾರ್ಥ ಪ್ರಕಾಶಿಕ, ವೀರಶೈವಾನಂದ ಚಂದ್ರಿಕೆ, ಸ್ವತಂತ್ರ ಸಿದ್ಧಲಿಂಗೇಶ್ವರ ವಚನ. ಕ್ಷೇತ್ರಜ್ಞ ಸುಮನೋ-ವಾದ, ವಿವೇಕ ಚಿಂತಾಮಣಿ, ಮಣಿವಚನಗಳು, ಸಂಸ್ಕೃತ ಪ್ರವೇಶ, ಸಂಸ್ಕೃತ ಪ್ರಕಾಶ, ವ್ಯಾಕರಣ ದರ್ಪಣ, ಹೂ-ಹಣ್ಣು, ಕುಮಾರಗೀತೆ, ಚಿದಾನಂದದ ಚಿಲುಮೆ, ವಚನಶಾಸ್ತ್ರ ರಹಸ್ಯ, ಹೊಂಬೆಳಗು, ಜೀವನ ವಿಕಾಸ, ಅಮೃತಬಿಂದು, ಸಂಸ್ಕೃತಿ, ಆಶೀರ್ವಾಣಿ

ಮೊದಲಾದ ಹೆಪ್ಪೊತ್ತಿಗೆಗಳನ್ನು ಗಮನಿಸಬಹುದು. ಈ ಗ್ರಂಥಗಳ ಪ್ರಕಟನೆ ಪ್ರಸಾರಕ್ಕೆ ಲಕ್ಷಗಟ್ಟಲೆ ಧನವಿನಿಯೋಗಮಾಡಿದ್ದಾರೆ. ಈ ಜ್ಞಾನ ಸಂಸ್ಕೃತಿ ಪ್ರಸಾರಾಂಗ ವಿಭಾಗದಲ್ಲಿ ಮೆಲ್ಲನೆ ಬೃಹತ್‌ಪ್ರಮಾಣದ ಸಂಶೋಧನ ಸಂಸ್ಥೆಯೊಂದು ಗರಿಗೆದರಿ ಮೇಲೇಳುತ್ತಿದೆ. ಸಮರ್ಥರೀತಿಯಿಂದ ಕಾರ್ಯಮಾಡಲು ಸಿದ್ಧವಾಗುತ್ತಿದೆ.

## ಮೂಡಿತು ಪರಂಜ್ಯೋತಿ

ಪೂಜ್ಯ ಜಗದ್ಗುರುಗಳ ಆತ್ಮಜ್ಯೋತಿಯ ಅನುಭವವೇ "ಪರಂಜ್ಯೋತಿ"ಯಾಗಿ ಸಾಕಾರರೂಪವನ್ನು ಪಡೆಯಿತು. ಕನ್ನಡನಾಡಿನ ಸರ್ವೋಚ್ಚಮಟ್ಟದ ಧಾರ್ಮಿಕ ಪತ್ರಿಕೆಯಾಗಿ ಪ್ರಕಟವಾಯಿತು. ಭಾರತದ ಮೂಲೆ ಮೂಲೆಗಳಲ್ಲೂ ಇದಕ್ಕೆ ಚಂದಾ-ದಾರರು ದೊರೆತರು. ಇದು ವೀರಶೈವ ಧರ್ಮ ಮಾತ್ರವಲ್ಲದೆ ಸರ್ವಧರ್ಮಗಳ ಸಾರಾಯ ಸಂಪತ್ತನ್ನು ಸೂರೆ ಮಾಡಿತು. ಉನ್ನತ ಮಟ್ಟದ ದಾರ್ಶನಿಕ–ಅನುಭಾವಿಕ–ವಿಮರ್ಶಕ–ಸಂಶೋಧನಪರ–ಸಾಹಿತ್ಯಕ–ಸಾಮಾಜಿಕ ಲೇಖನಮಾಲೆಗಳು ನಾಮಾಂಕಿತ ಲೇಖಕರಿಂದ ಪ್ರಕಟಗೊಳ್ಳಲು ಒಂದು ಸುವರ್ಣ ಮಾಧ್ಯಮವಾಯಿತು. ಇಂದು ಪರಂಜ್ಯೋತಿ ತತ್ವಕಾಂಕ್ಷಿಗಳ ಮನೆಮನೆಯ ಮಾತಾಗಿದೆ. ಜಗದ್ಗುರು ಮೂರುಸಾವಿರ ಮಠದ ಪ್ರಾಮಾಣಿಕ ಪ್ರಯತ್ನದ ದ್ಯೋತಕವಾಗಿದೆ. ಈ ಪತ್ರಿಕೆಯ ಭವಿಷ್ಯವಿನ್ನೂ ಬಹಳ ಇದೆ. ಇದನ್ನು ಇಂಗ್ಲೀಷ–ಸಂಸ್ಕೃತ–ಹಿಂದಿ ಮೊದಲಾದವುಗಳಲ್ಲಿ ಅಚ್ಚು ಮಾಡುವ ಉದ್ದೇಶ ಜಗದ್ಗುರುಗಳಿಗಿದೆ. ಇದರ ಶಾಖಾ ಮುದ್ರಣಾಲಯಗಳನ್ನು ಕಾಶಿ–ಕಲಕತ್ತಾ–ದಿಲ್ಲಿಗಳಲ್ಲಿ ತೆರೆಯುವ ಮಹೋದ್ದೇಶವಿದೆ. ಅದಕ್ಕಾಗಿ ಭವಿಷ್ಯ ಪುರುಷನು ಅವರೊಂದಿಗೆ ಕೈನೀಡಬೇಕು.

## ದಾನದೇವತೆ

ಮೂರುಸಾವಿರಮಠ ಮೊದಲಿಗಿಂತಲೂ ಕನ್ನಡನಾಡಿನಲ್ಲಿ ದಾನದೇವತೆಯೆಂದು ಹೆಸರಾಗಿದೆ. ಸಾವಿರಾರು ಜನರು ವೈಯಕ್ತಿಕವಾಗಿ ಇದರ ಲಾಭ ಪಡೆದಿದ್ದಾರೆ. ದೇಶ ವಿದೇಶಗಳಲ್ಲಿ ಅಭ್ಯಸಿಸುವ ಉಚ್ಚ ವ್ಯಾಸಂಗದ ವಿದ್ಯಾರ್ಥಿಗಳು ಜಗದ್ಗುರುಗಳಿಂದ ಸಾಕಷ್ಟು ಮಟ್ಟಿಗೆ ಧನಸಹಾಯ ಹೊಂದಿದ್ದಾರೆ. ಇದು ವೈಯಕ್ತಿಕವಾಗಿ ವ್ಯಕ್ತಿರೂಪ ದಿಂದ ನೀಡಿದ ದಾನ ಮಾತ್ರ. ಆದರೆ ಅಸಂಖ್ಯ ಸಂಘ ಸಂಸ್ಥೆಗಳೂ ಕಾಲೇಜುಗಳೂ ಶಾಲೆಗಳೂ ಧಾರ್ಮಿಕ ರಂಗಗಳೂ ಸಾಂಸ್ಕೃತಿಕ ಸಾಮಾಜಿಕ ಕೂಟಗಳೂ ಆರೋಗ್ಯ ಧಾಮಗಳೂ ಮಂದಿರಗಳೂ ಪ್ರಸಾದಾಲಯಗಳೂ ಮಹಾಸನ್ನಿಧಿಯ ಕೃಪಾಪೋಷಣೆ ಯಿಂದ ಮೇಲೆದ್ದು ನಿಂತಿವೆ. ಜಗದ್ಗುರುಗಳು ತಮ್ಮ ಮಠದ ಉದಾರಾಶ್ರಯದಲ್ಲಿ ಮೇಲೆದ್ದ ನಾನಾ ಸಂಸ್ಥೆಗಳಿಗೆ ಈಗಾಗಲೆ ಹತ್ತು ಲಕ್ಷಕ್ಕೂ ಮಿಗಿಲಾಗಿ ಧನವಿಯೋಗ ಮಾಡಿದ್ದಾರೆ. ಸುಮಾರು ಇಷ್ಟೇ ಮೊತ್ತದ ದ್ರವ್ಯವನ್ನು ನಾಡಿನ ನಾನಾ ಸಂಘ ಸಂಸ್ಥೆ ಗಳಿಗೆ ನೀಡಿದ್ದಾರೆ. ಇದು ಇವರ ಉದಾರಾಶ್ರಯದ ದ್ಯೋತಕವಲ್ಲವೇ ?

ಜಗದ್ಗುರುಗಳಿಗೆ ಭಕ್ತರು ಆಧಾರಸ್ತಂಭರಿದ್ದಂತೆ. ಅವರಿಂದ ಮುಕ್ತ ಕಾಣಿಕೆಯನ್ನು ಸ್ವೀಕರಿಸಿ ಅದನ್ನೆಲ್ಲ ಮಠದ ವಿಸ್ತರಣೆಗೇ ವಿನಿಯೋಗಿಸಿದ್ದಾರೆ. ಇಂಥ ಶ್ರದ್ಧಾಳುಗಳಿಂದ ಪಡೆದ ಕಾಣಿಕೆ ಧನದಿಂದ ಮೂರುಸಾವಿರಮಠದ ಷಟ್‌ಸ್ಥಲಸೂಚಕ ೧೦೧ ಘೂಟಿನ ಮಹಾದ್ವಾರವನ್ನು ಮೂರುಲಕ್ಷಕ್ಕೂ ಮೇಲ್ಪಟ್ಟು ಧನವಿನಿಯೋಗದಿಂದ ಕಟ್ಟಿಸಿದ್ದಾರೆ. ಅದರ ಮೇಲೆ ಭವ್ಯವಾದ ಗೋಪುರ ಗಡಿಯಾರ ( Tower clock ) ರಾರಾಜಿಸುತ್ತದೆ.

## ದಿಲ್ಲಿಯ ವಿಶ್ವಶಾಂತಿ ಪರಿಷತ್ತು

ಜಗದ್ಗುರುಗಳು ಹನ್ನೆರಡು ವರ್ಷ ಅವಧಿಯಲ್ಲಿ ಉನ್ನತ ಮಟ್ಟದ ನೂರಾರು ಸಮ್ಮೇಲನಗಳಲ್ಲಿ ಭಾಗವಹಿಸಿ ಆಶೀರ್ವಾದ ನೀಡಿದ್ದಾರೆ. ಪ್ರತಿ ಸಮ್ಮೇಲನದಲ್ಲೂ ಅಸಂಖ್ಯ ಶ್ರೋತೃಗಳು ಕಿಕ್ಕಿರಿದು ಇವರ ವಾಣಿಯನ್ನು ಹೇಳಿದ್ದಾರೆ. ಆಕಾಶವಾಣಿಯವರ ಬೇಡಿಕೆಯನ್ನು ಮನ್ನಿಸಿ ಅದೆಷ್ಟೋ ಬಾರಿ ಬಾನುಲಿ ಭಾಷಣವನ್ನು ಕರುಣಿಸಿದ್ದಾರೆ. ಅವೆಲ್ಲವನ್ನು ಇವರ ಆಶೀರ್ವಾಣಿ ಗ್ರಂಥದಲ್ಲಿ ಕಾಣಬಹುದು. ಇದಲ್ಲದೆ ಎರಡು ವರ್ಷಗಳ ಹಿಂದೆ ದಿಲ್ಲಿಯಲ್ಲಿ ಜರುಗಿದ ಜಾಗತಿಕ ಶಾಂತಿ ಪರಿಷತ್ತಿನಲ್ಲಿ ಕನ್ನಡ ನಾಡನ್ನು ಪ್ರಾತಿನಿಧಿಸಿ ವಿಚಾರಪರಿಪ್ಲುತವಾದ ಉಪನ್ಯಾಸವನ್ನು ಕರುಣಿಸಿದರು. ಜಗತ್ತಿನ ನಾನಾದೇಶಗಳ ಪ್ರತಿನಿಧಿಗಳು ಇವರ ಚಿಂತನ ಸಮೃದ್ಧಿಗೆ ತಲೆವಾಗಿದರು. ಹೋಮರ್ ಎ. ಜಾಕ್ ( Homer A. Jack ) ಎಂಬ ಪಂಡಿತರು ಅಮೇರಿಕದಲ್ಲಿ ತಮ್ಮ —'ವಿಶ್ವಧರ್ಮಗಳು ಮತ್ತು ವಿಶ್ವಶಾಂತಿ' ( World Religions and World Peace) ಎಂಬ ಗ್ರಂಥದಲ್ಲಿ ಜಗದ್ಗುರುಗಳ ಈ ಉಪನ್ಯಾಸವನ್ನು ಅಚ್ಚು-ಹಾಕಿಸಿ ಪ್ರಸಿದ್ಧಿಸಿದರು, ಈ ಉಪನ್ಯಾಸದ ಕೆಲ ವಾಕ್ಯಗಳನ್ನು ಗಮನಿಸಬಹುದು—

—'The fear of war envelops the world today. In the face of this menacing situation, the spiritual heads of all nations, philosophers, and statesmen should come together and deliberate on the best way to secure peace. The International Inter-Religious Symposium on Peace at this time is highly significant. As a result of such deliberations, world tension may be eased, the war clouds may roll away, and the sun of peace shine in the heavens, bringing hope to humanity. May all those who are spiritually inclined resolve that they will exert themselves in the cause of world peace and Usher in the Millennium. In this direction we shall all join in drawing into each one of ourselves the light of the many faiths of the world, centralize our energies for world peace, and immediately set about initiating the necessary steps'

## ಜಪಾನದ ವಿಶ್ವಶಾಂತಿ ಸಮ್ಮೇಲನ

ದಿಲ್ಲಿಯ ವಿಶ್ವಶಾಂತಿ ಪರಿಷತ್ತಿನಲ್ಲಿ ಪೂಜ್ಯ ಶ್ರೀಗಳ ಉಪನ್ಯಾಸದಿಂದ ಪ್ರಭಾವಿತರಾದ ಧುರೀಣರು ಇವರನ್ನು ಜಪಾನದ ವಿಶ್ವಶಾಂತಿ ಸಮ್ಮೇಲನಕ್ಕೆ ಆಮಂತ್ರಿಸಿದರು. ಇದೊಂದು ಜಗದ್ಗುರುಗಳ ಮಹೋಜ್ವಲ ಜಯಭೇರಿಯಾಯಿತು. ಇದು ಇವರ ವ್ಯಕ್ತಿಪ್ರತಿಷ್ಠೆಯ ದ್ಯೋತಕವಾಗಿಲ್ಲ, ಸಮಾಜದ ದೇಶದ ಬಗ್ಗೆ ಇವರಿಗಿರುವ ಜೀವಂತ ಕಳಕಳಿಯ ಕಾರಂಜಿಯಾಯಿತು. ಈ ಸಮ್ಮೇಲನದಲ್ಲಿ ಜಗದ್ಗುರುಗಳ ವ್ಯಾಖ್ಯಾನವನ್ನು ನಾಲ್ವತ್ತು ದೇಶಗಳಿಂದ ಆಗಮಿಸಿದ ಮೂರುನೂರು ಪ್ರಕಾಂಡ ಪಂಡಿತರೂ ಜಪಾನ ದೇಶದ ಪ್ರತಿಷ್ಠಿತರೂ ಕಟ್ಟಾಸಕ್ತಿಯಿಂದ ಕೇಳಿದರು. ಜಗದ್ಗುರುಗಳ ಈ ಉಪನ್ಯಾಸದ ಮಹತ್ವದ ಸೂಚನೆಯೆಂದರೆ ಅವರು ಹತ್ತಂಶಗಳ ಸೂಚನೆಯೊಂದನ್ನು ಬಹಿರಂಗ ಸಭೆಯ (Plenary Session) ಮುಂದೆ ಆಲೋಚನೆಗೆ ಇಟ್ಟರು. ಅದರಲ್ಲಿ–"ಜಾಗತಿಕ ಧರ್ಮ ಸಂಸ್ಥೆ" (World Parliament of Religions)ಯನ್ನು ಸ್ಥಾಪಿಸಬೇಕೆಂದೂ ಅದರಲ್ಲಿ ಎಲ್ಲ ಧರ್ಮಗಳಿಗೂ ದೇಶಗಳಿಗೂ ಸಮಾನಾವಕಾಶವಿರಬೇಕೆಂದೂ, ತನ್ಮೂಲಕವಾಗಿ ವಿಶ್ವಶಾಂತಿ ಸ್ಥಾಪನೆಯನ್ನು ಬಿಗಿಕಟ್ಟಾಗಿ ಸ್ಥಾಪಿಸಬಹುದೆಂದೂ ಹೇಳಿದರು. ಶಾಂತಿ ಪರಿಷತ್ತಿನ ಬಹುಸಂಖ್ಯಾತರಿಗೆ ಈ ಸೂಚನೆ ಮಾನ್ಯವಾಯಿತು. ಎಲ್ಲರೂ ತಮ್ಮ ಕರತಾಡನದಿಂದ ಈ ನೂತನ ಕ್ರಮವನ್ನು ಸ್ವಾಗತಿಸಿದರು. ಜಗದ್ಗುರುಗಳು ತಮ್ಮ ಈ ವಿಜಯ ಯಾತ್ರೆಯಲ್ಲಿ ಕಿಯೋಟೊ, ಟೋಕಿಯೊ, ನಾರಾ, ಟೇರಾ. ಟೆನ್ರಿಕ್ಯೋ. ಹಾಂಗ್‌ಕಾಂಗ್, ಜಕಾರ್ತಾ, ಸಿಂಗಾಪೂರ, ಕೌಲಾಲಂಪೂರ, ಬ್ಯಾಂಕಾಕ ಮೊದಲಾದ ನಗರಗಳಿಗೆ ದರ್ಶನವಿತ್ತು ವಿಶ್ವಶಾಂತಿ ಸಮ್ಮೇಲನದ ಫಲಶ್ರುತಿಯನ್ನು ದರ್ಶಿಸಿದರು. ಅಲ್ಲದೆ ಶರಣರ–ಸಂತರ ಅಮರವಾಣಿಯನ್ನು ಪ್ರಪ್ರಥಮವಾಗಿ ಸಾಗರದಾಚೆಗೆ ಬೀರಿ, ಭಾರತ ಸಂಸ್ಕೃತಿಯ ಅಭಿವ್ಯಕ್ತಿಯನ್ನು ತೋರಿಬಂದರು. ಇವರ ಈ ಮಹಾಯಾತ್ರೆಯಲ್ಲಿ ಅನೇಕ ಮಂತ್ರಿಗಳೂ ಪ್ರತಿಷ್ಠಿತರೂ ನಾನಾ ದೇಶಗಳ ಪತ್ರಿಕಾಕರ್ತರೂ ಇವರಿಂದ ಲಿಂಗ–ಭಸ್ಮಗಳನ್ನು ಪೂಜೆಗಾಗಿ ಪಡೆದುಕೊಂಡು ಲಿಂಗ ದೀಕ್ಷೆಗಾಗಿ ಭಾರತಕ್ಕೆ ಬರುವದಾಗಿ ಹೇಳಿದರು. ಜಗದ್ಗುರುಗಳು ಅವರಿಗೆ ಶರಣ ಧರ್ಮವನ್ನೂ ಸರ್ವಧರ್ಮ ಸಮಾನತೆಯ ತಿರುಳನ್ನೂ ಅರುಹಿದರು. ಒಟ್ಟಿನಲ್ಲಿ ಮಹಾಸನ್ನಿಧಿಯವರು ಹಾನಗಲ್ಲ ಕುಮಾರ ಸ್ವಾಮಿಗಳ ಆಶೆಯನ್ನು ಪೂರೈಸಿದರು. ಏನಿದ್ದರೂ ಇವರು ಮಹಾತ್ಮರ ವರದಾನದಿಂದ ಜನಿಸಿದ ವರಪುತ್ರರಲ್ಲವೆ?

## ಇನ್ನು ಮುಂದೇನು ?

ಹನ್ನೆರಡು ವರ್ಷಗಳ ಈ ಪ್ರಚಂಡ ವಿಜಯ ನಾಡಿಗೆ ಬಹು ದೊಡ್ಡದಾದರೂ ಜಗದ್ಗುರುಗಳ ದೃಷ್ಟಿಯಿಂದ ಏನೂ ಅಲ್ಲ. ತಮ್ಮ ಕರ್ತೃತ್ವಶಕ್ತಿಯ ಪ್ರಾರಂಭ ಮಾತ್ರವೆಂದು ಅವರು ಬಗೆದಿದ್ದಾರೆ. "ಇದನೆಲ್ಲ ನಾನು ಮಾಡಿದವನಲ್ಲ. ಆ

ಶಿವಯೋಗಿಯೇ ನನ್ನಿಂದ ಮಾಡಿಸಿದ್ದಾನೆ. ಅಷ್ಟೇ. ಹೆಚ್ಚೇನೂ ಇಲ್ಲ" ಎಂದು ವಿನಯಪೂರ್ವಕ ಉದ್ಗಾರ ತೆಗೆಯುತ್ತಾರೆ. ಅವರ ಚೈತ್ರಯಾತ್ರೆ ಇನ್ನು ಮುಂದೆ ನಿತ್ಯನೂತನವಾಗಿ ಆರಂಭವಾಗಲಿದೆ. ವಿಶ್ವದ ನಾನಾಮೂಲೆಗಳಲ್ಲಿ ವ್ಯಾಪಿಸಲಿದೆ. ಜಗದ್ಗುರುಗಳು ತಮ್ಮ ಕಾರ್ಯಕ್ಷೇತ್ರದ ವ್ಯಾಪಕತೆಗೆ ಅನುಕೂಲವಾಗುವಂತೆ ಬೆಂಗಳೂರು, ದಿಲ್ಲಿ, ಕಲಕತ್ತೆ. ಕಾಶಿಗಳಲ್ಲಿ ಮೂರುಸಾವಿರಮಠದ ಶಾಖಾಮಠಗಳನ್ನು ತೆರೆಯಲಿದ್ದಾರೆ. "ಪರಂಜ್ಯೋತಿ" ಪತ್ರಿಕೆಯ ಬಹುಭಾಷೆಗಳ ಪ್ರಕಟನೆಯನ್ನು ಆ ಕೇಂದ್ರಗಳಿಂದ ಮಾಡಲಿದ್ದಾರೆ. ಜಗತ್ತಿನ ನಾನಾದೇಶಗಳಿಗೆ ತಾವು ಮಾತ್ರವಲ್ಲದೆ ಅನೇಕ ವಿದ್ವನ್ಮಣಿಗಳನ್ನು ಕಳಿಸಿ ಬಸವತತ್ವ ಪ್ರಚಾರವನ್ನು ಸಮರ್ಥರೀತಿಯಿಂದ ಮಾಡುವ ಹಂಬಲ ಇವರದಾಗಿದೆ. ಇಂಗ್ಲೀಷ ಭಾಷೆಯಲ್ಲಿ ಉದ್ಗ್ರಂಥಗಳನ್ನು ಅಚ್ಚು ಹಾಕಿಸಿ ವಿಶ್ವದ ನಾನಾಮೂಲೆಗಳಿಗೂ ಮಹಾತ್ಮರ ದರ್ಶನವಾಣಿಯನ್ನು ಮುಟ್ಟಿಸಲಿದ್ದಾರೆ. ಅವರಿಗೆ ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರನ ಕೃಪಾಕಟಾಕ್ಷವಿದೆ. ಹಾನಗಲ್ಲ ಕುಮಾರಮಹಾಸ್ವಾಮಿಗಳ ಆಶೀರ್ವಾದವಿದೆ. ಜಗದ್ಗುರು ಗುರುಸಿದ್ಧೇಶನ ರಕ್ಷಣೆ ಇದೆ. ಏನನ್ನಾದರೂ ಮಾಡಬಲ್ಲರು. ಏನನ್ನಾದರೂ ಸಾಧಿಸಬಲ್ಲರು. ಅವರು ನಡೆದುದೇ ವಿಜಯಯಾತ್ರೆ ! ಮುಟ್ಟಿದುದೇ ಮೃತ್ಯುಂಜಯ ಪಾತ್ರೆ !! ನುಡಿದುದೇ ನಿರಂಜನ ವಾರ್ತೆ !!!

ಪೂಜ್ಯ ಜಗದ್ಗುರುಗಳು ನಮ್ಮ ನಾಡಿನ ಜೀವಂತ ಪರಂಜ್ಯೋತಿಯಾಗಿದ್ದಾರೆ. ಆ ಅವಿರಳ ನಿರ್ಮಲ ಪರಂಜ್ಯೋತಿಯ ಪ್ರದ್ಯೋತ ಮಂಡಲದಲ್ಲಿ ನಾವು ಹಮ್ಮು ಬಿಮ್ಮುಗಳನ್ನುಳಿದು ನಿಜಗುಣದ ನಿತ್ಯತೆಯ ಕಡೆಗೆ ಧಾವಿಸುವಾ. ಪರತರ ಪರಂಜ್ಯೋತಿಯಾಗುವಾ. □

# ಶಿವಯೋಗಮಂದಿರಕ್ಕೊಂದು ಪುಟ್ಟ ನಂದಾದೀಪ

— ಶ್ರೀ ಮ. ಘ. ಚ. ಬಸವಲಿಂಗ ಪಟ್ಟಾಧ್ಯಕ್ಷರು, ತೆಲಸಂಗ

ಶಿವಾದ್ವೈತ ದರ್ಶನದಲ್ಲಿ ಜಂಗಮಸ್ಥಲದ ಮಹಿಮೆಯು ಮಹತ್ತರವಾದುದು. "ಜಂಗಮನ ಸುಳುಹು ವಸಂತವಾಯುವಿನ ಸುಳುಹು" "ಜಂಗಮನ ಸುಳಿದಾಟ ಮೃಗದ ಅಲೆದಾಟ", "ಅವನು ಮೆಟ್ಟಿದ ಧರೆಯೆಲ್ಲ ಅವಿಮುಕ್ತ ಕ್ಷೇತ್ರ," "ಮುಟ್ಟಿದವರೆಲ್ಲ ನಿತ್ಯಮುಕ್ತರು", "ಸೋಂಕಿದ ಜಲವೆಲ್ಲ ಪುಣ್ಯತೀರ್ಥಂಗಳು" ಎಂದು ಅಲ್ಲಮ ಪ್ರಭುದೇವರು ನಿಜಜಂಗಮನ ನಿಲವನ್ನು ಸುಂದರವಾಗಿ ಹೇಳಿರುವರು. ಜಂಗಮನೆಂದರೆ ಸಮ್ಯಗ್‌ಜ್ಞಾನ, ಸಮ್ಯಕ್ಕ್ರಿಯೆ, ಸ್ವಾನುಭವಗಳ ತ್ರಿವೇಣಿ ಸಂಗಮ. ಜಂಗಮನಲ್ಲಿ ಅಂಗ ಗುಣಗಳು ಅಳಿದು ಲಿಂಗಗುಣಗಳು ಉಳಿದಿರಬೇಕು ಬೆಳೆದಿರಬೇಕು. ಅಂದರೆ ಅಂಗಗುಣಗಳನ್ನೆಲ್ಲ ಭಂಗಿಸಿ, ಲಿಂಗಗುಣಗಳನ್ನು ಅಂಗವಿಸಿಕೊಂಡು ಲಿಂಗಮಯನಾಗಿರಬೇಕು. ಇವನೇ ಪರಾತ್ಪರ, ಜಂಗಮನು ಶಿವಯೋಗ ಸಾಮ್ರಾಟನು, ಷಟ್‌ಸ್ಥಲಚಕ್ರವರ್ತಿಯು.

ಇಂತಹ ತತ್ವವೇತ್ತರೂ, ಸತ್ವಯುತರೂ ಆದ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳವರು ಅಂದಿನ ವೀರಶೈವ ಸಮಾಜವೆಂಬ ಸುಧಾಕರನು ಅಧರ್ಮರಾಹುಗ್ರಹಸ್ತನಾದುದನ್ನು ತಿಳಿದು ಧರ್ಮೋದ್ಧಾರಕ್ಕಾಗಿ ಬದ್ಧಕಂಕಣರಾಗಿ ಒಂದು ಆದರ್ಶಪ್ರಾಯವಾದ ಗುರುಕುಲವನ್ನು ಸ್ಥಾಪಿಸಬೇಕೆಂಬ ಸತ್ಯಸಂಕಲ್ಪವನ್ನು ಮಾಡಿಕೊಂಡಿದ್ದರು. ಶ್ರೀಶಿವಯೋಗಮಂದಿರವೆಂಬ ಗುರುಕುಲವನ್ನು ಎಲ್ಲಿ ಕಟ್ಟಬೇಕೆಂಬ ವಿಷಯದಲ್ಲಿ ಸಮಾಜದ ಅನೇಕ ಮುಂದಾಳುಗಳು ವಿವಿಧ ಸ್ಥಾನಗಳನ್ನು ತೋರಿಸಿದರೂ ಅದಕ್ಕೊಪ್ಪದೇ ಚರಕುಲ ಚಕ್ರವರ್ತಿಯೆನಿಸಿ ಮೆರೆವ ಶ್ರೀ ವಿಜಯಮಹಾಂತ ಶಿವಯೋಗಿಗಳವರು ತೋರಿಸಿದ ಸ್ಥಳದಲ್ಲಿಯೇ ಗುರುಕುಲವನ್ನು ಕಟ್ಟಬೇಕೆಂದು ಹಾನಗಲ್ಲ ಶ್ರೀಗಳವರು ದೃಢಸಂಕಲ್ಪ ಮಾಡಿದರು, ಅಲ್ಲಿಯೇ ಶಿವಾನುಭವದ ಭದ್ರಬುನಾದಿಯಲ್ಲಿ ಶಿವಯೋಗ ಮಂದಿರವನ್ನು ಕಟ್ಟಿದರು.

ಹೀಗಿರಲು ಕಾಲಕ್ರಮದಲ್ಲಿ ಒಂದು ಘಟನೆ ಸಂಭವಿಸಿತು. ಯಾರು ಶಾಪಾನುಗ್ರಹ ಸಮರ್ಥರೋ, ಯಾರು ಅತ್ಯಪೂರ್ವವಾದ ಅಧ್ಯಾತ್ಮಶಕ್ತಿಯನ್ನು ಕೇಂದ್ರೀಕರಿಸಿಕೊಂಡು ಮಹಾವಿಭೂತಿಗಳೆನಿಸಿದರೋ, ಯಾರು ಯೋಗಮಂದಿರವನ್ನು ಕಟ್ಟಲು

ಅನುಗ್ರಹ ಮಾಡಿದರೋ, ಆ ಶ್ರೀವಿಜಯಮಹಾಂತ ಶಿವಯೋಗಿಗಳವರ ಜನ್ಮವೆತ್ತ ನಾಡು, ಹುಟ್ಟಿದ ಬೀಡು ಇವುಗಳನ್ನು ಕಾಣುವ ಮಹತ್ವಾಕಾಂಕ್ಷೆಯಿಂದಲೂ, ಹಾಗೂ ಅವರ ಪಾವನ ಚರಿತ್ರಲೇಖನಕ್ಕೆ ಬೇಕಾದ ವಿಷಯಗಳನ್ನು ಸಂಗ್ರಹಿಸುವದಕ್ಕಾಗಿಯೂ, ಮತ್ತು ವಿಜಯಮಹಾಂತೇಶ್ವರರ ಮಹಾಪೀಠದ ಉತ್ತರಾಧಿಕಾರಕ್ಕೆ ಯೋಗ್ಯನಾದ ಓರ್ವ ಕಿರಿಯ ಪಟುವನ್ನು ಬೇಡುವದಕ್ಕಾಗಿಯೂ ಹಾನಗಲ್ಲ ಶ್ರೀಗಳವರು ಪರಗುರು ಚರ ಮೂರ್ತಿಗಳೊಡನೆ ಮೈಸೂರ ಸೀಮೆಯ ಸಸಿವಾಳಕ್ಕೆ ದಯಮಾಡಿಸಿದರು. ಶ್ರೀವಿಜಯಮಹಾಂತ ಶಿವಯೋಗಿಗಳು ಶೈಶವಾವಸ್ಥೆಯಲ್ಲಿದ್ದಾಗ ಹರಿದಾಡಿದ, ನಲಿದಾಡಿದ, ಕುಣಿದಾಡಿದ ತಾಣಗಳನ್ನು ಕಂಡು ತಣಿದರು. ಭಕ್ತಿರಸವುಕ್ಕಿ ಮನದಲ್ಲಿ ಮಣಿದರು. ಹಿರಿ ಹಿರಿ ಹಿಗ್ಗಿ ಕುಣಿದರು. ದೈವೀಸಂಪತ್ತಿಗೆ ಕುಬೇರನ ಕೋಶಾಗಾರ ದಂತಿದ್ದ ಆ ಪುಣ್ಯಮಂದಿರದ ಸಂದರ್ಶನದಿಂದ ಹಾನಗಲ್ಲ ಶ್ರೀಗಳವರು ತಾವೇ ಧನ್ಯರೆಂದೂ, ಕೃತಾರ್ಥರೆಂದೂ ಬಗೆದರು. ವೀರಯ್ಯನವರ ಮಕ್ಕಳಾದ ಮರುಳಸಿದ್ಧಯ್ಯನವರು, ಧರ್ಮಪತ್ನಿಯಾದ ಚನ್ನಮ್ಮ ಈ ದಂಪತಿಗಳು ತಮ್ಮ ಮುದ್ದುಮಗುವಾದ ಆರು ವರ್ಷದ ಬಸವಲಿಂಗಯ್ಯನೊಡನೆ ಬಂದು ಶ್ರೀಗಳಿಗೆ ಸಾಷ್ಟಾಂಗ ಹಾಕಿದರು. ಶ್ರೀಗಳವರು ಆ ಮುದ್ದು ಮಗುವಿಗೆ ತಿನ್ನಲು ಕಲ್ಲುಸಕ್ಕರೆ ಉತ್ತತ್ತಿ ಕೊಟ್ಟು ಮೈದಡವಿ "ಮರುಳಸಿದ್ಧಯ್ಯನವರೇ, ಈ ಸದ್ವಂಶದ ಸತ್ಪುತ್ರನನ್ನು ಶ್ರೀವಿಜಯ ಮಹಾಂತೇಶ್ವರರ ಮಹಾಪೀಠಕ್ಕೆ ಉತ್ತರಾಧಿಕಾರಿಯನ್ನಾಗಿ ಮಾಡಲು ಕೊಡುವಿರಾ?" ಎಂದು ಕೇಳಿದರು.

ಮರುಳಸಿದ್ಧಯ್ಯನವರು— "ಆಗಲಿ ಮಹಾಸ್ವಾಮಿ" ಎಂದು ಒಪ್ಪಿದರು. ಆದರೆ ಅರ್ಧಾಂಗಿನಿಯಾದ ಚನ್ನಮ್ಮನವರು ಈ ಮಾತಿಗೆ ಒಪ್ಪಿದಂತೆ ಕಾಣಲಿಲ್ಲ. ಆಗ ಶ್ರೀಗಳವರು"ತಾಯಿ ಈ ಮಗುವನ್ನು ಸಲ್ಲಿಸುವ ಇಚ್ಛೆ ನಿನಗೆ ಇದ್ದಂತೆ ಕಾಣಿಸುವದಿಲ್ಲ. ಶ್ರೀ ವಿಜಯಮಹಾಂತೇಶ್ವರರ ಅನುಗ್ರಹದಿಂದ ಮುಂದೆ ಹುಟ್ಟುವ ಗಂಡುಮಗುವನ್ನಾದರೂ ನಮಗೆ ಕೊಡುವಿರಾ ? " ಎಂದು ಕೇಳಲು ದಂಪತಿಗಳು ಒಮ್ಮನದಿಂದ ಒಪ್ಪಿ ಸಾಷ್ಟಾಂಗ ಮಾಡಿದರು. ಆಗ ಹಾನಗಲ್ಲ ಶ್ರೀಗಳವರು— "ಸರ್ವಸಮರ್ಥರಾದ ಶ್ರೀವಿಜಯಮಹಾಂತ ಶಿವಯೋಗಿಗಳವರ ಅನುಗ್ರಹದಿಂದ ನಿಮಗೆ ಒಂದು ವರ್ಷ ತುಂಬುವದರೊಳಗಾಗಿ ಸತ್ಪುತ್ರನು ಹುಟ್ಟುವನು. ಅವನಿಗೆ ' ಮಹಾಂತೇಶ ' ಎಂದು ಹೆಸರನ್ನಿಡಿರಿ. ಮಹಾತ್ಮರ ಆಶೀರ್ವಾದ ಪ್ರಭಾವದಿಂದ ಹುಟ್ಟಿದ ಆ ಮಗುವಿಗೆ ನಾಲ್ಕುವರ್ಷ ತುಂಬಿದ ಕೂಡಲೆ ಅವನನ್ನು ತಂದು ನಮಗೆ ಒಪ್ಪಿಸಿರಿ—" ಎಂದು ಹೇಳಿ ಆಶೀರ್ವದಿಸಿ ಹಣ್ಣುಹಂಪಲಗಳನ್ನು ಆ ತಾಯಿಯ ಉಡಿಯಲ್ಲಿ ಹಾಕಿ, ಊರಿಗೆ ದಯ ಮಾಡಿಸಿದರು. ಶ್ರೀಗಳವರ ಅನುಗ್ರಹದಿಂದ ಒಂದು ವರ್ಷ ತುಂಬುವದರೊಳಗಾಗಿ ಆ ತಾಯಿ ಗರ್ಭಿಣಿಯಾಗಿ ಗಂಡುಮಗುವನ್ನು ಹೆತ್ತಳು. ಶ್ರೀ ಕುಮಾರೇಶನ ಅನುಗ್ರಹ ದಿಂದ ಹುಟ್ಟಿದ ಆ ಶಿಶುವಿಗೆ ' ಮಹಾಂತೇಶ ' ನೆಂದು ಹೆಸರಿಟ್ಟರು. ಅಗಲವಾದ ಹಣೆ ವಿಶಾಲವಾದ ನೇತ್ರಗಳು, ಆಜಾನುಬಾಹುಗಳು. ಪ್ರಸನ್ನವಾದ ಮುಖ, ಕೆಳಗಣ ದೇಹವು

ಹೊರಲು ತತ್ಪರಿಸುವಷ್ಟು ದೊಡ್ಡದಾದ ಹಾಗು ಅತ್ಯಗಾಧ ಮೇಧಾಶಕ್ತಿಯುಳ್ಳ ಭಾರವಾದ ತಲೆ, ಇಂತಹ ಲೋಕೋತ್ತರವಾದ ಅಂಗೋಪಾಂಗಗಳಿಂದ ಕೂಡಿದ ಶಿಶುವಿನ ದೇಹದಲ್ಲಿ ಮುಗಿಲ ಮರೆಯ ಮಿಂಚಿನಂತೆ, ನೆಲದ ಮರೆಯ ನಿಧಾನದಂತೆ, ಶಿಲೆಯ ಮರೆಯ ಹೇಮದಂತೆ, ಭೂಗರ್ಭದಲ್ಲಿ ಗುಪ್ತಗಾಮಿನಿಯಾಗಿ ಹರಿವ ಸರಸ್ವತಿಯಂತೆ, ಅಂಬುಧಿಯ ತಳದ ರತ್ನದಂತೆ ಲೋಕೋದ್ಧಾರಕ ಮಹಾಶಕ್ತಿಯು ಅಡಗಿಕೊಂಡಿತ್ತು. " ಯತ್ರಾಕೃತಿಸ್ತತ್ರ ಗುಣಾ ವಸಂತಿ " ಎಂಬ ಜಾಣರ ಉಕ್ತಿಯಂತೆ ಶಿಶುವಿನ ಬಾಹ್ಯ ಸೌಂದರ್ಯದಿಂದಲೇ ಅಂತಃಸೌಂದರ್ಯದ ಊಹೆಮಾಡಲು ಬರುತ್ತಿತ್ತು. ನೋಡುವವರ ನಯನಸುಧೆ, ಅಪ್ಪುವರ ಪುಣ್ಯದ ಸುಗತಿ, ಸೋಂಕಿದೆಡೆ ಪುಳಕತತಿ ಮಾಡುವ ಮುದ್ದು ಮುದ್ದಾದ ಆ ಮಗುವನ್ನು ಕಂಡು ಹಡೆದವರು ಹರುಷಸಾಗರದಲ್ಲಿ ಲೋಲಾಡಿದರು. ಮಾತಿನಗಿಣಿ, ಮುದ್ದಿನಕಣಿ, ಮನೆಗೆ ಸಿಂಗಾರ, ಬಂಗಾರವಾಗಿರುವ ಆ ಶಿಶುವಿಗೆ ಹಾ ಹಾ ಎನ್ನುವಷ್ಟರಲ್ಲಿ ನಾಲ್ಕೂವರೆ ವರ್ಷಗಳು ತುಂಬಿದವು.

ಹಿಂದೊಮ್ಮೆ ಹಾನಗಲ್ಲ ಶ್ರೀಗಳವರು ಮನೆಗೆ ದಯಮಾಡಿಸಿ ಶ್ರೀವಿಜಯ ಮಹಾಂತಶಿವಯೋಗಿಗಳವರ ಪ್ರಸಾದವನ್ನು ಕರುಣಿಸಿ ಕೊಟ್ಟು ಇನ್ನು ಮುಂದೆ ಹುಟ್ಟುವ ಮಗುವನ್ನು ನಮಗೆ ಕೊಡಿರೆಂದು ಅಪ್ಪಣೆ ಮಾಡಿದುದನ್ನೂ ಅದಕ್ಕೆ ತಾವು ಒಪ್ಪಿ ಸಾಷ್ಟಾಂಗ ಹಾಕಿದುದನ್ನೂ ಆ ದಂಪತಿಗಳು ಪುತ್ರವ್ಯಾಮೋಹದಲ್ಲಿ ಮರೆತು ಬಿಟ್ಟರು, ಕೊಡುವ ದಾನಿಗಳು ಅಸಾಮಾನ್ಯ ಮಹಾಪುರುಷರಾದ ಶ್ರೀವಿಜಯ ಮಹಾಂತ ಶಿವಯೋಗಿಗಳವರ ಸದ್ವಂಶಜರು. ತಕ್ಕೊಳ್ಳುವ ಹಾನಗಲ್ಲ ಕುಮಾರ ಶ್ರೀಗಳು ಜ್ಞಾನಿಗಳಾದ ಯತಿಪುಂಗವರು. ಕೊಡಲ್ಪಡುವ ದಕ್ಷಿಣೆಯು ಮುಮುಕ್ಷು ಜನ ಸಂತಾರಕ, ವಿದ್ಯಾಪ್ರಸಾರಕ, ದೀನೋದ್ಧಾರಕ ಮುಂತಾದ ಸಹಸ್ರಶಕ್ತಿಗಳನ್ನು ಗರ್ಭೀಕರಿಸಿಕೊಂಡ ದಿವ್ಯಶಿಶುವು. ಈ ಆದಾತೃ, ದಾತೃ, ದೇಯಗಳ ಸಂಗಮವು ಅತ್ಯಪೂರ್ವವಾದುದು.

ಒಮ್ಮೆ ಶ್ರೀ. ಶಿ. ಮುರುಳಸಿದ್ಧಯ್ಯನವರು ತಮ್ಮ ಮಂಗಲಭವನದ ಮುಂದಿನ ಪಡಸಾಲೆಯಲ್ಲಿ ಕುಳಿತು ಶ್ರೀಮನ್ನಿಜಗುಣಶಿವಯೋಗಿಗಳವರ ಶಾಸ್ತ್ರವನ್ನು ಹಾಗು ಪುರಾತನರ ಚರಿತ್ರೆಗಳನ್ನು ಓದುತ್ತ ಕುಳಿತಿದ್ದರು. ಸಾಧ್ವಿಶಿರೋಮಣಿಯಾದ ಚನ್ನಮ್ಮನವರು ಬಾಗಿಲ ಬಳಿ ಕುಳಿತು ಪತಿಯ ಮುಖದಿಂದ ಕಥೆ ಹಾಗು ಶಾಸ್ತ್ರ ಕೇಳುತ್ತಿದ್ದರು. ಬಟ್ಟಲಲ್ಲಿ ನೀಡಿಕೊಟ್ಟ ಬೋನ ಹಾಲನ್ನು ಉಣುತ್ತ ಮಹಾಂತೇಶನೂ ಅಡಿಗೆಯ ಮನೆಯಲ್ಲಿ ಕುಳಿತಿದ್ದನು. ಊಟಮಾಡುಮಾಡುತ್ತಿದ್ದಂತೆಯೇ ಆ ಮಹಾಂತೇಶನು ಒಮ್ಮಿಂದೊಮ್ಮೆ ಕಣ್ಮುಚ್ಚಿ " ಅವ್ವಾ ಅವ್ವಾ " ಎಂದು ಚೀರುತ್ತ ನೆಲಕ್ಕೊರಗಿದನು. ತಾಯಿ ಗಾಬರಿಯಾಗಿ ಅಡಿಗೆಯ ಮನೆಯ ಒಳಗೆಹೋಗಿ ನೋಡಿದಾಗ ಮಹಾಂತೇಶನು ನೆಲದ ಮೇಲೆ ಬಿದ್ದು ಸಂಕಟದಿಂದ ಹೊರಳಾಡುತ್ತಿದ್ದನು. "ಮಗು ಒಮ್ಮಿಂದೊಮ್ಮೆ ಏನಾಯಿತಪ್ಪ, ಹೇಳು" ಎನ್ನಲು ' ಅವ್ವಾ ಕಣುತೆರೆಯಲು ಬರಲೊಲ್ಲದು, ಕಣು ಬಹಳೇ ನೋಯಿಸುವವು" ಎಂದು ಹೇಳಿ ಒದ್ದಾಡಹತ್ತಿದನು.

ಮಗುವಿನ, ಸಂಕಟವನ್ನು ಕಂಣಾರೆ ಕಂಡ ತಾಯಿಯು ಬಹಳೇ ನೊಂದುಕೊಂಡಳು. ಕಣ್ಬೇನೆಯಿಂದ ಕಸವಿಸಿ ಪಡುವ ಕಂದನನ್ನು ತಾಯಿ ತನ್ನ ತೊಡೆಯ ಮೇಲೆ ಮಲಗಿಸಿ-ಕೊಂಡಳು. ಕಂಣುಗಳನ್ನು ಹಸನಾಗಿ ತೊಳೆದಳು. ತಿಳಿದುಪ್ಪ ಹಾಕಿದಳು, ತನಗೆ ತಿಳಿದಷ್ಟು ಔಷಧೋಪಚಾರ ಮಾಡಿ ಗುಣವಾಗದಿರಲು ವೈದ್ಯರ ಕಡೆಯಿಂದಲೂ ಚಿಕಿತ್ಸೆಮಾಡಿಸಿದಳು. ಮಂತ್ರ, ಯಂತ್ರ, ಮದ್ದು, ಮಾಟ ಬಲ್ಲವರಿಂದ ಮಂತ್ರ ಹಾಕಿಸಿದಳು. ಯಂತ್ರ ಕಟ್ಟಿಸಿದಳು. ಮಗುವಿಗೆ ಒಳಿತಾಗಲೆಂದು ಕುಲದೇವರಿಗೂ. ಉಳಿದ ಹಲ ಕೆಲವು ದೇವರಿಗೂ ಹರಕೆಹೊತ್ತಳು. ಏನು ಮಾಡಿದರೂ ಮಗುವು ಕಣ್ದೆರೆದು ನೋಡಲಿಲ್ಲ. ಮಾತಾಡಲಿಲ್ಲ ತಾಯಿ ಚನ್ನಮ್ಮ ಮಗುವು ಕಣ್ಮುಚ್ಚಿ ನಿಶ್ಚೇಷ್ಟಿತವಾಗಿ ಮಲಗಿರುವುದನ್ನು ಕಂಡು ಎದೆಬಡಿದುಕೊಂಡು ಕಂಬನಿಗರೆಯ ಹತ್ತಿದಳು.

ವಿವೇಕಸಂಪನ್ನರೂ, ದೂರದರ್ಶಿಗಳೂ, ಆದರ್ಶ ಗೃಹಸ್ಥರೂ ಆದ ಶ್ರೀ. ಶಿ. ಮುರುಳಸಿದ್ಧಯ್ಯನವರು ಕಂಣೀರಿಡುವ ತಮ್ಮ ಧರ್ಮಪತ್ನಿಗೆ " ಶಿವಾನುಗ್ರಹದಿಂದ ನಮ್ಮ ಮಗುವಿಗೆ ಏನೂ ಆಗುವದಿಲ್ಲ. ಯಾಕೆ ದುಃಖ ಮಾಡುವಿ ಸುಮ್ಮನಿರು " ಎಂದು ಸಮಾಧಾನ ಹೇಳಿ "ಹುಟ್ಟಿದಾಗಿನಿಂದಲೂ ಜೇನೆ ಬೇಸರಿಕೆಯಿಲ್ಲದ ನಮ್ಮ ಮಗುವಿಗೆ ಒಮ್ಮಿಂದೊಮ್ಮೆ ಈ ಕಣ್ಬೇನೆ ಏಕೆ ಬಂದಿರಬಹುದು! ಇದೆಂತಹ ಕಣ್ಬೇನೆ ! ಸುಪ್ರಸಿದ್ಧ ಅನುಭವಿಕ ವೈದ್ಯರ ಔಷಧಕ್ಕೂ ಕಡಿಮೆಯಾಗಲೊಲ್ಲದು ! ! ! ಏನು ಸೋಜಿಗೆ ! ನನ್ನ ಮುದ್ದು ಮಹಾಂತೇಶ ! ನಿನ್ನ ಅಂಗೈರೇಖೆ, ಅಂಗುಲಿರೇಖೆ, ಅಂಗಾಲು ರೇಖೆ-ಗಳನ್ನು ನೋಡಿದ ವಿದ್ವಾಂಸರು ನೀನು ಆದರ್ಶ ಸದ್ಗುರುವೂ, ಮಹಾಮೇಧಾವಿಯೂ, ಲೋಕಪೂಜ್ಯನೂ ಆಗುವಿಯೆಂದು ಹೇಳಿರುವರು. ಇದಲ್ಲದೆ ಜ್ಯೋತಿಸ್ಕರು ಜನ್ಮ ಕುಂಡಲಿಯನ್ನು ಹಾಕಿ ಜಾತಕಫಲವನ್ನು ನೋಡಿ, ಅವರೂ ಸಹ ನೀನು ಮಹಾಕಾರಣಿಕ ಪುರುಷನೂ, ಧರ್ಮೋದ್ಧಾರಕನೂ ಆಗಿ ವಿಖ್ಯಾತನಾಗುವಿ ಎಂದು ಹೇಳಿರುವರು. ಇಂತಹ ಭವ್ಯ ಮಂಗಲಕಾರಕ ಭವಿಷ್ಯತ್ತುಳ್ಳ ನಿನಗೆ ಈ ದಾರುಣ ಪ್ರಸಂಗವೇಕೆ ಬಂದಿತು ?" ಎಂದು ಮನದಲ್ಲಿ ಮರಗುತ್ತ ಮುರುಳಸಿದ್ಧಯ್ಯನವರು ಮಗುವಿನ ಪೂರ್ವೇತಿಹಾಸವನ್ನು ಸ್ಮರಣ ಮಾಡುತ್ತ ವಿವಿಧ ವಿಚಾರತರಂಗಗಳಲ್ಲಿ ತೇಲುತ್ತಿದ್ದಾಗ ಮಹಾಂತೇಶನು ಹುಟ್ಟುವದಕ್ಕೆ ಮುಂಚೆ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಮನೆಗೆ ದಯಮಾಡಿಸಿದ್ದು, ಮತ್ತು ಶ್ರೀವಿಜಯಮಹಾಂತ ಶಿವಯೋಗಿಗಳವರ ಅನುಗ್ರಹ-ದಿಂದ ಮುಂದೆ ಹುಟ್ಟುವ ಗಂಡು ಮಗುವನ್ನು ನಮಗೆ ಕೊಡಬೇಕೆಂದು ಅಪ್ಪಣೆ ಮಾಡಿದ್ದು ನೆನಪಾಯಿತು ? ಮುರುಳಸಿದ್ಧಯ್ಯ " ಸಾಧ್ವಿ ಶ್ರೀಗಳಿಗೆ ಪುತ್ರನನ್ನು ಸಮ-ರ್ಪಿಸುವೆವೆಂದು ಹೇಳಿದ್ದೆವು ನೆನಪಿನಲ್ಲಿದೆಯೇ ! " ಎಂದರು

ಚನ್ನಮ್ಮ— ನೆನಪಿನಲ್ಲಿರುವದು

ಮುರುಳಸಿದ್ಧಯ್ಯನವರು— ಸಾಧ್ವಿಯೇ ಮಹಾತ್ಮರ ಆಶೀರ್ವಾದದಿಂದ ಹುಟ್ಟಿದ ಮಗುವನ್ನು ಅವರ ಪಾದಕ್ಕೆ ಸಲ್ಲಿಸುವೆವೆಂದು ಮಾತು ಕೊಟ್ಟು, ತಪ್ಪಿಸಿದ್ದ

ರಿಂದಲೇ ಈ ಕಣ್ಬೇನೆ ಬಂದಿದೆ, ವಚನ ಕೊಟ್ಟ ಪ್ರಕಾರ ಅವರ ವಸ್ತುವನ್ನು ಅವರಿಗೆ ಸಲ್ಲಿಸಿದರೆ ಒಳಿತಲ್ಲವೇ ?

ಚನ್ನಮ್ಮ—ನಿಜ ಆದರೆ ವಚನ ತಕ್ಕೊಂಡ ಹಾಸಗಲ್ಲ ಶ್ರೀಗಳವರು ಲಿಂಗೈಕ್ಯ ರಾಗಿರುವರು. ಮಗುವನ್ನು ಕೊಡಿರೆಂದು ಕೇಳುವವರಾರು ! ಮಕ್ಕಳಿದ್ದಷ್ಟು ಮನೆ ಅಂದ ಚಂದ ಕಾಣುವದು. ಮಾತು ಕೊಟ್ಟು ತಪ್ಪಿಸಿದ್ದಕ್ಕಾಗಿಯೇ ಈ ಬೇನೆ ಬಂದಿದೆ ಯೆಂದು ತಿಳಿದಿರುವಿರೇನು ? ದೇಹಕ್ಕೆ ರೋಗರುಜಿನಗಳು ಬಾರದೇ ಕಲ್ಮರಗಳಿಗೆ ಬರು ವವೇನು ? ಬೇನೆ ಹೋಗುವದು. ಸ್ವಲ್ಪ ಸಮಾಧಾನ ತಾಳಿರಿ. ಮುತ್ತಿನಂತಹ ಮಗುವನ್ನು ಕೊಡುವದು ಬೇಡ......ಹೀಗೆ ಇನ್ನು ಏನೇನೋ ಮಾತನಾಡಬೇಕೆಂದಿದ್ದ ಚನ್ನಮ್ಮನ ಕಣ್ಣಿಗೂ ಕತ್ತಲೆ ಬಂದಂತಾಗಿ ಕುರುಡರಂತೆ ಕುಳಿತಳು. ಈ ಅದ್ಭುತ ಘಟನೆಗಳನ್ನು ಕಂಡ ಮರುಳಸಿದ್ದಯ್ಯನವರು ವಿಸ್ಮಿತರಾದರು, ಪುತ್ರ ವ್ಯಾಮೋಹದ ರಭಸದಲ್ಲಿ ಗುರುಗಳಿಗೆ ಕೊಟ್ಟ ವಚನವನ್ನು ಉಲ್ಲಂಘಿಸಿ, ನುಡಿಯಲಾರದ ನುಡಿಗಳನ್ನು ನುಡಿಯುವ ಪ್ರಸಂಗದಲ್ಲಿಯೇ ಧರ್ಮಪತ್ನಿಯ ಕಣ್ಣುಗಳಿಗೆ ಕತ್ತಲು ಕವಿದಿದ್ದನ್ನು ತಿಳಿದು ದೂರದರ್ಶಿಗಳಾದ ಮರುಳಸಿದ್ದಯ್ಯನವರು ಈಗ ನಮಗೆ ಬಂದಿರುವ ಆಪತ್ಪ ರಂಪರೆಗಳಿಗೆಲ್ಲ ಗುರು ವಚನದ ಉಲ್ಲಂಘನವೇ ಮೂಲ ಕಾರಣವೆಂದು ನಿರ್ಧರಿಸಿದರು. ಅವರ ಅಪ್ಪಣೆಯಂತೆ ನಡೆದಾಗಲೇ ನಮಗೆ ಸುಖವು ದೊರೆಯುವದೆಂದು ನಂಬಿದರು.

ಮುಗುಳ್ನಗೆ, ತೊದಲ್ನುಡಿ, ಮುದ್ದುನೋಟ, ಆಟ, ಪಾಟಗಳಿಂದ ಎಲ್ಲರನ್ನು ತಣಿಸುವ ಮುದ್ದು ಮಹಾಂತೇಶನು ಕಣ್ಮುಚ್ಚಿ ಮಲಗಿದವನು ಏಳಲೇ ಇಲ್ಲ. ಒಂದೆಡೆ ಮುದ್ದು ಮಗು, ಮತ್ತೊಂದೆಡೆ ಮೋಹದ ಮಡದಿ, ಮರುಳಸಿದ್ದಯ್ಯ ದಿಙ್ಮೂಢ ರಾದರು. ಆದರೂ ಸ್ಥಿತಪ್ರಜ್ಞರೂ, ಗೃಹಸ್ಥಯೋಗಿಗಳೂ, ಬಹುಶ್ರುತರೂ, ಶಾಸ್ತ್ರ-ಜ್ಞರೂ ಆದುದರಿಂದ

ಯಾನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋಮುನೇಃ ॥

ಕೋಟಿ ಕೋಟಿ ಮಾನವರೆಲ್ಲರೂ ಸಂಸಾರ ನಾಟಕವನ್ನು ನೋಡಿ ನಲಿದಾಡಿದರೆ ಸಂಯ ಮಿಯಾದ ಯೋಗಿಯು ಅದನ್ನು ನೋಡದೇ ಕಣ್ಣು ಮುಚ್ಚುವನು. ಕೋಟಿ ಕೋಟಿ ಮಾನವರೆಲ್ಲರೂ ಪರಮಾರ್ಥ ನಾಟಕವನ್ನು ನೋಡಲು ಕುರುಡರಾದರೆ ಜ್ಞಾನಿಯು ಅದನ್ನು ಕಣ್ತುಂಬ ನೋಡಿ ನಲಿದಾಡುವನು, ಎಂಬ ಗೀತಾಭಿಪ್ರಾಯದಂತೆ ಮಹಾಂ ತೇಶನ ಪಾಡಾಗಿರಬಹುದೆಂದು ವಿಚಾರಿಸಿದರು. ಪೂಜ್ಯ ಶ್ರೀಗಳವರಿಗೆ ಮಾತು ಕೊಟ್ಟಂತೆ ಅವರ ವಸ್ತುವನ್ನು ಅವರಿಗೆ ಒಪ್ಪಿಸಿದಾಗಲೇ ನಮ್ಮ ಮನೆತನಕ್ಕೆ ಸುಖ ವಾಗುವದೆಂದು ನಿರ್ಧರಿಸಿದರು.

ಓ ವಿಜಯ ಮಹಾಂತೇಶ್ವರ, ಓ ಗುರುಕುಮಾರೇಶ್ವರ, ನಾವು ತಮಗೆ ವಚನ ಕೊಟ್ಟಂತೆ ಮುದ್ದು ಮಹಾಂತೇಶನನ್ನು ತಮ್ಮ ಪಾದಕ್ಕೆ ಸಮರ್ಪಿಸುವೆವು. ಮುದ್ದು ಮಗುವಿನ ಹಾಗು ಮಡದಿಯ ಕಣ್ಬೇನೆ ತಮ್ಮ ಅನುಗ್ರಹದಿಂದ ದೂರಾಗಬೇಕು.

ಅಜ್ಞಾನಿಗಳ ತಪ್ಪನ್ನು ಕ್ಷಮಿಸಿ ಉದ್ಧರಿಸಬೇಕು' ಎಂದು ಪ್ರಾರ್ಥಿಸಿ ಸಂಕಲ್ಪ ಮಾಡಿ ಪವಿತ್ರವಾದ ಭಸ್ಮವನ್ನು ತಂದು ಪತ್ನೀ ಪುತ್ರರ ಕಣ್ಣುಗಳಿಗೆ ಲೇಪಿಸಿದರು. ಸೂರ್ಯೋದಯದಿಂದ ಕಮಲಗಳು ಅರಳುವಂತೆ ಗುರ್ವನುಗ್ರಹದಿಂದ ಕೂಡಲೇ ಅವರ ಕಣ್ಣುಗಳು ಅರಳಿ ಕಂಗೊಳಿಸಹತ್ತಿದವು. ಅವರು ಆನಂದದಿಂದ ಎದ್ದು ಕುಳಿತರು.

ಆವಾವ ಮಂತ್ರ, ಯಂತ್ರ, ತಂತ್ರಗಳಿಂದಲೂ ಹೋಗಲಾರದ ಕಣ್ಬೇನೆಯು ಶ್ರೀ ಗುರುಗಳ ನಾಮಸ್ಮರಣದಿಂದಲೇ ಪರಿಹಾರವಾದುದನ್ನು ಪ್ರತ್ಯಕ್ಷ ಕಂಡು ಮರುಳಸಿದ್ದಯ್ಯನವರು ಗುರುಗಳ ಮಹಿಮೆಯನ್ನು ಹಾಡಿಹರಿಸಿದರು. ಶಿಶು ಮಹಾಂತೇಶನ ಬಗ್ಗೆ ಮೂಕವಿಸ್ಮಿತರಾದರು. ಈ ಬಾಲಕ ಮಹಾಂತೇಶನು ನಿಜವಾಗಿಯೂ ನಮಗೆ ದಕ್ಕುವವನಲ್ಲ. ನಮ್ಮ ಮನೆಯಲ್ಲಿ ಇರಲು ತಕ್ಕವನೂ ಅಲ್ಲ. ವಿಶಾಲವಾದ ನಭೋಮಂಡಲದಲ್ಲಿ ಬೆಳಗುವ ಭಾಸ್ಕರನನ್ನು ಭೂತಳದ ಒಂದು ಮನೆಯಲ್ಲಿ ಇರಿಸಲು ಬರುವದೇ ! ಕಾಮಿಸಿದವರಿಗೆ ಕಾಮಿತಾರ್ಥಗಳನ್ನು ಕೊಡುವ ಕಾಮಧೇನುವನ್ನು ದನಗಾಹಿಯು ಕೊಟ್ಟಿಗೆಯಲ್ಲಿ ಕಟ್ಟಲು ಬಂದೀತೇ ! ಏಕಛತ್ರಾಧಿಪತಿ, ಸಮ್ರಾಟ್ ಸಾರ್ವಭೌಮನ ರತ್ನಕಿರೀಟದಲ್ಲಿ ರಾರಾಜಿಸುವ ರತ್ನವನ್ನು ಕಾಜು ಮಾರುವ ಅಂಗಡಿಯಲ್ಲಿ ಇಡಲು ಬರುವದೇ!

ವೀರಶೈವಾಚಾರ ಸಂಪನ್ನರಾದ ಆ ದಂಪತಿಗಳು ಮುದ್ದು ಮಹಾಂತೇಶನನ್ನು ಶಿವಯೋಗಮಂದಿರಕ್ಕೆ ಸಲ್ಲಿಸಬೇಕೆಂದು ಸಂಕಲ್ಪಿಸಿ ಒಂದು ಶುಭಮುಹೂರ್ತದಲ್ಲಿ ಮಂದಿರದ ಪ್ರವಾಸ ಕೈಕೊಂಡರು.

ಶ್ರೀ ಕುಮಾರೇಶ್ವರ ಕರ್ತೃಗದ್ದಿಗೆಯ ಮುಂಭಾಗದಲ್ಲಿರುವ ಭವ್ಯವಾದ ಶಿವಾನುಭವಮಂಟಪದಲ್ಲಿ ಲಿಂಗಪೂಜಾನಿಷ್ಠರೂ, ಯೋಗಸಂಸ್ಥೆಯ ಅಧ್ಯಕ್ಷರೂ ಆದ ಶ್ರೀ. ಮ. ನಿ. ಪ್ರ. ಶಿವಬಸವ ಮಹಾಸ್ವಾಮಿಗಳವರು ಹಾವೇರಿ ಇವರು ಮುಹೂರ್ತ ಮಾಡಿದ್ದರು. ಅವರ ಸನ್ನಿಧಿಯಲ್ಲಿ ಶ್ರೀ. ಮ. ನಿ. ಪ್ರ. ಬಸವಲಿಂಗಸ್ವಾಮಿಗಳು ನವಿಲುಗುಂದ ಇವರೂ ಶಿವಯೋಗ ಸಾಧಕರೂ, ವಟುಗಳೂ ಜಿಜ್ಞಾಸುಮುಮುಕ್ಷುಗಳೂ ಭಕ್ತಭಾವದಿಂದ ಕುಳಿತು ಶಿವಾನುಭವ ಶಾಸ್ತ್ರವನ್ನು ಕೇಳುತ್ತಿದ್ದರು.

ಸಸಿವಾಳದಿಂದ ಬಂದ ಆ ಪುಣ್ಯ ದಂಪತಿಗಳು ಮಲಾಪಹಾರಿಣೀ ನದಿಯಲ್ಲಿ ಮಿಂದು ಬಿಲ್ವವೃಕ್ಷದ ವನಕ್ಕೆ ಬಂದು ಲಿಂಗಪೂಜೆಯನ್ನು ಮುಗಿಸಿಕೊಂಡು ಕರ್ತೃಗದ್ದುಗೆಯ ಮುಂದಿನ ಅನುಭವ ಮಂಟಪದಲ್ಲಿ ಒಪ್ಪುತ್ತಿದ್ದ ಹಾವೇರಿ ಮಹಾಸ್ವಾಮಿಗಳವರ ಸನ್ನಿಧಿಗೆ ಬಂದು ಸಾಷ್ಟಾಂಗಪ್ರಣಾಮ ಮಾಡಿ ಕುಳಿತರು.

**ಹಾವೇರಿ ಶ್ರೀಗಳು**–ಯಜಮಾನರೇ ನಿಮ್ಮ ಊರು ಯಾವುದು ?

**ಮರುಳಸಿದ್ಧಯ್ಯನವರು**–ನಮ್ಮ ಊರು ಮೈಸೂರು ಪ್ರಾಂತದಲ್ಲಿರುವ ಸಸಿವಾಳ.

**ಹಾ**–ಈ ಮುದ್ದು ಬಾಲಕನು ಯಾರು ? ಈತನ ಹೆಸರೇನು ?

**ಮ**– ಈತನು ಶ್ರೀ ವಿಜಯಮಹಾಂತೇಶ್ವರರ ಹಾಗು ಹಾನಗಲ್ಲ ಕುಮಾರಸ್ವಾಮಿಗಳವರ ಆಶೀರ್ವಾದ ಪ್ರಭಾವದಿಂದ ಹುಟ್ಟಿದ ನಮ್ಮ ಸತ್ಪುತ್ರನು, ಈ ಪುತ್ರನ ಹೆಸರು ಮಹಾಂತೇಶ.

**ಹಾ**– ಇಲ್ಲಿಗೆ ಕರೆದುಕೊಂಡು ಬಂದ ಕಾರಣವೇನು ?

**ವು**– ಪೂಜ್ಯ ಪಾದರೇ ಈ ಪೂರ್ವದಲ್ಲಿ ಹಾನಗಲ್ಲ ಶ್ರೀಗಳವರು ನಮ್ಮ ಮನೆಗೆ ದಯಮಾಡಿಸಿದಾಗ ಶ್ರೀ ವಿಜಯಮಹಾಂತೇಶ್ವರರ ಪ್ರಸಾದದಿಂದ ನಿಮ ಗೋರ್ವ ಸತ್ಪುತ್ರನು ಹುಟ್ಟುವನು. ಅವನಿಗೆ ಮಹಾಂತೇಶ ಎಂದು ಹೆಸರ ನ್ನಿಡಿರಿ. ನಾಲ್ಕು ವರ್ಷ ತುಂಬಿದ ನಂತರ ಆ ಮಗುವನ್ನು ನಮಗೆ ಸಲ್ಲಿಸಬೇ ಕೆಂದು ಅಪ್ಪಣೆ ಮಾಡಿದ್ದರು. ಅವರ ಅಪ್ಪಣೆಯ ಪ್ರಕಾರ ಮಗುವನ್ನು ತಮ್ಮ ಪಾದಕ್ಕೆ ಸಲ್ಲಿಸಲು ಬಂದಿದ್ದೇವೆ.

ಉಪನಿಷತ್ಕಾಲದ ನಚಿಕೇತ ಆರುಣಿಯಂತಹ, ಪೌರಾಣಿಕ ಕಾಲದ ಧ್ರುವಪ್ರಹ್ಲಾ ದರಂತೆ ಕಾಣುವ, ಸರ್ವ ಲಕ್ಷಣ ಸಂಪನ್ನನೂ ಸುಂದರನೂ, ಸುಮುಖನೂ, ಸುಗುಣಿಯೂ ಆದ ಆ ಬಾಲಕನನ್ನು ಕಂಡು ಸಂತೋಷಭರಿತರಾದ ಹಾವೇರಿ ಶ್ರೀಗಳವರು ಆ ತರ ಳನ ಮೇಲೆ ಕೈಯಾಡಿಸಿ ಅವನ ಪ್ರಶಾಂತವಾದ ಮುಖಮುದ್ರೆಯನ್ನು ಕಂಡು ಆನಂದ ಪರವಶರಾದರು. ಇಲಕಲ್ಲ ವಿಜಯಮಹಾಂತೇಶ್ವರರ ಸದ್ವಂಶಸುಧಾಂಬುಧಿಯಲ್ಲಿ ಹುಟ್ಟಿದ ಈ ರತ್ನ ದೊರೆತದ್ದು ಬಡವನಿಗೆ ಕಡವರ ದೊರೆತಂತಾಯಿತು. ಗುರುವಿ ನಲ್ಲಿ ಭಕ್ತಿಯುಳ್ಳ ಆ ದಂಪತಿಗಳು ಮರುದಿನ ಮಂಗಲಾಶೀರ್ವಾದ ಪಡೆದು ಸ್ವಗ್ರಾ– ಮಕ್ಕೆ ತೆರಳಿದರು.

ಬಂಧುಬಾಂಧವರ ಬಳಗದಲ್ಲಿದ್ದ ಮಹಾಂತೇಶನು ಈ ಶಿವಯೋಗಿಗಳವರ ಸಂಘದಲ್ಲಿದ್ದು ವಟು ಮಹಾಂತಾರ್ಯರಾದರು, "ಜಗದ ಮಧ್ಯದಲ್ಲಿ ಶರಣ ಜನಿಸಿ ದಡೇನು ಆ ಜಗದ ಸ್ವರೂಪನೆ ಅಲ್ಲಲ್ಲ. ಅದೇನು ಕಾರಣವೆಂದಡೆ ಕೋಗಿಲೆಯ ತತ್ತಿ ಯನೊಡೆದು ಕಾಗೆ ಮರಿಯ ಮಾಡಿ ಸಲಹಿದಡೇನು ಅದು ತನ್ನ ಕೋಗಿಲೆಯ ಹಿಂಡ ಕೂಡುವದಲ್ಲದೆ ಮರಳಿ ಕಾಗೆಯ ಹಿಂಡು ಬೆರೆವುದೆ ಹೇಳಾ ? ಲೋಕದ ಮಧ್ಯದಲ್ಲಿ ಅನಾದಿ ಶರಣನು ಜನಿಸಿ ತನ್ನ ಮುನ್ನಿನ ಶಿವತತ್ವವನೆ ಬೆರೆವನಲ್ಲದೆ ಮರಳಿ ಲೋಕವ ಬೆರೆಯನು ಅಖಂಡೇಶ್ವರಾ ಎಂಬ ಷಣ್ಮುಖಸ್ವಾಮಿಗಳ ವಚನದಂತೆ ಈಗ ಮಹಾಂತನು ನಿಜವಾಗಿ ಶಿವಯೋಗಿಗಳ ಸಂಘದಲ್ಲಿ ಸೇರಿ ಮಹಾಂತರಾದರು. ಬಿಳಿಯ ಕಫನಿಯನ್ನು ತೊಟ್ಟು, ಶುಭ್ರವಾದ ಟೊಪ್ಪಿಗೆಯನ್ನು ತಲೆಯ ಮೇಲಿಟ್ಟು, ಪಾದಗಳಲ್ಲಿ ಪಾದುಕೆ ಮೆಟ್ಟಿದ ವಟು ಮಹಾಂತಾರ್ಯರು ಹಿಮಾಲಯದಲ್ಲಿ ತಪಸ್ಸಿಗೆ ಕುಳಿತ ಗಿರಿಜೆಯ ಸತ್ವಪರೀಕ್ಷೆಗಾಗಿ, ವಟುವೇಷವನ್ನು ತಾಳಿ ಬಂದ ಶಿವನಂತೆ ಒಪ್ಪುತ್ತಿದ್ದರು.

ವಿಜಯಮಹಾಂತಾರ್ಯರು ಶಿವಯೋಗಮಂದಿರದ ಪ್ರಾಥಮಿಕ ಶಾಲೆಯ ಶಿಕ್ಷಕ ರಾದ ಶ್ರೀ ಶಿವಬಸಪ್ಪ ಮಾಗಿ ಮತ್ತು ಬಸಪ್ಪ ಮಾಸ್ತರರು ಅಂಗಡಿ ಇವರ ಬಳಿ– ಯಲ್ಲಿ ಒಂದನೇಯ ಇಯತ್ತೆಯಿಂದ ೭ನೇ ಇಯತ್ತೆಯ ವರೆಗೆ ಓದಿ ಪ್ರತಿ ವರ್ಷವೂ ಉತ್ತೀರ್ಣರಾದರು. ಶಿಕ್ಷಕರು ಹೇಳಿದ ಗಣಿತ ಬಿಡಿಸಿ, ಕವಿತೆಗಳನ್ನು ಕಂಠಪಾಠ ಮಾಡಿ ಬರೆಯತಕ್ಕದ್ದನ್ನೆಲ್ಲ ಬರೆದು, ವಾಚನ ಒಳಿತಾಗಿ ಓದಿ ಎಲ್ಲ ವಟುಗಳಿಗಿಂತಲೂ ಮುಂಚಿ ತವಾಗಿಯೇ ಶಾಲೆಗೆ ಬಂದು ತಮ್ಮ ಸ್ಥಾನದಲ್ಲಿ ಕುಳಿತು ಬಿಡುತ್ತಿದ್ದರು. ವಟು ಮಹಾಂ

ತಾರ್ಯರ ಪಟುಮತಿ, ಸತತ ಪರಿಶ್ರಮ. ಅಸ್ಖಲಿತವಾಣಿ, ಪ್ರತಿಭಾ ಪೂರ್ಣವಾದ ಲೇಖನ. ಯಮನ, ಶಾಂತಸ್ವಭಾವ ಮುಂತಾದವುಗಳನ್ನು ಕಂಡು ಇವರು ಮಹಾಪುರುಷರಾಗುವರೆಂದು ತರ್ಕ ಮಾಡುತ್ತಿದ್ದರು.

ಕನ್ನಡವನ್ನು ಮುಗಿಸಿದ ನಂತರ ಮುಂದೆ ಕಾಶಿಗೆ ಹೋಗಿ ಸಂಸ್ಕೃತ ಅಧ್ಯಯನ ಮಾಡಿ ಕಾವ್ಯತೀರ್ಥ, ಸಾಹಿತ್ಯರತ್ನ, ವೇದಾಂತಾಚಾರ್ಯ ಮೊದಲಾದ ಉಚ್ಚ ಪದವಿಗಳನ್ನು ದೊರಕಿಸಿದರು.

ವಟು ಮಹಾಂತಾರ್ಯರಿಗೆ ಪುರಾಣ ಕೇಳುವದೆಂದರೆ ಬಲು ಸಂತೋಷ. ಮಾರ್ಕಂಡೇಯ, ಸಾನಂದ ಮುನಿ, ಪ್ರಭುದೇವ, ಶ್ರೀ ಬಸವೇಶ್ವರ ಮುಂತಾದ ಮಹಿಮರ ಕಥೆ ಕೇಳಿ ಬಂದು ಸಮಯ ದೊರೆತಾಗ ತನ್ನ ಓರಗೆಯ ವಟುಗಳಿಗೆ ಮತ್ತೊಮ್ಮೆ ಹೇಳುತ್ತ "ನಾವೂ ಮಾರ್ಕಂಡೇಯನಂತೆ ಶಿವನ ಪೂಜೆ ಮಾಡಬೇಕು. ಸಾನಂದ ಯೋಗಿಯಂತೆ ಶಿವಮಂತ್ರ ಜಪಿಸಬೇಕು. ಪ್ರಭುದೇವರಂತೆ ವಿರತಿ ಸಂಪನ್ನರಾಗಿ ವೀರವಿರಕ್ತರಾಗಬೇಕು. ಶ್ರೀ ಬಸವೇಶ್ವರರಂತೆ ಸಮಾಜೋದ್ಧಾರ, ಧರ್ಮೋದ್ಧಾರ ಕಾರ್ಯ ಮಾಡಬೇಕು. ಕೇಳುವದಷ್ಟೇ ನಮ್ಮ ಕೆಲಸವಲ್ಲ. ಅದರಂತೆ ಆಚರಿಸಿದಾಗಲೇ ಕೇಳಿದ್ದು ಸಾರ್ಥಕವಾಗುವದು." ಎಂದು ತಿಳಿಸುತ್ತಿದ್ದರು.

ಅನೇಕ ಮಹಾಪುರುಷರು ಚಿಕ್ಕಂದಿನಲ್ಲಿಯೇ ಮಹಾ ಮೇಧಾವಿಗಳೂ, ಪರಮ ಭಗವದ್ಭಕ್ತರೂ ಆಗಿ ಹೋಗಿದ್ದಾರೆ.

ಶ್ರೀ ಬಸವೇಶ್ವರರು ಬಾಲ್ಯದಲ್ಲಿಯೇ ಬಂಧುಬಾಂಧವರನ್ನು ತೊರೆದು ಉಪನಯನ ಸಂಸ್ಕಾರವನ್ನು ಧಿಕ್ಕರಿಸಿ ಬಾಗೇವಾಡಿಯಿಂದ ಸಂಗಮ ಕ್ಷೇತ್ರಕ್ಕೆ ಬಂದು ಸಂಗಮೇಶನ ಅನುಗ್ರಹ ಪಡೆದರು.

ಮಹಾರಾಷ್ಟ್ರದ ರಾಮದಾಸರು ಒಂಬತ್ತು ವರ್ಷದವರಿರುವಾಗಲೇ ಮಾರುತಿಯ ಮಂದಿರಕ್ಕೆ ಹೋಗಿ ಹನ್ನೊಂದು ದಿನಗಳ ವರೆಗೆ ವಾಯುಪುತ್ರನ ಧ್ಯಾನಮಾಡಿ ಅವನನ್ನು ಪ್ರಸನ್ನ ಮಾಡಿಕೊಂಡರಂತೆ. ನಾಮದೇವನು ಶೈಶವಾವಸ್ಥೆಯಲ್ಲಿಯೇ ವಿಠ್ಠಲನಿಗೆ ಹಾಲು ಕುಡಿಸಿದನಂತೆ. ಮಾನವಕೋಟಿಗೆ ಭವಿಷ್ಯವಾಣಿಯಿಂದ ದಿವ್ಯಸಂದೇಶವನ್ನು ನೀಡಿದ ಪಾಂಡೀಚೇರಿಯ ಪೂರ್ಣಯೋಗಿ ಅರವಿಂದ ಘೋಷರು ಏಳು ವರ್ಷದವರಿದ್ದಾಗಲೇ ಶಿಕ್ಷಣ ಪಡೆಯಲು ಪರದೇಶಕ್ಕೆ ಹೋದರೆಂದು ಅವರ ಇತಿಹಾಸದಿಂದ ತಿಳಿದು ಬರುವದು. ಪಾಶ್ಚಾತ್ಯರಾಷ್ಟ್ರಗಳಲ್ಲಿ ಹಿಂದೂಧರ್ಮಧ್ವಜವನ್ನು ಹಾರಾಡಿಸಿದ ಶ್ರೀ ಸ್ವಾಮಿ ವಿವೇಕಾನಂದರು ಬಾಲ್ಯದಲ್ಲಿ ಧ್ಯಾನಮಾಡುತ್ತ ಬಾಹ್ಯಪ್ರಪಂಚವನ್ನು ಮರೆಯುತ್ತಿದ್ದಾರೆಂದು ತಿಳಿದುಬರುವದು.

ವಟು ಮಹಾಂತಾರ್ಯರು ಪ್ರಾತಃಕಾಲದಲ್ಲಿ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಬಂದು, ಪೂರ್ವಮುಖವಾಗಿ ಕುಳಿತು ಲಿಂಗಮೂರ್ತಿಗೆ ನಮಸ್ಕಾರ ಮಾಡಿ ಪ್ರಾರ್ಥನಾ ಮಂದಿರಕ್ಕೆ ಹೋಗಿ ವಟುಗಳ ಕೂಡ ಭಜನೆ ಮಾಡುತ್ತಿದ್ದರು. ನಂತರ ನಿಯೋಜಿತ ಅಭ್ಯಾಸವನ್ನೆಲ್ಲ ಸಾಂಗವಾಗಿ ಓದಿ ಆಗಮನ ಸೂಚಕ ಗಂಟೆಬಾರಿಸಿದಾ

ಕ್ಷಣ ಯೋಗಮಂದಿರಕ್ಕೆ ಹೋಗುತ್ತಿದ್ದರು. ಸಿದ್ಧಾಸನ, ಮಯೂರಾಸನ, ಕಂದಪೀಡಾಸನ ಮೊದಲಾದ ಕಠಿಣ ಆಸನಗಳನ್ನು ಸಹ ಅತಿ ಸುಲಭವಾಗಿಯೇ ಹಾಕುತ್ತಿದ್ದರು. ಆಸನ, ಪ್ರಾಣಾಯಾಮ, ದೃಷ್ಟಿಯೋಗ, ಷಟ್ಕರ್ಮ ಮೊದಲಾದ ಯೌಗಿಕ ಸಾಧನಗಳನ್ನು ಶಾಸ್ತ್ರೋಕ್ತ ರೀತಿಯಿಂದ ಕಲಿಸುವ ಪ್ರಾಧ್ಯಾಪಕರಾದ ಬಿದರೆ ಪಟ್ಟಾಧ್ಯಕ್ಷರು ಮಹಾಂತಾರ್ಯರ ಆಸನ ನೈಪುಣ್ಯ, ನಾಸಾಗ್ರದೃಷ್ಟಿ, ಜಿಹ್ವಾಗ್ರಬಂಧನ ಮೊದಲಾದವುಗಳನ್ನು ನೋಡಿ ಇವರು ರಾಜಯೋಗೀಂದ್ರನಾಗುವರೆಂದು ಹೇಳುತ್ತಿದ್ದರು,

ಆಸನಾದಿಗಳನ್ನು ಮುಗಿಸಿ ಸ್ನಾನಮಾಡಿ, ತನ್ನ ಕಂಬಲಾಸನದಲ್ಲಿ ಕುಳಿತು ವಿಭೂತಿಯನ್ನುಧರಿಸಿ ಶ್ರೀಗುರುಗಳು ಉಪದೇಶಿಸಿದ ಶಿವಪಂಚಾಕ್ಷರಿಯ ಮಂತ್ರವನ್ನು ಜಪಿಸುತ್ತಿದ್ದರು. ಕೊನೆಗೆ ಮಂಗಳಾರತಿ ಮಾಡಿ ಪೂಜೆ ಮುಗಿದ ನಂತರ ಊಟ ಮಾಡಿ ಮತ್ತೆ ಅಧ್ಯಯನ ಪ್ರಾರಂಭಿಸುತ್ತಿದ್ದರು.

ವಟು ಮಹಾಂತಾರ್ಯರು ಮಿಥ್ಯಾಭಾಷಣ, ಅನ್ಯರದೂಷಣ. ವೃಥಾ ಕಾಲಹರಣ ಮುಂತಾದವುಗಳ ಕಡೆಗೆ ವಟುಜೀವನದಲ್ಲಿಯೂ ಸಹ ಮನಸ್ಸು ಕೊಡಲಿಲ್ಲ. ಹರಪೂಜೆ ಗುರುಸೇವೆ ಬಿಡಲಿಲ್ಲ. "ಪ್ರತಿಪತ್ ಪಾಠನಾಶನಂ" ! ಸಂಸ್ಕೃತ ಅಧ್ಯಯನ ಮಾಡುವ ನಾವು ಪ್ರತಿಪದೆಯ ದಿನ ಪಾಠಪ್ರವಚನಗಳಿಲ್ಲದೆ ಇರುತ್ತಿದ್ದೆವು. ಆ ಬಿಡುವಿನಲ್ಲಿ ಕೆಲವು ಶಿವಯೋಗಸಾಧಕರೂ, ವಟುಗಳೂ ಕೂಡಿಕೊಂಡು ಮಧ್ಯಾಹ್ನದ ಬಿಸಿಲಲ್ಲಿ ನದಿಯಲ್ಲಿ ಈಜಬೇಕೆಂದು ಮೇಲ್ಮಠಕ್ಕೆ ಹೋಗುತ್ತಿದ್ದೆವು. ಆಗ ವಟು ಮಹಾಂತಾರ್ಯರನ್ನು ಕರೆದರೆ ನದಿಯಲ್ಲಿ ಈಜಿ ಹೊತ್ತುಗಳೆಯಲಾರೆ. ಶಿಕ್ಷಕರು ಹೇಳಿದ ಅಭ್ಯಾಸ ಬಹಳ ಇದೆ. ಬರುವದಿಲ್ಲ ಎಂದು ಹೇಳಿ ತಮ್ಮ ಓದುಮನೆಯಲ್ಲಿಯೆ ಓದುತ್ತ ಕೂಡ್ರುತ್ತಿದ್ದರು.

ಮಲಪ್ರಭಾ ನದಿಯ ಆಚೆಯ ಬೆಟ್ಟದಲ್ಲಿ ಬೆಳೆದಿರುವ ಬೆಟ್ಟದಾವರೆಯ ಹೂಗಳನ್ನು ಶ್ರೀ ಕುಮಾರೇಶ್ವರ ಕರ್ತೃಗದ್ದುಗೆಯ ಪೂಜೆಗಾಗಿ ತರುವ ಸರತಿಯು ನಮ್ಮೆಲ್ಲರಿಗೂ ಬರುತ್ತಿತ್ತು. ಕೆಲ ಕೆಲವರು ಸೋಮಾರಿತನದಿಂದಲೋ, ಮನವಿಲ್ಲದ್ದರಿಂದಲೋ ತಪ್ಪಿಸಿ ಬಿಡುತ್ತಿದ್ದರು. "ಅರಿದು ಕಿರಿಯರಾದರೂ ಅವರೇ ಜಗದಲ್ಲಿ ಹಿರಿಯರು" ಎಂಬ ಸರ್ಪಭೂಷಣರ ಉಕ್ತಿಯಂತೆ ಕಿರಿಯರಾದರೂ ಅರಿವಿನಿಂದ ಹಿರಿಯರಾದವರು ಮಹಾಂತಾರ್ಯರು ತಮ್ಮ ಸರತಿಯಲ್ಲಿ ಅಷ್ಟೇ ಅಲ್ಲ ಎರಡನೆಯವರು ತಪ್ಪಿಸಿದ ದಿನಗಳಲ್ಲಿಯೂ ಸಹ ತಾವೇ ಬೆಟ್ಟಕ್ಕೆ ಹೋಗಿ ಹೂಗಳನ್ನು ತಂದು ಭಕ್ತಿಯಿಂದ ಶ್ರೀ ಕುಮಾರೇಶ್ವರ ಕರ್ತೃಗದ್ದುಗೆಯ ಪೂಜೆ ಮಾಡುತ್ತಿದ್ದರು.

ಹಾನಗಲ್ಲ ಶ್ರೀಗಳವರಲ್ಲಿ ಅಪಾರ ಶ್ರದ್ಧೆಯುಳ್ಳ ಅನೇಕ ಗ್ರಾಮಗಳ ತಾಯ್ತಂದೆಗಳು ತಮ್ಮ ಮುದ್ದು ಮಕ್ಕಳನ್ನು ದೂರದೇಶದಿಂದ ಕರೆದುಕೊಂಡು ಬಂದು ಶ್ರೀಗಳವರ ಪಾದಕ್ಕೆ ಒಪ್ಪಿಸುತ್ತಿದ್ದರು. ಶ್ರೀಗಳವರು ಆ ಮಕ್ಕಳನ್ನು ಹಡೆದವರಿಗಿಂತಲೂ ಹೆಚ್ಚು ಅಕ್ಕರತೆಯಿಂದ ಜೋಪಾನ ಮಾಡುತ್ತಿದ್ದರು. ಆದರೆ ಶ್ರೀಗಳವರು ಸಮಾಜಕಾರ್ಯಕ್ಕಾಗಿ ದೇಶ ಸಂಚಾರ ಕೈಕೊಂಡಾಗ ಅಲ್ಲಿಯ ವ್ಯವಸ್ಥಾಪಕರು ಅನಿ

ವಾರ್ಯವಾಗಿ ಕೆಲವು ವ್ಯತ್ಯಾಸ ಮಾಡಬೇಕಾಗುತ್ತಿತ್ತು. ನಿರ್ಜನ ಪ್ರದೇಶ. ಅರಣ್ಯ ಮಧ್ಯ ವಾಸ. ಬಳಿಯಲ್ಲಿ ಆವ ದೊಡ್ಡ ನಗರಗಳೂ ಇಲ್ಲ. ತಜ್ಞ ಡಾಕ್ಟರುಗಳು ಸಕಾಲಕ್ಕೆ ಬರುವಂತಿಲ್ಲ. ಬಂದರೆ ಕುಟಗನಕೇರಿ ಮುನಿಯಪ್ಪನೆಂಬ ದೇಶೀ ವೈದ್ಯನೇ ಬರಬೇಕು. ಬಂದು ನಾಡಿ ಪರೀಕ್ಷೆಮಾಡಿ ಕಷಾಯ ಹೇಳಿ ಹೋಗುತ್ತಿದ್ದನು. ಗಿಡಮೂಲಿಕೆ ತರುವರಾರು ! ತಂದು ಕುದಿಸುವರಾರು ! ಕುದಿಸಿ ಕುಡಿಸಿ ಹೊಚ್ಚಿ ಮಲಗಿಸುವರಾರು ! ರೋಗಿಗೆ ಔಷಧಕ್ಕಿಂತಲೂ ಆರೈಕೆ ಹೆಚ್ಚಿನದಲ್ಲವೇ !

ಮಹಾಂತಾರ್ಯರ ಸಮಕಾಲೀನರಾದ ವಟುಗಳೆಂದರೆ ಸೋಮಶೇಖರಾರ್ಯ, ಅಮರಾರ್ಯ, ಘನಲಿಂಗದೇವ ಮುಂತಾದವರು. ಈ ವಟುಗಳಲ್ಲಿ ಸೋಮಶೇಖ ರಾರ್ಯರು ಬಹಳ ಅಶಕ್ತರು. ಮೇಲಿಂದಮೇಲೆ ಮೇಲ್ಮಠದ ದೊಡ್ಡಮನೆಯಲ್ಲಿರುವ ಪಡಸಾಲೆಯಲ್ಲಿ ಅಜಾರಿಯಿಂದ ಮಲಗುತ್ತಿದ್ದರು. ವಟು ಮಹಾಂತಾರ್ಯರು ಸಹಪಾಠಿಗಳಾದ ಸೋಮಶೇಖರಾರ್ಯರ ಬಳಿ ಕುಳಿತು ತಲೆಯನ್ನು ಒತ್ತುತ್ತಿದ್ದರು, ಹಾಗು ವೈದ್ಯರು ಹೇಳಿದ ಔಷಧ ಕೊಡುತ್ತಿದ್ದರು. ಗೆಳೆಯನು ರೋಗಬಾಧೆ ತಾಳದೆ. ಸಂಕಟಪಡಹತ್ತಿದರೆ "ಶ್ರೀಗುರು ಕುಮಾರೇಶ ಶ್ರೀಗುರು ಕುಮಾರೇಶ ನಿನ್ನ ಅನುಗ್ರಹದಿಂದ ನನ್ನ ಗೆಳೆಯನಿಗೆ ಜಾಗ್ರತೆ ಗುಣವಾಗಲಿ" ಎಂದು ಕೈಮುಗಿದು ಬೇಡಿಕೊಳ್ಳುತ್ತಿದ್ದನು. ವಟು ಮಹಾಂತಾರ್ಯರ ಹೃದಯವು ಇಷ್ಟು ಕೋಮಲ ವಾಗಿತ್ತು. ವಟು ಮಹಾಂತಾರ್ಯರು ಅಭ್ಯಾಸ ಪಟು, ಲೇಖನ ಪಟು, ವಾಕ್ಪಟು ಕವಿತಾಪಟು, ಆಸನಪಟು ಆಗಿ, ಎಲ್ಲರಿಗಿಂತಲೂ ಮೇಲೆನಿಸಿ ಪಾರಿತೋಷಕ ಪಡೆಯುತ್ತಿದ್ದರು.

ಶ್ರೀ ವಿಜಯಮಹಾಂತಶಿವಯೋಗಿಗಳವರ ಕರುಣಾರಸವೆಂಬ ಮೊಲೆ ಹಾಲ-ನ್ನುಂಡು, ಶ್ರೀ ಹಾನಗಲ್ಲ ಶ್ರೀಗಳವರ ಸಂಸ್ಥೆಯೆಂಬ ಹೊಂದೊಟ್ಟಿಲಲ್ಲಿ ಮಲಗಿ ಹಾವೇರಿ ಮಹಾಸ್ವಾಮಿಗಳವರ ಸದುಪದೇಶವೆಂಬ ಜೋಗುಳ ಹಾಡು ಕೇಳಿ ಶಮದ ಮಾದಿ ಸದ್ಗುಣಗಳೆಂಬ ಆಭರಣಗಳಿಂದ ಅಲಂಕೃತವಾದ ವಟು ಮಹಾಂತಾರ್ಯರು ಮಹಾ ವಟವೃಕ್ಷದಂತೆ ಬೃಹದ್ರೂಪ ತಾಳಿ ಈಗ ಜಗದ್ಗುರು ಗಂಗಾಧರ ರಾಜ ಯೋಗೀಂದ್ರಮಹಾಸ್ವಾಮಿಗಳವರೆಂದು ದೇಶದಲ್ಲಿ ಪ್ರಖ್ಯಾತ ಮಹಾಪುರುಷರಾಗಿ ಮೆರೆದಾಡುತ್ತಿದ್ದಾರೆ.

ಭವಿಷ್ಯತ್ಕಾಲದ ದಿವ್ಯ ವಿಭೂತಿ ಜಗದ್ಗುರು ಗಂಗಾಧರರಾಜಯೋಗೀಂದ್ರ ಮಹಾಸ್ವಾಮಿಗಳವರನ್ನು ರೂಪಿಸಿ ಕೊಟ್ಟ ಭೂತಕಾಲದ ವಟು ಮಹಾಂತಾರ್ಯರಿಗೆ. ವಿಜಯವಾಗಲಿ. □

# ವಿಜಯಮಹಾಂತ ದೇವರು—ಅಂದು, ಇಂದು....

ಶ್ರೀ ನಿ.ಪ್ರ. ಮಹಾಂತ ಸ್ವಾಮಿಗಳು, ಚಿತ್ತರಗಿ, ಇಲಕಲ್ಲ.

ಆಗ ನಾನಿನ್ನೂ ಪುಟ್ಟ ವಟು. ನನಗಾಗ ಹದಿನೈದು ವಯಸ್ಸು. ಹಿಂಡನಗಲಿದ ಕರುವಿನಂತೆ ಶಿವಯೋಗಮಂದಿರ ಸೇರಿದೆ. ಮಂದಿರದ ಸಾಧಕರು ಆಗಂತುಕನಾದ ನನ್ನ ಮೇಲೆ ವಾತ್ಸಲ್ಯವನ್ನಾಗಲೀ ಆತ್ಮೀಯತೆಯನ್ನಾಗಲೀ ಅದೇಕೋ ತೋರಲೇ ಇಲ್ಲ. ಹೀಗಾಗಿ ಎದೆಯೊಡೆದು ಕಂಗೆಡಬೇಕಾದ ಕರುಣಾಜನಕ ಸ್ಥಿತಿ ಬಂದಾಗ, ನನ್ನ ಮೇಲೆ ತಾಯ ವಾತ್ಸಲ್ಯದ ಅಮೃತ ಆಲಿಂಗನವನ್ನು ನೆನಪಿಗೆ ತಂದುಕೊಡುವ ಮುಗ್ಧ ಮಧುರವಾದ ವಾತ್ಸಲ್ಯದೃಷ್ಟಿಯೊಂದು ಅಕ್ಕರತೆಯ ಮಳೆಗರೆಯಿತು. ಆ ತಾಯಿಯೇ ವಿಜಯ ಮಹಾಂತದೇವರು. ಅವರ ಹೆಸರೂ ಸುಂದರ. ದೈಹಿಕ ಮೈಕಟ್ಟು ಅಪೂರ್ವ ಆಕರ್ಷಕ. ಜೊತೆಗೆ ಅಂತರಂಗದ ಪ್ರೇಮದೃಷ್ಟಿ ಆಹ್ಲಾದಕರ. ಸಂಪಿಗೆಯ ಎಸಳು ಬಿರಿದಂತೆ ಸದಾಕಾಲ ಮುಗ್ಧಮಧುರ ಮಂದಹಾಸವೊಂದು ಅವರ ತುಟಿಯ ಮೇಲೆ ಕುಣಿದಾಡುತ್ತಿತ್ತು. ಆ ನಗೆಯೇ ನನಗೆ ವಿರಕ್ತ ಬಾಳಿನಲ್ಲೂ ನಗುವ ನಂದಾದೀವಿಗೆಯನ್ನು ಹಿಡಿದದ್ದು. ಕಂಗೆಟ್ಟು ಕೊರಗಬೇಕಾದ ಮರುಭೂಮಿಯಲ್ಲಿ ಕಾರಂಜಿಯಾದದ್ದು. ಹೀಗಾಗಿ ಶಿವಯೋಗಮಂದಿರದ ಕಠೋರ ಬಾಳು ನನಗೆ ಕೆಲಕಾಲದಲ್ಲೇ ರಕ್ತಗತವಾಯಿತು. ವಿಜಯಮಹಾಂತ ದೇವರು ನನ್ನನ್ನು ನನಗರಿಯದಂತೆ ತಮ್ಮ ಅಂತರಂಗದ ಆಸ್ತಿಯನ್ನಾಗಿ ಸೇರಿಸಿಕೊಂಡು ಬಿಟ್ಟಿದ್ದರು.

## ಊರುಗೋಲು

ಮುಂದೆ ನನ್ನ ಬಾಳಿನ ಪ್ರತಿ ಹೆಜ್ಜೆಯಲ್ಲಿಯೂ ಅವರೇ ಒಡೆಯರಾದರು. ನಾನೇನೇ ಮಾಡಲಿ; ಅವರಿಗೆ ಕೇಳದೆ ಮಾಡುವದು ನನ್ನಿಂದ ಅಸಾಧ್ಯವೇ ಆಯಿತು. ಈ ಮೈತ್ರಿ ಎಲ್ಲಿಯವರೆಗೂ ಬೆಳೆಯಿತೆಂದರೆ, ಅವರು ಬರೆದ ನಾಟಕಗಳಿಗೆ ನಾನೇ ಪಾತ್ರಧಾರಿ, ಅವರು ಬರೆದ 'ಪೂಮಾಲೆ' 'ಮೊಗ್ಗೆಯ ಮಾಲೆ' ಲಾವಣಿ ಕವನ ಸಂಕಲನಗಳ ಕವನಗಳನ್ನು ಜಾತ್ರೆಯ ಸಭೆಗಳಲ್ಲಿ—ಉತ್ಸವಗಳಲ್ಲಿ ಹಾಡುವವ ನಾನೇ; ಅಷ್ಟೇ ಏಕೆ, ಅವರು ಬರೆದು ಕೊಟ್ಟ ಭಾಷಣಗಳನ್ನು ಕಂಠ ಪಾಠಮಾಡಿ ಸಭೆಗಳಲ್ಲಿ ಮಾತಾಡಿ

ಬಹುಮಾನ ಗಿಟ್ಟಿಸುವವರೆಗೂ ಅವರೇ ಆಧಾರವಾದರು. ನನ್ನ ಎಲ್ಲ ಪ್ರಗತಿಗಳನ್ನು ಅವರು ಅಕ್ಕರತೆಯಿಂದ ಕಂಡು ಒಂದಕ್ಕೆ ಹತ್ತರಷ್ಟು ಮೆಚ್ಚುಗೆ ಸೂಚಿಸಿ ನನ್ನಲ್ಲಿ ಉತ್ಸಾಹವನ್ನು ಮೂಡಿಸುವಲ್ಲಿಯೂ ಅವರೇ ಕಾರಣರು.

ಒಂದು ಸಲ ನಾನು ವಿಶ್ರಾಂತಿ ಸಮಯದಲ್ಲಿ ಲೈಬ್ರರಿಗೆ ಹೋಗಿ ಓದುತ್ತ ಕುಳಿತಿದ್ದೆ. ಆ ರೀತಿ ಆಟದ ಸಮಯದಲ್ಲೂ ನಾನು ಓದುತ್ತ ಕುಳಿತಿದ್ದು ಅದೇ ಮೊದಲ ಸಲ ಇರಬೇಕು ! ಆಗ ಅದನ್ನು ದೂರದಿಂದಲೇ ನೋಡಿದ ವಿಜಯ ಮಹಾಂತದೇವರು ನನ್ನ ಬಳಿಗೆ ಬಂದವರೆ, ಬೆನ್ನಮೇಲೆ ತಮ್ಮ ವಾತ್ಸಲ್ಯಭರಿತ ಕೈಗಳನ್ನಾಡಿಸಿ, ನನ್ನ ಮೇಲಿನ ಅಭಿಮಾನದಿಂದ ಒಂದು ಗಂಟೆಯ ವರೆಗೆ ಭಾಷಣವನ್ನೇ ಮಾಡಿಬಿಟ್ಟರು ! ಆ ಅನಿರೀಕ್ಷಿತ ಭಾಷಣದಲ್ಲಿ ಬಹಳ ಓದಬೇಕು. ಕನ್ನಡ–ಸಂಸ್ಕೃತ–ಇಂಗ್ಲೀಷು ಕಲಿಯಬೇಕು, ಪಂಡಿತರಾಗಬೇಕು, ಎಲ್ಲ ಪರೀಕ್ಷೆಗಳನ್ನು ಗೆಲ್ಲಬೇಕು. ಹಿಂದುಳಿಯಬಾರದು ನಾವು ಜಾಣರಾಗದಿದ್ದರೆ ಮಂದಿರಕ್ಕೆ ಬಂದು ಏನು ಉಪಯೋಗ, ಸಮಯ ವ್ಯರ್ಥ ಹಾಳು ಮಾಡಬಾರದು, ಜೀವನದಲ್ಲಿ ಏನನ್ನಾದರೂ ಸಾಧಿಸಬೇಕು, ಹೇಡಿಯಂತೆ ಸಾಯಬಾರದು—ಮೊದಲಾಗಿ ನನಗರಿಯದ ಅದ್ಭುತ ಸಂಗತಿಗಳನ್ನೆಲ್ಲ ಹೇಳಿಬಿಟ್ಟರು. ತಮ್ಮ ಜೀವನದ ಆದರ್ಶ, ಧ್ಯೇಯಧೋರಣೆಗಳನ್ನು ಅರುಹಿದರು. ಆ ಅವಿಸ್ಮರಣೀಯ ಸಮಯ ನನ್ನ ಬಾಳಿನಲ್ಲಿ ಇಂದಿಗೂ ಊರುಗೋಲಾಗಿ ಬಂದಿದೆ. ಗಂಡಾಂತರಗಳಲ್ಲಿ ಸಾಹಸತನವನ್ನು ಕಲಿಸಿದೆ.

ವಿಜಯಮಹಾಂತದೇವರು ಶಿವಯೋಗಮಂದಿರದ ಕಲ್ಮಠದ ಗವಿಯಲ್ಲಿ ಓದುತ್ತಿದ್ದರು. ಔಡಲ ಎಣ್ಣೆಯ ದೀಪವನ್ನೇ ರಾತ್ರಿಕಾಲದ ಅಭ್ಯಾಸಕ್ಕೆ ಬಳಸುತ್ತಿದ್ದರು. ' ಈ ಎಣ್ಣೆ ಏಕೆ ಬಳಸುತ್ತೀರಿ ' ಎಂದು ನಾನು ಕೇಳಿದೆ. ಔಡಲ ಎಣ್ಣೆಯ ಕಾಂತಿ ಕಣ್ಣಿಗೆ ಒಳ್ಳೆಯದೆಂದೂ, ಮಿದುಳಿಗೆ ಆರೋಗ್ಯಕರವೆಂದೂ, ಶಾಂತಿ-ಸಮಾಧಾನವನ್ನು ಕೊಡುತ್ತದೆಯೆಂದೂ ಹೇಳಿದರು. ಇಂಥ ಸೂಕ್ಷ್ಮ ವಸ್ತುಗಳಲ್ಲಿಯೂ ಅವರು ತೋರುತ್ತಿದ್ದ ಅಪೂರ್ವ ಅನುಭವಗಳು ಯಾರನ್ನು ತಾನೆ ಆಕರ್ಷಿಸಲಿಕ್ಕಿಲ್ಲ ?

## ಗೋಡೆಯ ಮೇಲೆ ಬಟ್ಟು

ಆಗಲೇ ಒಂದೆರಡು ವರ್ಷಗಳು ಗತಿಸಿದವು. ಒಂದು ದಿನ ಮೇಲ್ಮಠದಿಂದ ಶಿವಪೂಜೆ ಮುಗಿಸಿಕೊಂಡು ಕಲ್ಮಠಕ್ಕೆ ಬಂದೆವು, ವಿಜಯ ಮಹಾಂತ ದೇವರಿಗೆ ಕಾಶಿಗೆ ಹೋಗಬೇಕು, ಕಲಕತ್ತಾ ವಿಶ್ವವಿದ್ಯಾಲಯದ 'ಕಾವ್ಯತೀರ್ಥ' ಅಭ್ಯಾಸ ಮಾಡಬೇಕು ಎಂಬ ಹಂಬಲು ಬಹಳವಿತ್ತು. ಆದರೆ ಅದಕ್ಕೆ ಅನೇಕರ ಆತಂಕವಿದ್ದುದೂ ನನಗೆ ತಿಳಿದಿತ್ತು. ವೀರಶೈವ ಸಂಸ್ಕೃತಿಗೆ ಭಂಗಬರುತ್ತದೆಯೆಂಬ ಭಯದಿಂದ ಪೂಜ್ಯ ಕೊಪ್ಪದ ಸ್ವಾಮಿಗಳಿಗೂ ಇವರನ್ನು ಕಾಶಿಗೆ ಕಳಿಸಲು ಮನಸ್ಸು ಇರಲಿಲ್ಲ. ಇದರಿಂದ ವಿಜಯಮಹಾಂತದೇವರು ತುಂಬ ಚಿಂತಾಕ್ರಾಂತರಾಗಿದ್ದರು. ನಾನು ಆ ದಿನ ಅವರ ಜೀವನ ಧ್ಯೇಯದ ಬಗ್ಗೆ ಕೇಳಿದೆ. ಆಗ ಅವರ ಅಂತರಂಗದ ಇಚ್ಛಾಶಕ್ತಿ ಭುಗಿಲೆಂದು

ಎದ್ದು ಗೋಡೆಯ ಮೇಲೆ ಒಂದು ಬಟ್ಟು ಇಟ್ಟು ಹೇಳಿದರು— 'ಮಹಾಂತದೇವರೇ ನಾನು ಗೋಡೆಯ ಮೇಲೆ ಬಟ್ಟು ಇಟ್ಟು ಹೇಳುತ್ತೇನೆ. ಕಾಶಿಗೆ ಹೋಗಿ ಕಲಕತ್ತಾ ವಿಶ್ವವಿದ್ಯಾಲಯದ ಕಾವ್ಯತೀರ್ಥ ಆಗಿಯೇ ತೀರುತ್ತೇನೆ' ಎಂದು. ಆಗಿನ್ನೂ ಅವರಿಗೆ ವಯಸ್ಸು ೧೮. ಮುಂದೆ ಕೆಲಕಾಲದಲ್ಲೇ ಕಾಶಿಗೆ ಹೋಗಿ ಕಾವ್ಯತೀರ್ಥ, ವೇದಾಂತಾಚಾರ್ಯ, ಸಾಹಿತ್ಯರತ್ನ, ಮೊದಲಾದ ಪದವಿಗಳನ್ನು ಗಳಿಸಿದರು.

## ಕಲಾ ತಪಸ್ವಿ

ಇವರು ಚಿಕ್ಕಂದಿನಿಂದ ಕವಿಗಳು ಹೇಗೊ ಹಾಗೆ ಚಿತ್ರಕಾರರೂ ಆಗಿದ್ದರು ಅಕ್ಕಮಹಾದೇವಿ. ಬಸವಣ್ಣ, ಹಾನಗಲ್ಲ ಕುಮಾರಸ್ವಾಮಿಗಳು, ವಿಜಯಮಹಾಂತ ಶಿವಯೋಗಿಗಳು. ರಾಮಕೃಷ್ಣ, ವಿವೇಕಾನಂದ ಮೊದಲಾದವರ ಭಾವಚಿತ್ರಗಳನ್ನು ಬಹುಸುಂದರವಾಗಿ ಚಿತ್ರಿಸುತ್ತಿದ್ದರು. ಶಿವಯೋಗಮಂದಿರದ ಕೈಬರಹದ ಕೈಪಿಡಿ "ಸುಕುಮಾರ" ಇವರ ವರ್ಣರಂಜಿತ ಚಿತ್ರಗಳಿಂದ ಸುಂದರವಾಗಿ ಕಾಣುತ್ತಿತ್ತು. ಆಗ ವಿಜಾಪೂರ ಜಿಲ್ಲೆಯ ಒಂದು ಚಿತ್ರ ಸ್ಪರ್ಧೆಯಲ್ಲಿ ಇವರು ತೆಗೆದ ಚಿತ್ರ ಪ್ರಥಮ ಬಹುಮಾನವನ್ನು ಗಳಿಸಿತ್ತು ! ಅದರಲ್ಲಿ ಒಂದು ಸುಂದರವಾದ ತೋಟ, ಸುತ್ತಲೂ ಅಪೂರ್ವ ವನಶ್ರೀ, ತೋಟದಲ್ಲಿ ಒಂದು ಚಿಕ್ಕ ಕೂಸು ಇಣಚಿಗೆ ಮುದ್ದು ಕೊಟ್ಟು ಕುಳಿತ ಸನ್ನಿವೇಶ ಯಾರನ್ನಾದರೂ ಮೋಹಪಾಶದಲ್ಲಿ ಸೆಳೆಯುವಂತಿತ್ತು. ಆ ಕೂಸನ್ನು ಎತ್ತಿಕೊಳ್ಳಬೇಕೆಂಬ ಲವಲವಿಕೆ ಉಂಟಾಗುತ್ತಿತ್ತು. ಇಂಥ ನೂರಾರು ಚಿತ್ರಗಳು ಇವರ ಸಂಗ್ರಹದಲ್ಲಿದ್ದವು. ಅದು ಅವರ ಕಲಿತಗುಣವಾಗಿರಲಿಲ್ಲ, ಹುಟ್ಟು ಗುಣವಾಗಿತ್ತು. ಒಂದು ಸಲ ಇವರು ಶಿವಯೋಗಮಂದಿರದ ಬಾವಿಯ ಮೇಲೆ ತಾವು ತೆಗೆದ ಎಲ್ಲ ಚಿತ್ರಗಳನ್ನೂ ಪಕ್ಕದಲ್ಲಿ ಇಟ್ಟುಕೊಂಡು, ಅಲ್ಲಿಯ ಅಪೂರ್ವ ವನರಾಜಿಯ ಚಿತ್ರವನ್ನು ತೆಗೆಯುತ್ತಿದ್ದರು. ಅದೇ ಸಮಯಕ್ಕೆ ಅಲ್ಲಿಗೆ ಸಿಟ್ಟಿನಿಂದ ಧಾವಿಸಿಬಂದ. ಶಿವಯೋಗಮಂದಿರದ ಶಿಕ್ಷಕರಾದ ಒಬ್ಬ ಶಾಸ್ತ್ರಿಗಳು ಅವನ್ನೆಲ್ಲ ಕಸಿದುಕೊಂಡು, ಟರಟರನೇ ಹರಿದು, ಬಾವಿಯಲ್ಲಿ ಬೀಸಾಕಿಬಿಟ್ಟರು ! ಅಂದಿಗೇ ಇವರ ಚಿತ್ರಕಲಾಜೀವನ ಮುಕ್ತಾಯವಾಯಿತು. ಆದರೆ ಅಂದು ವಿಜಯಮಹಾಂತ ದೇವರ ಹೊಟ್ಟೆಯಲ್ಲಿ ಕುಳಿತ ಕಲಾತಪಸ್ವಿ ಇಂದು ಎಲ್ಲಿಗೆ ಹೋದನೋ ತಿಳಿಯದು. ಆದರೆ ಆ ತಪಸ್ವಿ ವರ್ಣರಂಜಿತವಾದ ಮೂರುಸಾವಿರಮಠದ ಅತ್ಯಾಧುನಿಕ ಸೌಂದರ್ಯದಲ್ಲಿ ಹೊರಬಂದು ನಿಂದಿದ್ದಾನೆಯೆಂದೇ ನಮ್ಮ ಭಾವನೆ ! ಎಂದಾದರೂ ಕಲೆಗೆ ಸಾವುಂಟೇ ? ಅದು ಶಾಶ್ವತ.

## ವಾತ್ಸಲ್ಯರಾಗ

ಒಂದು ಸಲ ಶಿವಯೋಗ ಮಂದಿರದ ಜಾತ್ರೆಯಲ್ಲಿ ಸಾಧಕರ ಉಪನ್ಯಾಸ ಕೂಟಕ್ಕೆ ಹೆಸರು ಕೊಟ್ಟೆ. ನನ್ನಿಂದ ಹೆಸರು ಕೊಡಿಸಿದವರೂ ಅವರೇ. ಜಾತ್ರೆಯೂ

ಸಮೀಪ ಬಂತು. ಆದರೆ ನನ್ನ ಭಾಷಣ ದೂರ ದೂರ ಓಡಹತ್ತಿತು. ಆಗ ನಾನು ಅವರ ಸಹಾಯ ಕೋರಿದೆ. ಅವರು ಅದೇ ಮಮತೆಯಿಂದ, ತಮ್ಮ ಬಿಡುವಿಲ್ಲದ ಸಾಹಿತ್ಯಿಕ ಕೆಲಸಗಳಲ್ಲಿಯೂ ನನಗೆ "ಆತ್ಮೋದ್ಧಾರ" ಎಂಬ ಭಾಷಣ ಬರೆದು ಕೊಟ್ಟರು. ಅದನ್ನೇ ಕಂಠಪಾಠಮಾಡಿ ಭಾಷಣ ಮಾಡಿಯೇ ಬಿಟ್ಟೆ! ಮುಂದೆ ಈ ಪ್ರಕ್ಕಟೆ ಕಡದ ಪದ್ಧತಿ ಕೆಲಕಾಲ ಮುಂದುವರೆಯಿತು. ಇದಲ್ಲದೆ ಅವರಿಂದ ಆ ಚಿಕ್ಕ ವಯಸ್ಸಿನಲ್ಲೇ ರಚಿತವಾದ "ಮೊಗ್ಗೆಯ ಮಾಲೆ" "ಪೂಮಾಲೆ" "ವಿಜಯ ಮಹಾಂತೇಶ್ವರ ಲಾವಣಿ"ಗಳನ್ನು ನಾನೇ ಹಾಡುತ್ತಿದ್ದೆ. ಅವರ ಆತ್ಮದ ಕಾವ್ಯ ಸರಸ್ವತಿಗೆ ನಾನು ವೀಣೆಯಾಗಿದ್ದೆ. ಅವರು ಬಾರಿಸಿದರು; ನಾನು ಧ್ವನಿಸಿದೆ. ಆಗ ನಮ್ಮೀರ್ವರ ವಾತ್ಸಲ್ಯರಾಗ ಪುಟಿಯುತ್ತಿತ್ತು. ಇದಲ್ಲದೆ ಅವರು ಕೈಬರಹದ "ಸುಕುಮಾರ" ಪತ್ರಿಕೆಯ ಸಂಪಾದಕರಾದದ್ದು ನನಗೆ ಬಹಳ ಆನಂದಕರ ಸಂಗತಿ ಯಾಗಿತ್ತು. ಕಾರಣ ನನಗೆ ಮನಸ್ಸಿಲ್ಲದಿದ್ದರೂ ನನ್ನ ಲೇಖನಗಳು ಅದರಲ್ಲಿ ಜೀವ ಪಡೆಯುತ್ತಿದ್ದವು!

## ಕಾಶಿಗೆ ಸೀಮೋಲ್ಲಂಘನೆ

ವಿಜಯ ಮಹಾಂತದೇವರು ಕೊನೆಗೊಮ್ಮೆ ತಮ್ಮ ಶಪಥದಂತೆ ಕಾಶಿಗೆ ನಡೆದೇ ಬಿಟ್ಟರು. ಸೀಮೋಲ್ಲಂಘನೆ ಗೈದರು. ಅಲ್ಲಿ ಅವರು ಉಚ್ಚಮಟ್ಟದ ಅಧ್ಯಯನಕ್ಕೆ ಅಣಿಯಾದರು. ಒಂದೆರಡು ವರ್ಷ ತಡೆದು ನಾವೂ ಅವರ ಪ್ರೇರಣೆಯಿಂದ ಕಾಶಿಗೆ ಹೋದೆವು. ಬರಿಗೈಯ ಭಂಡವಾಳದವರಾದ ನಾವು, ಕೆಳದಿಮಠದ ಗುರುಸಿದ್ಧ ಶಿವಾಚಾರ್ಯರು ತಾಳಗುಪ್ಪಾ ಸಿದ್ಲಿಂಗಸ್ವಾಮಿಗಳು ಅವರ ರೂಮಿನಲ್ಲೇ ಬೀಡಾರ ಒಗೆದವು. ಹದಿನೈದು ದಿನಗಳವರೆಗೆ ಇದೇ ರೀತಿ ಸಾಗಿದೆವು. ಆದರೆ ಅದರಿಂದ ಅವರು ಮತ್ತಷ್ಟು ಆನಂದಿತರಾದರು. ಅವರ ಅಭ್ಯಾಸದಲ್ಲಿ ನಮ್ಮಿಂದಾದ ತೊಂದರೆ ಯನ್ನು ಒಳ್ಳೆಯದೆಂದೇ ಅಂಗೀಕರಿಸಿದರು, ಮುಂದೆ ಜಂಗಮವಾಡಿ ಮಠದಲ್ಲಿ ನಮಗಾಗಿ ಪ್ರತ್ಯೇಕ ವಸತಿ ವ್ಯವಸ್ಥೆ ಅವರಿಂದಲೇ ದೊರೆಯಿತು.

ಅಲ್ಲಿ ನಾವಿಬ್ಬರೂ ಕೂಡಿಯೇ ಸಾಯಂಕಾಲ ತಿರುಗಾಡಲು ಹೋಗುತ್ತಿದ್ದೆವು. ನಮ್ಮ ಸಂಜೆಯ ವಿಹಾರವೆಂದರೆ ಶ್ರೀ ರಾಮಕೃಷ್ಣ ಮಿಶನ್ ಹಾಗೂ ಥಿಯಾಸಫಿಕಲ್ ಸೊಸೈಟಿಗಳೇ ಆಗಿದ್ದವು. ಅಲ್ಲಿ ಲೈಬ್ರರಿಯಲ್ಲಿ ಕೆಲಕಾಲ ಕಳೆಯುತ್ತಿದ್ದೆವು.

ಅವರ ಸಾಧಕ ಜೀವನ ಸುಗಮವಾಗಿರಲಿಲ್ಲ. ಅನೇಕ ತೊಂದರೆಗಳು ಅವರನ್ನು ಎಡೆಬಿಡದೇ ಕಾಡುತ್ತಿದ್ದವು. ಅವುಗಳಲ್ಲಿ ಆರ್ಥಿಕ ಅಡಚಣೆಯು ಉಂಟಾಗಿ ಜೀವನೋ ಪಾಯಕ್ಕೂ ಕಷ್ಟಕರವಾಗಿತ್ತು. ಕೆಲವು ಸಲ ಅವರಿಗೆ ಕಳಿಸಬೇಕಾದವರು ೩-೪ ತಿಂಗಳವರೆಗೆ ಹಣ ಕಳಿಸದೇ ಇದ್ದಾಗ ಕಣ್ಣೀರು ಸುರಿಸುತ್ತ ಗಂಗಾನದಿಯ ದಂಡೆಯ ಮೇಲೆ ಕೂಡ್ರುತ್ತಿದ್ದರು. ಆ ಕಂಬನಿಯ ಕಡಲಲ್ಲಿ ಅವರು ರಚಿಸಿದ ಕೆಲವು ಕವನಗಳು "ಪಥಿಕ"ದಲ್ಲಿ ಅಚ್ಚಾಗಿವೆ. ಆದರೂ ಅಂಥ ಪರಿಸ್ಥಿತಿಯಲ್ಲಿಯೂ ಅವರು ತಮ್ಮ

ಸ್ಕಾಲರಶಿಪ್‌ನಿಂದ ಬಂದ ಹಣವನ್ನು ಇತರ ಸಾಧಕರಿಗಾಗಿ ಕೊಡುತ್ತಿದ್ದರು. ಅವರ ದಾನಗುಣ ಆಗಲೇ ಪ್ರಕಟವಾಗಿತ್ತು. ಅವರಿಂದ ಆಗಾಗ ಆರ್ಥಿಕ ಸಹಾಯವನ್ನೂ ಪಡೆದ ಅನೇಕರಲ್ಲಿ ನಾನೂ ಕೆಳದಿಯ ಗುರುಸಿದ್ಧದೇವರೂ, ಲಿಂ. ಗುರುಮಹಾಂತ ಸ್ವಾಮಿಗಳೂ ಹಾಗೂ ತಾಳಗುಪ್ಪಾ ಶಿದ್ಧಲಿಂಗಸ್ವಾಮಿಗಳೂ ಉಂಟು.

## ಮಳೆ ಬಂತು !

ಅಂದಿನಿಂದ ಇಂದಿನವರೆಗೂ ಪೂಜ್ಯ ವಿಜಯಮಹಾಂತದೇವರು, ಗಂಗಾಧರ ರಾಜಯೋಗೀಂದ್ರರಾಗಿ ಏಕತಾನ ಪರಿಪೂರ್ಣರಾಗಿದ್ದಾರೆ. ಕನ್ನಡ ನಾಡಿನಲ್ಲಿ ಉನ್ನತ ಪೀಠವೊಂದನ್ನು ಅವರು ಆರೋಹಿಸಿದರೂ ಅವರ ರಸಜೀವನ, ಋಷಿಜೀವನ, ಕಲಾಭಿಜ್ಞತೆ, ಕರುಣಾಳುಗುಣ, ಎಲ್ಲರನ್ನು ಪ್ರೀತಿಯಿಂದ ಕಾಣುವದು, ಸರ್ವಸಮಭಾವನೆ, ವಿದ್ವತ್‌ಪ್ರೇಮ, ಅಮಿತೋತ್ಸಾಹಗಳು ಮಾಯವಾಗಿಲ್ಲ. ಅವರು ಮೂರುಸಾವಿರ ಮಠದ ಪೀಠಾರೋಹಣ ಮಾಡಿದ್ದು ವಜ್ರಕ್ಕೆ ಸುವರ್ಣ ಚೌಕಟ್ಟು ಹಾಕಿದಂತಾಗಿದೆ. ಮೊನ್ನೆತಾನೆ ( ೧೯೭೦ ) ಅವರು ನವಿಲುಗುಂದದಲ್ಲಿ ಅದ್ಭುತ ಘಟನೆಯೊಂದನ್ನು ಜರುಗಿಸಿದರು. ಅನೇಕ ಭಕ್ತರು ಕೂಡಿ ಮಳೆ ಇಲ್ಲವೆಂದು ಕೊರಗಿದರು. ಜಗದ್ಗುರುಗಳು ಭಾಷಣಮಾಡುತ್ತ, ಭಾವಾವೇಶದಿಂದ ತುಂಬಿ 'ನಾಳೆ ನಿಮ್ಮ ಊರಿಗೆ ಮಳೆ ಬಂದೇ ತೀರುತ್ತದೆ' ಎಂದು ಘೋಷಿಸಿಬಿಟ್ಟರು ! ಎಲ್ಲರೂ ಚಪ್ಪಾಳೆ ತಟ್ಟಿಬಿಟ್ಟರು !!! ಮರುದಿನವೇ ಅಲ್ಲಿ ಪ್ರಚಂಡ ಮಳೆ ಸುರಿದದ್ದನ್ನು ನಾವು ಕಣ್ಣಾರೆ ಕಂಡೆವು !!! ಇದು ಅವರ ನಿರ್ಮಲ ಯೋಗಜೀವನದ ಕುರುಹಲ್ಲದೇ ಇನ್ನೇನು ? ಅವರು ತಮ್ಮ ಪಟ್ಟಾಧಿಕಾರದ ಕೇವಲ ಹನ್ನೆರಡು ವರ್ಷಗಳಲ್ಲಿ ಗೈದ ಕಾರ್ಯಗಳ ಬಗ್ಗೆ ಹೇಳಲು ಒಂದು ದೊಡ್ಡ ಗ್ರಂಥವೇ ಬೇಕಾದೀತು. ಅವರ ಕರ್ಮಯೋಗ, ಜ್ಞಾನಯೋಗ, ಸಮಾಜಕಾರ್ಯ, ದೇಶಕಾರ್ಯ, ವಿಶ್ವಶಾಂತಿ ಸಮ್ಮೇಲನ, ಅಪಾರ ದಾನ, ಗ್ರಂಥ ಪ್ರಚಾರ, ಪತ್ರಿಕಾ ಕಾರ್ಯ ಹೀಗೆ ಒಂದೇ ಎರಡೇ !' ೮೦-೫೦ ವರ್ಷಗಳಲ್ಲಿ ಕಷ್ಟಪಟ್ಟು ದುಡಿದರೂ ಆಗದಷ್ಟು ಕಾರ್ಯಗಳನ್ನೂ ಕೇವಲ ೧೨ ವರ್ಷಗಳಲ್ಲಿಯೇ ಮಾಡಿ ತೋರಿಸಿದ್ದು ನೋಡಿದರೆ ಎಂತಹರಿಗೂ ಅಚ್ಚರಿಯನ್ನುಂಟು ಮಾಡುವಂತಿದೆ. ಶ್ರೀ ವಿಜಯಮಹಾಂತೇಶ್ವರ, ಹಾನಗಲ್ಲ ಕುಮಾರ ಶಿವಯೋಗಿ ಹಾಗೂ ಹುಬ್ಬಳ್ಳಿಯ ಹುಚ್ಚೇಶ್ವರರು ಅವರ ಬೆಂಬಲಿಗೆ ಬೆನ್ನೆಲುವಾಗಿ ನಿಂತಿರುವಾಗ ಅವರ ಭವಿಷ್ಯಜ್ಜೀವನ ಮತ್ತೂ ಉಜ್ವಲವಾಗಿದೆಯೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ.

ಅವರು ಜಗದ್ಗುರುಗಳಾದರೂ ನಮ್ಮನ್ನು ಮರೆಯಲಿಲ್ಲ. ಚಿತ್ತರಗಿಯ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನ ಪೀಠದ ಅಧಿಪತಿಗಳನ್ನಾಗಿ ನಮ್ಮನ್ನು ನೇಮಿಸಿದರು. ನನ್ನ ಬಾಳು ಅವರ ಆದೇಶದಂತೆಯೇ ಅರಳಿದೆ. ಇನ್ನು ಮುಂದಾದರೂ ಅವರ ಅಪ್ಪಣೆಯೇ ನನಗೆ ಅಧಿದೈವ. □

# ನಾನು ಕಂಡ ವಿಜಯ ಮಹಾಂತದೇವರು

ಪಂ. ಬಸವರಾಜಶಾಸ್ತ್ರಿಗಳು, ಪಗಡದಿನ್ನಿ ಹಿರೇಮಠ

೧೯೩೫ನೇ ಇಸ್ವಿಯಲ್ಲಿ ನಾನು ಶ್ರೀ ಜಗದ್ಗುರುಗಳನ್ನು ಪ್ರಪ್ರಥಮ ಕಂಡದ್ದು. ಆ ಸ್ಥಾನ ಮಾನವನನ್ನು ದೇವನನ್ನಾಗಿ, ಜೀವನನ್ನು ಶಿವನನ್ನಾಗಿ ಮಾಡುವ ಪರಮ ಪವಿತ್ರವಾದ ಶಿವಯೋಗ ಮಂದಿರದಲ್ಲಿ. ಆ ದರ್ಶನವು ಔಪಚಾರಿಕವಾದುದಲ್ಲ. ಪರಂತು ವಿದ್ಯಾಮೂಲಕವಾದ ಗುರು ಶಿಷ್ಯಭಾವದ್ಯೋತಕವಾದುದು. ಆ ಕಾಲದಲ್ಲಿ ನಾನು ಶಿವಯೋಗ ಮಂದಿರದ ಸಂಸ್ಕೃತ ಪಾಠ ಪ್ರವಚನದ ಅಧ್ಯಾಪಕನಾಗಿ ಕೆಲಸ ಮಾಡುತ್ತಿದ್ದೆನು. ಆಗ ಜಗದ್ಗುರುಗಳ ಅಭಿದಾನ—ಮಹಾಂತಾರ್ಯ ಮಹಾತ್ಮರಾದವರಲ್ಲಿ ಶ್ರೇಷ್ಠನು—ಎಂಬ ಅರ್ಥವುಳ್ಳ ಈ ಅಭಿದಾನವು ಎಳೆವಯಸ್ಸಿನ ತಿಳಿ ಮನದ ವಟುಗಳಲ್ಲಿ ಪರೋಪಕಾರ ನಿರತನಾದ ಮಹಾಂತಾರ್ಯನಿಗೆ ಅನ್ವರ್ಥಕವಾಗಿತ್ತು.

ಈ ಮಹಾಂತಾರ್ಯನು ತನ್ನ ಸಂಗಡಿಗರಾದ ವಟುಗಳು ಮೂಲೆಹಿಡಿದು ಮಲಗಿಕೊಂಡಿದ್ದರೆ ಅಥವಾ ಆಟದಲ್ಲಿ ತೊಡಗಿದ್ದರೆ ಮೆಲ್ಲನೆ ಹೋಗಿ ಪ್ರೇಮದಿಂದ ಎಬ್ಬಿಸಿ ಇಲ್ಲವೆ ಕರೆದು ಹೀಗೆ ಮಾಡಿದರೆ ಹೇಗೆ! ಪಾಠವನ್ನು ಒಪ್ಪಿಸು? ಹೇಳು ಪಾಠ ಮಾಡಿರುವಿಯಾ ನೋಡೋಣ ಎಂದು. ಅಮರಕೋಶ, ಶಬ್ದ ಸಮಾಸಗಳನ್ನು ಅವರಿಂದ ಅನ್ನಿಸಿ ತಪ್ಪಿದರೆ ಸುಧಾರಿಸಿಕೊಳ್ಳಲು ಹಚ್ಚುತ್ತಿದ್ದನು.

ಪ್ರಾರ್ಥನಾ ಕಾಲದಲ್ಲಿ ಹಾಗೂ ಯೋಗಾಸನಗಳನ್ನು ಹಾಕುವ ಸಮಯದಲ್ಲಿ ಉಪಸ್ಥಿತರಾಗುವದನ್ನು ತಪ್ಪಿಸುವ ಸಹಾಧ್ಯಾಯಿಗಳಿಗೆ ಸುಳ್ಳು ನೆವ ಹೇಳಿ ತಪ್ಪಿಸಿದರೆ ನೀನು ಯೋಗಿಯಾಗುವದು ಹೇಗೆ! ಪ್ರಾರ್ಥನಾ ಮಾಡುವದರಿಂದ ದೇವರ ಪ್ರೇಮ ಉಂಟಾಗಿ, ನಮಗೆ ವಿದ್ಯಾಬುದ್ಧಿಗಳು ಪ್ರಾಪ್ತವಾಗುತ್ತವೆ. ನಾವು ಪ್ರಾರ್ಥನೆಯನ್ನು ತಪ್ಪಿಸಿದರೆ ದೇವರು ವಿದ್ಯಾಬುದ್ಧಿಗಳನ್ನು ಕಡಿಮೆ ಮಾಡುವನು ಎಂದು ಹೇಳಿ ಒಳ್ಳೆ ಮಾರ್ಗಕ್ಕೆ ಹಚ್ಚುತ್ತಿದ್ದನು.

ವಟುಗಳಿಗಾಗಿ ನಿಯತವಾದ ಸ್ಥಾನದಲ್ಲಿ ಆಕಸ್ಮಾತ್ ಯಾರಿಗಾದರೂ ಚಳಿಜ್ವರ ಬಂದರೆ, ಬೇರೆ ಕಡೆಗೆ ವಾಸವಾಗಿದ್ದ ಅಧಿಕಾರಿಗಳೂ ವ್ಯವಸ್ಥಾಪಕರೂ ಬಂದು ನಿರೀಕ್ಷಣೆ

ಮಾಡುವದಕ್ಕೆ ಸಮಯ ಬೇಕಾಗುವದು ಸಹಜ. ಅಂತಹ ಪ್ರಸಂಗದಲ್ಲಿ ಮಹಾಂತಾರ್ಯನು ತನ್ನ ಹಾಸಿಗೆ ಹೊದಿಕೆ ಮೊದಲಾದವನ್ನು ರೋಗಿಗಳಿಗೆ ಕೊಟ್ಟು ತಾನು ನಡುಗುತ್ತ ಇದ್ದರೂ ಪರರ ಮೇಲೆ ದಯೆಯನ್ನು ತೋರುತ್ತಿದ್ದುದನ್ನು ನಾವೇ ಕಂಡಿದ್ದೇವೆ.

ಹಣ್ಣಿನ ರುಚಿ ಮಿಡಿಯಲ್ಲಿರುತ್ತೆ ಎಂಬ ನುಡಿಯಂತೆ ಜಗದ್ಗುರು ಪೀಠಾರೋಹಣ ಮಾಡಿದ ನಂತರ ಈಗ ಕಾಣುವ ದಯಾ, ದಾಕ್ಷಿಣ್ಯ, ಔದಾರ್ಯ, ಪರೋಪಕಾರ ಸಮತಾಭಾವ ಮುಂತಾದವು ಎಳೆವಯಸ್ಸಿನಲ್ಲಿಯೇ ಒಡೆದುಕಾಣುತ್ತಿದ್ದವು. ಮುಂದೆ ವಿಶೇಷ ದೀಕ್ಷಾಸಂಸ್ಕಾರವಾಗಿ ಸಾಧಕರ ವರ್ಗದಲ್ಲಿ ಸೇರಿ, ಮಹಾಂತದೇವರು ಎಂಬ ಹೆಸರಿನಿಂದ ಶಿವಪೂಜಾದಿ ಕಾರ್ಯಕಲಾಪದಲ್ಲಿಯೂ, ಸಂಗಡಿಗರಿಗೆ ಪೂಜಾಸಾಮಗ್ರಿಗಳನ್ನು ಒದಗಿಸುವಲ್ಲಿಯೂ. ಹೂಪತ್ರಿಗಳನ್ನು ತಂದುಕೊಳ್ಳುವಲ್ಲಿಯೂ ಸಹನೆಯಿಂದ ಸಹಾಯ ಮಾಡುವದು ಅವ್ಯಾಹತವಾಗಿ ನಡದೇ ಇತ್ತು.

ಶಿವಯೋಗ ಮಂದಿರದ ಯಾವತ್ತೂ ಕಾರ್ಯಕಲಾಪಗಳನ್ನು ಮಹಾಂತ ದೇವರು ತಾವು ಸ್ವಯಂ ಆಚರಿಸುತ್ತ ಸಂಗಡಿಗರಿಗೆ ಆಚರಿಸಲು ಬೋಧಿಸುತ್ತಿದ್ದಂತೆ ಅಭ್ಯಾಸದಲ್ಲಿಯೂ ಒಳ್ಳೆ ಶ್ರದ್ಧೆಯಿಂದ ಪಾಠ ಮಾಡುತ್ತಿದ್ದರು. ಸಹಪಾಠಿಗಳಿಗೆ ತಿಳಿಸಿ ಹೇಳುತ್ತಿದ್ದರು. ಶಿವಯೋಗ ಮಂದಿರದಲ್ಲಿಯೇ ಸಾಹಿತ್ಯಾಧ್ಯ ವ್ಯಾಕರಣಾಧ್ಯ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದರು. ಆ ಚಿಕ್ಕ ವಯಸ್ಸಿನಲ್ಲಿ ಕನ್ನಡದಲ್ಲಿ ಕವಿತಾ ಮಾಡುವ, ಲಾವಣಿ ಪದಗಳನ್ನು ಕಟ್ಟುವ, ಮಾನವನ ಜೀವನವನ್ನೇ ಪಾವನ ಮಾಡುವ ಸಣ್ಣ ಸಣ್ಣ ಕಥೆ, ಹಾಡುಗಳನ್ನು ಗದ್ಯದ ಪುಸ್ತಕಗಳನ್ನು ಬರೆಯಲು ತಲ್ಲೀನರಾಗುತ್ತಿದ್ದರು. ಪ್ರೌಢ ವಿದ್ಯಾಭ್ಯಾಸಕ್ಕಾಗಿ ಮಹಾಂತದೇವರಿಗೆ ಕಾಶೀ ಕ್ಷೇತ್ರಕ್ಕೆ ಹೋಗುವ ಪ್ರಸಂಗವೂ, ನನಗೆ ಶಿವಯೋಗ ಮಂದಿರವನ್ನು ಬಿಡುವ ಪ್ರಸಂಗವೂ ಪ್ರಾಪ್ತವಾಯಿತು.

ಈ ಮಹಾಂತ ದೇವರು ಕಾಶೀ ಹಿಂದೂ ಯುನಿವ್ಹರ್ಸಿಟಿಯಲ್ಲಿ ಪ್ರವೇಶ ಪಡೆದು, ಅಲ್ಲಿಯ ಪ್ರಾಧ್ಯಾಪಕ ವರ್ಗದವರ ಪ್ರೀತಿಗೆ ಪಾತ್ರರಾಗುವ ಹಾಗೆ ಶಿಸ್ತಿನಿಂದ ಮನ-ಮುಟ್ಟಿ ಅಭ್ಯಾಸ ಮಾಡುತ್ತಿದ್ದರು. ಬಹು ದೂರದ ಪರಪ್ರಾಂತದಲ್ಲಿ ಅಭ್ಯಾಸ ಮಾಡುವಾಗಲೂ ಇವರ ಔದಾರ್ಯ, ಸಹಕಾರ, ಸರ್ವರಲ್ಲಿ ನನ್ನವರೆಂಬ ಭಾವನಾ ಬೆಳೆಯುತ್ತಲೇ ಇದ್ದವು. ಇವರು ಇಲಕಲ್ಲ ವಿರಕ್ತ ಮಠದ ಮರಿಗಳಾಗಿ ಕಾಶಿಯಲ್ಲಿ ಅಧ್ಯಯನ ಮಾಡುತ್ತಿದ್ದುದರಿಂದ ಆಗಿದ್ದ ಇಲಕಲ್ಲ ಶ್ರೀಗಳವರಾಗಲಿ ಭಕ್ತರಾಗಲಿ ಇವರಿಗೆ ಖರ್ಚಿನ ಸಲುವಾಗಿ ಎಷ್ಟು ಹಣ ಕಳಿಸುತ್ತಿದ್ದರೋ ನಿಕ್ಕಿ ನಮಗೆ ಗೊತ್ತಿಲ್ಲ. ಆದರೆ ಆಗಾಗ ಮಹಾಂತ ದೇವರು ಈಗ ಇಲಕಲ್ಲಿನಿಂದ ಬರುವ ಹಣ ಸಾಲುವದಿಲ್ಲ. ಸ್ವಲ್ಪ ಹೆಚ್ಚು ಕಳಿಸಲು ಶ್ರೀಗಳವರಿಗೆ ತಿಳಿಸಬೇಕೆಂದು ನಮಗೆ ಪತ್ರ ಬರೆಯುತ್ತಿದ್ದರು. ನಾನು ಇಲಕಲ್ಲ ಶ್ರೀಗಳವರಿಗೆ ಪತ್ರ ಮುಖದಿಂದ ಹಾಗೂ ಸಮ್ಮುಖದಲ್ಲಿಯೂ ಒಂದೊಂದು ಸಲ ಅರಿಕೆ ಮಾಡಿಕೊಳ್ಳುತ್ತಿದ್ದೆನು. ಇಂತಹ ತೊಂದರೆ ತಮ-ಗಿದ್ದರೂ ಉದಾರತನದಲ್ಲಿ ಕೊರತೆಯಾಗಿರಲಿಲ್ಲ. ನಮ್ಮಲ್ಲಿ ಅಭ್ಯಾಸ ಮಾಡಿ ತಯಾ

ರಾಗಿ ಸಾಧಕರೂ ಮರಿದೇವರೂ ಶಿವಯೋಗ ಮಂದಿರದಿಂದಲೂ ಬೇರೆ ಕಡೆಯಿಂದಲೂ ಹೋದವರು ಎಷ್ಟೋ ಜನರಿರುತ್ತಾರೆ. ಅವರಿಗೆ ನಮಗೆ ಪರಸ್ಪರ ಸಂಬಂಧವಿರುವದಿಲ್ಲ. ಮಹಾಂತ ದೇವರು ಕಾಶಿಯಲ್ಲಿಯೂ ನಾವು ಗದುಗಿನಲ್ಲಿಯೂ ಇದ್ದರೂ ಪರಸ್ಪರ ಪತ್ರ ವ್ಯವಹಾರವು ಅವ್ಯಾಹತವಾಗಿ ಇದ್ದೇ ಇತ್ತು. ತಿಂಗಳಲ್ಲಿ ೧ ಪತ್ರ ಬರದಿದ್ದರೆ ಅವರಿಗೂ ಸಮಾಧಾನವಿಲ್ಲ, ನಮಗೂ ಸಮಾಧಾನವಾಗುತ್ತಿದ್ದಿಲ್ಲ. ಕಾಶಿಯಲ್ಲಿ ತಮ್ಮ ಅಭ್ಯಾಸವನ್ನು ವೇದಾಂತದೊಡನೆ ಬೇರೆ ಯಾವುದನ್ನು ಸೇರಿಸಿಕೊಳ್ಳಬೇಕೆನ್ನುವ ಬಗ್ಗೆ ಇತರ ವಿಚಾರದ ಬಗ್ಗೆ, ಪತ್ರಗಳು ಬರುತ್ತಲೇ ಇದ್ದವು. ಅವಕ್ಕೆ ಸೂಕ್ತ ಸಲಹೆಗಳನ್ನು ನಾವು ಕಳಿಸುತ್ತಲೇ ಇದ್ದೆವು. ಅಂತೂ ಮಹಾಂತದೇವರು ಕಾಶಿಯಲ್ಲಿ ಹಿಂದು ವಿಶ್ವ ವಿದ್ಯಾಲಯದ ವೇದಾಂತಾಚಾರ್ಯ ಪರೀಕ್ಷೆಯಲ್ಲಿಯೂ, ಸಾಹಿತ್ಯರತ್ನ ಪರೀಕ್ಷೆಯ-ಲ್ಲಿಯೂ ಉತ್ತಮ ತರಗತಿಯಲ್ಲಿ ಉತ್ತೀರ್ಣರಾದರು.

ಶ್ರೀ ಮಹಾಂತ ದೇವರು ಆಗಾಗ ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದ ಲೇಖನಗಳಿಂ-ದಲೂ, ಇವರ ವಿದ್ಯಾ, ಬುದ್ಧಿ ಸೌಜನ್ಯ, ಸೌಹಾರ್ದ, ಮುಂತಾದ ಸದ್ಗುಣಗಳಿಂದಲೂ, ಹುಬ್ಬಳ್ಳಿ ನಾಗರಿಕರ ಪುಣ್ಯವಿಶೇಷದಿಂದಲೂ, ಪೂರ್ವಾರ್ಜಿತ ಕರ್ಮಾನುಸಾರ ಅನ್ನದ ಋಣದಿಂದಲೂ ಆಗಿನ ಹುಬ್ಬಳ್ಳಿ ಜಗದ್ಗುರು ಮೂರಸಾವಿರ ಮಠಾಧ್ಯಕ್ಷರಾದ ಶ್ರೀ ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳವರು ಈ ಮಹಾಂತ ದೇವರನ್ನೇ ತಮ್ಮ ಉತ್ತರಾಧಿಕಾರಿಗಳನ್ನಾಗಿ ಆರಿಸಿಕೊಂಡರು. ಶ್ರೀ ಜಗದ್ಗುರು ಮೂರುಸಾವಿರ ಮಠದ ಪಟ್ಟಾಧಿಕಾರವು ಸನ್ ೧೯೫೮ ಮೇ ತಿಂಗಳಲ್ಲಿ ಬಹು ವೈಭವದಿಂದ ನೆರವೇರಿಸ ಲ್ಪಟ್ಟಿತು. ಆಗ ಮೂರುಸಾವಿರ ಮಠದ ಪರಂಪರೆಗನುಗುಣವಾಗಿ ನೂತನ ಜಗದ್ಗು-ರುಗಳ ಅಭಿಧಾನವು ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜ-ಯೋಗೀಂದ್ರ ಮಹಾಸ್ವಾಮಿಗಳು ಎಂದು ಪರಿವರ್ತನವಾಯಿತು. ಪೀಠಾರೋಹಣ ಮಾಡಿದ ನಂತರ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳಲ್ಲಿ ಹಿಂದಿನ ಜಗದ್ಗುರುಗಳು ಬಹುದಿನಗಳಿಂದ ನಡೆಯಿಸುತ್ತ ಬಂದ ಎಲ್ಲ ಕಾರ್ಯಕಲಾಪಗಳನ್ನು ಸೂಕ್ಷ್ಮವಾಗಿ ಅವಲೋಕನ ಮಾಡುತ್ತ ಧಾರ್ಮಿಕ, ಸಾಮಾಜಿಕ, ನೈತಿಕ, ತಾತ್ವಿಕ ಭೌತಿಕ ವಿಷಯಗಳಲ್ಲಿ ಹೆಚ್ಚಿನ ಸುಧಾರಣೆಯನ್ನು ಮಾಡಬೇಕೆಂಬ ಕೂತೂಹಲವುಪ್ರಜ್ವಲಿಸಲಿಕ್ಕೆ ಹತ್ತಿತು. ಕ್ರಮೇಣ ಅವುಗಳನ್ನು ಮುಂದುವರಿಸುತ್ತ ಬಂದಿರುವರು, ಧಾರ್ಮಿಕ ಸುಧಾ ರಣೆಯಾಗಬೇಕಾದರೆ ಧರ್ಮಾಧಿಕಾರಿಗಳಲ್ಲಿ ಧರ್ಮಜ್ಞಾನವು ಬೇಕೆಂಬುದನ್ನು ಅರಿತು, ನಾಮಶೇಷವಾಗುತ್ತ ಬಂದಿದ್ದ ಸಂಸ್ಕೃತ ಕಾಲೇಜನ್ನು ಪುನರುಜ್ಜೀವನಗೊಳಿಸಬೇಕೆಂಬ ಮಹೋದ್ದೇಶದಿಂದ ಗದುಗಿನಲ್ಲಿದ್ದ ನನ್ನನ್ನು ಬಲಾತ್ಕಾರದ ಪ್ರೇಮದಿಂದ ಬರಮಾಡಿ ಕೊಂಡು ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲನನ್ನಾಗಿ ನಿಯಮಿಸಿ ಕೊಂಡರು. ನೂತನವಾಗಿ, ಶಿವಯೋಗಿಗಳ, ಶಿವಶರಣರ, ಶಿವಾನುಭಾವಿಗಳ ಚರಿತ್ರೆ ಗಳನ್ನೇ ಸಣ್ಣ ಸಣ್ಣ ಪಾಠಗಳಲ್ಲಿ ಬಾಲಪಾಠಕರಿಗೆ ಅನುಗುಣವಾಗುವ ಹಾಗೆ ಸಂಸ್ಕೃತ ಮಾರ್ಗದರ್ಶ, ಸಂಸ್ಕೃತ ಪ್ರವೇಶ, ಸಂಸ್ಕೃತ ಪ್ರಕಾಶ, ಎಂಬ ಮೂರು ಪುಸ್ತಕಗಳನ್ನು,

ನಾನು ಬರೆದು ಕೊಡಲು ಅವನ್ನು ಮುದ್ರಣ ಮಾಡಿಸಿ ಮೂರುಸಾವಿರ ಮಠದಿಂದಲೇ ಸಂಸ್ಕೃತ ಪರೀಕ್ಷೆಗಳನ್ನು ಪ್ರಾರಂಭ ಮಾಡಿಸಿದರು, ಆ ಪರೀಕ್ಷೆಗಳು ಬಹು ಜನಪ್ರಿಯ ವಾದುವದರಿಂದ ಬೇರೆ ಬೇರೆ ಮಠಾಧೀಶರೂ ಪಾಠಶಾಲೆಯ ಸಂಚಾಲಕರೂ ವಿದ್ಯಾ-ಪ್ರೇಮಿಗಳೂ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜಿನ ಕೇಂದ್ರಗಳನ್ನು ತಮ್ಮಲ್ಲಿ ಮಾಡಿಕೊಂಡು ಆ ಪರೀಕ್ಷೆಗಳನ್ನು ನಡಿಸಲಿಕ್ಕೆ ಹತ್ತಿದರು.

ತಾಳೇಗರಿಯಲ್ಲಿ ಹುದುಗಿಕೊಂಡಿದ್ದು ಜೀರ್ಣವಾಗುತ್ತಿದ್ದ ಗ್ರಂಥಗಳನ್ನು ಸಂಶೋಧನ ಮಾಡಿಸಿ ಪ್ರಕಾಶಪಡಿಸುವ ಕಾರ್ಯವನ್ನು ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಪ್ರಾರಂಭಿಸಿದರು. ಶ್ರೀ ಜಗದ್ಗುರುಗಳ ಅಪ್ಪಣೆ ಪ್ರಕಾರ ನಾನು "ಕ್ಷೇತ್ರಜ್ಞಸುಮನೋವಾದ" ಎಂಬ ಧಾರ್ಮಿಕ ಉದ್ಗ್ರಂಥವನ್ನು ಸಂಶೋಧನ ಮಾಡಿ ವಿಸ್ತೃತ ಮುನ್ನುಡಿಯನ್ನು ಬರೆದುಕೊಡಲು ಅದನ್ನು ಮುದ್ರಣ ಮಾಡಿಸಿದರು. ಮತ್ತು ವೀರಶೈವರ ಧಾರ್ಮಿಕ ವಿಧಿ-ವಿಧಾನಗಳನ್ನು ಸಕ್ರಮವಾಗಿ ಬೋಧಿಸುತ್ತಿರುವ ಮರಾಠಿ ಭಾಷಾ ಟೀಕಾದೊಡನೆ ಶ್ರೀ ವಾರದ ಮಲ್ಲಪ್ಪನವರಿಂದ ಮುದ್ರಿಸಲ್ಪಟ್ಟ "ವೀರಶೈವ ಸದಾಚಾರ ಸಂಗ್ರಹ" ಎಂಬ ಗ್ರಂಥವನ್ನು ನನ್ನಿಂದ ಕನ್ನಡ ಟೀಕಾ ಬರೆಸಿ ಪ್ರಕಾಶ ಪಡಿಸಿದರು. ಇನ್ನೂ ಬೇರೆ ಬೇರೆ ಗ್ರಂಥಗಳನ್ನು ಧರ್ಮಪ್ರಚಾರಕ ಮಂಡಲದಿಂದ ಪ್ರಕಾಶ ಪಡಿಸುತ್ತಾ ಬಂದಿರುವರು.

ಭೌತಿಕ ಸುಧಾರಣೆಯ ಕಡೆಗೆ ಲಕ್ಷಗೊಟ್ಟು. ಬಹು ಜೀರ್ಣವಾಗಿದ್ದ ಪ್ರಸಾದ ನಿಲಯವನ್ನು, ಮೂಲ ಮಠದ ಹಿಂಭಾಗವನ್ನು ನೂತನ ಪದ್ಧತಿಗನುಸರಿಸಿ ಭವ್ಯವಾಗಿ ನಿರ್ಮಾಣ ಮಾಡಿಸಿದರು. ಹಾಗೆ ಮುಂದುವರೆದು ಗ್ರಂಥಾಲಯ ಧರ್ಮಪ್ರಚಾರಕ ಮಂಡಲದ ಮಂದಿರ, ಅಕ್ಕಿ ಹಾಸ್ಟೆಲ್, ಜನರಲ್ ಹಾಸ್ಟಲ್, ಹೈಸ್ಕೂಲು, ಮಹಿಳಾ ಕಾಲೇಜ, ಭವ್ಯವಾದ ಮಹಾದ್ವಾರಾ ಇತ್ಯಾದಿಗಳನ್ನು ಹೊಸ ಮಾದರಿಯಲ್ಲಿ ನಿರ್ಮಾಣ ಮಾಡಿಸಿದರು. – ೧೯೫೫ ರ ಪೂರ್ವದಲ್ಲಿ ಮೂರುಸಾವಿರ ಮಠವನ್ನು ನೊಡಿದವರು ಆಕಸ್ಮಾತ್ ಈಗ ಬಂದು ನೋಡಿದರೆ ದಿಗ್ಭ್ರಾಂತರಾಗಿ ಇದು ಮೂರುಸಾವಿರ ಮಠವೊ ಬೇರೆ ಯಾವುದೊ ಎಂದು ಗಾಬರಿಯಾಗುವ ಹಾಗೆ ಮಾಡಿಸಿದ್ದಾರೆ.

ಶ್ರೀ ಮ. ನಿ. ಪ್ರ. ಹಾನಗಲ್ಲ ಕುಮಾರ ಸ್ವಾಮಿಗಳು ವೀರಶೈವ ಧರ್ಮ ತತ್ವವು ಜಗತ್ತಿನಲ್ಲಿಯೇ ಅತ್ಯಂತ ಶ್ರೇಷ್ಠವಾದುದೂ, ಸುಗಮವಾದುದೂ ಆಗಿದ್ದರೂ ಅದನ್ನು ಪ್ರಚಾರ ಮಾಡುವವರು ಇಲ್ಲದುದರಿಂದ ಹಿಂದೆ ಬಿದ್ದಿರುವದು, ಅದನ್ನು ಭಾರತದ ತುಂಬಾ ಪ್ರಚಾರ ಮಾಡುವುದಲ್ಲದೆ ಪಾಶ್ಚಾತ್ಯ, ಪೌರ್ವಾತ್ಯ, ದೇಶದಲ್ಲಿಯೂ ಪ್ರಚಾರ ಮಾಡಬೇಕೆಂಬ ಸತ್ಯ, ಸಂಕಲ್ಪವುಳ್ಳವರಾಗಿದ್ದರು. ಏಕೆಂದರೆ ಐವತ್ತು ವರ್ಷಗಳ ಹಿಂದೆ ದಕ್ಷಿಣ ಭಾರತದ ಕಾಶೀ ಕ್ಷೇತ್ರಕ್ಕೆ ಸಂಸ್ಕೃತಾಭ್ಯಾಸಕ್ಕಾಗಿ ಹೋದ ವೀರಶೈವರು ತಮ್ಮ ಲಿಂಗದ ಕರಡಿಗೆಯನ್ನು ಅಲ್ಲಿಯ ಪಂಡಿತರಿಗೆ ತೋರಿಸ ದಂತೆ ಶಿವದಾರವನ್ನು ಉದ್ದವಾಗಿ ಮಾಡಿಕೊಂಡು ಜನಿವಾರದಂತೆ ಹಾಕಿಕೊಂಡು ಕರಡಿಗೆ ಯನ್ನು ಟೊಂಕದಲ್ಲಿ ಸೇರಿಸಿಕೊಂಡು ತಲೆಯ ಮೇಲೆ ಜುಟ್ಟು ಬಿಟ್ಟು ಅಭ್ಯಾಸಮಾಡಿ

ಬರುತ್ತಿದ್ದರು ! ಇದನ್ನು ಕೇಳಿ ಹಾನಗಲ್ಲ ಶ್ರೀಗಳವರು ಹಾಗೆ ಸಂಕಲ್ಪಮಾಡಿದ್ದರು.

ಮಹಾ ಶಿವಯೋಗಿಗಳ ಆ ಸತ್ಯ ಸಂಕಲ್ಪವು ಎಷ್ಟೋ ವರ್ಷಗಳು ಗತಿಸಿ ಹೋದರೂ ಒಂದು ಸಲ ಪ್ರಕಟವಾಗಲೇಬೇಕು. ಅವರ ಕೃಪಾಶೀರ್ವಾದದಿಂದಲೇ ಜನ್ಮವೆತ್ತಿದ ಮೂರುಸಾವಿರ ಮಠದ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳಿಂದ ಪ್ರಕಟವಾಗಲಿಕ್ಕೆ ಹತ್ತಿದೆ. ಅಂತೆಯೇ ಜಗದ್ಗುರುಗಳು ತಾತ್ವಿಕ ಸುಧಾರಣೆಯನ್ನು ಕೈಕೊಂಡು, ದಿಲ್ಲಿಯಲ್ಲಿ ನಡೆದ ಜಾಗತಿಕ ಪರಿಷತ್ತಿನಲ್ಲಿ ಭಾಗವಹಿಸಿದರು. ಇದರಿಂದ ಉತ್ತರ ಭಾರತದವರಿಗೆ ದಕ್ಷಿಣ ಪ್ರಾಂತದಲ್ಲಿ ವೀರ ಶೈವವೆಂಬ ಶ್ರೇಷ್ಠವಾದ ಧರ್ಮವಿದೆ ಎಂಬುದನ್ನೂ ತೋರಿಸಿದಂತಾಯಿತು.

ನಂತರ ಜಪಾನದಲ್ಲಿ ನಡೆದ " ವಿಶ್ವಧರ್ಮ ಪರಿಷತ್ತಿ "ನಲ್ಲಿ ಭಾಗವಹಿಸುವದರಿಂದ ಪರಪ್ರಾಂತದ ಪೌರ್ವಾತ್ಯ, ಪಾಶ್ಚಾತ್ಯರೆಲ್ಲರಿಗೂ ಭಾರತದಲ್ಲಿ ವೀರಶೈವವೆಂಬ ಶ್ರೇಷ್ಠ ವಾದ ಧರ್ಮವಿರುವದನ್ನು ತಿಳಿಸಿದಂತಾಗಿದೆ. ಈ ಧರ್ಮದ ತತ್ವವನ್ನು ಸಂಪೂರ್ಣವಾಗಿ ತಿಳಿದುಕೊಳ್ಳಬೇಕೆಂಬ ಭಾವನೆಯಿಂದಲೇ " ವಿಶ್ವಧರ್ಮ ಪರಿಷತ್ತಿ " ನಲ್ಲಿ ಶ್ರೀ ಜಗ ದ್ಗುರುಗಳನ್ನು ಸದಸ್ಯರನ್ನಾಗಿ ಮಾಡಿಕೊಂಡಿದ್ದಾರೆ.

ಶ್ರೀ ಮ. ನಿ. ಪ್ರ. ಹಾನಗಲ್ಲ ಶ್ರೀಗಳವರದು ಇನ್ನೊಂದು ಸಂಕಲ್ಪವಿತ್ತು. ಅದು ಗುರು ವಿರಕ್ತರ ಸಂಘಟನೆ ಮಾಡುವದು. ಇದು ಸಾಧಿಸಬೇಕಾದರೆ ಪರಸ್ಪರ ತ್ಯಾಗ ಭಾವನೆಯುಳ್ಳವರಾಗಬೇಕು. ವಿರಕ್ತರು ವಿಧಿ ವಿಧಾನಗಳನ್ನು ಮಾಡುವ ಲೌಕಿಕ ಕರ್ಮಭಾಗದಲ್ಲಿ ಸೇರುವುದನ್ನು ತ್ಯಾಗಮಾಡಬೇಕು. ಆಚಾರ್ಯರು ವಿರಕ್ತ ರನ್ನು ಪೂಜ್ಯಭಾವದಿಂದ ಕಾಣದೇ ನಾವೇ ಜಗದ್ಗುರುಗಳೆಂಬ ಅಹಂಭಾವವನ್ನು ತ್ಯಾಗ ಮಾಡಬೇಕು. ಒಂದೇ ಗರ್ಭದಲ್ಲಿ ಜನಿಸಿದ ಸಹೋದರರಲ್ಲಿ ಒಬ್ಬರು ವಿರಕ್ತಮಠಕ್ಕೂ ಇನ್ನೊಬ್ಬರು ಗುರುಪೀಠಕ್ಕೂ ಅಧಿಕಾರಿಗಳಾದಾಗ್ಗೆ ಶ್ರೇಷ್ಠ ಕನಿಷ್ಠತೆಯೆಲ್ಲಿದೆ ? ಅವರ ವರ ಕಾರ್ಯಗಳನ್ನು ಅವರವರು ಮಾಡುತ್ತ ಹೋದರೆ ಯಾವ ತೊಂದರೆ ಇರುವದಿಲ್ಲ. ಗುರು ವಿರಕ್ತರ ಭಾವೈಕ್ಯ ಒಂದಾಗುವಂತೆ ಜಗದ್ಗುರುಗಳು ಪ್ರಯತ್ನಿಸುತ್ತಿರುವದು ಸ್ತುತ್ಯವಾದ ಸಂಗತಿ. □

# ಮಲಪಹಾರಿ ಕುಟೀರದ ವಟು

ಶ್ರೀ ಮ. ಘ. ಚ. ಶಾಂತವೀರ ಪಟ್ಟಾಧ್ಯಕ್ಷರು, ಸಿಂದಗಿ

ಕುಮಾರೇಶ ಕಟ್ಟಿದ ಮಂದಿರ ಶಿವಯೋಗ ಮಂದಿರ. ನಾಡಿನ ಆಧ್ಯಾತ್ಮ ಭೂಮಿ ಹದಗೊಳಿಸಿ ಜೀವ ಜಲವೆರೆದು ಮೌಢ್ಯ ಹಿಡಿದ ಸಮಾಜಕ್ಕೆ ನಿಜ ಧರ್ಮದ ತಿರುಳನ್ನು ತಿಳಿಸುವ ದಿವ್ಯಮಂದಿರ, ದೇವಮಂದಿರ. ಆ ಮಹತ್ ಕಾರ್ಯ ಆ ಮಹಿಮಾನ್ವಿತ ಜಾಗೆಯಿಂದ ಹೊರಬಂದ ಅನೇಕ ಸಾಧಕರಿಂದ ನಾಡಿನ ನಾನಾ ಭಾಗಗಳಲ್ಲಿ ನಡೆದಿರುವದು ನಮ್ಮೆಲ್ಲರಿಗೆ ಸಂತೋಷದ ವಿಷಯು. ಹುಬ್ಬಳ್ಳಿ ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಸಾಗರದಾಚೆಗಿನ ದೇಶಗಳ ವರೆಗೊ ಈ ಕಾರ್ಯಗೈದು ಬಂದದ್ದು ಇನ್ನೂ ಸಂತೋಷವಾದುದು. ಅದೇ ಆಗ ಶ್ರೀ ಜಗದ್ಗುರುಗಳು ಜಪಾನ ದೇಶದಿಂದ ದಯಮಾಡಿಸಿದಾಗ ತಮ್ಮೆಲ್ಲ ಈ ಕಾರ್ಯಕ್ಕೆ "ಕುಮಾರೇಶನ ಅಂತಃಪ್ರೇರಣೆಯೆ ಕಾರಣ" ಎಂದು ಹೃದಯತುಂಬಿ ನುಡಿದ ನೆನೆಪು ಸದಾ ಬರುತ್ತಿದೆ.

ಶಾಲಿವಾಹನ ಶಕೆ ೧೮೫೪ ಅಂದರೆ ೧೯೩೩ ನೇ ಇಸ್ವಿಯಲ್ಲಿ; ಅಂದು ಅಧ್ಯಕ್ಷರಾದ ಶ್ರೀ ನಿ. ಪ್ರ. ಹಾವೇರಿ ಶಿವಬಸವಸ್ವಾಮಿಗಳು, ಉಳಿದೆಲ್ಲ ವಟುಗಳು, ಸಾಧಕರು (...ನಾವೂ ಸಾಧಕರಾಗಿದ್ದೆವು). ಹಾನಗಲ್ಲಪ್ಪಗಳ ಕರ್ತೃಗದ್ದುಗೆಯ ಮುಂಭಾಗದಲ್ಲಿ ಮುಹೂರ್ತಮಾಡಿರಲು ಮರುಳಸಿದ್ದಯ್ಯ ಚನ್ನಮ್ಮ ದಂಪತಿಗಳು ಕರ್ತೃಗದ್ದುಗೆಗೆ ಸಾಷ್ಟಾಂಗವೆರಗಿ ಬಂದು ಮಂದಿರದ ಮಗುವೆಂದು ಮಹಾಂತೇಶನನ್ನು ಹಾವೇರಿ ಶ್ರೀಗಳಿಗೆ ಒಪ್ಪಿಸಿದರು. ಕುಮಾರೇಶನ ಆ ಬೆಳಕಿನ ಮಧ್ಯದಲ್ಲಿಯೇ ಮಗುವನ್ನು ಒಪ್ಪಿಸಿದಾಗ ಹಿಂದಿನ ಕಳವಳ ಆ ದಂಪತಿಗಳಿಗಿರಲಿಕ್ಕಿಲ್ಲ; ಸಮಾಧಾನ, ಶಾಂತಿ ಸಿಕ್ಕಿರಬೇಕು ಕುಮಾರೇಶನ ಕರುಣೆಯಿಂದ.

ವಟು ಜೀವನ ಪ್ರಾರಂಭವಾಯಿತು. ಮಹಾಂತೇಶ ಮಹಾಂತಮರಿಯಾದರು. ಹಾವೇರಿ ಪೂಜ್ಯರು ಮಹಾಂತಣ್ಣನೆಂದು ಹರ್ಷದಿಂದ ಕರೆಯುತ್ತಿದ್ದರು. ಅಂದಿನ ಆ ದಿನಗಳ ನೆನಹು ನಮ್ಮ ಮನಸ್ಸಿನಲ್ಲಿ ಇನ್ನೂ ಹಚ್ಚ ಹಸುರಾಗಿವೆ. ನಮಗೆ ಶಾಂತವೀರ ದೇವರ ಬದಲು "ಶಾಂತಲ್ ಶಾಂತಲ್" ಎಂದು ಕರೆಯುತ್ತಿದ್ದರು! ಉಂಡಿಗೆ "ಊ" ಎಂತಲೂ ಖರ್ಜೂರಿಗೆ 'ಖ' ಎಂದು, ಹಣ್ಣಿಗೆ 'ಹ' ಎಂದು ಕೇಳುತ್ತಿ-

ದ್ದರು. ಆಚೆ ಈಚೆ ಓಡಾಡುತ್ತ, ತೊದಲ್ನುಡಿಗಳನ್ನು ನುಡಿಯುತ್ತ, ತಂದೆ ತಾಯಿಗಳನ್ನು ಮರೆತರು ಮಹಾಂತಮರಿ. ನಿಮ್ಮ ಊರು ಯಾವದೆಂದರೆ ಶಿವಯೋಗಮಂದಿರವೆಂತಲೂ; ತಂದೆಯ ಹೆಸರನ್ನು ಕೇಳಿದರೆ ಕುಮಾರೇಶನೆಂದೂ ಹೇಳುತ್ತಿದ್ದರು. ಹಟ ಹಿಡಿದು ಪಡೆದ ವಸ್ತುಗಳನ್ನು ಸಹ ಪುನಃ ಕೇಳಿದಾಗ ಆಗಿಂದಾಗ್ಗೆ ಎಲ್ಲವನ್ನೂ ಕೊಟ್ಟು ಬಿಡುತ್ತಿದ್ದರು. ಓದುವದಾಗಲಿ, ಹಾಡುವದಾಗಲಿ, ಮಹಾಂತಮರಿದೇವರು ಹಿಂದೆ ಬಿದ್ದರೆಂಬುದನ್ನು ಕೇಳುವಂತಿರಲಿಲ್ಲ, ಸೋತರೂ ಗೆದ್ದರೆಂದೇ ಹೇಳಿದಾಗ ಸಮಾಧಾನ. ಇಲ್ಲವಾದರೆ ಹಟವೇ ಹಟ, ಗೆದ್ದಿರಿ ಎನ್ನುವ ವರೆಗೂ ಹಟ.

ಆಟದಲ್ಲಿ ಒಂದೆರಡು ರಸ ನೆನಪುಗಳನ್ನು ಹೇಳಬೇಕಾದರೆ ಹಾಸುಗೆಯ ಸುರುಳಿಗಳನ್ನು ಒಂದರ ಮೇಲೊಂದರಂತೆ ಇಟ್ಟು ಅದರ ಮೇಲೆ ಕುಳಿತು "ಸರೀರಿ ಆನಿ ಬಂತು" ಎಂದು ಎಲರನ್ನೂ ಸರಿಸುತ್ತಿದ್ದರು. ಕಡ್ಡಿಪೆಟ್ಟಿಗೆಗಳನ್ನು ಸಾಲಾಗಿ ಇಟ್ಟು ರೈಲುಮಾಡುವರು; ಕಾರು ಮಾಡುವರು; ಹತ್ತಿರಿ ಹೊರಡೋಣ ಕಾರಿನಲ್ಲಿ ಎಂದಾಗ ಎಲ್ಲರೂ ನಕ್ಕುಬಿಡುತ್ತಿದ್ದೆವು, ಹಾಳೆಯ ತುಂಡುಗಳನ್ನು ಒಂದುಗೂಡಿಸಿ ಅವೆಲ್ಲ ಏತಕ್ಕೆ ಎಂದು ಕೇಳಿದರೆ ಓದಲು ಬರೆಯಲು ಬೇಕೆಂದು ಜೋಪಾನವಾಗಿಟ್ಟುಕೊಳ್ಳುತ್ತಿದ್ದರು. ಅಪೂರ್ಣ ಗೊತ್ತಿದ್ದ ಪದವನ್ನೂ ಏನಾದರೊಂದು ಶಬ್ದ ಕೂಡಿಸಿ ಸರಿ ಎಂಬಂತೆ ಹಾಡಿಬಿಡುತ್ತಿದ್ದರು. ಊಟವೆಂದರೆ ಉತ್ಸಾಹವೇ ಉಡುಗುತ್ತಿತ್ತು. ತಾಟು, ತಂಬಿಗೆ ಎಲ್ಲಿಯಾದರೂ ತೆಗೆದಿಟ್ಟು ಯಾರೋ ತೆಗೆದಿಟ್ಟಿದ್ದಾರೆಂದು ಹೇಳಿ ತಪ್ಪಿಸುವ ನೆವ ಹೂಡುತ್ತಿದ್ದರು. ಬರು-ಬರುತ್ತ ಈಜುವದನ್ನು ಸಹ ಕಲಿತರು. ಮಲಪಹಾರಿಣಿಯಲ್ಲಿ ನಾವೆಲ್ಲ ಈಜಿ ಹೊರಬಂದರೂ ಮಹಾಂತಮರಿದೇವರು ಇನ್ನೂ ಹೊರಗೆ ಬಾರದ್ದನ್ನು ಕಂಡು ಮೊಸಳೆ ಬಂದಿದೆ ಎಂದು ಹೆದರಿಸಿ ಬರಲು ಕರೆದರೆ ಎಲ್ಲಿದೆ ಮೊಸಳೆ ತೋರಿಸಿರಿ ಎಂದರೆ ಹೊರಗೆ ಬರುವೆನೆನ್ನುತ್ತಿದ್ದರು.

ಅಂದಿನ ನಮ್ಮೆಲ್ಲರೆದುರಿಗಿನ ಮಹಾಂತ ಮರಿದೇವರು ಇಂದು ಶ್ರೀ ಜಗದ್ಗುರುಗಳು. ಪರಸ್ಪರರ ಹೃದಯಸಂಗಮ ಅಂದು ಇಂದು ಒಂದೆ. ಅದು ಅವರ ಸಹೃದಯತೆಯ ಔದಾರ್ಯದ ಪ್ರತೀಕ. ಈ ಭಾವ ಬೆಳೆದು ಇನ್ನೂ ಹೆಚ್ಚಿನ ಕಾರ್ಯ ಮಾಡುವ ಶಕ್ತಿ ಕುಮಾರೇಶ ಕರುಣಿಸಲೆಂಬುದು ಇಂದಿನ ನಮ್ಮ ಕರುಳಿನ ಕರೆ ! □

# ಶ್ರೀ ನಿರುಪಮ ಜಗದ್ಗುರು

ಪಂ. ಶ್ರೀ ಹರಿಸರ್ವೋತ್ತಮದಾಸರು, ಮೈಸೂರು

ಹುಬ್ಬಳ್ಳಿಯಲ್ಲಿರುವ ಶ್ರೀ ಜಗದ್ಗುರು ಮೂರುಸಾವಿರಮಠಕ್ಕೂ ನನಗೂ ಅಖಂಡ ೪೦ವರ್ಷಗಳ ಸಂಬಂಧ. ಲಿಂಗೈಕ್ಯ ಶ್ರೀ ಜಗದ್ಗುರು ಗುರುಸಿದ್ಧೇಶ ರಾಜ ಯೋಗೀಂದ್ರರು ಈ ಮಠದಲ್ಲಿ ಜ್ಞಾನದ ಬೀಜವನ್ನು ಬಿತ್ತಿ ಹೋದರು. ಈಗ ಅವ ರಿಂದ ಬಾಳಿನ ಬೆಳಕನ್ನು ಕಂಡ ಅನೇಕ ವಿದ್ವಾಂಸರನ್ನು ನಾವು ವಿಪುಲವಾಗಿ ಕಾಣು ತ್ತೇವೆ. ಕೀರ್ತಿಶೇಷರಾದ ಜಗದ್ಗುರುಗಳ ಮನೀಷೆ ಬಹಳ ದೊಡ್ಡದಾಗಿತ್ತು. ಹುಬ್ಬಳ್ಳಿ ನಾಡಿನಲ್ಲಿ ಹುಟ್ಟಿದ ಬಡವಿದ್ಯಾರ್ಥಿಯು ಅಕ್ಷರಾಭ್ಯಾಸದಿಂದ ಆರಂಭಿಸಿ, ಪಿ.ಎಚ್.ಡಿ. ಪದವಿಯ ವರೆಗೂ ಇಲ್ಲಿಯೇ ಓದಿ ಪಾರಂಗತನಾಗಬೇಕೆಂದಿತ್ತು. ಈಗ ಅದು ಸಾರ್ಥಕವಾಗಿರುವುದಿಲ್ಲವೇ ? ಜಗದ್ಗುರುಗಳ ಕೃಪಾಪ್ರಸಾದದಿಂದ, ಮೂರ್ತಿಮಂತ ವಾಗಿರುವ Engineering, Law, Commerce, Technology, Arts, Science, Medical ಕಾಲೇಜುಗಳನ್ನು ನೋಡಿದರೆ, ಪ್ರತಿವರ್ಷವೂ ಸಹಸ್ರಾರು ವಿದ್ಯಾರ್ಥಿಗಳು ಅವುಗಳೊಳಗಿಂದ ಪಾರಂಗತರಾಗಿ ಬರುವದನ್ನು ನೋಡಿದರೆ, ಒಬ್ಬ ಜಗದ್ಗುರುವು ಅನಂತ ಶಿಷ್ಯವೃಂದವನ್ನು ನಿರ್ಮಿಸುತ್ತಿರುವ ಈ ಸೊಬಗು ಅವರ್ಣನೀಯವೆನಿಸುತ್ತದೆ.

## ಮೂರುಸಾವಿರಮಠದ ಪರಧರ್ಮ ಸಹಿಷ್ಣುತೆ

ಮಾಧ್ವ ಬ್ರಾಹ್ಮಣ ವಿದ್ಯಾರ್ಥಿಯಾಗಿದ್ದ ನನಗೆ ಶ್ರೀ ವೀರಶೈವ ಜಗದ್ಗುರುಗಳ ಸೇವಾಸಂದರ್ಭವೊದಗಿಬಂದದ್ದು ಕೌತುಕದ ಸಂಗತಿಯಾಗಿದೆ. ಶ್ರೀ ಗುರುಸಿದ್ಧೇಶ ಜಗದ್ಗುರುವರರು ತಮ್ಮ ಮೂರುಸಾವಿರಮಠದ ಪ್ರತಿ ವರ್ಷ ಶ್ರಾವಣಮಾಸದ ಹಾಗೂ ಶಿವರಾತ್ರಿ ಮಹೋತ್ಸವಗಳಲ್ಲಿ ನಮ್ಮಿಂದಲೇ ಶಿವಕೀರ್ತನೆಗಳು ನಡೆಯ ಬೇಕೆಂಬ ಅಪ್ಪಣೆಯನ್ನು ಮಾಡಿ, ಕೊನೆಯುವರೆಗೂ ನಡಿಸಿಯೇ ಬಿಟ್ಟರು. ಪರಧರ್ಮ ಸಹಿಷ್ಣುತೆಯಲ್ಲಿ ನಮ್ಮ ಮೂರುಸಾವಿರ ಮಠವನ್ನು ಬಿಟ್ಟರೆ ಬೇರೆ ಇನ್ನೊಂದಿಲ್ಲ. ಯದ್ಯಪಿ ಶ್ರೀ ಮದ್ವೀರಶೈವ ಜಗದ್ಗುರು ಪೀಠವಾಗಿರುವ ಕುಮಾರಸಮಯದ ಈ ಮಠಕ್ಕೆ ಈ ಪ್ರಾಂತದ ಹಲವಾರು ಜಾತಿ, ಮತ, ಪಂಗಡದವರೆಲ್ಲ ಶಿಷ್ಯರಾಗಿರುವದು

ಇಂದಿಗೂ ಮಠದ ಮಹಿಮೆಯನ್ನು ಎತ್ತಿತೋರಿಸುತ್ತಿದೆ. ಕೇವಲ ವೀರಶೈವರಿಗಾಗಿ ಈ ಮಠವು ಎಂದೂ ಮೀಸಲಾಗಿಲ್ಲ. ಹಿಂದೆ ಧಾರವಾಡದ ಶುಕ್ರವಾರ ಪೇಟೆಯಲ್ಲಿದ್ದ ಜಡ್ಜಿ ತಿರುಮಲರಾಯರು ಮಾಧ್ವ ಬ್ರಾಹ್ಮಣರಾದರೂ ಸಹ ಈ ಮಠದ ಸೇವೆಮಾಡಿದ ಉದಾಹರಣೆ ಪ್ರತ್ಯಕ್ಷವಾಗಿದೆ. ಲಿಂಗೈಕ್ಯ ಜಗದ್ಗುರು ಶ್ರೀಗಂಗಾಧರ ಮಹಾಸ್ವಾಮಿಗಳ ಅಡ್ಡಪಲ್ಲಕ್ಕಿ ಮಹೋತ್ಸವ ನಡೆದಾಗ್ಗೆ ಕೀರ್ತಿಶೇಷ ಜೈನ ಸಾಹುಕಾರರಾದ ಪರಪನಹಳ್ಳಿ ಶ್ರೀ ರಾಯಪ್ಪನವರು ಜಗದ್ಗುರುಗಳ ಪಲ್ಲಕ್ಕಿಯ ಮೇಲೆ ಬಂಗಾರದ ಹೂಗಳನ್ನು ಮಾಡಿಸಿ ತೂರಿದರೆಂದು ಪ್ರಸಿದ್ಧವಾಗಿದೆ. ಇಂದಿಗೂ ಮಠದಸುತ್ತಲೂ ಜೈನ ಮತ್ತು ಸೋಮವಂಶ ಕ್ಷತ್ರಿಯರ ಹಾಗೂ ಮುಸಲ್ಮಾನ ಬಾಂಧವರ ಮನೆಗಳೇ ಹರಡಿವೆ. ಕೀರ್ತಿಶೇಷರಾದ ಉತ್ತಂಗಿ ಚನ್ನಪ್ಪನವರು ಕ್ರೈಸ್ತರಾಗಿದ್ದರೂ ಕೂಡಾ ನಮ್ಮ ಮಠದ ಪರಮ ಭಕ್ತರಾಗಿದ್ದರು. ನಮ್ಮ ಶ್ರೀ ಮೂರುಸಾವಿರ ಮಠದಲ್ಲಿ ನಡೆದುಬಂದ ಅನೇಕ ಕೀರ್ತನಮಾಲಿಕೆಯನ್ನು ಅವಲೋಕಿಸಿದರೆ ಪೀಠಾಧಿಪತಿಗಳ ಸಹಿಷ್ಣುತಾಬುದ್ಧಿಯ ಮೇಲ್ಮೆ ಕಂಡುಬರುತ್ತದೆ. ಇಲ್ಲಿ ಸರ್ವಮತಾಚಾರ್ಯರ, ಅನೇಕ ಸಾಧು-ಸಂತರ, ಲೋಕವಿಖ್ಯಾತರ ಕಥೆಗಳನ್ನು ನಾವು ಹೇಳಿದ್ದೇವೆ. ಉದಾ: ಶ್ರೀ ರೇಣುಕಾಚಾರ್ಯ, ಶ್ರೀ ಪಂಡಿತಾರಾಧ್ಯರು, ಶ್ರೀ ಶಂಕರ, ಶ್ರೀ ರಾಮಾನುಜ, ಶ್ರೀ ಮಾಧ್ವ, ಶ್ರೀ ಚೈತನ್ಯ, ಶ್ರೀ ರಾಮಕೃಷ್ಣಪರಮಹಂಸ, ಸಾಹಿಮಹಾರಾಜ, ವಿವೇಕಾನಂದ, ಟಿಳಕ, ಮಹಾತ್ಮಾಗಾಂಧಿ, ಪಂ. ನೆಹರೂ, ಭಗವಂತಸಿಂಗ, ಹಾಗೂ ವೈಶ್ಯ ಬಾಂಧವರಿಗಾಗಿ ಶ್ರೀ ಕನ್ನಿಕಾಪುರಾಣ,ಮಹಮ್ಮದೀಯರಿಗೆ 'ಪೈಗಂಬರ ಚರಿತ್ರೆ' ಮುಂತಾದುವು. ಇತ್ತೀಚೆಗೆ ನಡೆದ ಶ್ರೀ ರಾಘವೇಂದ್ರ ಸ್ವಾಮಿಗಳ ೩೦೦ನೇ ವರ್ಷದ ಆರಾಧನೆಗಾಗಿ ನಮ್ಮ ಶ್ರೀ ಮೂರುಸಾವಿರ ಮಠದಲ್ಲಿ ಪೂಜ್ಯ ಗಂಗಾಧರ ರಾಜಯೋಗೀಂದ್ರರ ಅಪ್ಪಣೆಯ ಮೇರೆಗೆ ಅವರ ಸಚ್ಚರಿತ್ರವೂ ಕೂಡಾ ನಮ್ಮಿಂದ ನಡೆದು ಜನೋಪಕಾರಿಯಾಯಿತು. ಶ್ರೀರಾಘವೇಂದ್ರ ಸ್ವಾಮಿಗಳ ಕೀರ್ತನೆಯನ್ನು ಪೂಜ್ಯ ಶ್ರೀ ಗಂಗಾಧರ ಜಗದ್ಗುರುಗಳು ಶ್ರೀ ಮೂರುಸಾವಿರಮಠದಲ್ಲಿ ಜರುಗಿಸಿದ್ದಕ್ಕೆ ಮೆಚ್ಚಿಕೊಂಡು. "ವಿಶ್ವವಾಣಿ" ದಿನಪತ್ರಿಕೆಯು ಅದರ ಮೇಲೆ "ಸಹಜೀವನಕ್ಕೆನಾಂದಿ" ಎಂಬ ಸಂಪಾದಕೀಯವನ್ನೇ ಬರೆಯಿತು. ಅದು ಹೀಗಿದೆ–

"ಹುಬ್ಬಳ್ಳಿಯ ಶ್ರೀ ಮೂರುಸಾವಿರ ಮಠದಲ್ಲಿ ರಾಘವೇಂದ್ರ ಸ್ವಾಮಿಗಳವರ ಬಗ್ಗೆ ಮೂರುದಿನಗಳವರೆಗೆ ಕೀರ್ತನೆಯನ್ನು ಏರ್ಪಡಿಸಿ ಆ ಮಠದ ಜಗದ್ಗುರುಗಳು ಒಳ್ಳೆಯ ಕಾರ್ಯವನ್ನೇ ಮಾಡಿದ್ದಾರೆ. ಮೂರುಸಾವಿರ ಮಠವು ವೀರಶೈವ ಮತವೆಂಬ ತಪ್ಪು ಕಲ್ಪನೆ ಜನರಲ್ಲಿ ಬಹಳ ಕಾಲದಿಂದ ಬೇರೂರಿತ್ತು. ಮೂರುಸಾವಿರ ಮಠದ ಜಗದ್ಗುರುಗಳು ತಮ್ಮ ಪ್ರಗತಿಶೀಲವಾದ ಧೋರಣೆಯಿಂದ ತಮ್ಮದು ಒಂದೇ ಧರ್ಮದವರ ಮಠವಲ್ಲವೆಂದು ಸಿದ್ಧಮಾಡಿರುವದು ಸ್ವಾಗತಾರ್ಹವಾಗಿದೆ. ಮೂರುಸಾವಿರ ಮಠದಲ್ಲಿ ಶ್ರೀ ರಾಘವೇಂದ್ರಸ್ವಾಮಿಗಳ ಬಗ್ಗೆ ಕೀರ್ತನೆ ನಡೆದಂತೆ ರಾಘವೇಂದ್ರ ಸ್ವಾಮಿಗಳ ಮಠದಲ್ಲಿ ಬಸವಣ್ಣನವರ ಕೀರ್ತನೆ ನಡೆಯುವಂತೆ ಮೂರು

ಸಾವಿರ ಮಠದ ಜಗದ್ಗುರುಗಳು ಮಾಡಬೇಕು. ಸ್ವಾಮಿಗಳಂಥ ಪುಣ್ಯಪುರುಷರಿಗೆ ಯಾವ ಕಾರ್ಯವೂ ಅಸಾಧ್ಯವಲ್ಲ. ಅವರ ಮುಂದಾಳ್ತನದಲ್ಲಿ ರಾಘವೇಂದ್ರ ಸ್ವಾಮಿಗಳ ಮಠದಲ್ಲಿ ಬಸವಣ್ಣನವರ ಕೀರ್ತನೆ ನಡೆಯುವುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಇಂಥ ಕಾರ್ಯಗಳ ಮೂಲಕವೇ ಸಹಜೀವನಕ್ಕೆ ನಾಂದಿ ಆಗುತ್ತದೆ".

ಸಂಪಾದಕೀಯ–" ವಿಶ್ವವಾಣಿ "
ದಿ. ೧೧–೮–೧೯೭೧

## ಶಾಂತಿರಸದ ಸಾಕಾರಮೂರ್ತಿ

ಇಂಥ ಸುಂದರವಾದ ಮಠಕ್ಕೆ ಲಿಂಗೈಕ್ಯ ಜಗದ್ಗುರುಗಳು ತಮ್ಮ ನಂತರ ಯೋಗ್ಯ ಮೂರ್ತಿಯನ್ನು ಉತ್ತರಾಧಿಕಾರದಲ್ಲಿ ಇರಿಸಿ ಹೋಗಿರುವದೊಂದು ಅಮೃತ ಘಟನೆ. ಆ ಮೂರ್ತಿಯೆಂದರೇನೇ ಪ್ರಕೃತ ಪೀಠಾಧೀಶರಾಗಿರುವ ಶ್ರೀ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು. ಇವರನ್ನು ನಾನು ಬಾಲ್ಯದಿಂದಲೇ ಸಂದರ್ಶಿಸುತ್ತಿದ್ದೇನೆ. ಶಿವಯೋಗ ಮಂದಿರದಲ್ಲಿ, ಶ್ರೀ ಕ್ಷೇತ್ರ ಕಾಶಿಯಲ್ಲಿ ಇವರ ವಿದ್ಯಾರ್ಥಿದೆಶೆಯಿಂದಲೂ ಅರಿತು, ಇವರಲ್ಲಿ ಸಂಪೂರ್ಣ ಅನುರಾಗವುಳ್ಳವನಾಗಿದ್ದೇನೆ. ಇವರು ಚಿಕ್ಕಮಂಗಳೂರು ಜಿಲ್ಲೆಯ ಕಡೂರು ತಾಲೂಕಿನ ಸಸಿವಾಳ ಗ್ರಾಮದಲ್ಲಿ ಪೂಜ್ಯ ವೀರಶೈವ ದಂಪತಿಗಳಾದ ಶ್ರೀ ಮರುಳಸಿದ್ಧಯ್ಯ ಹಾಗೂ ಸೌಭಾಗ್ಯವತೀ ಚೆನ್ನಮ್ಮ ಎಂಬ ದಂಪತಿಗಳ ಪವಿತ್ರ ಗರ್ಭದಲ್ಲಿ ದಿ. ೧೧-೭-೧೯೨೭ರಂದು ಜನಿಸಿ ಬಂದವರು. ಇವರಲ್ಲಿ ನಾನು ಕಂಡ ಪ್ರಾಮುಖ್ಯವಾದ ಸದ್ಗುಣವೆಂದರೆ "ಶಾಂತಿರಸ." ಇದಕ್ಕೆ ಸೂಕ್ತಕಾರಣವೂ ಇದೆ. ನಮ್ಮ ಜಗದ್ಗುರುಗಳು ಇಷ್ಟೊಂದು ಶಾಂತರಾಗಿರಲು ಕಾರಣವೆಂದರೆ ಇವರು ಹುಟ್ಟಿದ ಊರು "ಸಸಿವಾಳ" ಅಂದರೆ ಶಶಿ(ಚಂದ್ರನು) ಬಾಳಿದ ಊರು. ಶಾಂತಿರಸದ ಅಧಿದೇವತೆಯೆಂದು ಕಾವ್ಯಗಳಲ್ಲಿ ವರ್ಣಿತನಾದ ಚಂದ್ರನ ಊರಲ್ಲಿ ಹುಟ್ಟಿದವರು ಶಾಂತರಸಭರಿತರಾಗರೇ? ಹುಟ್ಟಿದ್ದು ಶಾಂತ ಭೂಮಿ. ಬೆಳೆದು ಬಂದದ್ದು ಶ್ರೀ. ನಿ.ಪ್ರ.ಸ್ವ. ಇಳಕಲ್ಲ ವಿಜಯ ಮಹಾಂತೇಶನ ಕೃಪಾಛತ್ರದಲ್ಲಿ. "ಸುಶೀಲೋ ಮಾತೃ ಪುಣ್ಯೇನ, ಪಿತೃಪುಣ್ಯೇನ ಪಂಡಿತಃ" ಎಂಬಂತೆ ಅತ್ಯಂತ ಕರುಣಾ ಸಮುದ್ರರೂ, ತಪೋಧನರೂ ಆದ ಶ್ರೀ ಶ್ರೀ ಮಹಾಂತಸ್ವಾಮಿಗಳಂಥ ಆಧ್ಯಾತ್ಮಿಕ ತಂದೆಗಳು ದೊರಕಿದ ಮೇಲೆ ಹೆಚ್ಚೇನು ಬೇಕು? ಹಾನಗಲ್ಲ ಕುಮಾರೇಶನ ಗರಡಿಯಾದ ಶಿವಯೋಗ ಮಂದಿರದಲ್ಲಿ, ಯೋಗಾಭ್ಯಾಸ ಮುಗಿಸಿ, ವಿದ್ವತ್ ಕೇಂದ್ರವಾದ ವಾರಣಾಸಿಯಲ್ಲಿ ಸಂಸ್ಕೃತ. ಹಿಂದೀ, ಇಂಗ್ಲೀಷು ಭಾಷೆಗಳನ್ನು ಅಭ್ಯಾಸಮಾಡಿ "ವೇದಾಂತಾಚಾರ್ಯ" "ಕಾವ್ಯತೀರ್ಥ" "ಹಿಂದಿ ಸಾಹಿತ್ಯರತ್ನ" ಬಿ. ಎ. ಮುಂತಾದ ಪ್ರಶಸ್ತಿಗಳನ್ನು ಪದವಿಗಳನ್ನು ಪಡೆದುಬಂದ ವಿದ್ವನ್ಮಣಿಗಳಾಗಿದ್ದಾರೆ. ಇವರ ಶಾಂತರಸದ ಮುಖ ಮುದ್ರೆಯನ್ನು ನಾನು ಕಂಡರೀತಿಯಲ್ಲಿ ಒಂದು ಘಟನೆಯನ್ನು ನಿರೂಪಿಸಿಲಿರುವೆ. ಲಿಂಗೈಕ್ಯ ಜಗದ್ಗುರುವರರು ತಮ್ಮ ಪೀಠಕ್ಕೆ ಉತ್ತರಾಧಿಕಾರಿಯನ್ನಾಗಿ ಈ ನಮ್ಮ ಜಗದ್ಗುರು

ಗಳನ್ನು ಅರಿಸಿ, ಕಾಶಿಯಿಂದ ಕರೆಯಿಸಿ, "ವಿಜಯ ಮಹಾಂತೇಶ! ನೀನು ನಮ್ಮ ಮೂರುಸಾವಿರ ಮಠದ ಪಟ್ಟಾಧಿಕಾರಿಯಾಗಬೇಕು. ಇದು ನಮ್ಮ ಹಿರಿಯಾಸೆ"ಎಂದು ಅಪ್ಪಣೆಮಾಡಿದರು. ಪಟ್ಟಾಧಿಕಾರ, ಪಟ್ಟಾಭಿಷೇಕ ಎಂಬ ಶಬ್ದಗಳನ್ನು ಕೇಳಿದ ಮಾತ್ರ ದಿಂದಲೇ ಭಕ್ತರಿಗೆಲ್ಲ ಹರ್ಷೋತ್ಸಾಹಗಳು ಉಂಟಾದವು. ಆದರೆ ಶ್ರೀ ವಿಜಯಮಹಾಂ ತೇಶನ ಮುಖದಿಂದ "ಜಗದ್ಗುರುಗಳ ಅಪ್ಪಣೆಯನ್ನು ಶಿರಸಾವಹಿಸುವೆ"ನೆಂಬ ವಾಕ್ಯವ ಹೊರಗೆ ಬಂದಾಗ್ಗೆ ಪ್ರತ್ಯಕ್ಷ ಅವರ ಮುಖ ನೋಡಿದ ನನಗೆ, ಅವರ ಮುಖದಲ್ಲಿ ಏನೊಂದೂ ಹರ್ಷವಿಕಾರಗಳು ಕಂಡುಬರಲಿಲ್ಲ. "ಸುಖದುಃಖೇ ಸಮೇಕೃತ್ವಾ" ಎಂಬುದು ನೆನಪಾಯಿತು. ದಶರಥನು ರಾಮನಿಗೆ ಪಟ್ಟಾಭಿಷೇಕಮಾಡುವೆನೆಂದಾಗ್ಗೆ ಮತ್ತು ನೀನು ೧೪ವರ್ಷ ವನವಾಸಕ್ಕೆ ಹೋಗು ಎಂದು ಹೇಳಿದಾಗ್ಗೆ; ರಾಮನು ಎರಡೂ ಸನ್ನಿವೇಶಗಳಲ್ಲಿ ಯೂ ತನ್ನ ಮನೋಭಾವವನ್ನೂ ಮುಖಭಾವವನ್ನೂ ಕಿಂಚಿತ್ತಾದರೂ ಬದಲಿಸಲಿಲ್ಲ.

**ದಧತೋ ಮಂಗಲಕ್ಷೌಮೇ, ವಸಾನಸ್ಯ ಚವಲ್ಕಲೇ**
**ದದೃಶುರ್ವಿಸ್ಮಿತಾಸ್ತಸ್ಯ ಮುಖರಾಗಂ ಸಮಂ ಜನಾಃ ॥**

ರಘುವಂಶ : ೮, ೧೨

ಇದೇ ಪೂರ್ಣಯೋಗಿಯ ಲಕ್ಷಣ. ಇದಲ್ಲದೇ ಮುಂದೆ ಪಟ್ಟಾಭಿಷೇಕ, ಅಡ್ಡಪಲ್ಲಕ್ಕಿ ಮಹೋತ್ಸವ, ಅನೇಕ ಮಹಾಸಭೆಗಳಲ್ಲಿ, ಗೌರವ ಪೂಜಾಪ್ರಸಂಗದಲ್ಲಿ, ದಿಲ್ಲಿ ವಿಶ್ವಶಾಂತಿ ಪರಿಷತ್ತಿಗೆ ಹೋಗುವಾಗ, ಜಪಾನ ವಿಶ್ವಶಾಂತಿ ಪರಿಷತ್ತಿಗೆ ಹೋಗು ವಾಗ ನಮ್ಮ ಜಗದ್ಗುರುಗಳ ಮುಖಭಾವವು ಎಂದೂ ವಿಕಾರಹೊಂದಲಿಲ್ಲ. ಕೇವಲ ಶಾಂತಿರಸವೇ ಹೊರಸೂಸುತ್ತಿರುತ್ತದೆ. ಇವರೇ ನಿಜವಾದ ವೀರಶೈವ ಸಾಮರಸ್ಯ ಶಿವಯೋಗೀಂದ್ರರು.

## " ನಾನು ಚಿಕ್ಕಮರಿಯಾಗಿ ಬೆಳೆಯುತ್ತಿದ್ದೇನೆ "

ಪಿತರಾಜ್ಞಾ ಪರಿಪಾಲಕತ್ವವು ನಮ್ಮ ಜಗದ್ಗುರುಗಳಲ್ಲಿ ಅಪೂರ್ವವಾಗಿದೆ. ಪಟ್ಟಾಧಿಕಾರಿಯಾದ ಮೇಲೆ ಇವರು ನಡೆಸಿಕೊಂಡುಬಂದ ವಿವಿಧ ಮಠದ ಜೀರ್ಣೋ ದ್ಧಾರ ಕೆಲಸಗಳನ್ನು ನೋಡಿದರೆ ಅದು ಗೊತ್ತಾಗುತ್ತದೆ. ಮಠದ ದೊಡ್ಡಗೋಡೆಯನ್ನು ಕಟ್ಟಿಸಿದ್ದು ಮತ್ತು ಶ್ರೀ ಜ. ಗಂಗಾಧರ ಹಾಯಸ್ಕೂಲ ಸಂಸ್ಥೆಯನ್ನು ಭದ್ರಪಡಿಸಿದ್ದು ಮೊದಲಾದವನ್ನು ಕಾಣಬಹುದು. ಲಿಂಗೈಕ್ಯ ಜಗದ್ಗುರುಗಳು ತಮ್ಮ ಗದ್ದುಗೆ ನಿರ್ಮಾಣ ಮಾಡುವಾಗ್ಗೆ ನಮ್ಮ ಪೂಜ್ಯ ಮಹಾಜಗದ್ಗುರುಗಳ ಸ್ವಪ್ನದಲ್ಲಿ ದರ್ಶನಕೊಟ್ಟು, ಗ್ರಂಥ ಪ್ರಕಾಶನಮಾಡಲು ಆದೇಶಕೊಟ್ಟದ್ದುಂಟು. ಲಿಂಗೈಕ್ಯರ ಗದ್ದುಗೆಯನ್ನು ಶ್ರೀಮಠದಲ್ಲಿ ಬೇರೆಕಡೆಗೆ ಮಾಡಬೇಕೆಂಬ ಚರ್ಚೆ, ಘರ್ಷಣೆ ತುಂಬಾ ನಡೆಯಿತು. ಆದರೆ ನಮ್ಮ ಜಗದ್ಗುರುಗಳ ಸಂಕಲ್ಪದಂತೆಯೇ ಮಠದಲ್ಲಿಯೇ ಕರ್ತೃಗದ್ದುಗೆಯ ಪಕ್ಕದಲ್ಲಿಯೇ ಸಿದ್ಧಪಡಿಸಲಾಗಿದೆ. ಈ ಸಮಯದಲ್ಲಿ ನಮ್ಮ ಜಗದ್ಗುರುಗಳು ನುಡಿದ ಉಕ್ತಿಯು ಅವರ ನಿರಭಿಮಾನಪೂರ್ಣವಾದ ಕರುಣಾಭರಿತ ಹೃದಯದ ಆಳವನ್ನು

ತೋರಿಸುತ್ತದೆ. ಜಗದ್ಗುರುಗಳು ಹೇಳಿದ್ದು–"ನಾನು ಮಠದಲ್ಲಿ ಚಿಕ್ಕಮರಿಯಾಗಿ ಬೆಳೆಯುತ್ತಿದ್ದೇನೆ. ನನ್ನ ಬಲಕ್ಕೆ ಕರ್ತೃವಿನ ಗದ್ದಿಗೆ ಇದೆ. ಎಡಕ್ಕೆ ನನ್ನ ಸಾಕ್ಷಾತ್ ಗುರುಗಳ ಗದ್ದಿಗೆಯಾಗಲೇಬೇಕು. ಇವೆರಡೂ ಗದ್ದಿಗೆಗಳು ನನಗೆ ರೆಕ್ಕೆಯಂತಿರಲಿ" ಎಂಬ ಮಾತು ಅತ್ಯಂತ ಮನಮೋಹಕವಾಗಿದೆ. ಮಠದ ಹಾಗೂ ಶಾಲೆಗಳ ಕಟ್ಟಡ ಕಾರ್ಯದಲ್ಲಿ ನಿರತರಾದ ಇವರನ್ನು ಕೆಲವರು ವ್ಯಂಗ್ಯೋಕ್ತಿಯಿಂದ "ಇವರೊಬ್ಬರು ಸೊನ್ನಲಾಪುರದ ಸಿದ್ಧರಾಮನಂತೆ ಕೇವಲ ಕರ್ಮಯೋಗಿಗಳು"ಎಂದು ಟೀಕಿಸಿದ್ದರು. ಆದರೆ ಮುಂದೆ ಜಗದ್ಗುರುಗಳ ಅನೇಕ ಗ್ರಂಥಗಳ ಪ್ರಕಾಶನ ಕಾರ್ಯ"ಪರಂಜ್ಯೋತಿ" ಪ್ರಕಟನೆ. ದೇಶ-ವಿದೇಶಗಳಲ್ಲಿ ಶರಣತತ್ತ್ವ ಪ್ರಚಾರ ಇವೆಲ್ಲವನ್ನು ಕಂಡುಕೇಳಿ ತಲೆದೂಗಿ ಮೌನವನ್ನು ಧರಿಸಿದರು. ವಿವೇಕಚಿಂತಾಮಣಿ, ವೀರಶೈವಸದಾಚಾರಸಂಗ್ರಹ, ಕ್ಷೇತ್ರಜ್ಞ ಸುಮನೋವಾದ. ಮಣಿವಚನಗಳು, ವಚನಶಾಸ್ತ್ರ ರಹಸ್ಯ ಮೊದಲಾದ ಹಿರಿಗ್ರಂಥಗಳ ರಾಶಿಯನ್ನು ಇಲ್ಲಿ ಕಾಣಬಹುದು. ಆಧ್ಯಾತ್ಮಿಕ ಶಿಕ್ಷಣಕ್ಕೆ ಸುಸಜ್ಜಿತವಾದ ಲೈಬ್ರರಿಯೂ ಇಲ್ಲಿದೆ. ಜಗದ್ಗುರುಗಳು ತಮ್ಮ 'ಪರಂಜ್ಯೋತಿ'ಯನ್ನು ಮುಂದೆ ಇಂಗ್ಲೀಷ, ಹಿಂದಿ, ಬಂಗಾಲಿ ಮೊದಲಾದ ಭಾಷೆಗಳಲ್ಲಿ ದಿಲ್ಲಿ, ಕಲಕತ್ತಾ, ಮುಂಬೈ, ಬೆಂಗಳೂರುಗಳಿಂದ ಹೊರಡಿಸುವ ಅಪೇಕ್ಷೆ ಇರಿಸಿದ್ದಾರೆ. ಭಾರತದಾದ್ಯಂತ ಪ್ರಮುಖ ನಗರಗಳಲ್ಲಿ ಶಾಖಾ ಮಠಗಳನ್ನೂ ತೆರೆಯುವ ಲವಲವಿಕೆ ಹೊಂದಿದ್ದಾರೆ. ಅವರ ಉತ್ಕಟಾಭಿಲಾಷೆಯನ್ನು ಕೇಳಿದರೆ ಅವರ ಕರ್ತೃತ್ವ ಶಕ್ತಿಯನ್ನು ಅರಿತರೆ ಯಾರಾದರೂ ಮೂಕವಿಸ್ಮಿತರಾಗಬಲ್ಲರು.

ಶ್ರೀ ಮ.ನಿ.ಪ್ರ. ಮಲ್ಲಿಕಾರ್ಜುನ ದೇವರು ಹೊಸಮಠ ಹಾವೇರಿ ಇವರನ್ನು ತಮ್ಮ ಮಠದಿಂದ ಕರೆಯಿಸಿ "ವೀರಶೈವ ಸದಾಚಾರ ಸಂಗ್ರಹ"ವೆಂಬ ಸದ್ಗ್ರಂಥವನ್ನು ಪ್ರಕಾಶನ ಪಡಿಸಿದ್ದು ನಮ್ಮ ಮಠದಲ್ಲಿಯೇ. ಶ್ರೀ ಗುರುಸಿದ್ಧೇಶನ ಕರುಣೆಯಿಂದ ಇವರು ಈಗ ಚಿತ್ರದುರ್ಗದ ಬೃಹನ್ಮಠದ ಜಗದ್ಗುರು ಮಲ್ಲಿಕಾರ್ಜುನ ಮುರಘರಾಜೇಂದ್ರ ಮಹಾಸ್ವಾಮಿಗಳಾಗಿರುವದು ನಮಗೆಲ್ಲ ಅತ್ಯಂತ ಹರ್ಷಪ್ರದ ಸಂಗತಿಯಾಗಿದೆ.

## ಮಹಿಳೆಯರಿಗಾಗಿ ವಿದ್ಯಾಸೌಧ

ಇವರು ಮಾಡಿದ ಮಹಾಕಾರ್ಯಗಳಲ್ಲಿ (Women's College) ಸ್ತ್ರೀಯರಿಗಾಗಿ ಪ್ರತ್ಯೇಕ ವಿದ್ಯಾಲಯ ನಿರ್ಮಾಣಮಾಡಿದ್ದು ನಮ್ಮ ಸಮಾಜದ ಸೌಂದರ್ಯಾಭಿವೃದ್ಧಿಕರವಾಗಿದೆ. ಈಗಿನ ನವೀನ ಯುಗದಲ್ಲಿ ಸುಧಾರಕರೆಲ್ಲ ಸ್ತ್ರೀ–ಪುರುಷರ ಸಾಂಘಿಕ ಶಿಕ್ಷಣವನ್ನು (Co-education) ಪ್ರಶಂಸಿಸುತ್ತಾರೆ. ಆದರೆ ಈ ಪಾಶ್ಚಿಮಾತ್ಯ ಅನುಕರಣವು ಅನೇಕರೀತಿಯಿಂದ ನಮ್ಮ ವೀರಶೈವ ಸಮಾಜಕ್ಕೆ ಹೊಂದಿಕೆಯಾಗುವಂತಿಲ್ಲ. ಎಲ್ಲದಕ್ಕೂ ಪಾಶ್ಚಿಮಾತ್ಯರನ್ನು ಅನುಕರಣ ಮಾಡಲೇಬೇಕೆಂಬ ಹುಚ್ಚು ಬುದ್ಧಿ ನಮಗೆ ಬೇಡ. ಗಂಡು–ಹೆಣ್ಣುಗಳು ಗುಂಪಾಗಿ ಓದುವ ಕಾಲೇಜುಗಳಲ್ಲಿ ಇತ್ತೀಚೆಗೆ ನಡೆಯುತ್ತಿರುವ ಅಶ್ಲೀಲ, ಅಕುಲೀನ ಘಟನೆಗಳನ್ನು ನೋಡಿದರೆ ನಮ್ಮ ಜಗದ್ಗುರುಗಳ ಪಥವೇ ಸುಪಥವಾಗಿದೆ. ಕಾಲೇಜದಲ್ಲಿ ಕ್ಲಾಸಿನಲ್ಲಿ ಹೆಣ್ಣುಹುಡುಗರು ಮುಂದಿನ ಬೆಂಚ

ದಲ್ಲಿ ಕೊಡ್ರಬೇಕು, ಹಿಂದಿನ ಬೆಂಚುಗಳ ಮೇಲೆ ಗಂಡು ಹುಡುಗರು ಕೊಡ್ರಬೇಕು ಎಂಬ ಈ ಕ್ರಮದಲ್ಲಿ; ಮುಂದೆ ಕುಳಿತ ಹುಡಿಗೆಯ ಹಿಂದೆ ಜೋತಾಡುವ ಅವಳ ಹೆಳಲಿನ ತುದಿಗೆ, ಹಿಂದೆ ಕುಳಿತ ಗಂಡು ಹುಡುಗನು ಪ್ರೇಮಪತ್ರ (Love Letter) ಕಟ್ಟಿ ವ್ಯವಹರಿಸಿದ ಬಗ್ಗೆ ಮಹಾರಾಷ್ಟ್ರ ಗ್ರಂಥಕಾರರೊಬ್ಬರು ಒಂದು ದೊಡ್ಡ ಕಾದಂಬರಿಯನ್ನು ಬರೆದಿದ್ದಾರೆ. ಈಗಿರುವ ನಮ್ಮ ಭಗಿನಿಯರ ಕಾಲೇಜದಲ್ಲಿ ಇಂಥ ದುರ್ಘಟನೆಗೆ ಅವಕಾಶವಿಲ್ಲ. ಇದು ಮಹಿಳೆಯರಿಗೊಂದು ಆತ್ಮೋನ್ನತಿಯ ವಿದ್ಯಾ-ಸೌಧವೂ ಆಹುದು. ಸಮಾಜದ ಕಲ್ಯಾಣಕ್ಕಾಗಿ, ವಿದ್ಯಾರ್ಥಿಗಳ ಮೇಲ್ಮೆಗಾಗಿ, ಯಾರಾದರೂ ನವ್ಯ ವಿಚಾರಭರಿತ ಸೂಚನೆಮಾಡಿದರೆ ಅವನ್ನೆಲ್ಲ ಗ್ರಹಿಸಲು ಕೂಡ ನಮ್ಮ ಜಗದ್ಗುರುಗಳು ಪರಮೋದಾರಿಗಳಾಗಿದ್ದಾರೆ. ಹಟ. ಕೋಪ. ಆಡಂಬರಗಳು ನಮ್ಮ ಜಗದ್ಗುರುಗಳಿಂದ ಬಹಳ ದೂರವಾಗಿವೆ.

## ಹರಿ-ಹರಸಾಮರಸ್ಯ

ಲಿಂಗೈಕ್ಯ ಜಗದ್ಗುರುಗಳು–'ನಮ್ಮ ಆಸ್ಥಾನ ಕೀರ್ತನಕಾರರಾದ ಹರಿಸರ್ವೋತ್ತಮಾಚಾರ್ಯರೆಂದರೆ ಹರಿ–ಹರ–ಸರ್ವೋತ್ತಮಾ ಚಾರ್ಯರೆಂದೇ ತಿಳಿಯಿರಿ'ಎಂದು ಹೇಳುತ್ತಿದ್ದರು. ಅದರಂತೆ ಇಂದಿನ ಪೂಜ್ಯ ಗಂಗಾಧರ ಜಗದ್ಗುರುಗಳವರು ವಿಶಾಲಮನೋಭೂಮಿಕೆಯುಳ್ಳ ಪ್ರಾಜ್ಞರಾಗಿದ್ದಾರೆ. ಮಾಧ್ವಬ್ರಾಹ್ಮಣ ಕೇಂದ್ರವಾದ ಶ್ರೀ ಉಡುಪಿಗೆ ದರ್ಶನನೀಡಿ ಬಂದಿದ್ದಾರೆ. ಶ್ರೀ ಮಂತ್ರಾಲಯ ಕ್ಷೇತ್ರಕ್ಕೂ ದಯಮಾಡಿಸಿದ್ದು ಉಂಟು. ಪಾಂಡಿಚೇರಿಯ ಮಾತೆ ( Mother ) ಅವರನ್ನು ಸಂದರ್ಶಿಸಿ ಒಂದು ಗಂಟೆಕಾಲ ಆಪ್ತಾಲೋಚನೆ ಗೈದು ಬಂದಿದ್ದಾರೆ. ಒಮ್ಮೊಮ್ಮೆ ಅವರು ಮಂದಹಾಸಬೀರುತ್ತ ಹೇಳುತ್ತಾರೆ. “ನಮ್ಮ ಸಂಚಾರ ಕೇವಲ ಇಂಡಿಯಾದೇಶದಲ್ಲಷ್ಟೇ ಅಲ್ಲ. ಗುರುಸಿದ್ಧೇಶನು ಕರುಣಿಸಿದರೆ ಮಕ್ಕಾ, ಮದೀನಾ, ಜರೂಸಲೇಮ, ರೋಮ, ವ್ಯಾಟಿಕನ್‌ದಲ್ಲಿರುವ ಪೋಪ (Pope)ರನ್ನು ಭೆಟ್ಟಿಯಾಗಿ, ಅಮೇರಿಕಾ–ಇಂಗ್ಲಂಡಗಳ ಧಾರ್ಮಿಕ ಕೇಂದ್ರಗಳಲ್ಲಿ ಸಂಚರಿಸಿ, ಬಸವೇಶ್ವರನ ಅಮೃತವಾಣಿಯನ್ನು ಹರಡಿ ಬರುವೆ. ಜಗವೆಲ್ಲ ಮಹಾಲಿಂಗಾಕಾರವಾಗಿರುವಾಗ, ಲಿಂಗವಿಲ್ಲದ ಸ್ಥಳವಾವುದು ? ಅನೇಕ ಸತ್ಪುರುಷರೂ, ಶರಣರೂ, ಸಿದ್ಧರೂ, ಸಂತರೂ, ಸಾಧಕರೂ, ತಪಸ್ವಿಗಳೂ ಅವತರಿಸಿದ ಪುಣ್ಯಭೂಮಿಗೆ ಹೋಗಿ ನಾನು ಮಾಡುವ ಇಷ್ಟಲಿಂಗಪೂಜೆಯ ಆತ್ಮಾನಂದವನ್ನು, ಆಯಾಸ್ಥಳಗಳಲ್ಲಿ ಭೋಗಿಸುವದನ್ನು ನೀವೇನು ಬಲ್ಲಿರಿ ?” ಎಂದು ನಕ್ಕುಬಿಡುತ್ತಾರೆ. ನಿಸ್ಸೀಮನಾದ ಶಿವನನ್ನು ಸೀಮಿತನನ್ನಾಗಿ ಮಾಡಿಬಿಡುವದು ಬೇಡವೆಂಬುವದೇ ನಮ್ಮ ಗುರುಗಳ ಆಶೆ.

## ಮಹಾಯಾತ್ರೆ

ಹೀಗೆ ವೀರವಾಣಿಯಿಂದ ಉದ್ಘೋಷಿಸುವ ನಮ್ಮ ಜಗದ್ಗುರುಗಳಿಗೆ ಜಪಾನ ದೇಶದಲ್ಲಿ ನಡೆದ ವಿಶ್ವಧರ್ಮಗಳ ಶಾಂತಿ ಪರಿಷತ್ತಿಗೆ ಆಹ್ವಾನ ಬಂತು. ದೇಶದಲ್ಲೆಲ್ಲ

ಆನಂದದ ಸುರಿಮಳೆಯಾಯಿತು. ಜಗದ್ಗುರುಗಳಿಗೆ ಸಂಪ್ರೋಕ್ಷಣೋತ್ಸವಗಳು ಬಹು ಸೊಬಗಿನಿಂದ ನಡೆದವು. ನಮ್ಮ ಮಠದಲ್ಲಿಯೇ ನಡೆದ ಮಹಾಸಭೆಯಲ್ಲಿ ಬಹು ವೈಭವದ ಬೀಳ್ಕೊಡುಗೆ ನಡೆಯಿತು.

ಜಪಾನ ದೇಶದ ಕ್ಯೂಟೋ (Kyoto) ನಗರದಲ್ಲಿ ದಿ. ೨೦–೧೦–೭೦ರಂದು ನಡೆದ ವಿಶ್ವಧರ್ಮ ಸಮ್ಮೇಳನದಲ್ಲಿ ನಮ್ಮ ಜಗದ್ಗುರುಗಳು ನುಡಿದ ಮುಕ್ತಾಫಲ ಗಳು ಸುವರ್ಣಾಕ್ಷರಗಳಿಂದ ಬರೆದಿಡುವಂತಿದೆ. ಅವರು ಭಾಷಣಮಾಡುವಾಗ್ಗೆ ಅಭಿನವ ವಿವೇಕಾನಂದರಂತೆ ಕಂಗೊಳಿಸಿದರು. ಅಲ್ಲಮ ಪ್ರಭುದೇವರಂತೆ ಪೂಜ್ಯ ರಾದರು. ಆತ್ಮಗಳಲ್ಲಿ ಒಂದಾಗುವದೇ ವಿಶ್ವಧರ್ಮದ ಹೆಗ್ಗುರಿ. ಅದಾದ ಮೇಲೆ ನೀವಾರು? ನಾವಾರು? ಶತ್ರುವಾರು? ಮಿತ್ರರಾರು?. ವಿಶ್ವಬಂಧುತ್ವ ವಿಶ್ವಶಾಂತಿಗಳಿಗೆ ಈ ಮಾತುಗಳೆ ಅಡಿಗಲ್ಲಾಗಿವೆ ಇತ್ಯಾದಿಯಾಗಿ ಬಸವಾದಿ ಪ್ರಮಥರ 'ದಯವಿಲ್ಲದ ಧರ್ಮವಾವುದಯ್ಯಾ?' ಎಂಬ ಮಧುರ ವಚನಗಳ ಸುಧೆಯನ್ನು ಸುರಿಸಿ, ಜಪಾನದ ಮಹಾಸಭೆಯನ್ನು ತಲ್ಲಣಗೊಳಿಸಿದ ಗುರುಚಕ್ರವರ್ತಿ ನಮ್ಮ ಗಂಗಾಧರ.

ಶ್ರೀ ಜಗದ್ಗುರುವರರು ಜಪಾನದಿಂದ ಮರಳಿಬಂದ ಮೇಲೆ, ನಮ್ಮ ದೇಶದಲ್ಲೆಲ್ಲ ಸ್ವಾಗತ ಸಮಾರಂಭಗಳು ಹೇರಳವಾಗಿ ನಡೆದವು. ನಾನು ಪ್ರತ್ಯಕ್ಷ ನೋಡಿದ್ದು ದಿನಾಂಕ ೨೭–೧೧–೭೦ನೇ ಶುಕ್ರವಾರ ಮೈಸೂರು ಮಹಾರಾಜಧಾನಿಯಲ್ಲಿ. ಶ್ರೀ ಜಗ-ದ್ಗುರುಗಳ ಪ್ರಚಂಡ ಮೆರವಣಿಗೆಯು ಮಹಾವೈಭವದಿಂದ ಬೆಳೆದು, ಶ್ರೀ ಜಗದ್ಗುರು ಶಿವರಾತ್ರೀಶ್ವರ ಮಹಾಸ್ವಾಮಿಗಳ ದಿವ್ಯಸನ್ನಿಧಿಯಲ್ಲಿ, ಅವರ ಕಾಲೇಜ ಭವನದಲ್ಲಿ ನೆರೆದ ಅದ್ವಿತೀಯ ವಿದ್ವತ್ಸಭೆಯಲ್ಲಿ ಅರ್ಪಿಸಿದ ಮಾನಪತ್ರ ಸಮಾರಂಭದಲ್ಲಿ ಪ್ರಶಂಸಾ ಭಾಷಣಗಳ ಸುರಿಮಳೆ ಸೂಸಿತು. ಜಪಾನದ ದಿಗ್ವಿಜಯ ಕೇವಲ ವೀರಶೈವರಿಗಲ್ಲ; ಸಕಲ ಸನಾತನಿಗಳ ಸಮೂಹಕ್ಕೆ. ಇಂಥವರು ರಾಜಕಾರಣದಲ್ಲಿ ಧುಮುಕಿದರೆ ವಿಶ್ವ ಶಾಂತಿ ಖಂಡಿತ. ನಮ್ಮ ದೇಶದಲ್ಲಿ ಅಥವಾ ವಿಶ್ವದ ಎಲ್ಲ ದೇಶಗಳಲ್ಲಿ ಅಶಾಂತಸ್ಥಿತಿ ನೆಲೆಸಲು ಕಾರಣವೇನೆಂದರೆ–ಅಪಕ್ವಮತಿಗಳೂ ತತ್ವಜ್ಞಾನದ ಗಂಧವಿಲ್ಲದವರೂ ರಾಜಕಾರಣದಲ್ಲಿ ಸ್ವಾರ್ಥಸಾಧನೆಗಾಗಿ ಮುಂದಾಳುಗಳಾಗಿದ್ದಾರೆ. ಆದ್ದರಿಂದ ಯಾರಿ ಗೂ ಸುಖವಿಲ್ಲ. ಇದಕ್ಕೆ ಪ್ಲೇಟೊನ ಮಾತನ್ನು ನೆನಪಿಗೆ ತಂದುಕೊಳ್ಳಬಹುದು– "Unless the Kings are Philosophers or Philosophers Kings there will be no Peace to the State".

## ಕರುಣಾಳುಗಳು

ವಿದ್ಯಾರ್ಥಿ ಪ್ರೇಮಿಗಳಾದ ನಮ್ಮ ಗುರುವರರು ಕರುಣಾ ಮೂರ್ತಿಗಳೂ ಆಗಿದ್ದಾರೆ. ಕಳೆದ ವರ್ಷ ೧೯೭೦ನೇ ಶ್ರಾವಣದಲ್ಲಿ ನಮ್ಮ ಮಠದ ಎರಡು ಆನೆಗಳಲ್ಲಿ ಒಂದು ಆನೆಗೆ ಪ್ರಾಯದ ಮದ ಬಂದು, ಅದರಿಂದ ಕೋಲಾಹಲಸ್ಥಿತಿಯುಂಟಾಗುವ ಸಮಯ ಬಂತು. ಪೋಲೀಸ ಅಧಿಕಾರಿಗಳು ಆನೆಗೆ ಗುಂಡುಹಾಕಲು ಸಿದ್ಧರಾದರು. ಆಗ

ಶ್ರೀ ಜಗದ್ಗುರುಗಳು ಅವರಿಗೆ– "ಆನೆಗೆ ಗುಂಡಿಡುವ ಮೊದಲು ನನಗೆ ಗುಂಡು ಹಾಕಿರಿ. ನಮ್ಮ ಮಠದ ಸೇವೆಮಾಡಿದ ಮರಿಯಾನೆಯದು. ಗಣಪತಿ ಹಬ್ಬವು ಹತ್ತಿರಬಂದಿರುವಾಗ ನಮ್ಮ ಮಠದಲ್ಲಿ ಗಜವಧೆಯನ್ನು ಮಾಡಿ ಗಜಾನನನ ಪೂಜೆಮಾಡಲು ಹೇಳುತ್ತೀರಲ್ಲ?" ಎಂದೊಡನೆಯೇ ಅಧಿಕಾರಿಗಳು ದಂಡವತ್ ನಮಿಸಿ ಕ್ಷಮಾಪಣೆಯನ್ನು ಯಾಚಿಸಿದರು. ಶ್ರೀ ಜಗದ್ಗುರುಗಳು ಗಂಡಾಂತರವನ್ನು ಶ್ರೀ ಗುರುಸಿದ್ಧೇಶನಿಗೆ ಅಪ್ಪಣೆಮಾಡಿ–'ಆನೆಯು ಶಾಂತವಾಗಲಿ' ಎಂದು ಹರಸಿದರು. ತತ್ಪರಿಣಾಮವಾಗಿ ಆನೆಯು ಶಾಂತವಾಯಿತು.

## ಮಿತಾಹಾರಿಗಳು

ನಮ್ಮ ಜಗದ್ಗುರುಗಳು ಅತ್ಯಂತ ಅಲ್ಪಾಹಾರಿಗಳೂ ಮಿತಾಹಾರಿಗಳೂ ಆಗಿದ್ದಾರೆ. ಒಮ್ಮೆ ತಮ್ಮ ಪಾಚಕನೊಂದಿಗೆ ವಿನಯದಿಂದ ಹೇಳಿದ್ದು–'ಅಯ್ಯಾ ನೀನು ನಮಗೆ ಪಂಚಭಕ್ಷ್ಯಪರಮಾನ್ನಮಾಡಿ ಬಡಿಸಬೇಡ. ನಮ್ಮ ಲಿಂಗಪ್ಪನಿಗೆ ಅಂಬಲಿಯ ನೈವೇದ್ಯಸಾಕು. ನೀನು ಸಿಟ್ಟಿನಿಂದ. ಗಡಿಬಿಡಿಯಿಂದ ಸಂಬಳದ ಕಡೆಗೆ ಲಕ್ಷ್ಯಗೊಟ್ಟು ಅಡಿಗೆಯನ್ನುಮಾಡಿ ಬಡಿಸಬೇಡ. ಅದು ನಮಗೆ ಹಿತವಾಗದು. ನೀನು ಶಾಂತನಾಗಿ. ಗುರುಲಿಂಗಜಂಗಮ ಪ್ರೇಮಿಯಾಗಿ ನುಚ್ಚನ್ನುಮಾಡಿ ಬಡಿಸು. ಅದೇ ನಮಗೆ ಸ್ವಚ್ಛವಾದ ಅಮೃತಾನ್ನ'–ಹೀಗೆ ಹೇಳುವದನ್ನು ಕೇಳಿದ ನಮಗೆ ಕಣ್ಣೀರು ಉದುರಿದವು. ಜಗದ್ಗುರುಗಳ ಜೀವನದಲ್ಲಿ ಅಷ್ಟೈಶ್ವರ್ಯಗಳಿದ್ದು ಏನು ಸುಖವಿದೆ?-ಎಂದುಕೊಂಡೆ. ಇದೆಲ್ಲದಕ್ಕೆ ಸಮಾಧಾನವೆಂದರೆ ಜಗದ್ಗುರುಗಳ ಅಂತಃಕರಣದಿಂದ ಹೊರಹೊಮ್ಮುವ ಶಾಂತಿ-ರಸ.

## ರಹಸ್ಯರಾಜಯೋಗಿಂದ್ರರು

ಈ ವರ್ಷ ನಮ್ಮ ಪ್ರಾಂತಕ್ಕೆ ಮಳೆಯ ಅಭಾವವಾಗಿ. ದೇಶದಲ್ಲೆಲ್ಲ "ನೀರು... ನೀರು..." ಎಂಬ ಆಕ್ರೋಶವುಂಟಾಯಿತು. ಕೆಲವೆಡೆಗಳಲ್ಲಿ ಒಂದುಕೊಡ ನೀರಿಗೆ ಎರಡು ರೂಪಾಯಿ ಬೆಲೆಯಾಯಿತು. ಶ್ರೀ ಜಗದ್ಗುರುಗಳ ಉಪದೇಶದಿಂದ ಹುಬ್ಬಳ್ಳಿ ವ್ಯಾಪಾರಸ್ಥರೆಲ್ಲ ಕೂಡಿ ಶ್ರಾವಣದ ಕೊನೆಗೆ ಲಕ್ಷಾಂತರ ಜನರಿಗೆ ಅನ್ನದಾನ ಸಮಾರಂಭವನ್ನೇರ್ಪಡಿಸಿದ್ದರು. ನಮ್ಮ ಜಗದ್ಗುರುಗಳ ಪಾದಪೂಜೆ ವೈಭವದಿಂದ ನಡೆಯಿತು. ಮೂರನೇ ದಿನವೇ ಗುರುಸಿದ್ಧೇಶನ ಕರುಣೆಯಿಂದ ಅಗಾಧವೃಷ್ಟಿ ಸುರಿದು ದೇಶಕ್ಕೆ ಶಾಂತಿಯನ್ನು ತಂದಿತು. ಇದನ್ನು ನೋಡಿ ಅನೇಕನಾಸ್ತಿಕರಿಗೆ ನಮ್ಮ ಗುರುಗಳಲ್ಲಿ ಮಹಾಶಕ್ತಿಯಿದೆಂಬುದು ಗೊತ್ತಾಯಿತು.

## ಕವಿವರ್ಯ ವಿಜಯ ಮಹಾಂತೇಶ

ನಮ್ಮ ಜಗದ್ಗುರುಗಳ ವಿದ್ಯಾರ್ಥಿ ಜೀವನವೆಂದರೆ ನವನವಕವಿತಾ ರಚನ ಕೌಶಲ. "ಪಥಿಕ" ಎಂಬ ಕವನ ಸಂಕಲನದಲ್ಲಿ ಅನೇಕ ಮಧುರಗೀತೆಗಳನ್ನು ನಾವು ನೋಡ

ಬಹುದು. ಅನೇಕ ಸ್ಫೂರ್ತಿದಾಯಕ ಕವಿತೆಗಳ ರಚನೆ ಅಲ್ಲಿದೆ. ಈ ಕವಿತೆಗಳ ಪ್ರಯೋಗವನ್ನು ನಾವು ನಮ್ಮ ಕೀರ್ತನೆಗಳಲ್ಲಿ ಆಗಾಗ್ಗೆ ಮಾಡುವದರಿಂದ, ಶ್ರೋತೃಗಳ ಮೇಲೆ ಯಾವ ಸುಪರಿಣಾಮವಾಗುತ್ತದೆಂಬುದನ್ನು ಮನಗಂಡಿದ್ದೇವೆ. ಮೂಲತಃ ಸರಸ ಕವಿಗಳಾಗಿದ್ದ ನಮ್ಮ ಜಗದ್ಗುರುಗಳು ಈಗ ವೀರವಾಗ್ಮಿಗಳಾಗಿದ್ದಾರೆ. ಸುಂದರಲೇಖಕರೂ ಆಗಿದ್ದಾರೆ. ನಮ್ಮ ಮಠದಿಂದ ಪ್ರತಿಮಾಸದಲ್ಲಿ ಪ್ರಕಟಿಸಲ್ಪಡುವ 'ಪರಂಜ್ಯೋತಿ' ಪತ್ರಿಕೆಯಲ್ಲಿ ಮೀಸಲಾಗಿದ್ದ ಜಗದ್ಗುರುಗಳ ಆಶೀರ್ವಚನಗಳನ್ನು ನೋಡಿದರೆ, ಅವು ಬ್ರಹ್ಮಸೂತ್ರಗಳ ಸಾರಸದೃಶವಾಗಿವೆ. ಇಂಥ ಆದರ್ಶ ಮಹಾವ್ಯಕ್ತಿಯು ನಮಗೆ ಜಗದ್ಗುರು ಸ್ಥಾನದಲ್ಲಿ ನೋಡಲು ಸಿಕ್ಕಿದ್ದು. ನಮ್ಮ ರಾಷ್ಟ್ರದ. ಸಮಾಜದ. ಸಮಸ್ತ ವೀರಶೈವರ ಪರಮಭಾಗ್ಯವಾಗಿದೆ. ( The Life of a good man is a visible philosophy ) ಎಂಬಂತೆ ನಮ್ಮ ಜಗದ್ಗುರುಗಳ ದಿನ ಸರಣಿಯು ಅನುಕರಣೀಯವಾಗಿದೆ. ಪರಮ ವೈಭವದ. ಮಹದಾನಂದಕರವಾದ ಸಂಗತಿಯೆಂದರೆ, ಮೊನ್ನೆತಾನೆ " ವಿಶ್ವಧರ್ಮಗಳ ಶಾಂತಿ ಸಮ್ಮೇಲನ. ನ್ಯೂಯಾರ್ಕ " ( World Conference of Religion for Peace New-York ) ಸಂಘದವರ ಪ್ರಾರ್ಥನೆಯ ಪ್ರಕಾರ ನಮ್ಮ ಜಗದ್ಗುರುಗಳು ಆ ಸಂಘಕ್ಕೆ ಸನ್ಮಾನನೀಯ ಮೆಂಬರರಾಗಿ ಚುನಾಯಿತರಾಗಿದ್ದಾರೆ. ಆದ್ದರಿಂದ ಜಗದೋಪಕಾರಿಗಳಾದ ನಮ್ಮ ಜಗದ್ಗುರುಗಳಿಗೆ ಶ್ರೀ ಕರ್ತೃ ಗುರುಸಿದ್ಧೇಶನು ಸುಚಿರವಾದ ಆಯುರಾರೋಗ್ಯಗಳನ್ನು ಕೊಟ್ಟು ರಕ್ಷಿಸಿ, ಅವರ ಹಸ್ತದಿಂದ ಸರ್ವಸದ್ಭಕ್ತರಿಗೆ ಆಶೀರ್ವಾದ ಅಭೀಷ್ಟಗಳು ದೊರೆವಂತೆಮಾಡಲಿ. □

# ಶೂನ್ಯಪೀಠದ ಸಮುನ್ನಯಾಚಾರ್ಯರು

ಶ್ರೀ. ನಿ. ಪ್ರ. ಬಸವಲಿಂಗಸ್ವಾಮಿಗಳು

ಪೂಜ್ಯ ಶ್ರೀಜಗದ್ಗುರುಗಳವರು, ಬಾಲ್ಯಜೀವನದಿಂದಲೂ ನಮಗೆ ಸುಪರಿಚಿತರು. ಶಿವಯೋಗಮಂದಿರದ ವ್ಯವಸ್ಥೆಗಾಗಿ ಕೆಲವುವರುಷ ನಾವಲ್ಲಿದ್ದಾಗ ಶ್ರೀ ಜಗದ್ಗುರುಗಳವರದು ಇನ್ನೂ ಬಾಲ್ಯಾವಸ್ಥೆ. "ಹಣ್ಣಿನ ಗುಣ ಹೀಚಿನಲ್ಲಿ ನೋಡು" ಎಂಬಂತೆ ಇವರ ಪರಿಪಕ್ವ, ಶುದ್ಧಾಂತಃಕರಣದ ಮೊಳಕೆ ಮೂಡಿದಾಗ, ನಾವು ಭವಿಷ್ಯಜೀವನದ ಅನೇಕ ಕುರುಹುಗಳನ್ನು ಆಗಲೇ ಕಂಡಿದ್ದೇವೆ. ಯಾವಾಗಲೂ ಮೃದು ಮಧುರ ಜೀವನ. ಒಡನಾಡಿಗಳೊಡನೆ ಬೆರೆತು, ಬಾಳುವ ಬಯಕೆ. ಉಂಡುಡುವ ವಿಷಯದಲ್ಲಿ ಹಿತಮಿತ. ತಿಳಿಗೊಳದಂತೆ ಸ್ವಚ್ಛ, ಶುದ್ಧ ಮನಸ್ಸು.

ಆಗಿನ ಅವಸ್ಥೆಯಲ್ಲಿ ಶಿವಯೋಗಮಂದಿರದ ನಿತ್ಯಕಾರ್ಯಕಲಾಪಗಳಲ್ಲಿ ಎಳ್ಳನಿತೂ ತಪ್ಪುತ್ತಿರಲಿಲ್ಲ. ಇದರಿಂದಾಗಿ ಆಗ ನಮಗೆ ಅಚ್ಚುಮೆಚ್ಚಿನವರಾಗಿದ್ದರು. ಇಂದಿಗೂ ಹಾಗೆಯೇ ಸರಿ.

"ದೈವೀ ವಿಚಿತ್ರಾಗತಿಃ" ಎಂಬಹಾಗೆ, ಪ್ರಾರಬ್ಧದ ಲೀಲೆಯಂತೆ ಮೇಲ್ಕಂಡ ಪೀಠಾಧಿಕಾರಿಗಳಾಗುವ ಮುನ್ನ, ಅನೇಕ ಘಟನೆಗಳು ಸಂಭವಿಸಿ ಕೊನೆಗೆ ಜಯಮಾಲೆಯು ಸರ್ವಸಮರ್ಥರೂ ಮಹಾತೇಜೋನಿಧಿಗಳೂ ಆದ ಇವರ ಕೊರಳಿಗೆ ಅರ್ಪಿತವಾಯಿತು.

"ಅವಸ್ಥಾತ್ರಯಂ ಗೆದ್ದಾತನೇ ಜಗದ್ಗುರುವಪ್ಪಂ" ಎಂಬ ಹಾಗೆ, ಜಾಗ್ರತ್, ಸ್ವಪ್ನ, ಸುಷುಪ್ತ್ಯಾವಸ್ಥೆಯಲ್ಲಿಯೂ ಶಿವನನ್ನೇ ಕಂಡು, ಶಿವಸ್ವರೂಪರೇ ಆಗಿ ಜಗದುದ್ಧಾರಮಾಡಿದ, ಈ ಪೀಠದ ಮೂಲ ವಿಭೂತಿಗಳಾದ-ಶ್ರೀ ಗುರುಸಿದ್ಧೇಶನು ಮಹಿಮನು. ಈ ಪರಂಪರೆಯಲ್ಲಿ ಬಂದ ಈ ಮೊದಲಿನ ಶ್ರೀ ಜಗದ್ಗುರುಗಳವರು ಸಂಪತ್ತಿನಾಗರವಾದ ಹುಬ್ಬಳ್ಳಿಯನ್ನು ವಿದ್ಯಾನಗರವನ್ನಾಗಿಮಾಡಿದರು. ಅನೇಕ ಸಿರಿಸಂಪತ್ತುಗಳೆಂಬ ವಿವಿಧ ಕುಸುಮಾಲಂಕೃತ ಹೂಬಳ್ಳಿಗೆ, ಜ್ಞಾನ ಪುಷ್ಪವೂ ಬಂದುಮೂಡುವಂತೆ ಮಾಡಿದ ಕೀರ್ತಿ, ಪುಣ್ಯ, ಅವರದಾಗಿದೆಯೆಂಬುದು ನಿಚ್ಚಳವಾದ ವಿಷಯ. ಆ ಕೀರ್ತಿಲತೆಯನ್ನೇ, ಸದ್ಯದ ಶ್ರೀ ಜಗದ್ಗುರುಗಳವರು ಹುಲು

ಸಾಗಿ ಬೆಳೆಯಿಸಿದ್ದಾರೆ, ಬೆಳೆಯಿಸುತ್ತಿದ್ದಾರೆ. ಇದರಿಂದಾಗಿ ಹುಬ್ಬಳ್ಳಿಯ ಜನರ, ಅದೇಕೆ ನಾಡಿನವರ, ಜ್ಞಾನತೃಷೆಯು ಹೆಚ್ಚಾಗಿದೆ. ಅವರ ಕಂಗಳಬರ ಹಿಂಗುತ್ತಲಿದೆ. ಅಜ್ಞಾನ ಕತ್ತಲೆಯ ಕಾಳರಾತ್ರಿ ಸರಿಯುತ್ತಿದೆ. ಬಡವಂ, ಕಡವರವಂ ಎಡಹಿದಂತಾಗಿದೆ. ಶ್ರೀ ಜಗದ್ಗುರುಗಳವರು ಎಂದಿಗೂ ಜಾಗ್ರುತ ಜೀವಿಗಳು.

ಇಂದಿನ ಜಗತ್ತು ಸಾಹಸದಿಂದ ಮುನ್ನುಗ್ಗಿ, ಕಾರ್ಯಮಾಡುವ ಕರ್ಮಶೀಲನಿಗೆ ಮೀಸಲು ಎಂಬುದನ್ನು ಇವರು ಬಲ್ಲವರಾಗಿದ್ದಾರೆ. ಅಂತೆಯೇ ಸಮಾಜದ, ನಾಡಿನ ಹಿತಕ್ಕಾಗಿ, ಅನೇಕಾನೇಕಕಾರ್ಯಗಳನ್ನು ಹಮ್ಮಿಕೊಳ್ಳುತ್ತಿದ್ದಾರೆ. ವೀತರಾಗನ ಒಂಟೆದೆಗೆ, ಎಂಟೆದೆಯ ಬಂಟತನ ಬರುವದೆಂಬುದು ದಿಟವಾಗಿದೆ. "ಗುರಿಮುಟ್ಟುವನ್ನೆಗಂ ನಿಲ್ಲದಿರು ಬಂಧಂ" ಎಂಬ ಶ್ರೀ ವಿವೇಕಾನಂದರ ನುಡಿಯನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಶ್ರೀ ಜಗದ್ಗುರುಗಳವರು, ಶಿಕ್ಷಣದ ಬ್ರಹ್ಮಚರ್ಯವನ್ನು ಮುಗಿಸಿ ಸ್ವತಂತ್ರ ಜೀವನದ, ಸಿಹಿ–ಕಹಿಗಳನ್ನು ಸವಿಯುವ ಹಂತದಲ್ಲಿರುವಾಗಲೇ, ಮಹಾಪೀಠದ ಕಾರ್ಯಗಳ ಗುರುತರ ಹೊಣೆಯು ಇವರಪಾಲಿಗೆ ಬಂದಿತು. ಆ ಸಮಯದಲ್ಲಿ, ಹುಬ್ಬಳ್ಳಿಯ, ಹಾಗು ಪರವೂರಿನ ಅನೇಕ ಹಿರಿಯ ಅಭಿಮಾನಿಗಳ ನೆರವು, ನೇರವಾಗಿ ಇವರಿಗೆ ದೊರಕಿತು. ಅಂತಃಕರಣಪೂರಕವಾದ ಆ ನೆರವು, ಮಹಾಪೀಠದ ಮುನ್ನಡೆಗೆ ಬಹುಮಟ್ಟಿಗೆ ಕಾರಣವಾಯಿತೆಂಬುದು ಸ್ಮರಣೀಯ ಸಂಗತಿಯಾಗಿದೆ.

ಬಿದಿಗಿಯ ಚಂದಿರನಂತೆ ಈಗ ಪೀಠದ ಕಾರ್ಯಗಳು ದಿನದಿನಕ್ಕೂ ಬೆಳೆಯುಹತ್ತಿರುವದರಿಂದ, ನಾಡಿನ ಜನತೆಯ ಗೌರವಾದರಗಳು ಹೆಚ್ಚುತ್ತಿವೆ. ಯಾರಿಗೂ ಬೇಡವಾಗದಿರುವ ಮನೋವೃತ್ತಿ ಇವರದು. ಆದರಿಂದ ಮೂಡಿ ಬಂದ, ನಡೆ-ನುಡಿಗಳಿಂದ ಇವರ ವ್ಯಕ್ತಿತ್ವವು ಘನತೆಗೇರಿದೆ. "ತನ್ನನರಸಿ ಬಪ್ಪವರ, ತಾನರಸಿಬಪ್ಪ.ದೇವರು," ಎಂಬ ಹಾಗೆ ಮಹಾಮಹಿಮ ಶ್ರೀಗುರು ಸಿದ್ಧೇಶನೇ ಇವರ ಬೆಂಬಲಿಗನಾಗಿರುವಾಗ ಆವ ಕೊರತೆಯ ಭಯವೂ ಇಲ್ಲ. ಶ್ರೀ ಜಗದ್ಗುರು ಗಂಗಾಧರರಾಜಯೋಗೀಂದ್ರರು ಪ್ರಪ್ರಥಮ ವೀರಶೈವೇತಿಹಾಸದಲ್ಲಿಯೇ ಜಪಾನಕ್ಕೆ ದಯಮಾಡಿಸಿ, ಪ್ರಪಂಚದ ೪೦ರಾಷ್ಟ್ರಗಳ ಪ್ರತಿನಿಧಿಗಳ ಸಮ್ಮುಖದಲ್ಲಿ ವೀರಶೈವಧರ್ಮಧ್ವಜವನ್ನೆತ್ತಿಹಾರಿಸಿ ಬಂದುದು ಕರ್ನಾಟಕದ ವೀರಶೈವ ಮಠಾಧಿಪತಿಗಳು ಹೆಮ್ಮೆಪಡತಕ್ಕ ವಿಷಯವಾಗಿದೆ. ಇವರು ಸಾಹಿತಿಗಳೂ, ಕರ್ಮಯೋಗಿಗಳೂ, ಜ್ಞಾನಯೋಗಿಗಳೂ, ಮಹೋತ್ಸಾಹ ಸಂಪನ್ನರೂ, ದಣಿವರಿಯದ ಲೋಕಕಾರ್ಯಧುರಂಧರೂ, ಕರುಣಾಳುಗಳೂ ಆಗಿರುವದರಿಂದಲೇ ಪ್ರಭುಶಕ್ತಿ ಇವರ ಬೆಂಬಲಿಗೆ ನಿಂತಿದೆ. ನ್ಯೂಯಾರ್ಕಿನ ವಿಶ್ವಧರ್ಮಗಳ ಶಾಂತಿ ಪರಿಷತ್ತಿನ ಸ್ಥಾಯಿಸಮಿತಿಗೆ ಇವರು ಸದಸ್ಯರಾದುದು ಕನ್ನಡನಾಡಿನ ಮಹಾ-ಭಾಗ್ಯವಲ್ಲದೇ ಇನ್ನೇನು? ಇಂದಿನ ವೀರಶೈವ ಮಠಾಧೀಶರಲ್ಲಿ ಇವರು ಎದ್ದುಕಾಣುವ ಉಜ್ವಲ ಮೂರ್ತಿಗಳಾಗಿದ್ದಾರೆ. ಎಲ್ಲ ಮಠಾಧೀಶರ ಹಾರ್ದಿಕವಾದ ಅಂತಃಕರಣ ಪೂರ್ವಕ ಭಕ್ತಿ–ಪ್ರೋತ್ಸಾಹಗಳು ಈ ಮಹಾಪೂಜ್ಯರಿಗೆ ಸದಾ ಇವೆಯೆಂದು ನಾವು ಹೇಳಬಲ್ಲೆವು. ಇವರು ಇಂಥ ಶ್ರೀ ಘನವಂತದೆಸೆಯನ್ನು ಹೊಂದಿದರೂ ಒಮ್ಮೆ

ಯಾದರೂ ಮರೆತುಕೂಡಾ ಇವರಲ್ಲಿ ಮಮತ್ವ ಮೂಡಿಲ್ಲ. ಸದಾ ನಗುನಗುವ ನಿರ್ಮೋಹಿಗಳಾಗಿದ್ದಾರೆ. ನಿಷ್ಕಲಂಕ ಪರಿಶುದ್ಧಾತ್ಮರಾಗಿದ್ದಾರೆ. ಇವರ ಶಿವಯೋಗ ಮಂದಿರದ ವಟುಜೀವನ, ಕಾಶಿಯ ಉಚ್ಚವ್ಯಾಸಂಗಜೀವನ ಹಾಗೂ ಜಗದ್ಗುರು ಪಟ್ಟಾಧಿಕಾರದ ಹನ್ನೆರಡುವರ್ಷಗಳ ಜೀವನವೆಲ್ಲವನ್ನೂ ನಾವು ಸಾಕ್ಷೀ–ಭೂತರಾಗಿ ನಿರೀಕ್ಷಿಸಿದ್ದೇವೆ. ಅಂದಿನಿಂದ ಇಂದಿನವರೆಗೆ ಇವರ ವ್ಯಕ್ತಿತ್ವದಲ್ಲಿ ಸಮತೂಕವಿದೆ, ನಿರಾಡಂಬರವಿದೆ, ಪ್ರೇಮಶೀಲತೆ ಇದೆ. ಎಲ್ಲರನ್ನೂ ತನ್ನವರೆಂದು ಅಪ್ಪಿಕೊಳ್ಳುವ ಪಿತೃಭಾವವಿದೆ. ಶ್ರೀಮಂತ ಪೀಠದ ಮಂಗಲ ಸಿಂಹಾಸನವನ್ನು ಆರೋಹಿಸಿದ ಇವರು ಆ ಪೀಠ ಪರಂಪರೆಯಲ್ಲಿ ಉಜ್ವಲವ್ಯಕ್ತಿಯಾಗಿದ್ದಾರೆ. ಸಕಲ ಜೀವರಿಗೆ ಲೇಸನ್ನೆ ಬಯಸುವ ವಿಶ್ವಶಾಂತಿ, ಧರ್ಮಸಹಿಷ್ಣುತೆಗಳೇ ಇವರ ಬಾಳಿನ ಹೆಗ್ಗುರಿ. ಆದ್ದರಿಂದ ಇವರು ಲೋಕವೆಲ್ಲ ಲಿಂಗದೇವನ ಆಲಯ, ಜೀವಾತ್ಮರೆಲ್ಲ ಒಂದೇ ಆತ್ಮದ ಬಹುಮುಖಗಳು, ಪರಸ್ಪರರಲ್ಲಿ ಭಾವೈಕ್ಯತೆಯೇ ವಿಶ್ವಶಾಂತಿಯ ಅಡಿಗಲ್ಲು ಎಂದು ಸಾರುತ್ತಿರುವ ಶೂನ್ಯ ಪೀಠದ ಸಮನ್ವಯಾಚಾರ್ಯರಾಗಿದ್ದಾರೆ.

ಶ್ರೀ ಮಹಾಜಗದ್ಗುರುಗಳ ನಿತ್ಯ ಕಲ್ಯಾಣಕಾರ್ಯಗಳು ಅವಿರತವಾಗಿ ಅನಂತಮುಖವಾಗಿ ಸಾಗಿ, ಲೋಕಕ್ಕೆ ಅದರಿಂದ ಆತ್ಮಶಾಂತಿಯೂ ಚಿರಾನಂದವೂ ಪ್ರಾಪ್ತವಾಗಲೆಂದು ಶ್ರೀ ಎಡೆಯೂರ ಶ್ರೀ ಮಹಾಶಿವಯೋಗಿಯಲ್ಲಿ ನಾವು ಭಕ್ತಿಪುರಸ್ಸರವಾಗಿ ಪ್ರಾರ್ಥಿಸುತ್ತೇವೆ. □

# ನಾಡಿಗೆ ದೇವ ನೀಡಿದ ದಿವ್ಯ ರತ್ನ

ಪಂ. ಗಂಗಾಧರಶಾಸ್ತ್ರಿಗಳು, ಚಿತ್ತರಗಿ

'ಯಾರೋ ಪಡೆದರು, ಯಾರೋ ಪಡೆದರು' ಎಂಬ ನಾಣ್ಣುಡಿಯಂತೆ–ತೇಜ, ಬಲ, ಬುದ್ಧಿವಿಕಾಸಿತೆ, ಯೋಗಸಾಧನೆ, ಶಿವಯೋಗಿಯಾಗುವ ಎಲ್ಲ ಮೆರಗನ್ನು ತುಂಬಿ ಕೊಂಡು ಹೊಳೆಯುತ್ತಿರುವ ವಿಜಯ ಮಹಾಂತದೇವರೆಂಬ ಈ ರತ್ನ; ಮೊದಲು ಚಿತ್ತರಗಿಯ ಪೀಠಕ್ಕೆಂದು ಮೀಸಲಾಗಿದ್ದು ಮುಂದೆ ಶ್ರೀ ನಿರಂಜನ ಜಗದ್ಗುರು ಗುರು ಸಿದ್ಧ ರಾಜಯೋಗೀಂದ್ರರ ಕಣ್ಣಿಗೆ ಬಿತ್ತು. ರತ್ನದ ಒಡೆತನವು ಚಿತ್ತರಗಿಯ ಪೀಠದ್ದಾ ದರೂ. ಅವರು ರಾಜಯೋಗೀಂದ್ರರಲ್ಲವೇ?–ಅಂತೇ ಒತ್ತಾಯದಿಂದ ತೆಗೆದುಕೊಂಡು ತಮ್ಮ ಮೂರುಸಾವಿರ ಮಠದ ಪೀಠದ ಮೇಲೆ ಕುಳ್ಳಿರಿಸಿದರು. ಆದರೂ ತಮ್ಮ ಬೆಳಕನ್ನು ಚಿತ್ತರಗಿಯ ಪೀಠಕ್ಕೂ ಬೀರಿ, ಮಧುರ ಬಾಂಧವ್ಯವನ್ನು ತಂದಿದ್ದಾರೆ. ನಮ್ಮ ಶ್ರೀಗಳು, ಇದೇ ದೈವ ಸಂಕಲ್ಪ.

ತಂದೆಗೆ ತಕ್ಕ ಮಗ, ಪೀಠಕ್ಕೆ ತಕ್ಕ ಗುರು. ತಮ್ಮ ಮುಂದಿನ ಆಧ್ಯಾತ್ಮಿಕ ಜೀವನದ ಹಂಬಲವನ್ನು ಪೂರೈಸುವ ಶಕ್ತಿಸಂಪನ್ನರಾದ ವಿಜಯಮಹಾಂತಮರಿದೇವರು, ಮಹಾಂತಯೋಗಿಯಾಗಲು ನಿಂತ ತುಂಬುಕಾಲವಲ್ಲಿ; ಗುರುಸಿದ್ಧರಾಜಯೋಗೀಂದ್ರರ ಗುಪ್ತ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಕೇಳಬೇಕೆ; ಗುರುಸಿದ್ಧ ರಾಜಯೋಗೀಂದ್ರರು ಕ್ರಾಂತಿಯ ಕಹಳೆ ಊದಿದರು. ತಾವು ಬಂದಂತೆ ಎತ್ತಿತಂದರು ಮಹಾಂತರನ್ನು ಚಿತ್ತರಗಿಯ ಪೀಠದಿಂದ. ಆಗ ಇವರು ಜಗದ್ಗುರು ಗಂಗಾಧರ ರಾಜಯೋಗೀಂದ್ರ ರೆಂದು ಕರೆಸಿಕೊಂಡು ಹುಬ್ಬಳ್ಳಿ ಮೂರುಸಾವಿರಮಠದ ಪೀಠವನ್ನು ಅಲಂಕರಿಸಿದರು.

ಅಧಿಕಾರದ ಮದವಿಲ್ಲ, ಐಶ್ವರ್ಯದ ಮೆರಗಿಲ್ಲ, ವಿದ್ಯೆಇದ್ದಷ್ಟು ವಿನಯ ತುಂಬಿದೆ. ಅಂತೆಯೇ ಇವರು ತಮ್ಮ ಪೀಠದ ಪೂರ್ವದ ಸಾಂಪ್ರದಾಯವನ್ನು ಕಿತ್ತು ಇಂದಿನ ಸಮಾಜಕ್ಕೆ ಹೊಂದಿಕೆಯಾಗುವಂತೆ ಎಲ್ಲರನ್ನು ಸ್ವಾಗತಿಸುತ್ತಾರೆ. ಎಲ್ಲರಿಗೂ ಅವ ರವರ ಸ್ಥಾನಮಾನಗಳ ಬೆಲೆಕೊಟ್ಟು ಸತ್ಕರಿಸುತ್ತಾರೆ. ಅಲ್ಲದೆ ನಾಡಿನ ಎಲ್ಲ ಪೀಠ ಗಳೂ ಏಕಭಾವದಿಂದ ಕೂಡಿ ಸ್ಥಾನಗಳ ಮೇಲುಕೀಳನ್ನು ಕಿತ್ತು ತಳ್ಳಿ, ಎಲ್ಲರೂ ಒಂದಾಗಿ ಬಾಳೋಣವೆಂದು ವಿಶ್ವಕ್ಕೇ ಕರೆಕೊಟ್ಟಿದ್ದಾರೆ. ನಾಡಿನ ಜಗದ್ಗುರು ಪೀಠಗಳೆಲ್ಲ ಇದಕ್ಕೆ

ಓಗೊಟ್ಟರೆ ಇಂದು ನಮ್ಮ ಸಮಾಜ ಉಳಿದೀತು, ಬೆಳೆದೀತು. ಇದು ನಮ್ಮ ಗಂಗಾ -ಧರರ ದೂರ ದರ್ಶನದ ಬುದ್ಧಿ.

## ನಗೆಮುಖದ ಚಲುವ

ಹಡೆದ ಮನೆತನವೂ ಸಣ್ಣದಲ್ಲ; ಪಡೆದವರೂ ಸಾಮಾನ್ಯರಲ್ಲ. ವರನೀಡಿದ ಕಾರುಣಿಕ ಶಕ್ತಿ ಕಡಿಮೆಯುದಲ್ಲ. ಜಗದಲ್ಲಿ ಹಿರಿದಾದ ಮೆರಗಿನಿಂದ ಮೆರೆದ ಹೆಸರು ಹೊತ್ತು ಬೆಳೆದ ಈ ಯೋಗಿ ಹುಟ್ಟಿದಾಗಲೇ ಚಲುವ. ಬೆಳೆದದ್ದು ಶ್ರೀ ಹಾನಗಲ್ಲೇಶನ ಕರುಣೆಯ ತೊಟ್ಟಿಲಲ್ಲಿ. ಅಂದಾಗ ಕೇಳಬೇಕೆ? ಸದಾ ಆನಂದದ ನಗೆ ಮುಖ, ತಕ್ಕ ಗುಣ ವಿದ್ಯೆ, ತುಂಬು ವಯಸ್ಸು. ಎಲ್ಲ ಬಗೆಯಿಂದ ಬೆಳೆದುನಿಂತ ಚಂದ್ರನನ್ನು ಚಿತ್ತ ರಗಿಯುವರಾದ ನಾವು ನಗೆಮುಖದಿಂದ ಹುಬ್ಬಳ್ಳಿಯ ಪೀಠಕ್ಕೆ ಕೊಟ್ಟಿದ್ದೇವೆ. ಆ ನಗೆ ಇನ್ನೂ ಹೊರಸೂಸಿ ನಿಂತಿದೆ. ನಮ್ಮ ಪ್ರಾಂಜಲ ಭಕ್ತಿಯನ್ನು ಕಂಡು ಅವರೂ ಆತ್ಮೀಯತೆಯಿಂದ ನಗುತ್ತಾರೆ. ಮಂದಹಾಸದಿಂದ ಮಾತಾಡುತ್ತಾರೆ. ಅವರು ಭೋಗ ರೋಗಗಳ ಸುಳಿಗೆ ಸಿಗದೆ, ಸಿಕ್ಕಷ್ಟು ವಿಶ್ರಾಂತಿ ಕಾಲವನ್ನು ಶಿವಯೋಗ ಮುದ್ರೆಯಲ್ಲಿ ಕಳೆಯುತ್ತಾರೆ. ವಿದ್ಯೆ ವಿಕಾಸತೆ, ಸಮಾಜ ಸುಧಾರಣೆ, ಸಾಹಿತ್ಯದ ಬೆಳವಣಿಗೆ, ಧರ್ಮ ಪ್ರಚಾರ ಇದೇ ಶಿವಪೂಜೆಯೆಂದು ಭಾವಿಸಿದ ಶ್ರೀಗಳು ಅದರಂತೆ ಆಚರಿಸಿ ಬಾಳುತ್ತಾರೆ.

## ಶ್ರೀಗಳ ವಿದ್ಯಾಪ್ರೇಮ

'ತಂದೆ ರುಸ್ತುಮ್ ಮಗ ಸೊಹ್ರಾಬ' ಎನ್ನುವಂತೆ, ಗುರುಸಿದ್ಧರಾಜಯೋ- ಗೀಂದ್ರರ ಮುಂದಿನ ಬಯಕೆ, ಮಾಡದೇ ಉಳಿದ ಮುಂದಿನ ಕೆಲಸಗಳನ್ನೆಲ್ಲ ಮುಂದು ವರೆಸಿ ಮಹಾಸಾಹಸ ಜೀವಿ ಎನಿಸಿದ್ದಾರೆ. ತಮ್ಮ ತಂದೆ ಗುರುಸಿದ್ಧರು ಹತ್ತಾರು ಲಕ್ಷ ವನ್ನು ಧಾರೆಯೆರೆದು ಬೆಳೆಸಿದ ಎಲ್ಲ ವಿದ್ಯಾಸಂಸ್ಥೆಗಳನ್ನು ಉಳಿಸಿಕೊಂಡು ಬಂದದ್ದ ಲ್ಲದೆ, ತಾವು ೨೫ಲಕ್ಷಕ್ಕೆ ಮಿಕ್ಕಿ ಧನವನ್ನು ಧಾರೆಯೆರೆದು, ಜನರಿಂದಕೊಡಿಸಿ, ಮತ್ತೆ ಹಲವು ವಿದ್ಯಾಕೇಂದ್ರಗಳನ್ನು ಹೊಸದಾಗಿ ನಿರ್ಮಿಸಿದ್ದಾರೆ. ಈಗಿನ ಮನ್ವಂತರಕ್ಕೆ ಬೇಕಾದ ಮಹಿಳಾ ಕಾಲೇಜನ್ನು ಸ್ಥಾಪಿಸಿ ವಿಶ್ವವಿಖ್ಯಾತರಾಗಿದ್ದಾರೆ. ಇದು ಸಾಹಸದ ಹೆಜ್ಜೆಯೇ ಸರಿ. ಅಲ್ಲದೆ ಮತತತ್ತ್ವ ಪ್ರಚಾರಕಾರ್ಯದಲ್ಲಿ ಹಲವಾರು ಗ್ರಂಥಗಳನ್ನು ಪ್ರಕಟಿಸಿ ಸಾಹಿತ್ಯದೇವಿಯ ಉಡಿ ತುಂಬಿದ್ದಾರೆ. ಇದಕ್ಕಾಗಿ ಪತ್ರಿಕೆ, ರೇಡಿಯೋ ಕೇಂದ್ರಗಳನ್ನು ಉಪಯೋಗಿಸಿಕೊಂಡು ಭಾಷಣಮುಖದಿಂದ ಸಂದೇಶವನ್ನು ಜಗತ್ತಿಗೆ ಸಾರುತ್ತಾರೆ. ಈ ಹಿಂದೆ ಯಾರೂ ಮಾಡದ ಸಾಹಸದ ಕೆಲಸವೆಂದರೆ, ಮೊನ್ನೆ ಜಪಾ ನಕ್ಕೆ ದಯಮಾಡಿಸಿ, ಅಲ್ಲಿ ವೀರಶೈವ ತತ್ತ್ವವನ್ನು ಬಿತ್ತಿಬಂದ ಶ್ರೇಯಸ್ಸು ನಮ್ಮ ಶ್ರೀಗಳಿಗೇ ಮೀಸಲು. ಈ ಹಿಂದೆ ಸ್ವಾಮಿ ವಿವೇಕಾನಂದರು ಅಲ್ಲಿಗೆ ಹೋಗಿ, ಹಿಂದೂ ಧರ್ಮದ ಪತಾಕೆ ಹಿಡಿದು ಹಾರಿಸಿಬಂದಿದ್ದರೆ, ನಮ್ಮ ಶ್ರೀಗಳು ವಿಶ್ವಧರ್ಮದ ತಿರುಳನ್ನು ಜಪಾನಿನಲ್ಲಿ ಹರಿಯಿಸಿ ಬಂದಿರುವರು.

## ಏಕಾಂತದಲ್ಲಿ ಕಂಡಾಗ

ಈ ಮಠದ ಕರ್ತೃವಿನ ಹೆಸರು ಹುಚ್ಚ. ಒಲಿದರೆ ಮೆಚ್ಚಿ ಅಪ್ಪುತ್ತಾನೆ, ಮುನಿದರೆ ಕಲ್ಲೆಸೆಯುತ್ತಾನೆ. ಅವನೆಸೆದ ಕಲ್ಲೂ ವರವಾಗುತ್ತದೆ, ನಂಬಿದ ಭಕ್ತರಿಗೆ. ಇದು ಮಠದ ಸ್ಥಳದ ಮಹಿಮೆ. ಆದರೆ ಇದನ್ನೆಲ್ಲ ಬೆಳೆಸುವಾಗ ಶ್ರೀಗಳ ದೇಹಕ್ಕೆ ಆದ ಆಯಾಸ ಯಾರನ್ನಾದರೂ ಅಯ್ಯೋ ಅನಿಸುತ್ತದೆ. ಸ್ವತಃ ಅವರೇ ಏರಿ ಇಳಿದು ತೋರಿಸಿ, ಹೇಳಿ ಮಾಡಿಸುವ ಕಾರ್ಯವನ್ನು ಕಂಡಾಗ ಅಚ್ಚರಿಯಾಗುತ್ತದೆ. ಅವರೇ ಹೇಳುತ್ತಾರೆ 'ನಾನೀಗ ಕರ್ಮಯೋಗಿ ಸಿದ್ಧರಾಮನಾಗಿದ್ದೇನೆ' ಎಂದು. ಇದು ಶಿವ ಯೋಗಿಯ ಪೂರ್ವಸಿದ್ಧತೆಯೆಂದು ಬೇರೆ ಹೇಳಬೇಕಾಗಿಲ್ಲ. ಏಕಾಂತದಲ್ಲಿ ನಾನು ಅವರನ್ನು ಕಂಡಾಗ, ನನ್ನ ಮುಂದೆ ಮಾತ್ರ ಹೇಳುವ ಮಾತು– 'ನನ್ನ ಮುಂದಿನ ಜೀವನ ಕೇವಲ ಶಿವಚಿಂತನೆ. ಆಧ್ಯಾತ್ಮಿಕ ವಿಚಾರ.'

# ಜಗದ್ಗುರುಗಳ ವ್ಯಕ್ತಿತ್ವದ ಪಕ್ಷಿನೋಟ

ಡಾ. ಎನ್. ವಾಯ್. ಆನೆಗುಂದಿ
M.D. F.C,P.S. ಘಟಪ್ರಭಾ

ಅನಂತ ಶಕ್ತಿಗಳ ಸಾಗರದಂತಿರುವ ಈ ಮಹಾನುಭಾವರ ದಿವ್ಯ ವ್ಯಕ್ತಿತ್ವದ ವಿಕಾಸವು ಕೆಲವು ವರ್ಷಗಳಿಂದ ಬೆಳೆಯುತ್ತ ಬಂದಿದೆ. ಕನ್ನಡಿಗರಿಗೆ ೯–೫–೫೮ನೇ ದಿನವು ಅತ್ಯಂತ ಮಹತ್ವದ್ದು ಮತ್ತು ಚಿರಸ್ಮರಣೀಯವೂ ಆದ ದಿನ. ಅಂದು ಶ್ರೀ ಜಗದ್ಗುರುಗಳವರಿಂದ ಮೂರುಸಾವಿರ ಮಠದ ಪೀಠಾರೋಹಣವಾಯಿತು. ಮೊಗ್ಗು ಅರಳುವಂತೆ ಪ್ರಭುಪೀಠದ ದಿವ್ಯ ಸೋಂಕಿನಿಂದ ಶ್ರೀಗಳಲ್ಲಿಯ ಸೂಕ್ತಶಕ್ತಿಯು ವಿಕಸಿತಗೊಂಡಿತು. ಅವರ ತೇಜವು ನೂರುಮಡಿಯಾಗಿ ಬೆಳಗಹತ್ತಿದೆ. ಇವರ ಸನ್ನಿಧಿಯಲ್ಲಿ ಕುಳಿತು ಅವರ ಸಂಗಡ ಸಂಭಾಷಣೆ ಮಾಡುವದೆಂದರೆ ಪರಮ ಸಂತಸ. ಯಾಕೆಂದರೆ ಅವರ ವಿಚಾರಗಳು ಯಾವಾಗಲೂ ಮಾನವೀಯ ಕಲ್ಯಾಣದ ಪ್ರತೀಕದಂತಿವೆ. ಚಿಕ್ಕ ಮಕ್ಕಳ ಮೇಲೆ ಅವರಿಗೆ ತುಂಬಾ ಮಮತೆ. ಶಾಲಾಬಾಲಕರು ಸಂದರ್ಶನಕ್ಕೆ ಬಂದರೆ ಅವರಿಗೆ ಬಹಳೇ ಹಿಗ್ಗು. ಆದ್ಯತೆಯಿಂದ ಅವರಿಗೆ ದರ್ಶನಕೊಟ್ಟು ಅವರ ಕೆಲಸಗಳನ್ನು ಮಾಡಿ ಆಶೀರ್ವದಿಸಿ ಕಳಿಸುತ್ತಾರೆ. ಮಾನವೀ ಕಲ್ಯಾಣದ ಅವರ ತತ್ವಗಳು ಯಾವದೇ ವಿಶಿಷ್ಟ ಸಮಾಜಕ್ಕಾಗಲಿ, ಜನಾಂಗಕ್ಕಾಗಲೀ ಅಥವಾ ವ್ಯಕ್ತಿಗಾಗಲಿ ಸಂಭಂದಿಸದೇ ಉನ್ನತ ಮಟ್ಟದ ಜಾತ್ಯಾತೀತ ತತ್ವಗಳಿಂದ ತುಳುಕುತ್ತಿವೆ.

ವೀರಶೈವ ಧರ್ಮವನ್ನು ವಿಶ್ವಮಾನ್ಯ ಧರ್ಮವನ್ನಾಗಿ ಸಂಘಟಿಸಬೇಕು. ಈ ಸಮಾಜದಲ್ಲಿಯ ಒಳಪಂಗಡಗಳನ್ನು ಮತ್ತು ಧರ್ಮಗುರುಗಳಲ್ಲಿಯ ಮತಬೇಧಗಳನ್ನು ಹೋಗಲಾಡಿಸಿ ಮಾನವ ಜೀವನ ಪ್ರಗತಿಗೆ ಧರ್ಮದಿಂದಲೇ ಪವಿತ್ರ ಮಾರ್ಗದರ್ಶನ ಲಭಿಸಬೇಕೆಂಬ ಚಿಂತನೆಯಲ್ಲಿಯೇ ಶ್ರೀಗಳು ಮಗ್ನರಾಗಿದ್ದಾರೆ. ವೀರಶೈವ ಧರ್ಮವು ವಿಶ್ವಕುಟುಂಬ ನಿರ್ಮಿಸಲಿಕ್ಕೆ ಮೌಲ್ಯವಾದ ಸಾಧನವೆಂಬುದನ್ನು ಜಗತ್ತಿನ ಎಲ್ಲ ಜನಾಂಗಗಳಿಗೆ ಮನವರಿಕೆಮಾಡಿಕೊಡಲು ಶ್ರೀಗಳವರಿಗೆ ಬಲವಾದ ಇಚ್ಛೆ. ಪರಧರ್ಮ ಸಹಿಷ್ಣುತೆಯು ಅವರ ಜೀವ ನಾಡಿಯಾಗಿದೆ. ಅವರು ಸರ್ವಧರ್ಮದ ಬಗ್ಗೆ ಆಳವಡಿಸಿಕೊಂಡಿರುವ ವಿಚಾರಗಳು ಮತ್ತು ಅವುಗಳ ಅನುಷ್ಠಾನವು ಪರಧರ್ಮಗಳನ್ನು ತಮ್ಮ ಕಡೆಗೆ ಆಕರ್ಷಣ ಮಾಡಿರುತ್ತವೆ. ಇದರಿಂದಾಗಿ ವಿಶ್ವದ ವಿವಿಧ ಧರ್ಮಗಳ ಪ್ರತಿ

ನಿಧಿಗಳು ಶ್ರೀಗಳವರ ಸಂಪರ್ಕ ಬೆಳೆಯಿಸಿ ಇವರಿಂದ ಹಿಂದೂಧರ್ಮದ ತಿರುಳನ್ನೂ ಮತ್ತು ವೀರಶೈವ ಧರ್ಮದ ತತ್ವಗಳನ್ನೂ ತಿಳಿದುಕೊಳ್ಳಲು ಯತ್ನಿಸುತ್ತಿದ್ದಾರೆ.

## ಶ್ರೀಗಳವರು ಪರಮ ದಾಸೋಹಮೂರ್ತಿಗಳು

ಶ್ರೀ ಜಗದ್ಗುರುಗಳವರು ತಮ್ಮ ವಿವಿಧ ಮುಖದ ಚಟುವಟಿಕೆಗಳೊಂದಿಗೆ ದಾಸೋಹಂ ಭಾವನೆಯಿಂದ, "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ" ವೆಂಬಭಾವನೆಯಿಂದ ಮಠದ ಪುರಾತನ ಪರಂಪರೆಯಂತೆ ದಾಸೋಹಕಾರ್ಯವನ್ನು ನಿತ್ಯವೂ ನಡೆಸುತ್ತಿದ್ದಾರೆ. ಮೂರುನೂರು ವಿದ್ಯಾರ್ಥಿಗಳಿಗೆ ಜಾತಿಬೇಧವಿಲ್ಲದೇ ಉಚಿತ ಪ್ರಸಾದ ಮತ್ತು ವಸತಿ ಸೌಕರ್ಯಗಳನ್ನುಕೊಡುತ್ತಿದ್ದಾರೆ. ಶಿಕ್ಷಣ ಸಂಸ್ಥೆಗಳ ಮುಖಾಂತರ ಸಂಸ್ಕೃತ ಪಾಠಶಾಲೆ. ಪುಸ್ತಕಗಳ ಪ್ರಕಾಶನ, ಧರ್ಮತರಂಗಿಣೀ ಕೈಬರಹ ಪತ್ರಿಕೆಯ ಪ್ರಕಾಶನ, ಪರಂಜ್ಯೋತಿ ಮಾಸ ಪತ್ರಿಕೆ ಪ್ರಕಾಶನ, ಪ್ರವಚನ, ವಾಚನಾಲಯ,ಕಲೆ, ಸಂಗೀತ. ಮೊದಲುಗೊಂಡು ವಿವಿಧರೀತಿಯಿಂದ ವಿದ್ಯಾರ್ಥಿಗಳಿಗೆ, ಭಕ್ತರಿಗೆ ಜ್ಞಾನ ಸಿಗುವಂತೆ ಮಾಡಿದ್ದಾರೆ. ಲಗ್ನ ಪೂಜಾದಿ ಸಮಾರಂಭಗಳ ಸಮಯದಲ್ಲಿ ಮಠದ ಆನೆ ಗಳನ್ನು ಆಮಂತ್ರಣ ಬಂದಾಕ್ಷಣ ಸಕಾಲದಲ್ಲಿ ಕಳಿಸಿ ಶೋಭೆ ತಂದುಕೊಡುತ್ತಾರೆ. ಶ್ರೀಗಳು ನಿರಾಡಂಬರದ ಜೀವಿಗಳೆಂಬುದಕ್ಕೆ ಅವರ ಸಾದಾ ಜೀವನ ಮತ್ತು ಉಡುಪು ಗಳೇ ಸಾಕ್ಷಿಯಾಗಿವೆ.

## ಶ್ರೀಗಳವರ ಮಠಗೆದ್ದು ಮಾರುಗೆಲ್ಲುವ ವಿಚಾರ

ಶ್ರೀಗಳವರು ಪೀಠಾರೋಹಣ ಮಾಡಿದ ನಂತರ ಸಾರ್ವಜನಿಕ ಕೆಲಸಗಳನ್ನು ಕೈಕೊಳ್ಳುವ ಪೂರ್ವದಲ್ಲಿ ಮಠದ ಜೀರ್ಣೋದ್ಧಾರ ಹಾಗೂ ವಿಸ್ತರಣೆಗಳನ್ನು ಕೈಕೊಂಡು ಮೊದಲು ಮನೆಗೆದ್ದು ಮಾರುಗೆಲ್ಲಬೇಕೆಂಬ ರೂಢಿಗತವಾದ ತತ್ವವನ್ನು ಅನುಷ್ಠಾನಕ್ಕೆ ತಂದರು. ಕಳೆದ ೧೨ವರ್ಷಗಳ ಅಲ್ಪಾವಧಿಯಲ್ಲಿ ಮಠದ ಜೀರ್ಣೋ ದ್ಧಾರ ಕಾರ್ಯವನ್ನೊಳಗೊಂಡು ಮಹಾದ್ವಾರಗಳ ರಚನೆಯ ಬಗ್ಗೆ ಸುಮಾರು ೧೫ಲಕ್ಷ ರೂಪಾಯಿಗಳನ್ನು ಖರ್ಚುಮಾಡಿದ್ದಾರೆಂಬುದನ್ನು ತಿಳಿಸಿದರೆ ಯಾರಿಗೆ ತಾನೇ ಆಶ್ಚರ್ಯವಾಗಲಿಕ್ಕಿಲ್ಲ. ಅವರ ಸ್ಫೂರ್ತಿಯ ಶಿಶುವಾದ ಹುಬ್ಬಳ್ಳಿಯ ಮಹಿಳಾ ಕಾಲೇಜು ಉತ್ತರ ಕರ್ನಾಟಕದ ಮಹಿಳೆಯರ ಶಿಕ್ಷಣಕ್ಕಾಗಿ ಶ್ರೀ ಜಗದ್ಗುರುಗಳವರು ನೀಡಿದ ಅಮೂಲ್ಯ ಕಾಣಿಕೆಯಾಗಿದೆ. ಈಗ ಮುಗಿಯುವ ಹಂತದಲ್ಲಿರುವ ಮಹಾ-ದ್ವಾರದ ಕೆಲಸವು ಶ್ರೀಗಳವರ ಮೆಚ್ಚಿನ ಕೃತಿಯಾಗಿದೆ. ಹೀಗೆ ಒಂದಲ್ಲ ಎರಡಲ್ಲ ಇನ್ನೂ ಅನೇಕ ಕಟ್ಟಡಗಳನ್ನು ಮಠದ ಆವರಣದಲ್ಲಿ ಕಟ್ಟಿ ಪೂರ್ತಿಗೊಳಿಸಿದ್ದಾರೆ. ಪ್ರತಿಯೊಂದು ಕಟ್ಟಡಕ್ಕೂ ಅದರ ಉಪಯುಕ್ತತೆಯ ದೃಷ್ಟಿಯಿಂದ ಮಹತ್ವದ ಸ್ಥಾನವಿದೆ. ಹೀಗೆಯೇ ಶ್ರೀಗಳು ತಮ್ಮ ದೃಷ್ಟಿಪಥವನ್ನು ಹೊರಗೆ ಚಾಚುತ್ತಿದ್ದಾರೆ.

ಬೆಳಗಾವ ಜಿಲ್ಹೆಯ, ಘಟಪ್ರಭಾ ರೈಲು ನಿಲ್ದಾಣದ ಸಮೀಪದಲ್ಲಿ ಪಶ್ಚಿಮಕ್ಕೆ ಮೂರು ಸಾವಿರ ಮಠದ ಕೃಪಾ ಛತ್ರದಲ್ಲಿ ಕೆಲಸಮಾಡುತ್ತಿರುವ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆಯ ವಿಸ್ತರಣೆಯ ಅಂಗವಾಗಿ ಒಂದು ಕ್ಷಯರೋಗ ವಿಭಾಗವನ್ನು ರಚಿಸಲು ಶ್ರೀಗಳವರು ನೇತೃತ್ವವಹಿಸಿದ್ದಾರೆ. ಇದೂ ಕೂಡ ಶ್ರೀಗಳವರ ಕಾಯಕಯೋಗದ ಪ್ರಬಲ ನಿದರ್ಶನವೇ ಆಗಿದೆ.

## ಶ್ರೀಗಳವರ ಧರ್ಮದೃಷ್ಟಿ ಮತ್ತು ಧರ್ಮಪ್ರಸಾರ

ಈ ಮಹಾನುಭಾವರು ದಿ. ೯–೫–೧೯೫೮ರಂದು ಮೂರುಸಾವಿರ ಮಠದ ಶೂನ್ಯ ಸಿಂಹಾಸನವನ್ನು ಆರೋಹಣ ಮಾಡಿದನಂತರ ಅಲ್ಪಾವಧಿಯಲ್ಲಿ ಅಂದರೆ ಜನೇವರಿ ೧೯೬೮ರಲ್ಲಿ ದಿಲ್ಲಿಯಲ್ಲಿ ನಡೆದ ವಿಶ್ವಧರ್ಮಗಳ ಶಾಂತಿ ಪರಿಷತ್ತಿನಲ್ಲಿ (International inter—religious Symposium on Peace) ಮತ್ತು ಅಕ್ಟೋಬರ ೧೯೭೦ರಲ್ಲಿ ಜಪಾನದೇಶದ ಕ್ಯಿಟೋ ನಗರದಲ್ಲಿ ನಡೆದ ವಿಶ್ವ ಧರ್ಮಗಳ ಶಾಂತಿ ಪರಿಷತ್ತಿನಲ್ಲಿ ಭಾಗವಹಿಸಿ ಮಾನವಕೋಟಿಗೆ ವೀರಶೈವಧರ್ಮದ ತಿರುಳನ್ನು ತಿಳಿಸಿದ್ದಾರೆ. ಮಾನವರಲ್ಲಿ ಮಧುರ ಬಾಂಧವ್ಯವನ್ನು ಹುಟ್ಟಿಸಲಿಕ್ಕೆ ಮತ್ತು ಪರಸ್ಪರ ತಿಕ್ಕಾಟಗಳನ್ನು ನಂದಿಸಿ ಶಾಂತಿಯ ನಂದಾದೀಪವನ್ನು ಹೊತ್ತಿಸಲಿಕ್ಕೆ ಪ್ರಯತ್ನಮಾಡಿದ್ದಾರೆ. ಕ್ಯಿಟೋ (Kyoto) ಪರಿಷತ್ತಿನಲ್ಲಿ ಹಿಂದುಸ್ತಾನದ ಇತರ ಧರ್ಮಗಳ ಪ್ರಾತಿನಿಧ್ಯ ವಹಿಸಿ ಜಾಗತಿಕ ಶಾಂತಿಗೆ ನಮ್ಮ ದೇಶದ ಕೊಡುಗೆಯು ಮಹತ್ವದ್ದಾಗಿದೆ ಎಂದು ವಚನಗಳ ವೃಷ್ಟಿಗೈದು ಸಿದ್ಧಮಾಡಿ ತೋರಿಸಿದ್ದು ವಿಶ್ವದ ಎಲ್ಲ ಕಡೆಗೂ ಹರಡಿದೆ. ವೀರಶೈವಧರ್ಮದ ಗರಿಮೆ ಗೌರವವನ್ನು ವಿಶ್ವದ ವೇದಿಕೆಯ ಮೇಲೆ ನಿಂತು ಗಂಟಾಘೋಷವಾಗಿ ಸಾರಿದ ಸಂಗತಿಯನ್ನು ಜಗತ್ತೇ ಬಲ್ಲದು. ಕ್ಯಿಟೋ ಪರಿಷತ್ತಿನಲ್ಲಿ ಭಾಗವಹಿಸಿದ ಭಾರತದ ವಿವಿಧ ಧರ್ಮಗಳ ಪ್ರತಿನಿಧಿಗಳು ಶ್ರೀಗಳವರ ಮೇಲೆ ವಿಶ್ವಾಸವಿಟ್ಟು ಅವರಿಗೆ ನಾಯಕತ್ವದ ಪಟ್ಟಗಟ್ಟಿ ಅವರೆಲ್ಲರ ಪರಿಯಿಂದ ಭಾಷಣ ಮಾಡಲಿಕ್ಕೆ ಅನುವುಮಾಡಿಕೊಟ್ಟಿದಕ್ಕೆ ಕನ್ನಡಿಗರು ತುಂಬಾ ಋಣಿಯಾಗಿದ್ದಾರೆ. ಇದು ನಮಗೆ ಹೆಮ್ಮೆಯ ವಿಷಯವಾಗಿದೆ.

## ಭಾವೀ ವಿದೇಶಯಾತ್ರೆಯ ಪೂರ್ವ ಸಿದ್ಧತೆ

ಶ್ರೀಗಳವರು ವಯೋಮಾನದಿಂದ ಕಿರಿಯರಾಗಿದ್ದರೂ ಜ್ಞಾನ ಹಾಗೂ ಅನುಭವದಿಂದ ಅವರು ಉಚ್ಚಸ್ಥಾನದಲ್ಲಿದ್ದಾರೆ. ಆದ್ದರಿಂದ ಸದ್ಯೋಭವಿಷ್ಯದಲ್ಲಿ ಅವರಿಗೆ ಅತಿಮಾನವತೆಯ ಪ್ರಗತಿಯು ಕಾದಿದೆ. ಶ್ರೀಗಳವರ ಕೂಡ ಸಹಜ ಸಂಭಾಷಣೆ ನಡೆದ ಕಾಲಕ್ಕೆ ಅವರು ಇಂಗ್ಲಂಡ ಅಮೇರಿಕಾ ಮೊದಲಾದ ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಭೆಟ್ಟಿಕೊಟ್ಟು ಹಿಂದೂ ಧರ್ಮದ ಹಿರಿಮೆಯನ್ನೂ ವೀರಶೈವ ಧರ್ಮದ ಘನತೆಯನ್ನೂ ಜಾಗತಿಕ ಮಾನದಂಡದಿಂದ ಅಳೆದುತೋರಿಸಿ ಪಾಶ್ಚಿಮಾತ್ಯರ ಮೇಲೆ

ಬಿಂಬಿಸಲಿಕ್ಕೆ ಪ್ರಯತ್ನ ಮಾಡುವವರಿದ್ದಾರೆ. ಅಲ್ಲಲ್ಲಿ ಮಿಶನ್‌ಗಳನ್ನು ಸ್ಥಾಪಿಸುವ ವಿಚಾರವನ್ನೂ ಇಟ್ಟುಕೊಂಡಿದ್ದಾರೆ. ಪ್ರಭುವಿನ ಆಜ್ಞೆಯನ್ನು ಕಾಯುತ್ತಿದ್ದಾರೆ.

## ಶ್ರೀಗಳವರ ಜೀವನದ ವಿವಿಧ ವೈಶಿಷ್ಟ್ಯಗಳು

ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆಯ ಸಲುವಾಗಿ ಬಹಳ ಪ್ರಯತ್ನಮಾಡಿದ್ದುಂಟು. ಹಿಂದಿನ ರಾಷ್ಟ್ರಪತಿಗಳಾಗಿದ್ದ ದಿವಂಗತ ಬಾಬು ರಾಜೇಂದ್ರ ಪ್ರಸಾದರವರನ್ನು ಮತ್ತು ಮೈಸೂರು ರಾಜ್ಯದ ಗವ್ಹರ್ನರ ಆಗಿ ಕೆಲಸಮಾಡುತ್ತಿರುವಾಗ್ಯೆ ಶ್ರೀ ಗಿರಿಯವರನ್ನೂ ಹಾಗೂ ಶ್ರೀ ಪಾತಕರವರನ್ನೂ ರಾಜ್ಯ ಸರಕಾರದ ಮಂತ್ರಿಗಳನ್ನೂ ತಮ್ಮ ಪ್ರಭಾವಬೀರಿ ಆಸ್ಪತ್ರೆಗೆ ಬರಮಾಡಿಕೊಂಡು ಅದರ ಸ್ಥಿರತೆಯನ್ನು ತಂದುಕೊಟ್ಟ ಶ್ರೇಯವು ಶ್ರೀಗಳವರಿಗೆ ಸಲ್ಲುತ್ತದೆ. ಆಸ್ಪತ್ರೆಗೆ ಶ್ರೀ ಪಾತಕರವರು ಸಂದರ್ಶನವಿತ್ತಾಗ ಶ್ರೀಗಳವರು ತಮ್ಮ ಅಧ್ಯಕ್ಷೀಯ ಆಶೀರ್ವಚನ ಭಾಷಣವನ್ನು ಹಿಂದೀ ಭಾಷೆಯಲ್ಲಿ ಅಸ್ಖಲಿತವಾಗಿಮಾಡಿ ಹಿರಿಯ ಅತಿಥಿಗಳನ್ನು ವಿಸ್ಮಯಗೊಳಿಸಿದರು. ಶ್ರೀಗಳವರು ಘಟಪ್ರಭಾ ಆಸ್ಪತ್ರೆಗೆ ಭೆಟ್ಟಿಕೊಡುವಾಗ ಉಲ್ಬಣಾವಸ್ಥೆಯಲ್ಲಿಯ ರೋಗಿಗಳನ್ನು ಆಶೀರ್ವದಿಸುವ ಸ್ತುತ್ಯ ಪರಿಪಾಠವಿತ್ತಿದ್ದಾರೆ. ಹೀಗೆ ಸಂದರ್ಶನದ ಲಾಭ ನೀಡಿ ಆಪತ್ತಿನಲ್ಲಿ ಸಿಲುಕಿದವರನ್ನು ಆಶೀರ್ವದಿಸಿ ಧೈರ್ಯವನ್ನು ಕೊಡುವ ಪಾಡಿಕೆಯನ್ನು ಇಟ್ಟುಕೊಂಡಿದ್ದಾರೆ. ಬಡವರು ಹಾಗೂ ವಿದ್ಯಾರ್ಥಿಗಳು ಭೆಟ್ಟಿಯಾಗಲು ಬಂದಾಗ್ಯೆ ಅವರವರ ಅಡ್ಡಿ ಅಡಚಣೆಗಳನ್ನು ಪ್ರಸನ್ನ ಚಿತ್ತರಾಗಿ ಕೇಳಿಕೊಂಡು ಅವರವರ ಯೋಗ್ಯತೆಗೆ ಅನುಸರಿಸಿ ಸಮರ್ಪಕವಾಗಿಯೂ, ಸಮಯೋಚಿತವಾಗಿಯೂ ಮಠದ ಘನತೆ, ಗೌರವಗಳಿಗೆ ತಕ್ಕಂತೆ ಸಹಾಯ ಮಾಡುತ್ತಾರೆ. ಇಂಥ ಉದಾಹರಣೆಗಳು ಪ್ರತ್ಯಕ್ಷ ಅನುಭವಕ್ಕೆ ಬಂದ ಸಂಗತಿಯಾಗಿವೆ.

## ಶ್ರೀಗಳ ಹಂಬಲ

ನಮ್ಮ ನಾಡಿನ, ಪ್ರತಿಯೊಂದು ಹಳ್ಳಿ ಪಟ್ಟಣಗಳಲ್ಲಿ ಮಠಗಳಿವೆ, ಗುರುಗಳಿದ್ದಾರೆ. ಜಗದ್ಗುರು ಪೀಠಗಳಿವೆ. ಪಂಚ ಸಿಂಹಾಸನಗಳಿವೆ. ಇವರೆಲ್ಲರಲ್ಲಿರುವ ಅನೈಕ್ಯದ ಮೂಲಕ ಧರ್ಮದ ಕಟ್ಟಡಗಳು ಕಳೆದ ಶತಮಾನಗಳಿಂದ ಶಿಥಿಲಗೊಳ್ಳುತ್ತ ಸಾಗಿವೆ. ಧರ್ಮ ಗುರುಗಳಲ್ಲಿ ಪರಸ್ಪರ ಐಕ್ಯದ ದೀವಟಿಗೆಯನ್ನು ಹೊತ್ತಿಸದ ವಿನಹ ಭಕ್ತರ ಧಾರ್ಮಿಕ ಪರಿಸ್ಥಿತಿಯು ಸುಧಾರಿಸಲಿಕ್ಕೆ ಸಾಧ್ಯವಿಲ್ಲವೆಂದು ಮನಗಂಡ ಶ್ರೀಗಳವರು ತಾವೇ ಸ್ವತಃ ಮುಂದಾಗಿ ಇವರೆಲ್ಲರ ಕೂಡ ಸಮಯ ಸಿಕ್ಕಾಗಲೆಲ್ಲ ಸಂಪರ್ಕ ಬೆಳೆಯಿಸಿ ಅವರ ಹೃನ್ಮನಗಳನ್ನು ಮತ್ತು ಆಯಾ ಮಠಾಧಿಪತಿಗಳ ಭಕ್ತರ ಮನಸ್ಸನ್ನು ತಮ್ಮ ಕಡೆಗೆ ಆಕರ್ಷಣೆಮಾಡಿಕೊಳ್ಳುತ್ತಿದ್ದಾರೆ. ಈ ದಿಸೆಯಲ್ಲಿ ಕೆಲಮಟ್ಟಿಗೆ ಯಶ ಸಿಕ್ಕಿದೆ.

## ಪರಧರ್ಮಗಳನ್ನು ಅರಿಯಲು ಶ್ರೀಗಳವರ ಜಿಜ್ಞಾಸೆ

ಜಗತ್ತಿನ ಇತರ ಧರ್ಮಗಳ ಬಗ್ಗೆ ಆಳವಾದ ಅಧ್ಯಯನಮಾಡಿ ಆಯಾಧರ್ಮಗಳನ್ನೂ ಅರಿಯುವವರೆಗೆ ತಮ್ಮ ಜನ್ಮವು ಸಾರ್ಥಕವಾಗಲಾರದೆಂಬ ವಿಚಾರದಿಂದ ಶ್ರೀಗಳವರು ವಿವಿಧ ಧರ್ಮಗಳ ಗ್ರಂಥಗಳನ್ನು ಕಲೆಹಾಕಿ ನಿತ್ಯವೂ ಅಧ್ಯಯನ ನಡೆಸಿದ್ದಾರೆ. ವ್ಯವಹಾರಿಕ ಜ್ಞಾನಗಳಿಕೆಗಾಗಿ ರಾಮಕೃಷ್ಣ ಮಿಶನ್‌ಗಳಿಗೆ, ಕ್ರಿಶ್ಚಿನ ಮಿಶನ್ನುಗಳಿಗೆ, ಅನೇಕದೇಶಗಳ ಬೌದ್ಧವಿಹಾರಗಳಿಗೆ ಮತ್ತು ವಿವಿಧ ವಿದ್ಯಾಪೀಠಗಳಿಗೆ ಪ್ರತ್ಯಕ್ಷ ಭೆಟ್ಟಿಕೊಟ್ಟು ಆಯಾಧರ್ಮಗಳು ಕೈಕೊಂಡಿರುವ ಮಿಶನರಿ ಕೆಲಸಗಳನ್ನು ಆಸ್ಥೆಯಿಂದ ನಿರೀಕ್ಷಿಸಿದ್ದಾರೆ. ಮುಸಲ್ಮಾನ ಧರ್ಮಗುರುಗಳ ಕೂಡ ಚರ್ಚೆಮಾಡಿ ಇಸ್ಲಾಮ ತತ್ವಗಳನ್ನು ಅರಿತಿದ್ದಾರೆ. ಇಷ್ಟಕ್ಕೆ ತೃಪ್ತರಾಗದೇ ಸರ್ವ ಧರ್ಮಗಳ ಸಮನ್ವಯ ಬಗೆಗಿನ ತಮ್ಮ ವಿಚಾರಗಳನ್ನು ಅವಕಾಶ ಸಿಕ್ಕಾಗಲೆಲ್ಲ ಪ್ರಚಾರ ನಡೆಸಿದ್ದಾರೆ. ಕಾಲಕಾಲಕ್ಕೆ ಕೂಡುತ್ತಿರುವ ಸರ್ವಧರ್ಮ ಪರಿಷತ್ತುಗಳಲ್ಲಿ ಉಪಸ್ಥಿತರಾಗಿ ತಮ್ಮ ವಿಚಾರಗಳನ್ನು ಅಲ್ಲಿ ಮಂಡಿಸಿ ಚರ್ಚೆಯಲ್ಲಿ ಭಾಗವಹಿಸುತ್ತಿದ್ದಾರೆ.

## ತಜ್ಞ ಜನರ ಸಲಹೆ ಪಡೆಯುವ ಶ್ರೀಗಳವರ ವಿಚಾರ

ಧಾರ್ಮಿಕ ಕೆಲಸಗಳು ಸಮಾಜ ವಿಕಾಸ ಕೆಲಸಗಳು ಸರಿಯಾಗಿ ಮತ್ತು ಪ್ರಗತಿ ಪರವಾಗಿ ಸಾಗಬೇಕಾದರೆ ತಮ್ಮ ಮಠದ, ಹಾಗೂ ಅದರಿಂದ ನಡೆಯುವ ಶಾಲಾ ಕಾಲೇಜುಗಳ ಹಾಗೂ ಸಂಸ್ಥೆಗಳ ಕೆಲಸಗಳು ನಿರಾತಂಕವಾಗಿಯೂ, ನಿರಂತರವಾಗಿಯೂ, ಹುಲುಸಾಗಿಯೂ ಸಾಗಬೇಕಾದರೆ ಅನುಭವಿಕ ಹಾಗೂ ಗಣ್ಯ ವ್ಯಕ್ತಿಗಳ, ಅಧಿಕಾರಿಗಳ ಹಾಗೂ ಸಾರ್ವಜನಿಕರ ಸಲಹೆ ಸಹಕಾರವು ಬೇಕೇ ಬೇಕು ಎಂದು ಶ್ರೀಗಳವರು ಕಂಡು ಹಿಡಿದಿದ್ದಾರೆ. ಇದಕ್ಕಾಗಿ ಗಣ್ಯವ್ಯಕ್ತಿಗಳನ್ನೂ ಹಿರಿಯರನ್ನೂ, ಅಧಿಕಾರಿಗಳನ್ನೂ, ರಾಜ್ಯ ಹಾಗೂ ಕೇಂದ್ರ ಮಂತ್ರಿಗಳನ್ನೂ, ವಿವಿಧ ಅಧಿಕಾರಿಗಳನ್ನೂ ಮಠಕ್ಕೆ ಬರಮಾಡಿಕೊಂಡು ಮಠದಲ್ಲಿ ನಡೆದಿರುವ ಚಟುವಟಿಕೆಗಳನ್ನು ವಿಸ್ತರಣೆಗಳನ್ನು ಅವರಿಗೆ ತಿಳಿಸಿ ಅವರಿಂದ ಲಭ್ಯವಾಗಲಿರುವ ಸಹಾಯ ಸಹಕಾರಗಳನ್ನು ಪಡೆಯುತ್ತಿದ್ದಾರೆ.

## ಈ ಮಠದ ಪರಂಪರೆ

ಈ ಮಠಕ್ಕೆ ಎಲ್ಲ ಧರ್ಮಗಳ ಭಕ್ತರಿದ್ದಾರೆ. ಶ್ರೀಗಳವರು ಎಲ್ಲ ಭಕ್ತರನ್ನು ಸಮನಾಗಿ ನೋಡುತ್ತಾರೆ. ಈ ಮಠದ ವತಿಯಿಂದ ಉಪಲಬ್ಧವಿರುವ ಸೌಕರ್ಯಗಳ ಲಾಭವು ಯಾವದೇ ತರದ ಬೇಧಭಾವಕ್ಕೆ ಅವಕಾಶವಿಲ್ಲದೇ ಎಲ್ಲ ಮತದವರಿಗೂ ಮತ್ತು ವರ್ಗದವರಿಗೂ ಸಮನಾಗಿ ಸಿಗುತ್ತದೆ. ಇದು ಈ ಮಠದ ಸತ್ ಪರಂಪರೆ ಹಾಗೂ ಶ್ರೀಗಳಲ್ಲಿ ಆಳವಾಗಿ ಬೆಳೆದು ಬಂದಿರುವ ಸರ್ವಧರ್ಮಗಳ ಸಮನ್ವಯ ದೃಷ್ಟಿಯ

ಪ್ರತೀಕವಾಗಿದೆ. ಶ್ರೀಗಳವರು ಭಾಷೆ ಅಥವಾ ದಾನರೂಪದಿಂದ ಭಕ್ತರ ಕಡೆಯಿಂದ ಹಣಬೇಡುವ ಪರಿಪಾಠವನ್ನು ಇಟ್ಟಿಲ್ಲ. ಇವರು ಮಾಡುತ್ತಿರುವ ಸತ್ಕಾರ್ಯಗಳಿಗೆ ಮತ್ತು ಸತ್ಕರ್ಮಗಳಿಗೆ ಮನಸೋತು ಭಕ್ತರು ತಾವಾಗಿಯೇ ಸ್ವಯಂ ಪ್ರೇರಣೆಯಿಂದ ಮುಂದೆ ಬಂದು ಕಾಂಚಣ ವೃಷ್ಟಿಗೈದು ಶ್ರೀಗಳವರ ಕೃಪಾಶೀರ್ವಾದಗಳಿಗೆ ಪಾತ್ರರಾಗುತ್ತಾರೆ.

## ಅಂತಃಶಕ್ತಿಯ ಫಲ

ಈ ಪುಣ್ಯಾತ್ಮರು ಶೂನ್ಯಸಿಂಹಾಸನವನ್ನು ಏರಿದ ನಂತರ ಕೇವಲ ೧೨ ವರ್ಷಗಳಲ್ಲಿ ಅವರ ನಿಷ್ಕಾಮ ಕರ್ಮಯೋಗದ ಫಲದಿಂದ ಮಠದ ಕೀರ್ತಿಯು ಭಾರತದಲ್ಲೆಲ್ಲ ಹರಡಿದೆ. ಪರದೇಶಗಳಿಗೂ ಸಹ ಪಸರಿಸಹತ್ತಿದೆ. ಇದು ಶ್ರೀಗಳವರ ಅಂತಃಶಕ್ತಿಯ ಫಲವಾಗಿದೆ.

ಕೊನೆಯದಾಗಿ ಶ್ರೀಗಳವರು ತಮ್ಮ ಆಳವಾದ ವಿಚಾರ ಸಾಧನದಲ್ಲಿ ಬಡ ಜನರ ಮತ್ತು ಹಿಂದುಗಳ ಸಮಾಜದ ಸೇವೆಗಾಗಿ, ಮಠದ ಭಕ್ತರಸೇವೆಗಾಗಿ ಮಾನವ ವಿಕಾಸಕ್ಕಾಗಿ ಮತ್ತು ಉದ್ಧಾರಕ್ಕಾಗಿ ಅನೇಕ ಆದರ್ಶಗಳನ್ನು ಇಟ್ಟುಕೊಂಡದ್ದು ನಮ್ಮೆಲ್ಲರಿಗೂ ತಿಳಿದು ಬಂದಿದೆ. ಸರ್ವಶಕ್ತನಾದ ಶ್ರೀ ಗುರುಸಿದ್ಧೇಶನು ಅವರ ಎಲ್ಲ ವಿಚಾರಗಳು ತೀವ್ರ ಫಲಿಸುವಂತೆ ಮತ್ತು ಅವರ ಮಹತ್ವಾಕಾಂಕ್ಷೆಯಾದ ಮಾನವ ಕೋಟಿಯ ಉದ್ಧಾರವು ತೀವ್ರವೇ ಫಲಿಸಲೆಂದು ಮತ್ತು ಇದಕ್ಕಾಗಿಯೇ ಅವರ ಎರಡನೇ ವಿದೇಶಯಾತ್ರೆಯು ತೀವ್ರವೇ ಪ್ರಾರಂಭವಾಗುವಂತೆ ಶಕ್ತಿ ಹಾಗೂ ಸ್ಫೂರ್ತಿಯನ್ನು ತಂದುಕೊಡಲೆಂದು ಪ್ರಾರ್ಥಿಸುತ್ತೇನೆ. ಶ್ರೀಗಳವರು ಶತಾಯುಷಿಗಳಾಗಿ ಬಾಳಿ ಬೆಳಗಲೆಂದು ಮತ್ತೊಮ್ಮೆ ಗುರು ಸಿದ್ಧೇಶನನ್ನು ಪ್ರಾರ್ಥಿಸುತ್ತೇನೆ.

# ಶ್ರೀಗಳ ಪಾದಸ್ಮರಣೆ

ರಂಗನಾಥ ದಿವಾಕರ

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಶ್ರೀ ಮೂರುಸಾವಿರ ಮಹಾಮಠದ ಪೀಠಾರೋಹಣಗೈದು ಒಂದು ಪಟ್ಟವಾಯಿತು, ಅಂದರೆ ಹನ್ನೆರಡು ವರುಷಗಳಾದವು, ಈ ಅವಧಿಯಲ್ಲಿ ಶ್ರೀಗಳಿಂದಾದ ಮಠದ ಸೇವೆ. ಧರ್ಮಸೇವೆ, ವೀರಶೈವ ಮತದ ಮಹಾಸೇವೆ ಇವು ಎಲ್ಲರಿಗೂ ಗೊತ್ತೇ ಇರುವವು. ಮೇಲಾಗಿ ಆಯಾ ಸೇವೆಗಳ ಸಿಂಹಾವಲೋಕನವು ಅನೇಕ ವಿದ್ವಾಂಸರಿಂದ, ಭಕ್ತರಿಂದ, ಶಿಷ್ಯರಿಂದ ಆಗೇಆಗುವದು, ಇಂಥ ಮಹೋತ್ಸವಗಳ ಉದ್ದೇಶಗಳಲ್ಲಿ ಆ ಬಗೆಯ ಸಿಂಹಾವಲೋಕನ, ವರ್ತಮಾನ ಕಾಲದಲ್ಲಿ ನಡೆದ ಕಾರ್ಯಕಲಾಪಗಳ ಪರ್ಯಾವಲೋಕನ, ಭವಿಷ್ಯದ ವಿಹಂಗಮಾವಲೋಕನ ಇವು ಇದ್ದೇ ಇರುವವು. ಈ ಸಮಯದಲ್ಲಿ ನಾನೂ ನನ್ನ ಸ್ಮರಣಸೇವೆಯನ್ನು ಅರ್ಪಿಸುವದು ಸಮಯೋಚಿತ ಎಂದು ಭಾವಿಸಿ ನಾಲ್ಕು ಮಾತುಗಳನ್ನು ಬರೆಯುವ ಧೈರ್ಯವನ್ನು ಮಾಡುತಿರುವೆ. ಶ್ರೀಚರಣಗಳಲ್ಲಿ ನಿವೇದಿತವಾಗಬೇಕು.

ಕಾಶಿಯು ಪುಣ್ಯಕ್ಷೇತ್ರ. ಅಲ್ಲಿಯ ಜಂಗಮವಾಡಿಯಲ್ಲಿರುವ ಹಲವಾರು ಕರ್ನಾಟಕದ ವಿದ್ಯಾರ್ಥಿಗಳು ನಾನು ಅಲ್ಲಿಗೆ ಹೋದುದನ್ನು ಕೇಳಿ ನನ್ನ ಭೆಟ್ಟಿಯನ್ನಪೇಕ್ಷಿಸಿದರು. ನಾನು ಆಗ ಕೇಂದ್ರದಲ್ಲಿ ಸೂಚನಾ ಮಂತ್ರಿ. ಅದೇನು ಸಂಭ್ರಮ! ನನಗೂ ಅದಾವ ಉತ್ಸಾಹ. ಕನ್ನಡಿಗರು ಪರಪ್ರಾಂತದಲ್ಲಿ ಕೂಡಿದಾಗ ಅವರ ಉಲ್ಹಾಸಕ್ಕೆ ಮಿತಿಯಿಲ್ಲ.

ಶ್ರೀ ಗುರುಗಳದು ಆಗ ಚಿಕ್ಕ ವಯಸ್ಸು. ಆದರೆ ವಿದ್ಯೆಯ ತೇಜಸ್ಸಿನೊಡನೆ ಮುಖದ ಮೇಲೆ ಉತ್ಸಾಹದ ಕಳೆಕಟ್ಟಿತ್ತು. ಈಗ ಸರ್ಪಭೂಷಣಮಠದ ಪೀಠವನ್ನು ಅಲಂಕರಿಸಿದವರೂ ಆ ಗುಂಪಿನಲ್ಲಿದ್ದರು. ನನ್ನನ್ನು ಪ್ರೀತಿಯಿಂದ ಸತ್ಕರಿಸಿ ಸುಂದರವಾದ ಕನ್ನಡ–ಸಂಸ್ಕೃತ ಮಾತುಗಳಿಂದ ಬಣ್ಣಿಸಿ ನನಗೆ ಹೊಸ ಹುರುಪನ್ನು ತಂದುಕೊಟ್ಟರು. ಅದೇ ಶ್ರೀಗಳವರ ಮೊದಲ ಭೆಟ್ಟಿ ಎಂದು ಹೇಳಬಲ್ಲೆ.

ಆ ಕಾಶೀಪಟ್ಟಣದ ಹಿಂದೂ ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಯಾಗಿರುವ ಒಬ್ಬ ಬಾಲಕನು ಮುಂದೆ ಮೂರುಸಾವಿರಮಠದ ಪೀಠಕ್ಕೆ ಬಂದು ಜಪಾನಿನಲ್ಲಿದ್ದ ಬುದ್ಧರ

ಕಿಯೋಟೋ ಕ್ಷೇತ್ರದಲ್ಲಿ ತನ್ನ ತೇಜವನ್ನು ಬೀರುವನೆಂಬುದು ಯಾರಿಗೆ ಗೊತ್ತಾಗ ಬೇಕು ? ೧೯೭೦ರ ಅಕ್ಟೋಬರ ತಿಂಗಳು, ಜಾಗತಿಕ ಧರ್ಮಸಮ್ಮೇಲನ, ವಿಶ್ವಶಾಂತಿ, ನಿಃಶಸ್ತ್ರೀಕರಣ, ಹಿಂದುಳಿದ ರಾಷ್ಟ್ರಗಳ ದ್ರುತಪ್ರಗತಿ ಇವುಗಳನ್ನಾಲೋಚಿಸಿ ಧರ್ಮ ಪೀಠಗಳ ಶಕ್ತಿಯನ್ನು ಆಯಾ ಉದ್ದೇಶಗಳ ಸಾಫಲ್ಯಕ್ಕಾಗಿ ಉಪಯೋಗಿಸಲು ಮುಂದಾ ಗಬೇಕು ಎಂಬ ಕರೆ. ಆ ಕರೆಗೆ ಓಗೊಟ್ಟು ಜಗತ್ತಿನಲ್ಲಿಯ ಸರ್ವಧರ್ಮಗಳ ಹಾಗೂ ಉಪಧರ್ಮಗಳ ೨೨೦ ಪ್ರತಿನಿಧಿಗಳು ಸೇರಿದ ಸಂದರ್ಭವದು. ಭಾರತದಿಂದ ಆ ಸಮ್ಮೇಲನಕ್ಕೆ ಹೋದ ನಾಲ್ವತ್ತು ಪ್ರತಿನಿಧಿಗಳಲ್ಲಿ ಕರ್ನಾಟಕ ಹಾಗೂ ವೀರಶೈವ ಧರ್ಮದ ಪ್ರಮುಖ ಪ್ರತಿನಿಧಿಗಳಾಗಿ ಶ್ರೀಗಳು ವ್ಯಾಸಪೀಠದ ಮೇಲೆ ವಿರಾಜಮಾನ ರಾದ ಸುಸಮಯ. ಯಾವ ಕರ್ನಾಟಕಸ್ಥನ ಹೃದಯ ಆನಂದದಿಂದ ಉಕ್ಕಲಿಕ್ಕಿಲ್ಲ ! ಯಾವನ ಮುಖ ಪ್ರಫುಲ್ಲವಾಗಲಿಕ್ಕಿಲ್ಲ ! ಇನ್ನಾವ ಮಠಾಧೀಶರಿಗೂ ದೊರಕದ ಅವ ಕಾಶವು ಶ್ರೀಗಳಿಗೆ ಕೊಡಲಾಯಿತು. ವೇದಿಕೆಯಿಂದ ಏಕಮೇವ ವಕ್ತಾರರಾಗಿ ಹತ್ತು ನಿಮಿಷ ತಮ್ಮ ಅಸ್ಖಲಿತ ವಾಣಿಯಿಂದ ಇಂಗ್ಲೀಷಿನಲ್ಲಿ ವೀರಶೈವ ಧರ್ಮ ಹಾಗೂ ಶಾಂತಿ ಈ ಬಗ್ಗೆ ಶ್ರೀಗಳು ವ್ಯಾಖ್ಯಾನ ಮಾಡಿದರು. ಮತ್ತೆ ಹಲವಾರು ಚರ್ಚೆಗಳಲ್ಲಿಯೂ ಭಾಗವಹಿಸಿದರು ! ಬರುವಾಗ ೬–೮ ದೇಶಗಳಿಗೆ ಭೆಟ್ಟಿಕೊಟ್ಟರು !

ಪ್ರವಾಸ, ಸಮುದ್ರ ಪರ್ಯಟನ, ಪರದೇಶಗಮನ ಇವುಗಳನ್ನೆಲ್ಲ ಮಾಡುವಾಗ ಧರ್ಮಕ್ಕೆ ಚ್ಯುತಿ ಬರುವದೋ ಎಂಬ ಭಯ ಶ್ರೀಗಳಿಗಿಲ್ಲ. ಅವರ ಶಿಷ್ಯರಿಗೆ. ಅಭಯ ನಿರ್ಭಯತೆ ಎಂಬುದೇ ಆಧ್ಯಾತ್ಮಿಕತೆಯ ಮುಖ್ಯ ಹಾಗೂ ಪ್ರಥಮ ಲಕ್ಷಣ ಎಂಬು ದನ್ನೆ ನಾವು ಮರೆತಿರುವೆವೊ ಏನೋ ? "ಅಭಯಂ ಸತ್ವಸಂಶುದ್ಧಿಃ" ಎಂದುಸುರು ವುದು ಗೀತೆ.

ಜಗತ್ತು ಗಮನಶೀಲವಿದೆ, ಗತಿಮಾನ್ ಇದೆ. ಜಗತ್ತು ಇದರ ಧಾತ್ವರ್ಥವೇ ಗತಿಶೀಲತೆ. ಜೀವಾಣುವೇ ಇರಲಿ ಪರಮಾಣುವೇ ಆಗಲಿ ಒಂದು ಕ್ಷಣ ಕೂಡ ಸ್ಥಿರ ವಾಗಿರಲಾರದು. ಕಾಲ, ಪರಿಸ್ಥಿತಿ ಇವು ಗತಿಶೀಲವಿದ್ದುದು ಪ್ರತ್ಯಕ್ಷ ಅನುಭವಕ್ಕೆ ಬರುವದು. ಆದರೆ ದೇಶ ಅಂದರೆ ಪೃಥಿವಿ, ವಿಶ್ವ ಇವು ಕೂಡ ಗತಿಶೀಲವಿರುವವು. ಈ ಭೂಗೋಲ ೨೪ ತಾಸಿನಲ್ಲಿ ತನ್ನ ಸುತ್ತ ತಿರುಗುವದಲ್ಲದೆ ಒಂದು ವರುಷದಲ್ಲಿ ಸೂರ್ಯನ ಸುತ್ತಲೂ ತಿರುಗುವದು. ಹೀಗಿರುವಾಗ ಮಾನವನ ಮನಸು, ಜೀವ ಕೋಟಿಗಳು ಮಾನವ ಸಮಾಜ ಇವು ಇದ್ದಲ್ಲಿಯೇ ಇರುವದು ಸಾಧ್ಯವೇ ?

ಆದರೆ ಈ ಮಾತನ್ನು ತಿಳಿದು ಮುಂದೆ ಹೆಜ್ಜೆ ಇಡುವವರು ಎಷ್ಟು ಜನ ? ಪೂರ್ವಪರಂಪರೆಯೇ ತಮ್ಮ ಬಲ ಎಂದು ತಿಳಿಯುವವರಂತೂ ಹೊಸ ಮಾತುಗಳಿಗೆ ಕೈಹಾಕುವದೇ ಇಲ್ಲ.

ಶ್ರೀಗಳ ಸ್ವಭಾವ ಗತಿಶೀಲವಿಷ್ಟೇ ಅಲ್ಲ, ಪ್ರಗತಿಶೀಲವಿರುವದು. ಅವರು ವಿವಿಧ ತತ್ವಜ್ಞಾನಗಳ, ಧರ್ಮಗಳ ಅಭ್ಯಾಸ ಮಾಡಿದರು. ತುಲನಾತ್ಮಕ ದೃಷ್ಟಿಯನ್ನು ಬೆಳೆಸಿ ಕೊಂಡರು. ಶ್ರೀ ಅರವಿಂದರ ಉದಯೋನ್ಮುಖ ಮೋಕ್ಷಯೋಗದ ತತ್ವಜ್ಞಾನದಲ್ಲಿ

ಅವರಿಗೆ ರುಚಿ. ಪಾಂಡಿಚೇರಿ ಅರವಿಂದಾಶ್ರಮವನ್ನು ಸಂದರ್ಶಿಸಿ ಬಂದರು. ಜಪಾನದಲ್ಲಿಯ ಧಾರ್ಮಿಕ ಸಂಸ್ಥೆಗಳು ಯಾವ ಅಚ್ಚುಕಟ್ಟುತನದಿಂದ ಶಿಸ್ತಿನಿಂದ ತಮ್ಮ ಕಾರ್ಯ ಕಲಾಪಗಳನ್ನು ನಡೆಸುವವೆಂಬುದನ್ನು ನಿರೀಕ್ಷಿಸಿದರು. ಇಂಗ್ಲೀಷ ಭಾಷೆಯ ಪ್ರಭುತ್ವ ಅವಶ್ಯ ಎಂಬುದನ್ನು ಮನಗಂಡು ಅದನ್ನು ಸಾಧಿಸಲೆಸಗಿದರು.

ಹೀಗೆ ಹಲವಾರು ರೀತಿ ಶ್ರೀಗಳು ಮುಂದಡಿ ಇಟ್ಟು ತೋರಿರುವರು. ಅವರ ಮುಂದಿನ ಹನ್ನೆರಡು ವರುಷಗಳು ಇದಕ್ಕಿಂತಲೂ ತೇಜೋಮಯವಾಗಬಲ್ಲವು. ಅವರಿಗೆ ದೇವರು ಆಯುರಾರೋಗ್ಯಗಳನ್ನು ದಯಪಾಲಿಸುವುದಲ್ಲದೆ ಹೆಚ್ಚಿನ ಧೈರ್ಯ ಸಾಹಸಾದಿಗಳನ್ನು ಕೊಡಲಿ; ಅವರ ಶಿಷ್ಯವೃಂದ ಬೆಳೆಯಲಿ; ಅವರಿಗೆ ಸಮಾಜದ ಪೂರ್ಣ ಬೆಂಬಲ ದೊರೆಯಲಿ. ಕರ್ನಾಟಕದ ವಿಜಯಧ್ವಜ ಅವರಿಂದ ಮೇಲಕ್ಕೇರಲಿ.

□

# ವಿಶ್ವ ಸಮಸ್ಯೆಗಳ ಎದುರಿನಲ್ಲಿ ಜಗದ್ಗುರುಗಳು

ಶ್ರೀ ನಿ. ಪ್ರ. ಸಂಗನಬಸವೇಶ್ವರ ಶಿವಯೋಗಿಗಳು
ಬಂಥನಾಳ

ಹುಬ್ಬಳ್ಳಿಯ ಮೂರ ಸಾವಿರಮಠದ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಪೀಠಾರೋಹಣದ ದ್ವಾದಶವಾರ್ಷಿಕ ಮಹೋತ್ಸವವು ಜರುಗುತ್ತಿರುವ ಶುಭಸಂದರ್ಭದಲ್ಲಿ, ಅನೇಕ ಧಾರ್ಮಿಕ ಹಾಗೂ ಸಾಂಸ್ಕೃತಿಕ ಉತ್ಸವಗಳನ್ನು ನೆರವೇರಿಸುತ್ತಿರುವದು ನಮಗೆ ಅತ್ಯಂತ ಸಂತಸದ ಸಂಗತಿಯಾಗಿದೆ. ಈ ಮಹೋತ್ಸವದ ಬಗ್ಗೆ ಸಂಸ್ಮರಣ ಸಂಚಿಕೆಯನ್ನು ನಾಡ ಜನತೆಯ ಕೈಗೆ ನೀಡುತ್ತಿರುವುದೂ ಶ್ರೇಯಸ್ಕರವಾದುದು.

ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರರವರು; ನಮ್ಮ ಅಚ್ಚುಮೆಚ್ಚಿನ– "ವ್ಯಕ್ತಿ"ಯಾಗಿರದೆ "ಪೂಜ್ಯ ಶಕ್ತಿ"ಯಾಗಿದ್ದಾರೆ; "ದಿವ್ಯವಾದ ಚೇತನ"ವಾಗಿದ್ದಾರೆ ಅವರ ಸಾನಿಧ್ಯದಲ್ಲಿ ಸವಿದ ರಸನಿಮಿಷಗಳು ಚೇತೋಹಾರಿಯಾಗಿ— ಸ್ಫೂರ್ತಿದಾಯಕವಾಗಿ ದಾರಿದೀಪವಾಗಿ ಪರಿಣಮಿಸುತ್ತವೆ. ಅವರ ಒಡನಾಟದಲ್ಲಿ ಚರ್ಚೆ, ಆಲೋಚನೆಗಳು ವ್ಯಕ್ತಿಗತವಾಗಿರದೆ–ವೈಯಕ್ತಿಕವಾಗಿರದೆ, ಸಾಮಾಜಿಕ ಮತ್ತು ಸಾಮೂಹಿಕ ಪ್ರಗತಿಗೆ ಸಂಬಂಧಿಸಿದವುಗಳೇ ಆಗಿರುತ್ತವೆಂಬುದು ನಮ್ಮ ಅವರ ಒಡನಾಟದಲ್ಲಿ ಬಹುಸಲ ಕಂಡುಬಂದ ಸಂಗತಿಯಾಗಿದೆ.

ಲೋಕವೇ ನನ್ನ ಮನೆ ಎಂದು ಲೋಕದ ಜೀವಾತ್ಮರೆಲ್ಲರನ್ನೂ ದಯೆ ಅಂತಃಕರುಣಗಳಿಂದ ಕಂಡು, ನುಡಿದಂತೆ ನಡೆದು, ಲೋಕೋತ್ತರ ಸದಾಚರಣೆಯನ್ನೆಸಗಿದ ಬಸವೇಶ್ವರರ ಜೀವದ ಅಮೂಲ್ಯವಾದ ಸಮತಾವಾದದ ಪ್ರಭಾವವು ನಮ್ಮ ಜಗದ್ಗುರುಗಳನ್ನು ಬಹುವಾಗಿ ಆಕರ್ಷಿಸಿ; ಅವರನ್ನು ಆ ದಿಶೆಯಲ್ಲಿ ಕಾರ್ಯಪ್ರವೃತ್ತರನ್ನಾಗಿ ಮುನ್ನಡೆಸಿದೆ ಎಂದು ನಮ್ಮ ಅನಿಸಿಕೆ. ಈ ಅನಿಸಿಕೆಯು ಅತೀಶಯೋಕ್ತಿಯಲ್ಲ; ಸತ್ಯ ಸಂಗತಿಯಾಗಿದೆ. ಅವರು ಭದ್ರವಾಗಿ ಸ್ಥಾಪಿಸಿದ ಶಾಲೆ ಕಾಲೇಜುಗಳು, ಮಹಿಳಾ ವಿದ್ಯಾಕೇಂದ್ರಗಳು ಈ ಮಾತಿಗೆ ನಿದರ್ಶನವಾಗಿವೆ. ಜನಸಾಮಾನ್ಯರ, ದೀನದಲಿತರ ಅಸಹಾಯಕರ ಉದ್ಧಾರವೇ ಅವರು ಕೈಗೊಂಡಿರುವ ಕಾಯಕದ ಪರಮೋದ್ದೇಶವಾಗಿದೆ.

ಹುಬ್ಬಳ್ಳಿಯ ಮೂರುಸಾವಿರ ಮಠದ ಪೀಠವೆಂದರೆ ಕರ್ನಾಟಕದ ಹಿರಿದಾದ ಸ್ಥಾನ. ಪವಿತ್ರ ಪರಂಪರೆಯ ಆಗರ, ಈ ಮಹಾನ್ ಪೀಠವನ್ನು ಅಲಂಕರಿಸಿದ ಜಗ-ದ್ಗುರುಗಳಲ್ಲಿ ಇಂದು ಎಲ್ಲರೂ ಕಾಣುತ್ತಿರುವದು ನಯ-ವಿನಯ, ಸದ್ವಿಚಾರಸರಣಿ, ಸರ್ವಧರ್ಮ ಸಮನ್ವಯ ದೃಷ್ಟಿ ಹಾಗೂ ನಿರಹಂಕಾರದ ನಡೆನುಡಿ, ಎಂಥವರೇ ಬರಲಿ,-ಕವಿ ಇರಲಿ, ಕಲಾವಿದರಿರಲಿ, ಮಠಾಧೀಶರಿರಲಿ, ಇಲ್ಲವೆ ಪಾತಕಿ ಇರಲಿ ಬಂದವರನ್ನು-ಬರುವವರನ್ನು ಕರುಣಾಕಟಾಕ್ಷದಿಂದ ಕಂಡು ಸಂತೈಸಿ-ಆತ್ಮಕ್ಕೆ ಶಾಂತಿಯನ್ನೀಯಬಲ್ಲ ಅವರ ಮಾತು-ಜ್ಯೋತಿಯಾಗಿ ಪರಿಣಮಿಸುವದನ್ನು ಅನುಭವಿಸಿದವರು ಬಹಳ ಜನ.

ಎಳೆತನದಿಂದಲೇ ಸಾಹಿತ್ಯಾಭಿರುಚಿಯನ್ನು ಹೊಂದಿದ ಜಗದ್ಗುರುಗಳು ಬರೆದು-ದೆಲ್ಲವೂ ಸವಿಜೇನಿನಂತೆ. ಅವರ ವಕ್ತೃತ್ವಕಲೆ ಪ್ರೇಕ್ಷಕರನ್ನು ಬಲವಾಗಿ ಆಕರ್ಷಿಸುತ್ತದೆ. ವಿಷಯ ಪ್ರತಿಪಾದನೆಯನ್ನು ಮನಂಬುಗುವಂತೆ ಮಾಡುವ ಪರಮಕಲೆ ಅವರಲ್ಲಿ ಹುಟ್ಟಿನಿಂದಲೇ ಗಟ್ಟಿಗೊಂಡಂತೆ ತೋರುತ್ತದೆ.

ಸರ್ವಧರ್ಮ ಸಮನ್ವಯ ದೃಷ್ಟಿಯನ್ನು ಅವರು ಭಾರತಾದ್ಯಾಂತ ಪ್ರಚುರ-ಗೊಳಿಸಿದ್ದಾರಲ್ಲದೆ ದಿಲ್ಲಿಯ ಹಾಗೂ ಕಿಯೋಟೋದ ಜಾಗತಿಕ ಶಾಂತಿ ಸಮ್ಮೇಲನ ಗಳಲ್ಲೂ ಕರ್ನಾಟಕದ ಕೀರ್ತಿಧ್ವಜವನ್ನು ಎತ್ತಿ ಹಿಡಿದು, ಸರ್ವಧರ್ಮದ ಸಮನ್ವಯ ಸಂದೇಶವನ್ನು ಸಾರಿಬಂದರು. ಇದು ನಮ್ಮೆಲ್ಲರಿಗೂ ಅಭಿಮಾನದ ಸಂಗತಿಯಾಗಿದೆ.

ಮಾನವ ಕುಲಕ್ಕೆ- ವಿಶ್ವಕ್ಕೆ ಇಂದು ಧರ್ಮದ ಅವಶ್ಯಕತೆ ಅತಿಯಾಗಿದೆ. ಅಂತ ರಂಗದಲ್ಲಿ ಅಗ್ನಿಕುಂಡ ಉರಿಯುತ್ತಿರುವಾಗ ಒಳಹೊರಗು ಸುಖಶಾಂತಿಗಳು ಸಾಧ್ಯವೇ? ಜಗತ್ತಿಂದು ಅನಿಷ್ಟದ ದವಡೆಯಲ್ಲಿ ಸಿಲುಕಿದೆಯಷ್ಟೇ ಅಲ್ಲ, ಅನಿಷ್ಟ-ಅನಾಹುತಗಳ ಕಂದರದಲ್ಲಿ ಬೀಳಲು ತಿಳಿದೋ ತಿಳಿಯದೆಯೋ ಬಹುವೇಗವಾಗಿ ಸಾಗುತ್ತಿದೆಯಲ್ಲವೇ? ಈ ಅನಾಹುತಕ್ಕೆ ಕಾರಣ ಮಾನವನ ಅಂತರಂಗವನ್ನೆ ತುಂಬಿಕೊಂಡಿರುವ ಅಶಾಂತಿ ಮತ್ತು ಅತೃಪ್ತಿ, ಈ ಅಶಾಂತಿ-ಅತೃಪ್ತಿಗಳ ನಿವಾರಣೆಗೆ ಒಂದೇ ಒಂದು ಉಪಾಯ ವಿರುವದು. ಅದೇ ಧರ್ಮಜಾಗೃತಿ, ಧರ್ಮಸಂಸ್ಕೃತಿಗಳ ಬಲದಿಂದಲೇ ವಿಶ್ವಶಾಂತಿ ಸಾಧ್ಯವಾದೀತು.

ಶಿಕ್ಷಣ ಮತ್ತು ಸುಸಂಸ್ಕಾರಗಳು ಒಳ್ಳೆಯ ಸಮಾಜ ನಿರ್ಮಾಣದ ಎರಡು ಕಣ್ಣುಗಳು. ಇಂದು ಶಿಕ್ಷಣವು ಬಲವಾಗಿ ಬೆಳೆಯುತ್ತಿದೆ. ತರಗತಿಗಳು ಬೆಳೆದು ಪ್ರಮಾಣ ಪತ್ರಗಳ ವಿವರಣೆಯಾದರೆ ಮಾತ್ರ ಜೀವನ ಹಸನಾಗಲಿಲ್ಲ. ದಿನೇ ದಿನೇ ಇಂದಿನ ಶಿಕ್ಷಣದಿಂದ ಸಮಾಜ ಅಧೋಗತಿಗೆ ಇಳಿಯುತ್ತಿರುವದು ಬೃಹದ್ ಸಮಸ್ಯೆ ಯಾಗಿ ಪರಿಣಮಿಸಿದೆ. ಧಾರ್ಮಿಕ ಜಾಗೃತಿ ಹಿಂದೆಬಿದ್ದು ಭಾವೈಕ್ಯತೆಯ ಅಭಾವದಿಂದ ಅಂತರಂಗ-ಬಹಿರಂಗಗಳೆರೆಡರಲ್ಲೂ ಅಶಾಂತಿ ತುಂಬಿಕೊಂಡಿದೆ. ಧಾರ್ಮಿಕ ಸಂಸ್ಕಾರ ವಿಲ್ಲದೆ ಬೆಳೆದ ಶಿಕ್ಷಣ ಮಳೆತಾರದ ಮೋಡದಂತೆ ನಿಷ್ಪ್ರಯೋಜಕ; ಆತ್ಮವಿಲ್ಲದ ದೇಹ ದಂತೆ ನಿಷ್ಕ್ರಿಯೆ ಮತ್ತು ನಿರರ್ಥಕ, ಜ್ಞಾನವು ಬೆಳೆದು ಬೆಳಗಬೇಕಾದರೆ ಆಧ್ಯಾತ್ಮ

ಶಿಕ್ಷಣ–ಸಂಸ್ಕಾರಗಳು ಪ್ರಪಂಚದಲ್ಲಿ ಒಡಮೂಡಬೇಕು. ಈ ಒಡಮೂಡುವಿಕೆಯಿಂದ ಮಾತ್ರ ಸುಖ–ಶಾಂತಿಗಳು ಸಿಕ್ಕಬಹುದು.

ಸುಖ ಶಾಂತಿಗಳೇ ಸಮಾಜದ–ನಾಡಿನ–ದೇಶದ ಹಾಗೂ ಪ್ರಪಂಚದ ಬಯಕೆ ಬೇಡಿಕೆಗಳಾಗಿವೆ. ಈ ಗುರಿಸಾಧನೆಗಾಗಿ ವಿಜ್ಞಾನಿ ಏನನ್ನೂ ಮಾಡಲರಿಯ. ಈ ದಿಶೆಯಲ್ಲಿ ಸುಜ್ಞಾನಿಗಳದೇ ಪಾತ್ರ ಮಹತ್ತರವಾದುದು. ಸುಜ್ಞಾನಿಗಳೆಂದರೆ ಧಾರ್ಮಿಕ ಪುರುಷರು, ಅಧ್ಯಾತ್ಮ ಜೀವಿಗಳು; ಸಮದೃಷ್ಟಿಯ ಶರಣರು. ಸಮಾಜದ ಸುಖ–ಶಾಂತಿಗಳಿಗೋಸ್ಕರವಾಗಿ ಅನೇಕ ಧಾರ್ಮಿಕ ಆಧ್ಯಾತ್ಮಿಕ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಯೋಜನೆಗಳನ್ನು ಕಾಲಕಾಲಕ್ಕೆ ಕೃತಿಯಲ್ಲಿಳಿಸುತ್ತಿರುವ ಜಗದ್ಗುರುಗಳು ದೇಶಬಾಂಧವರೆಲ್ಲರ ಪ್ರೀತಿಗೆ ಪಾತ್ರರಾಗಿದ್ದಾರೆ. ಅವರೂ-ನಾವೂ ಆಗಾಗ ಕೂಡಿದಾಗ ಇಂಥ ಅಮೂಲ್ಯವಾದ ವಿಚಾರಗಳನ್ನು ಚರ್ಚಿಸಿ, ಚಿಂತನಪರರಾದುದುಂಟು. ಅವರ ವಿಚಾರಗಳು ಯೋಜನೆಗಳು ಹಾಗೂ ಭಾವನೆಗಳು ಸಮಾಜದ ಸರ್ವಾಂಗೀಣ ಪ್ರಗತಿಗೆ ಸಂಬಂಧಿಸಿದವುಗಳಿರುತ್ತವೆಂದು ಮತ್ತೊಮ್ಮೆ ಧೃಢೀಕರಿಸಬಯಸುತ್ತೇವೆ.

ವೀರಶೈವಧರ್ಮ ವಿಶ್ವವಂದ್ಯವಾದುದೆಂಬುದನ್ನು, ಸರ್ವಧರ್ಮಗಳ ಮರ್ಮವೇ ವೀರಶೈವ ತತ್ವಜ್ಞಾನವೆಂಬುದನ್ನು ಇತ್ತೀಚೆಗೆ ಜಗತ್ತಿನ ಅನೇಕ ಮಹಂತರು ಒಪ್ಪುತ್ತಿರುವುದು ಅಭಿಮಾನದ ಸಂಗತಿಯಾಗಿದೆ. ಆದರೆ ನಮ್ಮ ನಮ್ಮಲ್ಲಿಯ ಆಂತರಿಕ ಭಿನ್ನಾಭಿಪ್ರಾಯಗಳಿಂದಾಗಿ ವೀರಶೈವ ಧರ್ಮವು ಎಡರು–ತೊಡರುಗಳನ್ನು ಎದುರಿಸುತ್ತ ಬಂದಿತು. ಈ ಪರಮ ಧರ್ಮದ ಅವಲಂಬಿತರೇ ಅದರ ಸದ್ವಿಚಾರಗಳನ್ನು ಅರಿಯದೇ ಆಚರಿಸದೆ–ಅಜ್ಞಾನ–ಅನಾಸ್ಥೆಗಳಿಂದ ವಂಚಿತರಾಗಿ ತೊಳಲುವ ಪರಿದೂರಾಗಬೇಕೆಂದು ಮಿಸುಕುವವರಲ್ಲಿ ನಾವೂ ಒಬ್ಬರು. ವೀರಶೈವ ಧರ್ಮ ವಿಶ್ವದ ಆಧಾರ. ಮಾನವ ಮಾರ್ಗದಲ್ಲಿಯ ಅಂತರವನ್ನು ಅಲ್ಲಗಳೆದು, ಮೇಲು ಕೀಳುಗಳ ಕಟ್ಟಳೆಯನ್ನು ದೂರೀಕರಿಸಿ, 'ನೆಲವೊಂದೇ ಹೊಲಗೇರಿ ಶಿವಾಲಯಕೆ— 'ದಯವೇ ಧರ್ಮದ ಮೂಲ', 'ಕಾಯಕವೇ ಕೈಲಾಸ' ವೆಂದು ಜನಕೆಲ್ಲ ಸಾರಿ, ಎಲ್ಲರೊಂದಿಗೆ ಒಂದಾಗಿ–ಸರಿಸಮನಾಗಿ ಬದುಕಿ ಬಾಳುವ ಹಿರಿದಾದ ತತ್ವವನ್ನು ಸಾಧಿಸಿದ ಧೀಮಂತ ಶ್ರೀಮಂತ ಧರ್ಮ, ನಮ್ಮ ಧರ್ಮ.

ವೀರಶೈವ ಧರ್ಮದ ಧ್ವಜವನ್ನು ಕಡಲಿನಾಚೆಗೂ ಎತ್ತಿ ಮೆರೆಸಿದ ಜಗದ್ಗುರು ಗಂಗಾಧರ ರಾಜಯೋಗೀಂದ್ರರು ಇನ್ನೂ ಮಹತ್ತರ ಕಾರ್ಯಗಳನ್ನು ನೆರವೇರಿಸಿ, ಧರ್ಮ ಜಾಗೃತಿಗೈದು, ವಿಶ್ವಕ್ಕೆ ಅಮೂಲ್ಯ ಸೇವೆ ಸಲ್ಲಿಸಲೆಂದು ಹಾರೈಸುತ್ತೇವೆ. □

ಓಂ ಶಾಂತಿಃ ಶಾಂತಿಃ ಶಾಂತಿಃ

# ನಾನು ಕಂಡ ಜಗದ್ಗುರುಗಳು

ಡಾ. ಆರ್. ಬಿ. ಪಾಟೀಲ ಹುಬ್ಬಳ್ಳಿ.
F. R- C. S.

ಮೂರುಸಾವಿರಮಠದ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾ ಸ್ವಾಮಿಗಳವರ ಬಗ್ಗೆ ನಾಲ್ಕು ಮಾತುಗಳನ್ನು ಬರೆಯುವದೆಂದರೆ ನನಗೆ ಅಪೂರ್ವ ಸಂತಸದ ವಿಷಯವೂ ಅಹುದು. ಅತುಲ ಭಕ್ತಿ ಪ್ರಾರ್ಥನೆಯೂ ಅಹುದು. ಇಂದಿಗೆ ೧೫ ವರ್ಷಗಳ ಪೂರ್ವದ ಮಾತು ! ಅವರಿನ್ನೂ ಪೀಠಕ್ಕೆ ಏರಿರಲಿಲ್ಲ; ಅದೇ ನಾನು ಅವರನ್ನು ಪ್ರಥಮಸಲ ಸಂದರ್ಶಿಸಿದ್ದು. ಆಗ ಅವರ ಉಜ್ವಲ ತೇಜೋಭರಿತ ವದನದಲ್ಲಿ ಅಪೂರ್ವ ದೈವೀ ಚೈತನ್ಯ, ವಿನಮ್ರಭಾವನೆ, ಮನಮೋಹಕ ರೂಪ ಹಾಗೂ ನಿತ್ಯನೂತನವಾಗಿ ಅರಳುತ್ತಿರುವ ನಂದದ ಮಂದಹಾಸಗಳು ಕಂಗೊಳಿಸು ತ್ತಿದ್ದವು. ನಿರಾಡಂಬರಯುತವಾದ ಮಿತಭಾಷೆಯಲ್ಲಿ ನನ್ನನ್ನು ಭಾವಿ ಜಗದ್ಗುರು ಗಳೊಂದಿಗೆ ಪರಿಚಯ ಮಾಡಿಕೊಟ್ಟರು. ಆಗ ಆ ಪರಿಚಯಕ್ಕೆ ಉತ್ತರರೂಪವಾಗಿ ಸ್ವಾಮೀಜಿಯವರು ಮೌನವಾಗಿಯೇ ಮಂದಹಾಸವೊಂದನ್ನು ಬೀರಿದ ಸನ್ನಿವೇಶ ಇಂದಿಗೂ ನನ್ನ ಸ್ಮೃತಿಮಂದಿರದಲ್ಲಿ ಅಚ್ಚಳಿಯದೇ ಉಳಿದಿದೆ. ಆ ನಗೆಯೊಂದೇ ಸಾಕಾಯಿತು ನನಗೆ. ಅವರು—ಸರ್ವರೊಂದಿಗೂ ಒಡವೆರದು ಒಂದಾಗಿ, ಅವರೆಲ್ಲ ರಲ್ಲಿಯೂ ಸುಪ್ತವಾಗಿದ್ದ ಅಂತರಾತ್ಮ ಪ್ರಭೆಯನ್ನು ಅರಳಿಸಿ, ಆತ್ಮ ಜ್ಯೋತಿಯನ್ನು ನೀಡಬಲ್ಲವರಾದುದರಿಂದ ಸಿಂಹಾಸನವನ್ನು ಆರೋಹಿಸಲು ಯೋಗ್ಯರೂ ಸಮ ರ್ಥರೂ ಎಂದು.

## ವಾಗ್ಮಿಗಳು

ಪೂಜ್ಯ ಜಗದ್ಗುರುಗಳು ಹುಟ್ಟುವಾಗ್ಮಿಗಳು. ಅವರ ವ್ಯಾಖ್ಯಾನಗಳು ಚಿತ್ತಾಕ ರ್ಷಕವೂ ವಿಚಾರಪ್ರಚೋದಕವೂ ಇರುತ್ತವೆ. ಸಂಸ್ಕೃತ, ಕನ್ನಡ ಹಾಗೂ ಇಂಗ್ಲೀಷ ಭಾಷೆಗಳಲ್ಲಿರುವ ಧರ್ಮಗ್ರಂಥಗಳ ಕೂಲಂಕಷ ನಿರೀಕ್ಷಣೆಯಿಂದ ಅವರ ವಿಚಾರಗಳು ಕಸುವಿನಿಂದ ಕಳೆಗೊಂಡರೆ, ಸರ್ವಸಾಮಾನ್ಯನೊಂದಿಗೆ ಅವರು ಇರಿಸಿಕೊಂಡ ನಿಕಟ ವಾದ ಸಂಪರ್ಕದಿಂದ ಅವರ ಚರ್ಚೆಗಳು ಹುರಿಗೊಂಡಿರುತ್ತವೆ. ಅವರು ಎಲ್ಲಿಯೇ

ಸಂಚರಿಸಲಿ, ಅಲ್ಲೆಲ್ಲ ಕಿಕ್ಕಿರಿದ ಜನಸ್ತೋಮ ಅವರನ್ನು ಸ್ವಾಗತಿಸಲು ಹಾಗೂ ಅವರ ಚೇತೋಹಾರಿಯಾದ, ಚರ್ವಿತಚರ್ವಣವಲ್ಲದ ಆಶೀರ್ವಚನವನ್ನು ಆಲಿಸಲು ಆಕಾಂಕ್ಷಿಸುತ್ತದೆಯೆಂಬುದರಲ್ಲಿ ಆಚ್ಚರಿಯೇನೂ ಇಲ್ಲ.

## ಭಕ್ತರ ಬಂಧು

ಪೂಜ್ಯ ಸ್ವಾಮೀಜಿಯವರು ತಮ್ಮ ಭಕ್ತವೃಂದದ ಬಗೆಗೆ ತೋರುತ್ತಿರುವ ಆಸ್ಥೆ ಹಾಗೂ ಆತ್ಮೀಯತೆಗಳು ಅತಿಶಯವೂ ಅತುಲವೂ ಆಗಿದೆ. ಯಾವುದೇ ಸಮಯ ದಲ್ಲಾದರೂ ಅವರು ಭಕ್ತರನ್ನು ಬರಮಾಡಿಕೊಂಡು, ಅವರ ಸಂತಾಪಗಳನ್ನೂ ಸಮಸ್ಯೆ ಗಳನ್ನೂ, ಸಂಕಷ್ಟಗಳನ್ನೂ ತಾಳ್ಮೆಯಿಂದ ಕೇಳಬಲ್ಲರಲ್ಲದೇ ಅದಕ್ಕೆ ಪರಿಹಾರೋಪಾಯ ವನ್ನು ಅರುಹಿ, ಸಮಸ್ಯೆಗಳನ್ನು ನಿವಾರಿಸಿ ಅವಶ್ಯಕವೆನಿಸಿದರೆ ಸಹಾಯವನ್ನೂ ನೀಡಿ ಮಾರ್ಗದರ್ಶಕರಾಗಬಲ್ಲವರಾಗಿದ್ದಾರೆ. ಬೇನೆಯಿಂದ ಬಳಲುತ್ತಿರುವ ಅನೇಕರಿಗೆ ಸಾಂತ್ವನವನ್ನು ಅರುಹಲು ಅವರು ಅದೆಷ್ಟೋ ಬಾರಿ ನನ್ನ ಚಿಕಿತ್ಸಾಲಯಕ್ಕೆ (Nursing Home) ಬಂದುದನ್ನು ನಾನೇ ನಿರೀಕ್ಷಿಸಿದ್ದೇನೆ. ನಾನು ರೋಗಿಗಳ ನೋವಿನ ನಿವಾರಣೆಯಲ್ಲಿಯೇ ಶಿವನನ್ನು ಕಾಣುತ್ತಿರುವುದರಿಂದ ಅವರು ಪುನರಪಿ ನಮ್ಮ ಚಿಕಿತ್ಸಾಲಯಕ್ಕೆ ಆಗಮಿಸುತ್ತಲೇ ಇರಬೇಕೆಂದು ಅಪೇಕ್ಷಿಸುತ್ತಲೇ ಇರುತ್ತೇನೆ. ಸ್ವಾಮೀಜಿಯವರ ವಾತ್ಸಲ್ಯಯುತ ಒಡನಾಟದಿಂದ ಪ್ರಭಾವಿತರಾದ ಅಸಂಖ್ಯ ಸದ್ಭಕ್ತರು ಮಠಕ್ಕೆ ಆಗಾಗ ಬರುತ್ತಲೇ ಇರುತ್ತಾರೆ. ಮಠದ ಊರ್ಜಿತಾವಸ್ಥೆಗೆ ಕಾರಣಕರ್ತರಾದ ಕರುಣಾಳುಗಳೂ ಸಹೃದಯಿಗಳೂ ಆದ ಸ್ವಾಮೀಜಿಯವರಿಗೆ ಎಲ್ಲ ಧನ್ಯವಾದಗಳೂ ಸಲ್ಲಬೇಕು. ಪೂಜ್ಯ ಜಗದ್ಗುರುಗಳಲ್ಲಿರುವ ಪರಸ್ಪರರನ್ನು ತಿಳಿದು ಕೊಳ್ಳುವ ಪ್ರವೃತ್ತಿ, ಆತ್ಮೀಯತೆ, ಸಹೋದರ ಸೌಹಾರ್ದ ಮೊದಲಾದ ಗುಣಗಳೇ ಜನಮನದಲ್ಲಿ ಮೂರುಸಾವಿರಮಠದ ಬಗ್ಗೆ ಗೌರವವನ್ನೂ ಕೃತಜ್ಞತೆಯನ್ನೂ ಗಳಿಸಿ ಕೊಂಡು ಬರಲು ಕಾರಣವಾಗಿವೆ.

## ಹೊಸ ಯುಗದ ಸುಧಾರಕರು

ಸಾಮಾಜಿಕ ಸುಧಾರಣೆಯಲ್ಲಿ ಅವರ ಪಾತ್ರ ಶಾಶ್ವತವಾಗಿ ಉಳಿಯುವಂತಾ ಗಿದೆ. ಸ್ವಾಮಿ–ಸ್ವಾಮಿಗಳ ಮಧ್ಯದಲ್ಲಿ ಲೌಕಿಕರು ಕೂಡ ನಾಚಿಕೆಪಟ್ಟುಕೊಳ್ಳುವಂಥ ತೀರ ಕ್ಷುಲ್ಲಕ ಕಾರಣಗಳಿಗಾಗಿ ಕಚ್ಚಾಟ, ಪರಸ್ಪರರಲ್ಲಿ ನಾಮೇಲು ತಾಮೇಲು ಎಂಬ ಸ್ಪರ್ಧೆ, ತಾವೂ ಹಾಗು ತಮ್ಮ ಸ್ಥಾನಗಳು ಇನ್ನೊಬ್ಬರಿಗಿಂತ ದೊಡ್ಡವೆಂದು ತೋರಿಸಿ ಕೊಳ್ಳುವಲ್ಲೇ ನಿರತವಾದ ಅಹಂಪ್ರವೃತ್ತಿಗಳು ಎದ್ದುತೋರುತ್ತಿರುವ ಸಂಗತಿ ನನ್ನ ಅರಿತಕ್ಕೂ ವೇದ್ಯವಾಗಿದೆ. ಸ್ವಾಮಿಗಳಲ್ಲೇ ಇಂಥ ಅಂತಃಸ್ಪರ್ಧೆ ಕಾಲೂರಿದರೆ ಅವರು ಏನನ್ನು ತಾನೇ ಉಪದೇಶಿಸಬಲ್ಲರು ? ಹಾಗೆ ಉಪದೇಶಿಸಿದ್ದಾದರೆ ಅದು ಪರಿ ಣಾಮಕಾರಿಯಾದೀತೆ ?

ಸಂಚರಿಸಲಿ, ಅಲ್ಲೆಲ್ಲ ಕಿಕ್ಕಿರಿದ ಜನಸ್ತೋಮ ಅವರನ್ನು ಸ್ವಾಗತಿಸಲು ಹಾಗೂ ಅವರ ಚೇತೋಹಾರಿಯಾದ, ಚರ್ವಿತಚರ್ವಣವಲ್ಲದ ಆಶೀರ್ವಚನವನ್ನು ಆಲಿಸಲು ಆಕಾಂಕ್ಷಿಸುತ್ತದೆಯೆಂಬುದರಲ್ಲಿ ಆಶ್ಚರ್ಯವೇನೂ ಇಲ್ಲ.

## ಭಕ್ತರ ಬಂಧು

ಪೂಜ್ಯ ಸ್ವಾಮೀಜಿಯವರು ತಮ್ಮ ಭಕ್ತವೃಂದದ ಬಗೆಗೆ ತೋರುತ್ತಿರುವ ಆಸ್ಥೆ ಹಾಗೂ ಆತ್ಮೀಯತೆಗಳು ಅತಿಶಯವೂ ಅತುಲವೂ ಆಗಿದೆ. ಯಾವುದೇ ಸಮಯ ದಲ್ಲಾದರೂ ಅವರು ಭಕ್ತರನ್ನು ಬರಮಾಡಿಕೊಂಡು, ಅವರ ಸಂತಾಪಗಳನ್ನೂ ಸಮಸ್ಯೆ ಗಳನ್ನೂ, ಸಂಕಷ್ಟಗಳನ್ನೂ ತಾಳ್ಮೆಯಿಂದ ಕೇಳಬಲ್ಲರಲ್ಲದೇ ಅದಕ್ಕೆ ಪರಿಹಾರೋಪಾಯ ವನ್ನು ಅರುಹಿ, ಸಮಸ್ಯೆಗಳನ್ನು ನಿವಾರಿಸಿ ಅವಶ್ಯಕವೆನಿಸಿದರೆ ಸಹಾಯವನ್ನೂ ನೀಡಿ ಮಾರ್ಗದರ್ಶಕರಾಗಬಲ್ಲವರಾಗಿದ್ದಾರೆ. ಬೇನೆಯಿಂದ ಬಳಲುತ್ತಿರುವ ಅನೇಕರಿಗೆ ಸಾಂತ್ವನವನ್ನು ಅರುಹಲು ಅವರು ಅದೆಷ್ಟೋ ಬಾರಿ ನನ್ನ ಚಿಕಿತ್ಸಾಲಯಕ್ಕೆ (Nursing Home) ಬಂದುದನ್ನು ನಾನೇ ನಿರೀಕ್ಷಿಸಿದ್ದೇನೆ. ನಾನು ರೋಗಿಗಳ ನೋವಿನ ನಿವಾರಣೆಯಲ್ಲಿಯೇ ಶಿವನನ್ನು ಕಾಣುತ್ತಿರುವುದರಿಂದ ಅವರು ಪುನರಪಿ ನಮ್ಮ ಚಿಕಿತ್ಸಾಲಯಕ್ಕೆ ಆಗಮಿಸುತ್ತಲೇ ಇರಬೇಕೆಂದು ಅಪೇಕ್ಷಿಸುತ್ತಲೇ ಇರುತ್ತೇನೆ. ಸ್ವಾಮೀಜಿಯವರ ವಾತ್ಸಲ್ಯಯುತ ಒಡನಾಟದಿಂದ ಪ್ರಭಾವಿತರಾದ ಅಸಂಖ್ಯ ಸದ್ಭಕ್ತರು ಮಠಕ್ಕೆ ಆಗಾಗ ಬರುತ್ತಲೇ ಇರುತ್ತಾರೆ. ಮಠದ ಊರ್ಜಿತಾವಸ್ಥೆಗೆ ಕಾರಣಕರ್ತರಾದ ಕರುಣಾಳುಗಳೂ ಸಹೃದಯಿಗಳೂ ಆದ ಸ್ವಾಮೀಜಿಯವರಿಗೆ ಎಲ್ಲ ಧನ್ಯವಾದಗಳೂ ಸಲ್ಲಬೇಕು. ಪೂಜ್ಯ ಜಗದ್ಗುರುಗಳಲ್ಲಿರುವ ಪರಸ್ಪರರನ್ನು ತಿಳಿದು ಕೊಳ್ಳುವ ಪ್ರವೃತ್ತಿ, ಆತ್ಮೀಯತೆ, ಸಹೋದರ ಸೌಹಾರ್ದ ಮೊದಲಾದ ಗುಣಗಳೇ ಜನಮನದಲ್ಲಿ ಮೂರುಸಾವಿರಮಠದ ಬಗ್ಗೆ ಗೌರವವನ್ನೂ ಕೃತಜ್ಞತೆಯನ್ನೂ ಗಳಿಸಿ ಕೊಂಡು ಬರಲು ಕಾರಣವಾಗಿವೆ.

## ಹೊಸ ಯುಗದ ಸುಧಾರಕರು

ಸಾಮಾಜಿಕ ಸುಧಾರಣೆಯಲ್ಲಿ ಅವರ ಪಾತ್ರ ಶಾಶ್ವತವಾಗಿ ಉಳಿಯುವಂತಾ ಗಿದೆ. ಸ್ವಾಮಿ–ಸ್ವಾಮಿಗಳ ಮಧ್ಯದಲ್ಲಿ ಲೌಕಿಕರು ಕೂಡ ನಾಚಿಕೆಪಟ್ಟುಕೊಳ್ಳುವಂಥ ತೀರ ಕ್ಷುಲ್ಲಕ ಕಾರಣಗಳಿಗಾಗಿ ಕಚ್ಚಾಟ, ಪರಸ್ಪರರಲ್ಲಿ ನಾಮೇಲು ತಾಮೇಲು ಎಂಬ ಸ್ಪರ್ಧೆ, ತಾವೂ ಹಾಗು ತಮ್ಮ ಸ್ಥಾನಗಳು ಇನ್ನೊಬ್ಬರಿಗಿಂತ ದೊಡ್ಡವೆಂದು ತೋರಿಸಿ ಕೊಳ್ಳುವಲ್ಲೇ ನಿರತವಾದ ಅಹಂಪ್ರವೃತ್ತಿಗಳು ಎದ್ದುತೋರುತ್ತಿರುವ ಸಂಗತಿ ನನ್ನ ಅರಿತಕ್ಕೂ ವೇದ್ಯವಾಗಿದೆ. ಸ್ವಾಮಿಗಳಲ್ಲೇ ಇಂಥ ಅಂತಃಸ್ಪರ್ಧೆ ಕಾಲೂರಿದರೆ ಅವರು ಏನನ್ನು ತಾನೇ ಉಪದೇಶಿಸಬಲ್ಲರು ? ಹಾಗೆ ಉಪದೇಶಿಸಿದ್ದಾದರೆ ಅದು ಪರಿ ಣಾಮಕಾರಿಯಾದೀತೆ ?

ಈ ಆಂತರಿಕ ಹೋರಾಟವನ್ನು ಕಂಡು ಮನನೊಂದ ಸ್ವಾಮೀಜಿಯವರು, ಪಂಚ ಪೀಠಗಳ ಮುಖ್ಯ ಗುರುಗಳನ್ನು ಆಮಂತ್ರಿಸಿ, ಸಮಸ್ಯೆಗಳಿಗೆ ಸೂಕ್ತ ಪರಿಹಾರೋಪಾಯವನ್ನು ಕಂಡುಕೊಂಡು, ಅವರವರ ಧಾರ್ಮಿಕ ವಿಧಿವಿಧಾನಗಳಲ್ಲಿ ಸಮರ್ಪಕ ಸುಧಾರಣೆಗಳನ್ನೂ, ಪರಸ್ಪರರಲ್ಲಿ ಸೌಹಾರ್ದತೆಯನ್ನೂ ತರಲು ಹಂಬಲಿಸುತ್ತಿದ್ದಾರೆ. ಇದಲ್ಲದೆ ಸರ್ವಧರ್ಮಗಳ ಪ್ರಾಚಾರ್ಯರಲ್ಲಿ ತಲತಲಾಂತರಗಳಿಂದ ನೆಲೆಯೂರಿದ ತಪ್ಪು ಕಲ್ಪನೆಗಳನ್ನೆಲ್ಲ ಕೊನೆಗಾಣಿಸಿ, ದಾರಿ ಹಲವಾದರೂ ಗುರಿಯೊಂದೇ ಎಂಬ ಭಾವೈಕ್ಯತೆಯನ್ನು ಅವರೆಲ್ಲರ ಹೃದ್ವ್ಯೋಮದಲ್ಲಿ ಅರಳಿಸುವ ಪವಿತ್ರೋದ್ಯಮಕ್ಕೆ ಅವರು ತಮ್ಮ ಜೀವನವನ್ನೇ ಸಮರ್ಪಿಸಿಕೊಂಡಿದ್ದಾರೆ.

## ಶಿಕ್ಷಣ ಪ್ರೇಮಿಗಳು

ಮಹಾಸ್ವಾಮಿಗಳ ಇನ್ನೊಂದು ಅಪೂರ್ವ ವೈಶಿಷ್ಟ್ಯವೆಂದರೆ ಅವರ ಶಿಕ್ಷಣ ಪ್ರೇಮ. ಅವರು ಪ್ರಾಧ್ಯಾಪಕರ, ಶಿಕ್ಷಕರ ಹಾಗೂ ವಿದ್ಯಾರ್ಥಿಗಳ ಸರ್ವೋನ್ನತಿಗಾಗಿ ಅತ್ಯಾಸಕ್ತಿಯಿಂದ ಪರಿಶ್ರಮಿಸುತ್ತಲೇ ಇರುತ್ತಾರೆ. ಸಮಾಜದಲ್ಲಿ ಅವರಿಗೆ ಪ್ರಚಂಡ ಗೌರವವಿದೆ. ಅವರ ಮಾತಿಗೆ ಮಾರುತ್ತರವೆಂಬುದೇ ಇಲ್ಲ. ಈ ನಗರದ ಮಹಿಳಾ ಕಾಲೇಜಿನ ಕಟ್ಟಡ ನಿರ್ಮಾಣಕ್ಕೆ ಅವರ ಅತ್ಯಲ್ಪಾವಧಿಯಲ್ಲೇ ಸಾಕಷ್ಟು ದುಡ್ಡನ್ನು ಶೇಖರಿಸಿದ್ದಾರೆ. ಇಂದಿನವರೆಗೂ ಅವರ ಉಚಿತ ಪ್ರಸಾದನಿಲಯವು ಈ ಪಟ್ಟಣದಲ್ಲಿ ಶ್ರೇಷ್ಠಮಟ್ಟದ್ದಾಗಿದೆ. ಎರಡುನೂರಕ್ಕೂ ಮಿಕ್ಕಿದ ವಿದ್ಯಾರ್ಥಿಗಳು ಅಲ್ಲಿ ಉಚಿತ ಅನ್ನ-ಆಶ್ರಯ ಹಾಗೂ ಜ್ಞಾನಾರ್ಜನೆಯನ್ನು ಪಡೆಯುತ್ತಲಿದ್ದಾರೆ. ಇದು ನಿಜವಾಗಿಯೂ ಇಂದಿನ ದಿನಮಾನದಲ್ಲಿ ಅತ್ಯಾವಶ್ಯಕವಾದ ಸಮಾಜಸೇವೆಯೇ ಸರಿ. ಪೂಜ್ಯ ಸ್ವಾಮಿಗಳಿಂದ ಧನಸಹಾಯ ಹಾಗೂ ಆಶ್ರಯವನ್ನು ದೊರಕಿಸಿಕೊಂಡ ಅನೇಕರು ಇಂದು ವಿವಿಧ ರಂಗದ ಪದವೀಧರರಾಗಿ ಸರ್ವೋಚ್ಚ ಅಧಿಕಾರಗಳಲ್ಲಿ ರಾರಾಜಿಸುತ್ತಿರುವದು ಹೆಮ್ಮೆಯ ವಿಷಯವೇ ಆಗಿದೆ. ಅವರೆಲ್ಲರೂ ಈ ಪವಿತ್ರ ಪೀಠವನ್ನು ಜೀವನಾದ್ಯಂತ ಭಕ್ತಿಯಿಂದಲೂ ಕೃತಜ್ಞತೆಯಿಂದಲೂ ನೆನೆಸುತ್ತಾರೆ.

## ಮೇಧಾವಿಗಳು

ದಕ್ಷ ಸ್ವಾಮಿತ್ವದಲ್ಲಿ ಪೂಜ್ಯ ಜಗದ್ಗುರುಗಳಿಗೆ ಸರಿಸಮಾನರಾದವರು ದೊರೆ-ಯುವದು ದುರ್ಲಭ. ಅವರಲ್ಲಿ ಪ್ರಚಂಡ ಮೇಧಾಶಕ್ತಿಯೂ ವಿಶಾಲ ಅನುಭವವೂ ನೆಲೆಸಿವೆ. ಅವರು ಯಾವುದಾದರೊಂದು ಮಾತಿಗೆ ಅಗ್ರಸ್ಥಾನವನ್ನು ಕೊಟ್ಟು ಹೇಳುವಾಗ, ಅದಕ್ಕೆ ಉದಾಹರಣೆಯಾಗಿ, ಮಹಾಕಾವ್ಯಗಳಿಂದ ಅನೇಕ ಭಾಗಗಳನ್ನು ಎಲ್ಲೆಂ-ದರಲ್ಲೆ ಎತ್ತಿಕೊಂಡು, ನಿರರ್ಗಳವಾಗಿ ಹೇಳಬಲ್ಲವರಾಗಿದ್ದಾರೆ. ಅವರು ತಮಗೆ ದೊರೆತ ವಿಶ್ರಾಂತಿಯನ್ನು ನಾನಾ ಭಾಷೆಗಳ ಅನೇಕ ದಾರ್ಶನಿಕರ ಧಾರ್ಮಿಕ ಹೇಳ್ಕೆ-ತ್ತಿಗೆಗಳನ್ನು ಓದುವದರಲ್ಲಿ ವಿನಿಯೋಗಿಸುತ್ತಾರೆ. ಆದ್ದರಿಂದ ಅವರನ್ನು ಸರ್ವಧರ್ಮ

ಸಮ್ಮೇಲನಗಳಂಥ ಬೃಹನ್ಮಹಾಸಭೆಗಳಿಗೆ ಆಮಂತ್ರಿಸುತ್ತಿರುವದು ಅಚ್ಚರಿಯೇನಲ್ಲ, ದಿಲ್ಲಿ ಹಾಗೂ ಜಪಾನಿನ ಕಿಯೊಟೋ ನಗರದಲ್ಲಿ ನೆರವೇರಿದ ವಿಶ್ವಧರ್ಮಗಳ ಶಾಂತಿ ಸಮ್ಮೇಲನವಲ್ಲಿ ಅವರು ಭಾಗವಹಿಸಿದ್ದು ಇದೇ ಸಾಮರ್ಥ್ಯದಿಂದಲ್ಲವೇ ?

## ಮಹಾನಗರದ ಪುಣ್ಯ

ಇಂದು ನಾಲ್ವತ್ತರ ಹೊಸ್ತಿಲಲ್ಲಿ ನಿಂತ ಮಹಾ ಜಗದ್ಗುರುಗಳು ತಮ್ಮ ಪೀಠಾರೋಹಣವಾದ ದ್ವಾದಶವರ್ಷವನ್ನು ಕಂಡಿದ್ದಾರೆ. ಹುಬ್ಬಳ್ಳಿ ನಿವಾಸಿಗರಾದ ನಾವು ನಮ್ಮ ಮಹಾನಗರಕ್ಕೆ ಇಂಥ ಉಜ್ವಲ ತೇಜೋಭರಿತರೂ ಸರ್ವಧರ್ಮ ಸಮನ್ವಯಾಚಾರ್ಯರೂ ಆದ ಸಮರ್ಥ ಸ್ವಾಮಿಗಳನ್ನು ಪಡೆದದ್ದು ಮಹಾಭಾಗ್ಯವಲ್ಲದೇ ಇನ್ನೇನು ? ಇವರಿಂದ ಈ ಮಹಾನಗರ ಮಾತ್ರವಲ್ಲ ಸಮಗ್ರ ಕನ್ನಡನಾಡು ಕಳೆಗೊಂಡಿದೆ. ನಮ್ಮ ಕನ್ನಡದ ಸೊಲ್ಲು ಜಾಗತಿಕ ರಾಷ್ಟ್ರಗಳ ವಿಶ್ವಶಾಂತಿ ಸಮ್ಮೇಲನಕ್ಕೂ ಕೇಳುವಂತಾಗಿದೆ. ಕೇವಲ ನಾಲ್ವತ್ತರ ಹೊಸ್ತಿಲಲ್ಲಿರುವ ಇವರು ತಮ್ಮ ಅಲ್ಪಾವಧಿಯಲ್ಲಿಯೇ ಸಾಧಿಸಿದ ಸಿದ್ಧಿ ಇಷ್ಟೊಂದು ಬೃಹದಾಕಾರವಾಗಿರುವಾಗ ಅವರ ಮುಂಬರುವ ಬಾಳಿನ ನೋಟವನ್ನು ನಿಂತು ನೋಡಬೇಕೆಂದು ಮನ ತವಕಿಸುತ್ತದೆ. ಹನ್ನೆರಡು ವರ್ಷಗಳ ಹಿಂದೆ ಮೂರುಸಾವಿರ ಮಠವನ್ನು ನೋಡಿದವರು ಇಂದು ಒಮ್ಮೆಲೇ ನೋಡಿದರೆ ದಂಗು ಬಡಿದು ಹೋಗುವಂತಿದೆ. ಅಲ್ಲಿ ಸುಮಾರು ೧೫–೨೦ ಲಕ್ಷ ರೂಪಾಯಿಗಳನ್ನು ಸಾರ್ಥಕಗೊಳಿಸಿ ನಿರ್ಮಿಸಿದ ಅನೇಕ ಉನ್ನತ ಸೌಧಗಳು ಪ್ರವಾಸಿಗರನ್ನು ಮೂಕವಿಸ್ಮಿತರನ್ನಾಗಿ ಮಾಡುತ್ತಲಿವೆ. ಇಂದು ಮೂರುಸಾವಿರ ಮಠ ಪೂಜ್ಯ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳ ಅದ್ಭುತ ವ್ಯಕ್ತಿ ಪ್ರಭಾವದಿಂದ ಸಮಗ್ರ ಭಾರತವನ್ನೇ ಆಕರ್ಷಿಸಿದೆ. ವಿಶ್ವದ ಮೂಲೆ ಮೂಲೆಗಳ ಮೇಧಾವಿಗಳನ್ನೂ ಬಸವ ತತ್ವದ ಅಮರವಾಣಿಯತ್ತ ಎಳೆಯಲಿದೆ. ಅದು ಕೈಕೊಂಡ ಕಾರ್ಯ ಅಗಾಧವೂ ಉಜ್ವಲವೂ ಅಹುದು. ನೂರುಜನ ಕೂಡಿ ಮಾಡುವಷ್ಟು ಕೆಲಸಕಾರ್ಯಗಳನ್ನು ಜಗದ್ಗುರುಗಳು ಒಬ್ಬರೇ ಮಾಡುತ್ತಿದ್ದಾರೆ. ಇವರ ಈ ನಿಷ್ಕಲ್ಮಷವಾದ ಕರ್ತೃತ್ವಶಕ್ತಿಯನ್ನು ಮೆಚ್ಚಿಕೊಂಡು, ಇವರ ಈ ಮಹಾ ಕಾರ್ಯದಲ್ಲಿ ಎಲ್ಲ ಮಠಾಧೀಶ್ವರರೂ ಸದ್ಭಕ್ತರೂ ಕೈಗೂಡಿಸಿ ತಮ್ಮ ಪಾಲಿನ ಸೇವೆ ಸಲ್ಲಿಸಿದರೆ ಇನ್ನೂ ಒಳಿತು. ಅದು ನಿಜವಾಗಿಯೂ ನಾಡಿನ ಭಾಗ್ಯೋದಯವಾದೀತು. ಪೂಜ್ಯರ ಅಗಾಧ ಸಾಮರ್ಥ್ಯ ಮತ್ತೂ ಸಾರ್ಥಕವಾದೀತು.

ಭಗವಂತನು ಪೂಜ್ಯರಿಗೆ ಎಂದಿನಂತೆ ಇನ್ನು ಮುಂದೆಯೂ ಆಯುರಾರೋಗ್ಯ ಶಕ್ತಿಸಾಮರ್ಥ್ಯಗಳನ್ನು ದಯಪಾಲಿಸಿ, ಅವರು ಕೈಕೊಂಡ ಮಾನವ ಲೋಕದ ಅಮರ ಸೇವೆಯು ಗುರಿಕಾಣುವವರೆಗೆ ಅನುಗ್ರಹಿಸಲೆಂದು ನಾನು ಭಕ್ತಿಪೂರ್ವಕವಾಗಿ ಪ್ರಾರ್ಥಿಸುತ್ತೇನೆ. □

# ಪಂಚಮಹಾಶಕ್ತಿಗಳ ಪುಣ್ಯಪುಂಜ

ವ್ಯಾಕರಣತೀರ್ಥ : ಚಂದ್ರಶೇಖರಶಾಸ್ತ್ರಿಗಳು ಹಿರೇಮಠ
ಹೊಳಲು.

ಕಳೆದ ೫೦ ವರ್ಷಗಳಿಂದ ಜಗದ್ಗುರು ಮೂರುಸಾವಿರ ಮಠದಿಂದ ವೀರಶೈವ ಸಮಾಜಕ್ಕೆ ಅನಂತ ಉಪಕೃತಿಗಳಾಗಿರುತ್ತವೆ. ೫೦ ವರ್ಷಗಳಿಂದಲೂ, ನೂರಾರು ವಿದ್ಯಾರ್ಥಿಗಳ ಪ್ರಸಾದ ನಿಲಯವೂ ಸಂಸ್ಕೃತ ಕಾಲೇಜೂ ಮೊದಲಾದವುಗಳು ನಡೆದು ಕೊಂಡು ಬಂದಿವೆ. ಲಿಂ. ಜಗದ್ಗುರುಸಿದ್ಧಮಹಾಸ್ವಾಮಿಗಳವರು ವ್ಯಾಪಾರೀ ಪಟ್ಟಣವಾದ ಹುಬ್ಬಳ್ಳಿಯನ್ನು ವಿದ್ಯಾನಗರವನ್ನಾಗಿ ಪರಿವರ್ತಿಸಿರುತ್ತಾರೆ. ಇದು ಕರ್ಣಾಟಕ ಇತಿಹಾಸದಲ್ಲಿ ಉಲ್ಲೇಖನೀಯವಾಗಿದೆ.

ಇಂಥ ಮೂರುಸಾವಿರ ಮಠಕ್ಕೆ ಶ್ರೀ ಜಗದ್ಗುರು ಗಂಗಾಧರ ಮಹಾಸ್ವಾಮಿಗಳವರು ಪಟ್ಟಾಧಿಕಾರಿಗಳಾಗಿ ೧೨ ವರ್ಷ ಕಳೆದಿವೆ. ನಾನು ಕಂಡಂತೆ ಶ್ರೀ ಜಗದ್ಗುರುಗಳ ಕಾರ್ಯಕಲಾಪಗಳನ್ನು ವಿವರಿಸುವದೇ ಈ ಲೇಖನದ ಮುಖ್ಯೋದ್ದೇಶವಾಗಿರುತ್ತದೆ.

ಶ್ರೀ ಜಗದ್ಗುರುಗಳ ಪಟ್ಟಾಧಿಕಾರಕ್ಕೆ ಹೋಗಿದ್ದ ನಾನು ಅವರ ಚಟುವಟಿಕೆಗಳನ್ನು ನೋಡಿ ಇವರೊಬ್ಬ ದಿವ್ಯ ವ್ಯಕ್ತಿಗಳು ಮೂರುಸಾವಿರ ಮಠಕ್ಕೆ ದೊರೆತರೆಂದು ತಿಳಿದುಕೊಂಡಿದ್ದೆನು. ಈ ಅವಧಿಯಲ್ಲಿ ಹಲವಾರು ಸಾರೆ ಅವರನ್ನು ಕಾಣುವ ಪ್ರಸಂಗ ಬಂದಿರುವುದಲ್ಲದೆ ವಿಚಾರವಿನಿಮಯ ಮಾಡುತ್ತ ಅವರ ಕಾರ್ಯ ಕ್ಷೇತ್ರಗಳ ವಿಮರ್ಶೆ ಮಾಡಿಕೊಳ್ಳುತ್ತಾ ಬಂದಿರುತ್ತೇನೆ.

## ಮೂರುಸಾವಿರ ಮಠದ ಪರಿವರ್ತನೆ

ಶ್ರೀ ಜಗದ್ಗುರು ಗಂಗಾಧರ ಮಹಾಸ್ವಾಮಿಗಳವರು ಮಾಡಿದ ಮಹತ್ವದ ಅನೇಕ ಕಾರ್ಯಗಳಲ್ಲಿ—ಮೂರುಸಾವಿರ ಮಠದ ಜೀರ್ಣೋದ್ಧಾರ ಕಾರ್ಯ ಅತ್ಯಂತ ಪ್ರಾಮುಖ್ಯವಾಗಿರುತ್ತದೆ. ಸ್ವಾಮಿಗಳು ಅನೇಕರು ಬರುತ್ತಾರೆ. ಬಯಲಾಗುತ್ತಾರೆ. ಮಠಗಳು ಅನೂಚಾನವಾಗಿರುತ್ತವೆ. ಅಧಿಪತಿಗಳಾಗಿ ಬಂದವರೆಲ್ಲ ಸಾಧ್ಯವಾದ ಮಟ್ಟಿಗೆ ಅವುಗಳ ಅಭಿವೃದ್ಧಿ ಮಾಡುತ್ತ ಸಮಾಜದ ಧರ್ಮ ಮತ್ತು ಸಂಸ್ಕೃತಿಗಳನ್ನುಳಿಸುವುದೇ ಅವರ ಪ್ರಧಾನ ಕಾರ್ಯವಾಗಿರುತ್ತದೆ. ಮುಸಲ್ಮಾನರಿಗೆ ಮಸೀದೆಗಳು, ಕ್ರಿಶ್ಚಿಯನ್ನರಿಗೆ

ಚರ್ಚುಗಳು. ವರ್ಣಾಶ್ರಮಿಗಳಿಗೆ ದೇವಾಲಯಗಳು, ವೀರಶೈವರಿಗೆ ಮಠಗಳು ಅತ್ಯಂತ ಪ್ರಾಮುಖ್ಯಗಳಾಗಿರುತ್ತವೆ. ಇದನ್ನು ತಿಳಿದೇ ಶ್ರೀ ಜಗದ್ಗುರು ಗಂಗಾಧರ ಸ್ವಾಮೀಜಿ ಯವರು ಮಠದ ಅಭಿವೃದ್ಧಿ ಮಾಡುವುದೇ ತಮ್ಮ ಮೊದಲನೆಯ ಕಾರ್ಯವೆಂದು ಪ್ರಾರಂಭಿಸಿ, ಈ ಹನ್ನೆರಡು ವರ್ಷಗಳ ಅವಧಿಯಲ್ಲಿ ೧೨ ಲಕ್ಷ ರೂಪಾಯಿಗಳ ಖರ್ಚನ್ನು ಮಾಡಿ ಅದರ ಆಕಾರವನ್ನೇ ಬದಲಾಯಿಸಿರುತ್ತಾರೆ. ಮಠದ ಮಹಾ ದ್ವಾರದಲ್ಲಿ ಕಾಲಿಟ್ಟ ಕೂಡಲೇ ಕಾರ್ಯದ ಮಹತ್ವ ಕಂಡು ಪ್ರತಿಯೊಬ್ಬರೂ ತಲೆದೂಗುತ್ತಿದ್ದಾರೆ. ಇದು ನನ್ನ ಅನುಭವದ ಮಾತು. ಮಠಗಳನ್ನು ಹಾಳುಗೆಡವುತಕ್ಕವರನ್ನೂ ನೋಡುತ್ತೇವೆ. ಮಾರಿಕೊಳ್ಳುವವರೂ ಸಿಗುತ್ತ ಲಿದ್ದಾರೆ. ಜಗದ್ಗುರು ಗಂಗಾಧರಸ್ವಾಮಿಗಳಂತೆ, ಮಠದ— ಮತ್ತು ಸಮಾಜದ ಅಭಿವೃದ್ಧಿಯೇ ತಮ್ಮ ಅಭಿವೃದ್ಧಿಯೆಂದು ತಿಳಿದುಕೊಳ್ಳುವವರೆಷ್ಟು ಜನ ಸಿಗುತ್ತಾರೆ ? ಇಂಥವರು ಸಿಗುವುದು ಸಮಾಜದ ಭಾಗ್ಯೋದಯವೆಂದು ಹೇಳ ಬಹುದು. ಗಂಗಾಧರ ಜಗದ್ಗುರುಗಳು ಸ್ವನಾಮಧನ್ಯರೂ, ವೀರಶೈವ ಸಮಾಜೋ-ದ್ಧಾರಕರೂ ಆಗಿದ್ದ ಲಿಂ. ಹಾನಗಲ್ ಕುಮಾರ ಮಹಾಸ್ವಾಮಿಗಳ ಕರುಣದ ಶಿಶುವಾಗಿ ಬೆಳೆದಿರುವುದರಿಂದಲೇ ಇಂಥ ಮಹಾಕಾರ್ಯಗಳ ಕರ್ತೃತ್ವ ಶಕ್ತಿ ಬಂದಿರುತ್ತದೆಂದು ತಿಳಿಸಲು ನನಗ ಹೆಮ್ಮೆಯೆನಿಸುತ್ತದೆ. ನಾನೊಬ್ಬ ಹಾನಗಲ್ ಕುಮಾರ ಸ್ವಾಮಿಗಳ ಶಿಷ್ಯನಾದುದರಿಂದ ಅವರ ಕೃಪೆ ಇದ್ದವರೆಲ್ಲ, ಮಾನವತ್ವ ಸಂಪಾದಿಸಿರುತ್ತಾರೆಂದು ಹೇಳಬಲ್ಲೆ, ಪೂಜ್ಯ ಶ್ರೀ ಗಂಗಾಧರ ಜಗದ್ಗುರುಗಳವರು ಹನ್ನೆರಡು ಲಕ್ಷ ರೂಪಾಯಿ ಗಳ ವೆಚ್ಚದಿಂದ ನಿರ್ಮಿಸಿರುವ ಮೂರುಸಾವಿರಮಠದಲ್ಲಿ ವಿದ್ಯಾರ್ಥಿಗಳ ವಸತಿಯ ಸ್ಥಾನ, ಸಂಸ್ಕೃತ ವಿದ್ಯಾಲಯ, ಲಾಯಬ್ರರಿ, ಮಠದ ಆಫೀಸ್, ಪ್ರಿಂಟಿಂಗ್ ಪ್ರೆಸ್,— ರಿಸರ್ಚ ಸೆಂಟರ, ಮಹಿಳಾ ಕಾಲೇಜ, ಗರ್ಲ್ಸ ಹಾಯಸ್ಕೂಲ, ಬಾಯ್ಸ ಹಾಯಸ್ಕೂಲ, ಟಾವರ್.ಕ್ಲಾಕ್, ಪೋಸ್ಟ ಆಫೀಸ ಮೊದಲಾದ ಅನೇಕ ಸ್ಥಾನಗಳು ಕಂಗೊಳಿಸುತ್ತಲಿವೆ. ಮಹಾದ್ವಾರ, ಪ್ರಸಾದನಿಲಯಗಳಿಗೆ ಪೂಜ್ಯ ಶ್ರೀಗಳಿಂದ ಪ್ರಭಾವಿತರಾದ ಭಕ್ತಾದಿ ಗಳು ಹೇರಳ ಹಣಕೊಟ್ಟು ಪುನೀತರಾಗಿರುತ್ತಾರೆ. ಇದಕ್ಕೆಲ್ಲ ಶ್ರೀ ಜಗದ್ಗುರು ಗಂಗಾಧರ ಸ್ವಾಮಿಗಳೇ ಕಾರಣರು. ಇವರು ಮಾಡತಕ್ಕ ಕಾರ್ಯಗಳನ್ನು ನೋಡಿ ಅವರಿಗೆ ದಾನ ಮಾಡಿದ್ದಾರೆ. ವೀರಶೈವ ಸಮಾಜದಲ್ಲಿ ಯೋಗ್ಯ ಕಾರ್ಯಮಾಡತಕ್ಕವ ರಿಗೆ— ದುಡ್ಡಿನ ಕೊರತೆಯೇ ಇಲ್ಲ. ಇಂಥ ಕಾರ್ಯದಲ್ಲಿ— ನಮ್ಮ ಸಮಾಜದ ದಾನಿಗಳು ಕಳೆದ ೭೫ ವರ್ಷಗಳಿಂದ ಕೋಟಿಗಟ್ಟಲೆ ರೂಪಾಯಿ ದಾನ ಮಾಡಿದ್ದಾರೆ. ಇಂಥ ದಾನಿಗಳಲ್ಲಿ ನಮ್ಮ ವ್ಯಾಪಾರಿಗಳ ಕೈ ಮೇಲಾಗಿದೆ.

## ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಲ

ಲಿಂ. ಗುರುಸಿದ್ಧ ಜಗದ್ಗುರುಗಳು ೧ ಲಕ್ಷ ೧೦ ಸಾವಿರ ರೂಪಾಯಿಗಳನ್ನು ಮೂರುಸಾವಿರಮಠದ ವತಿಯಿಂದ ಪ್ರತ್ಯೇಕಿಸಿ ಒಂದು ಟ್ರಸ್ಟ್ ಮಾಡಿದ್ದರು. ಆದರೆ

ಅದರ ಕಾರ್ಯವು ಈಗಿನ ಗಂಗಾಧರ ಜಗದ್ಗುರುಗಳಿಂದ ಪ್ರಾರಂಭವಾಗಿ ಅನೇಕ ಗ್ರಂಥಗಳು ಅಚ್ಚಾಗಿ ೨೦ರ ಸಂಖ್ಯೆ ಮೀರಿರುತ್ತವೆ. ಮೊದಲು ೫-೬ ಗ್ರಂಥಗಳು ಮಾತ್ರ ಪ್ರಕಟವಾಗಿದ್ದವು. ಅವುಗಳಲ್ಲಿ ಕೆಳಗೆ ಬರೆದವುಗಳು ಪ್ರಾಮುಖ್ಯವಾಗಿರುತ್ತವೆ.

ವಿವೇಕಚಿಂತಾಮಣಿ. ಮಣಿವಚನ. ವಚನಶಾಸ್ತ್ರ ರಹಸ್ಯ, ಪಂಚಾಚಾರ ಸಂಗ್ರಹ. ಚಿದಾನಂದ ಚಿಲುಮೆ, ಕುಮಾರ ಗೀತೆ ಮೊದಲಾದವು ಮುಖ್ಯವಾಗಿವೆ. ಈ ಗ್ರಂಥಮಾಲೆಯನ್ನು ನೂರರಸಂಖೆ ಮುಟ್ಟಿಸಬೇಕೆಂಬುವುದೇ ಜಗದ್ಗುರುಗಳ ಮೂಲ ಸಂಕಲ್ಪವಾಗಿದೆ. ವೀರಶೈವ ಸಾಹಿತ್ಯ ಬೆಳೆದು ಸಮಾಜದಲ್ಲಿ ಜಾಗ್ರುತಿಯಾಗುತ್ತದೆ. ಇದರಿಂದ ಕನ್ನಡ ಸಾಹಿತ್ಯಕ್ಕೆ ಪುಷ್ಟಿಯಾಗುತ್ತದೆ. ಇದು ಬಹಳ ಮಹತ್ವದ ಕಾರ್ಯವಾಗಿರುತ್ತದೆ. ಸಾಹಿತ್ಯವಿಲ್ಲದ್ದು ಆದರ್ಶ ಸಮಾಜವಾಗಲಾರದು, ಇಂದಿನ ಸಾಹಿತ್ಯವೇ ಮುಂದಿನ ಜನಾಂಗದ ಏಳಿಗೆಯು ಹೆಗ್ಗುರುತು. ಹಿಂದಿನ ಸಾಹಿತ್ಯ ಇಂದಿನ ಜನಾಂಗದ ಮೇಲ್ಮೆಗೆ ಕಾರಣ. ಸಾಹಿತ್ಯ ಬೆಳೆಸುವುದೇ ಅವರ ಮುಖ್ಯ ಗುರಿಯಾಗಿದೆ.

## ಶಕ್ತಿತ್ರಯವುಳ್ಳವರು

ಶ್ರೀ ಜಗದ್ಗುರು ಗಂಗಾಧರ ಸ್ವಾಮಿಗಳು ಬಹಳ ಉತ್ಸಾಹಶಾಲಿಗಳು. ಪ್ರಭುಶಕ್ತಿ, ಮಂತ್ರಶಕ್ತಿ, ಉತ್ಸಾಹಶಕ್ತಿ, ಈ ಮೂರು ಶಕ್ತಿಗಳು ಯಾರಿಗೆ ಇರುತ್ತವೆಯೋ ಅವರಿಂದ ಬಹಳ ಕಾರ್ಯಗಳಾಗುತ್ತವೆ. ಶ್ರೀಗಳಿಗೆ ಮೇಲೆ ಬರೆದಂತೆ ಉತ್ಸಾಹಶಕ್ತಿಯು ಅಧಿಕವಾಗಿರುವುದರಿಂದಲೂ, ಅವರಿಗೆ ಪ್ರಭುಶಕ್ತಿ ( ದುಡ್ಡು ) ಮಂತ್ರಶಕ್ತಿ ( ಆಲೋಚನೆ ) ಈ ಎರಡೂ ಶಕ್ತಿಗಳು ಅನುಕೂಲವಿರುವುದರಿಂದಲೂ ಅವರಿಂದ ಇನ್ನೂ ಅನೇಕ ಕಾರ್ಯಗಳಾಗುತ್ತವೆ. ಕೆಲವರಿಗೆ— ಪ್ರಭುಶಕ್ತಿ, ಮಂತ್ರಶಕ್ತಿಗಳಿಲ್ಲದಿರುವುದರಿಂದ ಕೇವಲ ಉತ್ಸಾಹದಿಂದ ಕಾರ್ಯ ನಡೆಯುವುದಿಲ್ಲ. ಅವೆರಡು ಇದ್ದರೂ ಉತ್ಸಾಹಶಕ್ತಿ ಇಲ್ಲದಿದ್ದರೂ ಕಾರ್ಯ ಆಗುವುದಿಲ್ಲ ಇವರು ಬಹಳ ಉತ್ಸಾಹಶಕ್ತಿಯುಳ್ಳವರಾಗಿ— ಕಾರ್ಯ ಮಾಡಬೇಕೆಂಬುವ ಆಲೋಚನೆಯಲ್ಲಿಯೇ ತೊಡಗಿರುತ್ತಾರೆ.

## ಚತುರ್ಭಾಷಾ-ಬಲ್ಲವರು

ಶ್ರೀ ಜಗದ್ಗುರುಗಳಿಗೆ ಸಂಸ್ಕೃತ-ಕನ್ನಡ-ಇಂಗ್ಲೀಷ್-ಹಿಂದಿ ಹೀಗೆ ನಾಲ್ಕು ಭಾಷೆಗಳಲ್ಲಿ ಪ್ರಭುತ್ವ ಇದೆ.

ಹಿಂದೀ ಭಾಷೆಯಲ್ಲಿ ಭಾಷಣಶಕ್ತಿ, ಕವಿತ್ವಶಕ್ತಿಯು ಇವರಿಗಿದೆ. ಈಗಾಗಲೇ ಕೆಲವು ಕವಿತೆಗಳನ್ನೂ ಆ ಭಾಷೆಯಲ್ಲಿ ಬರೆದಿದ್ದಾರೆ. ಸಂಸ್ಕೃತದಲ್ಲಿ ಉನ್ನತ ಮಟ್ಟ ಪರೀಕ್ಷೆಗಳನ್ನೆಲ್ಲ ಸಮರ್ಥ ರೀತಿಯಿಂದ ಉತ್ತೀರ್ಣರಾಗಿದ್ದಾರೆ. ಇಂಗ್ಲೀಷಿನಲ್ಲಿ ವಿಶ್ವಶಾಂತಿ ಪರಿಷತ್ತಿನಲ್ಲೇ ಭಾಷಣ ಮಾಡಿದ್ದಾರೆ. ಕನ್ನಡ ಭಾಷೆಯಲ್ಲಿ ಅನೇಕ ಗ್ರಂಥಗಳನ್ನು ಬರೆದು ಪ್ರಕಟಿಸಿರುತ್ತಾರೆ, ಹಾಗೂ ಕನ್ನಡದಲ್ಲಿ ಅಸ್ಖಲಿತ ವಾಗ್ಮಿಗಳಾಗಿದ್ದಾರೆ.

ಗದ್ಯ–ಪದ್ಯಗಳೆರಡರಲ್ಲಿಯೂ ಇವರು ಬರೆಯಬಲ್ಲರೆಂಬುವುದಕ್ಕೆ ಅವರ ಗ್ರಂಥಗಳೇ ಸಾಕ್ಷಿಯಾಗಿವೆ.

೧. ಮೊಗ್ಗೆಯ ಮಾಲೆ (ಕವನ) ಪೂಮಾಲೆ (ಕಂದ) ಅಪ್ಪಯ್ಯಸ್ವಾಮಿಗಳ ಜೀವನ ಚರಿತ್ರೆ (ಗದ್ಯ) ಪಥಿಕ (ಕವನ) ಹೀಗೆ ೧೦ ಕೃತಿಗಳು ಬೆಳಕನ್ನು ಕಂಡಿವೆ. ಇಷ್ಟರಲ್ಲಿಯೇ ಕೆಲವು ಪ್ರಕಟವಾಗತಕ್ಕವುಗಳಿವೆ.

ಇವರ ಆಶೀರ್ವಾಣಿ ಭಾಗ–೧ ಪ್ರಕಟವಾಗಿದೆ— ಇದು ಬಹಳ ಉತ್ಕೃಷ್ಟ ಗ್ರಂಥವಾಗಿದೆ. ಇದರಲ್ಲಿರುವ ಅನೇಕ ವಿಷಯಗಳನ್ನು ಕೂಲಂಕಷವಾಗಿ ಪರಿಶೀಲಿಸಿ ನೋಡಿದರೆ — ಶ್ರೀ ಮಹಾಸ್ವಾಮಿಗಳವರ ಹೃದಯ ವೈಶಾಲ್ಯ, ವಿಷಯಜ್ಞಾನ, ಮೊದಲಾದವುಗಳು ಚೆನ್ನಾಗಿ ಕಾಣುತ್ತವೆ. ಶ್ರೀಮಹಾಸನ್ನಿಧಿಯವರು ಕೇವಲ ಬರಹಗಾರರಲ್ಲ, ಭಾಷಣಕಾರರೂ ಆಗಿದ್ದಾರೆ. ಅಖಿಲ ಭಾರತ ಆಕಾಶವಾಣಿಯಲ್ಲಿ ಅನೇಕ ಸಾರೆ ಹೃದಯಂಗಮವಾಗಿ ಮಾತನಾಡಿರುತ್ತಾರೆ. ಕೆಲವರಿಗೆ ಮಾತನಾಡಲಿಕ್ಕೆ ಬಂದರೆ ಬರೆಯಲಿಕ್ಕೆ ಬರುವುದಿಲ್ಲ. ಬರೆಯಲಿಕ್ಕೆ ಬಂದರೆ ಮಾತನಾಡುವುದು ಬರುವುದಿಲ್ಲ. ಇವರು ಎರಡರಲ್ಲಿಯೂ ಶಕ್ತಿಯುಳ್ಳವರಾಗಿರುತ್ತಾರೆ.

## ಪರದೇಶ ಪರ್ಯಟನ

ಶ್ರೀ ಗಂಗಾಧರ ಜಗದ್ಗುರುಗಳು—ಪರಂಪರಾಗತವಾದ ಶುಷ್ಕ ಮೂಢನಂಬಿಕೆಗಳನ್ನು ಬದಿಗಿರಿಸಿ ಜಪಾನು ಮೊದಲಾದ ಅನೇಕ ದೇಶಗಳಿಗೆ ಹೋಗಿ ಸರ್ವಧರ್ಮ ಸಮ್ಮೇಳನದಲ್ಲಿ ಭಾಷಣ ಮಾಡಿ ಬಂದಿರುವುದು ಮೂರುಸಾವಿರಮಠಕ್ಕೂ ಸಮಾಜಕ್ಕೂ ತುಂಬಾ ಗೌರವದಾಯಕ ಕಾರ್ಯವಾಗಿರುತ್ತದೆ. ಈ ಬಗ್ಗೆ ಅನೇಕ ಪರಂಪರಾಸಕ್ತರು ಟೀಕಿಸಿದ್ದುಂಟು, ಪರಿಸ್ಥಿತಿ ಬದಲಾದ ಸಮಯದಲ್ಲಿ ಅದಕ್ಕನುಗುಣವಾಗಿ ನಡೆದುಕೊಳ್ಳುವುದೇ ಜಾಣತನವಾಗುತ್ತದೆ. ಈ ಕಾಲದಲ್ಲಿ ಕೂಪಮಂಡೂಕಿಗಳಾಗದೆ ಜಗತ್ತಿನ ಪರಿಸ್ಥಿತಿಯನ್ನು ಅರಿತುಕೊಂಡು ನಡೆಯಬೇಕಾಗುತ್ತದೆ. ಜಪಾನಿನಲ್ಲಿ ನಡೆದ ಸಭೆಗೆ ಜಗತ್ತಿನ ಮೂಲೆಮೂಲೆಗಳಿಂದ ಧಾರ್ಮಿಕ ಪಂಡಿತರು ಬಂದಾಗ ಅವರ ಎದುರಿಗೆ ವೀರಶೈವ ಧರ್ಮದ ತತ್ತ್ವಗಳನ್ನು ಪ್ರಚಾರ ಮಾಡಿದ ಕಾರ್ಯ ಅಲ್ಲಗಳೆಯುವಂತಿಲ್ಲ. ಹಿಂದೂ ಧರ್ಮದ ಅನೇಕರು ಪೂರ್ವಕಾಲದಲ್ಲಿ ಪರದೇಶ ಪರ್ಯಟನ ನಿಷೇಧಿಸುತ್ತಿದ್ದರು. ಪಂಡಿತ–ಮದನ ಮೋಹನ ಮಾಲವೀಯರವರೂ ಒಬ್ಬರಾಗಿದ್ದರು. ದುಂಡುಮೇಜಿನ ಪರಿಷತ್ತಿಗೆ ಸರಕಾರದವರು ಅವರನ್ನು ಆರಿಸಿದಾಗ ಅವರು ಹಿಂದಿನ ತಮ್ಮ ವಿಚಾರ ಬದಿಗಿಟ್ಟು ತಮ್ಮ ಸಂಗಡ ಗಂಗಾಜಲವನ್ನು ತೆಗೆದುಕೊಂಡು ಹೋಗಿದ್ದರು.

ಶ್ರೀ ಜಗದ್ಗುರುಗಳು ಮೊದಲು ದಿಲ್ಲಿಗೆ ಹೋಗಿ ಅಲ್ಲಿ ಸರ್ವಧರ್ಮ ಸಮ್ಮೇಳನದಲ್ಲಿ ಲಿಂಗವಂತ ಸಮಾಜದ ಮತ್ತು ಭಗವಾನ್ ಬಸವೇಶ್ವರರ ಬಗ್ಗೆ ಉತ್ತಮ ರೀತಿಯಿಂದ ಮಾತನಾಡಿ ಬಂದಿರುತ್ತಾರೆ.

ಸಂಯುಕ್ತಕರ್ನಾಟಕದ ಸಂಪಾದಕರೂ, ಮಾಜಿ ರಾಜ್ಯಪಾಲರೂ, ಕೇಂದ್ರಮಂತ್ರಿಗಳೂ, ಸಾಹಿತಿಗಳೂ, ವೇದಾಂತಿಗಳೂ, ಕರ್ಮಯೋಗಿಗಳಾಗಿ ಹುಟ್ಟಿ ಕರ್ಮಯೋಗಿಗಳಾಗಿ ಕಾರ್ಯ ಮಾಡುತ್ತ ಕರ್ಮಯೋಗಿಗಳಾಗಿ ಜೀವಿಸಿ ಕರ್ನಾಟಕದಲ್ಲಿ ಮಹಾ ವ್ಯಕ್ತಿಗಳಾಗಿರುವ ರಂಗನಾಥ ದಿವಾಕರರು ತುಂಬಾ ಸಹಾಯಕರಾಗಿ ಈ ಕಾರ್ಯದಲ್ಲಿ ಸಹಕರಿಸಿದ್ದುದು ಅಭಿನಂದನೀಯವಾದುದು.

ಜಗದ್ಗುರುಗಳು ಹೀಗೆ ಪರದೇಶದಲ್ಲಿ ಸಂಚರಿಸಿದರೂ—ತಮ್ಮ ಆಚರಣೆ ಕಾಯ್ದುಕೊಂಡು ಹಣ್ಣು ಹಾಲುಗಳನ್ನು ತೆಗೆದುಕೊಂಡು ಮರಳಿದ್ದಾರೆ—ಇಂಥ ಧಾರ್ಮಿಕ ಪ್ರಚಾರಗಳು ಮುಂದೆಯೂ ನಡೆಯಬೇಕೆಂದೂ ಹಾರೈಸೋಣ. ವಿಘಾತಕ ಕೆಲಸ ಮಾಡಿದವರನ್ನು ಟೀಕಿಸಬೇಕಲ್ಲದೆ ವಿಧಾಯಕ ಕೆಲಸ ಮಾಡತಕ್ಕವರಿಗೆ ಪ್ರೋತ್ಸಾಹಕೊಡುವುದೇ ಬುದ್ಧಿವಂತರ ಲಕ್ಷಣ.

## ಭಾವೈಕ್ಯತೆ ಭಾವನೆಯುಳ್ಳವರು

ಜಗದ್ಗುರುಗಳಲ್ಲಿ ಭಾವೈಕ್ಯತೆ ಭಾವನೆ ಚನ್ನಾಗಿರುವುದನ್ನು ನಾನು ಅರಿತಿದ್ದೇನೆ. ಬಸವಾದಿ ಪ್ರಮಥಪುಂಗವರು ಸಮಾಜದಲ್ಲಿ ಸರ್ವೋದಯ ಮಾರ್ಗವನ್ನು ಜೇರೂರುವಂತೆ ಮಾಡಿದ್ದರು. "ತತ್ವತ್ತದಂತೆ ನಡೆಯುವವರಿಗೆ ತೊತ್ತಾಗಿ ನಡೆಯುವೆ ಎನಗಿಂತ ಕಿರಿಯರಿಲ್ಲ" ಎಂದು ಬಸವೇಶ್ವರರು ಹೇಳಿ ನಡೆದುಕೊಂಡ ಮಹಾನುಭಾವರು. ಈಗ ಸಮಾಜದಲ್ಲಿ ಆದೆಷ್ಟರ ಮಟ್ಟಿಗೆ ಭಾವೈಕ್ಯತೆ ಇದೆ? ಅನೈಕ್ಯದ ತವರೂರಾಗಿಲ್ಲವೆ? ಅದರ ಬಗ್ಗೆ ಎಷ್ಟು ಜನರಿಗೆ ಕಳಕಳಿ ಇದೆ? ಒಂದು ಸಮಾಜವೇಕೆ ಇಡೀ ಪ್ರಪಂಚವೇ ಒಂದಾಗಬೇಕೆಂಬುವ ಪ್ರಯತ್ನ ನಡೆದಿಲ್ಲವೇ?

ಈ ಬಗ್ಗೆ ಗಂಗಾಧರ ಜಗದ್ಗುರುಗಳು ತಮ್ಮ ಆಶೀರ್ವಾಣಿ ಗ್ರಂಥದಲ್ಲಿ—

### ಶಿವಾನುಭವ ಮಹತಿ

ಎಂಬುವ ಲೇಖನದಲ್ಲಿ—

"ಇಂಥ ಧರ್ಮಗ್ಲಾನಿಯು ನಮ್ಮ ಎದುರಿಗೆ ಮಂದಹಾಸ ಬೀರುತ್ತ ನಾಟ್ಯವಾಡುವಾಗ ನಾವೆಲ್ಲರೂ ಸುಮ್ಮನೇ ಕುಳಿತರೆ ನಡಯುತ್ತದೆಯೇ? ಮೊದಲು ಇಂದಿನ ಈ ಅಧಿಕಾರ ಹಾಗೂ ಕೀರ್ತಿದಾಹಗಳಿಂದುಂಟಾದ ಪರಸ್ಪರ ಸ್ಪರ್ಧೆಯು ಮಠಾಧೀಶರಲ್ಲಿಯೂ ಹಾಗೂ ಅವರ ಅನುಯಾಯಿಗಳಲ್ಲಿಯೂ ನುಸುಳದಿರಲೆಂದು ನಾವು ಹೇಳಬಯಸುತ್ತೇವೆ. ನಮ್ಮಲ್ಲಿ ಇದ್ದುದೆಲ್ಲವೂ ಒಳ್ಳೆಯದೇ ಎಂಬ ಈ ಮೇಲುಮುಸುಕನ್ನು ಹಾಕಿಕೊಂಡು ಕೂಡ್ರುವ ಕಾಲ ಈಗ ಬಹುದೂರ ಹೋಗಿದೆ. ನಾವು ನಮ್ಮನ್ನು ನಿರ್ದಾಕ್ಷಿಣ್ಯವಾಗಿ ಕಂಡುಕೊಂಡು ಲೋಪದೋಷಗಳನ್ನು ತಿದ್ದಿಕೊಳ್ಳದಿದ್ದರೆ ಮುಂದೇನು?

ಈ ಪ್ರಯತ್ನಕ್ಕೆ ಅತಿ ಮುಖ್ಯ ಸಾಧನವೆಂದರೆ ಸಕಲ ಪರಂಪರೆಯ ಮಠಗಳ ಅಧೀಶ್ವರರೂ ತಮ್ಮ ಅಂತಸ್ತುಗಳ ಹಾಗೂ ಗೌರವಗಳನ್ನೇ ನೆಚ್ಚಿ ಕೂಡ್ರದೆ ಒಂದೆಡೆಗೆ

ಬಂದು ಕಲೆಯಬೇಕು. ಪರಸ್ಪರ ಬಿಚ್ಚುಮನಸ್ಸಿನಿಂದ ವಿಚಾರಮಂಥನ ಮಾಡಿ ಇಂದಿನ ವಿಷಮ ಪರಿಸ್ಥಿತಿಗೆ ಪರಿಹಾರ ಕಂಡುಹಿಡಿಯಬೇಕು."

ಹೀಗೆಯೇ ಮುಂದರಿಸಿದ್ದಾರೆ. ಈ ಭಾಷಣ ಅತ್ಯಂತ ಪರಿಣಾಮಕಾರಿಯಾಗಿದೆ. ಪ್ರತಿಯೊಬ್ಬರೂ ಓದಿ ಮನನ ಮಾಡಿಕೊಂಡು ಕಾರ್ಯಪ್ರವೃತ್ತರಾಗಬೇಕು.

## ಪರಂಜ್ಯೋತಿ

ಪರಂಜ್ಯೋತಿ ಮಾಸಿಕಪತ್ರವು ಶ್ರೀ ಜಗದ್ಗುರುಗಳಿಗೆ ಅತ್ಯಂತ ಪ್ರೀತಿಯ ಶಿಶುವಾಗಿರುತ್ತದೆ. ಈಗಾಗಲೇ ಮೂರು ವರ್ಷ ತೃಪ್ತಿಕರವಾಗಿ ನಡೆದಿದೆ. ಯಾರೇ ದರ್ಶನಕ್ಕೆ ಬರಲಿ 'ಪರಂಜ್ಯೋತಿ' ಯ ಬಗ್ಗೆ ಜಗದ್ಗುರುಗಳು ನಾಲ್ಕು ಮಾತುಗಳನ್ನಾಡದೇ ಬಿಡುವುದಿಲ್ಲ. ಅದರ ಉನ್ನತಿಯ ಬಗ್ಗೆ ಅವರಿಗೆ ಅಪಾರ ಶ್ರದ್ಧೆ ಇದೆ. ಅದಕ್ಕಾಗಿ ಮಠದಲ್ಲಿ ಸುಸಜ್ಜಿತ ಪ್ರೆಸ್ಸನ್ನು ತಮ್ಮ ನೇತೃತ್ವದಲ್ಲಿ ನಡೆಸುತ್ತಲಿದ್ದಾರೆ. ಒಂದು ಸಂಸ್ಥಾನ ಮಠಕ್ಕೆ ಒಂದು ಪತ್ರಿಕೆ, ಅಚ್ಚಿನ ವ್ಯವಸ್ಥೆ ಇರಲೇಬೇಕು. ಇದು ಮಠಗಳ ಕರ್ತವ್ಯ ಕರ್ಮದಲ್ಲಿ ಒಂದಾಗಿರುತ್ತದೆ.

## ಸರಳಸ್ವಭಾವದ ಜಗದ್ಗುರುಗಳು

ಜಗದ್ಗುರು ಶ್ರೀ ಗಂಗಾಧರ ಮಹಾಸ್ವಾಮಿಗಳವರು ಬಹಳ ಸರಳಸ್ವಭಾವದವರೆಂಬುವುದು ಅವರ ನಿತ್ಯದ ನಡೆನುಡಿಗಳಿಂದ ಚನ್ನಾಗಿ ವ್ಯಕ್ತವಾಗುತ್ತದೆ. ಜಾತಿ, ಮತ, ಪಂಥಗಳ ತೊಡಕಿಲ್ಲದೆ ಎಲ್ಲಾ ಜಾತಿಯ ಜನಗಳನ್ನು ಬಹಳ ಆದರದಿಂದ ಬರ ಮಾಡಿಕೊಳ್ಳುತ್ತಾರೆ. ಅವರ ಕೂಡ ಪ್ರೇಮಭಾವನೆಯಿಂದ ನಡೆದುಕೊಳ್ಳುವುದರಿಂದ ಎಲ್ಲರೂ ತಮ್ಮ ತಮ್ಮ ವಿಶೇಷ ಕಾರ್ಯಗಳಲ್ಲಿ ಆಮಂತ್ರಣ ಕೊಡುತ್ತಾರೆ. ಹರ್ಷದಿಂದ ಸ್ವೀಕರಿಸಿ ಆಶೀರ್ವದಿಸಿ ದಯಮಾಡಿಸುತ್ತಾರೆ. ಇದೊಂದು ಇವರಲ್ಲಿರುವ ಶ್ರೇಷ್ಠ ಗುಣ. ಮೂರು ಸಾವಿರಮಠದಲ್ಲಿ—ಶ್ರಾವಣಮಾಸದಲ್ಲಿ ಬೇರೆ ಬೇರೆ ವರ್ಗದ ಜನಗಳಿಗೆ ಭೋಜನ ಸಮಾರಂಭ ೧೦–೧೨ ಸಾವಿರ ರೂಪಾಯಿಗಳ ಖರ್ಚಿನಿಂದ ಪ್ರತಿವರ್ಷ ನಡೆಯುತ್ತದೆ. ಸ್ವತಃ ಜಗದ್ಗುರುಗಳೇ ವ್ಯವಸ್ಥೆಯ ಮೇಲ್ವಿಚಾರಣೆ ಮಾಡುತ್ತಲಿರುತ್ತಾರೆ.

ಮಠದ ಆದಾಯ ವೆಚ್ಚಗಳಲ್ಲಿ ಅವ್ಯವಸ್ಥೆ ಆಗದಂತೆ ನೋಡಿಕೊಂಡು ಹೋಗುತ್ತಾರೆ. ಘಟಪ್ರಭೆಯಲ್ಲಿಯ ಔಷಧಾಲಯವನ್ನು ತೃಪ್ತಿಕರವಾಗಿ ನಡೆಯಿಸಿಕೊಂಡು ಬಂದಿದ್ದಾರೆ. ಹೀಗೆಯೇ ಅವರು ಇನ್ನೂ ಅನೇಕ ಕಾರ್ಯ ಮಾಡುತ್ತಲಿದ್ದಾರೆ—ಹೆಣ್ಣುಮಕ್ಕಳ ಹೈಸ್ಕೂಲ್ ಕಾಲೇಜ ಮೊದಲಾದ ಅನೇಕ ಸಂಸ್ಥೆಗಳನ್ನು ತಮ್ಮ ನೇತೃತ್ವದಲ್ಲಿ ನಡೆಸುತ್ತಲಿದ್ದಾರೆ.

ಶ್ರೀ ಗಂಗಾಧರ ಜಗದ್ಗುರುಗಳ ವಯಸ್ಸು – ಸುಮಾರು ೪೧ ಇರಬಹುದು. ಈ ಚಿಕ್ಕ ವಯಸ್ಸಿನಲ್ಲಿಯೇ ಇವರು ಬಹಳ ದೊಡ್ಡ ದೊಡ್ಡ ಕಾರ್ಯಗಳಲ್ಲಿ ಪ್ರವೃತ್ತರಾಗಿದ್ದಾರೆ. ಇನ್ನೂ ಅನೇಕ ವರ್ಷಗಳವರೆಗೆ ಕಾರ್ಯ ಮಾಡಲಿಕ್ಕೆ ಅವಕಾಶವಿರುತ್ತದೆ.

ಇದರಿಂದ – ವೀರಶೈವ ಸಮಾಜದ – ಮತ್ತು ಕರ್ಣಾಟಕದ, ಅನೇಕ ಕಾರ್ಯಗಳಾಗುತ್ತವೆಂಬುವ ವಿಶ್ವಾಸ ನನಗಿದೆ. ಶ್ರೀ ಜಗದ್ಗುರು ಗಂಗಾಧರ ಮಹಾಸ್ವಾಮಿಗಳು ಹೀಗೆಯೇ ಕಾರ್ಯ ಮಾಡುತ್ತ ಸಮಾಜದಲ್ಲಿ ಅಪ್ಪಟ ಅಪರಂಜಿಯಾಗಿ ಕೀರ್ತಿಶಾಲಿಗಳಾಗಬೇಕೆಂಬುದೇ ನನ್ನ ಮನೀಷೆ. ಒಟ್ಟಿನಲ್ಲಿ ಪೂಜ್ಯ ಜಗದ್ಗುರುಗಳು ಅಮಿತೋತ್ಸಾಹಿಗಳೂ, ಕರ್ಮಯೋಗಿಗಳೂ ಜ್ಞಾನಯೋಗಿಗಳೂ, ಭಾವೈಕ್ಯತೆಯುಳ್ಳವರೂ ಹಾಗೂ ಸರಳ ಸ್ವಭಾವದವರೂ ಆಗಿರುವದರಿಂದ; ಈ ಪಂಚ ಮಹಾಶಕ್ತಿಗಳ ಪುಣ್ಯಪುಂಜವಾಗಿದ್ದಾರೆ. ಲೋಕ ವಿಶ್ರುತರೂ, ಸರ್ವಜನಾದರಣೀಯರೂ ಆಗಿದ್ದಾರೆ. ಭಗವಂತನು ಈ ಮಹಾಮಹಿಮಾಶಾಲಿಗಳಿಗೆ ಇನ್ನೂ ಅನೇಕ ಸುಸಂದರ್ಭಗಳನ್ನು ಒದಗಿಸಿ ಇವರ ಆತ್ಮಪ್ರಭೆ ಇನ್ನೂ ವಿಕಸಿಸುವಂತೆ ಕರುಣಿಸಲೆಂದು ಹಾರೈಸಿ; ಈ ಲೇಖನ ಬರೆದು ಕೊಡುವ ಸುಸಂದರ್ಭ ಒದಗಿಸಿಕೊಟ್ಟ ಮಹನೀಯರಿಗೆ ನನ್ನ ಅನಂತ ಧನ್ಯವಾದಗಳನ್ನರ್ಪಿಸುತ್ತೇನೆ. □

# ಜಗದ್ಗುರುಗಳ ವಿಶ್ವಸಂದೇಶ

ಸದಾಶಿವ ಒಡೆಯರ

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು. ವೀರಶೈವ ಧರ್ಮ ಪೀಠಗಳಲ್ಲೊಂದಾದ ಹುಬ್ಬಳ್ಳಿಯ ಮೂರುಸಾವಿರ ಮಠದ ಶೂನ್ಯಸಿಂಹಾಸನವನ್ನು ಆರೋಹಣ ಮಾಡಿ ಇದೀಗ ಹನ್ನೆರಡು ವರುಷಗಳು ಮುಗಿಯುತ್ತಲಿವೆ.

ಈ ಕಾಲಾವಧಿಯಲ್ಲಿ ಮೂರುಸಾವಿರ ಮಠಕ್ಕೆ ಶ್ರೀಗಳು ವಿಶ್ವವ್ಯಾಪಕವಾದ ಶ್ರೇಯಸ್ಸನ್ನು ತಂದುಕೊಟ್ಟಿದ್ದಾರೆ. ವೀರಶೈವ ಧರ್ಮ ಹಾಗೂ ಸಮಗ್ರ ಭಾರತ ಅಭಿಮಾನದಿಂದ ಬೀಗುವಂತೆ ಜಗದ್ಗುರುಗಳು ಕಾರ್ಯವೆಸಗಿದ್ದಾರೆ. ಅವರು ಎಲ್ಲೆಡೆಯಲ್ಲೂ ಬೆಳಕಾಗಿ, ಮಿಂಚಾಗಿ ಸುಳಿದು ಕತ್ತಲೆ ಕಳೆದಿದ್ದಾರೆ.

ಕವಿಗಳಾಗಿ, ದಾರ್ಶನಿಕರಾಗಿ, ಸಮಾಜ ಸುಧಾರಕರಾಗಿ, ಶಿಕ್ಷಣ ಪ್ರಸಾರಕರಾಗಿ, ಗುರುವಾಗಿ, ಜಂಗಮರಾಗಿ ಲೌಕಿಕ ಬದುಕಿನಲ್ಲಿ ತೊಳಲುತ್ತಿರುವವರನ್ನು ಅನಂತ ಮುಖದಿಂದ ಎತ್ತುವ ಕಾರ್ಯದಲ್ಲಿ ನಿರತರಾಗಿರುವ ಜಗದ್ಗುರುಗಳು ಲೋಕ-ಮಾನ್ಯರು.

ಜಗದ್ಗುರುಗಳದು ಬಹುಸುಂದರವಾದ, ಆಕರ್ಷಕವಾದ ವ್ಯಕ್ತಿತ್ವ. ತಿಳಿಗುಲಾಬಿ ಬಣ್ಣದ ಕಾಷಾಯ ವಸ್ತ್ರಧರಿಸಿದ, 'ಕೂಡಲ ಸಂಗನ ಶರಣರ ನೊಸಲಿಗೆ ವಿಭೂತಿಯೇ ಶೃಂಗಾರ' ವೆನ್ನುವುದಕ್ಕೆ ಸಾಕ್ಷಿಯಾಗಿ ಸದಾ ಜಗದ್ಗುರುಗಳ ಲಲಾಟ ಶ್ರೀ ವಿಭೂತಿ-ಯಿಂದ ಶೃಂಗಾರಗೊಂಡಿರುವದು.

ಶ್ರೀಗಳು ಅಸಂಖ್ಯಾತ ಕೃತಿಗಳನ್ನು ರಚಿಸಿ ಜನಮನದ ಕಾಳಿಕೆಯನ್ನು ಹೋಗಲಾಡಿಸಲು ಪ್ರಯತ್ನಿಸಿದ್ದಾರೆ. ಅವರ ಕಾವ್ಯಗಳು ಜೀವ – ಪರಮಾತ್ಮರಲ್ಲಿ ಸು–ಸಂಬಂಧ ಬೆಳೆಸುವ ಕಾವ್ಯಗಳಾಗಿವೆ. ಭಕ್ತ ಭಗವಂತನಲ್ಲಿ ಬೇರಿಲ್ಲದಿಪ್ಪಂತೆ ಬೆರೆಯುವುದೇ ಅವರ ಕಾವ್ಯದ ಪರಮೋಚ್ಚ ಸಾಧನೆಯಾಗಿದೆ. ಶ್ರೀಗಳ 'ಪೂಮಾಲೆ' 'ಪಥಿಕ' ಕೃತಿಗಳಲ್ಲಿ ಬೇಕಾದಷ್ಟು ಈ ಮಾತಿಗೆ ಸಾಕ್ಷಿ ದೊರಕುತ್ತವೆ.

"ಮುಸುಕಿರುವ ಅಜ್ಞಾನದ ಭ್ರಮೆಯನ್ನು ದೂಡಿದೊಡೆ
ಶಿವಯೋಗದೊಳಗಿರುವ ಶಿವತೇಜ, ಕಾಣುವುದು
ಹೃದಯದೊಳು ಶಿವಜ್ಞಾನ ಶಿವಭಾವ ಬಲಿಸಿದೊಡೆ
ಶಿವಯೋಗ ಮಂದಿರವೆ ಹೃದಯ ತಾನಾಗುವುದೈ"

ಶ್ರೀಗಳವರಕಾವ್ಯ ಗಂಗಾಜಲದ ಸಲಿಲದಂತೆ ಪಾವನ, ಸಹಜ ಚೇತೋಹಾರಿಯಾಗಿದೆ.

ಬಹಳ ಹಿಂದೆಯೇ ತಮ್ಮ ಆರಾಧ್ಯ ಗುರುದೇವನಲ್ಲಿ ಶ್ರೀಗಳು ಮೊರೆಹೋಗಿ ಆರ್ತರಾಗಿ ನುಡಿದ ಈ ನುಡಿ ಇಂದು ಶ್ರೀಗಳ ಜೀವನದಲ್ಲಿ ಸತ್ಯವಾಗಿರುವುದನ್ನು ಮನಗಂಡಿದ್ದೇವೆ. ಅಂದು ನುಡಿದ ನುಡಿ ಹೀಗಿದೆ:

"ವನದೊಳಗೆ ಕುಳಿತಿರುವ ಅಂತರತಮ ಗುರುದೇವ
ವಿಜಯೋತ್ಸವವನುಗೈವ ಶಕ್ತಿಯನು ನೀಡೈ
ಬಾಗುವೆನು ಭಕುತಿಯಿಂ ಬೇಡುವೆನು ನಿನ್ನನೇ
ವಿಜಯ ರಾಜ್ಯದಿ ನಿತ್ಯ ಕುಳ್ಳಿರಿಸು ಓ ತಂದೆ.!"

ಇಂದು ನಮ್ಮ ಜಗದ್ಗುರುಗಳು ವಿಜಯ ರಾಜ್ಯದಲ್ಲಿಯೇ ಕುಳಿತಿದ್ದಾರೆ. ವೀರಶೈವ, ಸಿದ್ಧಾಂತವನ್ನು, ತತ್ವಶಾಸ್ತ್ರವನ್ನು, ಶರಣರ ಸಂದೇಶವನ್ನು, ಆಚಾರ್ಯರ ಭವ್ಯ ಪರಂಪರೆಯನ್ನು ಜಾಗತಿಕ ಧರ್ಮ ಸಮ್ಮೇಳನದ ದಿವ್ಯ ವೇದಿಕೆಯಿಂದ ಲೋಕಕ್ಕೆ ಸಾರಿ ಸಾರಿ ಹೇಳಿದ್ದಾರೆ. ಇದರಿಂದಾಗಿ ಜಗದ್ಗುರುಗಳ ಬದುಕು ಒಂದು ಸಾರ್ಥಕ ಬದುಕೆಂದು ಇಂದಿನ ಇತಿಹಾಸಕಾರ ಬರೆಯಲೇಬೇಕಾಗುತ್ತದೆ. ಜಗದ್ಗುರುಗಳ ವಿಶ್ವ ಪರ್ಯಟನ ಅದೊಂದು – ಸಮಸ್ತ ಭಾರತೀಯರಿಗೇನೇ ಅಭಿಮಾನಪಡುವ ಘಟನೆ. ಒಂದು ಪೀಠದ ಜಗದ್ಗುರು ಜಾಗತಿಕ ಧರ್ಮ ಸಮ್ಮೇಳನದಲ್ಲಿ ಭಾಗವಹಿಸಿ, ಆ ಸಮ್ಮೇಳನದ ಗೌರವವನ್ನು ಪಡೆದು, ಬಹಿರಂಗ ಅಧಿವೇಶನದಲ್ಲಿ ಭಾರತೀಯ ಸಂಸ್ಕೃತಿಯನ್ನು, ವಿಶೇಷವಾಗಿ ವೀರಶೈವ ಸಂಸ್ಕೃತಿಯನ್ನು ಅಪ್ಪಣೆ ಕೊಡಿಸಿದುದು ಭಾರತದ ಸಾವಿರಾರು ವರುಷದ ಇತಿಹಾಸದಲ್ಲಿಯೇ ಇದು ಪ್ರ – ಪ್ರಥಮ ಘಟನೆ. ಅಂದಿನ ಸಮ್ಮೇಳನದಲ್ಲಿದ್ದ ಜಗತ್ತಿನ ಹಲವು ಧರ್ಮದ ಮುಂದಾಳುಗಳು ಈ ಕಾಷಾಂಬರಧಾರಿಯನ್ನು, ತ್ರಿಪುಂಢ್ರ ಧರಿಸಿದ ತೇಜಃಪುಂಜ ವ್ಯಕ್ತಿತ್ವವುಳ್ಳ ನಮ್ಮ ಜಗದ್ಗುರುಗಳನ್ನು ತದೇಕಚಿತ್ತರಾಗಿ ನೋಡಿರಬೇಕು. ಶ್ರೀಗಳ ಈ ಯಾತ್ರೆ ಭಾರತಕ್ಕೇನೇ ಬಹು ದೊಡ್ಡ ಕೀರ್ತಿಯನ್ನು ತಂದಿತು.

ಶ್ರೀಗಳದು ಬಹು ವಿಶಾಲವಾದ ಮನಸ್ಸು. ಸಕಲ ಧರ್ಮಗಳ ಸಮನ್ವಯ ಅಗತ್ಯವೆಂದು ಹೇಳುವ ಅವರು 'ಸಕಲ ಜೀವಾತ್ಮರ ಲೇಸನೇ ಬಯಸುವ' ತತ್ವದವರು. ಧರ್ಮ – ಧರ್ಮಗಳಲ್ಲಿ ಒಳ್ಳೆಯ ಸಂಬಂಧವನ್ನು ಉಂಟುಮಾಡಲೋಸುಗ ಶ್ರೀಗಳು ಬಹುಶ್ರಮಿಸುತ್ತಿದ್ದಾರೆ. ಅವರ ಸಾಹಿತ್ಯವೂ ಅದನ್ನೇ ಸಾರುತ್ತದೆ:

ಧರ್ಮದ ಜೀವಾಳ ದಯೆ. ವಿಶ್ವಮೈತ್ರಿಯ ಸೂತ್ರ ಅಹಿಂಸೆ, ಕರುಣವೃತ್ತಿ ಇವೆಲ್ಲ ಜಗದ್ಗುರುಗಳ ಸಾಹಿತ್ಯದ ಅಣಿಮುತ್ತುಗಳು. ಶ್ರೀಗಳ ಕಾವ್ಯವಾಗಲಿ, ಆಶೀರ್ವಾಣಿಯಾಗಲಿ ಸದಾ ಬೋಧಿಸುತ್ತಿರುವುದು ಒಂದನ್ನೆ – ಅದು ವಿಶ್ವಕೌಟುಂಬಿಕ ಭಾವನೆಯನ್ನು, ಜೀವನವನ್ನು. ಶ್ರೀಗಳ ಸಾಹಿತ್ಯ ಜೀವನದ ಪುನರುತ್ಥಾನದ ಶಕ್ತಿಯಾಗಿದೆ, ಕತ್ತಲೆಯಲ್ಲಿ ದಾರಿಗಾಣದೆ ಪರಿತಪಿಸುವವರಿಗೆ ದಾರಿದೀಪವಾಗಿದೆ.

ಹಲವಾರು ಭಾಷೆಗಳನ್ನು ಕರಗತ ಮಾಡಿಕೊಂಡಿರುವ ಶ್ರೀಗಳು ಕನ್ನಡ ಭಾಷೆಯ ಬಹುದೊಡ್ಡ ಸಂಪತ್ತಾಗಿದ್ದಾರೆ. ಶ್ರೀಗಳ ಸಾಹಿತ್ಯದಲ್ಲಿ ಕಂಡು ಬರುವ ವಿಷಯ ವೈವಿಧ್ಯ, ಅದರ ಆಳ, ಆಶ್ಚರ್ಯಕರವಾದ ವ್ಯಾಪ್ತಿಯನ್ನು ಕಂಡು ನಾವು ನಿಬ್ಬೆರಗುಗೊಳ್ಳುತ್ತೇವೆ. ಆಧ್ಯಾತ್ಮದಿಂದ ಹಿಡಿದು ಲಲಿತಕಲೆಗಳವರೆಗೂ, ವಿಜ್ಞಾನದಿಂದ ಹಿಡಿದು ಮನೋವಿಜ್ಞಾನದವರೆಗೂ ಶ್ರೀಗಳು ಬರೆದಿದ್ದಾರೆ. ಚಿಂತನಸ್ವರೂಪವಾದ ಶ್ರೀಗಳ ಸಾಹಿತ್ಯದ ಮುಖ್ಯ ದಾರಿ ಲೋಕ ಕಲ್ಯಾಣವೇ ಆಗಿದೆ.

ಶ್ರೀಗಳು ಇಂದು ಮೂರುಸಾವಿರ ಮಠದಲ್ಲಿ ಕೈಕೊಂಡಿರುವ ಕಾರ್ಯಗಳು ಅಭೂತಪೂರ್ವವಾದವುಗಳು. ಅವರದು ವಿಶ್ವಚೇತನ ಶಕ್ತಿ. ಅಂತೆಯೇ ಇಂಥ ಮಹಾತ್ಕಾರ್ಯಗಳು ಶ್ರೀಗಳವರಿಗೆ ಸುಲಭ ಸಾಧ್ಯವಾಗಿ ಪರಿಣಮಿಸಿವೆ.

ಶ್ರೀ ಬಸವೇಶ್ವರರು ಹಾಗೂ ಪ್ರಮಥರು ಕಂಡ ವಿಶ್ವ ಕಲ್ಯಾಣಕರವಾದ ಸಮಾಜವನ್ನು ಕಟ್ಟುವ ಕಾರ್ಯದಲ್ಲಿ ನಮ್ಮ ಶ್ರೀಗಳಿಗೆ ಯಶಸ್ಸು ಸಿಗಲೆಂದು ಹಾರೈಸುತ್ತೇನೆ. ಅವರ ಕೃತಿಗಳು ಅನ್ಯ ಭಾಷೆಗಳಿಗೂ ಅನುವಾದಗೊಂಡು ಅವರ ಸಂದೇಶ ಸಕಲ ಧರ್ಮೀಯರಿಗೂ ಭಾಷೆಯವರಿಗೂ ಲಭ್ಯವಾಗಲೆಂದು ಬಯಸುತ್ತೇನೆ.

ಶತವಸಂತಗಳು ಶ್ರೀಗಳ ಸನ್ನಿಧಿಗೆ ಸಾಗಿ ಬಂದು, ಲೋಕಕಲ್ಯಾಣ ಕಾರ್ಯಗಳನ್ನು ಅವರಿಂದ ಹೆಚ್ಚೆಚ್ಚು ಸಾಂಗಗೊಳಿಸುವಂತಾಗಲೆಂದು ಪ್ರಾರ್ಥಿಸಿ, ಈ ನುಡಿಸೇವೆ ಮುಗಿಸುತ್ತೇನೆ. □

# ದಿಲ್ಲಿಯ ವಿಶ್ವಶಾಂತಿ ಪರಿಷತ್ತಿನಲ್ಲಿ ಜಗದ್ಗುರುಗಳು

ಶ್ರೀ. ನಿ. ಪ್ರ. ಸಿದ್ಧಪ್ರಭುಸ್ವಾಮಿಗಳು, ಚಿಂಚಣಿ

ಶ್ರೀ ಜಗದ್ಗುರುಗಳ ವ್ಯಕ್ತಿವೈಶಿಷ್ಟ್ಯವು ಅತಿ ಶ್ರೇಷ್ಠವೂ ವೈವಿಧ್ಯವೂ ಆಗಿದೆ. ಎಷ್ಟು ಮುಖವಾಗಿ ವರ್ಣಿಸಿದರೂ ತೀರದಷ್ಟಿದೆ. ಅವರ ಬಾಳು ಬಂಗಾರವಾಗಿದೆ. ಪೂಜ್ಯರು ನಮ್ಮೆಲ್ಲರ ಮಹಾಭಾಗ್ಯವಾಗಿದ್ದಾರೆ. ಯಶೋಕಾಯರಾಗಿದ್ದಾರೆ. ಎತ್ತ-ನೋಡಿದತ್ತ ಕೀರ್ತಿಗೊಂಚಲಗಳೇ ಮೂರ್ತಿವಂತವಾಗಿ ಅವರನ್ನು ಸುತ್ತುವರಿದಿವೆ. ಶ್ರೀ ಶಿವಯೋಗಮಂದಿರದಲ್ಲಿ ಚಿಕ್ಕವರಿರುವಾಗಲೇ ಅವರನ್ನು ನಾವು ಬಹು ವಿಧವಾಗಿ ಬಲ್ಲೆವು. ಅವರ ಜೀವನವು ಹಸನಾಗಿದೆ. ಹೃದಯವು ಪರಿಶುದ್ಧವಾಗಿದೆ. ಅವರಲ್ಲಿ ಸದ್ಗುಣ ಕಿರಣಗಳನ್ನು ಕಂಡಿದ್ದೇವೆ. ಅವರಲ್ಲಿ ಹುದುಗಿಕೊಂಡಿದ್ದ ಜೀವನದ ಮೌಲ್ಯಗಳು ಇದೀಗ ಹೊರಬರಹತ್ತಿವೆ.

## ಲೋಕಕಲ್ಯಾಣದ ಗುರಿ

ಶ್ರೀ ಜಗದ್ಗುರುಗಳು ಲೋಕ ಕಲ್ಯಾಣದ ಗುರಿಯನ್ನಿಟ್ಟುಕೊಂಡು ಸಾಗಿದ್ದಾರೆ. ವಿಶ್ವೋದ್ಧಾರದ ಅರಿವು ಅವರಲ್ಲಿ ತುಂಬಿ ತುಳುಕುತ್ತಿದೆ. ವಿಶ್ವಬಾಂಧವ್ಯವನ್ನು ಬೆಳೆಯಿಸಬೇಕೆಂಬ ಅವರ ದಿವ್ಯಭಾವನೆಯು ಅವರನ್ನು ಎತ್ತಿ ಹಿಡಿದಿದೆ. ಅವರ ಪರಿಶುದ್ಧ ಅಂತಃಕರಣದ ದೀಪ್ತಿಯು ದಶದಿಕ್ಕುಗಳಲ್ಲಿ ಹಬ್ಬಹತ್ತಿರುವದು ಶುಭೋ-ದಯವೆಂದು ತಿಳಿಯಹತ್ತಿದೆ. ಒಟ್ಟಿನಲ್ಲಿ ಪರಶಿವನ ಪರಾವತಾರವೇ ಈ ರೀತಿಯಾಗಿ ಸಾಕಾರವಾಗಿ ಬಂದಿದೆ ಎಂದು ಹೇಳಲು ಯಾವ ಅಭ್ಯಂತರವಿಲ್ಲ. ಮೂರುಸಾವಿರಮಠದ ಶ್ರೀ ಜಗದ್ಗುರು ಪೀಠವನ್ನಲಂಕರಿಸಿದ ನಂತರವಂತೂ ಜಗದ್ಗುರುಗಳ ಸಕ್ರಿಯ ಯಶೋ ದುಂದುಭಿಯು ನಾಡತುಂಬ ಮೊಳಗಹತ್ತಿತು. ಗಗನಚುಂಬಿಯಾಗಿ ಅನಂತ ಶೈಕ್ಷಣಿಕ ಜ್ಞಾನ ಪ್ರಸಾರಕ, ಸಾಂಸ್ಕೃತಿಕ ಚಟುವಟಿಕೆಗಳ ಮಂದಿರಗಳು ಮೂರುಸಾವಿರಮಠದ ವಿಸ್ತೀರ್ಣ ಪ್ರಾಂಗಣದಲ್ಲಿ ಸಾಲುಸಾಲಾಗಿ ಮುಖಮಾಡಿನಿಂತಿವೆ. ಭವ್ಯಾಕಾರದ ಆರಂತಸ್ತಿನ ಮಹಾದ್ವಾರವು ತನ್ನ ಉತ್ತುಂಗ ಶಿಖರಾಗ್ರಭಾಗದಿಂದ ಇಡೀ ಹುಬ್ಬಳ್ಳಿ ನಗರವನ್ನೇ ನಿರೀಕ್ಷಿಸುವಂತೆ ತೋರುತ್ತಿದೆ.

ಹುಬ್ಬಳ್ಳಿಯ ಸಕಲ ಸಮಾಜ ಬಾಂಧವರು ಮತ್ತು ಹೊರನಾಡಿನವರು ಶ್ರೀ ಜಗದ್ಗುರುಗಳವರ ಅಪಾರ ಕರ್ತೃತ್ವ ಶಕ್ತಿಯನ್ನು ಕಂಡು ಧನ ಕನಕ ವಸ್ತು ವಾಹನಗಳನ್ನರ್ಪಿಸಿ ಸದ್ಭಕ್ತರ ಮಣಿಮಾಲಿಕೆಯಲ್ಲಿ ವಿರಾಜಮಾನರಾಗಿದ್ದಾರೆಂದು ಹೇಳಲು ಆನಂದವೆನಿಸುತ್ತಿದೆ.

## ಶ್ರೀ ರಂಗನಾಥ ದಿವಾಕರ ಅವರಿಂದ ಆಮಂತ್ರಣ

ಶ್ರೀ ಜಗದ್ಗುರುಗಳು ಈ ವರೆಗೂ ಮಾಡಿದ ಮತ್ತು ಮಾಡುತ್ತಿರುವ ನಿಸ್ವಾರ್ಥ ನಿರಾಡಂಬರ ಕಾಯಕ ಧರ್ಮ ತತ್ವ ರತ್ನಗಳ ದಿವ್ಯ ಪ್ರಭೆಯ ಪ್ರಭಾವಳಿಯಿಂದ ಆಪ್ಯಾಯಮಾನರಾದ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ಸುಪ್ರಸಿದ್ಧ ಶ್ರೀಮಾನ್ ಆರ್. ಆರ್. ದಿವಾಕರರು " ವಿದ್ವಾನೇವ ವಿಜಾನಾತಿ ವಿದ್ವಜ್ಜನ ಪರಿಶ್ರಮಮ್ । ನಹಿ ವಂಧ್ಯಾವಿಜಾನಾತಿ ಗುರ್ವೀಂ ಪ್ರಸೂತ ವೇದನಾಂ " ಎಂಬಂತೆ ಶ್ರೀ ಜಗದ್ಗುರುಗಳಲ್ಲಿಯ ಮಾನವ ಪ್ರಪಂಚವನ್ನು ಉದ್ಧಾರ ಗೈಯುವ ದಿವ್ಯ ಕ್ರಿಯಾಸಿದ್ಧಿಯನ್ನು ಬಹಿರಂಗಪಡಿಸಲೋಸುಗ ದಿಲ್ಲಿಯಲ್ಲಿ ದಿನಾಂಕ ೧೨-೧-೬೮ ರಂದು ತಾವು ಜರುಗಿಸಲಿರುವ " ವಿಶ್ವಶಾಂತಿ ಪರಿಷತ್ತಿ"ನಲ್ಲಿ ಭಾಗವಹಿಸಿ ವೀರಶೈವ ಧರ್ಮಪರ ಆಶೀರ್ವಚನ ನೀಡಬೇಕೆಂದು ಶ್ರೀ ಜಗದ್ಗುರುಗಳಲ್ಲಿಗೆ ಬಂದು ಶಿಷ್ಟಾಚಾರಪೂರ್ವಕ ಬಿನ್ನವಿಸಿಕೊಂಡರು. ಆಮಂತ್ರಣವನ್ನು ಸ್ವೀಕರಿಸಬೇಕೆಂದು ವಿಜ್ಞಾಪನೆ ಮಾಡಿಕೊಂಡರು. ಮತ್ತು ಪರಿಷತ್ತಿನ ಗೊತ್ತುಗುರಿಗಳನ್ನು ನಿವೇದಿಸಿದರು.

ಶ್ರೀ ಜಗದ್ಗುರುಗಳು ಸನ್ಮಾನ್ಯ ಶ್ರೀ ದಿವಾಕರರ ಆಮಂತ್ರಣವನ್ನು ಹಾರ್ದಿಕವಾಗಿ ಒಪ್ಪಿಕೊಂಡು "ಪ್ರಕ್ಷುಬ್ಧ ವಿಶ್ವವು ಇಂದು ಶಾಂತಿ ಕಡಲಿನಲ್ಲಿ ತೇಲಬೇಕಾಗಿದೆ. " ಯತೋಧರ್ಮ ಸ್ತತೋಜಯಃ " ಎಂಬ ನುಡಿಯಂತೆ ಸರ್ವಧರ್ಮಸಮನ್ವಯದಿಂದಲೇ ಜಗತ್ತಿಗೆ ಶಾಂತಿ ದೊರಕುವದು " ಎಂದು ಮುಂತಾಗಿ ಅಪ್ಪಣೆ ಕೊಡಿಸಿ ಶ್ರೀ ದಿವಾಕರರನ್ನು ಬೀಳ್ಕೊಟ್ಟರು.

## ಶುಭವಾರ್ತೆ

ಶ್ರೀ ಜಗದ್ಗುರುಗಳು ದಿಲ್ಲಿಯ ವಿಶ್ವಶಾಂತಿ ಪರಿಷತ್ತಿಗೆ ದಯಮಾಡಿಸುತ್ತಾರೆಂಬ ಶುಭವಾರ್ತೆಯು ಆಗಲೇ ಎಲ್ಲ ಕಡೆಗೂ ಹಬ್ಬಿತು. ವೃತ್ತಪತ್ರಿಕೆಗಳ ಮುಖದಿಂದಲೂ ಪ್ರಚಾರವಾಯಿತು. ಶ್ರೀ ಜಗದ್ಗುರುಗಳ ಕ್ರಾಂತಿಪದವಿನ್ಯಾಸವು ಸಕಲರಿಗೂ ಹರ್ಷಪ್ರದವಾಯಿತು.

ಹುಬ್ಬಳ್ಳಿಯ ಐದು ಕುಟುಂಬದವರು ಒಟ್ಟು ಹದಿನಾಲ್ಕು ಜನ ಸದ್ಭಕ್ತರು ಶ್ರೀ ಜಗದ್ಗುರುಗಳ ಸಂಗಡ ದಿಲ್ಲಿಗೆ ಹೊರಡುವದಾಗಿ ಗೊತ್ತುಮಾಡಿದರು. ಲಿಂ. ಗುರುಮಹಾಂತಸ್ವಾಮಿಗಳು ಇಳಕಲ್ ಮತ್ತು ನಾವು ಸಹ ಜಗದ್ಗುರುಗಳೊಡನೆ ದಿಲ್ಲಿ ಪರಿಷತ್ತಿಗೆ ಹೋಗಬೇಕೆಂದು ನಿಶ್ಚಯಿಸಿದೆವು.

ಆಗಲೇ ಎಲ್ಲ ಕಡೆಯಿಂದಲೂ ಶ್ರೀ ಜಗದ್ಗುರುಗಳಿಗೆ ಅಭಿನಂದನಪರ ಓಲೆಗಳು ಬರಹತ್ತಿದವು. ಶ್ರೀ ಜಗದ್ಗುರುಗಳು ತಮ್ಮ ಭಾಷಣದ ಸಿದ್ಧತೆಯಲ್ಲಿ ತೊಡಗಿದರು. ವೀರಶೈವ ಧರ್ಮಗ್ರಂಥಗಳಲ್ಲಿಯ ಧರ್ಮತತ್ವ ರತ್ನಗಳ ಮಣಿಮಾಲಿಕೆಯನ್ನು ಮಾಡಿಕೊಂಡರು.

## ಪ್ರಯಾಣ

ಪ್ರಯಾಣದ ಸಿದ್ಧತೆಯನ್ನು ಪೂರ್ವಭಾವಿಯಾಗಿ ಮಾಡಿದ್ದಾಯಿತು. ಅನೇಕ ಕಡೆಗಳಿಂದ ಆಮಂತ್ರಣಗಳು ಸತ್ಕಾರಸಮಾರಂಭಗಳು ಸಂದರ್ಶನ ದಿನಾಂಕಗಳು ಮೊದಲೇ ನಿಶ್ಚಯಿಸಲ್ಪಟ್ಟವು. ಮುಂಬೈ, ದಿಲ್ಲಿ, ಕಾಶಿ. ಕಲಕತ್ತಾ, ಆಗ್ರಾ ಮುಂತಾದ ಸ್ಥಾನಗಳಿಂದ ಸರಕಾರಿ ಮತ್ತು ಸಾರ್ವಜನಿಕರಿಂದ ಹಾರ್ದಿಕ ಸ್ವಾಗತಪರ ಓಲೆಗಳು ಕೂಡಲೇ ಬಂದವು. ಅವರೆಲ್ಲರಿಗೂ ಶ್ರೀ ಜಗದ್ಗುರು ಮೂರುಸಾವಿರಮಠ ಸಂಸ್ಥಾನದಿಂದ ಆಗಮಿಸುವ ಆಶ್ವಾಸನಪರ ಆಶೀರ್ವಾದ ಪತ್ರಗಳು ಅವರವರಿಗೆ ಕಳಿಸಲಾಯಿತು.

ದಿನಾಂಕ ೧೦–೧–೬೮ ರಂದು ಶ್ರೀ ಜಗದ್ಗುರುಗಳು ಪರಿಷತ್ತಿಗೆ ಹೊರಡಲು ಅಣಿಯಾದರು. ಹುಬ್ಬಳ್ಳಿ, ಧಾರವಾಡ, ಗದಗ, ಮೊದಲಾದ ಅನೇಕ ನಗರಗಳ ಸದ್ಭಕ್ತರು ಶ್ರೀ ಜಗದ್ಗುರುಗಳನ್ನು ಬೀಳ್ಕೊಡಲು ಕೂಡಿದರು. ಹೆಣ್ಣುಮಕ್ಕಳು ಗಂಡು ಮಕ್ಕಳು ಸಣ್ಣಮಕ್ಕಳು ಅನಂತಾನಂತ ಸಕಲ ಜಾತಿಯ ಹಿರಿಯರು ಶ್ರೀ ಜಗದ್ಗುರು ಗಳಿಗೆ ಜಯವಾಗಲೆಂದು ಜಯ ಜಯಕಾರ ಮಾಡಿದರು. ಮುತ್ತೈದೆಯರು ಆರತಿ ಮಾಡಿದರು. ಸದ್ಭಕ್ತರು ಮಾಲಾರ್ಪಣೆ ಮಾಡಿದರು. ಶ್ರೀಜಗದ್ಗುರುಗಳು ಹಿತ ವಾಗಿಯೂ ಮಿತವಾಗಿಯೂ ಮಾನವೀಯತೆಯ ಬಗೆಗೆ ಆಶೀರ್ವಚನವಿತ್ತರು. ನಂತರ ಕಾರಿನಿಂದ ಬೆಳಗಾಂವ ಸಾಂಬ್ರಾ ವಿಮಾನ ನಿಲ್ದಾಣಕ್ಕೆ ದಯಮಾಡಿಸಿದರು. ಅಲ್ಲಿಯೂ ಸಕಲ ಸದ್ಭಕ್ತ ಸಮಾಜಾಭಿಮಾನಿಗಳು ಗುರುವಿರಕ್ತ ಪಟ್ಟ ಚರಮೂರ್ತಿಗಳು ಶ್ರೀ ಜಗದ್ಗುರುಗಳನ್ನು ಬೀಳ್ಕೊಡಲು ಅತ್ಯಾನಂದದಿಂದ ಆಗಮಿಸಿದ್ದರು. ಶ್ರೀಜಗದ್ಗುರು ಗಳು ಸಕಲರ ಪೂಮಾಲೆಗಳಿಂದ ಮುಚ್ಚಿಹೋದರು. ಎಲ್ಲರಿಗೂ ಆನಂದವೇ ಆನಂದ. ಮುತ್ತೈದೆಯರು ಆರತಿ ಮಾಡಿದರು. ದಿ. ೧೦–೧–೬೮, ಮುಂಜಾನೆ ೭ ಗಂಟೆಗೆ ಹೊರಡುವ ವಿಮಾನವು ಸಿದ್ಧವಾಯಿತು, ಶ್ರೀ ಜಗದ್ಗುರುಗಳು ಸಕಲ ಸದ್ಭಕ್ತರಿಗೆ ಕೃಪಾದೃಷ್ಟಿಯನ್ನು ಬೀರಿ ತಮ್ಮ ಸಂಗಡಿಗರನ್ನು ಕರೆದುಕೊಂಡು ವಿಮಾನಾರೂಢರಾ ದರು. ಸದ್ಭಕ್ತರ ಜಯ ಜಯಕಾರ ಸಂಚಾಲಿತ ವಿಮಾನ ಧ್ವನಿ ಏಕಾಕಾರಗೊಂಡ ಬಳಿಕ ತಕ್ಷಣ ವಿಮಾನವು ಆಕಾಶದಲ್ಲಿ ಹಾರುತ್ತ ಹಾರುತ್ತ ೮–೩೦ ಗಂಟೆಗೆ ಮುಂಬಯಿ ವಿಮಾನ ನಿಲ್ದಾಣಕ್ಕೆ ಹಾಯಾಗಿ ಬಂದಿತು.

## ಮುಂಬಯಿಯಲ್ಲಿ

ನಿಲ್ದಾಣದಲ್ಲಿ ಶ್ರೀ ಜಗದ್ಗುರುಗಳ ಆಗಮನದ ನಿರೀಕ್ಷಣೆ ಮಾಡುತ್ತಿದ್ದ ಮುಂ– ಬಯಿ ಕರ್ನಾಟಕ ಸಂಘದವರು, ಮುಂಬಯಿ ಬಸವ ಸಮಿತಿಯವರು, ಹುಬ್ಬಳ್ಳಿಯ

ಸಿದ್ಧೇಶ್ವರ ಕಂಪನಿಯ ಮಾಲಕರ ಬಂಧುಗಳು ಇನ್ನೂ ಅನೇಕ ಸದ್ಭಕ್ತರು ವಿಮಾನದಿಂದ ಶ್ರೀ ಜಗದ್ಗುರುಗಳು ಇಳಿಯುತ್ತಿರುವಾಗಲೇ ಜಯ ಜಯಕಾರ ಮಾಡಿದರು. ಹರ್ಷೋದ್ಗಾರ ತೆಗೆದರು. ಶ್ರೀ ಜಗದ್ಗುರುಗಳಿಗೆ ವಂದಿಸಿ ಪುಷ್ಪಮಾಲಾರ್ಪಣೆ ಮಾಡಿದರು. ಪೂರ್ವ ಸುವ್ಯವಸ್ಥಿತಗೊಳಿಸಿದ ಶಿದ್ಧೇಶ್ವರ ಕಂಪನಿಯವರ ಸದ್ಭಕ್ತ ಬಂಧುಗಳನಿವಾಸ ಬಂಗ್ಲೆಗೆ ಶ್ರೀ ಜಗದ್ಗುರುಗಳನ್ನು ಕರೆದೊಯ್ಯಲಾಯಿತು. ಅಲ್ಲಿ ಮಧ್ಯಾಹ್ನ ಪೂಜಾ-ಪ್ರಸಾದಗಳು ಮುಗಿದವು.

ಸಂಜೆಯಲ್ಲಿ ಸರದಾರ ಹಾಯಸ್ಕೂಲಿನಲ್ಲಿ ಶ್ರೀ ಜಗದ್ಗುರುಗಳ ಸತ್ಕಾರಪರ ಕಾರ್ಯಕ್ರಮಗಳು ಪ್ರಾರಂಭವಾದವು. ಅಗಣಿತ ಜನಸ್ತೋಮವು ಶ್ರೀ ಜಗದ್ಗುರು-ಗಳ ಆಶೀರ್ವಾಣಿ ಆಲಿಸಲು ಆತುರವಾಗಿತ್ತು. ಶ್ರೀ ಜಗದ್ಗುರುಗಳು ಶಿಕ್ಷಣ ವಿಷಯವಾಗಿ ಬಹು ಮಾರ್ಮಿಕ ಸಮಯೋಚಿತವಾಗಿ ಅಪ್ಪಣೆ ಕೊಡಿಸಿದ ನಂತರ ಕರ್ನಾಟಕ ಸಂಘದವರು ಸರದಾರ ಹಾಯಸ್ಕೂಲಿನ ಶಿಕ್ಷಕವೃಂದವು ಶ್ರೀ ಜಗದ್ಗುರುಗಳ ಗುಣಗಾನದೊಡನೆ ಸತ್ಕಾರಪರ ಮಾಲಾರ್ಪಣೆ ಮಾಡಿ ಧನ್ಯವಾದಗಳನ್ನರ್ಪಿಸಿದರು. ಆ ಬಳಿಕ ಶೈಕ್ಷಣಿಕ ಸಕಲ ವಿದ್ಯಾಪೀಠಗಳನ್ನು ಪೂಜ್ಯ ಜಗದ್ಗುರುಗಳು ಸಂದರ್ಶಿಸಿದರು, ಒಂದು ದಿವಸದ ವಾಸ್ತವ್ಯದ ನಂತರ ಸಕಲ ಸದ್ಭಕ್ತರಿಂದ ಬೀಳ್ಕೊಂಡು, ವಿಮಾನಾರೂಢರಾಗಿ ದಿಲ್ಲಿಗೆ ಸಕಲ ಭಕ್ತಜನ ಪರಿವಾರ ಸಹಿತವಾಗಿ ಹೊರಟರು.

## ದಿಲ್ಲಿಯಲ್ಲಿ ಸ್ವಾಗತ

ದಿಲ್ಲಿ ವಿಮಾನ ನಿಲ್ದಾಣದಲ್ಲಿ ಗಾಂಧಿ ಸ್ಮಾರಕ ನಿಧಿಯ ಸದಸ್ಯರು, ಕೇಂದ್ರ ಸಹಕಾರಿ ಮಂತ್ರಿಗಳಾದ ಶ್ರೀಮಾನ್ ಗುರುಪಾದ ಸ್ವಾಮಿಯವರ ಆಪ್ತ ಕಾರ್ಯದರ್ಶಿಯವರು, ಸುಪ್ರಸಿದ್ಧ ಜವಳಿ ವಕೀಲರ ಚಿರಂಜೀವರುಗಳು ದಿಲ್ಲಿಯ, ಕೋಟ್ಯಾಧೀಶ ಶೇಟಜಿಯವರೇ ಮೊದಲಾದ ಅನಂತ ಸದ್ಭಕ್ತರು ಒಳ್ಳೇ ಗೌರವಯುತವಾಗಿ ಶ್ರೀಜಗ-ದ್ಗುರುಗಳನ್ನು ಸ್ವಾಗತಿಸಿದರು. ಸದುವಿನಯ ಸದಾಚಾರ ಸಂಪನ್ನ ಮಂತ್ರಿ ಶ್ರೇಷ್ಠ ಶ್ರೀ ಗುರುಪಾದ ಸ್ವಾಮಿಗಳ ಭವ್ಯ ನಿವಾಸದಲ್ಲಿ ಶ್ರೀ ಜಗದ್ಗುರುಗಳ ವಾಸ್ತವ್ಯವಾ-ಯಿತು. ಮನೆಯವರೆಲ್ಲರೂ ಹರ್ಷಭರಿತರಾಗಿ ಭಯಭಕ್ತಿಯಿಂದ ಔಚಿತ್ಯಪೂರ್ಣವಾಗಿ ಜಗದ್ಗುರುಗಳು ದಿಲ್ಲಿಯಲ್ಲಿರುವ ವರೆಗೂ ಸೇವೆ ಸಲ್ಲಿಸಿದರು.

ದಿ. ೧೨-೧-೬೮ ರಂದು ದಿಲ್ಲಿ ವಿಶ್ವಶಾಂತಿ ಪರಿಷತ್ತು ಪ್ರಾರಂಭವಾಯಿತು. ಅರವತ್ತು ರಾಷ್ಟ್ರಗಳ ಪ್ರಮುಖ ಧಾರ್ಮಿಕ ಮುಖಂಡರು ಆಮಂತ್ರಿತರಾಗಿದ್ದರು. ಅವರಲ್ಲಿ ಸುಮಾರು ೧೫೦ ಜನರು ಆಗಮಿಸಿದ್ದರು. ಗಾಂಧಿ ಸ್ಮಾರಕ ನಿಧಿಯವರು ರಚಿಸಿದ ಸಭಾಮಂದಿರವು ಬಹು ರಮಣೀಯವಾಗಿತ್ತು. ಆಸನದ ವ್ಯವಸ್ಥೆಯು ಸರಿಯಾಗಿತ್ತು. ವೇಷಭೂಷಾದಿಗಳು ಅವರವರ ಧಾರ್ಮಿಕ ಸಂಸ್ಕೃತಿಯ ದ್ಯೋತಕಗಳಾಗಿದ್ದವು ಬೌದ್ಧ ಸನ್ಯಾಸಿಗಳೇ ಎದ್ದು ಕಾಣುತ್ತಿದ್ದರು. ಪೋಲಂಡ ದೇಶದ ರಾಣಿ ಸರಕಾರವೇ ಅಂದಿನ ಸಭಾಧ್ಯಕ್ಷತೆಯನ್ನು ವಹಿಸಿತ್ತು. ಪ್ರಾರ್ಥನೆಯ ನಂತರ ಮುಸಲ್ಮಾನ

ಧರ್ಮಗುರುಗಳು ಮುಸಲ್ಮಾನ ಧರ್ಮದ ಬಗ್ಗೆ ಮಾತನಾಡಿದರು. ಮತ್ತೊಬ್ಬರ ಭಾಷಣ ನಂತರ ಶ್ರೀ ಜಗದ್ಗುರುಗಳ ಭಾಷಣದ ಸರತಿ ಬಂದಿತು.

## ವಿಶ್ವಶಾಂತಿ ಸಮ್ಮೇಲನದಲ್ಲಿ ವ್ಯಾಖ್ಯಾನ

ಶ್ರೀ ಜಗದ್ಗುರುಗಳು **'ಜಾಗತಿಕ ಶಾಂತಿಕ ವೀರಶೈವ ದರ್ಶನದ ಕೊಡುಗೆ'** ಎಂಬ ವಿಷಯದ ಮೇಲೆ ಹಿಂದೀ ಭಾಷೆಯಲ್ಲಿ ಭಾಷಣ ಮಾಡಲು ಪ್ರಾರಂಭಿಸಿದರು. ಕಾವಿಲಾಂಛನಧಾರಿಗಳಾದ ಶ್ರೀ ಜಗದ್ಗುರುಗಳ ಕಡೆಗೆ ಸಕಲರ ದೃಷ್ಟಿಗಳು ಕೇಂದ್ರೀಕೃತ ವಾದವು. ಭವ್ಯ ಸಭಾಭವನವು ಕಿಕ್ಕಿರಿದು ತುಂಬಿತ್ತು. ಸೂಜಿ ಬಿದ್ದರೂ ಅದರ ಸಪ್ಪಳ ಕೇಳುವಂತಹ ಬಹುಶಾಂತ ರಮಣೀಯ ವಾತಾವರಣವು ದ್ವಿಜ ಮನೋಭಾವಗಳನ್ನು ಆವರಿಸಿತು. ಶ್ರೀ ಜಗದ್ಗುರುಗಳು ಶಾಂತಗಂಭೀರ ಮುಖಮುದ್ರೆಯುಳ್ಳವರಾಗಿ ಪ್ರಫು ಲ್ಲಿತ ದೃಷ್ಟಿಯಿಂದ ಸಭಿಕರ ಚಿತ್ತವನ್ನು ಸೆಳೆದು ಕೇಂದ್ರೀಕೃತ ಮಾಡಿಕೊಂಡು ವಿಶ್ವ ಶಾಂತಿಯ ಮೂಲಭೂತ ತತ್ತ್ವರತ್ನಗಳ ಖಣಿಯಾದ ವೀರಶೈವ ಧರ್ಮದ ದಾರ್ಶನಿಕ ಅನರ್ಘ್ಯ ಅಮೌಲ್ಯ ತತ್ವಗಳನ್ನು ಋಜುಹೃದಯ ಕವಾಟದಿಂದ ಹೊರತೆಗೆದು ವೈಖರೀ ವಾಣಿಯಿಂದ ಬಿತ್ತರಿಸಹತ್ತಿದರು. ಅವರ ಭಾಷಣದ ಮುಖ್ಯಾಂಶಗಳು ಹೀಗಿವೆ—

೧) ಕ್ರಿ.ಶ. ಪೂರ್ವದಲ್ಲಿ ನಮ್ಮ ಪೂರ್ವಜರು ವೇದಾಗಮೋಪನಿಷತ್ತುಗಳನ್ನು ರಚಿಸಿ ವರ್ಣಾಶ್ರಮ ಧರ್ಮಗಳನ್ನು ಮೊದಮೊದಲು ಸಮಾಜ ಸಂಘಟನೆಗಾಗಿ ಕಲ್ಪಿಸಿ ಕೊಂಡು ಮನುಧರ್ಮ ಶಾಸ್ತ್ರವನ್ನು ರಚಿಸಿದರು. ಇಹಪರಗಳನ್ನು ಸಾಧಿಸುವ ಮಾನವ ಕಲ್ಯಾಣದ ನಾಗರಿಕತೆಯ ಮಾರ್ಗವನ್ನು ಸಾಧಿಕೊಂಡರು.

೨) ಭಾರತೀಯ ಷಡ್‌ದರ್ಶನಗಳು ಜಗತ್‌ಪ್ರಸಿದ್ಧವಾಗಿವೆ, ಅದರಲ್ಲಿ ಮೈಡ ದರ್ಶನವು ಪ್ರಾಚೀನಕಾಲದಿಂದಲೂ ಬೆಳೆದುಬಂದಿದೆ. ಅದುವೇ ಶೈವಧರ್ಮ. ಶೈವರು ಶಿವಲಿಂಗ ಪೂಜಕರು. ಕೆಂಬೋಡಿಯಾ, ಚಂಪಾ, ಇಂಡೋನೇಶಿಯಾ ಚೀನ ಮತ್ತು ಜಪಾನ ಮೊದಲಾದ ಪೌರಾತ್ಯ ದೇಶಗಳಲ್ಲಿ ೫೫೦ ವರ್ಷಕ್ಕಿಂತಲೂ ಪೂರ್ವದ ಲ್ಲಿಯೇ ಅಸ್ತಿತ್ವದಲ್ಲಿ ಇದ್ದ ಬಗ್ಗೆ ಮತ್ತು ಮಧ್ಯ ಏಶಿಯಾ ಪರ್ವತಗಳ ಸುತ್ತಮುತ್ತ ಲಿಂಗಪೂಜೆ ಸರಾಗವಾಗಿ ನಡೆದ ಬಗ್ಗೆ ತಿಳಿದು ಬರುತ್ತದೆ. ಸಪ್ತಶೈವ ಪ್ರಭೇದಗಳಲ್ಲಿ ವೀರಶೈವವು ಕೊನೆಯದು ವರ್ಣಾಶ್ರಮಾತೀತವೆಂದು ಪರಿಷ್ಕೃತವಾಗಿದೆ.

೩) ವೀರಶೈವವು ಲಿಂಗಾಂಗ ಸಾಮರಸ್ಯಪ್ರಬೋಧಕವಾಗಿದೆ. ಸ್ಥಾವರ ಲಿಂಗ ಗಳನ್ನು ಗುಡಿಗುಂಡಾರಗಳಲ್ಲಿ ಪೂಜಿಸುವದು ಶೈವಧರ್ಮದ ಹೆಗ್ಗುರುತು. ದೇಹವನ್ನೇ ದೇಗುಲವನ್ನಾಗಿ ಮಾಡಿಕೊಂಡು ಗುರು ಕರುಣದೃಷ್ಟಿಪೂತ ಇಷ್ಟಲಿಂಗವನ್ನು ಪೂಜಿ ಸುವ ಆಧ್ಯಾತ್ಮ ಜೀವನದ ತಿರುಳು ಮೈದೋರಬೇಕು. ವಿಶ್ವಶಾಂತಿಗೆ ಅನುಭಾವ ಜೀವನವು ತಳಹದಿಯಾಗಬೇಕೆಂಬುದೇ ಇಷ್ಟಲಿಂಗಧಾರಣೆಯ ರಹಸ್ಯವು.

೪) ಬೇಕು ಬೇಡೆಂಬೆರಡು ಭವ ಬೀಜಗಳನ್ನು ಹುರಿದರೆ ವಿಶ್ವಶಾಂತಿಯಾಗು- ತ್ತದೆ. ಸ್ವಾರ್ಥಕ್ಕಾಗಿ ಯುದ್ಧಜ್ವಾಲೆಗಳು ರಾಷ್ಟ್ರ ರಾಷ್ಟ್ರಗಳಲ್ಲಿ ಭುಗಿಲೆದ್ದು ಸರ್ವ

ನಾಶಕ್ಕೆ ಕಾರಣವಾಗಿವೆ. ಆಶಾಂಕುರವನ್ನೇ ವೀರಶೈವ ಧರ್ಮದಿಂದ ಕಿತ್ತುಹಾಕಿದ್ದಾರೆ, ಬೇಕು ಬೇಡ ಅಂದರೆ ಸ್ವಾರ್ಥ-ಬೇಡವೆಂದರೆ ನಿಷ್ಕ್ರಿಯ ಈ ಎರಡನ್ನು ಬಿಟ್ಟುವ್ಯಕ್ತಿ ಪ್ರಾಪಂಚಿಕ ಸರ್ವವ್ಯವಹಾರವನ್ನು ಲಿಂಗವ್ಯವಹಾರವನ್ನಾಗಿ ಮಾಡಿಕೊಳ್ಳುತ್ತಾನೆ. ಅಹಮಹಮಿಕೆಯ ಬಡಿದಾಟವು ಇಲ್ಲದಾಗಿ ಶಾಂತಿ ಸಮಾಧಾನಗಳು ನೆಲೆಗೊಳ್ಳುವವು.

೫) ವಿಶ್ವಶಾಂತಿಗೆ ವೀರಶೈವರ ಕೊಡುಗೆಯೆಂದರೆ ಪ್ರಾಮುಖ್ಯವಾಗಿ "ಕಾಯಕ" ತತ್ವ. ಕಾಯಕತತ್ವದಲ್ಲಿ ನಿಸ್ವಾರ್ಥ ಪರತೆ ಮತ್ತು ಕ್ರಿಯಾಚಾರ ಸಂಪನ್ನತೆ ಎರಡು ಅವಿನಾಭಾವದಿಂದ ಕೂಡಿರುತ್ತವೆ. ಪ್ರತಿಯೊಬ್ಬ ವೀರಶೈವನು ಕಾಯಕ ಮಾಡಲೇಬೇಕು. ಅಂದರೆ ದುಡಿಯಲೇಬೇಕು. ಹಾರುವ ಮೊದಲು ಮಾಡಿ ಅಂತ್ಯಜ ಕಡೆಯಾಗಿ ದುಡಿದು ತನ್ನ ದುಡಿಮೆಯ ಫಲವನ್ನು ಲೋಕ ಕಲ್ಯಾಣಕ್ಕಾಗಿ ಉಪಯೋಗಿಸಬೇಕು. ಕಾಯಕ ಜೀವಿಗಳಲ್ಲಿ ಜಾತಿಯೇ ಇಲ್ಲ. ಜಾತ್ಯಾತೀತತತ್ವವು ಇಲ್ಲಿ ಅಡಕವಾಗಿದೆ. ರಾಜನಿಂದ ಕಿಂಕರನ ವರೆಗೂ ಕಾಯಕ ಮಾಡಿಯೇ ಸದ್ಯೋನ್ಮುಕ್ತಿ ಪಡೆಯಬೇಕು. ಆರ್ಥಿಕ ಸಂಪನ್ ಮೂಲಗಳ ಕೀಲವೇ ಕಾಯಕ ತತ್ವವೆಂದು ಬೇರೆ ಹೇಳಬೇಕಿಲ್ಲ. ಕಾಯಕದಲ್ಲಿ ಸರ್ವಾರ್ಪಣ ಭಾವವು ಅಡಕವಾಗಿದೆ.

೬) ಸಂಗ್ರಹ ವೃತ್ತಿಯು ಇರಬಾರದೆಂದು ಅದನ್ನು ತೆಗೆದುಹಾಕಿದ್ದಾರೆ. ಸೀರೆಯೊಳಗೆ ಒಂದು ಎಳೆಯು, ಅನ್ನದೊಳಗೊಂದು ಅಗುಳು ಇಂದಿಂಗೆ ನಾಳಿಂಗೆ ಎಂದು ಕುದಿದೆನಾದೊಡೆ ಎನಗದೇ ಭಂಗವೆಂದು ಮಹಾತ್ಮಾ ಬಸವಣ್ಣನವರು ಎಂದೋ ಸಾರಿ ಹೋಗಿದ್ದಾರೆ. ಸಂಗ್ರಹ ವೃತ್ತಿಯು ಸಂಗ್ರಹಣೇ ಬೇನೆಯೆಂದು ಬಲ್ಲವರು ಹೇಳುತ್ತಾರೆ. ಇದು ಜಾಗತಿಕ ಅಶಾಂತಿಗೆ ಮೂಲಕಾರಣಗಳಲ್ಲೊಂದಾಗಿದೆ.

೭) "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ." ವೆಂಬುದಾಗಿ ಬಸವಣ್ಣನವರು ತಮ್ಮಲ್ಲಿ ಕೈಂಕಾರ್ಯ ಭಾವವನ್ನು ವ್ಯಕ್ತಮಾಡಿದ್ದಾರೆ. ವ್ಯಾವಹಾರಿಕ ಹಿರಿತನ ಕಿರಿತನಗಳನ್ನು ಬಿಡಿಸಿದ್ದಾರೆ. ಹಿರಿತನವೆಂಬುದನ್ನು ಸಕಲಮಾನವರಿಗೆ ಕೊಟ್ಟು ಅವರಲ್ಲಿ ಸಮತಾವಾದವನ್ನು ಸಾರಿದ್ದಾರೆ. ಕಿರಿತನವು ತನ್ನಲ್ಲಿ ಎಂದರೆ ಐಕದೇಶಿಯವೆಂದು ಹೇಳಿದ್ದಾರೆ. ಸಮತಾವಾದವು ಸರ್ವತ್ರ ಸುಗಮವಾಗಿ ಸಾಗಲೆಂಬುದೇ ಶ್ರೀ ಬಸವಣ್ಣನವರ ಹೃದ್ಗತ ಅಭಿಪ್ರಾಯವಿದೆ. ಕಿಂಕರನಾದವನು ಶಂಕರನಾಗುವನು. ನಾಡಿನ ನಾಯಕನೂ ಆಗಬಲ್ಲನು. ಕಿರಿತನ ಹಿರಿತನಗಳು ಒಂದಕ್ಕೊಂದು ಪೂರಕಗಳೇ ಹೊರತು ಮಾರಕಗಳಲ್ಲ, ಸಾಮ್ಯವಾದವೇ ವೀರಶೈವರಲ್ಲಿ ಮುಖ್ಯ ತತ್ವವಾಗಿದೆ. ಈ ಎಲ್ಲ ಕಾರಣಗಳಿಂದ ವೀರಶೈವ ಧರ್ಮವು ವಿಶ್ವಧರ್ಮವಾಗಿದೆ.

೮) "ಕಾಗೆ ಒಂದು ಅಗುಳು ಕಂಡರೆ ಕರೆಯದೆ ತನ್ನ ಬಳಗವನು, ಕೋಳಿ ಒಂದು ಗುಟುಕು ಕಂಡರೆ ಕರೆಯದೆ ತನ್ನ ಬಳಗವನು" ಎಂಬ ಬಸವಣ್ಣನವರ ನುಡಿಯು ವಿಶ್ವಬಾಂಧವ್ಯವನ್ನು ಎತ್ತಿ ತೋರಿಸುತ್ತಿದೆ. ಎಲ್ಲರೂ ಶಿವಾಂಶ ಸಂಭೂತರು ಶಿವಸ್ವರೂಪಿಗಳು, ಸಕಲರಲ್ಲಿ ಶಿವಭಾವವು ವ್ಯಕ್ತವಾಗುವದು. ಎಲ್ಲರಲ್ಲಿರುವ ಆತ್ಮ ಒಂದೇ ಎಂಬ ಭಾವವು ನೆಲಗೊಂಡರೆ ವಿಶ್ವಬಾಂಧವ್ಯದ ನೆಲೆಗಟ್ಟು ಸಿದ್ಧವಾಗುವದು.

ತನ್ನ ಸ್ವತ್ತು ರಾಷ್ಟ್ರದ ಸೊತ್ತು. ತಾನೇ ರಾಷ್ಟ್ರ. ರಾಷ್ಟ್ರವೇ ತಾನು ಎಂಬುದಾಗಿ ಅಭೇದ ಜನಕ ಸ್ಥಿತಿಯು ಪ್ರಾಪ್ತವಾಗುವುದು. ಈ ರೀತಿಯಾಗಿ ವಿಶ್ವಬಾಂಧವ್ಯನೆಲೆಗೊಂಡರೆ ಜಾಗತಿಕ ಶಾಂತಿ ಕರತಲಾಮಲಕವಾಗುವದು.

೯) "ದಯವಿಲ್ಲದ ಧರ್ಮವಾವುದಯ್ಯಾ ? ದಯವೇ ಬೇಕು ಸಕಲ ಪ್ರಾಣಿಗಳಲ್ಲಿ" ಎಂಬ ಬಸವಣ್ಣನವರ ವಾಕ್ಯವು 'ದಯಾ ಧರ್ಮಕಾ ಮೂಲಹೈ' ಎಂಬ ನಾಣ್ಣುಡಿಯನ್ನು ಬೆಂಬಲಿಸುತ್ತಿದೆ. ಜೈನ ಬೌದ್ಧಧರ್ಮಗಳಂತೆ ವೀರಶೈವ ಧರ್ಮದಲ್ಲಿ ದಯೆಗೆ ಹೆಚ್ಚು ಮಹತ್ವ ಕೊಟ್ಟಿದ್ದಾರೆ. "ಮಾಹಿಂಸ್ಯಾತ್ ಸರ್ವಭೂತಾನಿ" ಎಂಬ ತತ್ವವು ಸಹ ಹಿಂಸೆಗೆ ಆಸ್ಪದ ಕೊಡದೆ ಅಹಿಂಸೆಯನ್ನೇ ಹೇಳುತ್ತಿದೆ "ಅಹಿಂಸಾ ಪರಮೋಧರ್ಮಃ" ಅಹಿಂಸೆಯು ಶ್ರೇಷ್ಠ ಧರ್ಮವು. ಅಹಿಂಸೆಯೆಂಬುದು ದಯೆಯ ಬೀಜಾಣು. ವಿದ್ದಂತೆ. ಹಿಂಸಾಚಾರವು ರಾಷ್ಟ್ರವನ್ನೇ ಹಾಳು ಮಾಡುತ್ತಿದೆ. ದಯಾ ಅಹಿಂಸೆಗಳು ವೀರ ಶೈವರ ಮಹಾಮಂತ್ರಗಳು, ಇಂದಿನ ಅಶಾಂತಿಮಯ ಜಗತ್ತಿನ ತಾರಕಗಳು, ದಾರಿದೀಪಗಳು, ವಿಶ್ವದ ಉದ್ಧಾರವೇ ವೀರಶೈವ ಧರ್ಮದ ಗುರಿಯಾಗಿದೆ.

೧೦) ಎಲ್ಲರೂ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸಿದ್ಧರಾಗಬೇಕು. ಎಲ್ಲರೂ ಅಚ್ಚಳಿಯದ ಆನಂದ ಹೊಂದಬೇಕು. ಜೀವತ್ವದ ಸಂಕುಚಿತ ಬೇಡಿಯನ್ನು ಕಡಿದೊಗೆಯಬೇಕು. ದೇವರ ಕಡೆಗೆ ಹೊರಳಬೇಕು. ಎಲ್ಲರಿಗೂ ಶಿವಸುಖ ಸಾಮ್ರಾಜ್ಯದ ಬಾಗಿಲು ತೆರೆದಿದೆ. ಇದೇ ವೀರಶೈವ ಧರ್ಮದ ವೀರಸಂದೇಶ.

೧೧) ಸರ್ವ ಧರ್ಮಗಳ ಧಾರ್ಮಿಕ ಶಕ್ತಿಯ ಕಿರಣಗಳು ರಾಷ್ಟ್ರ ರಾಷ್ಟ್ರಗಳ ಮೂಲೆ ಮೂಲೆಗಳಿಗೂ ಹೋಗಿ ಪ್ರಜ್ವಲಿತವಾಗಬೇಕು. ತಾಮಸಿಯ ವೃತ್ತಿಯನ್ನು ನಷ್ಟಗೊಳಿಸಬೇಕು. ಹಸಿದ ಜಗತ್ತಿಗೆ ಬೇಕಾದ ಸುಧಾರಣೆ ಸಂರಕ್ಷಣೆ ಮಾಡಬೇಕು. ಆರ್ಥಿಕ ಯೋಜನೆ, ಸ್ತ್ರೀ ಸುಧಾರಣೆ, ಹರಿಜನೋದ್ಧರಣೆ, ಧಾರ್ಮಿಕ ಭಾವನೆಯ ಪ್ರಸರಣೆ ಮುಂತಾದವುಗಳೆಲ್ಲವು .ಪ್ರಪಂಚದ ತುಂಬೆಲ್ಲ ಹಬ್ಬುವಂತೆ ಮಾಡಬೇಕು. ಇದುವೇ ಧರ್ಮಗುರುಗಳ ಕರ್ತವ್ಯ ವೀರ ಪ್ರತಿಜ್ಞೆ. ನಾವೆಲ್ಲರೂ ಈ ಪ್ರತಿಜ್ಞೆಗೈಯೋಣವೆಂದು ಶ್ರೀ ಜಗದ್ಗುರುಗಳು ಸ್ಫೂರ್ತಿದಾಯಕ ಭಾಷಣ ಮಾಡಿದರು.

ಶ್ರೀ ಜಗದ್ಗುರುಗಳು ವೀರಶೈವ ಸಿದ್ಧಾಂತವನ್ನು ಸಪ್ರಮಾಣವಾಗಿ ವ್ಯವಹಾರ ಗಮ್ಯವಾಗುವಂತೆ ಸಕಲರ ಮನಮುಟ್ಟುವಂತೆ ಹಿಂದೀ ಭಾಷೆಯಲ್ಲಿ ಸುದೀರ್ಘ ಉಪನ್ಯಾಸ ವಿತ್ತರು.

ಶ್ರೀ ಜಗದ್ಗುರುಗಳ ಭಾಷಣದ ನಂತರ ,ಯಥಾವಿಧಿ ಸಮ್ಮೇಲನದ ಕಾರ್ಯಕ್ರಮವು ಅಂದಿನ ಮಟ್ಟಿಗೆ ಮುಕ್ತಾಯವಾಯಿತು. ಅನೇಕ ಧರ್ಮ ಗುರುಗಳು ಶ್ರೀ ಜಗದ್ಗುರುಗಳೊಡನೆ ಧಾರ್ಮಿಕ ಜಟಿಲ ಸಮಸ್ಯೆಗಳ ಬಗ್ಗೆ ಕೆಲವು ಕಾಲ ಪ್ರಶ್ನೋತ್ತರ ರೂಪವಾಗಿ ಚರ್ಚೆಮಾಡಿದರು. ವಿಸ್ತಾರ ಭಯದಿಂದ ಚರ್ಚಾವಿಷಯ ಕೊಟ್ಟಿಲ್ಲ. ನ್ಯೂಯಾರ್ಕದ ಅನೇಕ ಧರ್ಮ ಪಂಡಿತರು ಮತ್ತು ಧರ್ಮಗುರುಗಳು ಶ್ರೀ ಜಗದ್ಗುರುಗಳ ಸನ್ನಿಧಿಗೆ ಬಂದು ಆನಂದ ಮುಖ ಮುದ್ರೆವುಳ್ಳವರಾಗಿ ಅಭಿನಂದನ

ಪರ ಕೈಕುಲಿಕಿಸಿ ಸ್ವಾಮಿಜಿಯವರೇ! ತಾವು ತಮ್ಮ ಧರ್ಮದ ವೈಶಾಲ್ಯ ಭಾವನೆಗಳನ್ನು ವಿಶ್ವಧರ್ಮದ ವಿವಿಧ ವಿಚಾರಗಳನ್ನು ಸುಗಮವಾಗಿ ಪ್ರತಿಪಾದಿಸಿದ್ದೀರಿ. ವೀರಶೈವ ಧರ್ಮವು ವಿಶ್ವಧರ್ಮವೆನಿಸಲು ಯೋಗ್ಯವಾಗಿದೆ ಎಂದು ನಾನಾ ವಿಧವಾಗಿ ಜಗದ್ಗುರುಗಳಿಗೆ ಹೇಳಿ ನ್ಯೂಯಾರ್ಕಕ್ಕೆ ಬರಬೇಕೆಂದು ಬಿನ್ನಹವಮಾಡಿಕೊಂಡರು, ಶ್ರೀ ಜಗದ್ಗುರುಗಳು ನ್ಯೂಯಾರ್ಕಕ್ಕೆ ಬರಲು ಒಪ್ಪಿಕೊಂಡರು.

ದಿಲ್ಲಿಯಲ್ಲಿ ಎರಡು ದಿನಗಳ ವರೆಗೆ ಶ್ರೀ ಜಗದ್ಗುರುಗಳ ವಾಸ್ತವ್ಯವಾಯಿತು. ಬಿಡುವಿನ ವೇಳೆಯಲ್ಲಿ ಲಾಲಕಿಲ್ಲಾ, ತಾಜಮಹಾಲ, ರಾಷ್ಟ್ರಪತಿಭವನ, ಕುತುಬ-ಮೀನಾರ್, ಗಾಂಧಿಯವರ ಸಮಾಧಿ, ಕೇಂದ್ರ ಸಭಾಗೃಹ, ಯಮುನಾ ನದಿಯ ಆಣೇಕಟ್ಟು ಮುಂತಾದ ರಮ್ಯ ಮತ್ತು ಐತಿಹಾಸಿಕ ಕಲಾ ಕೌಶಲ್ಯ ಮತ್ತು ಸಂಗ್ರಾ-ಹಾಲಯಗಳ ಸಂದರ್ಶನ ಮಾಡಿದರು.

ದಿ. ೧೨-೧-೬೮ ರಂದು ಶ್ರೀ ಜಗದ್ಗುರುಗಳು ಆಗ್ರಾಕ್ಕೆ ದಯಮಾಡಿಸಿದರು. ಅಲ್ಲಿಯ ತಾಜಮಹಲ, ಕೆಂಪುಕೋಟೆ ಮಥುರಾ, ವೃಂದಾವನ, ಮುಂತಾದ ಸ್ಥಾನಗಳನ್ನು ತಮ್ಮ ಪರಿವಾರಸಹಿತವಾಗಿ ಸಂದರ್ಶನ ಮಾಡಿಕೊಂಡು ಪುನಃ ದಿಲ್ಲಿಗೆ ಮರಳಿ ದಯಮಾಡಿಸಿದರು.

## ಇಂದಿರಾ ಗಾಂಧಿಯವರೊಡನೆ ಸಂದರ್ಶನ

ದಿ. ೧೩-೧-೬೮ ರಂದು ಪ್ರಾತಃಕಾಲದ ಶಿವಾರ್ಚನೆಯ ನಂತರ ಮುಂಜಾನೆ ೮ ಗಂಟೆಗೆ ಕೇಂದ್ರ ಪ್ರಧಾನ ಮಂತ್ರಿಗಳಾದ ಶ್ರೀಮತಿ ಇಂದಿರಾ ಗಾಂಧಿಯವರನ್ನು ಭೆಟ್ಟಿಯಾದರು. ಗೌರವಾದರಗಳಿಂದ ಶ್ರೀಮತಿ ಇಂದಿರಾ ಗಾಂಧಿಯವರು ಶ್ರೀ ಜಗದ್ಗುರುಗಳನ್ನು ಬರಮಾಡಿಕೊಂಡು ಭಕ್ತಿಯಿಂದ ನಮಸ್ಕರಿಸಿ, ಕುಶಲ ಪ್ರಶ್ನೆಗಳ ನಂತರ ವಿಶ್ವಶಾಂತಿಯ ಬಗೆಗೆ ಸಂಭಾಷಣೆ ಮಾಡಿದರು. "ಯತೋ ಧರ್ಮಸ್ತತೋ ಜಯಃ" ಎಂಬ ಸೂತ್ರದಂತೆ ಧರ್ಮದಿಂದಲೇ ರಾಷ್ಟ್ರಕ್ಕೆ ಶಾಂತಿ ಸಿಗಬಲ್ಲದು ಧರ್ಮಕ್ಕೆ ಗೆಲವು ಯಾವಾಗಲೂ ಸನ್ನಿಹಿತವಾಗಿದೆ ಎಂದು ಮುಂತಾಗಿ ಅಪ್ಪಣೆ ಕೊಡಿಸಿದ ನಂತರ ಶ್ರೀಮತಿ ಇಂದಿರಾ ಗಾಂಧಿಯವರು ಹುಬ್ಬಳ್ಳಿಗೆ ಬಂದಾಗ ತಮ್ಮ ಸನ್ನಿಧಿಗೆ ಅವಶ್ಯ-ವಾಗಿ ಬಂದು ತಾವು ನಡೆಸಿರುವ ಶೈಕ್ಷಣಿಕ ಚಟುವಟಿಕೆಗಳನ್ನು ನೋಡುತ್ತೇವೆ ಎಂದು ಮುಂತಾಗಿ ಹೇಳಿದರು. ಶ್ರೀ ಜಗದ್ಗುರುಗಳು ಅವರಿಗೆ ಆಶೀರ್ವಾದವಿತ್ತು ಮರಳಿ ದಯಮಾಡಿಸಿದರು. ಆ ದಿನ ೪-೫ ಕಡೆಗೆ ಸಾರ್ವಜನಿಕ ಸಭೆಗಳಾದವು. ಶ್ರೀಮತಿ ಸರೋಜನಿ ಮಹಿಷಿಯವರ ಮುಖಂಡತ್ವದಲ್ಲಿ ದಿಲ್ಲಿ ಕರ್ನಾಟಕ ಸಂಘದವರು ಶ್ರೀ ಜಗದ್ಗುರುಗಳಿಗೆ ಸತ್ಕಾರ ಸಮಾರಂಭವನ್ನು ವೈವಿಧ್ಯ ಪೂರ್ಣವಾಗಿ ನೆರವೇರಿಸಿದರು.

## ಕಾಶಿಯಲ್ಲಿ ಗುರು-ವಿರಕ್ತರ ಸಮನ್ವಯ

ದಿ. ೧೫-೧-೬೮ ರಂದು ಶ್ರೀ ಜಗದ್ಗುರುಗಳು ದಿಲ್ಲಿಯ ಎಲ್ಲ ಕಾರ್ಯಕ್ರಮಗಳನ್ನು ಮುಗಿಸಿಕೊಂಡು ದಿಲ್ಲಿಯಿಂದ ಕಾಶಿಗೆ ಪೂರ್ವಾಮಂತ್ರಣದ ಮೇರೆಗೆ ರೇಲ್ವೆ ಮಾರ್ಗ

ವಾಗಿ ಪ್ರಯಾಣ ಬೆಳೆಸಿದರು. ರೇಲ್ವೆ ನಿಲ್ದಾಣದಲ್ಲಿ ಕಾಶಿ ಸುಪ್ರಸಿದ್ಧ ಜಂಗಮವಾಡಿ ಮಠದ ಕಾರಭಾರಿಗಳು, ಜಯದೇವ ಬೋರ್ಡಿಂಗಿನ ವಿದ್ಯಾರ್ಥಿಗಳು, ಕಾಶಿಯಲ್ಲಿದ್ದ ಶ್ರೀ ಶಿವಯೋಗಮಂದಿರದ ಶಿವಯೋಗಿ ವೃಂದವು ಮತ್ತು ಅನೇಕ ಸದ್ಭಕ್ತರು ಶ್ರೀ ಜಗದ್ಗುರುಗಳನ್ನು ಪೂವಮಾಲೆಗಳಿಂದ ಸತ್ಕರಿಸಿ ಸ್ವಾಗತಿಸಿದರು. ಸುಸಜ್ಜಿತ ಮೋಟಾರ ಕಾರಿನಲ್ಲಿ ಶ್ರೀ ಜಗದ್ಗುರುಗಳು ಮಂಡಿಸಿದ ನಂತರ ಕಾರಭಾರಿಗಳ ಬಿನ್ನಹದ ಮೇರೆಗೆ ಜಂಗಮವಾಡಿ ಮಠಕ್ಕೆ ದಯಮಾಡಿಸಿದರು. ಜಂಗಮವಾಡಿ ಮಠದ ಶ್ರೀ ಜಗದ್ಗುರುಗಳು ತಮ್ಮ ಮಠದ ಮಹಾದ್ವಾರದ ವರೆಗೆ ಬಂದು ಜಗದ್ಗುರುಗಳಿಗೆ ಮಾಲಾರ್ಪಣೆ ಮಾಡಿ ಹರ್ಷನಿರ್ಭರಯರಾಗಿ ಜಗದ್ಗುರುಗಳ ಕರಪಿಡಿದು ತಮ್ಮ ಮಠದ ಕೈಲಾಸ ಮಂಟಪಕ್ಕೆ ಕರೆದೊಯ್ದರು. ಸ್ನಾನ. ಶಿವಾರ್ಚನಾದಿಗಳು ಯಥಾವತ್ತಾಗಿ ಮುಗಿ ದವು. ಅಲ್ಲಿಯೇ ಎರಡು ದಿವಸಗಳ ವರೆಗೆ ವಾಸ್ತವ್ಯಮಾಡಿದರು. ದಿನಾಲು ಸಂಜೆಯಲ್ಲಿ ಕೈಲಾಸ ಮಂಟಪದಲ್ಲಿ ಸಭೆಯ ಕಾರ್ಯಕ್ರಮಗಳು ಜರುಗಿದವು. ಉಭಯ ಜಗದ್ಗುರುಗಳ ಅಪೂರ್ವ ಸಮ್ಮೇಲನವು ಚಿರಸ್ಮರಣೀಯವಾಯಿತು. ಜ್ಞಾನ ಮತ್ತು ಕ್ರಿಯೆಗಳ ಸಮನ್ವಯವಾಯಿತೆಂದು ನಮಗೆನಿಸಿತು. ಉಭಯ ಜಗದ್ಗುರುಗಳು ವೀರಶೈವ ಸಮಾಜದ ಕುಂದುಕೊರತೆಗಳ ಬಗೆಗೆ ವಿಚಾರ ವಿನಿಮಯ ಮಾಡಿದರು. ಈ ಸಮಾ-ಗಮವು ಗುರುವಿರಕ್ತರ ಭಾವೈಕ್ಯಕ್ಕೆ ನಾಂದಿಯಾಯಿತು.

ಶ್ರೀ ಜಗದ್ಗುರುಗಳು ದಿನಾಂಕ ೧೬–೧–೬೮ ರಂದು ಜಂಗಮವಾಡಿಮಠದಲ್ಲಿ ಕಾಶಿ ವಿದ್ಯಾಪೀಠದ ವ್ಹಾಯಿಸ ಚಾನ್ಸಲರರನ್ನು ಮತ್ತು ತಮಗೆ ಶಿಕ್ಷಣಕೊಟ್ಟ ಪಂಡಿತರನ್ನು ಇನ್ನೂ ಅನೇಕ ೮–೯ ಜನ ಘನ ವಿದ್ವಾಂಸರನ್ನು ಕರೆಯಿಸಿದರು. ಅಂದು ಪಂಡಿತರ ಸಭೆ ಜರುಗಿತು. ಆ ಸಭೆಯಲ್ಲಿ ಶ್ರೀ ಜಗದ್ಗುರುಗಳು ೧೦–೧೨ ಜನ ಪಂಡಿತ ರಿಗೆ ಮರ್ಯಾದಾರ್ಥವಾಗಿ ಪ್ರತಿಯೊಬ್ಬರಿಗೂ ಪುಷ್ಪಮಾಲೆಗಳ ಸಹಿತವಾಗಿ ಅನರ್ಘ್ಯ ಶಾಲು ಜೋಡಿಗಳನ್ನಿತ್ತು ಆಶೀರ್ವದಿಸಿದರು. ಪಂಡಿತರು ಒಳ್ಳೇ ಹರ್ಷಭರಿತರಾಗಿ ಶ್ರೀ ಜಗದ್ಗುರುಗಳ ಪಾದಕ್ಕೆ ವಂದಿಸಿ ತೆರಳಿದರು. ಮರುದಿವಸ ಶ್ರೀ ಜಗದ್ಗುರುಗಳು ಜಂಗಮವಾಡಿಮಠದ ಜಗದ್ಗುರುಗಳ ಸಹಿತವಾಗಿ ಮಠದ ಯಾವತ್ತು ಜನರಿಗೆ ಇಚ್ಛಾ ಭೋಜನವನ್ನು ಏರ್ಪಡಿಸಿ ಸಕಲರಿಗೂ ಹುಬ್ಬಳ್ಳಿ ಮೂರುಸಾವಿರಮಠದ ಶ್ರೀ ಜಗದ್ಗುರು ಗುರುಸಿದ್ಧೇಶ್ವರರ ಮಹಾ ಪ್ರಸಾದವೆಂದು ತೃಪ್ತಿಪಡಿಸಿದರು, ಕಾಶೀ ವಿಶ್ವನಾಥನ ದರ್ಶನ ಮಾಡಿಕೊಂಡರು.

ಜಯದೇವವಾಡಿಯ ವಿದ್ಯಾರ್ಥಿ ಸಂಘದವರ ಆಮಂತ್ರಣದ ಮೇರೆಗೆ ಶ್ರೀ ಜಗದ್ಗುರುಗಳು ಜಯದೇವವಾಡಿ ಬೋರ್ಡಿಂಗಿಗೆ ದಯಮಾಡಿಸಿ ಅಲ್ಲಿಯೂ ಎರಡು ದಿವಸ ವಾಸ್ತವ್ಯ ಮಾಡಿದರು. ಸಭೆ ಸತ್ಕಾರಗಳು ಜರುಗಿದವು. ಅಲ್ಲಿಯೂ ಶ್ರೀ ಜಗದ್ಗುರುಗಳು ಬೋರ್ಡಿಂಗಿನ ಯಾವತ್ತು ವಿದ್ಯಾರ್ಥಿಗಳ ಇಚ್ಛಾ ಭೋಜನದ ಮಹಾ ಪ್ರಸಾದ ನೆರವೇರಿಸಿದರು. ಕಾಶೀ ವಿಶ್ವವಿದ್ಯಾಲಯಕ್ಕೆ ಭೆಟ್ಟಿಯಿತ್ತರು ಪ್ರೇಕ್ಷಣೀಯ ಸ್ಥಳಗಳ ಸಂದರ್ಶನ ಮಾಡಿದರು. ಕಾಶೀ ಕರ್ನಾಟಕ ಸಂಘದವರ ಆಮಂತ್ರಣದ

ಮೇರೆಗೆ ಶ್ರೀ ಜಗದ್ಗುರುಗಳು ದಯಮಾಡಿಸಿದರು. ಶ್ರೀ ಜಗದ್ಗುರುಗಳಿಗೆ ಕರ್ನಾಟಕ ಸಂಘದವರು ಬಿನ್ನವತ್ತಳೆ ಅರ್ಪಿಸಿದರು. ಸಮಯೋಚಿತ ಸಂಮಂಜಸವಾಗಿ ಶ್ರೀ ಜಗದ್ಗುರುಗಳು ಆಶೀರ್ವಚನವಿತ್ತರು. ಈ ಎಲ್ಲ ಕಾರ್ಯಕ್ರಮಗಳು ಉತ್ಸಾಹಭರಿತವಾಗಿ ಸರಾಗವಾಗಿ ಅತ್ಯಂತ ಗೌರವಯುತವಾಗಿ ಜರುಗಿದವು.

## ಕಲಕತ್ತೆಗೆ ಪ್ರಯಾಣ

ದಿನಾಂಕ ೧೮–೧–೬೮ ರಂದು ಕಾಶಿಯಿಂದ ಶ್ರೀ ಜಗದ್ಗುರುಗಳು ಕಲಕತ್ತೆಗೆ ರೈಲು ಮಾರ್ಗವಾಗಿ ಹೊರಟರು. ರೇಲ್ವೆ ನಿಲ್ದಾಣದಲ್ಲಿ ಸೇಲ್ಸಟ್ಯಾಕ್ಸ ಆಫೀಸರರಾದ ಶ್ರೀ ಹೊಸಮನಿಯವರು ತಮ್ಮ ಪರಿವಾರದೊಂದಿಗೆ ಆಗಮಿಸಿದ್ದರು. ಅಸಿಸ್ಟಂಟ ಕಮಿಶನರ ಸಾಹೇಬರೂ ಮತ್ತು ಇತರ ಸದ್ಭಕ್ತರು ಶ್ರೀ ಜಗದ್ಗುರುಗಳನ್ನು ಪೂಮಾಲೆಗಳಿಂದ ಸ್ವಾಗತಿಸಿದರು. ಕಲಕತ್ತಾ ಸುಪ್ರಸಿದ್ಧ ಶೇಟಜೀವರ ಬಂಗ್ಲೆಯಲ್ಲಿ ಶ್ರೀ ಜಗದ್ಗುರುಗಳಿಗೆ ವಾಸ್ತವ್ಯಕ್ಕಾಗಿ ಏರ್ಪಾಟು ಮಾಡಿದ್ದರು. ಹೊಸಮನಿ ಮತ್ತು ಹಿರೇಮಠಸಾಹೇಬರ ಮನೆಯಲ್ಲಿ ಶ್ರೀ ಜಗದ್ಗುರುಗಳ ಪೂಜಾ ಪ್ರಸಾದ ವ್ಯವಸ್ಥೆಯು ಏರ್ಪಡಿಸಲಾಯಿತು. ಕಲಕತ್ತೆಯಲ್ಲಿದ್ದ ರಾಮಕೃಷ್ಣ ಪರಮಹಂಸ ಆಶ್ರಮಕ್ಕೆ ಭೆಟ್ಟಿಯಿತ್ತರು. ಬೇಲೂರು ಆಶ್ರಮಕ್ಕೆ ಸಂದರ್ಶನ ಕೊಟ್ಟರು. ಪ್ರೇಕ್ಷಣೀಯ ಸ್ಥಳಗಳ ಸಂದರ್ಶನದ ನಂತರ ಒಂದು ದಿವಸ ಆಕಾಶದಲ್ಲಿ ಅದ್ಭುತ ಚುಕ್ಕೆಗಳು ಎಂಬ ಚಲನಚಿತ್ರ ಸಂದರ್ಶನ ಮಾಡಿಕೊಂಡರು. ಕಲಕತ್ತೆಯಲ್ಲಿ ಶ್ರೀ ಜಗದ್ಗುರುಗಳು ನಾಲ್ಕು ದಿವಸ ವಾಸ್ತವ್ಯಮಾಡಿದರು.

ಕಲಕತ್ತೆಯಿಂದ ದಿನಾಂಕ ೨೦–೧–೬೮ ರಂದು ವಿಮಾನ ಮಾರ್ಗವಾಗಿ ಶ್ರೀ ಜಗದ್ಗುರುಗಳು ಮುಂಬಯಿಗೆ ದಯಮಾಡಿಸಿ ಅಲ್ಲಿಂದ ಬೆಳಗಾಂವ ಸಾಂಬ್ರಾ ವಿಮಾನ ನಿಲ್ದಾಣಕ್ಕೆ ಆಗಮಿಸಿದರು. ಅಲ್ಲಿಯೂ ಬೆಳಗಾಂವ ಧಾರವಾಡಜಿಲ್ಹೆಯ ಸಂಘ ಸಂಸ್ಥೆಯವರು ಅನೇಕ ಮಹಾಸ್ವಾಮಿಗಳು, ಅನಂತ ಸ್ತ್ರೀ ಪುರುಷ ಸದ್ಭಕ್ತರು ಶ್ರೀ ಜಗದ್ಗುರುಗಳ ಸತ್ಕಾರಕ್ಕಾಗಿ ಆಗಮಿಸಿ ಸ್ವಾಗತ ಸತ್ಕಾರಗೈದರು. ಅಲ್ಲಿಂದ ಹುಬ್ಬಳ್ಳಿಗೆ ಶ್ರೀ ಜಗದ್ಗುರುಗಳು ಕಾರಿನಿಂದ ದಯಮಾಡಿಸಿದರು. ಅಲ್ಲಿಯೂ ಸತ್ಕಾರದ ಸುರಿಮಳೆಯಾಯಿತು. ಒಟ್ಟಿನಲ್ಲಿ ದಿಲ್ಲಿ ವಿಶ್ವಶಾಂತಿ ಪರಿಷತ್ತಿನ ಪ್ರಯಾಣವು ಸಮಗ್ರ ಕನ್ನಡ ನಾಡಿಗೆ ಅಪೂರ್ವ ಯಶೋಭಾಗವನ್ನು ಗಳಿಸಿತಂದಿತು. □

# ಹೂಬಳ್ಳಿಯಲ್ಲಿ ಅರಳಿದ ಹೂವು

ಶ್ರೀ ನಿ. ಪ್ರ. ಶಿವಲಿಂಗಸ್ವಾಮಿಗಳು
ಹುಕ್ಕೇರಿಮಠ ಹಾವೇರಿ.

ಶ್ರೀ ಜಗದ್ಗುರು ಮೂರುಸಾವಿರ ಮಠವು ಇಂದು ಭಾರತದಲ್ಲೇ ಹೆಸರಾಂತ ಪೀಠ. ಇದು ಹೊಗಳಿಕೆಯ ಮಾತಲ್ಲ. ಅಂತಾರಾಷ್ಟ್ರೀಯ ಮಟ್ಟದ ಜ್ಞಾನಪೀಠದ ಮೇಲೆ ಇದಕ್ಕೆ ಸ್ಥಾನ ದೊರೆತುದೇ ಈ ಮಾತಿಗೆ ನೇರ ನಿದರ್ಶನ. ಪೂಜ್ಯ ಜಗದ್ಗುರುಗಳು ವಿಶ್ವದ ಸಕಲ ರಾಷ್ಟ್ರಗಳ ಶಾಂತಿ ಪರಿಷತ್ತಿಗೆ ಆಮಂತ್ರಿತರು ಮಾತ್ರವಲ್ಲ, ಅದರ ಪ್ರಭಾವೀ ಸದಸ್ಯರಾಗಿರುವದಂತೂ ನಮ್ಮೆಲ್ಲರ ಅಪೂರ್ವ ಹೆಮ್ಮೆಯ ವಿಷಯ. ಅವರಿಗೆ ವ್ಹಿಯೆಟ್‌ನಾಮ, ಅಮೇರಿಕೆ ಮೊದಲಾದ ರಾಷ್ಟ್ರಗಳಿಂದ ಕರೆಬಂದಿತ್ತು. ಆದರೆ ಗುರುತರ ಕಾರ್ಯಭಾರವನ್ನು ಹೊತ್ತು ನಿಂತ ಅವರು ತಮಗೆ ಬಂದ ಆಮಂತ್ರಣಗಳನ್ನು ನಿರಾಕರಿಸಲೇಬೇಕಾಯಿತು. ಅವರ ಶರ ವೇಗದ ಕಾರ್ಯಕ್ಷಮತೆಯನ್ನು ನಿರೀಕ್ಷಿಸಿದವರಿಗೆಲ್ಲ ಅವರ ಅದ್ಭುತ ಕಾರ್ಯ ಸಾಮರ್ಥ್ಯದ ಅರಿವು ಆಗದೇ ಇರದು.

ಇಂದು ಹುಬ್ಬಳ್ಳಿ ಪಟ್ಟಣ ಹಿಗ್ಗಲಿಸಿ ಬೆಳೆಯುತ್ತಿದೆ. ವಾಣಿಜ್ಯ – ವೈಜ್ಞಾನಿಕ – ಶೈಕ್ಷಣಿಕ – ಧಾರ್ಮಿಕ – ರಂಗಗಳಲ್ಲಿ ಭರದಿಂದ ಮುನ್ನುಗ್ಗುತ್ತಿದೆ. ಆದರೆ ಒಂದಾನೊಂದು ಕಾಲದಲ್ಲಿ ಈ ಮಹಾನಗರ ಒಂದು ಪುಟ್ಟ ಹಳ್ಳಿ. ಅಂದಿನಿಂದ ಇಂದಿನ ಈ ಬೃಹತ್ ನಗರದ ಅಭಿವೃದ್ಧಿಯ ಇತಿಹಾಸವನ್ನು ಅವಲೋಕಿಸಿದರೆ, ಅದರಲ್ಲಿ ಶ್ರೀ ಜಗದ್ಗುರು ಮೂರುಸಾವಿರಮಠದ ಕೈವಾಡ ಹಿನ್ನೆಲೆಯಾಗಿ ಇದ್ದೇ ಇದೆ. ಇಂದಿಗೂ ಇಲ್ಲಿಯ ಅನೇಕ ಆಗುಹೋಗುಗಳೂ ಶ್ರೀಗಳ ಆಶೀರ್ವಾದದಿಂದಲೇ ಸಾಗಿರುವದು ಇದಕ್ಕೆ ಸಾಕ್ಷಿ.

ಇಂದು ಪೀಠದಲ್ಲಿ ವಿರಾಜಮಾನರಾಗಿರುವ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಈ ಪೀಠದ ಉಜ್ವಲ ಇತಿಹಾಸಕ್ಕೆ ಸುವರ್ಣದ ಕಲಶವಾಗಿದ್ದಾರೆ. ವೀರಶೈವ ಮಠಾಧೀಶರಿಗೆಲ್ಲ ಇವರ ಆದರ್ಶ ಅನುಕರಣೀಯ ವಾಗಿದೆಯೆಂದು ಬೇರೆ ಹೇಳಬೇಕಿಲ್ಲ. ಉನ್ನತ ಮಟ್ಟದ ಪೀಠವೊಂದನ್ನೇರಲು ಬೇಕಾದ ಎಲ್ಲ ಅರ್ಹತೆ ಸದ್ಗುಣಗಳು ಇವರಲ್ಲಿ ಇದ್ದುದರಿಂದಲೇ ಹನ್ನೆರಡು ವರ್ಷಗಳ ಅಲ್ಪಾವಧಿಯಲ್ಲೇ ಇವರು ಅನೇಕ ಕಾರ್ಯಗಳನ್ನು ಪೂರೈಸಿದ್ದಾರೆ. ಪೂಜ್ಯ

ಗಂಗಾಧರ ರಾಜಯೋಗೀಂದ್ರರು ಇಂದು ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ, ಸಾಹಿತ್ತಿಕ ರಂಗಗಳಲ್ಲಿ ಪ್ರಾಮಾಣಿಕ ಸೇವೆಯನ್ನು ನೀಡುತ್ತಲಿದ್ದಾರೆ. ತಮ್ಮ ಶಕ್ತಿಯ ಸರ್ವತೋಮುಖ ಬಲವನ್ನೆಲ್ಲ ಸಮಾಜದ ಸರ್ವಾಂಗೀಣ ಸಮುನ್ನತಿಗಾಗಿ ಬಳಸು ತ್ತಿದ್ದಾರೆ. ಇವರ ಕಾರ್ಯೋತ್ಸಾಹ ಸೀಮೆಯನ್ನರಿಯದು. ಇವರ ಭವಿಷ್ಯ ದ್ಯೋಜನೆಗಳು ವಿಲಂಬವನ್ನು ಕಾಣವು. ಇವರ ವಿಚಕ್ಷಣ ಪ್ರಜ್ಞೆಗೆ ಯಾವು ದೊಂದು ವಿಷಯ ಹೊಳೆದರೆ, ಅದಕ್ಕೆ ಕಾರ್ಯರಂಗದಲ್ಲಿ ಅವಕಾಶ ದೊರಕಲು ಹೆಚ್ಚು ಸಮಯ ಬೇಕಾಗುವದಿಲ್ಲ. ಇದು ಇವರ ಕ್ರಿಯಾರಂಗವಾದರೆ ಇವರ ಆಂತರಿಕ ಅನುಭಾವರಂಗ ಇನ್ನೂ ವೈಶಿಷ್ಟ್ಯವನ್ನು ಸಂಪಾದಿಸಿದೆ. ಇವರ ನಿಷ್ಕ ಲ್ಮಷ ಹೃದಯಕ್ಕೆ ಕನ್ನಡಿ ಹಿಡಿದಂತೆ ಇವರ ಮುಖದ ಮೇಲೆ ಸದಾಕಾಲ ಮಧುರ ಮಂದಹಾಸವೊಂದು ಓಲಾಡುತ್ತದೆ. ಎಂದಿಗೂ ಇವರು ಬಿರುನುಡಿಗಳನ್ನು ಆಡರು. ವ್ಯಕ್ತಿತ್ವದ ವೈಷಮ್ಯವನ್ನು ಪ್ರದರ್ಶಿಸರು. ಇದಕ್ಕೆ ಕಾರಣ, ಸುದೀರ್ಘ ಕಾಲದಿಂದ ಇವರು ಗೈದ ಪವಿತ್ರ ಸಾಧನೆ. ತಾವು ನಿತ್ಯ ಗೈಯುತ್ತಿರುವ ಲಿಂಗಯ್ಯನ ಆರಾಧನೆಯೇ ತಮ್ಮ ಜೀವನಶಕ್ತಿಯ ಮೂಲ ಸೂತ್ರವೆಂದು ಇವರೇ ಹೇಳುತ್ತಾರೆ. ಶರಣರಲ್ಲಿ, ಸಂತರಲ್ಲಿ ಇವರಿಗೆ ಅಪೂರ್ವ ವಿಶ್ವಾಸ. ಪೂಜ್ಯ ಶ್ರೀ ವಿಜಯ ಮಹಾಂತ ಶಿವಯೋಗಿಗಳಲ್ಲಿ, ಹಾನಗಲ್ಲ ಕುಮಾರ ಸ್ವಾಮಿಗಳಲ್ಲಿ ಹಾಗೂ ಕರ್ತೃ ಹುಚ್ಚೇಶ್ವರನಲ್ಲಿ ಇವರು ಇರಿಸಿದ ಅಸ್ಖಲಿತ ಭಕ್ತಿ ಇವರ ಜೀವನಕ್ಕೆ ಪುಷ್ಟಿಯನ್ನಿತ್ತಿದೆ. ಶಿವಯೋಗ ಮಂದಿರದಲ್ಲಿ ಈಗಾಗಲೇ ಇವರು ತಮಗಾಗಿ ತಪೋಮಂದಿರವೊಂದನ್ನು ನಿರ್ಮಿಸುತ್ತಿ ದ್ದಾರೆ. ತಮ್ಮ ಜೀವಿತದ ಕೆಲಭಾಗವನ್ನು ಅಲ್ಲಿ ಮೌನಸಾಧನೆಯಲ್ಲಿ ತೊಡಗಿಸಬೇಕೆಂ– ಬುದು ಇವರ ಹಿರಿಯಾಸೆ. ಇವರ ಈ ಆಧ್ಯಾತ್ಮಿಕ ಪ್ರಜ್ಞೆಗೆ ಸಾಹಿತ್ಯಿಕ ರಸಜ್ಞತೆಯೂ ಸೇರಿಕೊಂಡುದರಿಂದ ಇವರ ವ್ಯಕ್ತಿತ್ವಕ್ಕೆ ತನ್ನದೇ ಆದ ವಿಶಿಷ್ಟ ಮಾಧುರ್ಯ ತುಂಬಿ ಬಂದಿದೆ. ಇವರ ಸಾಹಿತ್ಯ ಹಾಗೂ ಜ್ಞಾನದಾಹಗಳ ಪ್ರತೀಕವಾಗಿ ಇಂದು 'ಪರಂಜ್ಯೋತಿ' ಅರಳಿ ನಿಂತಿದೆ. ಕನ್ನಡ ನಾಡಿನ ಧಾರ್ಮಿಕ ಕ್ಷೇತ್ರದಲ್ಲಿ ಇದನ್ನು ಸರಿಗಟ್ಟುವ ಘನವಂತ ಪತ್ರಿಕೆಗಳು ಇಲ್ಲವೆಂದೇ ಹೇಳಬೇಕು. ಪೂಜ್ಯ ಜಗದ್ಗುರುಗಳು ಇನ್ನೂ ಶಿವಯೋಗ ಮಂದಿರದ ವಟುವಾಗಿದ್ದಾಗಿನಿಂದಲೇ ಬೆಳೆಸಿಕೊಂಡು ಬಂದ ಕಾವ್ಯಶಕ್ತಿ ಇಂದು ಪ್ರಫುಲ್ಲಿತವಾಗಿ ಅರಳಿದೆ. ಅನೇಕ ಉದ್ದಾಮ ವಿಮರ್ಶಕರು ಇವರ ಗದ್ಯಸಾಹಿತ್ಯ ಹಾಗೂ ಕಾವ್ಯ ಸಾಹಿತ್ಯಗಳನ್ನು ಇಂದು ತಮ್ಮ ವಿಮರ್ಶೆಗಾಗಿ ಎತ್ತಿಕೊಳ್ಳುತ್ತಿದ್ದಾರೆ.

ಪೂಜ್ಯ ಜಗದ್ಗುರುಗಳ ಬಾಳು ಒಂದು ಸುಂದರವಾದ ಹೂವಿನಂತೆ. ಅದಕ್ಕೆ ಬಾಡುವಿಕೆ ಮಾತ್ರ ಇಲ್ಲ. ನಿತ್ಯ ನಿರಂತರವಾಗಿ ಅರಳುತ್ತ ಹೋಗುವದೇ ಅದರ ಘನವಂತ ಲಕ್ಷಣ. ಆ ಹೂವಿನಲ್ಲಿ ಸಾಹಿತ್ಯದ ಹೊಂಬಣ್ಣವಿದೆ, ಜ್ಞಾನದ ಸುಗಂಧವಿದೆ, ಅನುಭಾವದ ಸುಮನೋಹರತೆ ಇದೆ. ಆ ಹೂವಿನಿಂದಲೇ ಇಂದು ಹುಬ್ಬಳ್ಳಿ ಹೂಬಳ್ಳಿಯಾಗಿದೆ. □

# ವಿದೇಶಗಳಲ್ಲಿ ಜಗದ್ಗುರುಗಳು

ಪ್ರೊ. ಎ. ಎಲ್. ಹಿರೇಮಠ

ಈ ಜಾಗತಿಕ ಧರ್ಮ ಮತ್ತು ಶಾಂತಿ ಪರಿಷತ್ತನ್ನು ಕ್ಯೂಟೋ (ಜಪಾನ) ದಲ್ಲಿ ನೆರವೇರಿಸಲು ಪೂರ್ವಭಾವಿಯಾಗಿ ಇದಕ್ಕೊಂದು ಹಿನ್ನೆಲೆ ಇದೆ. ೧೯೬೮ ಜನವರಿ ತಿಂಗಳಲ್ಲಿ ದಿಲ್ಲಿಯಲ್ಲಿ ಒಂದು ಪ್ರಾಸ್ತಾವಿಕ ಸಭೆಯನ್ನು ಕರೆಯಲಾಯಿತು. ಆಗ ಭಾರತದ ರಾಷ್ಟ್ರಪತಿಯಾಗಿದ್ದ ಶ್ರೀ ಝಾಕೀರ ಹುಸೇನರು ಆ ಪರಿಷತ್ತನ್ನು ಉದ್ಘಾಟಿಸಿದರು. ಉಪ ಪ್ರಧಾನಿಯಾಗಿದ್ದ ಶ್ರೀ ಮುರಾರಜಿಭಾಯಿ ದೇಸಾಯಿ ಇವರು ಸಮಾರೋಪ ಮಾಡಿದರು. ಸುಮಾರು ೫೦ ರಾಷ್ಟ್ರಗಳ ಅನೇಕ ಪ್ರತಿನಿಧಿಗಳು ಆ ಸಭೆಯಲ್ಲಿ ಭಾಗವಹಿಸಿದ್ದರು. ಆಗ ರಚಿಸಲ್ಪಟ್ಟ ಕಾರ್ಯಕಾರಿ ಸಮಿತಿಯು ಜಾಗತಿಕ ಪರಿಷತ್ತನ್ನು ಕ್ಯೂಟೋದಲ್ಲಿ ಅಕ್ಟೋಬರ ತಿಂಗಳಲ್ಲಿ ಕರೆಯಬೇಕೆಂದು ಠರಾಯಿಸಿತು. ವಿನಾಶೋ-ನ್ಮುಖವಾದ ಈ ಜಗತ್ತನ್ನು ಗಂಡಾಂತರದಿಂದ ಪಾರು ಮಾಡಲು ವಿಶ್ವದ ಹಿರಿಯ ಮುತ್ಸದ್ದಿಗಳು ಧರ್ಮಪರಿಪಾಲಕರು, ಗುರುತರ ಹೊಣೆಯನ್ನು ಹೊತ್ತು, ಈ ಕಾರ್ಯವನ್ನು ಮುಂದುವರಿಸಿಕೊಂಡು ಹೋಗಬೇಕೆಂದು ಆ ಸಭೆ ನಿರ್ಣಯಿಸಿತು. ದಿಲ್ಲಿಯ ಆರ್ಚಬಿಶಪ್ ಏಂಜಿಲೋ ಫರ್ನಾಂಡೀಸರ ಅಧ್ಯಕ್ಷತೆಯಲ್ಲಿ ಕಾರ್ಯಕಾರಿ ಮಂಡಳವೊಂದು ರಚಿಸಲ್ಪಟ್ಟಿತು. ಅಮೇರಿಕೆಯ ಡಾ. ಹೋಮರ ಜಾಕ್ ಎಂಬವರು ಈ ಮಂಡಳದ ಪ್ರಧಾನ ಕಾರ್ಯದರ್ಶಿಗಳಿದ್ದಾರೆ. ಸಧ್ಯಃ ಪರಿಷತ್ತಿನ ಕಚೇರಿಯು ನ್ಯೂಯಾರ್ಕಿನಲ್ಲಿ ಸ್ಥಾಪಿಸಲ್ಪಟ್ಟಿದೆ. ಈ ವಿಶ್ವಧರ್ಮ – ಶಾಂತಿ ಪರಿಷತ್ತಿನ ಆಮಂ-ತ್ರಣವನ್ನು ಮನ್ನಿಸಿ ನಮ್ಮ ಪೂಜ್ಯ ಜಗದ್ಗುರುಗಳವರು ದಿಲ್ಲಿಗೆ ಹೋಗಿ ವಿಚಾರ-ಗೋಷ್ಠಿಯಲ್ಲಿ ಭಾಗವಹಿಸಿದ್ದರು. ಕ್ಯುಟೋದಲ್ಲಿ ಜರುಗಿದ ಈ ಸಮ್ಮೇಲನಕ್ಕೆ ಭಾರತದ ಪ್ರತಿನಿಧಿಗಳನ್ನು ಆಯ್ಕೆ ಮಾಡಿ ಕಳಿಸುವ ಜವಾಬ್ದಾರಿಯು ಮಹಾತ್ಮಾ ಗಾಂಧಿ ಪ್ರತಿಷ್ಠಾಪನ ಮಂಡಳದವರದಾಗಿತ್ತು. ಆದುದರಿಂದ ಆ ಮಂಡಳದ ಅಧ್ಯಕ್ಷರಾದ ಡಾ. ರಂಗನಾಥ ದಿವಾಕರರು ಜಗದ್ಗುರುಗಳಿಗೆ ಆಮಂತ್ರಣವನ್ನು ನೀಡಿದರು. ಇಷ್ಟೇ ಅಲ್ಲ ಗುರುಗಳೊಡನೆ ವಿದೇಶ ಪ್ರವಾಸದಲ್ಲಿ ಅವರ ಸಂಗಡವೇ ಇದ್ದು ಸರ್ವ ಅನುಕೂಲಗಳನ್ನೊದಗಿಸಲು ಸಹ ಸಿದ್ಧತೆ ಮಾಡುವ ಭರವಸೆಯನ್ನಿತ್ತರು. ಮತ್ತು ಅದೇ ರೀತಿ

ಗುರುಗಳ ವಿದೇಶ ಪ್ರವಾಸದ ಕಾರ್ಯಕ್ರಮವನ್ನು ಡಾ. ದಿವಾಕರರ ನಿರ್ದೇಶದಂತೆ ಶ್ರೀಮಠದಲ್ಲಿ ನಾನೇ ತಯಾರಿಸಿದೆ. ನಾವು ಸಂದರ್ಶಿಸಬೇಕಾದ ಇಂಡೋನೇಶಿಯಾ, ಮಲೇಸಿಯಾ, ಹಾಂಗ್‌ಕಾಂಗ್, ಥಾಯ್‌ಲ್ಯಾಂಡ್. ಸಿಂಗಾಪೂರ ದೇಶಗಳಲ್ಲಿರುವ ಭಾರತ ರಾಯಭಾರಿ ಕಚೇರಿಗೆ ಪತ್ರವ್ಯವಹಾರ ಮಾಡಿ ಗುರುಗಳ ಮತ್ತು ಅವರ ಪರಿವಾರದ ವರ ವಾಸ್ತವ್ಯಕ್ಕೆ ಸಕಲ ಅನುಕೂಲತೆಗಳನ್ನು ಒದಗಿಸಿ ಕೊಟ್ಟರು. ಅಲ್ಲಲ್ಲಿ ಜರುಗಿದ ಯಾವತ್ತು ಕಾರ್ಯಕ್ರಮಗಳಲ್ಲಿ ಗುರುಗಳೊಡನೆ ಭಾಗವಹಿಸಿ ಯಶಸ್ವಿಯಾಗಿ ನಿರ್ವಹಿಸಿ ಶ್ರೇಯೋಭಿವೃದ್ಧಿಯನ್ನುಂಟು ಮಾಡಿದರು. ಈ ಘನತೆಗಾಗಿ ಡಾ. ರಂಗನಾಥ ದಿವಾ ಕರರಿಗೆ ಕೃತಜ್ಞತಾಪೂರ್ವಕ ಅಭಿನಂದನೆಗಳನ್ನರ್ಪಿಸುವೆ.

## ನನ್ನ ಭಾಗ್ಯೋದಯ

ಅನಿರೀಕ್ಷಿತ ಘಟನೆಗಳು ಕಲ್ಪನೆಗೂ ನಿಲುಕದ ಪರಿಣಾಮವನ್ನುಂಟು ಮಾಡು ತ್ತವೆ. ಇವುಗಳ ನೆಲೆಯೇನು ಬೆಲೆಯೇನು ಎಂಬುದನ್ನು ಊಹಿಸುವದು ಸುಲಭವಲ್ಲ. ಅವೆಲ್ಲವೂ ಜಗನ್ನಿಯಾಮಕನ ನಿಯಂತ್ರಣಕ್ಕೆ ಅಧೀನವಾದ ವಿಷಯವೆಂದು ನಂಬಬೇಕ ಲ್ಲದೆ ಗತ್ಯಂತರವಿಲ್ಲ. ೧೯೭೦ ನೇ ಇಸ್ವಿಯ ಅಗಸ್ಟ-ಅಕ್ಟೋಬರ ತಿಂಗಳುಗಳು ನನ್ನ ಜೀವನದಲ್ಲಿ ಮಹೋದಗ್ರಕುಲ, ಪುಣ್ಯ ಸಂಚಯದ ಆವಿರ್ಭಾವ. ಪೂಜ್ಯ ಗುರುವರೇ ಣ್ಯರ ಆಪ್ತ ಕಾರ್ಯದರ್ಶಿಯಾಗಿ ಭಾರತದ ಪ್ರತಿನಿಧಿಯಾಗಿ ಅವರೊಡನೆ ವಿದೇಶ ಪ್ರಯಾಣ ಮಾಡುವ ಮಹದ್ಭಾಗ್ಯ ನನ್ನದಾಗಿತ್ತು. ಇಂಥ ಮಂಗಳಮಯವಾದ ಕನ ಸನ್ನು ಸಹ ಕಂಡರಿಯದವ ನಾನು. ಆಗಾಗ್ಗೆ ಶ್ರೀ ಮಠಕ್ಕೆ ಹೋಗುವದು ನನ್ನ ಪರಿ ಪಾಠ. ಬಾಲ್ಯದಲ್ಲಿ ನನ್ನ ಪೋಷಣೆಯಾದದ್ದು ಈ ಮಠದಲ್ಲಿ. ನನ್ನ ಅಧ್ಯಯನದ ಪ್ರಗತಿಗಾಗಿ ಜೀವನದ ಉಚ್ಛ್ರಾಯತೆಗಾಗಿ ಹಿಂದಿನ ಲಿಂ, ಗುರುಸಿದ್ಧ ರಾಜಯೋಗೀಂ ದ್ರರು ಅನೇಕ ವಿಧವಾಗಿ ಕಾರುಣ್ಯಾದಾರ್ಯವನ್ನು ನೀಡಿ ಮುಂದೆ ನಡೆಸಿದ್ದಾರೆ. ಹೆಚ್ಚೇನು ನಾನು ಮೂರುಸಾವಿರ ಮಠದ ಗುರು ಸಾರ್ವಭೌಮರ ಕಾರುಣ್ಯದ ಕಂದನಾಗಿ ಬೆಳೆದು ಬಂದಿರುವೆ. ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರರು ಜಾಗತಿಕ ಧರ್ಮ ಮತ್ತು ಶಾಂತಿ ಪರಿಷತ್ತಿನಲ್ಲಿ ಭಾಗವಹಿಸಲು ಜಪಾನಕ್ಕೆ ಹೋಗುವರೆಂಬುವ ವಿಷಯ ವನ್ನು ಕೇಳುತಲಿದ್ದೆ. ಗುರುಗಳೊಡನೆ ಆಗ್ನೇಯೇಶಿಯಾ ರಾಷ್ಟ್ರಗಳಿಗೆ ಹೋಗುವ ಭಾಗ್ಯವನ್ನು ನಾನು ಪಡೆದಿರುವೆನೆ ಎಂಬ ಸಂದೇಹ ನನಗಿತ್ತು. ಅದೆಷ್ಟೋ ಮಾನ್ಯರು ಗುರುಗಳೊಡನೆ ಹೋಗಲು ಸಿದ್ಧರಿರುವರೆಂದೂ ಈ ವಿಷಯವಾಗಿ—ಸಮಾಲೋಚನೆ ನಡೆಯುತ್ತಿದೆಯೆಂದೂ ಅಲ್ಲಲ್ಲಿ ನನ್ನ ಸ್ನೇಹಿತರು ಮಾತನಾಡುತ್ತಿದ್ದರು. ಅಗಷ್ಟ ತಿಂಗಳಿನ ಅದೊಂದು ಮಂಗಲ ದಿನ ಪೂಜ್ಯ ಗುರುವರ್ಯರು ಪ್ರಾತಃಕಾಲದ ಲಿಂಗಾರ್ಚನೆ ಯನ್ನು ತೀರಿಸಿಕೊಂಡು ಸಿಂಹಾಸನದಲ್ಲಿ ಆಸೀನರಾಗಿದ್ದರು. ಪ್ರಶಾಂತ ಮುಖಮುದ್ರೆ ಪೂಜೆಯ ಮಂಗಲಮಯ ತೇಜೋವಿಲಾಸ, ಮಂದಸ್ಮಿತ ಕಾರ್ಯಭಾರದ ಗುರುತರ ಹೊಣೆಯ ಗಾಂಭೀರ್ಯ ಇವುಗಳನ್ನು ಅಂದು ನಾನು ಅವರಲ್ಲಿ ಕಂಡೆ. ನನ್ನ ಮೇಲೆ

ಕೃಪಾದೃಷ್ಟಿಯನ್ನು ಬೀರಿದರು. ಕಾರುಣ್ಯಾಮೃತ ಶೀತಲ ಕಿರಣವನ್ನು ಚೆಲ್ಲಿದರು. ಮೌನವನ್ನು ಮುರಿದು ಮಾತನಾಡಿದರು' "ಹಿರೇಮಠರೇ ನಿಮ್ಮ ಭಾಗ್ಯದ ಬಾಗಿಲು ತೆರೆದಂತಾಯ್ತು. ನೀವೆ ನಮ್ಮೊಡನೆ ಜಪಾನದ ವಿದೇಶ ಪ್ರವಾಸದಲ್ಲಿ ಆಪ್ತ ಕಾರ್ಯ ದರ್ಶಿಯಾಗಿ ಬರಬೇಕೆಂಬ ಪ್ರೇರಣೆಯಾಗಿದೆ. ಜನಾಭಿಪ್ರಾಯವೂ ಹೀಗೆಯೇ ಇದೆ. ಗುರುದೇವನ ಪರೋಕ್ಷ ಇಚ್ಛೆಯೂ ಹಾಗೇ ಇದ್ದಿರಬಹುದು. ಈ ವಿಷಯವನ್ನು ಇಂದೇ ಇತ್ಯರ್ಥ ಮಾಡಬೇಕಾಗಿದೆ. ಅದಕ್ಕಾಗಿಯೇ ನಿಮಗೆ ಕರೆಯಲು ಕಳಿಸಿದ್ದೆ. ಡಾಕ್ಟರ ದಿವಾಕರರನ್ನು ಕಂಡು ಮುಂದಿನ ವಿಷಯವನ್ನು ಸಮಾಲೋಚಿಸಿ ಕಾರ್ಯಪ್ರವೃ ತ್ತರಾಗಿರಿ. ಶ್ರೀಗುರುಸಿದ್ಧೇಶನು ನಿಮಗೆ ಕಲ್ಯಾಣ ಮಾಡಲಿ" ಎಂದು ಅಮೃತಾಯ ಮಾನವಾದ ವಚನವನ್ನಿತ್ತರು, ಒಂದು ಕ್ಷಣ, ನೀರವ ಹೃದಯ ಭಾವದಿಂದ ತುಂಬಿತು, ಆನಂದ ತುಂದಿಲನಾದೆ, ಮಾತು ಮೌನದಲ್ಲಿ ಲೀನವಾಯಿತು. ಕೃತಜ್ಞತೆ ಜಾಗೃತ ವಾಯಿತು. ನುಡಿ ಹೊರಹೊಮ್ಮಿತು. ಪೂಜ್ಯರ ಕೃಪೆಗೆ ಪಾತ್ರನಾದೆ. ಶ್ರೀಮಠದ ವಾತ್ಸಲ್ಯದಲ್ಲಿ ಬೆಳೆದ ನನ್ನ ಜನ್ಮಜಾಯಮಾನ ಸಾರ್ಥಕವಾಯಿತೆಂದು ಮನದಲ್ಲಿಯೇ ಮಾತನಾಡಿ ಕೃತಜ್ಞತಾ ಪ್ರಣಾಮಗಳನ್ನರ್ಪಿಸಿ ಅಪ್ಪಣೆಯನ್ನು ಶಿರಸಾವಹಿಸಿ ಕಾರ್ಯ ಪ್ರವೃತ್ತನಾಗುವೆನೆಂದು ಸನ್ನಿಧಿಗೆ ಅರಿಕೆ ಮಾಡಿಕೊಂಡೆ. ಪ್ರಾಸಂಗಿಕ ವಿಷಯಗಳನ್ನು ಸಮಾಲೋಚಿಸಿ ಆಶೀರ್ವಾದ ಪಡೆದುಕೊಂಡು ಡಾ. ದಿವಾಕರರನ್ನು ಕಾಣಲು ಅವರ ನಿವಾಸಕ್ಕೆ ಹೊರಟೆ. ಗುರುಗಳು ಫೋನು ಮಾಡಿ ನಾನು ಅವರೆಡೆಗೆ ಬರುವೆನೆಂಬು ದನ್ನು ತಿಳಿಸಿದ್ದರು. ಅವರು ನನ್ನ ನಿರೀಕ್ಷಣೆಯಲ್ಲಿದ್ದರು. ಡಾ. ದಿವಾಕರರ ಪರಿಚಯ ನನಗಿತ್ತು. ಆದರೆ ನನ್ನ ಪರಿಚಯ ಅವರಿಗೆ ಅಷ್ಟೊಂದಿರಲಿಕ್ಕಿಲ್ಲ. ನನ್ನನ್ನು ಬಾಗಿಲಲ್ಲಿ ಕಂಡೊಡನೆಯೇ ಒಳಗೆ ಕರೆದು ತಮ್ಮ ಪಾರ್ಶ್ವದಲ್ಲಿ ಕುಳ್ಳಿರಿಸಿಕೊಂಡರು, ಅದೆಷ್ಟು ಆತ್ಮೀಯತೆಯಿಂದ ನನ್ನನ್ನು ಕಂಡುಕೊಂಡರೆಂಬುದನ್ನು ಇಲ್ಲಿ ಮೂಡಿಸಲಾರೆ ಮನವರಿತಿದೆ. ಅವರೋರ್ವ ರಾಷ್ಟ್ರೀಯ–ಧಾರ್ಮಿಕ–ಶೈಕ್ಷಣಿಕ–ರಾಜಕೀಯ–ಸಾಮಾ ಜಿಕ ಪ್ರಜ್ಞೆಯುಳ್ಳ ಸಭ್ಯಗೃಹಸ್ಥರು. ಜೀವನದ ತುಂಬೆಲ್ಲ ಅನುಭವದ ಅನೇಕ ಅಂತ ಸ್ತುಗಳನ್ನು ಏರಿದ ವ್ಯಕ್ತಿತ್ವ ಅವರದು. ಮಾಗಿದ ಜೀವನದಲ್ಲಿ ಮುಗಮುಗಿಸುವ ಸ್ವಾನುಭವದ ಪರಿಮಳವನ್ನು ಬೀರುವವರವರು. ಈ ಇಳಿವಯಸ್ಸಿನಲ್ಲಿಯೂ ಅವಿ ಶ್ರಾಂತವಾಗಿ ಪರಿಶ್ರಮ ವಹಿಸುವ ಬಾಳು ಅವರದು. ಏರಿಳಿತಗಳನ್ನು ಅರಿತ ಅವರು ಜೀವನದ ಮೌಲ್ಯವನ್ನು ತಮ್ಮಿಂದ ತಾವೇ ಬಂದೊದಗಿದ ಸುಪ್ರಸಂಗಗಳ ಸದ್ವಿನಿ ಯೋಗ, ಸಾರ್ಥಕ ನಿರ್ವಹಣೆ ಇತ್ಯಾದಿ ಅನೇಕ ವಿಷಯಗಳನ್ನು ಸಮಕ್ಷಮ ಚರ್ಚಿಸಿ ಪ್ರಯಾಣದ ಸಿದ್ಧತೆ ಮಾಡಲು ತಿಳಿಸಿದರು. ವಿಶ್ವಧರ್ಮ ಶಾಂತಿಪರಿಷತ್ತಿನ ಪ್ರಧಾನ ಕಾರ್ಯದರ್ಶಿ ಡಾ. ಹೋಮರ ಜಾಕ್ ಇವರಿಗೆ ನನ್ನ ವಿಷಯ ತಿಳಿಸಿ ಭಾರತದ ಪ್ರತಿನಿಧಿ ಗಳಿಗಿರಬೇಕಾದ ಸ್ಥಾನಮಾನವನ್ನು ದೊರಕಿಸಿಕೊಟ್ಟರು. ಕ್ಯುಟೋದಲ್ಲಿ ಜರಗಿದ ಮಹಾಸಭೆಯ ವೇದಿಕೆಯಲ್ಲಿ ವಿಚಾರವಿನಿಮಯಕ್ಕೊಳಗಾಗಲಿದ್ದ ವಿಷಯಗಳ ರೂಪ ರೇಷೆಯನ್ನು ತಿಳಿಸಿದರು. ಪೂಜ್ಯರು ಆಂಗ್ಲಭಾಷೆಯಲ್ಲಿ ಭಾಷಣವನ್ನು ಮಾಡಬೇಕಾ

ಗಿದ್ದುದರಿಂದ ಸಂಬಂಧಿಸಿದ ವಿಷಯಗಳ ಅಧ್ಯಯನವು ಅಜಸ್ರವಾಗಿ ನಡೆಯಿತು. ಅನೇಕ ವಿಷಯಗಳ ವಿಮರ್ಶೆ ಮಾಡಿದೆವು—ಅನೇಕ ಗ್ರಂಥಗಳ ವಿಚಾರಸರಣಿಯನ್ನು ತಿಳಿದೆವು. ಮಾನ್ಯ ಮಿತ್ರರ ಅನೇಕ ಸಲಹೆ ಸಹಕಾರಗಳನ್ನು—ಸ್ವೀಕರಿಸಿದೆವು. ಹೀಗೆ ಪೂಜ್ಯರ ಆಪ್ತಕಾರ್ಯದರ್ಶಿಯಾಗಿ ವಿನಮ್ರತೆಯಿಂದ ನಿಷ್ಠೆಯಿಂದ ಕಾರ್ಯೋನ್ಮುಖನಾದೆನು.

## ಪ್ರಯಾಣದ ಶುಭಮುಹೂರ್ತ

ಪ್ರಯಾಣದ ಸಿದ್ಧತೆಯಲ್ಲಿ ದಿನಗಳರುಳಿದುದು ತಿಳಿಯಲೇ ಇಲ್ಲ. ಹೊರಡುವ ದಿನ ಬಂದೇಬಿಟ್ಟಿತು. ಕನ್ನಡನಾಡಿನ ಹೆಮ್ಮೆಯ ಹಬ್ಬ ವಿಜಯದಶಮಿ ಸಂಭ್ರಮೋಜ್ವಲತೆಯ ಬೆಳಕನ್ನು ಬೆಳಗಿತು. ಅಕ್ಟೋಬರ ದಿನಾಂಕ ೧೨ ಚೈತ್ರೋತ್ಸವದ ಮಂಗಲಮಯ ಚಂದ್ರವಾರ ಗಗನಮಂಡಲ ಮಧ್ಯಬಿಂದುವಿನಿಂದ ಸರಿದು ಪಶ್ಚಿಮ ದಿಗಂತದೆಡೆ ದಿನಮಣಿ ಸಾಗಿದನು. ಮಹೇಂದ್ರ ಮುಹೂರ್ತದಲ್ಲಿ ಪೂಜ್ಯ ಸನ್ನಿಧಿಯವರು ಹೊರಡಲನುವಾದರು. ಮಠದ ಪಟಾಂಗಣದಲ್ಲಿ ಜನಸಮ್ಮರ್ದ ಕಿಕ್ಕಿರಿದು ತುಂಬಿದೆ. ಮಂಗಲತೂರ್ಯನಾದಗಳು ಮೊಳಗಿದವು. ಭಕ್ತಸಮೂಹ ಮಣಿದು ನಮಿಸಿತು. ಮನ್ನೆಯರು ಮಂಗಳ ನೀರಾಜನವನ್ನು ಬೆಳಗಿದರು. ಕುಸುಮಸ್ತಬಕಗಳ ಸುರಿಮಳೆ. ಮಠದ ಆನೆಗಳು ಗುರುಗಳ ಕೊರಳಿಗೆ ವಿಜಯಮಾಲೆಯನ್ನು ತೊಡಿಸಿ ಚಾಮರವನ್ನು ಬೀಸಿ ಗುರುಗಳ ಕಾರು ಹೊರಡಲು ಅನುವು ಮಾಡಿಕೊಟ್ಟವು. ಹುಬ್ಬಳ್ಳಿಯೇ ಮಠದಲ್ಲಿತ್ತು. ನೆರೆದ ಜನಸ್ತೋಮದ ಜಯಜಯಕಾರ ಧ್ವನಿ ಪ್ರತಿಧ್ವನಿತವಾಗುತ್ತಿರುವಂತೆಯೇ ಪೂಜ್ಯರ ಕಾರು ಮಹಾದ್ವಾರದ ಹೊರವಲಯವನ್ನು ದಾಟಿ ರಾಜವೀಧಿಯಲ್ಲಿ ಸಾಗಿತು. ನೂರಾರು ಕಾರುಗಳು ಹಿಂಬಾಲಿಸಿದವು. ಹುಬ್ಬಳ್ಳಿಯನ್ನು ಹಿಂದುಳಿಸಿ ಕಾರು ಮುಂದೆ ಮುಂದೆ ವೇಗದಿಂದ ಸಾಗಿ ನಮ್ಮ ಹೆಮ್ಮೆಯ ಕನ್ನಡ ನಾಡಿನ 'ಸೀಮ್ಲಾ' ಬೆಳಗಾವಿಯನ್ನು ತಲುಪಿತು. ಸಂಧ್ಯಾಸಮಯ–ಸಮೀರಣನಶೀತಲಸ್ಪರ್ಶ, ಬೆಳಗಾವಿಯ ಚೆಲ್ವಾಂತ ಮಾಮರಗಳ ಮನೋಹರ ವೀಧಿಯಲ್ಲಿ ಗುರುವರ್ಯರ ಕಾರು ಪ್ರಶಾಂತವಾಗಿ ಸಾಗಿ "ಸಾಂಬರೆ" ವಿಮಾನ ನಿಲ್ದಾಣದಲ್ಲಿ ಆಢ್ಯತೆಯಿಂದ ನಿಂತಿದೆ. ಗುರುಗಳನ್ನು ಕರೆದು ತಂದ ಗೌರವವನ್ನು ಹೊತ್ತು ನಿಂತಂತಿದೆ. ನೂರಾರು ಕಾರುಗಳು, ಸಹಸ್ರಾರು ಜನ, ಕರುನಾಡಿನ ಹರಗುರು ಚರಮೂರ್ತಿಗಳು, ಭಕ್ತ ಬಾಂಧವರು ಹಿಗ್ಗಿನ ಸುಗ್ಗಿಯನ್ನು ಸವಿದು, ಪೂಜ್ಯಪಾದರನ್ನು ಬೀಳ್ಕೊಡಲು ಬಂದಿರುವರು, ವೀರಶೈವ ಧರ್ಮಗುರುಗಳು ವಿದೇಶ ಪ್ರಯಾಣಮಾಡುವದು ಬಹುಶಃ ಇದೇ ಮೊದಲು. ನೆರೆದ ಜನಸ್ತೋಮದ ಆನಂದ ನಿರ್ಭರತೆ ವಿಯೋಗಕಾತುರತೆ, ಹರ್ಷಹಾರೈಕೆ ಸುಖಪ್ರವಾಸಗಮನಾಗಮನ ಪ್ರಾರ್ಥನೆ, ಇವೆಲ್ಲವುಗಳನ್ನು ನೋಡಿ ಸಹಿಸುವದೇ ದುಸ್ತರವಾಯಿತು. ಸಂಯಮಶೀಲತೆಯಿಂದ ಸಹಿಸಿದರು ಗುರುಗಳು. ಅಂದಿನ ಆ ಭಾವನಾವಿರ್ಭಾವದ ಸಿರಿಯನ್ನು ನೋಡುವದೇ ಒಂದು ಭಾಗ್ಯ. ಗುರುಗಳು ಮೌನವನ್ನು ಮುರಿದು ಮಾತನಾಡಿದರು." ಬಂಧುಗಳೇ ಕರ್ತವ್ಯದ ಕರೆಗೆ

ಓಗೊಟ್ಟು ಬಹುದೂರ ಹೋಗಿಬರುವೆ, ಶರಣರ ಸಂದೇಶವನ್ನು ಸಾರಿ ಹೇಳಿ ವಿಶ್ವದಲ್ಲಿ ಶಾಂತಿ ಸ್ಥಾಪಿಸಲು ಹೋಗಿ ಬರುವೆ, ಮಾನವ ಕುಲದ ಕಲ್ಯಾಣವೆ ಸರ್ವರ ಗುರಿಯಾಗಿರಲಿ. ನಿಮ್ಮೆಲ್ಲರ ಶುಭೇಚ್ಛೆ ನಮಗೆ ಮಂಗಳಕರಚವಾಗಲಿ, ಸ್ವಾಮಿಯ ಕೃಪೆಯಿರಲಿ, ಇದೋ ಹೊರಟೆವು ಎಂದು ಕೈ ನೀಡಿ ಹರಿಸಿದರು. ಜಯಜಯ ಧ್ವನಿಯು ಉದ್ಘೋಷಿಸುವಾಗಲೇ, ವಿಮಾನವು ಭೈರವಧ್ವನಿಯಿಂದ ಆಶ್ವಾಸನೆಯನ್ನು ನೀಡಿ, ನಮ್ಮೆಲ್ಲರನ್ನು ಕುಳ್ಳಿರಿಸಿಕೊಂಡು, ಗಗನಾಂಗಣದಲ್ಲಿ ಸ್ವಚ್ಛಂದವಾಗಿ ಹೊರಟೇ ಬಿಟ್ಟಿತು. ಮುಂಬೈ "ಶಾಂತಾಕ್ರುಝ" ವಿಮಾನ ನಿಲ್ದಾಣದಲ್ಲಿ ಇನ್‌ಕಮ್‌ಟ್ಯಾಕ್ಸ ಅ. ಕಮೀಶನರ ಶ್ರೀ ವ್ಹಿ. ಆರ್. ಹಿರೇಮಠರನ್ನು ಕಂಡು ಮಾತನಾಡಿ ದಿಲ್ಲಿಯಲ್ಲಿ ಸುಪ್ರೀಂಕೋರ್ಟ ಎಡ್ವೋಕೇಟರಾದ ಶ್ರೀ ಶರಚ್ಚಂದ್ರ ಜವಳಿಯವರ ಆತಿಥ್ಯ ಸ್ವೀಕರಿಸಿ ಕಲಕತ್ತೆಯಲ್ಲಿ ಇನ್‌ಕಮ್‌ಟ್ಯಾಕ್ಸ ಅ. ಕಮೀಶನರ ಶ್ರೀ ಹೊಸಮನಿಯವರಲ್ಲಿ ಆತಿಥ್ಯವನ್ನು ಕೈಕೊಂಡು ದಿನಾಂಕ ೧೫-೧೦-೭೦ ರಂದು ವಿಮಾನಯಾನಮಾಡಿ "ಓಸಾಕಾ" ವಿಮಾನನಿಲ್ದಾಣದಲ್ಲಿ ಗಗನನೌಕೆಯಿಂದ ಇಳಿದೆವು.

ವಿಶ್ವಧರ್ಮಶಾಂತಿ ಪರಿಷತ್ತಿನ ಅಧಿಕಾರಿಗಳು ಸ್ವಾಗತಗೈದು ಅಲ್ಲಿಂದ ನಮ್ಮನ್ನು ಕಾರಿನಲ್ಲಿ ಕರೆದುಕೊಂಡು ಕ್ಯೊಟೋ (Kyoto) ಗ್ರ್ಯಾಂಡ್ ಹೊಟೆಲಿನಲ್ಲಿ ಅತ್ಯಾಧುನಿಕ ಸಲಕರಣೆಗಳಿಂದ ಸುಸಜ್ಜಿತವಾದ ಬಿಡಾರಕ್ಕೆ ನಮ್ಮನ್ನು ಕರೆದೊಯ್ದರು. ಅಂದು ನಮಗೆಲ್ಲ ವಿಶ್ರಾಂತಿ. ಪೂಜ್ಯರ ನಿತ್ಯಕ್ರಿಯೆಗಳಿಗಾಗಲೀ, ಲಿಂಗಾರ್ಚನಾದಿ ಧಾರ್ಮಿಕವಿಧಿಗಳಿಗಾಗಲೀ ಯಾವುದೇ ವ್ಯತ್ಯಯ ಬಾರದಂತೆ ವ್ಯವಸ್ಥೆಯನ್ನೇರ್ಪಡಿಸಿದ್ದರು. ಧಾರ್ಮಿಕ ಸಂಪ್ರದಾಯದಂತೆ ಗುರುಗಳು ಸ್ನಾನ ಪೂಜಾ ತೀರ್ಥಪ್ರಸಾದಗಳನ್ನು ಯಥಾವಿಧಿ ಪೂರೈಸಿಕೊಳ್ಳುತ್ತಿದ್ದರು. ಅಕ್ಟೋಬರ ದಿನಾಂಕ ೧೫ ರಿಂದ ೨೫ರ ವರೆಗೆ ಗುರುಗಳು ಕೇವಲ ಹಣ್ಣು-ಹಂಪಲ, ಹಾಲು ಇವುಗಳಿಂದಲೇ ತೃಪ್ತಿಯನ್ನು ಹೊಂದುತ್ತಿದ್ದರು. ವಿದೇಶಗಳಲ್ಲಿಯೂ ಕೂಡ ಗುರುಗಳು ಕೈಕೊಂಡ ಸ್ವಯಂಸೇವೆ ಪೂಜಾನಿಷ್ಠೆ ಶುದ್ಧ ಪ್ರಸಾದ ಸೇವನೆ ನಿಷ್ಠುರ ವ್ರತಪಾಲನೆ ಇವುಗಳನ್ನು ನೋಡಿ ಅತ್ಯಂತ ಸಮೀಪ ವರ್ತಿಯಾದ ನನಗೂ ಆಶ್ಚರ್ಯವನ್ನುಂಟು ಮಾಡಿದವು. ಪ್ರಾತಃ ಕಾಲ ೫ ಘಂಟೆಗೆ ಎದ್ದು ೮-೨೦ರ ವಳಗಾಗಿ ಪೂಜಾ ಪ್ರಸಾದಗಳನ್ನು ತೀರಿಸಿ ಸಭೆಗೆ ಹೋಗಲು ತಯಾರಾದರೆಂದರೆ ಪುನಃ ರಾತ್ರಿ ೮ ಘಂಟೆಯ ವರೆಗೆ ಹಾಗೆಯೇ ನಿರಾಹಾರದಿಂದ ಇರುತ್ತಿದ್ದರು. ಮಧ್ಯಾಹ್ನದಲ್ಲಿ ಪರಿಷತ್ತಿನ ಮಂದಿರದಲ್ಲಿ ಎಲ್ಲ ಪ್ರತಿನಿಧಿಗಳ ಊಟದ ವ್ಯವಸ್ಥೆ ಪೂರೈಸುತ್ತಲಿತ್ತು. ಆದರೆ ಗುರುಗಳು ಆ ಸಮಯದಲ್ಲಿ ಒಂದೆಡೆ ಕುಳಿತು ಪರಿಷತ್ತಿನಲ್ಲಿ ಚರ್ಚಿಸಲ್ಪಡಲಿರುವ ವಿಷಯಗಳ ಚಿಂತನ ಮಾಡುತ್ತ ಕಾಲಕಳೆಯುತ್ತಿದ್ದರು. ತಮಗೆ ಹಸಿವು ಆಗುವದಿಲ್ಲವೇ ಎಂದು ನಾನು ಸಖ್ಯದಿಂದ ಕೇಳಿದರೆ ಅದನ್ನು ವಿಚಾರಿಸಲೂ ಸಮಯವಿಲ್ಲಾ. ಹಿರೇಮಠರೇ, 'ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ' ಎಂಬ ಗೀತೆಯ ಮಾತನ್ನು ಮರೆತಿರುವಿರಾ ಎಂದು ಕೇಳಿ ಮಂದಸ್ಮಿತರಾಗುತ್ತಿದ್ದರು. ಇದು ಶ್ರೀಗಳ ಸಂಯಮ ಜೀವನ.

## ಕ್ಯುಟೋದಲ್ಲಿ ಸಮ್ಮೇಳನದ ಪ್ರಾರಂಭ

ಅಕ್ಟೋಬರ ದಿ. ೧೬ ಶುಕ್ರವಾರ ಪ್ರಾತಃಕಾಲ ೯-೩೦ ಗಂಟೆಗೆ ವಿಶ್ವಧರ್ಮ ಶಾಂತಿ ಪರಿಷತ್ತಿನ ಪೂರ್ಣಾಧಿವೇಶನ ( Plenary Session ) ಪ್ರಾರಂಭವಾಯಿತು. ಕ್ಯುಟೋದಿಂದ ಸರಾಸರಿ ಅಂತರದಲ್ಲಿರುವ ಅಂತರ-ರಾಷ್ಟ್ರೀಯ ಸಭಾ ಮಂದಿರಕ್ಕೆ ( International Conference Hall ) ಪ್ರತಿನಿಧಿಗಳನ್ನೆಲ್ಲರನ್ನೂ ಕರೆದೊಯ್ಯುತ್ತಿದ್ದರು. ಆ ಭವ್ಯ ಸೌಧ ಸುತ್ತುವರಿದ ಗಿರಿಶಿಖರ ಶ್ರೇಣಿಗಳ ಮಧ್ಯದಲ್ಲಿ ಪ್ರಕೃತಿಯ ಚೆಲುವನ್ನೇ ಮೈಗೂಡಿಸಿಕೊಂಡಂತೆ ನಿಂತಂತಿದೆ. ಅತ್ಯಾಧುನಿಕ ವಿದ್ಯುದ್ದೀಪ ರಚನೆಯಿಂದ, ಅನೇಕ ಯಾಂತ್ರಿಕ ಸಲಕರಣೆಗಳಿಂದ, ಟೆಲಿವಿಜನ್, ಚಲನಚಿತ್ರ ವ್ಯವಸ್ಥೆ, ಟೇಪರಿಕಾರ್ಡಿಂಗ್, ವಿವಿಧ ವರ್ಣರಂಜಿತ ಚಿತ್ರ, ಶಿಲ್ಪಕಲೆ ಸೀತಲಾಗಾರ ರಚನೆ ಇತ್ಯಾದಿ ವೈವಿಧ್ಯಗಳಿಂದ ಮೆರಗು ಪಡೆದಿದೆ. ಜಪಾನದ ಅತ್ಯಂತ ಪ್ರಭಾವಿ ಧರ್ಮವಾದ ಬೌದ್ಧ ಮತದ ಸಾಕ್ಷಾತ್ ಪ್ರತೀಕವಾದ ಆ ಕ್ಯುಟೋ ನಗರಕ್ಕೆ ಈ ಮಂದಿರ ಕಳಸಪ್ರಾಯವಾಗಿ ಕಂಗೊಳಿಸುತ್ತದೆ.

ಈ ವಿಶ್ವಧರ್ಮ ಮತ್ತು ಶಾಂತಿ ಪರಿಷತ್ತಿಗೆ ಪ್ರಪಂಚದ ನಾಲ್ವತ್ತು ರಾಷ್ಟ್ರಗಳಿಂದ ಮೂರು ನೂರಕ್ಕೂ ಮೇಲ್ಪಟ್ಟು ಪ್ರತಿನಿಧಿಗಳು ಪ್ರತ್ಯಕ್ಷ ಭಾಗವಹಿಸಿದ್ದರು. ಜಗತ್ತಿನಲ್ಲಿ ಶಾಂತಿ ಪ್ರತಿಷ್ಠಾಪನೆಯಾಗುವಂತೆ ಕಾರ್ಯನಿರ್ವಹಣೆಯನ್ನು ರೂಪಿಸಲು ಧರ್ಮಗುರುಗಳೂ ಧರ್ಮಪರಿಪಾಲಕರೂ ಧಾರ್ಮಿಕ ಪ್ರವೃತ್ತಿಯುಳ್ಳವರೂ ವಿಶ್ವಶಾಂತಿಯಲ್ಲಿ ಆಸಕ್ತಿಯುಳ್ಳವರೂ ಹೀಗೆ ಒಂದು ಕಡೆ ವಿವಿಧ ಮತ ಪಂಥ ಪಂಗಡಗಳ ಜನರು ಸೇರಿದ್ದು ಪ್ರಪಂಚದ ಇತಿಹಾಸದಲ್ಲಿಯೇ ಅದ್ವಿತೀಯವಾದ ಘಟನೆಯಾಗಿತ್ತೆಂದು ಹೇಳಬಹುದು. ಹಿಂದೂ, ಜೈನ, ಸೀಖ, ಬೌದ್ಧ, ಕ್ರಿಶ್ಚಿಯನ್, ಮುಸ್ಲಿಂ, ಬಾಹಾಯಿ, ಅಹಮ್ಮದೀಯ, ಫಾರಸಿ, ಸಿಂಟೋ-ಕನ್‌ಫ್ಯೂಶಿಯನ್, ಚೀನ. ಜ್ಯೂ ಮುಂತಾದ ಭಿನ್ನ ಭಿನ್ನ ಧರ್ಮದವರು ತಮ್ಮ ಪ್ರಭೇದಗಳನ್ನು ಮರೆತು ಮಾನವ ಧರ್ಮದ ಸರ್ವೋತ್ತಮ ಧ್ಯೇಯವನ್ನು ಚರ್ಚಿಸಿ ಶಾಂತಿಯನ್ನು ಪ್ರಸ್ಥಾಪಿಸಲು ಒಂದೆಡೆ ಸೇರಿದ ಅಪ್ರತಿಮ ಸಮ್ಮೇಲನವು ಇದಾಗಿದ್ದಿತು. ಇಲ್ಲಿ ತರತಮ ಭೇದ ಭಾವಕ್ಕೆ ಆಸ್ಪದವಿರಲಿಲ್ಲ. ಕನಿಷ್ಠ ಗರಿಷ್ಠ, ಹೆಚ್ಚು ಕಡಿಮೆ, ಮೇಲೆ ಕೆಳಗೆ ಎಂಬ ಕ್ಷುಲ್ಲಕ ವಿಚಾರಗಳ ಗೊಂದಲವಿರಲಿಲ್ಲ, ವಿಶ್ವಬಾಂಧವ್ಯವೇ ಸರ್ವರ ಗುರಿಯಾಗಿತ್ತು. ಸೌಹಾರ್ದತೆ ಸಹಿಷ್ಣುತೆ, ಸಹಕಾರ ಭಾವನೆ ಇವೇ ಉತ್ತಮ ಆದರ್ಶಗಳಾಗಬೇಕೆಂದು ಸಾರಿ ಹೇಳಲು ಕೂಡಿದಂತಿತ್ತು ಈ ಮಾನ್ಯಾಜನಸ್ತೋಮ ೧) ಮಾನವೀಯ ಹಕ್ಕು ಬಾಧ್ಯತೆಗಳ ಸಂರಕ್ಷಣೆಯಿಂದ ಕೂಡಿದ ಶಾಂತಿ ೨) ಆರ್ಥಿಕ ಸಾಮಾಜಿಕ ದೃಷ್ಟಿಯಿಂದ ಹಿಂದುಳಿದ ರಾಷ್ಟ್ರ ಪ್ರಗತಿಪರವಾದ ಶಾಂತಿ, ೩) ಮಾರಕ ಶಸ್ತ್ರಾಸ್ತ್ರಗಳ ಸಂನ್ಯಾಸಯುಕ್ತವಾದ ಶಾಂತಿ, ಇತ್ಯಾದಿ ವಿಷಯಗಳು ವಿಶೇಷ ಆಸ್ಥೆಯಿಂದ ಈ ಸಭೆಯಲ್ಲಿ ಚರ್ಚಿಸಲ್ಪಡುತ್ತಿದ್ದವು. ಶಾಂತಿ ಸ್ಥಾಪನೆಗೆ ಅವಶ್ಯವಿದ್ದ ಶಿಕ್ಷಣ ಪ್ರಸಾರ, ಜ್ಞಾನ

ಪ್ರಸಾರದ ಸಾಧನಗಳ ಮೂಲಕ ಶಾಂತಿ ಪ್ರಚಾರ, ಅವಶ್ಯವಿದ್ದ ಕಾಯಿದೆ ಕಾನೂನು ರಚಿಸುವದು, ವಿವಿಧ ಧರ್ಮದವರು ಪರಸ್ಪರ ಸಹಕರಿಸಿ ಶಾಂತಿ ಪ್ರಸ್ಥಾಪಿಸುವಂತೆ ಮಾಡುವದು ಇತ್ಯಾದಿ ಕ್ರಮಗಳಿಂದ ಕಾರ್ಯೋಪಕ್ರಮವನ್ನು ಮಾಡಬೇಕೆಂದು ವಿಶ್ವ ಧರ್ಮ ಶಾಂತಿ ಸಮ್ಮೇಳನವು ನಿರ್ಣಯಿಸಿತು. ಈ ಸಮ್ಮೇಳನಕ್ಕೆ ಜಗತ್ತಿನ ನಾನಾ ಭಾಗ ಗಳಿಂದ ಪ್ರತಿನಿಧಿಗಳಲ್ಲದೆ ಅನೇಕ ಪ್ರತಿಷ್ಠಿತ ವ್ಯಕ್ತಿಗಳು ಬಂದಿದ್ದರು. ದ್ವಾರಕಾಪೀಠದ, ಮತ್ತು ಕಾಶ್ಮೀರ ಪೀಠದ ಶಂಕರಾಚಾರ್ಯರ ಪ್ರತಿನಿಧಿಗಳು, ರಾಮಕೃಷ್ಣ ಮಿಶನ್, ಭಾರತೀಯ ವಿದ್ಯಾಭವನ ಈ ಸಂಸ್ಥೆಗಳಿಂದಲೂ ಪ್ರತಿನಿಧಿಗಳು ಭಾಗವಹಿಸಿದ್ದರು. ಸರಾಸರಿ ಒಂದು ವಾರದ ವರೆಗೆ ನಡೆದ ಈ ಸಮ್ಮೇಲನ ಮತ್ತು ಉಪ ಸಮಿತಿಗಳಲ್ಲಿ ಭಾಗವಹಿಸಿದ ಪ್ರತಿಷ್ಠಿತ ವ್ಯಕ್ತಿಗಳು ಮಾನವೀಯ ದೃಷ್ಟಿಕೋನದಿಂದ ತಮ್ಮ ತಮ್ಮ ವಿಷಯಗಳನ್ನು ಪ್ರಸ್ಥಾಪಿಸುತ್ತಿದ್ದರು. ಪರಿಷತ್ತಿನ ಗೌರವ ಕಾರ್ಯದರ್ಶಿ ರೆ. ಕೋಶೋ ಓಟಾನಿ ( Rev Kosho ohtoni) ಜಪಾನಿನ ಧರ್ಮ ಸಂಸ್ಥೆಯ ಅಂತರರಾಷ್ಟ್ರೀಯ ನಿರ್ವಾಹನಾಧಿಕಾರಿ ರೆ. ನಿಕ್ಯೊ ನಿವ್ಯಾನೋ (Rev Nikhyo Niwano), ಧಾರ್ಮಿಕ ಸ್ವಾತಂತ್ರ್ಯದ ಅಂತರರಾಷ್ಟ್ರೀಯ ಸಂಘದ ಅಧ್ಯಕ್ಷ ಮತ್ತು ಕ್ರಿಯಾಸಮಿತಿಯ ಪ್ರತಿನಿಧಿ ಡಾ. ದಾನಾ ಮ್ಯಾಕ್‌ಲೀನ ಗ್ರೀಲೆ Dr. Dana Mclean Greeley, Chairman of the World Conferance as President of the International Association for Religious Freedom), ಆರ್ಚಬಿಶಪ್ ಆ್ಯಂಜಲೋ ಫರ್ನಾಂಡಿಸ್ (Arch Bishop Angelo Fernandes), ಪ್ರೊ. ಆರ್. ಜೆ. ವೆಬ್ಲೋಸ್ಕಿ ( Prof. R. J. Weblowsky, professor of Comparative Religion, Habrew University, Jerusalem), ಡಾ. ಯುಗೆನೆ ಕಾರಸನ್ ಬ್ಲೇಕ್ (Dr. Eugene Carson Blake Council Societies of the World Council of Churches), ಸರ್ ಮೊಹಮ್ಮದ ಝೂಫ್ರುಲ್ಲಾಖಾನ ( President of the International Court of Justice Hague), ಪರಿಷತ್ತಿನ ಪ್ರಧಾನಕಾರ್ಯದರ್ಶಿ ಡಾ. ಹೋಮರ ಜಾಕ್ ( Dr. Homer A Jack ) ಡಾ. ರಂಗನಾಥ ದಿವಾಕರ ಮುಂತಾದ ಪ್ರತಿಷ್ಠಿತ ವ್ಯಕ್ತಿಗಳು ಧರ್ಮ ಮತ್ತು ಶಾಂತಿಗಳ ಪರಸ್ಪರ ಸಂಬಂಧವನ್ನು ಅವಶ್ಯಕತೆಯನ್ನು ಒಳ್ಳೇ ವಿದ್ವತ್ಪೂರ್ಣವಾಗಿ ಸಭೆಯಲ್ಲಿ ಪ್ರಸ್ತಾಪಿಸಿದರು.

## ಪೂಜ್ಯ ಜಗದ್ಗುರುಗಳ ಭಾಷಣ

ಈ ಮಹಾಸಭೆಯ ಕಾರ್ಯಕ್ರಮಗಳ ಪುಸ್ತಿಕೆಯು ಮೊದಲೇ ಪ್ರಕಟವಾಗಿತ್ತು. ಈ ಪರಿಷತ್ತಿನ ವೈಶಿಷ್ಟ್ಯವೆಂದರೆ ಉಪಸಮಿತಿಗಳಲ್ಲಿ ಮತ್ತು ಕ್ರಿಯಾಸಮಿತಿಗಳಲ್ಲಿ ಜಾಗತಿಕ ಧರ್ಮ ಮತ್ತು ಶಾಂತಿ ಸಮನ್ವಯ ವಿಷಯವಾಗಿ ಅತ್ಯಂತ ನಿಷ್ಠೆಯಿಂದ ವಿಚಾರವಿನಿಮಯಮಾಡಿ ಕಾರ್ಯರೂಪದಲ್ಲಿ ತರುವ ರೂಪರೇಷೆಯನ್ನು ಸಿದ್ಧಗೊಳಿಸುವದಾಗಿತ್ತು. ಆದುದರಿಂದ ಭಾಷಣಗಳಿಗೆ ವಿಶೇಷ ಮಹತ್ವವಿರಲಿಲ್ಲ. ಜಗದ್ಗುರು

ಗಳ ಭಾಷಣದ ಒಂದು ಪ್ರತಿಯನ್ನು ಪರಿಷತ್ತಿಗೆ ಮೊದಲೇ ಕಳಿಸಿ ಕಾರ್ಯಕ್ರಮಪಟ್ಟಿ ಯಲ್ಲಿ ಸೇರಿಸಲು ಕೇಳಿಕೊಂಡಿದ್ದೆವು. ಆದರೆ ಸಮಯಾಭಾವದಿಂದ ಆದಾಗಲೆ ಕೊನೆ ಗೊಮ್ಮೆ ಕಾರ್ಯಕ್ರಮಪಟ್ಟಿಯು ಪೂರ್ಣಸಿದ್ಧವಾಗಿದ್ದಮೂಲಕ, ನಮ್ಮ ಗುರುಗಳಿಗೆ ಭಾಷಣಮಾಡಲು ಸಮಯವನ್ನು ದೊರಕಿಸಲು ಸ್ವಲ್ಪ ತೊಂದರೆಯಾಯಿತು. ಆದರೂ ನಮ್ಮ ಗುರುವರ್ಯರ ಸ್ಥಾನಮಾನ ವಿದ್ವತ್ತು ಯೋಗ್ಯತೆ, ಜಾಗತಿಕ ಶಾಂತಿ ಪ್ರತಿಷ್ಠಾಪನೆಗಾಗಿ ಅವರಲ್ಲಿರುವ ಕಳಕಳಿ, ಅವರ ಆಗಮನದ ನೈಜೋದ್ದೇಶದಮಹತಿ, ಈ ಮಹಾಸಭೆಯ ಆದರ್ಶ, ಧರ್ಮಗುರುಗಳಿಗೂ ಧರ್ಮಪರಿಷತ್ತಿಗೂ ಇರುವ ಅನ್ಯೋನ್ಯಸಾರ್ಥಕಸಂಬಂಧ, ಇತ್ಯಾದಿ ವಿಷಯಗಳನ್ನು ಕಮಿಟಿಯ ಹಿರಿಯರೆದುರಿಗೆ ಪರಿಣಾಮಕಾರಿಯಾಗಿ ಪ್ರಸ್ತಾಪಿಸಿದ ಮೇಲೆ ಶ್ರೀ ಏಂಜಿಲೋ ಫರ್ನಾಂಡೀಸರ ಅಧ್ಯ ಕ್ಷತೆಯಲ್ಲಿ ಕೂಡಿದ ವಿಷಯ ನಿಯಾಮಕ ಕಮಿಟಿಯ ಸದಸ್ಯರು, ಗುರುಗಳ ಆಗಮನ ಉದ್ದೇಶವನ್ನು ಮನಗಂಡು. ಕಾರ್ಯಭಾರದ ಗೌರವವನ್ನರಿತು ತಾ. ೧೭-೧೦-೭೦ ರಂದು ಪೂರ್ಣಾಧಿವೇಶನದಲ್ಲಿ ಭಾಷಣಮಾಡಲು ಸಮಯವನ್ನು ಒದಗಿಸಿಕೊಟ್ಟರು. ಅಂದಿನ ಸಭೆಗೆ ಪ್ರೊ. ಮಹಮ್ಮದ ಹುಸೇನ ಎಂಬವರು ಅಧ್ಯಕ್ಷತೆವಹಿಸಿದ್ದರು. ಅಂದು ಮಧ್ಯಾಹ್ನ ೨-೩೦ ಗಂಟೆಗೆ ಸರಿಯಾಗಿ ಪ್ರಧಾನಕಾರ್ಯದರ್ಶಿ ಡಾ. ಹೋಮರ ಜಾಕರಿಂದ ನನಗೆ ಒಂದು ನಿವೇದನೆಪತ್ರ ಬಂತು :

"Dear Prof. Hiremath, Let Your Swamiji H. H. Rajayogeendra deliver his address. Please lead him to the Platform exactly at 2-30 p. m. Give a brief note of introduction of Swamiji to Prof. Husain."

ಪ್ರಧಾನಕಾರ್ಯದರ್ಶಿಗಳ ನಿರ್ದೇಶದಂತೆ ಪೂಜ್ಯ ಗುರುಗಳನ್ನು ವ್ಯಾಸಪೀಠಕ್ಕೆ ಕರೆದುತಂದೆ. ಡಾ. ಹೋಮರ ಜಾಕರು ಸ್ವಾಗತಿಸಿ ಆಸನವನ್ನು ಅಲಂಕರಿಸಲು ಕೇಳಿ ಕೊಂಡರು. ಗುರುಗಳು ಪೀಠಾಸೀನರಾದ ಮೇಲೆ ಡಾ. ಹುಸೇನರು ಶ್ರೀಗಳ ಪರಿ ಚಯಮಾಡಿಕೊಟ್ಟರು. ಶ್ರೀಗಳ ಪ್ರಶಾಂತಮುಖಮುದ್ರೆ, ಕಾಷಾಯವೇಷ, ಲಲಾಟ ದಲ್ಲಿ ವಿಭೂತಿಯ ತ್ರಿವಳಿ, ಕೈಯಲ್ಲಿ ಯೋಗದಂಡ. ಇವುಗಳನ್ನು ನೋಡಿ ನೆರೆದ ಪ್ರಜ್ಞಾವಂತ ಜನ ಗೌರವಾನಂದಗಳನ್ನು ವ್ಯಕ್ತಪಡಿಸಿದರು. ಪೂಜ್ಯರು ಸಭಿಕರ ಕರತಾಡನ ಹರ್ಷೋದ್ಗಾರಗಳ ನಡುವೆ ತಮ್ಮ ಭಾಷಣವನ್ನು ಪ್ರಾರಂಭಿಸಿದರು. "Fellow Seekers of Peace" ಎಂಬುದಾಗಿ ತಮ್ಮ ಭಾಷಣವನ್ನು ಪ್ರಾರಂಭಿಸದ ಕೂಡಲೇ ಇಡೀ ಜನಸ್ತೋಮ ಏಕಮುಖವಾಗಿ ಅಭಿನಂದನೆಯ ಆನಂದೋದ್ಗಾರ ಗಳನ್ನು ದೀರ್ಘವಾದ ಕರತಾಡನಗಳ ಮೂಲಕ ಪ್ರದರ್ಶಿಸಿದರು. ಚಿತ್ರಗ್ರಾಹಕರು ಫ್ಲ್ಯಾಶ್‌ಗನ್ನುಗಳ ಪ್ರಭಾವಳಿಯನ್ನೇ ಬೆಳಗಿದರು. ಒಂದೆರಡು ನಿಮಿಷ ಎಲ್ಲೆಲ್ಲಿಯೂ ಮೌನ. ಪೂಜ್ಯ ಗುರುಗಳು ಧರ್ಮ ಮತ್ತು ಶಾಂತಿ ಸಮನ್ವಯ ವಿಚಾರವನ್ನು ಕೂಲಂಕಷವಾಗಿ ವಿಮರ್ಶಿಸಿ—"ವೀರಶೈವ ಧರ್ಮವು ವಿಶ್ವಧರ್ಮಕ್ಕೆ ಪೂರಕವಾಗಿದೆ.

ವೀರಶೈವ ಶರಣರು ಸಾರಿ ಹೇಳಿದ ಕಾಯಕವೇ ಕೈಲಾಸವೆಂಬ ವಿಚಾರವು ವಿಶ್ವಗ್ರಾಹಿಯಾಗಿದೆ. ಇದೂ ಅಲ್ಲದೆ ಜಾತ್ಯಾತೀತಭಾವನೆ ಮಾನವೀಯಮೌಲ್ಯಗಳು, ಕ್ರಿಯಾ-ಜ್ಞಾನಸಮನ್ವಯ, ಬಹಿರಂತರಂಗಶುದ್ಧಿ, ಆಚಾರವಿಚಾರದಲ್ಲಿ ಶುಚಿ ಸದ್ಭಾವನೆ, ಲೋಕಕಲ್ಯಾಣ, ಅವಿರತಸೇವೆ, ವಿಶ್ವಬಾಂಧವ್ಯ. ಸಹಕಾರಿಜೀವನದ ಅವಶ್ಯಕತೆ ಇತ್ಯಾದಿ ವಿಷಯಗಳನ್ನು ನಿರೂಪಿಸಿದರು. ಇದೂ ಅಲ್ಲದೆ ವೀರಶೈವ ಶರಣರು ವಿಚಾರಕ್ಕಿಂತಲೂ ಆಚಾರಕ್ಕೆ, ಕರ್ತವ್ಯಪ್ರತಿಷ್ಠೆಗಿಂತಲೂ ಕಾಯಕನಿಷ್ಠೆಗೆ ಮಹತ್ವವನ್ನು ಕೊಟ್ಟಿರುವರೆಂಬುದನ್ನು ವಿಶದಪಡಿಸಿದರು. ಈ ತತ್ವಗಳನ್ನು ಕೃತಿಯಲ್ಲಿ ತರುವದರಿಂದಲೇ ಜಗತ್ತಿನಲ್ಲಿ ಶಾಂತಿಯನ್ನು ಪ್ರಸ್ಥಾಪಿಸಬಹುದು. ಇದೇ ವೀರಶೈವರ ಬಾಳಿನ ಉಸಿರು" ಎಂಬುದಾಗಿ ಒಳ್ಳೇ ಅಸ್ಖಲಿತವಾಗಿ ಇಂಗ್ಲೀಷಿನಲ್ಲಿ ಭಾಷಣಮಾಡಿದರು. ಅನೇಕ ವಿದ್ವಾಂಸರು ಗುರುಗಳಿಗೆ ಹೃತ್ಪೂರ್ವಕ ಅಭಿನಂದನೆಗಳನ್ನರ್ಪಿಸಿದರು. ಸಭಿಕರು ಹರ್ಷ ನಿರ್ಭರತೆಯಿಂದ ಆಲಿಸಿದರು. ಇನ್ನೊಂದು ವೈಶಿಷ್ಟ್ಯವೆಂದರೆ ಭಾರತದಿಂದ ಬಂದ ಅನೇಕ ಪ್ರತಿನಿಧಿಗಳಲ್ಲಿ ನಮ್ಮ ಜಗದ್ಗುರುಗಳೋರ್ವರಿಗೆ ಆ ಮಹಾಸಭೆಯಲ್ಲಿ ಜಾಗತಿಕ ಸಮ್ಮೇಲನದಲ್ಲಿ ಭಾಷಣಮಾಡಲು ಅವಕಾಶ ದೊರೆತದ್ದು ನಿಜವಾಗಿಯೂ ನಮ್ಮ ದೇಶಕ್ಕೂ ನಮ್ಮ ನಾಡಿಗೂ ಸಮಾಜಕ್ಕೂ ದೊರೆತ ಅಪೂರ್ವಗೌರವವೆಂದು ಹೇಳಲೇಬೇಕು. ಭಾರತೀಯ ಧಾರ್ಮಿಕ ಇತಿಹಾಸದಲ್ಲಿ ವೀರಶೈವ ಧರ್ಮಗುರುಗಳು ವಿದೇಶ ಪ್ರಯಾಣಮಾಡಿ ಇಂಥ ಭವ್ಯವಾದ ಸಮ್ಮೇಲನದಲ್ಲಿ ಭಾಷಣಮಾಡಿ ಪ್ರತಿಷ್ಠೆಯನ್ನು ಗಳಿಸಿದ್ದೊಂದು ನಮ್ಮ ಧರ್ಮದ ಐತಿಹಾಸಿಕ ಘಟನೆಯಾಗಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ನಿತ್ಯದ ಕಾರ್ಯಕ್ರಮದಂತೆ ಗುರುಗಳು ಕ್ರಿಯಾಸಮಿತಿಗಳಲ್ಲಿಯೂ ಭಾಗವಹಿಸಿ ಸಮಯೋಚಿತ ಸೂಚನೆಗಳನ್ನು ಮಾಡುತ್ತಿದ್ದರು. ಮಹಾಸಭೆಯಲ್ಲಿ ಗುರುಗಳು ಅತಿಮುಖ್ಯವಾದ ೧೦ ಸೂಚನೆಗಳನ್ನು ಮಂಡಿಸಿದರು. ಅದರಲ್ಲಿ ಮೊದಲನೆಯ ಸೂಚನೆಯನ್ನು— "A World Parliament of religious consisting of the representatives of all the religions in the World should be set up." ಜಗತ್ತಿನ ಎಲ್ಲ ಧರ್ಮಗಳ ಪ್ರತಿನಿಧಿಗಳ ಪ್ರಾತಿನಿಧ್ಯವುಳ್ಳ ಒಂದು ಮಹಾಸಭೆಯನ್ನು ಸ್ಥಾಪಿಸಬೇಕೆಂದು ಮಂಡಿಸಿದ್ದರು. ಈ ಸೂಚನೆಯು ಇದಾಗಲೇ ಕಾರ್ಯರೂಪಕ್ಕೆ ಬಂದು ನ್ಯೂಯಾರ್ಕದಲ್ಲಿ ಈ ಸಂಸ್ಥೆ ಸ್ಥಾಪಿಸಲ್ಪಟ್ಟಿದೆ. ಭಾರತದಿಂದ ೧೫ ಪ್ರತಿನಿಧಿಗಳು ಆಯ್ಕೆಯಾಗಿದ್ದಾರೆ. ಅದರಲ್ಲಿ ಕರ್ನಾಟಕದಿಂದ ೧) ಪೂಜ್ಯ ಜಗದ್ಗುರುಗಳು ೨) ಡಾ. ರಂಗನಾಥ ದಿವಾಕರ ಮತ್ತು ೩) ಪ್ರೊ. ಎ. ಎಲ್. ಹಿರೇಮಠ ಇವರುಗಳು ಆಯ್ಕೆಯಾಗಿದ್ದಾರೆಂದು ಪ್ರಧಾನಕಾರ್ಯದರ್ಶಿ ಡಾ. ಹೋಮರ ಜಾಕರು ತಿಳಿಸಿದ್ದಾರೆ. ಗುಜರಾಥ ಯೂನಿವ್ಹರ್ಸಿಟಿಯ ಉಪಕುಲಪತಿ ಡಾ. ಉಮಾಶಂಕರ ಜೋಶಿ, ಮಹಾರಾಷ್ಟ್ರದ ಸರ್ವೋದಯ ಕಾರ್ಯ ಧುರೀಣ ಶ್ರೀ ಶಂಕರರಾವ ದೇವ, ಪಂಜಾಬ ಯೂನಿವ್ಹರ್ಸಿಟಿಯ ಪ್ರೊಫೆಸರ ಡಾ. ಶೇಷಗಿರಿರಾವ, ಸಿಂಗಾಪೂರದ A. I. ಸೇಲ್ಸ ಮ್ಯಾನೇಜರ ಪಾರಸಿ ಧರ್ಮದ ಸದ್ಗೃಹಸ್ತ

ಶ್ರೀ ಬಿ. ಆರ್. ವಕೀಲ ಇನ್ನೂ ಹಲ ಕೆಲವು ಪ್ರತಿನಿಧಿಗಳೊಡನೆ ಪೂಜ್ಯ ಗುರುಗಳು ಪ್ರಾಸಂಗಿಕವಾಗಿ ವಿಚಾರವಿನಿಮಯ ಮಾಡುತ್ತಿದ್ದರು.

## ಪತ್ರಿಕಾಪ್ರತಿನಿಧಿಗಳ ಸಂದರ್ಶನ

ಮರುದಿನ ದಿ. ೧೮–೧೦–೭೦ ರಂದು ಅಮೇರಿಕೆಯ ಪತ್ರಿಕಾ ಪ್ರತಿನಿಧಿಗಳು ಪರಿಷತ್ತಿನ ಸಭಾಮಂದಿರದ ಒಂದು ಖೋಲಿಯಲ್ಲಿ ಗುರುಗಳ ಸಂದರ್ಶನವನ್ನು ಪಡೆದುಕೊಂಡರು. ವೀರಶೈವ ಧರ್ಮದ ತತ್ವ, ಲಿಂಗ, ವಿಭೂತಿ, ರುದ್ರಾಕ್ಷಿ, ಇವುಗಳ ಧಾರಣೆಯ ಮಹತ್ವ, ಕಾವಿಯ ಉಡುಗರೆಯ ವೈಶಿಷ್ಟ್ಯ, ಶ್ರೀಗಳವರ ಧಾರ್ಮಿಕ ಸಾಮಾಜಿಕ ಕಾರ್ಯಕ್ಷೇತ್ರ ಇತ್ಯಾದಿ ಅನೇಕ ಆನುಷಂಗಿಕ ವಿಷಯಗಳನ್ನು ವಿಚಾರಿಸಿ ಟೇಪ ರೆಕಾರ್ಡ ಮಾಡಿಕೊಂಡು ಫೋಟೊ ತೆಗೆದುಕೊಂಡರು. ಶ್ರೀಗಳವರ ಭಾಷಣದ ಪ್ರತಿಗಳನ್ನು ಪರಿಚಯ ಪತ್ರಿಕೆಯನ್ನು, ವಿಭೂತಿಯ ಗಟ್ಟಿಗಳನ್ನು, ಗುರುಗಳ ಆಶೀರ್ವಾದ ರೂಪದಲ್ಲಿ ಸ್ವೀಕರಿಸಿದರು. ಇದನ್ನು ನೋಡಿದರೆ ಭಾರತೀಯ ಗುರುಗಳ ಬಗ್ಗೆ ವಿದೇಶೀಯರು ಎಷ್ಟೊಂದು ಗೌರವವನ್ನು ಹೊಂದಿರುವರೆಂಬುದು ವ್ಯಕ್ತವಾಯಿತು.

ಮರುದಿನ ಸಭಾಭವನದಲ್ಲಿ ವಿಶ್ರಾಂತಿ ಧಾಮದ ಒಂದು ಭಾಗದಲ್ಲಿ ಗುರುಗಳು ಸುಖಾಸೀನರಾಗಿದ್ದರು. ಜಪಾನಿನ ಮಿ. ಇವಾಓ. ಪಿ– ಹಿನೊ (Mr. Iwao· P. Hino) ಎಂಬವರು ಊಮೋಟೋ (Oomoto) ಎಂಬ ಧಾರ್ಮಿಕ ವೃತ್ತ ಪತ್ರಿಕೆಯ ಸಂಪಾದಕರು ಶ್ರೀಗಳನ್ನು ಸಂದರ್ಶಿಸಿದರು. ಗುರುಗಳನ್ನು ಕಂಡು ತಮ್ಮದೇ ಆದ ಪದ್ಧತಿಯಿಂದ ಅಭಿವಂದಿಸಿ ಭಾರತೀಯ ಧರ್ಮಗಳ ಬಗ್ಗೆ, ಮಠಗಳ ಕಾರ್ಯ ಕ್ಷೇತ್ರಗಳ ಬಗ್ಗೆ ತುಲನಾತ್ಮಕ ವಿಚಾರ ವಿನಿಮಯವನ್ನು ಮಾಡಿದರು. ಗುರುಗಳ ಸಮಗ್ರ ಭಾಷಣವನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದರು. ಈಗಲೂ ತಮ್ಮ ಪತ್ರಿಕೆಯನ್ನು ನಮಗೆ ಕಳಿಸುತ್ತಿರುವರು.

ಶ್ರೀ ಕೆ. ವಿ. ನಾರಾಯಣ ಎಂಬುವವರು 'ಹಿಂದೂ'– ದೂರ ಪ್ರಾಚ್ಯ ವರದಿಗಾರರು. ಇವರು ಮೈಸೂರಿನವರು. ನಾವು ವಾಸ್ತವ್ಯ ಮಾಡಿದ ಕ್ಯುಟೋ ಗ್ರ್ಯಾಂಡ ಹೊಟೆಲಿನ ರೂಮಿನಲ್ಲಿ ಗುರುಗಳನ್ನು ಸಂದರ್ಶಿಸಿ ಪ್ರಾಸ್ತಾವಿಕ ವಿಚಾರ ಗಳನ್ನು ತಿಳಿದುಕೊಂಡು ಆಶೀರ್ವಾದ ಪಡೆದುಕೊಂಡರು.

## ಕ್ಯೂಟೋ ನಾರಾ ಬೇರಾಗಳ ದರ್ಶನ

ಕ್ಯೊಟೋದ ಹೆ ಇನ್ ಮಂದಿರ (Hein Shrine) ಚಿಯೊನಿನ್ ದೇವಾಲಯ (Chionin), ಕರುಣಾಳು ದೇವತೆ (Godess of Mercy) ಮತ್ತು, ನಾರಾದಲ್ಲಿ ತೊಡ್ಜೇಜಿ (Todaji) ಮಂದಿರ, ಸರುಸ್ವಾ ಹೊಂಡ (Saruswa Pond) ಟೆನ್ರಿಕ್ಯೋ ಮಂದಿರ (Ternikyo), ಟೆನ್ರಿ ಸಂಕೋಕನ್ ವಸ್ತು ಸಂಗ್ರಹಾಲಯ (Tenri

Sankokan Museum of University) ಶೋಶೊ ಇನ್ ಅರಮನೆ (Shoso-in) ಇತ್ಯಾದಿ ಬೌದ್ಧರ ಪ್ರಾಚೀನ ಧಾರ್ಮಿಕ ಅವಶೇಷಗಳನ್ನು ನೋಡಿದೆವು. ಇವುಗಳಲ್ಲಿ ಟೆನ್ರಿಕ್ಯೋ ಧಾರ್ಮಿಕ ಮಂದಿರ ಶಿಶುವಿಹಾರದಿಂದ ಪ್ರಾರಂಭಿಸಿ ವಿಶ್ವವಿದ್ಯಾಲಯದ ಉಚ್ಚ ಶಿಕ್ಷಣದ ವರೆಗೆ ಧಾರ್ಮಿಕ ವಿದ್ಯೆಯನ್ನು ಸಾಂಸ್ಕೃತಿಕ ಸಂಪ್ರದಾಯಗಳ ಅಧ್ಯಯನವನ್ನು ನೀಡುತ್ತದೆ. ಇಲ್ಲಿಯ ವೈದ್ಯ ಶಾಲೆಯಲ್ಲಿ ಔಷಧಿಯೊಂದಿಗೆ ಆಧ್ಯಾತ್ಮಿಕ ಶುಶ್ರೂಷೆಯನ್ನು ರೋಗಿಗಳಿಗೆ ನೀಡಲಾಗುತ್ತಿದೆಯೆಂದು ತಿಳಿಸಿದರು. ಇಲ್ಲಿ ವಿಶ್ವವಿಖ್ಯಾತ ವಸ್ತು ಸಂಗ್ರಹಾಲಯವೂ ಪುಸ್ತಕ ಭಂಡಾರಗಳೂ ಇವೆ. ಪರಿಷತ್ತಿನ ಯೋಜಕರೇ ಈ ಪ್ರವಾಸವನ್ನು ಏರ್ಪಡಿಸಿದ್ದರಿಂದ ಒಳ್ಳೇ ಶಿಸ್ತಿನಿಂದ ನಮಗೆಲ್ಲರಿಗೂ ತಿಳಿಯುವಂತೆ ದರ್ಶನೀಯ ಸ್ಥಾನಗಳ ವೈಶಿಷ್ಟ್ಯವನ್ನು ವಿವರಿಸಿ ತೋರಿಸಿದರು. ಈ ಪ್ರವಾಸದಲ್ಲಿ ಗುರುಗಳು ಅತ್ಯಂತ ಔತ್ಸುಕ್ಯವನ್ನು ತೋರಿ ಅಲ್ಲಲ್ಲಿಯ ವೈಶಿಷ್ಟ್ಯಗಳನ್ನು ಟಿಪ್ಪಣಿ ಮಾಡಲಿಕ್ಕೆ ನನಗೆ ಹೇಳುತ್ತಿದ್ದರು. (ಪರಂ-ಜ್ಯೋತಿಯ ಡಿಶೆಂಬರ ತಿಂಗಳಿನ ಸಂಚಿಕೆಯಲ್ಲಿ ಗುರುಗಳು, ಪ್ರೇಕ್ಷಣೀಯ ಸ್ಥಾನಗಳ ವಿಶಾಲ ವರ್ಣನೆಯನ್ನು ಪ್ರಕಟಿಸಿದ್ದಾರೆ. ಅಲ್ಲಿ ನೋಡಬಹುದು.)

## ಒಸಾಕಾ ಸಂದರ್ಶನ

ದಿನಾಂಕ ೨೦–೧೦–೭೦ ರಂದು ಒಂದು ಕಾರ್ಯದ ನಿಮಿತ್ತ ಒಸಾಕಾ ನಗರಕ್ಕೆ ಹೋಗಬೇಕಾಯ್ತು. 'ದಿ ನ್ಯಾಶನಲ್ ಬ್ಯಾಂಕ ಆಫ್ ಅಮೇರಿಕಾ' ದಲ್ಲಿ ಕೆಲಸವಿತ್ತು. ಟ್ರೇನಿನಲ್ಲಿ ೫೦ ಮೈಲು ಪ್ರವಾಸ ಮಾಡಿ ಟ್ಯಾಕ್ಸಿ ತೆಗೆದುಕೊಂಡು ಬ್ಯಾಂಕಿಗೆ ಹೋದೆವು. ಟ್ಯಾಕ್ಸಿ ಡ್ರಾಯವ್ಹರನ ಪ್ರಾಮಾಣಿಕತೆಯನ್ನು ನೋಡಿ ಆಶ್ಚರ್ಯವಾಯಿತು. ತನಗೆ ಕಾಯದೆ ಪ್ರಕಾರ ಸಲ್ಲುವದಕ್ಕಿಂತಲೂ ಹೆಚ್ಚಿಗೆ ಒಂದು ಪೈಸೆಯನ್ನು ಸಹ ತೆಗೆದುಕೊಳ್ಳಲು ಒಪ್ಪಲಿಲ್ಲ. "ನಾವು ಸಂತೋಷದಿಂದ ಕೊಡುತ್ತೇವೆ ತೆಗೆದುಕೊಳ್ಳಿರಿ ಎಂದು ಹೇಳಿದರೆ "It is a crime if I accept it more" ನಾನು ಹೆಚ್ಚಿಗೆ ತೆಗೆದುಕೊಂಡರೆ ಅಪರಾಧವಾಗುವದು' ಎಂದು ನುಡಿದು ನಮ್ಮನ್ನು ಆಶ್ಚರ್ಯ ಚಕಿತರನ್ನು ಮಾಡಿದ. ಬ್ಯಾಂಕಿನ ಒಳಗೆ ಹೋದೆವು. ಬ್ಯಾಂಕಿನ ಪರಿಚಾರಕರು ಒಳ್ಳೇ ವಿನಯದಿಂದ ಕರೆದೊಯ್ದು ಗುರುಗಳಿಗೆ ಪೀಠವನ್ನು ಕೊಟ್ಟು ಅಭಿವಂದಿಸಿ ಮ್ಯಾನೇಜರರಿಗೆ ನಮ್ಮ ವಿಷಯ ತಿಳಿಸಿದನು. ನಮಗೆ ಒಂದು ಚೆಕ್‌ನ್ನು ಅಮೇರಿಕೆಯಿಂದ ಶ್ರೀಗಳ ಶಿಷ್ಯರು ಕಳಿಸಿದ್ದರು. ಅದನ್ನು ಕ್ಯಾಶ್ ಮಾಡಿಸಬೇಕಾಗಿತ್ತು. ಬ್ಯಾಂಕಿನ ಮ್ಯಾನೇಜರ ಜಪಾನಿ ಮಹಿಳೆ– ನಮ್ಮ ಚೆಕ್‌ನ್ನು ಶ್ರೀಗಳ ಸಹಿ ಮಾಡಿಸಿ ಕೊಟ್ಟೆವು. "ಚೆಕ್ಕಿನ ಬಗ್ಗೆ ಮಾಹಿತಿ (Advice) ಬಂದಿಲ್ಲ. ಚೆಕ್ ಕಳಿಸಿದವರ ಸಹಿಯ ದಾಖಲೆಯೂ Speciman Signature) ನಮ್ಮಲ್ಲಿರುವದಿಲ್ಲ. ಅದಕ್ಕೇನು ಮಾಡುವದು ? ಎಂದು ಬ್ಯಾಂಕ್ ಕ್ಯಾಷಿಯರನು ಕೇಳಿದನು. ಆ ಮೇಲೆ ಮೇನೇಜರ ಮಹಿಳೆ ಅತಿ ವಿನಯದಿಂದ ಗುರುಗಳಿಗೆ ಕೈ ಮುಗಿದು ಆಸನವನ್ನು ಕೊಟ್ಟು ಕುಳ್ಳಿರಿಸಿ

"ತಾವು ಯಾವ ದೇಶದಿಂದ ಬಂದಿರುವಿರಿ, ಕಾಯಕವಾವುದು, ಹೋಗುವದೆಲ್ಲಿಗೆ" ಎಂಬು ದಾಗಿ ಪರಸ್ಪರ ಶೀಲ ಸೌಜನ್ಯಕ್ಕೆ ಭಂಗ ಬರದಂತೆ ನಮ್ಮನ್ನು ಕೇಳಿದಳು. ಅದಕ್ಕೆ "ನಾವು ಭಾರತ ದೇಶದವರು, ಕರ್ನಾಟಕದಿಂದ ಬಂದವರು, ಗುರುಗಳು ವೀರಶೈವ ಧರ್ಮದ ಪೀಠಾಚಾರ್ಯರು, ವಿಶ್ವಧರ್ಮ ಶಾಂತಿ ಪರಿಷತ್ತಿಗೆ ಬಂದ ಭಾರತದ ಪ್ರತಿನಿಧಿಗಳು, ಕ್ಯುಟೋದಲ್ಲಿ ಪರಿಷತ್ತಿನ ಕಾರ್ಯ ಪೂರೈಸಿದ ಕೂಡಲೇ ಟೋಕಿಯೋಕ್ಕೆ ಹೋಗಿ ಅಲ್ಲಿಂದ ಆಗ್ನೇಯೇಶಿಯಾ ರಾಷ್ಟ್ರಗಳಿಗೆ ಭೆಟ್ಟಿಕೊಟ್ಟು ಪರಿಷತ್ತಿನ ಫಲಶ್ರುತಿಯನ್ನು ಅಲ್ಲಿಯ ರಾಷ್ಟ್ರೀಯರಿಗೆ ತಿಳಿಸಿ. ಮರಳಿ ನಮ್ಮ ದೇಶಕ್ಕೆ ಹೋಗಬೇಕಾಗಿದೆ" ಎಂದೆವು. ಮ್ಯಾನೇಜರ–ಮಹಿಳೆಯು ಬಹಳ ಸಂತೋಷಪಟ್ಟು ನಮ್ಮ ಚೆಕ್ಕನ್ನು ಕ್ಯಾಷ್‌ಮಾಡಿ ನಮಗೆ ಡಾಲರ್ಸ ಕೊಡಲು ಹೇಳಿದಳು. ನಮಗೆ ಆಶ್ಚರ್ಯವಾಯಿತು. ಚೆಕ್ಕು ಕ್ಯಾಷ್ ಆಗಲು ಅವಶ್ಯವಾದ ಮಾಹಿತಿ ದೊರೆತಿಲ್ಲವೆಂದು ನಿಮ್ಮ ಕ್ಯಾಶಿಯರ್ ಹೇಳಿದರು, ಅದು ಹೇಗೆ ನೀವು ನಮ್ಮ ಚೆಕ್ಕನ್ನು ಮಾನ್ಯ ಮಾಡಿದಿರಿ ಎಂದು ಕೇಳಿದವು. ಅದಕ್ಕೆ ಆ ಮಹಿಳೆ **" Yes, but you have come here from India, the holy land in which Lord Buddha was born, and His Holiness is a saint, I have positive trust and reverence in you the Indians, if the cheque is not Jenuine, I may loose some money, but I can't loose good people like you "** ಭಾರತದೇಶ ಬುದ್ಧದೇವನ ಜನ್ಮಭೂಮಿ, ನೀವು ಪುಣ್ಯರಾಷ್ಟ್ರದ ಜನ. ಸ್ವಾಮಿಜಿಯವರು ಯೋಗಿಗಳಾಗಿದ್ದಾರೆ, ನೀವು ಕೊಟ್ಟ ಚೆಕ್ ಮೋಸದ್ದಿದ್ದರೆ ನಾನು ಕೆಲ ಹಣವನ್ನು ಕಳೆದುಕೊಳ್ಳಬಹುದು, ಆದರೇನಂತೆ ? ನಿಮ್ಮನ್ನು ಮಾತ್ರ ಖಂಡಿತ ಕಳೆದುಕೊಳ್ಳಲಾರೆ," ಎಂದು ಉತ್ತರಿಸಿದಳು. ಇದನ್ನು ಕೇಳಿದೊಡನೆ ನಾವು ಕ್ಷಣ ಹೊತ್ತು ಸುಮ್ಮನಾದೆವು. ಭಾರತೀಯರನ್ನು ಈ ಜನ ಎಷ್ಟು ಗೌರವದಿಂದ ಪ್ರೀತಿ– ಸುವರಲ್ಲಾ ಎಂದು ವಿಸ್ಮಯಾನಂದವಾಯಿತು. ಹಣವನ್ನು ಪಡೆದೆವು. ಗುರುಗಳಿಗೆ ಪುನಃ ವಂದಿಸಿದಳು. ನಮ್ಮ ಕೈಚೀಲದಲ್ಲಿದ್ದ ಕೆಲವು ಹಣ್ಣುಗಳನ್ನು ತೆಗೆದುಕೊಂಡು ಗುರುಗಳು ಮಹಿಳೆಗೂ ಕ್ಯಾಶಿಯರನಿಗೂ ಆಶೀರ್ವಾದ ಕೊಟ್ಟರು. ಕೃತಜ್ಞತೆಯ ಭಾವದಿಂದ ನಮ್ಮ ಕಣ್ಣು ನೀರಿಟ್ಟವು. ನಮ್ಮನ್ನು ಒಸಾಕಾ ಸ್ಟೇಶನ್ನಿಗೆ ಕರೆದುಕೊಂಡು ಹೋಗಿ ತಿಕೀಟು ತೆಗೆಯಿಸಿ ಸುರಕ್ಷಿತವಾಗಿ ಕ್ಯೂಟೋ ಮುಟ್ಟುವಂತೆ ವ್ಯವಸ್ಥೆ ಮಾಡಿ ಬರ- ಬೇಕೆಂದು ಹೇಳಿ ತಮ್ಮ ಸೇವಕನನ್ನು ನಮ್ಮೊಡನೆ ಕಳಿಸಿಕೊಟ್ಟಳು. ಈ ಚಿರ– ಸ್ಮರಣೀಯವಾದ ಘಟನೆ ಚಿರಂತನವಾಗಿ ನಮ್ಮಲ್ಲಿ ಉಳಿಯಿತು.

## ಟೋಕಿಯೊ ವಾಸ್ತವ್ಯ

ಟೋಕಿಯೋದ ಬೌದ್ಧ ಸಮಾಜದ ಅಧ್ಯಕ್ಷ ನಿಕಿಓ ನಿವಾನೊ ಅವರ ಆಮಂತ್ರಣದ ಮೇರೆಗೆ ನಾವು ಟೋಕಿಯೋಕ್ಕೆ ಹೊರಟೆವು. ದಿನಾಂಕ ೨೨ ಅಕ್ಟೋಬರ ಗುರುವಾರ ಕ್ಯುಟೋದಿಂದ ಟೋಕಿಯೋಕ್ಕೆ ಬುಲೆಟ್ ಟ್ರೇನಿನಲ್ಲಿ ಪ್ರಯಾಣ ಮಾಡಿದೆವು. ಇದು ಜಗತ್ತಿನಲ್ಲಿಯೇ ಅತಿವೇಗದ ರೇಲ್ವೆಟ್ರೇನ. ತಾಸಿಗೆ ೧೨೦ ಮೈಲು ಇದರ ವೇಗದಮಿತಿ.

೩೫೦ ಮೈಲು ದೂರ ಪ್ರವಾಸವನ್ನು ಕೇವಲ ೨।।। ಘಂಟೆಯಲ್ಲಿ ಮುಗಿಸಿದೆವು. ಈ ಟ್ರೇನಿನಲ್ಲಿಯೇ ಸ್ನಾನ ಉಪಹಾರ-ಊಟದ ವ್ಯವಸ್ಥೆಯಿತ್ತು. ಪೂಜ್ಯ ಗುರುಗಳು ಕಟ್ಟಾ ವ್ರತನಿಷ್ಠರು. ಆತಿಥೇಯ ವರ್ಗದವರು ಅದೆಷ್ಟೋ ಸಲ ಉಪಹಾರ ಸ್ವೀಕರಿಸಲು ಕೇವಲ ಹಣ್ಣು ಹಾಲನ್ನಾದರೂ ಸ್ವೀಕರಿಸಲು ಕೇಳಿಕೊಂಡರು. ಗುರುಗಳು "ಸ್ನಾನ ಪೂಜೆಯಿಲ್ಲದೆ ಏನೂ ಸ್ವೀಕರಿಸಲಿಕ್ಕಾಗದು. ಇದು ನಮ್ಮ ಧರ್ಮನಿಬಂಧನೆ" ಎಂಬುದಾಗಿ ತಿಳಿಸಿ ಕೆಲವು ಹಣ್ಣುಗಳನ್ನು ಅವರಿಗೆ ಆಶೀರ್ವದಿಸಿದರು. ಶ್ರೀಗಳ ಅಸಾಮಾನ್ಯಶೀಲ ನಿಷ್ಠೆಯನ್ನು ಅಲ್ಲಿದ್ದವರು ನೋಡಿ ಆಶ್ಚರ್ಯಪಟ್ಟರು.

ಸೌಂದರ್ಯ ನಗರಿ ಟೋಕಿಯೋ. ವಿಶಾಲ ರಾಜಬೀದಿಗಳು, ೬೦-೭೦ ಮೇಲಂತಿಸ್ತಿನ ಸೌಧಗಳು ೧ ಕೋಟಿ ೧೦ ಲಕ್ಷ ಜನಸಂಖ್ಯೆ ಅತಿವಿಶಾಲ ನಗರ, ದಾರಿಯುದ್ದಕ್ಕೂ ಸಹಸ್ರಾರು ಕಾರುಗಳು, ಚಿತ್ರವಿಚಿತ್ರರಂಗ ರಂಜನೀಯ ರಮಣೀಯಕತೆಯಿಂದ ಕೂಡಿದ ಪಣ್ಯಾವೀದಿಗಳು-ಸಂಪದ್ಭರಿತ ಅಂಗಡಿಗಳ ಸಾಲುಗಳು ಶ್ರೀಮಂತ ಸಂತೃಪ್ತ ಜನಸ್ತೋಮ-ವಿದ್ಯುದ್ವಲಯ ರಚನಾಚಾತುರಿಯಿಂದ ವಿವಿಧ ಬಣ್ಣ ಬಿತ್ತರದಿಂದ ಚೆಲ್ವಾಂತ ಶ್ರೀಮಂತ ನಗರವನ್ನು ನೋಡಿದರೆ ಗಗನದ ತಾರಾಮಂಡಲವೇ ಪ್ರತಿಬಿಂಬಿತವಾಗಿರುವದೋ ಏನೋ ಎಂಬುವಂತೆ ಭಾಸವಾಗುತ್ತದೆ. ಈ ನಗರವನ್ನು ಕಾರಿನಲ್ಲಿ ಸಂಚರಿಸುತ್ತ ನವ್ಯ ನಾಗರಿಕತೆಯ ಸಕಲರ ಅನುಕೂಲತೆಗಳನ್ನರಿತು ನಿರ್ಮಾಣಗೊಂಡ ' ಇಂಪೀರಿಯಲ್ ' ಹೊಟೆಲ್ಲಿಗೆ ಬಂದೆವು. ಅಲ್ಲಿಯೆ ಅತಿಥಿಗಳೆಲ್ಲರಿಗೂ ವಾಸ್ತವ್ಯವನ್ನು ಬೌದ್ಧ ಸಂಘದವರು ಏರ್ಪಡಿಸಿದ್ದರು. ಗುರುಗಳು ಸಾಂಪ್ರದಾಯಕವಾದ ಪೂಜಾ ವಿಧಿವಿಧಾನಗಳನ್ನು ತಮಗಾಗಿ ಮೊದಲಿಗೆ ವ್ಯವಸ್ಥಿತವಾಗಿ ನಿಯಮಿತವಾದ ವಿಶಾಲ ರೂಮಿನಲ್ಲಿ ತೀರಿಸಿಕೊಂಡ ನಂತರ ಪ್ರೇಕ್ಷಣೀಯ ಸ್ಥಳಗಳನ್ನು ನೋಡಿಕೊಂಡು ಬಂದೆವು. ಆ ದಿನ ರಾತ್ರಿ ವಿಶ್ರಾಂತಿ ಪಡೆದೆವು. ಮರುದಿನ ಬೌದ್ಧಸಮಾಜದ ಅಧ್ಯಕ್ಷರಾದ ಶ್ರೀ ನಿವ್ವಾನೋ ಇವರು ಸಮ್ಮೇಲನಕ್ಕೆ ಬಂದಿದ್ದ ಪ್ರತಿನಿಧಿಗಳೆಲ್ಲರನ್ನು ತಮ್ಮ ಸಂಘದ ಮಹಾಮಂದಿರಕ್ಕೆ ಕರೆದೊಯ್ದು ಸ್ವಾಗತಿಸಿದರು. ಫುಮನ್ ಹಾಲ್ ( Fuman Hall ) ಬೌದ್ಧರ ಪ್ರಾರ್ಥನಾಮಂದಿರ. ಇದೊಂದು ರಾಜಭವನ. ಕೋಟ್ಯಾಂತರ ರೂಪಾಯಿ ಖರ್ಚುಮಾಡಿ ಕಟ್ಟಿದ ಈ ಬೃಹನ್ಮಂದಿರಕ್ಕೆ ಅತಿ ಎತ್ತರದ ಗೋಲಾಕೃತಿಯ ಕಲಶವಿದೆ. ವಿಶಾಲ ರಂಗಮಂಟಪ-ಸಭಾಭವನವಂತೂ ೫ ಸಾವಿರ ಜನರಿಗೆ ಇಂಬು ಕೊಡುವ ಬೆಲೆಬಾಳುವ ಆಸನಾಲಂಕಾರ ಪರಿಕರದಿಂದ ಸಿದ್ಧವಾಗಿ ಪ್ರೇಕ್ಷಕರ ಮನಸ್ಸನ್ನು ಸೆಳೆಯುತ್ತದೆ. ಟೋಕಿಯೋ ಸಂಪದಭಿವೃದ್ಧಿಯ ವೈಭವವನ್ನು ನಾವಿಲ್ಲಿ ಕಂಡೆವು. ನೂರಾರು ಸಣ್ಣ ಬಾಲಿಕೆಯರು ಸ್ವಾಗತಿಸಿ ಪೂಮಾಲೆಯ ಮಳೆಗರೆದು ಒಳಗೆ ಕರದೊಯ್ದರು. ಮಕ್ಕಳನ್ನು ನೋಡಿ ಗುರುಗಳ ಮನಸ್ಸು ಅರಳಿತು. ತರುಣ ವಿದ್ಯಾರ್ಥಿ ವಿದ್ಯಾರ್ಥಿನಿಯರು ವೀರರಸಪ್ರಧಾನವಾದ ರಾಜಕೀಯ ದೃಶ್ಯಗಳನ್ನು ಆಡಿ ತೋರಿಸಿದರು. ಕವಾಯಿತು ಮಾಡಿದರು. ರಾಷ್ಟ್ರಾಭಿಮಾನದ್ಯೋತಕವಾದ ಸಂಗೀತದೊಡನೆ ಕುಣಿಕುಣಿದು ಮನವನ್ನು ತಣಿಸಿದರು. ಇದನ್ನು ನೋಡಿ ಗುರುಗಳು ಒಳ್ಳೇ-

ಅಭಿಮಾನವನ್ನು ವ್ಯಕ್ತಪಡಿಸಿದರು. ವ್ಯಾಸಪೀಠದ ಮೇಲೆ ಹಲವು ಪ್ರತಿಷ್ಠಿತ ವ್ಯಕ್ತಿಗಳೊಡನೆ ಗುರುಗಳು ಕುಳಿತಿದ್ದರು. ಅಧ್ಯಕ್ಷರಾದ ನಿವಾನೊ ಇವರಿಗೆ ಇಂಗ್ಲೀಷ ಅಷ್ಟೊಂದು ಚನ್ನಾಗಿ ಬರುತ್ತಿರಲಿಲ್ಲ. ತಮ್ಮ ದುಭಾಷಿಯ ಸಹಾಯದಿಂದ ಗುರುಗಳ ಆದರ್ಶ— ಅವರ ಸಮಾಜ ಸೇವೆ— ಶಿಕ್ಷಣ ಪ್ರಸಾರ ಇತ್ಯಾದಿ ವಿಷಯಗಳನ್ನು ತಿಳಿದುಕೊಂಡು ಬಹಳ ಸಂತೋಷಪಟ್ಟರು. "ಧರ್ಮಕ್ಕಾಗಿ ಜಗತ್ತಿನ ಶಾಂತಿಗಾಗಿ ನಾವೆಲ್ಲರೂ ಕಟಿಬದ್ಧರಾಗೋಣ. ಮಾನವ ಹಿತವೇ ನಮ್ಮೆಲ್ಲರ ಗುರಿಯಾಗಲಿ" ಎಂಬುದಾಗಿ ಕೆಲವರು ಭಾಷಣ ಮಾಡಿದರು. ೪ ತಾಸಿನವರೆಗೂ ನಡೆದ ಈ ಕಾರ್ಯ-ಕ್ರಮ ನಮಗೆ ತಿಳಿಯದಂತೆ ಕೊನೆಗಂಡಿತು. ಅಲ್ಲಿ ನೆರೆದ ಸಹಸ್ರಾರು ಜನ ಮಾನ್ಯರು ಮಹಿಳೆಯರು ತಮ್ಮ ಜಪಾನಿ ಪದ್ಧತಿಯ ವಂದನೆಗಳನ್ನರ್ಪಿಸುತ್ತ ಮೈಯನ್ನು ತಬ್ಬಿ ಕೈಕುಲಕಿ ತುಂಬಿದ ಹೃದಯದಿಂದ ಮಾತು ಮೌನವಾಗಿ ಪ್ರಾಂಜಲ ಮನಸ್ಸಿನಿಂದ ನಮಗೆಲ್ಲ ಶುಭಾಶಯಗಳನ್ನು ಕೋರಿ ಬೀಳ್ಕೊಟ್ಟರು. ಗುರುಗಳು ಇವೆಲ್ಲವನ್ನು ಶಾಂತ ಗಾಂಭೀರ್ಯದಿಂದ ನೀರೀಕ್ಷಿಸುತ್ತ ಭಾವಜೀವಿಗಳಾಗಿ ಮಂದಿರದ ಹೊರಗೆ ಬಂದರು. "ಈ ಜನ ಇಷ್ಟು ಮುಂದುವರಿಯಲಿಕ್ಕೆ ಅವರ ಪ್ರಾಮಾಣಿಕತೆ, ಉದ್ಯೋಗಶೀಲತೆ, ಅನ್ಯೋನ್ಯ ತಿಳುವಳಿಕೆ ಮತ್ತು ಸಹಕಾರ ಸಾಹಸವೃತ್ತಿ,ಸಂಘಟನಾ ಶಕ್ತಿ ರಾಷ್ಟ್ರ-ಧರ್ಮಾಭಿಮಾನ ಮುಂತಾದ ಗುಣಗಳೇ ಕಾರಣ, ಇವೇ ಇವರನ್ನು ಮೇಲೆತ್ತಿವೆ. ೨೫-೨೬ ವರ್ಷಗಳ ಹಿಂದೆ ಅಗ್ನಿಜ್ವಲನದಿಂದ, ಭೂಕಂಪದಿಂದುಂಟಾದ ವಿನಾಶದಿಂದ ಎರಡನೆ ಮಹಾಯುದ್ಧದಲ್ಲಿ ಸೂರೆಗೊಂಡ ಬಾಂಬುಗಳ ದಾಳಿಯಿಂದ ಹುರುಪಳಿಸಿ ಜರ್ಜರಿತವಾದ ಈ ದೇಶ ತನ್ನ ಕರ್ತೃತ್ವ ಶಕ್ತಿಯಿಂದ ಸಾಹಸಪ್ರವೃತ್ತಿಯಿಂದ ಸತತೋದ್ಯೋಗದಿಂದ ತನ್ನ ಪುನರುತ್ಥಾನವನ್ನು ಕಂಡಿದೆ. ಜಾಜ್ವಲ್ಯಮಾನವಾಗಿ ಬೆಳಗುತ್ತಲಿದೆ. ವೈಜ್ಞಾನಿಕ ತಾಂತ್ರಿಕ ಸಾಮಾಜಿಕ ಶೈಕ್ಷಣಿಕ ಆರ್ಥಿಕ ಕ್ಷೇತ್ರಗಳಲ್ಲಿ ಗಮನಾರ್ಹ ಪ್ರಗತಿಯನ್ನು ಸಾಧಿಸಿದೆ. ಆದರೆ ನಮ್ಮ ದೇಶದ ಗತಿಯೇನು ? ಗಮ್ಯವಾವುದು ? ಎಂದು ಉದ್ಗಾರ ತೆಗೆದರು. ನಿಸ್ಸಂಗಿಗಳಾದ ನಾವು-ನಮ್ಮಂಥವರು-ಸಮಾಜಕ್ಕೂ ದೇಶಕ್ಕೂ ತದ್ವಾರಾ ವಿಶ್ವಕ್ಕೂ ಅವಿರತ ಪರಿಶ್ರಮವಹಿಸಿ ಮಾನವ ಜೀವನದ ಮೌಲ್ಯಗಳನ್ನು ಜನತೆಗೆ ಬೋಧಿಸಿ ಜಾಗ್ರುತೆಯನ್ನುಂಟುಮಾಡಬೇಕು. ಜಾತೀಯ ಸಂಕೋಲೆಯನ್ನು ಕಿತ್ತೊಗೆದು ಧರ್ಮದ ವ್ಯಾಪ್ತಿಯನ್ನು ಇನ್ನೂ ವಿಶಾಲ ಮಾಡಿ ಜಗತ್ತೇ ತನ್ನ ಕುಟುಂಬವೆಂದು ತಿಳಿದು ಮಹೋನ್ನತ ಧ್ಯೇಯಧೋರಣೆಗಳನ್ನು ರೂಪಿಸಿ ಕಾರ್ಯಪ್ರವೃತ್ತರಾಗಬೇಕು. ಅಂದರೇನೆ ನಮ್ಮ ಜನ್ಮ ಸಾರ್ಥಕವಾದಂತಾಗುವದು "ಎಂದು ನನಗೆ ಆಗಾಗ್ಗೆ ಆರುಹುತ್ತಿದ್ದರು. ಜಪಾನಿನ ಪ್ರಯಾಣವನ್ನು ಪೂರೈಸಿ ಹಾಂಗ್‌ಕಾಂಗಿಗೆ ಪ್ರಯಾಣ ಬೆಳೆಸಿದೆವು.

## ಹಾಗಂಕಾಂಗದಲ್ಲಿ ಶ್ರೀಗಳವರು

ಶನಿವಾರ ದಿನಾಂಕ ೨೪-೧೦-೭೦ ರಂದು ಟೋಕಿಯೋದಿಂದ ವಿಮಾನ ಪ್ರಯಾಣಮಾಡಿ ಹಾಂಗ್‌ಕಾಂಗಿಗೆ ತಲುಪಿದೆವು. ವಿಮಾನ ನಿಲ್ದಾಣದಲ್ಲಿ ಭಾರತದ ರಾಯಭಾರಿ

ಆಫೀಸಿನವರು ಸ್ವಾಗತಿಸಿದರು. ಹಾಂಗ್‌ಕಾಂಗ್ ಸುಂದರ ನಗರ. ಸರಾಸರಿ ೭೦ಲಕ್ಷ ಜನ ವಸತಿ. ಉತ್ಕೃಷ್ಟ ಬಂದರ, ಕೌಲೂನ ಹಾಂಗ್‌ಕಾಂಗ್‌ನ್ನು ಸಮುದ್ರವು ವಿಭಾಗಿಸಿದೆ ಚೀನದ ಆಗ್ನೇಯ ದಿಕ್ಕಿನಲ್ಲಿ ಪರ್ವತದ ಎತ್ತರವಾದ ಇಳುಕಲಿನಲ್ಲಿ ವಿಸ್ತಾರವಾಗಿ ಹಬ್ಬಿದೆ, ಈ ನಗರ. ವಿಸ್ತೀರ್ಣವಾದ ಸಾಗರ, ಉನ್ನತವಾದ ಗಿರಿಶಿಖರ ಇವುಗಳ ಪರಸ್ಪರ ಸಖ್ಯವನ್ನು ಪಡೆದು ಪ್ರಕೃತಿಯ ಚೆಲ್ವನ್ನಾಂತು ನವನಾಗರಿಕತೆಯ ಆಕರ್ಷಣ ಸಾಮಗ್ರಿಗಳೊಡಗೂಡಿ ಔನ್ನತ್ಯದಿಂದ ನಿಂತಿದೆ ಈ ನಗರ. ನಮ್ಮ ಪರಿವಾರದಲ್ಲಿ ಶ್ರೀಗಳು, ಡಾ. ರಂಗನಾಥ ದಿವಾಕರರು ಶ್ರೀಮತಿ ಚಂದ್ರಿಕಾ ಗುತ್ತಲ ಮತ್ತು ನಾನು ಡಾ. ದಿವಾಕರರ ನಿರ್ದೇಶನದ ಮೇರೆಗೆ ನಾವು ನೋಡಲಿರುವ ಆಯಾಯ ದೇಶಗಳಲ್ಲಿರುವ ಭಾರತ ರಾಯಭಾರಿ ವರ್ಗದವರು ನಮಗೆಲ್ಲರಿಗೂ ವ್ಯವಸ್ಥೆ ಮಾಡಿದ್ದರು, ಹಾಂಗ್-ಕಾಂಗಿನಲ್ಲಿ 'ಅಲ್ಬಾ' (Alba) ಹೊಟೇಲಿನಲ್ಲಿ ವ್ಯವಸ್ಥೆ ಏರ್ಪಡಿಸಿದ್ದರು, ಅಲ್ಲಿ ವಾಸ್ತವ್ಯವನ್ನು ಮಾಡಿದೆವು ಮರುದಿನ ಭಾರತದ ಹಾಯಕಮಿಶನರ ಶ್ರೀ ಸಿದ್ಧಾರ್ಥಾಚಾರಿ ಅವರನ್ನು ಭೆಟ್ಟಿಯಾದೆವು, ಮೈಸೂರಿನವರಾದ ಅವರ ಆತ್ಮೀಯತೆಯನ್ನು ಹೇಳುವದೆಂತು ? ಗುರುಗಳನ್ನು ಅತ್ಯಂತ ಗೌರವದಿಂದ ಬರಮಾಡಿಕೊಂಡು ಯೋಗಕ್ಷೇಮವನ್ನು ವಿಚಾರಿಸಿದರು. ಧರ್ಮಗುರುಗಳು ಹೀಗೆ ವಿದೇಶ ಪ್ರವಾಸಮಾಡಿ ಅಲ್ಲಲ್ಲಿಯ ವೈಶಿಷ್ಟ್ಯಗಳನ್ನರಿತು ನಮ್ಮ ದೇಶದಲ್ಲಿ ಪುನರುತ್ಥಾನ ಕಾರ್ಯವನ್ನು ಕೈಗೊಳ್ಳಬೇಕೆಂಬ ವಿಷಯವಾಗಿ ಗುರುಗಳೊಡನೆ ಸಂಭಾಷಣೆ ಮಾಡಿದರು. ಅಲ್ಲಿಂದ ಹ್ಯಾಪೀ ವ್ಹ್ಯಾಲೀ (Happy Valey) ಎಂಬಲ್ಲಿರುವ ಹಿಂದೂಟೆಂಪಲ್ಲಿಗೆ ( Hindu Temple ) ನಮ್ಮನ್ನು ಕರೆದುಕೊಂಡು ಹೋದರು. ಭಾರತೀಯ ವರ್ತಕರು ಆ ಸ್ಥಲದ ಸ್ವಾಯತ್ತತೆಯನ್ನು ಪಡೆದುಕೊಂಡು ಅಲ್ಲಿ ಒಂದು ಸುಂದರವಾದ ದೇವಾಲಯವನ್ನು ಕಟ್ಟಿದ್ದಾರೆ. ಗಾಂಧಿ ಸ್ಮಾರಕ ಲಾಯಬ್ರರಿಯನ್ನು ಸ್ಥಾಪಿಸಿದ್ದಾರೆ. ಶ್ರೀ ಶೀತಲ ಎಂಬುವವರು ಈ ಸಂಸ್ಥೆಯ ವ್ಯವಸ್ಥಾಪಕರು ಶ್ರೀ ಶರ್ಮಾ ಎಂಬುವವರು ಈ ದೇವಾಲಯದ ಅರ್ಚಕರು ನಮ್ಮೆಲ್ಲರನ್ನು ಸ್ವಾಗತಿಸಿದರು. ಡಾ. ದಿವಾಕರರು ಶಾಂತಿ ಪರಿಷತ್ತಿನ ಧ್ಯೇಯಧೋರಣೆಗಳನ್ನು ವಿವರಿಸಿದರು. ಗುರುಗಳಿಂದ ಸಾಮಾಜಿಕ ಧಾರ್ಮಿಕ ವಿಷಯುಗಳನ್ನು ತಿಳಿದು ಸಂತೋಷ ಪಟ್ಟರು. ಮರುದಿನ ನಾವು ಜಕಾರ್ತಾಕ್ಕೆ ಪ್ರಯಾಣ ಬೆಳೆಸಿದೆವು.

## ಜಕಾರ್ತದಲ್ಲಿ

ದಿ. ೨೬ ರಂದು ಹಾಂಗಕಾಂಗದಿಂದ ವಿಮಾನಯಾನದಿಂದ ಹೊರಟು ೭-೮ ತಾಸು ಪ್ರಯಾಣಮಾಡಿ ಇಂಡೋನೇಶಿಯಾದ ರಾಜಧಾನಿ ಜಕಾರ್ತಾ ತಲುಪಿದೆವು. ವಿಮಾನ ನಿಲ್ದಾಣದಲ್ಲಿ ಭಾರತದ ರಾಯಭಾರಿ ಶ್ರೀ ಎನ್. ಬಿ, ಮೆನನ್ ಮತ್ತು ತಮ್ಮ ಸಿಬ್ಬಂದಿಯವರು ಸ್ವಾಗತಿಸಿದರು. ಸಾರ್ವಜನಿಕ ಸಂಪರ್ಕಾಧಿಕಾರಿಗಳಾದ ಶ್ರೀ ಕೆ. ಪ್ರತಾಪ ಎಂಬುವವರು ಅಲ್ಲಿಯ "ಪ್ರೀತಂಸಿಂಗ" ಎಂಬ ಪಂಜಾಬಿ ಶ್ರೀಮಂತವರ್ತಕರ ಮನೆಯಲ್ಲಿ ನಮ್ಮ ವಾಸ್ತವ್ಯಕ್ಕೆ ವ್ಯವಸ್ಥೆಯನ್ನುಮಾಡಿದ್ದರು.

ಶ್ರೀ ಪ್ರೀತಂ ಸಿಂಗ ಇವರು ಅತ್ಯಂತ ಧಾರ್ಮಿಕರು. ಅವರ ಮಕ್ಕಳು ಸಹ ಅಷ್ಟೇ ಸುಶೀಲರು ಗುರುಗಳನ್ನು ಅತಿಭಕ್ತಿಭಾವನೆಯಿಂದ ಏನೊಂದೂ ಅನಾನುಕೂಲವಾಗ ದಂತೆ ಮೂರು ದಿವಸಗಳ ಪರ್ಯಂತ ಗುರುಗಳ ವ್ಯವಸ್ಥೆಯನ್ನು ಮಾಡಿದರು. ಕರ್ಮ ಧರ್ಮ ಸಂಯೋಗದಿಂದ ದೀಪಾವಳಿ ಹಬ್ಬವನ್ನು ಅವರ ಮನೆಯಲ್ಲಿಯೇ ನೆರವೇರಿಸಿ ದೆವು. ಭಾರತೀಯರಾದ ಶ್ರೀ ಪ್ರೀತಂ ಸಿಂಗ ಮತ್ತು ಅವರ ಬಳಗದವರು ನಮ್ಮ ಸಂಸ್ಕೃತಿಯಂತೆ ಪರಂಪರೆಯಂತೆ ತಮ್ಮ ಅಂಗಡಿಗೆ ಗುರುಗಳನ್ನು ಕರೆದುಕೊಂಡು ಹೋಗಿ, ಲಕ್ಷ್ಮೀ–ಸರಸ್ವತೀ ಪೂಜೆಯನ್ನು ಮಾಡಿ ಗುರುಗಳ ಸನ್ನಿಧಿಯಲ್ಲಿ ಸಕಲ ವಿಧಿ ವಿಧಾನಗಳನ್ನು ಒಳ್ಳೇ ವೈಭವದಿಂದ ಆಚರಿಸಿ ಗುರುಗಳ ಆಶೀರ್ವಾದವನ್ನು ಫಲ ಮಂತ್ರಾಕ್ಷತೆಯನ್ನು ಪಡೆದುಕೊಂಡರು. ಇವರ ಮನೆಯಲ್ಲಿ ಭಾರತದೇಶವನ್ನು ಬಿಟ್ಟು ೧೨ ದಿವಸಗಳಾದ ಮೇಲೆ ಅನ್ನವನ್ನು ಊಟಮಾಡಿದೆವು. ಮರುದಿವಸ ಸೆಂಟ್ರಲ್ ಮ್ಯುಜಿಯಂ ನೋಡಲು ಹೊರಟೆವು. ಪ್ರಾಚೀನ ಮತ್ತು ಅರ್ವಾಚೀನ ಐತಿಹಾಸಿಕ ಅವಶೇಷಗಳನ್ನು ಭಿನ್ನ ಭಿನ್ನ ಸಂಸ್ಕೃತಿಗಳ ಪ್ರತೀಕಗಳಾದ ವಸ್ತುಗಳ ಸಂಗ್ರಹವನ್ನು, ಶಿವಲಿಂಗಮೂರ್ತಿಗಳನ್ನು ನಟರಾಜನ ವಿಗ್ರಹವನ್ನು ನಾವು ಕಂಡೆವು. ಭಾರತೀಯ ಧಾರ್ಮಿಕ ಸಂಸ್ಕೃತಿಯ ಸಂಪರ್ಕದ ಸಾಕ್ಷಾತ್ ಸಾಕ್ಷಿಗಳನ್ನು ಇಸ್ಲಾಂ ಧರ್ಮದ ರಾಜ ಧಾನಿಯಲ್ಲಿ ಕಂಡು ಗುರುಗಳು ಅತ್ಯಂತ ಪ್ರಭಾವಿತರಾದರು. ಆ ದಿನ ಮಧ್ಯಾಹ್ನ ಭಾರತೀಯ ಮಹಿಳಾ ಸಂಘದವರ **(Indian Women's Association)** ಆಮಂ-ತ್ರಣದಂತೆ ಪ್ರಿ. ರಾಮು ಇವರೊಡನೆ ಅಲ್ಲಿಗೆ ದಯಮಾಡಿಸಿ ಆ ಸಂಘದಲ್ಲಿ ಭಾರ-ತೀಯ ಮಹಿಳೆಯರ ಪವಿತ್ರ ಆದರ್ಶಗಳನ್ನು ನಿರೂಪಿಸಿ ವಿಶೇಷತಃ ಅಕ್ಕಮಹಾದೇವಿ ಬಸವೇಶ್ವರ ಇವರ ಬಗ್ಗೆ ಹಿಂದಿಯಲ್ಲಿ ಒಂದು ಗಂಟೆಯ ಕಾಲ ಸುಶ್ರಾವ್ಯ ಭಾಷಣ ಮಾಡಿದರು. ಮರುದಿನ ರಾಯಭಾರಿವರ್ಗದವರು ಭೋಜನ ಸಮಾರಂಭಗಳನ್ನು ಏರ್ಪಡಿಸಿದ್ದರು. ಮತ್ತು ಮಹಾತ್ಮಾ ಗಾಂಧಿ ಸ್ಕೂಲಿನ ಪ್ರಿ. ರಾಮು ಅವರು ಸಹ ಭೋಜನಕೂಟವನ್ನು ಏರ್ಪಡಿಸಿದ್ದರು. ತಾವು ಭೋಜನ ಸಮಾರಂಭಗಳಲ್ಲಿ ಗುರು-ಗಳು ಸಕ್ರಿಯವಾಗಿ ಭಾಗವಹಿಸದಿದ್ದರೂ ಸಹ ಅಲ್ಲಿಗೆ ಬಂದು ಸಮಾರಂಭಕ್ಕೆ ಆಗಮಿ ಸಿದ ಸಭ್ಯಗೃಹಸ್ಥರೊಡನೆ ಸಾಮಾಜಿಕ ಶೈಕ್ಷಣಿಕ ಸಾಂಸ್ಕೃತಿಕ ವಿಷಯಗಳ ಬಗ್ಗೆ ಲಘು ಚರ್ಚೆಯನ್ನು ಮಾಡುತ್ತಿದ್ದರು. ಅವರಿಗೆ ಕೇವಲ ಜ್ಞಾನಾಮೃತವೇ ಭೋಜನಕ್ಕಿಂತಲೂ ಹೆಚ್ಚಿಗೆ ಆನಂದವನ್ನುಂಟುಮಾಡುತ್ತಿದ್ದಿರಬಹುದು. ಗುರುಗಳ ಸಂಯಮಶೀಲಜೀವನದ ಉದಾತ್ತತೆಯನ್ನು ನೋಡಿ ಅಲ್ಲಿಯ ಜನರು ಭಯಭಕ್ತಿಯಿಂದ ವಿನೀತರಾಗು ತ್ತಿದ್ದರು, ಈ ಭೋಜನಕೂಟದ ಸಮಾರಂಭಕ್ಕೆ ಆಮಂತ್ರಿತರಾದವರಲ್ಲಿ ಮುಸಲ್ಮಾನ ಮಹಿಳೆ ಮಾಜಿ ಉಪಸಚಿವೆ, ಶ್ರೀಮತಿ ಕರ್ತಿನಿ (ಕಾತ್ಯಾಯನೀ) ಎಂಬುವರು ಶ್ರೀಗಳನ್ನು ಕಂಡು. ಅವರು ಧರಿಸಿದ ಬಸ್ಮದ ಬಗ್ಗೆ, ಅವರು ತೊಟ್ಟ ಕಾವಿಯ ಅರವಿಯ ಬಗ್ಗೆ, ಲಿಂಗಧಾರಣೆಯ ಬಗ್ಗೆ ಅನೇಕ ಪ್ರಶ್ನೆಗಳನ್ನು ಕೇಳಿದರು. ಶ್ರೀಗಳು ತಾತ್ವಿಕವಾಗಿ, ವೈಜ್ಞಾನಿಕವಾಗಿ ಸಮರ್ಪಕ ಉತ್ತರವನ್ನು ಹೇಳಿ ಶಿವಲಿಂಗವನ್ನು

ಭಸ್ಮದ ಗಟ್ಟಿಯನ್ನು ಅವರಿಗೆ ಆಶೀರ್ವದಿಸಿ ಪ್ರತಿ ದಿವಸ ಪೂಜೆಮಾಡಲು ತಿಳಿಸಿದರು. ಶ್ರೀಮತಿ ಕರ್ತಿನಿ ಕೃತಜ್ಞತಾಭಾವದಿಂದ ಗುರುಗಳಿಗೆ ವಂದನೆಗಳನ್ನರ್ಪಿಸಿದಳು. ಮರು ದಿನ ತರುಣ ಸಂಘಕ್ಕೆ (Youth centre) ಭೆಟ್ಟಿ ಕೊಟ್ಟು ಗುರುದ್ವಾರವನ್ನು ಸ್ವಾತಂತ್ರ್ಯ ಸ್ತಂಭವನ್ನು (Piller of liberty) ನೋಡಿಕೊಂಡು ಬಂದೆವು. ಪ್ರೀತಂ ಸಿಂಗರಿಗೂ ನಮ್ಮನ್ನು ಬೀಳ್ಕೊಡಲು ಬಂದ ಜನರಿಗೂ ಫಲಾಶೀರ್ವಾದ ಮಾಡಿ ಮುಂದಿನ ಪ್ರಯಾಣದ ಸಿದ್ಧತೆಯನ್ನು ಮಾಡಿದೆವು.

## ಸಿಂಗಾಪೂರದಲ್ಲಿ

ದಿನಾಂಕ ೨೯ ಗುರುವಾರ ವಿಮಾನಯಾನದಿಂದ ಜಕಾರ್ತಾದಿಂದ ಹೊರಟು ಸಿಂಗಾಪುರಕ್ಕೆ ಬಂದೆವು. ಭಾರತೀಯ ರಾಯಭಾರಿ ವರ್ಗದವರು ಸ್ವಾಗತಿಸಿದರು. ಇದು ಅಂತರರಾಷ್ಟ್ರೀಯ ವ್ಯಾಪಾರ ಕೇಂದ್ರ. ಇಲ್ಲಿಯ ಬಂದರ, ವಿಮಾನ ನಿಲ್ದಾಣ ಅತ್ಯಂತ ಪ್ರಸಿದ್ಧವಿರುವವು. ಚೀನ–ಜಪಾನ–ಮಲಯಾ–ತಮಿಳ–ಇಂಗ್ಲೀಷ ಹಿಂದಿ ಭಾಷೆ ಗಳನ್ನಾಡುವ ಜನರನ್ನೊಳಗೊಂಡ, ಸರಾಸರಿ ೭೦ ಲಕ್ಷ ಜನಸಂಖ್ಯೆಯುಳ್ಳ ಈ ಸುಂದರ ನಗರ ಅಂತರ–ರಾಷ್ಟ್ರೀಯ ಬಾಂಧವ್ಯದ ಪ್ರತೀಕವಾಗಿದೆ. ಇಲ್ಲಿರುವ ರಾಮ ಕೃಷ್ಣಾಶ್ರಮದಲ್ಲಿ ನಮಗೆ ಇಳಿದುಕೊಳ್ಳುವ ವ್ಯವಸ್ಥೆ ಮಾಡಿದ್ದರು. ಈ ಆಶ್ರಮದ ಅಧ್ಯಕ್ಷರಾದ ಶ್ರೀ ಸ್ವಾಮೀ ಸಿದ್ಧಾತ್ಮಾನಂದಜೀ ಅವರು ಕ್ಯೂಟೋದ ಸಭೆಯಲ್ಲಿ ಗುರುಗಳನ್ನು ಸಂದರ್ಶಿಸಿ, ಸಿಂಗಾಪೂರದಲ್ಲಿ ರಾಮಕೃಷ್ಣಾಶ್ರಮದಲ್ಲಿರುವ ಬಗ್ಗೆ ಆಶ್ರಮದ ಕಾರ್ಯಕರ್ತರಿಗೆ ಮೊದಲೇ ತಿಳಿಸಿದ್ದರು. ಆಶ್ರಮದ ವ್ಯವಸ್ಥಾಪಕರಾದ ಸ್ವಾಮೀ ದಾಮೋದರಾನಂದಜಿ ಮತ್ತು ಸ್ವಾಮೀ ಅಜ್ಞೇಯಾನಂದಜೀ ಇವರು ಗುರುಗಳ ವಾಸ್ತವ್ಯದಲ್ಲಿ ಬಹಳ ವ್ಯವಸ್ಥೆಯನ್ನೇರ್ಪಡಿಸಿದ್ದರು. ಶ್ರೀ ರಾಮಕೃಷ್ಣಾಶ್ರಮ ನಿಜವಾಗಿಯೂ ಪುಣ್ಯಧಾಮ. ಭಾರತೀಯ ಧಾರ್ಮಿಕ ಸಂಸ್ಕೃತಿಯನ್ನು ಪ್ರಪ್ರಥಮ ವಾಗಿ, ವಿದೇಶಗಳಲ್ಲಿ ಪ್ರಸಾರಮಾಡಿ ವೇದ ವೇದಾಂತದ ಅಮರ ಸಂದೇಶವನ್ನು ಪಾಶ್ಚಾತ್ಯ ದಿಗ್ದಿಗಂತಗಳಲ್ಲಿ ಅನುರಣಿತವಾಗುವಂತೆ ತಮ್ಮ ಸಿಂಹನಾದದಿಂದ ಘೋಷಿಸಿದ ಸ್ವಾಮೀ ವಿವೇಕಾನಂದರಿಂದ ಸ್ಥಾಪಿಸಲ್ಪಟ್ಟು ಸ್ಫೂರ್ತಿಯನ್ನು ಪಡೆದ ಶಾಂತಿಧಾಮವಿದು. ಇಲ್ಲಿಯಂತೂ ಶ್ರೀಗಳು ತಮ್ಮ ಮೂರುಸಾವಿರಮಠದಲ್ಲಿ ರುವಂತೆ ಅತ್ಯಂತ ಆನಂದದಿಂದ ಇದ್ದರು. ಪತ್ರಿಪುಷ್ಪಗಳ ವಾಟಿಕೆಗಳಿಂದ ವಿಸ್ತಾರ ಗೊಂಡ ಸುಂದರ ಆರಾಮ, ನಗರದ ಗಜಿಬಿಜಿಯಿಂದ ದೂರವಿದ್ದ ಪ್ರದೇಶ, ನಿಸರ್ಗದ ರಮಣೀಯತೆ, ಪ್ರಶಾಂತ ಪವಿತ್ರ ವಾತಾವರಣದಿಂದ ಕೂಡಿದ ಪ್ರಾರ್ಥನಾ ಮಂದಿರ (Prayer Hall) ಇತ್ಯಾದಿಗಳು ಗುರುಗಳಿಗೆ ಬಹಳ ಹಿಡಿಸಿದವು. ಇಲ್ಲಿ ಅನಾಥಮಕ್ಕಳ ಪಾಲನೆಪೋಷಣೆ ಒಳ್ಳೇ ವ್ಯವಸ್ಥಿತವಾಗಿ ನಡೆಯುತ್ತಿದೆ. ಮೂರು ಸಾವಿರಮಠದಲ್ಲಿರವಂತೆಯೇ ದೇವತಾಪ್ರಾರ್ಥನೆ–ಭಜನೆಗಳ ಕಾರ್ಯಕ್ರಮವೂ ಪ್ರತಿನಿತ್ಯ ಕ್ರಮಬದ್ಧವಾಗಿ ನಡೆಯುತ್ತದೆ, ಇದೆಲ್ಲವನ್ನು ಶ್ರೀಗಳು ನಿರೀಕ್ಷಿಸಿ

ಅತ್ಯಂತ ಪ್ರಫುಲ್ಲಚಿತ್ತರಾಗಿ ೨ ದಿನಗಳನ್ನು ಕಳೆದರು. ಶ್ರೀ ಮಠದಲ್ಲಿಯಿರುವಂತೆ ತಮ್ಮ ತ್ರಿಕಾಲ ಪೂಜೆಯನ್ನು ನೇರವೇರಿಸುತ್ತಿದ್ದರು, ಅಲ್ಲಿಂದ ಹೊರಡುವ ಮುಂದೆ ಇಲ್ಲಿರುವ ಅನಾಥಾಶ್ರಮದ ಸಹಾಯಾರ್ಥವಾಗಿ ೫೦ ಡಾಲರ ಹಣವನ್ನು ದೇಣಿಗೆಯಾಗಿ ಕೊಟ್ಟರು. ಮತ್ತು ಮಠದ ವ್ಯವಸ್ಥಾಪಕ ಸ್ವಾಮಿಗಳಿಗೆ ವಿಭೂತಿ ಲಿಂಗ ಮತ್ತು ಕೆಲವು ಪುಸ್ತಕಗಳನ್ನು ಆಶೀರ್ವದಿಸಿದರು. ಸಿಂಗಾಪೂರದಲ್ಲಿ ಭಾರತದವರಾದ ಶ್ರೀ. 'ಜುಮಾಭಾಯ್' ಎಂಬುವವರು ಆಗರ್ಭ ಶ್ರೀಮಂತರು, ಗಾಂಧೀ ತತ್ವನಿಷ್ಠರು, ಭೋಜನಕೂಟವನ್ನು ತಮ್ಮ ಮನೆಯಲ್ಲಿ ಏರ್ಪ ಡಿಸಿದ್ದರು, ಭೋಜನಕೂಟಕ್ಕೆ ನಗರದ ಪ್ರತಿಷ್ಠಿತ ವ್ಯಕ್ತಿಗಳೂ, ಭಾರತದ ಹಾಯ ಕಮೀಶನರ ಶ್ರೀ. ಪ್ರೇಮಭಾಬಿಯಾ ಮತ್ತು ರಾಯಭಾರಿ ವರ್ಗದವರೂ ಬಂದಿದ್ದರು. ಶ್ರೀಗಳೊಡನೆ ಸಾಮಾಜಿಕ ಧಾರ್ಮಿಕ ವಿಷಯಗಳನ್ನು ಚರ್ಚಿಸಿ ಅತ್ಯಂತ ಸಂತೋಷ ಪಟ್ಟರು. ಮರುದಿನ ನಮ್ಮನ್ನು ಕೌಲಾಲಂಪುರಕ್ಕೆ ಬೀಳ್ಕೊಟ್ಟರು.

## ಕೌಲಾಲಂಪುರದಲ್ಲಿ

ಸಿಂಗಾಪೂರದಿಂದ ಮಲೇಶಿಯಾ ದೇಶದ ರಾಜಧಾನಿ ಕೌಲಾಲಂಪುರಕ್ಕೆ ದಿನಾಂಕ ನವ್ಹಂಬರ ೧೮ರಂದು ವಿಮಾನಯಾನದಿಂದ ಪ್ರಯಾಣ ಬೆಳೆಸಿ ತಲುಪಿದೆವು. ಭಾರತದ ರಾಯಭಾರಿ ಕಚೇರಿಯ ಮುಖ್ಯಾಧಿಕಾರಿಗಳಾದ ಶ್ರೀ. ಗುಪ್ತಾ ಅವರು ಸ್ವಾಗತಿಸಿದರು. ಭಾರತದ ಓವ್ಹರ-ಸಿ-ಬ್ಯಾಂಕಿನ ( Overseas Bank of India) ಮುಖ್ಯ ಅಕೌಂಟಂಟರಾದ ಶ್ರೀ. ದೊರೆಸ್ವಾಮಿ ಅಯ್ಯರ ಇವರ ಬಂಗ್ಲೆಯಲ್ಲಿ ಗುರುಗಳ ವಾಸ್ತವ್ಯದ ವ್ಯವಸ್ಥೆಯನ್ನು ಮಾಡಿದ್ದರು, ಅವರಲ್ಲಿ ವಿಶ್ರಾಂತಿ ಪಡೆದವು. ಅದೇ ದಿನ ಸಾಯಂಕಾಲ ಸ್ವಾಮೀ ವಿವೇಕಾನಂದ ಭವನದಲ್ಲಿ ಸಭೆಯನ್ನೇರ್ಪಡಿಸಿದ್ದರು. ಶ್ರೀ. ಸ್ವಾಮೀ ಪ್ರಣವಾನಂದಜೀ ಇವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಗುರುಗಳು ವಿವೇಕಾನಂದರ ಜೀವನ ಕರ್ತೃತ್ವಶಕ್ತಿ ಹಿಂದೂ ಧರ್ಮದ ಪುನರುತ್ಥಾನ-ಮತ್ತು ಜಾಗತಿಕ ಶಾಂತಿ ಇತ್ಯಾದಿ ವಿಷಯಗಳ ಬಗ್ಗೆ ಭಾಷಣಮಾಡಿದರು. ಡಾ. ದಿವಾಕರರು ಮತ್ತು ಇತರರು ಪರಿಷತ್ತಿನ ಫಲಶೃತಿಯ ಬಗ್ಗೆ ವ್ಯಾಖ್ಯಾನ ಕೊಟ್ಟೆವು.

ಮರುದಿನ ಸ್ವಾಮೀ ಶಿವಾನಂದಜೀ ಇವರಿಂದ ಸ್ಥಾಪಿಸಲ್ಪಟ್ಟ ದೈವೀಜೀವನ ಸಂಸ್ಥೆಗೆ ( The Divine Life Society ), ಸಂಸ್ಥೆಯ ಅಧ್ಯಕ್ಷರಾದ ಶ್ರೀ ಸ್ವಾಮೀ ಪ್ರಣವಾನಂದಜೀ ಇವರ ಆಮಂತ್ರಣದ ಮೇರೆಗೆ ಗುರುಗಳು ಅಲ್ಲಿಗೆ ದಯಮಾಡಿಸಿದರು. ಗುರುಗಳನ್ನು ಬರಮಾಡಿಕೊಂಡು ಸಂಸ್ಥೆಯ ಕಾರ್ಯಕಲಾಪಗಳ ಪರಿಚಯವನ್ನು ಮಾಡಿಕೊಟ್ಟರು. ಆಶ್ರಮದ ಸಂಚಾಲಕರು ಕೈಕೊಂಡ ಭಾರತೀಯ ತತ್ವ ಪ್ರಚಾರ-ಸಂಘಟನೆ-ಧಾರ್ಮಿಕ ಗ್ರಂಥ ಪ್ರಕಟನೆಯ ಕಾರ್ಯ ಇವುಗಳನ್ನು ನೋಡಿ ಗುರುಗಳು ಮೆಚ್ಚಿಕೊಂಡು ಅತ್ಯಂತ ಆತ್ಮೀಯತೆಯಿಂದ ೨-೩ ಘಂಟೆಗಳ ಕಾಲ ನಮ್ಮ ದೇಶದ ಧಾರ್ಮಿಕ ವಿಷಯಗಳನ್ನು ಕುರಿತು ವಿಚಾರವಿನಿಮಯ ಮಾಡಿದರು. ಈ

ಚರ್ಚೆಯಲ್ಲಿ ಡಾ, ದಿವಾಕರರು ಮತ್ತು ನಾನು ಭಾಗ ವಹಿಸಿದೆವು. ಅಲ್ಲಿಯೇ ಆಶ್ರಮದ ಅತಿ ಸನಿಹದಲ್ಲಿರುವ ಗಿರಿಶಿಖರದಲ್ಲಿ ಗಿರಿಯ ಗರ್ಭವನ್ನೇ ಕೊರೆದು ವಿಸ್ತಾರ ವಿಸ್ತೃತ ಸಾಂದ್ರತೆಯನ್ನು ನಿರ್ಮಿಸಿ ಕೊಂಡಂತಿರುವ ವಿರೂದ್ರೂಪವಾದ 'ಬಟು' ಗವಿಗಳನ್ನು ನೋಡಲು ಹೊರಟೆವು. ಇದೊಂದು ನಿಸರ್ಗದ ಭವ್ಯದೃಶ್ಯ. ಗಗನಚುಂಬಿಯಾದ ಗಿರಿಯ ತುದಿಯ ಒಂದು ಭಾಗದಿಂದ ಆಕಾಶಗಂಗೆ ಹರಿಯು ತ್ತಿದೆ. ಗಿರಿಯ ಗರ್ಭದಲ್ಲಿ ಹಿರಿದಾದ ಪಡಸಾಲೆಯಲ್ಲಿ ಒಂದೆಡೆ ಕಾರ್ತಿಕೇಯ ಸ್ವಾಮಿಯ ಮೂರ್ತಿಯು ವಿರಾಜಮಾನವಾಗಿ ಬೆಳಗುತಲಿದೆ. ಆ ಭಾಗದಲ್ಲಿರುವ ಭಾವಿಕಜನಗಳಿಗೆ ಇದೊಂದು ಯಾತ್ರಾ ಸ್ಥಳ. ಲಕ್ಷಾಂತರ ಜನರು ಜಾತಿ ವಿಜಾತಿ ಗಳ ಭೇದವನ್ನು ಮರೆತು ಈ ದೇವಸೇನಾನಿ, ಷಣ್ಮುಖ ಸ್ವಾಮಿಯ ಜಾತ್ರೆ ಯಲ್ಲಿ ಭಾಗವಹಿಸುತ್ತಿರುವರಂತೆ. ಈ ದೃಶ್ಯವನ್ನು ನೋಡಿ ಗುರುಗಳು ಮಹೋ ನ್ನತಿಯಲ್ಲಿ ನಮ್ರತೆಯನ್ನು, ಜಡದಲ್ಲಿ ಚೈತನ್ಯ ಶಕ್ತಿಯನ್ನು ಪವಿತ್ರತೆಯನ್ನು ಕಂಡು ಭಾವ ಮೌನರಾಗಿ ಕೆಲ ಹೊತ್ತು ಅಲ್ಲಿಯೇ ಕುಳಿತು ಆನಂದ ಪಟ್ಟರು. ಕೌಲಾಲಂ-ಪುರದ ಈ ಭವ್ಯ ದೃಶ್ಯವನ್ನು ನೋಡಿ ದಾರಿಯುದ್ದಕ್ಕು ಪ್ರಕೃತಿಯ ಹಚ್ಚು ಹಸುರಿನ ಚೆಲುವನ್ನು, ಗಿರಿಕಂದಗಳ ಘನತೆ ಗಂಭೀರತೆಗಳನ್ನು ನೀರೀಕ್ಷಿಸುತ್ತ ಪ್ರಶಾಂತ ನಗರಕ್ಕೆ ಹಿಂತಿರುಗಿದೆವು. ಇಲ್ಲಿರುವ ಮಹಮ್ಮದೀಯ ಧರ್ಮದ ಪ್ರತಿಷ್ಠೆಯನ್ನು ಹೊತ್ತು ನಿಂತಂತಿರುವ ಮಸೀದೆಗೆ ಬಂದೆವು. ಇದು ಅಸಾಮಾನ್ಯ ಸೌಂದರ್ಯದಿಂದ ಕೂಡಿದೆ. ಕೋಟ್ಯಾಂತರ ಹಣವನ್ನು ಖರ್ಚುಮಾಡಿ ಕಟ್ಟಿಸಿದ್ದಾರೆ. ನಾವು ಮಂದಿರವನ್ನು ಬರಿಗಾಲಿ ನಿಂದ ಪ್ರವೇಸಿಸಬೇಕು. ನಾವು ಪ್ರವೇಶಿಸುವಂತೆ ನಮ್ಮ ಪ್ರತಿಬಿಂಬವನ್ನು ಕಾಣು ತ್ತೇವೆ. ಅತ್ಯಂತ ಹೊಳಪುಳ್ಳ ಶಿಲೆಗಳನ್ನು ಕೆಚ್ಚಿರೋಣದರಿಂದ ಚತುಷ್ಕೋಣಾಕಾರದ ಮಧ್ಯ ಮಂಟಪದಲ್ಲಿ ನಿರ್ಮಲ ನೀರಿನಿಂದ ತುಂಬಿದ ಪುಷ್ಕರಿಣಿ ಇರುವುದೋ ಹೇಗೆ ಎಂಬ ಭ್ರಾಂತಿ ಬಂದು ಮಹಾಭಾರತ ಕಾಲದ ಇಂದ್ರಪ್ರಸ್ಥ ನಗರಿಯಲ್ಲಿದ್ದ ಪಾಂಡವರ ಅರಮನೆಯ ಸಭಾ ಭವನದ ವರ್ಣನೆಯ ವಿಚಾರ ಮನಸ್ಸಿನಲ್ಲಿ ಮಿಂಚಿತು. ಗುರು ಗಳೊಡನೆ ಈ ಮಹಮ್ಮದೀಯ ಧರ್ಮದ ಪ್ರಾರ್ಥನಾ ಶಾಲೆಯ ಸಿರಿಗರಿಮೆಯನ್ನು ಮನವಾರೆ ಮಾತನಾಡಿದೆನು. ಅಲ್ಲಿಂದ ಪ್ರಸಿದ್ಧವಾದ ವಸ್ತು ಸಂಗ್ರಹಾಲಯಕ್ಕೆ ರಾಯ ಭಾರಿ ವರ್ಗದವರು ಕರೆದುಕೊಂಡು ಹೋದಾಗ ಅಲ್ಲಿರುವ ವಿಶಾಲವಾದ ಪ್ರಾಚೀನ-ನವೀನ ವಿವಿಧ ವಸ್ತುಗಳನ್ನು ನೋಡಿದೆವು. ಅಲ್ಲಿ ಚಂದ್ರಲೋಕದಿಂದ ಭೂಲೋಕಕ್ಕೆ ತೆಗೆದುಕೊಂಡು ಬಂದ ಚಂದ್ರಶಿಲೆಯ ಒಂದು ಸಣ್ಣ ತುಣಕನ್ನು ಕಂಡೆವು. ಅದು ಒಂದು ಕಾಜಿನ ಗುಂಡಿನಂತೆ ಹೊಳಪುಳ್ಳದ್ದಾಗಿದೆ. ಅದನ್ನು ನೋಡಿ ಬಹಳ ಆನಂದ ಪಟ್ಟರು ಗುರುಗಳು.

ಕೌಲಾಲಂಪುರದಲ್ಲಿ ಗುರುಚರಣ ಸೇವೆಯ ಪ್ರಸಂಗವೊಂದು ಒದಗಿತು. ಮಲೇಶಿ ಯಾದ ಉದ್ಯೋಗ-ಸಂಪರ್ಕ ಮಂತ್ರಿಗಳಾದ ಶ್ರೀ. ವ್ಹಿ. ಟಿ. ಸಂಭಂಧನ್ ಅವರ ಪತ್ನಿಯವರು ರಾಯಭಾರಿ ವರ್ಗದವರ ಔತಣಕ್ಕೆ ಆಮಂತ್ರಿತರಾಗಿ ಬಂದಿದ್ದರು.

ಪೂಜ್ಯ ಗುರುಗಳನ್ನು ಅಲ್ಲಿ ಸಂದರ್ಶಿಸಿ ಪ್ರಭಾವಿತರಾಗಿ ತಮ್ಮ ಮನೆಗೆ ಕರೆದು ಕೊಂಡುಹೋದರು. ಮಂತ್ರಿಗಳಾದ ಶ್ರೀ ಸಂಭಂಧನ್ ಇವರು ಗುರುಗಳನ್ನು ತಮ್ಮ ಮನೆಯ ಮಹಾದ್ವಾರದಲ್ಲಿ ಸ್ವಾಗತಿಸಿ ಒಳಗೆ ಕರೆದೊಯ್ದು ಪೀಠದ ಮೇಲೆ ಕೂಡ್ರಿಸಿ ನಮಸ್ಕರಿಸಿದರು. ಭಾರತೀಯರಾದ ಇವರು ಮತ್ತು ಇವರ ಪತ್ನಿಯರು ಗುರುಗಳ ಪಾದ ಪೂಜೆಯನ್ನು ಒಳ್ಳೇ ವೈಭವದಿಂದ, ಭಕ್ತಿಯ ಆನಂದೋದ್ರೇಕದಿಂದ ಮಂಗಲ ಸಂಗೀತದೊಡನೆ ನೆರವೇರಿಸಿದರು. ಶ್ರೀಮತಿ ಸಂಬಂಧನ್ ಇವರು ವೀಣಾವಾದನ ಕಲೆ ಯಲ್ಲಿ ಕರ್ನಾಟಕಿ ಗಾಯನದಲ್ಲಿ ನಿಪುಣರು, ಸಂದರ್ಭಕ್ಕನುಸರಿಸಿ ಸಂಸ್ಕೃತ ರಚಿತವಾದ "ಲಿಂಗಾಷ್ಟಕವನ್ನು" ಒಳ್ಳೇ ಭಾವ ನಿರ್ಭರತೆಯಿಂದ ಹಾಡಿ ಸರ್ವರನ್ನು ಭಾವ ಪರವಶ ರನ್ನಾಗಿ ಮಾಡಿದರು. ಇವರಿಗೆ ಸಂಸ್ಕೃತವೆಂದರೆ ಪಂಚಪ್ರಾಣ ತಾವು ಬಿ. ಎ. ದವರೆಗೆ ಸಂಸ್ಕೃತವನ್ನು ಅಭ್ಯಾಸಮಾಡಿರುವೆವೆಂದು ತಿಳಿಸಿದರು. ನಾನು ಸಂಸ್ಕೃತ ಪ್ರಾಧ್ಯಾಪಕನೆಂದು ತಿಳಿದು ಕಾಳಿದಾಸನ "ಮಾಳವಿಕಾಗ್ನಿ ಮಿತ್ರ" ನಾಟಕದ ನಾಂದಿ ಶ್ಲೋಕದ ಈಶ್ವರಸ್ತವನವನ್ನು ಬರೆಸಿಕೊಂಡು ಅರ್ಥವಿವರಣೆಯನ್ನು ತಿಳಿದುಕೊಂಡು ಗುರುಗಳ ಸನ್ನಿಧಿಯಲ್ಲಿ ತಂತ್ರಿಯ ವಾದ್ಯದೊಡನೆ ಸ್ವರಗಳನ್ನು ಮೇಳೈಸಿ ತಾಳಲಯ ಬದ್ಧವಾಗಿ ಹಾಡಿ ಸರ್ವರನ್ನು ಆನಂದಪಡಿಸಿದರು. ಭಾರತೀಯರು ಎಲ್ಲಿದ್ದರೂ ತಮ್ಮ ಧಾರ್ಮಿಕ ಪರಂಪರೆಯನ್ನು ಸಂಸ್ಕೃತಿಯ ಸಂಬಂಧವನ್ನು ಬಿಡದೆ ಮುಂದುವರಿಸಿಕೊಂಡು ಹೋಗುವರೆಂಬ ಪ್ರತ್ಯಕ್ಷ ಉದಾಹರಣೆಯನ್ನು ಇವರಲ್ಲಿ ಕಾಣ ಬಹುದು ಎಂದು ಗುರುಗಳು ಉದ್ಗಾರತೆಗೆದರು. ಗುರುವರ್ಯರಿಗೆ ಭಕ್ತಿಕಾಣಿಕೆಯನ್ನ ರ್ಪಿಸಿ ಫಲಮಂತ್ರಾಕ್ಷತೆಯನ್ನು ಗುರುಗಳಿಂದ ಸ್ವೀಕರಿಸಿ ಕೃತಕೃತ್ಯರಾದೆವೆಂದು ಹೇಳಿ ಸಂತೋಷದಿಂದ ಬೀಳ್ಕೊಟ್ಟರು.

## ಥಾಯ್-ಲ್ಯಾಂಡಿನ ಬ್ಯಾಂಗ್‌ಕಾಕಿನಲ್ಲಿ

ಬೌದ್ಧಧರ್ಮದ ಕೇಂದ್ರಸ್ಥಾನವಾದ ಬ್ಯಾಂಗ್‌ಕಾಕ್‌ನಗರಕ್ಕೆ ದಿ. ೩ ನವಂಬರ ರಂದು ವಿಮಾನಮಾರ್ಗವಾಗಿ ಬಂದಿಳಿದೆವು. ಪದ್ಧತಿಯಂತೆ ರಾಯಭಾರಿಯ ಸಿಬ್ಬಂದಿಯ ಮುಖ್ಯಸ್ಥರಾದ ಶ್ರೀ. ತ್ರಿಪಾಠಿ ಎಂಬುವರು ನಮ್ಮ ಪರಿವಾರದವರನ್ನು ಸ್ವಾಗತಿಸಿದರು. ಬ್ಯಾಂಗ್‌ಕಾಕ್ ನಗರದಲ್ಲಿ "ಥಾಯ್–ಭಾರತ ಮಂದಿರವೆಂಬ" ಎಂದು ವಿಶಾಲವಾದ ಮಂದಿರವಿದೆ. ಅಲ್ಲಿಯೇ ನಮ್ಮೆಲ್ಲರ ವಾಸ್ತವ್ಯಕ್ಕೆ ವ್ಯವಸ್ಥೆಯನ್ನು ಏರ್ಪಡಿಸಿದ್ದರು. ಥಾಯ್ ಭಾಷೆಯನ್ನು ಅರಿತ ಸಾರ್ವಜನಿಕ ಸಂಪರ್ಕಾಧಿಕಾರಿ ಶ್ರೀ ಶರ್ಮಾ ಅವರು ನಮ್ಮೊಡನೆ ಇರುತ್ತಿದ್ದರು. ಶ್ರೀ ಸಚದೇವ ಎಂಬ ಸದ್ಗೃಹಸ್ಥರು ದೊಡ್ಡ ಶ್ರೀಮಂತರು, ಮಿಲ್ಲುಗಳ ಮಾಲೀಕರು ಮತ್ತು ಡಾಯರೆಕ್ಟರು. ಅತ್ಯಂತ ಸಾದಾ ಖಾದಿ ಉಡುಪನ್ನು ಧರಿಸಿದವರು ಇದ್ದರೂ ತಮ್ಮ ಶೀಲ ಸೌಜನ್ಯದಿಂದ ಔದಾರ್ಯ – ಘನತೆಗಳಿಂದ ಅತ್ಯಂತ ಪ್ರಭಾವಶಾಲಿಗಳಾಗಿ ಕಾಣುತ್ತಿದ್ದರು. ಇವರು ೨ ಸಾವಿರ ವಿದ್ಯಾರ್ಥಿಗಳ ಹಾಯಸ್ಕೂಲನ್ನು ನಡೆಸುತ್ತಾರೆ. ಭಾರತದಿಂದ ಬಂದವರಿಗೆ

ಆತಿಥ್ಯವನ್ನು ಅರ್ಪಿಸುತ್ತಾರೆ. ಗುರುಗಳನ್ನು ಅತ್ಯಂತ ಗೌರವಾದರಗಳಿಂದ ಪುರಸ್ಕರಿಸಿ ಪೂಜಾ ಪ್ರಸಾದಗಳಿಗೆ ಎಲ್ಲ ವ್ಯವಸ್ಥೆಯನ್ನು ಮಾಡಿದರು. ತಮ್ಮ ಸಹೋದರರಾದ ಶ್ರೀ ಸುರಜಭಾನ ಸಜದೇವ ಎಂಬವರನ್ನು ನಮ್ಮೊಡನೆ ಕಳಿಸಿ ಸುಂದರ ನಗರವನ್ನು ತೋರಿಸಿ ನಮಗೆ ಬೇಕಾದ ಸಾಮಾನುಗಳನ್ನು ಕೊಡಿಸಲು ಹೇಳಿ ಕಳಿಸಿದ್ದರು. ಇಲ್ಲಿಯ ವಿಶೇಷವೆಂದರೆ ಬೌದ್ಧ ಧರ್ಮದ ಮುಖ್ಯ ಗುರುಗಳೊಡನೆ ಸಂದರ್ಶನ. ಬೌದ್ಧ ಧರ್ಮದ ಮುಖ್ಯ ಗುರುಗಳನ್ನು (His Holiness Supreme Patriarch of Thiland) ಸಂದರ್ಶಿಸಲು ರಾಯಭಾರಿ ವರ್ಗದವರು ವ್ಯವಸ್ಥೆ ಮಾಡಿದ ಪ್ರಕಾರ ಅವರ ಅರಮನೆಯಂತಿರುವ ಗುರುಮಠದಲ್ಲಿ ಗುರುಗಳು ಮತ್ತು ಪರಿವಾರದವರು ಅವರನ್ನು ಕಂಡೆವು. ದುಭಾಷಿ ಶ್ರೀ ಶರ್ಮರ ಮುಖಾಂತರ ಉಭಯ ಗುರುವರೇಣ್ಯರು ಧರ್ಮ ಮತ್ತು ವಿಶ್ವ ಶಾಂತಿಯ ತುಲನಾತ್ಮಕ ವಿಮೋಚನೆ ಮಾಡಿದರು. ಅಲ್ಲಿಂದ ಬ್ಯಾಂಗ್‌ಕಾಕಿನಲ್ಲಿರುವ ಬೌದ್ಧ ಸಂನ್ಯಾಸಿಗಳ ವಿಶ್ವವಿದ್ಯಾಲಯಕ್ಕೆ (Mahachulalong Koruraja Vidyalay) ಭೆಟ್ಟಿ ಕೊಟ್ಟೆವು. ಅಲ್ಲಿ ಕಲಿಯುವವರೂ ಕಲಿಸುವವರೂ ಆಡಳಿತ ವರ್ಗದವರೂ ಎಲ್ಲರೂ ಬುದ್ಧ ಸನ್ಯಾಸಿಗಳೇ. ಗುರುಗಳು ತಮ್ಮ ಧ್ಯೇಯ ಧೋರಣೆಗಳ ಮನೀಷೆಗೆ ಅತ್ಯಂತ ಸಮೀಪವಾದ ಈ ಸಂಸ್ಥೆಯನ್ನು ನೋಡಿ ಬಹಳ ಸಂತೋಷ ವ್ಯಕ್ತ ಮಾಡಿದರು. " ಸರ್ವಃ ಸಂಗಧೇಷು ಸ್ನಿಹ್ಯತಿ " ಎಂದು ಕಾಳಿದಾಸನು ಅಭಿಜ್ಞಾನ ಶಾಕುಂತಲದಲ್ಲಿ ವ್ಯಕ್ತಪಡಿಸಿದ ವಾಕ್ಯವು ನೆನಪಿಗೆ ಬಂದಿತು. ಗುರುಗಳಿಗೆ ತಿಳಿಸಿದೆನು. ಉಭಯರೂ ನಕ್ಕು ನಲಿದಾಡಿದೆವು. ಇಂಥ ಸಂಸ್ಥೆಯನ್ನೇ ತಾವು ಕೂಡಾ ತಮ್ಮ ನಾಡಿನಲ್ಲಿ ಸ್ಥಾಪಿಸುವದು ಹಿತಕರವೆಂಬ ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದರು. ರಾಯಭಾರಿ ವರ್ಗದವರು ನಮ್ಮ ವಿದೇಶ ಪಯಣದ ಕೊನೆಯ ಕಾರ್ಯಕ್ರಮವನ್ನು ಯಶಸ್ವಿಯಾಗಿ ನೆರವೇರಿಸಿ, ತಾಯ್ನಾಡಿಗೆ ಮರಳಿ ತೆರಳಲು ತುಂಬಿದ ಹೃದಯದಿಂದ ಬೀಳ್ಕೊಟ್ಟರು.

## ತಾಯ್ನಾಡಿಗೆ ಮರು ಪ್ರಯಾಣ

ದಿ. ೫–೧೧–೭೦ ರಂದು ವಿದೇಶ ಪ್ರಯಾಣವನ್ನು ಮುಕ್ತಾಯ ಮಾಡಿ ತಾಯ್ನಾಡಾದ ಭಾರತಕ್ಕೆ ವಿಮಾನದಲ್ಲಿ ಮರಳಿದೆವು. ಕಲಕತ್ತೆಯಲ್ಲಿ ಇನ್‌ಕಮ್‌ಟ್ಯಾಕ್ಸ ಅ. ಕಮೀಶನರ ಶ್ರೀ ಎಮ್. ಪಿ. ಹೊಸಮನಿಯವರ ಆತಿಥ್ಯದಲ್ಲಿ ೨ ದಿವಸ ನಿಂತು ಅಲ್ಲಿಯ ದರ್ಶನೀಯ ಸ್ಥಳಗಳನ್ನು ನೋಡಿಕೊಂಡು, ಸ್ವಾಮಿ ವಿವೇಕಾನಂದ – ರಾಮಕೃಷ್ಣರ ಬೇಲೂರ ಮಠಕ್ಕೆ ಹೋಗಿ ಅಲ್ಲಿಯ ಸ್ವಾಮಿಗಳನ್ನು ಸಂದರ್ಶಿಸಿ, ಅಲ್ಲಿಂದ ದಿಲ್ಲಿಗೆ ಪಯಣ ಬೆಳೆಸಿ ಅಲ್ಲಿ ಕೋ – ಆಪರೇಟಿವ್ಹ ಡೆ. ರಜಿಸ್ಟ್ರಾರ ಶ್ರೀ ಸಿ. ಆರ್. ಹಿರೇಮಠರಲ್ಲಿ ೨ ದಿವಸ ಆತಿಥ್ಯ ಪಡೆದೆವು. ದಿ. ೧೦ ರಂದು ಮುಂಬೈಗೆ ಪ್ರಯಾಣ ಮಾಡಿ ಅಲ್ಲಿ ನನ್ನ ಸಹಾಧ್ಯಾಯಿಗಳೂ ಮಿತ್ರರೂ ಮತ್ತು ಪೂಜ್ಯರ ಸತ್ಕೃಪೆಗೆ ಪಾತ್ರರೂ ಆದ ಇನ್‌ಕಮ್ ಟ್ಯಾಕ್ಸ ಅ. ಕಮೀಶನರ ವ್ಹಿ. ಆರ್. ಹಿರೇಮಠರಲ್ಲಿ

ಒಂದು ದಿನವಿದ್ದು ಅವರಲ್ಲಿ ಪೂಜೆ ತೀರಿಸಿಕೊಂಡು ಅವರೆಲ್ಲರಿಗೂ ಆಶೀರ್ವದಿಸಿ ದಿ. ೧೧-೧೧-೭೦ ರಂದು ಮುಂಬೈಯಿಂದ ವಿಮಾನ ಮಾರ್ಗವಾಗಿ ಹೊರಟು ಬೆಳಗಾವಿಯ ವಿಮಾನ ನಿಲ್ದಾಣದಲ್ಲಿ ಸನ್ನಿಧಿಯವರು ವಿಮಾನದಿಂದ ಇಳಿದರು. ವಿದೇಶ ಪ್ರಯಾಣ ಮಾಡಿ ಜಾಗತಿಕ ಧರ್ಮಶಾಂತಿ ಪರಿಷತ್ತಿನಲ್ಲಿ ಭಾರತದ ಸಂದೇಶವನ್ನು ಬೀರಿ ಸುಖರೂಪವಾಗಿ ಬಂದ ಗುರುವರ್ಯರನ್ನು ಸ್ವಾಗತಿಸಲು ಮಹಾಜನಗಳು ಸ್ವಾಮಿಗಳು ವಿಮಾನ ನಿಲ್ದಾಣದಲ್ಲಿ ನೆರೆದಿದ್ದರು. ಸರ್ವರ ಹಾರ್ದಿಕ ಸ್ವಾಗತವನ್ನು ಸ್ವೀಕರಿಸಿ ಮಧ್ಯಾಹ್ನ ೧ ಘಂಟೆಗೆ ಮಹಾಸನ್ನಿಧಿಯವರು ಶ್ರೀಮಠಕ್ಕೆ ದಯ ಮಾಡಿಸಿದರು.

## ಕೊನೆಯ ಮಾತು

ಶ್ರೀ ಗಂಗಾಧರ ರಾಜಯೋಗೀಂದ್ರರು ಆದರ್ಶ ಜೀವಿಗಳು, ವಿದ್ಯಾಲಂಕೃತರು, ಉತ್ತಮ ವಾಗ್ಮಿಗಳು, ಸದಾಚಾರ ಶೀಲರು, ಭಾಗ್ಯವಂತರು. ಧರ್ಮದ ಮಹಾಪೀಠ ವನ್ನಲಂಕರಿಸಿದರೂ ಅಹಂಕಾರದ ಸುಳಿವಿಲ್ಲ. ಮಹೋದಾರ ಕಾರ್ಯಗಳನ್ನು ಗೈಯ್ಯ ಬೇಕೆಂಬ ಹುಮ್ಮಸ ಅವರಲ್ಲಿದೆ. ತಮ್ಮ ಮಠದ ಸಿರಿಸಂಪತ್ತೆಲ್ಲಾ ಪರೋಪಕಾರಕ್ಕೆ ವಿನಿಯೋಗವಾಗಬೇಕೆಂಬ ಧ್ಯೇಯಧೋರಣೆಯುಳ್ಳವರಾಗಿ ಅನೇಕ ಶಿಕ್ಷಣ ಸಂಸ್ಥೆಗಳನ್ನು ನಡೆಸಿಕೊಂಡು ಬಂದಿದ್ದಾರೆ, ಅಂತರಂಗ ಬಹಿರಂಗಗಳಲ್ಲಿಯೂ ಆಧ್ಯಾತ್ಮಿಕ ಪ್ರಗತಿಯ ಸಮನ್ವಯವಾಗಬೇಕೆಂದು ಬಯಸಿ ಶ್ರೀಮಠದಲ್ಲಿ ಕುಮಾರ ಶಿವಯೋಗಿ ಸಂಘವನ್ನು ಸ್ಥಾಪಿಸಿ ಆ ದಿಶೆಯಲ್ಲಿ ಪ್ರವೃತ್ತಿಯುಳ್ಳ ಶಿವಯೋಗ ಸಾಧಕ ವಟುಗಳಿಗೆ ಯೋಗ-ಆಸನ-ಆಧ್ಯಾತ್ಮಿಕ ಅಧ್ಯಯನ ಮುಂತಾದ ವಿಷಯಗಳ ವ್ಯಾಸಂಗದ ಸಲುವಾಗಿ ವ್ಯವಸ್ಥೆ ಯನ್ನು ಮಾಡಿದ್ದಾರೆ. ತಮ್ಮ ಕಾರ್ಯಕ್ಷೇತ್ರದ ಕ್ಷಿತಿಜವನ್ನು ಇನ್ನು ವಿಸ್ತರಿಸಿ ಅವಿ ಶ್ರಾಂತ ಪರಿಶ್ರಮ ವಹಿಸಿ ಸಮಾಜದ ಸರ್ವಾಂಗೀಣ ವಿಕಾಸಕ್ಕಾಗಿ ದುಡಿಯಬೇಕೆಂಬ ಧ್ಯೇಯ ನಿಷ್ಠೆಯುಳ್ಳವರಾಗಿದ್ದಾರೆ, ಅವರ ಕರ್ತವ್ಯ ಪ್ರಜ್ಞೆ, ಕಾಯಕನಿಷ್ಠೆ, ಸ್ವಯಂ ಸೇವೆಯಲ್ಲಿ ಅಭಿರುಚಿ, ಧಾರ್ಮಿಕಶ್ರದ್ಧೆ, ಮಾನವತಾ ಪ್ರೇಮ, ವಿಶಾಲ ಮನೋಭಾವ ಅವ್ಯಾಜ ಪ್ರೇಮ, ಪರೋಪಕಾರಬುದ್ಧಿ, ಸದಾಚಾರ ಜೀವನ ಧಾರ್ಮಿಕಕ್ರಿಯೆಗಳಲ್ಲಿ ನಿಷ್ಠೆ, ಇತ್ಯಾದಿ ಗುಣಗಳು ಅವರ ಜೀವನದ ಘನತೆಯನ್ನು ಊರ್ಜಿತಗೊಳಿಸಲು ಕಾರಣಗಳಾಗಿವೆ. ಸಂಕುಚಿತ ಭಾವನೆ ಅವರಿಗೆ ಎಂದಿಗೂ ಸೇರುವದಿಲ್ಲ. ಗುರುಗಳು ಸದಾ ಅಧ್ಯಯನ ಶೀಲರು ಈ ಜಗತ್ತಿನ ವಿಶಾಲೌನತ್ಯಗಳನ್ನು ತಿಳಿಯಲು ಏನಾದ ರೊಂದು ಗ್ರಂಥವನ್ನು ಓದುತ್ತಲೇ ಇರುತ್ತಾರೆ, ಈ ವಿಶಾಲವಾದ ಜಗತ್ತನ್ನು ಪ್ರತ್ಯಕ್ಷವಾಗಿ ಅರಿಯಲು ಈ ವಿದೇಶ ಪ್ರವಾಸವು ಒಂದು ಸುಯೋಗವನ್ನು ಒದಗಿಸಿತು, ಆಂಗ್ಲಭಾಷೆಯ ಅಂತರರಾಷ್ಟ್ರೀಯ ಪ್ರಭಾವವನ್ನರಿತು ಗುರುಗಳು ಇಂಗ್ಲೀಷ ಭಾಷೆಯನ್ನು ಹೆಚ್ಚಿಗೆ ಅಭ್ಯಾಸಮಾಡಲು ತಮ್ಮದೇ ಆದ ಏರ್ಪಾಡನ್ನೂ ಮಾಡಿಕೊಂಡಿದ್ದಾರೆ. ಸಾಧ್ಯವಾದರೆ ಪಾಶ್ಚಾತ್ಯ ದೇಶಗಳಲ್ಲಿಯೂ

ಕೆಲವುಕಾಲ ಸಂಚರಿಸಿ, ಅನುಕೂಲವಾದ ಪರಿಸ್ಥಿತಿಯೊದಗಿದಲ್ಲಿ ಪರದೇಶದಲ್ಲಿ ಒಂದು ಮಠವನ್ನು ಸ್ಥಾಪಿಸಿ ಆಧ್ಯಾತ್ಮವಿದ್ಯೆಯನ್ನು ಕಲಿಸಲು ಏರ್ಪಾಡುಮಾಡಬೇಕೆಂಬ ಬಲವಾದ ಇಚ್ಛೆಯುಳ್ಳವರಾಗಿದ್ದಾರೆ. ಕೇವಲ ವಿಜ್ಞಾನದ ಪ್ರಗತಿಯಿಂದ ಮಾನವ ಕುಲದ ಕಲ್ಯಾಣವಾಗಲಾರದು. ವಿಜ್ಞಾನದೊಡನೆ ಆಧ್ಯಾತ್ಮದ ಸಮನ್ವಯವಾಗಬೇಕು, ಧರ್ಮವು ವಿಜ್ಞಾನದೃಷ್ಟಿಕೋನವನ್ನರಿಸಿಕೊಳ್ಳಬೇಕು, ಮಾನವ ತನ್ನನ್ನು ತಾನು ಅರಿತು ಕೊಳ್ಳಬೇಕು, ಅಂದರೇನೆ ಈ ಲೋಕದಲ್ಲಿ ಶಾಂತಿ ಸಮೃದ್ಧಿಗಳು ನೆಲೆಸಬಹುದು, ಎಂಬ ವಿಚಾರವನ್ನು ವಿದೇಶ ಸಂಚಾರದಲ್ಲಿ ಅದೆಷ್ಟೋ ಸಲ ನನ್ನ ಎದುರು ಪ್ರಸ್ತಾಪಿಸಿ-ದ್ದುಂಟು, ಸಮಗ್ರವಾದ ಒಂದು ತಿಂಗಳ ವಿದೇಶ ಪ್ರವಾಸದಲ್ಲಿ ಅವರ ಸಂಗಾತಿಯಾಗಿ ಸಂಚರಿಸಿದ ನಾನು ಅವರ ಉದಾತ್ತ ಮನೋಭೂಮಿಕೆಯನ್ನು ಅರಿತುಕೊಂಡೆ. ಅವರ ಜೀವನದ ಗುರಿಯ ದಿಗ್ದರ್ಶನವಾಯ್ತು. ಶ್ರೀಗಳು ಸ್ವಭಾವತಃ ಮೃದು. ಆದರೆ ನಿಷ್ಠುರತೆ ಕ್ಷಣಕಾಲ. ಅವರು ಕ್ಷಮಾಶೀಲರು. ಪರೋಪಕಾರ ಮಾಡುವದರಲ್ಲಿಯೇ ತಮ್ಮ ಜೀವನಕೊನೆಗೊಳ್ಳಬೇಕೆಂಬ ಮನೀಷೆಯುಳ್ಳವರು. ಹೆಚ್ಚೇನು ? ನಮ್ಮ ನಾಡಿನ ಭಾಗ್ಯ ನಮ್ಮ ಧರ್ಮದ ಶುಭೋದಯ. ನಿಜವಾಗಿಯೂ, ನಮ್ಮ ನಾಡಿಗೆ, ನುಡಿಗೆ ಸಂಸ್ಕೃತಿಗೆ ಅವರಿಂದ ಅಪ್ರತಿಮ ಸೇವೆ ಸಲ್ಲುವ ಭವಿಷ್ಯವಿದೆಯೆಂದು ನಂಬಿರುವೆ. ಈ ಲೇಖನ ಕುಸುಮಸ್ತಬಕವನ್ನು ಶ್ರೀ ಗುರುಚರಣಸರೋಜಗಳಲ್ಲಿ ಅರ್ಪಿಸಿ ಕೃತಾರ್ಥನಾಗುವೆ. □

# ವೀರಶೈವ ಮಠಾಧೀಶರಲ್ಲಿ
# ಮೂರುಸಾವಿರಮಠದ ಜಗದ್ಗುರುಗಳ ಪಾತ್ರ

---

ಪಂ. ನಾಗಭೂಷಣ ಶಾಸ್ತ್ರಿಗಳು

ಭಾರತವು ದೇವಮಾನವರ ನಿವಾಸದ ಪುಣ್ಯಭೂಮಿಯು. ಇಲ್ಲಿ ಸಮಗ್ರ ಭೌತಿಕ ಸಂಪತ್ತಿನ ಜೊತೆಗೆ ಅಗಾಧವಾದ ಆಧ್ಯಾತ್ಮಿಕ ಸಂಪತ್ತೂ ಸಮೃದ್ಧವಾಗಿರುವದು. ಇದೇ ಈ ನೆಲದ ವೈಶಿಷ್ಟ್ಯ. ವೇದ, ಆಗಮ, ಉಪನಿಷತ್ತು, ದರ್ಶನ, ಪುರಾಣ ಮೊದಲಾದವು ಹಾಗು ಶರಣರ ವಚನಗಳು ಸಂತರ ಹಾಡುಗಳು ಇವೆಲ್ಲ ಸತ್ಯಾನುಭೂತಿಯ ಚಿದೈಶ್ವರ್ಯದ ಅಕ್ಷಯ ನಿಧಿಯಾಗಿರುವವು. ಮಾನವರ ಬುದ್ಧಿಗೆ ಬಿಡಿಸಲಸಾಧ್ಯವಾದ ಎಷ್ಟೋ ಸಮಸ್ಯೆಗಳನ್ನು ಸುಲಭವಾಗಿಯೇ ಬಿಡಿಸಿ ಅವರನ್ನು ಅಕ್ಷಯ ಸುಖದ ಮಹಾ ದೊರೆಗಳನ್ನಾಗಿ ಮಾಡುವ ಸಾಮರ್ಥ್ಯವು ಇವುಗಳಲ್ಲಿ ಸ್ವಾಭಾವಿಕವಾಗಿಯೇ ಇರುವದು. ಈ ಸಂಪತ್ತಿನ ಸದುಪಯೋಗವನ್ನು ಮಾಡಿಕೊಳ್ಳಲು ತೊಡಗಲಿಕ್ಕೂ ಮಹಾ ಭಾಗ್ಯವೇ ಬೇಕು. ಅಂತಹ ಪ್ರವೃತ್ತಿ ಸಂಪನ್ನರು ಮಾನವತೆಯ ಮಾನವನ್ನು ಕಾಯ್ದುಕೊಂಡು ತಮ್ಮಲ್ಲಿ ಹುದುಗಿದ ದೇವತ್ವದ ಅರಿವನ್ನು ಪಡೆದು ಕೃತಕೃತ್ಯರಾಗುವಲ್ಲಿ ಸಂದೇಹವಿಲ್ಲ. ಈ ದೃಷ್ಟಿಯಿಂದ ಮಾನವರನ್ನು ಎಚ್ಚರಿಸಿ ಅವರನ್ನು ಆತ್ಮಕಲ್ಯಾಣದ ದಿವ್ಯಮಾರ್ಗದಲ್ಲಿ ನಡೆಯಿಸಲು ಬೇಕಾದ ವ್ಯವಸ್ಥೆಯನ್ನು ಮಾಡುವಲ್ಲಿಯೇ ಧರ್ಮಪೀಠ—ಮಠಗಳು ಸಂಸ್ಥಾಪಿತವಾಗಿರುವವು. ಅವುಗಳ ಒಡೆಯರಿಗೆ ದೊರೆಯುವ ಮಾನ ಮರ್ಯಾದೆಗಳು ಕೂಡ ಅವರು ಕೈಕೊಳ್ಳುವ ಸತ್ಕಾರ್ಯದ ನಿಮಿತ್ತವಾಗಿಯೇ ಇರುವವು. ಅಂತೆಯೇ ಭಾರತೀಯ ಆಧ್ಯಾತ್ಮಿಕ ಸಂಸ್ಕೃತಿಯ ಇತಿಹಾಸದಲ್ಲಿ ಮಠಾಧಿಪತಿಗಳಿಗೆ ವಿಶಿಷ್ಟ ಸ್ಥಾನವಿರುವದನ್ನು ನೋಡಬಹುದಾಗಿದೆ,

ಈ ದೇಶದ ಧರ್ಮಾಚಾರ್ಯರು ಜನತೆಯ ಅಧಿಕಾರವನ್ನು ಹಾಗು ದೇಶ, ಕಾಲ, ಪರಿಸ್ಥಿತಿಯನ್ನು ತಮ್ಮ ದೃಷ್ಟಿಯಲ್ಲಿಟ್ಟುಕೊಂಡು ಧರ್ಮ ಪ್ರಚಾರ ಮಾಡುತ್ತ ಬಂದಿರುವರು. ಅದರ ಪರಿಣಾಮವಾಗಿಯೇ ವಿವಿಧ ಧರ್ಮಗಳು ಸಂಪ್ರದಾಯಗಳು ಪ್ರಚಾರದಲ್ಲಿ ಬಂದಿರುವವು. ಅವೆಲ್ಲವುಗಳ ಗುರಿ ಮಾತ್ರ ಒಂದೇ ಎಂಬುವದನ್ನು ಯಾರೂ ಮರೆಯಕೂಡದು. ಎಲ್ಲ ಸಂಪ್ರದಾಯಗಳಲ್ಲಿ ಧರ್ಮತತ್ತ್ವವು

ಒಂದೇ ಆಗಿದ್ದರೂ ಅವುಗಳ ಆಚರಣೆಯಲ್ಲಿ ವಿಭಿನ್ನ ಪ್ರಕಾರದ ವಿಶೇಷತೆಯು ಅನಿವಾರ್ಯವಾಗಿರುವದು. ಧರ್ಮದಲ್ಲಿ ಭಾವಪ್ರಧಾನತೆ ಹಾಗು ಸಂಪ್ರದಾಯದಲ್ಲಿ ಕ್ರಿಯಾಪ್ರಧಾನತೆ ಇರುವದು. ಇದನ್ನರಿಯದಿದ್ದಾಗ ಒಂದು ಸಂಪ್ರದಾಯದವರು ಮತ್ತೊಂದು ಸಂಪ್ರದಾಯದವರೊಡನೆ ಮೈತ್ರೀಭಾವದಿಂದಿರುವ ಬದಲು ದ್ವೇಷ ಭಾವದಿಂದ ನಡೆದುಕೊಂಡು ರಕ್ತಪಾತ ಮಾಡಿದ ಅನೇಕ ದುರ್ಘಟನೆಗಳು ನಮ್ಮ ದೇಶದಲ್ಲಿ ನಡೆದು ಹೋಗಿರುವವು. ಇದರ ಕಾರಣ ಧರ್ಮವಲ್ಲ, ಆಚರಣೆಯ ಭೇದ. ಧರ್ಮವು ಸನಾತನವಾಗಿದ್ದ ನಿಮಿತ್ತದಿಂದ ನಿತ್ಯವಾಗಿರುವದು. ಅಂತೆಯೇ ಅದರಲ್ಲಿ ಪರಿವರ್ತನ ಆಗುವದಿಲ್ಲ. ಸಂಪ್ರದಾಯಗಳು ಮಾತ್ರ ಅನೇಕವಾಗಿದ್ದು ಅವು ದೇಶ ಕಾಲ ಪರಿಸ್ಥಿತಿಗನುಸಾರವಾಗಿ ಪರಿವರ್ತನವಾಗುವವು. ಅದು ಕಾರಣ ಕಲ್ಯಾಣಕಾಮಿಗಳಾದ ಬುದ್ಧಿವಂತರು ಸಾಂಪ್ರದಾಯಿಕ ಕಲಹದಲ್ಲಿ ತೊಡಗದೆ ಕೇವಲ ಧರ್ಮದ ಅವಲಂಬನ ಮಾಡುವರು, ನಿಜ ಧರ್ಮವು ವ್ಯಕ್ತಿಗಳ ಚರಿತ್ರವನ್ನು ಪರಿಷ್ಕರಿಸಿ ಅವರನ್ನು ವಿಕಾಸಗೊಳಿಸುವದು, ಅಂತೆಯೇ ಅದು ಸಾಧಕರಿಗೆ ಪವಿತ್ರತೆಯೊಡನೆ ಪೂರ್ಣತ್ವವನ್ನುಂಟು ಮಾಡುವದು. ನಿಜ ಧರ್ಮಪಾಲಕನು ಎಲ್ಲರ ಸುಖದೊಡನೆ ತನ್ನ ಸುಖವನ್ನು ಸಾಧಿಸುವನು. ಇಂತಹ ಧರ್ಮದ ಆವಶ್ಯಕತೆಯು ಎಂದಿಗಿಂತಲೂ ಇಂದು ಹೆಚ್ಚಾಗಿರುತ್ತದೆ. ಸಂಪ್ರದಾಯ ಶಬ್ದವು ತೀರ ಸಂಕೀರ್ಣವಾಗಿದ್ದು ನಿಜ ಧರ್ಮದ ಮುಂದೆ ನಿಲ್ಲಲೂ ಕೂಡ ಅದಕ್ಕಾಗುವದಿಲ್ಲ. ಯಾವುದು ವ್ಯಕ್ತಿ, ಸಮಾಜ, ರಾಷ್ಟ್ರ ಇವುಗಳಲ್ಲಿ ಸುವ್ಯವಸ್ಥೆಯನ್ನು ಹಾಗು ಶಾಂತಿಯನ್ನು ಉಂಟುಮಾಡುವದೋ ಅದೇ ಧರ್ಮ ಎಂದು ಹೇಳಿಸಿಕೊಳ್ಳುವದು. ಪ್ರತಿಯೊಬ್ಬ ವ್ಯಕ್ತಿಯೊಡನೆ ಅದೇಕೆ ಇಡೀ ಜೀವಿಗಳೊಡನೆ ಅಭೇದ ಸಂಬಂಧವನ್ನುಂಟುಮಾಡುವದೇ ಧರ್ಮವು. ಅಹಿಂಸೆಯನ್ನು ಧರ್ಮ ಎಂದು ಹಿಂಸೆಯನ್ನು ಅಧರ್ಮ ಎಂದು ಹೇಳುವದರ ತಾತ್ಪರ್ಯವು ಇದೇ ಆಗಿರುವದು.

ಇಂಥಹ ಧರ್ಮದ ಬಗಗೆ ಸರಿಯಾದ ತಿಳುವಳಿಕೆಯನ್ನುಂಟು ಮಾಡಿ ಮಾನವ ಸಮಾಜದಲ್ಲಿ ಶಾಂತಿ ಪ್ರತಿಷ್ಠೆಯನ್ನು ಮಾಡುವದಕ್ಕಾಗಿಯೇ ಧರ್ಮಪೀಠಗಳು ಸ್ಥಾಪಿತವಾಗಿರುವವು. ಧರ್ಮಪೀಠಗಳ ಹೊಣೆಯು ಬಹುದೊಡ್ಡದಾಗಿದೆ. ಅವುಗಳ ಒಡೆಯರು ತಮ್ಮ ಕರ್ತವ್ಯದಲ್ಲಿ ಜಾಗ್ರುತರಾಗಿದ್ದಷ್ಟೂ ಸಮಾಜ ಹಾಗೂ ನಾಡು ರಾಷ್ಟ್ರ ಇವೆಲ್ಲವುಗಳಲ್ಲಿ ಶಾಂತಿ ಸಮೃದ್ಧವಾಗುವದು.

ಭಾರತದಲ್ಲಿ ಎಷ್ಟೋ ಸಾಂಪ್ರದಾಯಿಕ ಧರ್ಮಗಳು ಇರುವಂತೆಯೇ ವೀರಶೈವ ಧರ್ಮವೂ ಒಂದು ಇರುವದು. ಆದರೆ ಇದು ಎಲ್ಲ ರೀತಿಯಿಂದಲೂ ತನ್ನದೇ ಆದ ವೈಶಿಷ್ಟ್ಯವನ್ನು ಪಡೆದಿರುತ್ತದೆ. ಈ ಧರ್ಮವು ವ್ಯಕ್ತಿ ವಿಶೇಷದಿಂದ ಹೇಳಲ್ಪಟ್ಟದ್ದಾಗದೆ ಶಿವನಿಂದಲೇ ಹೇಳಲ್ಪಟ್ಟದ್ದಾಗಿರುವದು. ಅದು ನಿಮಿತ್ತವಾಗಿಯೇ ಧರ್ಮಕ್ಕೆ ಯಾವ ವ್ಯಕ್ತಿ ವಿಶೇಷದ ನಾಮದ ಸಂಬಂಧವೂ ಇರದೆ ಶಿವಧರ್ಮ ಎಂದೇ ಹೇಳಲಾಗುವದು. ಶಿವನು ಅನಾದಿ. ಸನಾತನ ಆಗಿರುವಂತೆಯೇ ಈ ಶಿವಧರ್ಮವೂ ಅನಾದಿ ಹಾಗು ಸನಾತನವಾಗಿರುವದು. ಕಾಲ ಕಾಲಕ್ಕೆ ಶಿವನೇ ಅನಂತ ಹೆಸರುಗಳನ್ನು ತಾಳಿ ಈ ಧರ್ಮ

ವನ್ನು ಪ್ರಚಾರಗೈಯುತ್ತ ಬಂದಿರುವನು. ಅಂಥವರಲ್ಲಿ ಶ್ರೀ ರೇಣುಕಾದ್ಯಾಚಾರ್ಯರು, ಬಸವಾದಿ ಪ್ರಮಥರು, ಪ್ರಭು ಮುಂತಾದ ನಿರಂಜನ ಮೂರ್ತಿಗಳು ಇವರೆಲ್ಲ ಶಿವ-ನಾಕಾರ ಮೂರ್ತಿಗಳೇ ಆಗಿರುವರು, ಇವರೆಲ್ಲರೂ ಶಿವಧರ್ಮದ ಸಂಪ್ರದಾಯವನ್ನೇ ಎತ್ತಿ ಹಿಡಿದು ಮುಂದುವರಿಸಿಕೊಂಡು ಹೋಗಿರುವರು.

ಗುರುಪರಂಪರೆಯಿಂದ ಸಮ್ಯಗ್ರೂಪದಲ್ಲಿ ನಡೆದುಬಂದುದೇ ಸಂಪ್ರದಾಯ-ವೆನಿಸುವದು. 'ಸಮ್ಯಕ್ ಪ್ರದೀಯತ ಇತಿ ಸಂಪ್ರದಾಯಃ' ಗುರುವು ಶಿಷ್ಯರಿಗೆ ಚನ್ನಾಗಿ ಮಂತ್ರ, ಆರಾಧ್ಯ, ಆರಾಧನಾಪದ್ಧತಿ, ಹಾಗು ಆಚಾರಪದ್ಧತಿ ಮೊದಲಾದವನ್ನು ದಯಪಾಲಿಸುವನು. ಅವನ್ನೇ 'ಧರ್ಮದ ಪಥವಿಶೇಷ' ಎಂದು ಹೇಳಲಾಗುವದು. ಸಂಪ್ರದಾಯವು ಪಥವಾಗುವದಲ್ಲದೆ ಭೂಮಿಯಲ್ಲ. ಅಂತೆಯೇ ಅವುಗಳಿಗೆ ಇತಿಹಾಸ ವುಂಟು. ಪಥಗಳು ವಿರಚಿತವಾಗುವಂತೆ ಪರಿವರ್ತನಶೀಲವೂ ಆಗುವವು, ಮಹಾ ಪುರುಷರೆಲ್ಲರೂ ಕಾಲದೇಶ ಪರಿಸ್ಥಿತಿಗನುಸರಿಸಿ ನೂತನ ಪಥಗಳನ್ನು ರಚಿಸುತ್ತಲೇ ಬಂದಿರುವರೆಂಬುದಕ್ಕೆ ಇತಿಹಾಸವೇ ಸಾಕ್ಷಿಯಾಗಿದೆ, ಭೂಮಿಯಂತಿದ್ದ ಧರ್ಮವು ಮಾತ್ರ ಸದಾ ಏಕರೂಪದಲ್ಲಿಯೇ ಇರುವದು. ಅದು ಬದಲಾಯಿಸುವದು, ನಷ್ಟ-ವಾಗುವದು ಎಂಬುದರ ಅರ್ಥ ಪ್ರಲಯವೇ ಆಗುವದು. ಧಾರಣಮಾಡುವ ತತ್ತ್ವದ ಹೆಸರೇ ಧರ್ಮ. ಅದು ಇಲ್ಲವಾದರೆ ಮನುಷ್ಯತ್ವವೇ ಇಲ್ಲದಂತಾಗುವದು; ಹೀಗೆ ಸಾಂಸ್ಕೃತಿಕ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗಲಿಕ್ಕೆ ವೀರಶೈವ ಧರ್ಮ ಸಂಪ್ರದಾಯದಲ್ಲಿ ಸರಿಯಾದ ಯೋಜನೆಯನ್ನು ಮಾಡಲಾಗಿದೆ. ಅದರ ಸುಪರಿಣಾಮ ವಾಗಿಯೇ ಗುರು ಹಾಗು ವಿರಕ್ತಮಠಗಳು ಈ ಸಂಪ್ರದಾಯಬದ್ಧ ಸಮಾಜದಲ್ಲಿ ಕಂಗೊಳಿಸುತ್ತಿರುವವು. ಗುರುಮಠದಲ್ಲಿ ರಂಭಾಪುರಿ, ಉಜ್ಜಯಿನಿ, ಕೇದಾರ, ಕಾಶಿ, ಶ್ರೀಶೈಲ ಇವು ಜಗದ್ಗುರು ಮಠಗಳೆಂದು, ವಿರಕ್ತಮಠಗಳಲ್ಲಿ ಚಿತ್ರದುರ್ಗ, ಗದಗು, ಹುಬ್ಬಳ್ಳಿ, ಪಟ್ಟಣಗಳಲ್ಲಿ ಕ್ರಮವಾಗಿ ಶ್ರೀಮುರಘಾಮಠ, ಶ್ರೀತೋಂಟದಾರ್ಯಮಠ, ಶ್ರೀಗುರುಸಿದ್ಧೇಶ್ವರಮಠ ಇವು ಜಗದ್ಗುರು ಮಠಗಳೆಂದು ಪ್ರಸಿದ್ಧವಾಗಿವೆ. ಇವುಗಳಿಗೆ ಸಂಬಂಧಪಟ್ಟ ಶಾಖೋಪಶಾಖಾ ಮಠಗಳು ಅನೇಕವಾಗಿರುವವು. ವೀರಶೈವ ಧರ್ಮ ಸಂಪ್ರದಾಯದಲ್ಲಿರುವಷ್ಟು ಮಠಗಳು ಮತ್ತಾವ ಸಂಪ್ರದಾಯದಲ್ಲಿಯೂ ಇದ್ದಂತೆ ಕಂಡು ಬರುವದಿಲ್ಲ.

ಇವೆಲ್ಲ ಮಠಗಳ ಪೂಜ್ಯ ಸ್ವಾಮಿಗಳು ಮೊದಲಿನಿಂದಲೂ ತಮ್ಮ ತಮ್ಮ ಸತ್ಕ್ರಿ-ಯಾನುಷ್ಠಾನ ಬಲದಿಂದ ಶಿವಯೋಗದ ಮಾಹಾತ್ಮ್ಯದಿಂದ ಮುಮುಕ್ಷುಗಳಾದ ಸದ್ಭಕ್ತ ರಿಗೆ ನಿಜ ಧರ್ಮದ ರಹಸ್ಯವನ್ನು ತಿಳಿಸಿಕೊಟ್ಟು ಅವರನ್ನು ಕೃತಕೃತ್ಯರನ್ನಾಗಿ ಮಾಡುತ್ತ ಬಂದಿರುವರು. ಇವರು ಒಮ್ಮೊಮ್ಮೆ ಕಾಲ ಪ್ರವಾಹದ ಸೆಳೆತಕ್ಕೆ ಸಿಕ್ಕಾಗ ಮಾತ್ರ ಹಿಂದಿ ನಿಂದ ನಡೆದು ಬಂದ ಧರ್ಮ ಪ್ರಚಾರದಂತಹ ದೊಡ್ಡ ಪರಂಪರೆಯನ್ನು ಅವಿಚ್ಛಿನ್ನವಾಗಿ ಮುಂದುವರಿಸಿಕೊಂಡು ಹೋಗುವಲ್ಲಿ ಪ್ರಮಾದ ಮಾಡಿದ್ದೂ ಉಂಟು. ಅಂತೆಯೇ ಒಂದು ಕಾಲಕ್ಕೆ ನಮ್ಮ ಸಮಾಜ ಹಾಗು ನಾಡಿನ ಬಗೆಗೆ ವಿಜಯದ ಇತಿಹಾಸ ಹುಟ್ಟಿ

ಬಂದಂತೆ, ಅಪಜಯದ ಇತಿಹಾಸವೂ ಹುಟ್ಟಿರುವದೆಂಬುದನ್ನು ಮರೆಯುವಂತಿಲ್ಲ.

ಸದ್ಯಃ ಹುಬ್ಬಳ್ಳಿ ಮೂರುಸಾವಿರ ಮಠದ ಇಂದಿನ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳ ಸ್ಥಾನದ ಬಗೆಗೆ ನಾಲ್ಕು ಮಾತುಗಳನ್ನು ಹೇಳುವದು ಪ್ರಸ್ತುತವಾಗಿದೆ.

ವೀರಶೈವ ಧರ್ಮ ಪ್ರಚಾರದ್ವಾರಾ ಲೋಕ ಕಲ್ಯಾಣ ಸಾಧನೆಗಾಗಿ ಸ್ಥಾಪಿತವಾದ ಪುರಾತನ ಮಠಗಳಲ್ಲಿ ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರ ಮಠವು ತನ್ನದೇ ಆದ ವೈಶಿಷ್ಟ್ಯವನ್ನು ಪಡೆದಿರುವದು. ಇದು ಕುಮಾರ ಸಮಯದ ಮಠವು. ಇದಕ್ಕೆ ಒಳಪಟ್ಟ ಶಾಖಾ ಮಠಗಳು ಕರ್ನಾಟಕ ಹಾಗು ಮಹಾರಾಷ್ಟ್ರ, ಆಂಧ್ರ, ತಮಿಳ ಪ್ರಾಂತಗಳಲ್ಲಿಯೂ ಇರುವವು.

ಮೊದಲಿನಿಂದಲೂ ಶ್ರೀ ಜಗದ್ಗುರು ಮೂರುಸಾವಿರ ಮಠದ ಧರ್ಮಪೀಠವನ್ನು ಅಲಂಕರಿಸಿದ ಮಹಾಸ್ವಾಮಿಗಳು ಭಕ್ತೋದ್ಧಾರ ಕಾರ್ಯದಲ್ಲಿ ನಿರತರಾಗಿ ಸಮಾಜದ ಹಾಗು ನಾಡಿನ ಜನರ ಭಕ್ತಿ ಗೌರವಾಭಿಮಾನಗಳಿಗೆ ಪಾತ್ರರಾಗಿರುವರು. ಆಧ್ಯಾತ್ಮ ಜ್ಞಾನದ ನಂದಾದೀಪದ ಪ್ರಭೆಯು ಸಮಾಜದಲ್ಲಿ ಹಾಗು ನಾಡಿನಲ್ಲಿ ಅನವರತ ಬೆಳಗುವಂತೆ ಮಾಡಿದ ಜಗದ್ಗುರು ಪೀಠದ ಪರಂಪರೆಯ ವರೆಲ್ಲರೂ ಇಂದಿಗೂ ಕೀರ್ತಿ ಕಾಯರಾಗಿ ಜನಮನದಲ್ಲಿ ತುಂಬಿಕೊಂಡಿರುವರು. ಇವರೆಲ್ಲರೂ ಕೇವಲ ಜಗದ್ಗುರು ಪೀಠವನ್ನು ಅಲಂಕರಿಸಿ ಜಗದ್ಗುರುಗಳಾಗದೆ ತಮ್ಮ ಕರ್ತವ್ಯ ನಿರ್ವಹಣೆಯಿಂದಲೇ ಜಗದ್ಗುರು ಪದಪಾತ್ರರಾದವರೆಂಬುದನ್ನು ಯಾರೂ ಮರೆಯಕೂಡದು. ಅಧಿಕಾರವನ್ನು ಹೊಂದಿ ಕರ್ತವ್ಯದಲ್ಲಿ ತೊಡಗುವವರು ಕೆಲವರು, ಕರ್ತವ್ಯದಲ್ಲಿ ತೊಡಗಿಯೇ ಅಧಿಕಾರ ವನ್ನು ಪಡೆಯುವವರು ಕೆಲವರು. ಈ ಎರಡರ ಸುಂದರ ಸಮನ್ವಯವನ್ನು ಪಡೆದವರು ಕೆಲವರು. ಇವರೆಲ್ಲರಲ್ಲಿ ಕೊನೆಯ ವರ್ಗದವರೇ ಸರ್ವಶ್ರೇಷ್ಠ ಸ್ಥಾನಮಾನಗಳಿಗೆ ಪಾತ್ರ ರಾಗುವರು. ಅಂತಹ ಗೌರವವನ್ನು ಪಡೆದವರು ಈ ಪೀಠದ ಜಗದ್ಗುರುಗಳು.

ನಮ್ಮ ಕಾಲದಲ್ಲಿ ಈ ಜಗದ್ಗುರು ಪೀಠವನ್ನು ಆರೋಹಣ ಮಾಡಿದವರು ಶ್ರೀ ಜಗದ್ಗುರು ಗುರುಸಿದ್ಧ ಮಹಾಸ್ವಾಮಿಗಳು. ಇವರು ಕನ್ನಡ ನಾಡಿನಲ್ಲಿ ಸುಪ್ರಸಿದ್ಧ ವಾದ ಶಿವಯೋಗಮಂದಿರ ಎಂಬ ಆಧ್ಯಾತ್ಮಿಕ ಸಂಸ್ಥೆಯಲ್ಲಿ ಶಿಕ್ಷಣ ಪಡೆದು ಶ್ರೀಜಗ-ದ್ಗುರು ಪೀಠಕ್ಕೆ ಬಂದವರು. ಅಂತೆಯೇ ಇವರಲ್ಲಿ ಹೊಸ ಚೈತನ್ಯ, ಹೊಸದೃಷ್ಟಿ ಮೂಡಿ ಬಂದವು. ಅವುಗಳ ಸುಪರಿಣಾಮವಾಗಿ ಸಮಾಜದ ಹಾಗು ನಾಡಿನ ಏಳ್ಗೆಯ ಮಹಾ ಕಾರ್ಯದಲ್ಲಿ ಜಗದ್ಗುರುಗಳು ತೊಡಗಿಕೊಂಡು ಹುಬ್ಬಳ್ಳಿ ನಗರವನ್ನು ಶೈಕ್ಷಣಿಕ ಕ್ಷೇತ್ರದಲ್ಲಿ ಅತ್ಯಂತ ಪ್ರಗತಿಶೀಲವಾಗುವಂತೆ ಮಾಡಿದರು. ಮತ್ತು ತಮ್ಮ ಪೀಠದ ಉಚ್ಚ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗಬಲ್ಲ ಯೋಗ್ಯತೆಯುಳ್ಳ ವ್ಯಕ್ತಿಯನ್ನು ವಿಚಾರಿಸಹತ್ತಿದಾಗ ಇಲಕಲ್ಲಿನ ವಿಜಯ ಮಹಾಂತ ದೇವರೇ ಎಲ್ಲರೀತಿಯಿಂದ ಸಮ ರ್ಥರಾಗಿರುವರೆಂಬ ಸತ್ಪ್ರೇರಣೆ ಜಗದ್ಗುರುಗಳ ಮನದಲ್ಲಿ ಉದಯಿಸಿದ್ದು ಶಿವ ಶಾಸನಕ್ಕನುಗುಣವಾಗಿಯೇ ! ಈ ದೇವರು ಇಲಕಲ್ಲಿನ ಲಿಂಗೈಕ್ಯ ವಿಜಯ ಮಹಾಂತ

ಶಿವಯೋಗಿಗಳು ಜನ್ಮವೆತ್ತಿದ ಸದ್ವಂಶದಲ್ಲಿಯೇ ಲಿಂಗೈಕ್ಯ ಹಾನಗಲ್ಲ ಕುಮಾರ ಶಿವಯೋಗಿಗಳ ಶುಭಾಶೀರ್ವಾದದ ಪರಿಣಾಮವಾಗಿಯೇ ಜನಿಸಿ ಬಂದವರು. ಇದರ ಮೇಲೆ ಶಿವಯೋಗಮಂದಿರದಲ್ಲಿ ಕನ್ನಡ ಹಾಗು ಸಂಸ್ಕೃತ ಅಭ್ಯಾಸ ಮುಗಿಸಿ ಸುಕ್ಷೇತ್ರ ಕಾಶಿಯಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಮನಮುಟ್ಟಿ ಓದಿ ಪಾಂಡಿತ್ಯವನ್ನು ಸಂಪಾದಿಸಿದವರು. ಇಷ್ಟೇ ಅಲ್ಲ, ಕವಿಹೃದಯದವರು. ತಮ್ಮ ವಿದ್ಯಾರ್ಥಿ ದಿಶೆಯಲ್ಲಿಯೇ ಅನೇಕ ಕವನಗಳನ್ನು ರಚಿಸಿ ಸಾಹಿತಿಗಳ ಮೆಚ್ಚಿಗೆಗೆ ಪಾತ್ರರಾದವರು. ವಿನಯ ಸೌಜ-ನ್ಯಾದಿಗುಣಭರಿತರು. ಇಷ್ಟೆಲ್ಲ ಗುಣಗಳು ಒಂದು ವ್ಯಕ್ತಿಯಲ್ಲಿ ಕೂಡಿ ಬರುವದೆಂದರೆ ಅದೊಂದು ಸಮಾಜದ ಮತ್ತು ನಾಡಿನ ಭವ್ಯ ಭವಿಷತ್ ಸೂಚಕವೇ ಆಯಿತು. ಬುದ್ಧಿ ಹೃದಯ,ಭಾವಗಳ ಪವಿತ್ರತೆಯೆಂಬುವದು ಮಹಾ ದೈವೀಸಂಪತ್ತು. ಇದರ ಮುಂದೆ ಯಾವ ಜಡಸಂಪತ್ತೂ ಹೆಚ್ಚಿನದಾಗಿ ತೋರಿ ಬರಲಾರದು.ಇಂತಹ ಸಂಪತ್ತಿನ ಲಾಭವನ್ನು ಬಾಲ್ಯದಲ್ಲಿಯೇ ಪಡೆದಿದ್ದ ಮಹಾಂತದೇವರು ಮೂರುಸಾವಿರ ಮಠದ ಶ್ರೀಜಗದ್ಗುರು ಪೀಠಕ್ಕೆ ತಕ್ಕವರೆಂದು ಲಿಂ. ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳು ನಿರ್ಣಯಿಸಿದ್ದು ಅವರ ಸೂಕ್ಷ್ಮದೃಷ್ಟಿ ಹಾಗು ದೂರದೃಷ್ಟಿದ್ಯೋತಕವಲ್ಲದೆ ಮತ್ತೇನು ! ಪೂಜ್ಯ ಜಗದ್ಗುರುಗಳ ಸತ್ಯಸಂಕಲ್ಪದ ಪ್ರಕಾರ ಶ್ರೀ ವಿಜಯಮಹಾಂತದೇವರು ದಿ. ೧-೫-೧೯೫೮ ಗುರುವಾರದಂದು ಶ್ರೀ ಜಗದ್ಗುರು ಪೀಠದ ಆರೋಹನ ಮಾಡಿ ಎಲ್ಲರ ಮನಸ್ಸನ್ನೂ ತಣಿಸಿದರು. ಶ್ರೀ ನಿ. ಪ್ರ. ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಎಂಬ ನೂತನ ನಾಮಧೇಯ ಪಡೆದು ಭಕ್ತಜನಕ್ಕೆ ನೀಡಿದ ಸಂದೇಶ ಇವರ ಮಹಾವ್ಯಕ್ತಿತ್ವದ ದ್ಯೋತಕವಾಗಿರುವದು.

"ಪೀಠಕ್ಕೆ ಬರುವದೊಂದು ಬಾಹ್ಯ (ಶುಷ್ಕ) ರೀತಿಯ ಸಂಪ್ರದಾಯ. ನಿಮ್ಮೆಲ್ಲರ ಅಂತಃಕರಣವನ್ನು ಗೆದ್ದು ನಿಮ್ಮೆಲ್ಲರ ಹೃದಯ ಸಿಂಹಾಸನವನ್ನೇರಿ ಅಲ್ಲಿ ಜ್ಞಾನ ದೀಪ ಹಚ್ಚುವದು ನಮ್ಮ ಹಂಬಲವಾಗಿದೆ."

"ಕಾಯಕವೇ ಕೈಲಾಸ" ಎಂಬುದೇ ನಮ್ಮ ಜೀವನದ ಮೂಲಮಂತ್ರ. ಸಮಾಜ ಸೇವೆಯೇ ನಮ್ಮ ಪರಮ ಗುರಿ. ಭಗವದರ್ಪಣಭಾವದಿಂದ ಅಮರವಾದ ಸಾಹಿತ್ಯ ಸೇವೆ ಮಾಡಬೇಕೆಂಬುದೇ ನಮ್ಮ ಉತ್ಕಟೇಚ್ಛೆ. ಈಶಾನುಗ್ರಹದಿಂದ ಕನ್ನಡ ನಾಡು ನುಡಿಗಳ ಸೇವೆಯನ್ನು ಸಮಾಜದ ಹಿತಸಾಧನೆಯನ್ನು ಮಾಡುವ ಮಹದ್ಭಾಗ್ಯ ದೊರಕಿರುವಾಗ ಅದರ ಸದುಪಯೋಗ ಮಾಡಿಕೊಳ್ಳಬೇಕೆಂಬುದೇ ನಮ್ಮ ಹಿರಿಯಾಸೆ."

ನೂತನ ಜಗದ್ಗುರುಗಳಲ್ಲಿ ಸಾಕಷ್ಟು ಯೋಗ್ಯತೆ ಇರುವದೆಂಬುದಕ್ಕೆ ಮೇಲಿನ ಅವರ ಸಂದೇಶ ನುಡಿಯೇ ಮಹಾಪ್ರಮಾಣ. ಆ ಜಗದ್ಗುರು ಪೀಠಾರೋಹಣಮಾಡಿದ ಕಾಲಕ್ಕೆ ಸಮಾಜಕ್ಕೆ ನೀಡಿದ ಸಂದೇಶವನ್ನೆಲ್ಲ ತಮ್ಮ ೧೨ ವರುಷಗಳ ಅವಧಿಯಲ್ಲಿ ಕಾರ್ಯರಂಗಕ್ಕಿಳಿಸಿಬಿಟ್ಟಿರುವದು ಎಲ್ಲರ ಮುಂದೆಯೇ ಇರುವದು. ಇವರು ತಮ್ಮ ಗುರುಗಳು ಹಾಕಿಕೊಟ್ಟ ಮಾರ್ಗದಲ್ಲಿ ಬಹು ದೂರ ನಡೆದು ಸಮಾಜಕ್ಕೂ ನಾಡಿಗೂ ಅಪಾರವಾದ ಕೃಪೆಗೈದಿರುವರು.

ಇಂದು ಹುಬ್ಬಳ್ಳಿ ಮೂರುಸಾವಿರಜಗದ್ಗುರು ಪೀಠದ ಕೀರ್ತಿಯು ಕೇವಲ ಭಾರತದಲ್ಲಷ್ಟೇ ಅಲ್ಲ. ವಿದೇಶಗಳಲ್ಲಿಯೂ ಕೂಡ ಹಬ್ಬಿರುವದು. ಜಗದ್ಗುರುಗಳು ಸ್ವಲ್ಪೇ ದಿನಗಳ ಹಿಂದೆ ಜಪಾನ ದೇಶದ ಪ್ರವಾಸ ಕೈಕೊಂಡು ಅಲ್ಲಿ ಭಾರತೀಯ ಆಧ್ಯಾತ್ಮಿಕ ಸಂಸ್ಕೃತಿಯ ಮಹತ್ವವನ್ನು ವಿಶೇಷವಾಗಿ ವೀರಶೈವ ಧರ್ಮದ ಮಾಹಿತಿ ಯನ್ನು ಬೀರಿ ಬಂದಿರುವದು ಕನ್ನಡಿಗರಿಗೂ ತದ್ವಾರಾ ಭಾರತೀಯರಿಗೂ ಅತ್ಯಂತ ಅಭಿಮಾನಾಸ್ಪದ ಸಂಗತಿಯಾಗಿದೆ.

ಅಧಿಕಾರದ ಒಂದು ಪಟ್ಟ (ಹನ್ನೆರಡು ವರ್ಷ)ದಲ್ಲಿಯೇ ಇಷ್ಟೆಲ್ಲ ಕಾರ್ಯ ಮಾಡಿದ ಜಗದ್ಗುರುಗಳು ಮುಂದಿನ ಪಟ್ಟದ ಅವಧಿಯಲ್ಲಿ ಇನ್ನೂ ಅನೇಕ ಮಹತ್ವದ ಕಾರ್ಯಗಳನ್ನು ಮಾಡುವ ಯೋಚನೆ ಹಾಗು ಯೋಜನೆಯಲ್ಲಿರುವರು. ಇಷ್ಟರಲ್ಲಿಯೇ ಜಗದ್ಗುರುಗಳು ತಮ್ಮ ಕರ್ತವ್ಯನಿಷ್ಠೆಯಿಂದ ಯೋಗ್ಯ ಸ್ಥಾನವನ್ನು ಪಡೆದುಕೊಂಡಿರು ವರು, ಆದಿನ್ನೂ ಭದ್ರವಾಗುವಂತಹ ಕಾರ್ಯಗಳನ್ನು ಕೈಕೊಳ್ಳುವಲ್ಲಿಯೇ ಸಮಾಜದ ಹಾಗೂ ನಾಡಿನ ಭವ್ಯವಾದ ಭವಿಷ್ಯತ್ತು ಹುದುಗಿ ಕೊಂಡಿರುವದು.

## ಹೊಸಯುಗ

ನಾವಿಂದು ಬಾಳುವ ಯುಗವನ್ನು "ಸ್ಪುಟ್ನಿಕ್" ಯುಗವೆಂದು ಕರೆಯಬಹುದು. ಮಾನವನು ಯುಗಯುಗಾಂತರಗಳಿಂದ ತಾನು ಭೂಮಂಡಲಕ್ಕೆ ಸಂಬಂಧಪಟ್ಟವ ನೆಂಬುದನ್ನು ಕಿತ್ತುಹಾಕಿ ಎಷ್ಟೋ ಮೈಲುಗಳ ದೂರದಲ್ಲಿರುವ ಗ್ರಹಮಂಡಲಗಳಿಗೆ ಹಾರಿಹೋಗುವ ಪ್ರಯತ್ನದಲ್ಲಿ ಯಶಸ್ವಿಯಾಗಹತ್ತಿರುವನು. ಇಂತಹ ಅತ್ಯದ್ಭುತ ಕ್ರಾಂತಿಯುಗದಲ್ಲಿ ಇಲ್ಲಿಯತನಕ ನಡೆದುಬಂದಿರುವ ಸಂಪ್ರದಾಯ ಪದ್ಧತಿಗಳೂ ಬದಲಾಗುವದು ಸ್ವಾಭಾವಿಕ. ಈ ಬಗ್ಗೆ ನಾವು ಎಚ್ಚರವಹಿಸಿ ನಮ್ಮ ಸಮಾಜ ಹಾಗು ನಾಡು ಸಚೇತನವಾಗುವ ರೀತಿಯಲ್ಲಿ ಮುನ್ನಡೆಯಲು ಪ್ರಯತ್ನಿಸಲೇ ಬೇಕಾಗಿದೆ.

ಪ್ರತಿಯೊಬ್ಬನ ರುಚಿ, ಸ್ಥಿತಿ ಹಾಗು ಅಧಿಕಾರಭೇದದ ನಿಮಿತ್ತದಿಂದ ಸಾಧನ ಭೇದ, ಆಚಾರಭೇದದ ವ್ಯವಸ್ಥೆಯಾಗಿರುವದು. ಇದರ ಹೆಸರೇ ಸಂಪ್ರದಾಯ. ಇದನ್ನು ಪೂರ್ಣ ಲಕ್ಷ್ಯದಲ್ಲಿಟ್ಟುಕೊಂಡು ಪರಮಧರ್ಮವನ್ನು ಮರೆಯದೆ ನಡೆಯುವಲ್ಲಿಯೇ ಎಲ್ಲರ ಹಿತಸಾಧಿಸುವದಾಗಿದೆ. ಪ್ರತಿಯೊಬ್ಬರು ತಮ್ಮ ತಮ್ಮ ರುಚಿಗನುಗುಣವಾದ ಸಾಧನಪ್ರಣಾಲಿಯಲ್ಲಿ ತೊಡಗಿದಾಗಲೂ ಪರಸ್ಪರ ಭಾವೈಕ್ಯವನ್ನು ಹೊಂದುವದಕ್ಕೆ ಯಾವ ಆತಂಕವೂ ಇರುವದಿಲ್ಲ. ಭಾವೈಕ್ಯವನ್ನು ಪಡೆಯದಿದ್ದ ಜನಾಂಗದಲ್ಲಿ ನೆಮ್ಮದಿ ಯೆಂಬುದು ಇರಲವಕಾಶದೊರೆಯದು.

ಈಗ ವೀರಶೈವ ಸಮಾಜದಲ್ಲಿ ಭಾವೈಕ್ಯತೆಯ ಅಗತ್ಯವು ವಿಶೇಷವಾಗಿರುವದು. ಈ ಸಮಸ್ಯೆಯನ್ನು ಬಗೆಹರಿಸಿದರೆ ಈ ಸಮಾಜವು ಪ್ರಗತಿಪಥದಲ್ಲಿ ಸಾಗಲು ಯಾವ ತೊಂದರೆಯೂ ಇರುವದಿಲ್ಲ.

ವೀರಶೈವ ಸಾಹಿತ್ಯ ತತ್ತ್ವಜ್ಞಾನಗಳು ಪ್ರಪಂಚದ ಮೇಧಾವಿಗಳನ್ನು ಬೆರಗುಗೊಳಿಸುವಂಥವುಗಳಾಗಿದ್ದರೂ ವೀರಶೈವರು ಹಿಂದುಳಿದು ಕುಳಿತುಕೊಂಡಿರುವದಕ್ಕೆ ಇವರಲ್ಲಿ ಭಾವೈಕ್ಯ ಇಲ್ಲದಿರುವದೇ ಕಾರಣ.

ಪೂಜ್ಯ ಜಗದ್ಗುರುಗಳು ಇವೆಲ್ಲವನ್ನು ಅರಿತವರಾಗಿದ್ದು ಇವೆಲ್ಲ ಸಮಸ್ಯೆಗಳಿಗೆ ಸರಿಯಾದ ಪರಿಹಾರವನ್ನು ಕಂಡುಹಿಡಿದು ಸಮಾಜವನ್ನು ಪ್ರಗತಿಪಥದಲ್ಲಿ ನಡೆಸುವರೆಂದು ನಾವು ನೆರೆನಂಬಿದ್ದೇವೆ, ಪೂಜ್ಯ ಜಗದ್ಗುರುಗಳ ಪಟ್ಟಾಭಿಷೇಕದ ದ್ವಾದಶವಾರ್ಷಿಕ ಮಹೋತ್ಸವವು ವ್ಯಕ್ತಿಯ ಉತ್ಸವವಾಗದೆ ತತ್ತ್ವದ ಉತ್ಸವವಾಗುವದು.

ಜನೋಪಯೋಗಿಯಾದ ದೊಡ್ಡ ದೊಡ್ಡ ಕಾರ್ಯಗಳನ್ನು ಮಾಡುವವರು ದೊಡ್ಡ ಸ್ಥಾನದಲ್ಲಿಯೇ ಇರುವರು. ಯಾರಿಗಾದರೂ ದೊಡ್ಡ ಸ್ಥಾನದಲ್ಲಿರುವದರಿಂದ ದೊಡ್ಡ ಸ್ಥಾನ ಪ್ರಾಪ್ತವಾಗದೆ ದೊಡ್ಡ ಕಾರ್ಯಮಾಡುವರಿಂದಲೇ ಅದು ಪ್ರಾಪ್ತವಾಗುವದು. ಇದರ ಮೇಲಿಂದ ಹುಬ್ಬಳ್ಳಿ ಮೂರುಸಾವಿರಮಠದ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ತಮ್ಮ ದೊಡ್ಡ ಕೃತಿಗಳಿಂದಲೇ ದೊಡ್ಡವರಾಗಿರುವರೆಂಬುದು ಸ್ಪಷ್ಟವಾಗುತ್ತದೆ. ಇದು ಎಲ್ಲ ಮಠಾಧಿಪತಿಗಳೂ ಹೆಮ್ಮೆಪಡುವಂತಹದು.

ಸಮಾಜದ ಹಾಗು ನಾಡಿನ ಹಿರಿಮೆಯು ಅದರ ಬಾಹ್ಯ ಸಂಪತ್ತಿನ ಮೇಲೆ ನಿಂತಿರದೆ ಅದರ ಆಧ್ಯಾತ್ಮಿಕ ಬಲವನ್ನೇ ಅವಲಂಬಿಸಿರುವದೆಂಬುದು ತ್ರಿಕಾಲಾಬಾಧಿತವಾಗಿರುವದು. ಅಂತಹ ಸುಕಾಲವನ್ನು ಸ್ವಾಗತಿಸಲು ಎಲ್ಲರೂ ಸಿದ್ಧರಾಗಬೇಕು. ಅದರ ನೇತೃತ್ವವನ್ನು ಶ್ರೀ ಜಗದ್ಗುರುಗಳು ವಹಿಸಬೇಕು ಎಂದು ಪ್ರಾರ್ಥಿಸೋಣ. ವೀರಶೈವ ಧರ್ಮ ಶಿರೋಮಣಿಕಾರನು ಹೀಗೆ ಹೇಳಿದ್ದಾನೆ ;—

"ಸಾಧುಷ್ವಪಿ ಚ ಪಾಪೇಷು ದುರ್ಜನೇ ಸುಜನೇ ಪಿಚ ।
ಸ್ವಮತೇ ಪಿಮತೇ ಮೂರ್ಖೇ ಪರಾರ್ಥೇ ಚಾಪಕರ್ತರಿ ।
ಸರ್ವತ್ರ ಭಾವಯೇದೇಕಂ ವೀರಶೈವಸ್ತು ಚ್ಯೋಚ್ಯತೇ ॥

ಸಾಧುವನ್ನೂ, ಪಾಪಿಯನ್ನೂ, ದುರ್ಜನನನ್ನೂ. ಸಜ್ಜನನನ್ನೂ, ಸ್ವಮತಸ್ಥನನ್ನೂ, ಪರಮತಸ್ಥನನ್ನೂ, ಮೂರ್ಖನನ್ನೂ, ಸ್ವಾರ್ಥಪರನನ್ನೂ ಸರ್ವರನ್ನೂ ಏಕಭಾವದಿಂದ ನೋಡುವದೇ ವೀರಶೈವವು. ಅಂತೆಯೇ ಇದು ವಿಶ್ವಧರ್ಮವಾಗುವ ಅರ್ಹತೆಯನ್ನು ಪಡೆದಿರುವದು.

ಇಂತಹ ಮಹೋನ್ನತ ಭಾವವುಳ್ಳ ಈ ಸಂಪ್ರದಾಯದ ಮಹತಿಯು ಸಾಧಕರಿಗೆಲ್ಲ ತಿಳಿಯಬೇಕಾದುದು ಅತ್ಯವಶ್ಯ. □

# ಮೂರುಸಾವಿರಮಠದ ಜಗದ್ಗುರುಗಳ ಸಂಪ್ರದಾಯಾತೀತ ಪಾಂಡಿಚೇರಿ ಯಾತ್ರೆ

ಎಸ್. ವ್ಹಿ. ಪಾಟೀಲ

ಹುಬ್ಬಳ್ಳಿ ಮೂರುಸಾವಿರಮಠದ ಜಗದ್ಗುರುಗಳಾದ ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಶ್ರೀ. ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಪ್ರತಿವರುಷ ಶ್ರಾವಣಮಾಸದಲ್ಲಿ ಪತ್ರಿಕಾಕರ್ತರಾದ ನಮ್ಮನ್ನು ತಮ್ಮಲ್ಲಿಗೆ ಬರಮಾಡಿಕೊಂಡು ಮಠದ ಆಗುಹೋಗುಗಳನ್ನು ವಿವರಿಸುವದರೊಂದಿಗೆ ನಮ್ಮನ್ನು ಆಶೀರ್ವದಿಸುತ್ತಿದ್ದರು. ಇವರು ನಮ್ಮ ಶಿಷ್ಯರು, ನಮ್ಮ ಮತಪಂಥದವರು ಎಂದು ವಿಚಾರಿಸದೇ ಎಲ್ಲರನ್ನು ಸಮಾನಾಗಿ ಕಂಡು ಮಾತನಾಡಿಸಿ ವಿಚಾರವಿನಿಮಯವನ್ನು ನಡೆಸುತ್ತಿದ್ದರು. ಮಠದ ಸಂಪ್ರದಾಯಗಳನ್ನೆಲ್ಲ ಪರಿಪಾಲಿಸಿಕೊಂಡು ಬರುತ್ತಿದ್ದ ಮಹಾಸ್ವಾಮಿಗಳವರ ಈ ವಿಶಾಲ ಮನೋಭಾವವನ್ನು ಕಂಡಾಗ ಅವರ ಬಗೆಗೆ ನನಗೆ ಸ್ವಾಭಾವಿಕವಾಗಿಯೇ ಕುತೂಹಲವೆನಿಸುತ್ತಿತ್ತು; ಅವರನ್ನು ಕಾಣಬೇಕು ಅವರ ಸಂಪ್ರದಾಯ ಶೀಲತೆಯಿಂದ ಭಿನ್ನವಾದ ಈ ಹೊಸ ಪದ್ಧತಿಯನ್ನು ಅರ್ಥಮಾಡಿಕೊಳ್ಳಬೇಕು ಎಂದು ಅನಿಸುತ್ತಿತ್ತು. ನನ್ನ ಮನಸ್ಸಿನಲ್ಲಿ ಈ ಭಾವನೆ ಬರುವದಕ್ಕೂ ಅವರು ಈ ದಿಸೆಯಲ್ಲಿ ಇನ್ನೂ ಒಂದು ಹೆಜ್ಜೆ ಮುಂದಿರಿಸಿ ಪಾಂಡಿಚೇರಿ ಆಶ್ರಮಕ್ಕೆ ಹೋಗಿ ಬರುವದಕ್ಕೂ ಕಾಕತಾಳೀಯ ನ್ಯಾಯದಂತೆ ಸರಿ ಹೋಯಿತು. ಅವರನ್ನು ಕಾಣಲು ಇದಕ್ಕಿಂತ ಉತ್ತಮವಾದ ಸಂದರ್ಭ—ಅವಕಾಶ ಇನ್ನೊಂದು ದೊರೆಯಲಾರದು ಎಂದುಕೊಂಡು ಅವರ ಸಮಯವನ್ನು ಅರಿತುಕೊಂಡು ಮುಂಜಾನೆ ಮಹಾಸ್ವಾಮಿಗಳವರನ್ನು ನಾನು ಕಂಡೆ.

ನಾನು ಹೋದಾಗ ಅವರು ಮಠದ ಲೆಕ್ಕಪತ್ರಗಳ ಪರಿಶೀಲನೆಯಲ್ಲಿ ತೊಡಗಿದ್ದರು. ನನ್ನನ್ನು ಕಂಡೊಡನೆ ಅವನ್ನೆಲ್ಲ ಬದಿಗೆಸರಿಸಿ ಮುಗುಳ್ನಗೆಯಿಂದ ನನ್ನನ್ನು ಬರಮಾಡಿಕೊಂಡು ಆಶೀರ್ವದಿಸಿದರು. ಮಹಾಸ್ವಾಮಿಗಳವರಿಂದ ಪ್ರಾರಂಭದಲ್ಲಿಯೇ ಆಶೀರ್ವಚನ ಪಡೆದುದು ಒಳ್ಳೇ ಶುಭದಾಯಕವಾದುದು ಎಂದುಕೊಂಡು ಅವರಲ್ಲಿಗೆ ಹೋದುದರ ಉದ್ದೇಶವನ್ನು ವಿವರಿಸಿದೆ.

## ಪ್ರತಿಭಾಪೂರ್ಣವ್ಯಕ್ತಿತ್ವ

ಮಹಾಸ್ವಾಮಿಗಳವರು ವಯಸ್ಸಿನಿಂದ ಚಿಕ್ಕವರಾಗಿದ್ದರೂ ತುಂಬಾ ಪ್ರತಿಭಾ-ಪೂರ್ಣ ವ್ಯಕ್ತಿತ್ವದವರು. ಅವರಲ್ಲಿ ಆಳವಾದ ಪಾಂಡಿತ್ಯವಿದೆ. ಅವರ ವಿಚಾರಗಳು ತುಂಬ ಪ್ರಗತಿಪರ. ಮಾನವ ಕಲ್ಯಾಣವನ್ನೇ ಮುಖ್ಯ ಧ್ಯೇಯವಾಗಿರಿಸಿಕೊಂಡು ಕಾರ್ಯದಲ್ಲಿ ತೊಡಗಿರುವ ಮಹಾನುಭಾವರವರು. ಶಿವಯೋಗಮಂದಿರ, ಕಾಶೀ ವಿದ್ಯಾ-ಪೀಠಗಳಲ್ಲಿ ಅವರು ಓದಿಕೊಂಡವರು. ಅಲ್ಲದೇ ಅವರು ಸಾಹಿತ್ಯಪ್ರೇಮಿಗಳು ಸ್ವತಃ ಸಾಹಿತಿಗಳು, ನಮ್ಮ ಪತ್ರಿಕೆಗೇ ಹಲವಾರು ಲೇಖನಗಳನ್ನು ಅವರು ಬರೆದುಕೊಟ್ಟಿ-ದ್ದಾರೆ. ತುಂಬಾ ಸೊಗಸಾಗಿ ಬರೆಯಬಲ್ಲರು. ಅವರು ಪೀಠಕ್ಕೆ ಬಂದ ನಂತರ ಮಠಕ್ಕೆ ಹೆಚ್ಚಿನ ಹಿರಿಮೆಯನ್ನು ತಂದು ಕೊಡಲು ಅವಿರತವಾಗಿ ಶ್ರಮಿಸುತ್ತ ಬಂದವರು. ಅವರನ್ನು ಕಾಣುವದೇ ಒಂದು ಭಾಗ್ಯವಾಗಿರುವಾಗ ಮಾತನಾಡುವದು ಪರಮ ಭಾಗ್ಯವೆಂದೇ ಹೇಳಬೇಕು. ಇಂಥ ಪರಮಭಾಗ್ಯ ಅಂದು ನನ್ನದಾಗಿತ್ತು.

ಮಹಾಸ್ವಾಮಿಗಳವರ ಪಾಂಡಿಚೇರಿ ಸಂದರ್ಶನಕ್ಕೆ ಒಂದು ವೈಶಿಷ್ಟ್ಯಪ್ರಾಪ್ತ-ವಾಗಲು ಅವರು ಸಾಂಪ್ರದಾಯಕ ಅಡ್ಡಪಲ್ಲಕ್ಕಿಯ ಉತ್ಸವವನ್ನು ಬಿಟ್ಟುಕೊಟ್ಟು ಪ್ರಯಾಣವನ್ನು ಕೈಕೊಂಡುದೇ ಆಗಿತ್ತು. ಅವರ ಪ್ರಯಾಣವು ಸಂಪ್ರದಾಯವಂತ ರನ್ನು ಸ್ವಲ್ಪಮಟ್ಟಿಗೆ ಕೆರಳಿಸಿದ್ದಿರಲೂಬಹುದು. ಆದರೆ ತುಂಬ ಪ್ರಗತಿಪರ ವಿಚಾರ ದವರಾದ ಮಹಾಸ್ವಾಮಿಗಳವರು ಅದಾವುದರ ಪರಿವೆ ಇಲ್ಲದೇ ತಮ್ಮಂತರಂಗ ಬೆಳಕು ತೋರಿದ ಹಾದಿಯಲ್ಲಿ ಸಾಗಿದ್ದರು. ಅವರು ನಡೆದು ಬಂದ ಈ ದಾರಿಯ ವಿಷಯ ವಾಗಿಯೇ ನಾವು ಸುಮಾರು ೧॥ ಗಂಟೆ ವರೆಗೆ ಮಾತನಾಡಿದೆವು,— ಅಲ್ಲಲ್ಲಿ ಅವರು ನನಗೆ ಬೆಳಕು ತೋರಿದರು.

" ನಾವು ವಿಶಾಲ ಮನೋಭಾವದವರಾಗಬೇಕು. ಹೊರಗಿನ ವಿಶಾಲ ವಿಚಾರ ಗಳನ್ನು ಅರಿತುಕೊಳ್ಳಬೇಕು. ಬದಲಾದ ಜಗತ್ತಿನ ಕೂಡ ಸಾಗಬೇಕು. ಹಳೇ ಪದ್ಧತಿಗೆ ಹೊಸ ವಿಚಾರಗಳನ್ನು ಅನ್ವಯಿಸಬೇಕು. ಆದರೆ ಇದಾವುದು ಆಂತರಿಕ ವಿಚಾರಕ್ಕೆ ಬಾಧೆ ಬಾರದಂತೆ ನಡೆಯಬೇಕು " ಎಂದು ಅವರು ತಮ್ಮ ಪಾಂಡಿಚೇರಿಯ ವೈಶಿಷ್ಟ್ಯ ಪೂರ್ಣ ಪ್ರಯಾಣದ ಬಗಗೆ ಪೀಠಿಕೆ ಹಾಕುತ್ತ ಹೇಳಿದರು.

## ಪಾಂಡಿಚೇರಿಗೆ ಹೋದುದು ಏಕೆ ?

" ಪಾಂಡಿಚೇರಿ ಆಶ್ರಮಕ್ಕೆ ನಾವೇಕೆ ಹೋದೆವು. ಎಂಬ ಕುತೂಹಲ ಎಲ್ಲರಿಗೂ ಇರಲು ಸಾಕು. ನಮ್ಮ ಶರಣರು ಕಾಯಕವೇ ಕೈಲಾಸವೆಂದು ಸಾರಿದ್ದಾರಷ್ಟೇ. ಅದನ್ನು ಇಲ್ಲಿ ನಮ್ಮ ಜೀವನದಲ್ಲಿ ಅಳವಡಿಸಿಕೊಂಡಂತೆ ಅಲ್ಲಿ ಇನ್ನೊಂದು ಆಶ್ರಮದಲ್ಲಿಯೂ ಅಳವಡಿಸಿಕೊಂಡುದು ನಮಗೆ ಅರಿಕೆಯಾಯಿತು. ಅವರು ಇದನ್ನು ಹೇಗೆ ಸಾಧಿಸಿದ್ದಾರೆ. ಎಂದು ನೋಡಬಯಸಿದೆವು. ಅದೇ ಕಾಲಕ್ಕೆ ವೀರಶೈವ ಸಿದ್ಧಾಂತಕ್ಕೂ ಅರವಿಂದರ

ಸಿದ್ಧಾಂತಕ್ಕೂ ತುಂಬ ಹೋಲಿಕೆ ಇರುವದೂ ನಮ್ಮ ಗಮನಕ್ಕೆ ಬಂದಿತು. ಇದರ ಪ್ರತ್ಯಕ್ಷ ನಿದರ್ಶನ ಮಾಡಿಕೊಳ್ಳಬೇಕೆಂದೇ ನಾವಲ್ಲಿಗೆ ಹೋದೆವು" ಎಂದವರು ಪಾಂಡಿ- ಚೇರಿಯ ಸಂದರ್ಶನದ ಹಿಂದಿರುವ ಉದ್ದೇಶವನ್ನು ವಿವರಿಸಿದರು. ಅದು ನಿಜವೇ ಎಂದು ನನಗೂ ಅನಿಸಿತು. ಮಹಾನುಭಾವರಿಗೆ ಎಲ್ಲಿ ಒಳ್ಳೆಯದಿದ್ದರೂ ಅದನ್ನು ಕಾಣುವ ಹೆಬ್ಬಯಕೆ ಇದ್ದೇ ಇರುವದು. ಮೂರುಸಾವಿರಮಠದ ಜಗದ್ಗುರುಗಳೂ ಇದಕ್ಕೆ ಹೊರತಾಗಿರಲಿಲ್ಲ. ಈ ಸಂಗತಿ ನನಗೆ ತುಂಬ ಸಂತೋಷವುಂಟು ಮಾಡಿತು.

"ಪಾಂಡಿಚೇರಿಯಲ್ಲಿ ಮಾತೆ ಇಂದು ಆಧ್ಯಾತ್ಮಿಕ ಶಕ್ತಿ ಎನಿಸಿದ್ದಾರೆ. ಮಾತೆ ಮತ್ತು ಸಾಧಕರ ನಡುವಿನ ಸಂಬಂಧ ತಾಯಿ ಮಕ್ಕಳಂತಿರುವದು. ಹೊನ್ನು ಮಾಯೆ, ಹೆಣ್ಣುಮಾಯೆ ಎಂದು ಹೇಳಿ ಹೆಣ್ಣನ್ನು ತಾಯಿಯಂತೆ ಕಾಣಬೇಕು. ಆಗ ಅವರ ಮಾಯೆ ಕಾಡುವದಿಲ್ಲ, ಎಂದು ಶರಣರು ತಿಳಿಸುತ್ತಾರೆ. ಈ ಆಶ್ರಮದಲ್ಲಿ, ಅದನ್ನು ಪ್ರತ್ಯಕ್ಷವಾಗಿ ಕಾಣಬಹುದು. ಇಲ್ಲಿ ಹೆಣ್ಣು ಗಂಡು ಎಂಬ ಭೇದವಿಲ್ಲ ಅವರೆಲ್ಲ ಸೇರಿಕೊಂಡೆ ಕೆಲಸ ಮಾಡುತ್ತಾರೆ. ಹೆಣ್ಣನ್ನು ಮಾಯೆ ಎಂದು ಭಾವಿಸದೇ ತಾಯಿಯೆಂದು ಭಾವಿಸಬೇಕು ಎಂದು ಹೇಳುತ್ತಾರೆ. ಆದರೆ ಎದುರಿಗೆ ಹೆಣ್ಣು ಇರಿಸಿ ಕೊಂಡು ಸಾಧಿಸುವದು ತುಂಬಾ ಕಠಿಣ. ಆದರೆ ಪಾಂಡಿಚೇರಿ ಆಶ್ರಮದಲ್ಲಿ ಅಂಥವಾ ವುದೂ ಇಲ್ಲ. ಇದು ಆಶ್ರಮದ ಒಂದು ಹಿರಿಮೆಯೆಂದೇ ಹೇಳಬೇಕು" ಎಂದು ಮಹಾಸ್ವಾಮಿಗಳು ಆಶ್ರಮದ ಹಿರಿಮೆಯನ್ನು ಬಣ್ಣಿಸಿದರು.

## ಅರವಿಂದ ಮತ್ತು ವೀರಶೈವ ಸಿದ್ಧಾಂತಗಳು

ಅರವಿಂದರ ಮತ್ತು ವೀರಶೈವ ಸಿದ್ಧಾಂತಗಳಲ್ಲಿ ಸಾಮ್ಯವಿರುವದನ್ನು ಮಹಾ ಸ್ವಾಮಿಗಳು ಈ ಸಂದರ್ಭದಲ್ಲಿ ಎತ್ತಿತೋರಿಸಿದರು. "ಶಂಕರಾಚಾರ್ಯರು ಜಗತ್ತು ಮಿಥ್ಯ ಎಂದು ಹೇಳುತ್ತಾರೆ. ಅದು ಮಿಥ್ಯೆಯೇ ಆಗಿದ್ದರೆ ಅದರ ನಿರ್ಮಾಣವಾದರೂ ಏಕೆ ? ಜಗತ್ತು ಸತ್ಯವಾಗಿರುವದೇ ಸರಿ. ಹೂವಿನಲ್ಲಿ ವಾಸನೆ ಅಡಗಿರುತ್ತದೆ. ನಮಗೆ ವಾಸನೆಯಷ್ಟೇ ಬರುವದು. ಅದು ಹೂವಿನಲ್ಲಿ ಅಂತರ್ಗತವಾಗಿರುವದಿಲ್ಲ ? ಹಾಗೆಯೇ ಎಲ್ಲವೂ ಅಂತರ್ಗತವಾಗಿರುವದು ನಮ್ಮ ಕಣ್ಣಿಗೆ ಕಾಣದಿದ್ದರೂ ಅದರ ಅಸ್ತಿತ್ವವನ್ನು ಅಲ್ಲಗಳೆಯಲಾಗುವದಿಲ್ಲ. ಹಾಗೆಯೇ ಜಗತ್ತನ್ನು ನಾವು ದೂರೀಕರಿಸ ಲಾರೆವು. ಈ ಒಂದು ಅನುಭವ ನಮಗೆ ಪಾಂಡಿಚೇರಿ ಆಶ್ರಮದಲ್ಲಾಯಿತು.

ಭಾರತದ ಜಾತ್ಯಾತೀತ ಸ್ವರೂಪದ ಕಲ್ಪನೆಯು ಈ ಆಶ್ರಮದಲ್ಲಿ ಮೂರ್ತಿ ಮಂತಾಗಿರುವದನ್ನು ಮಹಾಸ್ವಾಮಿಗಳು ಬಣ್ಣಿಸುತ್ತಾರೆ. "ಈ ಆಶ್ರಮದಲ್ಲಿ ಜಾತಿ ಮತ ಪಂಥಗಳ ಭೇದವೆಂಬುದು ಎಳ್ಳಷ್ಟೂ ಇಲ್ಲ. ಇಲ್ಲಿ ಎಲ್ಲರಿಗೂ ಮುಕ್ತದ್ವಾರವಿದೆ. ಈ ಆಶ್ರಮದಲ್ಲಿ ತುಂಬ ಸೌಮ್ಯವಾದ ಆಹಾರಸೇವನೆ ನಡೆಯುವದು. ಉಪ್ಪು, ಖಾರ, ಬಳ್ಳೊಳ್ಳಿ, ಉಳ್ಳಾಗಡ್ಡಿಗಳನ್ನು ವರ್ಜಿಸಲಾಗಿರುವದು. ಈ ಆಶ್ರಮದಲ್ಲಿ ಪ್ರೇಮ ಸಲ್ಲಾಪವಿಲ್ಲ. ರಾಜಕಾರಣವಿಲ್ಲ. ಅಲ್ಲದೇ ಸಾಧಕರೆಲ್ಲ ಬ್ರಹ್ಮಚಾರಿಗಳಾಗಿರಬೇಕೆಂಬ

ನಿಯಮವೂ ಇದೆ. ಸಾಮಾನ್ಯವಾಗಿ ಆಶ್ರಮಗಳಲ್ಲಿ ಈ ಬಗೆಯ ನಿಯಮಗಳಿರುವ ವಾದರೂ ಇಲ್ಲಿ ಸಾಧಕರು ಯಾವದೇ ಒತ್ತಾಯವಿಲ್ಲದೆ ಅವನ್ನು ಚಾಚೂ ತಪ್ಪದೇ ಪಾಲಿಸಿಕೊಂಡು ಬರುವರು. ಸಾಧಕರ ಮೇಲೆ ಸಾಧನೆಯ ರೀತಿಯ ಯಾವ ಕಟ್ಟು ನಿಟ್ಟೂ ಕೂಡ ಇಲ್ಲ. ಆದರೂ ನಿಯಮಿತವಾಗಿ ಅವರು ಸಾಧನೆಗೈಯುವರು. ಈ ಆಶ್ರಮದ ಸೋಜಿಗಗಳಲ್ಲಿ ಇದೂ ಒಂದು."

## ಆಧ್ಯಾತ್ಮಿಕ ಸಾಮ್ಯವಾದದ ಅರಿಕೆ

ಅಲ್ಲಿಯ ಸಾಧನ ಪದ್ಧತಿಯನ್ನು ಮಹಾಸ್ವಾಮಿಗಳವರು ತುಂಬಾ ಮೆಚ್ಚಿ ಕೊಂಡಂತೆ ನನಗೆ ತೋರಿತು. ಆಶ್ರಮ ನಿಸರ್ಗ ಸೌಂದರ್ಯದ ಮಡಿಲಲ್ಲಿದೆ. ಪ್ರತಿ ಯೊಂದರಲ್ಲಿಯೂ—ನಿಸರ್ಗದಲ್ಲಿ ಕೂಡ ಆಶ್ರಮವಾಸಿಗಳು ದೇವರನ್ನು ಕಾಣುವರು; ತುಂಬ ಉಚ್ಚ ವಿಚಾರದವರಾಗಿದ್ದಾರೆ. ಯಾವದೇ ವ್ಯವಹಾರದಲ್ಲಿ ತೊಡಗಿದ್ದರೂ ಅದರಲ್ಲೊಂದು ಆಧ್ಯಾತ್ಮಿಕ ಅಂಶವನ್ನು ಅವರು ಕಂಡುಕೊಳ್ಳುತ್ತಾರೆ. ಅಂತಃಶಕ್ತಿ ಯಿಂದ ಅವರು ಎಲ್ಲವನ್ನು ಅರಿತುಕೊಳ್ಳುತ್ತಾರೆ, ಮನಸ್ಸು ಏಕಾಗ್ರವಾಗಿರುವದು. ಪರಿಪೂರ್ಣವಾಗಿರುವುದು. ಹೆಚ್ಚೇನು ಆಧ್ಯಾತ್ಮಿಕ ಸಾಮ್ಯವಾದವನ್ನೇ ಇಲ್ಲಿ ಕಾಣ ಬಹುದು ಎಂದು ಮಹಾಸ್ವಾಮಿಗಳವರು ತಿಳಿಸಿದರು.

ಮಾನಸಿಕ ಪರಿವರ್ತನೆಗೆ ಈ ಆಶ್ರಮದಲ್ಲಿ ಹೆಚ್ಚಿನ ಮಹತ್ವವನ್ನು ಕೊಡಲಾಗಿ ರುವದು ಅದರಿಂದಲೇ ದೈಹಿಕ ಪರಿವರ್ತನೆ ತುಂಬ ಸುಲಭವೆಂದು ಕಂಡುಕೊಳ್ಳಲಾಗಿ ರುವುದು. ಮೇಲಾಗಿ ಭಾರತೀಯ ಪರಂಪರೆಯತ್ತ ಇಲ್ಲಿ ಹೆಚ್ಚು ಒಲವಿರುವದು ನಮಗೆ ತೋರಿ ಬಂತು. ಯುರೋಪದಿಂದ ಇಲ್ಲಿಗೆ ಬಂದು ಇಲ್ಲಿಯ ವಾತಾವರಣ ವನ್ನು ಒಗ್ಗಿಸಿಕೊಂಡು ಮಹಾಮಾತೆಯಾಗಿ ಆಶ್ರಮವಾಸಿಗಳಿಗೆಲ್ಲ ಆಧ್ಯಾತ್ಮಿಕ ಬೆಳಕಾಗಿ ರುವ ಮಾತೆಯವರನ್ನು ಅಕ್ಕಮಹಾದೇವಿಯವರಿಗೆ ಹೋಲಿಸಬಹುದು. ಇಬ್ಬರೂ ಆಧ್ಯಾತ್ಮ ಚಿಂತನಪರರು. ಲೋಕಕ್ಕೆ ಬೆಳಕಾಗಿರುವವರು. ವೀರಶೈವ ಸಿದ್ಧಾಂತಕ್ಕೂ— ಮಾತೆಯವರ ಸಿದ್ಧಾಂತಕ್ಕೂ ತುಂಬ ಹೋಲಿಕೆ ಇರುವದಾಗಿ ನಮಗನಿಸಿತು, ಎಂದು ಮಾತೆಯವರ ಪಾತ್ರವನ್ನು ನಿರೂಪಿಸುತ್ತ ಮಹಾಸ್ವಾಮಿಗಳು ಅಭಿಪ್ರಾಯಪಟ್ಟರು.

ಆಶ್ರಮದಲ್ಲಿ ಚೊಕ್ಕಟತನವಿದೆ. ಎಲ್ಲವೂ ಸುವ್ಯವಸ್ಥಿತವಾಗಿ ಸಾಗುತ್ತಿದೆ. ಏನು ಬೇಕಾದರೂ ಮಾತೆಯವರಿಗೆ ಕೇಳಿಕೊಂಡು ಕೋಣೆಗಳಲ್ಲಿರುವ ಪೆಟ್ಟಿಗೆಗಳಲ್ಲಿ ಚೀಟಿ ಹಾಕಿದರೆ ಸಾಕು ಬೇಡಿದ ಸಾಮಗ್ರಿಗಳು ಲಭ್ಯವಾಗುವವು. ಪ್ರತಿಯೊಂದರ ಬಗೆಗೂ. ಪ್ರತಿಯೊಬ್ಬರ ಬಗೆಗೂ ಮಾತೆಯವರು ಲಕ್ಷ ಕೊಡುವರೆಂಬುದಕ್ಕೆ ಇದಕ್ಕಿಂತ ಬೇರೆ ನಿದರ್ಶನ ಬೇಕಿಲ್ಲ. ಇಲ್ಲಿರುವ ೪೫ ವಿಭಾಗಗಳಲ್ಲೂ ತುಂಬ ಸಾಮರಸ್ಯವಾಗಿ ಕಾರ್ಯವು ಸಾಗುವದು. ಆಶ್ರಮದಲ್ಲಿ ದುಃಖ ದುಮ್ಮಾನಗಳ ಸುಳಿವಿಲ್ಲ. ಇಲ್ಲಿ ಅಂತರ ರಾಷ್ಟ್ರೀಯ ವಿದ್ಯಾಲಯದಲ್ಲೂ ಅನೇಕ ವಿದ್ವಾಂಸರು ಪ್ರಾಧ್ಯಾಪಕರಾಗಿದ್ದಾರೆ. ಅವರು ಒಂದು ತಾಸು ಪಗಾರ ತೆಗೆದುಕೊಳ್ಳುವದಿಲ್ಲ. ಸ್ಟೇನ್‌ಲೆಸ್ ಸ್ಟೀಲ್ ಕಾರಖಾನೆಯೂ

ಒಂದಿದೆ. ಅನೇಕ ಪ್ರಸಿದ್ಧ ಇಂಜನಿಯರರು ಅಲ್ಲಿ ಕೆಲಸವನ್ನು ಮಾಡುತ್ತಿದ್ದಾರೆ. ಈ ವ್ಯವಸ್ಥೆಯೆಲ್ಲವೂ ತುಂಬ ಅಗಾಧವಾಗಿರುವದು. ಇದನ್ನೆಲ್ಲ ಗಮನಿಸಿದಾಗ ಇಂಥ ಸಂಸ್ಥೆ ಭಾರತದಲ್ಲಿ ಇನ್ನೊಂದಿರಲಾರದೆಂದು ನಮಗನಿಸಿತು ಎಂದು ಮಹಾಸ್ವಾಮಿಗಳವರು ಆಶ್ರಮವನ್ನು ಸ್ವಾನುಭವದಿಂದ ಮುಕ್ತ ಕಂಠವಾಗಿ ಹೊಗಳಿದರು.

ಮಹಾಸ್ವಾಮಿಗಳ ಅಭಿಪ್ರಾಯದಲ್ಲಿ ಇಲ್ಲಿಯ ಆಧ್ಯಾತ್ಮಿಕ ಸಾಧನೆ ವಿಶಿಷ್ಟ ರೀತಿಯಲ್ಲಿ ಸಂಘಟಿತವಾಗಿ ಹೊಸ ದರ್ಶನ ಶಾಸ್ತ್ರವೊಂದನ್ನು ಭಾರತೀಯರಿಗೆ ನೀಡಿದೆ. ಇದು ಈ ಆಶ್ರಮದ ಅಪೂರ್ವ ಕಾಣಿಕೆಯೂ ಆಗಿರುವದು. ಅಂತೆಯೇ ಭಾರತದ ನಾನಾ ಭಾಗಗಳಿಂದ ಅಸಂಖ್ಯ ಸಾಧಕರು ಇತ್ತ ಆಕರ್ಷಿತರಾಗುತ್ತಿದ್ದಾರೆ.

ಮಾತೆಯವರ ೩ ನಿಮಿಷಗಳ ಸಂದರ್ಶನ ಮಹಾಸ್ವಾಮಿಗಳವರಿಗೆ ಅಪೂರ್ವ ಘಟನೆಯಾಗಿ ಪರಿಣಮಿಸಿತು. ಮಹಾಸ್ವಾಮಿಗಳವರು ಅವರನ್ನು ಕಾಣಲು ಹೋದರು. ಮಾತೆಯವರು ೩ ನಿಮಿಷಕಾಲ ಅವರ ಕಣ್ಣಲ್ಲಿ ಕಣ್ಣಿಟ್ಟು ದಿಟ್ಟಿಸಿ ನೋಡಿದರು. ಈ ಆಧ್ಯಾತ್ಮಿಕ ಅರ್ಥವನ್ನು ಬೇರಾರೂ ಗ್ರಹಿಸುವಂತಿರಲಿಲ್ಲ. ಮಹಾಸ್ವಾಮಿಗಳವರಿಗೆ ಮಾತೆಯ ಮಮತೆ ತಮ್ಮ ಮೇಲಾಯಿತು. ತಮ್ಮ ಅಂತಃಕರಣವನ್ನವರು ಅರಿತುಕೊಂಡರು, ಎಂದು ವೇದ್ಯವಾಯಿತು. ಮಾತೆಯವರು ಇವರಿಗೊಂದು ಗುಲಾಬಿ ಹೂವನ್ನು ಕೊಟ್ಟರು. **"Deepest Love towords divine"** ಎಂಬುದು ಈ ಹೂವಿನ ಸಂಕೇತವಾಗಿತ್ತು. ಮಹಾಸ್ವಾಮಿಗಳವರ ಹೃದಯ ತುಂಬಿ ಬಂದಿತು. ನಿಜವಾಗಿಯೂ ತಮ್ಮ ಜೀವನದಲ್ಲಿ ಇದೊಂದು ಅಪೂರ್ವವಾದ ಆಧ್ಯಾತ್ಮಿಕ ಅನುಭವ ಎಂದವರು ಹೇಳಿದರು.

## ಒಂದು ಯೋಗಾಯೋಗ

ಮಹಾಸ್ವಾಮಿಗಳವರು ಪಾಂಡಿಚೇರಿಗೆ ಹೋದುದು ಕೂಡ ಒಂದು ಯೋಗಾಯೋಗವೇ ಎನ್ನಬೇಕು. ಹಲವಾರು ಪಾಂಡಿಚೇರಿ ಆಶ್ರಮಸಾಧಕರಿಂದ ಆಶ್ರಮದ ವಿಚಾರಗಳನ್ನು ಇವರು ಅರಿತುಕೊಂಡಿದ್ದರು. ತಾವು ಒಮ್ಮೆ ಏಕೆ ಹೋಗಬಾರದು ಎಂದುಕೊಂಡರು. ಅದಕ್ಕೆ ಅನುಕೂಲವಾಗಿ ಅವರೊಂದು ಕನಸನ್ನು ಕಂಡರು. ಆ ಮೇರೆಗೆ ಪಾಂಡಿಚೇರಿಗೆ ಮಹಾಸ್ವಾಮಿಗಳವರ ಫೋಟೊ ಒಂದನ್ನು ಕಳಿಸಿ ಕೊಡಲಾಯಿತು. ಅಲ್ಲಿಂದ ಹೊರಟುಬರಲು ಇವರಿಗೆ ಆದೇಶ ಬಂದಿತು. ಇದರಿಂದಾಗಿ ಮಹಾಸ್ವಾಮಿಗಳವರು ಪಾಂಡಿಚೇರಿ ಯಾತ್ರೆಯನ್ನು ಕೈಕೊಂಡರು. ಮಾರ್ಗದಲ್ಲಿ ಅವರು ಬೆಂಗಳೂರಿನಲ್ಲಿದ್ದು ನಮ್ಮ ಧರ್ಮದರ್ಶಿಗಳಾದ ಶ್ರೀ ಆರ್. ಆರ್, ದಿವಾಕರ ಅವರ ಆತಿಥ್ಯವನ್ನು ಸ್ವೀಕರಿಸಿದರಲ್ಲದೇ ಒಂದೆರಡು ದಿನ ಅಲ್ಲಿ ಇದ್ದೂ ಇದ್ದರು. ಪಾಂಡಿಚೇರಿ ಕಾರ್ಯಕ್ರಮಕ್ಕೆ ಶ್ರೀ ದಿವಾಕರರಾಯರ ಉತ್ತೇಜನ ಬೆಂಬಲಗಳೂ ಕಾರಣವೆಂದೂ ಅವರು ತಮಗೊಳ್ಳೇ ಅನುಕೂಲತೆಗಳನ್ನು ಒದಗಿಸಿದರೆಂದೂ ಮಹಾಸ್ವಾಮಿಗಳವರು ತಿಳಿಸಿದರು.

ಕರ್ನಾಟಕದ ಮಠಗಳಲ್ಲಿ ತುಂಬ ಪ್ರಾಚೀನವಾದುದೂ ಹಿರಿಯಸ್ಥಾನದಲ್ಲಿದ್ದುದೂ ಆದ ಮೂರುಸಾವಿರಮಠದ ಮಹಾಸ್ವಾಮಿಗಳವರು ಈ ಯಾತ್ರೆಯನ್ನು ಕೈಕೊಂಡುದಕ್ಕೆ ಅನೇಕರು ಮೂಗು ಮುರಿಯಬಹುದು. ಆದರೆ ಸ್ವತಃ ಅವರಿಗೆ ಮಾತ್ರ ಇದುತುಂಬ ಉಪಯುಕ್ತವೇ ಆಗಿರುವದಾಗಿ ಹೇಳುತ್ತಾರೆ. ಈ ಆದರ್ಶ ಸಂಸ್ಥೆಯಿಂದ ನಾವೆಲ್ಲ ಪಾಠ ಕಲಿಯುವಂತಿದೆಯೆಂದೂ ಸಾಧನೆಯಲ್ಲಾಗಲಿ, ಇನ್ನಿತರ ಕಾರ್ಯರೂಪಗಳಲ್ಲಾಗಲೀ ಅದು ತುಂಬಾ ಮಾರ್ಗದರ್ಶಕವಾಗಿರುವದಾಗಿ ಅವರು ಅಭಿಪ್ರಾಯ ಪಟ್ಟರು, ಅವರ ಈ ಉದ್ಬೋಧಕವಾದ ರೀತಿ ನೀತಿಯನ್ನು ಕಂಡು ನನಗೆ, ಮಹಾಸ್ವಾಮಿಗಳವರು ತಮ್ಮ ಈ ಪ್ರಗತಿಪರ ವಿಚಾರಗಳಿಂದ, ಮಾರ್ಗದಿಂದ ಕರ್ನಾಟಕದ ಮಹಾಸ್ವಾಮಿಗಳವರಿಗೊಂದು ಮೇಲ್ಪಂಕ್ತಿಯನ್ನು ಹಾಕಿಕೊಟ್ಟರೆಂದು ಅನಿಸಿತು, □

# ಗುರು-ವಿರಕ್ತರ ಸಮ್ಮಿಲನ

ಪಿ. ಆಯ್. ಹಿರೇಮಠ

ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಚರಿತ್ರಾರ್ಹ ಜೀವನದಲ್ಲಿ ರಾಷ್ಟ್ರೀಯ, ಸಾಮಾಜಿಕ. ಧಾರ್ಮಿಕ ವೈಶಿಷ್ಟ್ಯಗಳನ್ನು ನಾವು ಕಾಣಬಹುದು. ರಾಷ್ಟ್ರಾಭಿವೃದ್ಧಿಗಾಗಿ ಜಾತಿ ಮತ ಪಂಥಗಳ ಭೇದಭಾವವಿಲ್ಲದೆ ಸಮತಾ ಭಾವನೆಯಿಂದ ಸರ್ವರ ಶ್ರೇಯೋಭಿವೃದ್ಧಿಗಾಗಿ ಶ್ರಮಿಸುವದು, ಸಂಘಟನೆಗಾಗಿ ಅವಿಶ್ರಾಂತಶ್ರಮವಹಿಸಿ ಎಲ್ಲ ಎಡರುತೊಡರುಗಳನ್ನು ನಿವಾರಿಸುವದು, ಧಾರ್ಮಿಕ ಭದ್ರತೆಗಾಗಿ ಆಧ್ಯಾತ್ಮಿಕ ತತ್ವಗಳನ್ನು ಸುಲಲಿತವಾಗಿ ಭಕ್ತರ ಮನೋಭೂಮಿಕೆಯಲ್ಲಿ ನೆಲೆಸುವಂತೆ ಪ್ರತಿಪಾದಿಸುವದು ಇವೇ ಮೂರು ಅದ್ವಿತೀಯ ವೈಶಿಷ್ಟ್ಯಗಳ ಸಂಗಮವೇ ಶ್ರೀ ಜಗದ್ಗುರುಗಳ ಪ್ರತಿಭಾ ಸಂಪನ್ನಪ್ರತಿಮೆಯು.

ಮಹಾಸ್ವಾಮಿಗಳವರ ಜನನವು ತಪೋನಿಧಿಯಾದ ವೀರಶೈವ ಸಮಾಜದ ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸಲೆತ್ನಿಸಿದ ಶ್ರೀ ಶಿವಯೋಗಮಂದಿರ ಸ್ಥಾಪನಾ ಚಾರ್ಯ ಲಿಂಗೈಕ್ಯ ಶ್ರೀ ಕುಮಾರ ಶಿವಯೋಗಿಗಳ ಆಶೀರ್ವಾದ ಬಲದಿಂದ. ವೀರಶೈವ ಸಮಾಜವು ಸುಸಂಘಟಿತವಾಗಿ ನಾಡಿನಲ್ಲಿ ಬೆಳೆಯಬೇಕಾದರೆ ಗುರು-ವಿರಕ್ತಸ್ವಾಮಿಗಳು ನಿಷ್ಕಳಂಕ ಪ್ರೇಮದಿಂದ ಒಂದುಗೂಡಿ ಸಮಾಜದ ಕಾರ್ಯಗಳನ್ನು ಜರುಗಿಸಬೇಕೆಂಬುದೇ ಲಿಂಗೈಕ್ಯ ಶಿವಯೋಗೀಶ್ವರರ ಹೆಗ್ಗುರಿಯಾಗಿತ್ತು.

ವೀರಶೈವಧರ್ಮ ರಚನೆಯು ಒಂದು ವಿಶಿಷ್ಟ ರೀತಿಯಿಂದ ರೂಪುಗೊಂಡದ್ದಾಗಿದೆ ಪ್ರಾಚೀನ ಶಾಸ್ತ್ರ ಪುರಾಣಗಳೊಳಗಿನ ತತ್ವಗಳ ಮಡುವಿನಲ್ಲಿ ಬಿದ್ದು ಶೋಧಮಾಡುವ ಗೊಡವೆಗೆ ಹೋಗದೆ ಸ್ಥೂಲ ರೀತಿಯಿಂದ ವೀರಶೈವಧರ್ಮ ಮತ್ತು ಸಮಾಜ ರಚನೆಯನ್ನು ತಿಳಿದುಕೊಳ್ಳುವದು ಅವಶ್ಯವಾಗಿದೆ. ವೀರಶೈವಧರ್ಮದ ಪ್ರಾಣದಂತಿದ್ದ ಅಷ್ಟಾವರಣ. ಪಂಚಾಚಾರ, ಷಟ್ಸ್ಥಲಗಳು ವೀರಶೈವನ ನಿತ್ಯಜೀವನದ ಹಾಸುಹೊಕ್ಕಾಗಿವೆ.

" ಗರ್ಭಾಷ್ಟಮೇ ಲಿಂಗಧಾರಯೇತ್ "

ಎಂಬ ತತ್ವದಂತೆ ಕೂಸು ಭೂಮಿಗೆ ಬೀಳುವ ಪೂರ್ವದಲ್ಲಿಯೇ ಮಾಂಸಪಿಂಡವು ಮಂತ್ರಪಿಂಡವಾಗಿ ಧರೆಗೆ ಬೀಳಬೇಕು ಎಂಬ ಅತಿ ಸೂಕ್ಷ್ಮ ಆಧ್ಯಾತ್ಮಿಕ ವಿಚಾರದಿಂದ

ವೀರಶೈವ ಧರ್ಮದ ಘನತೆಯು ಹೆಚ್ಚಿದೆ. ವೀರಶೈವನ ತನು, ಮನ, ಭಾವನೆಗಳು ಶಿವ ಸಂಸ್ಕಾರದಿಂದ ಪರಿಶುದ್ಧಗೊಳಿಸಲ್ಪಟ್ಟಿವೆ. ಇದನ್ನು ಸಾಧಿಸಲು ವೀರಶೈವ ಧರ್ಮದಲ್ಲಿ ಗುರು–ಲಿಂಗ ಜಂಗಮ ತತ್ವಗಳು ತಳಹದಿಯಾಗಿವೆ.ಇವು ಅಭೇದ್ಯವಾದವುಗಳು. ವೀರ ಶೈವ ಧರ್ಮದ ಪ್ರಾಣದಂತಿದ್ದ ಈ ಮೂರು ತತ್ವಗಳು ಈ ವರೆಗೆ ವೀರಶೈವಧರ್ಮವನ್ನು ಉಳಿಸಿದ್ದಾಗಿದೆ. ಈ ಧರ್ಮತತ್ವಗಳ ಮೇಲೆ ವೀರಶೈವಸಮಾಜದ ಸಂಘಟನೆಯೂ ಆಗಿದೆ.

ವೀರಶೈವ ಜನಸಾಮಾನ್ಯರಲ್ಲಿ ಗುರು–ಲಿಂಗ ಜಂಗಮ ತತ್ವಗಳ ಬಗ್ಗೆ ಭಕ್ತಿ ಭಾವನೆಗಳು ಕೆಲಮಟ್ಟಿಗೆ ಉಳಿದಿದ್ದರೂ ಉಚ್ಚ ತರಗತಿಯ ಶಿಕ್ಷಣ ಪಡೆದ ವೀರಶೈವ ರಲ್ಲಿ ಕ್ರಮೇಣ ಈ ಭಾವನೆಯು ಕಡಿಮೆಯಾಗುತ್ತಿರುವದು ಶೋಚನೀಯ, ಇದು ಉಚ್ಚತರದ ಶಿಕ್ಷಣದ ತಪ್ಪಲ್ಲ. ವಿಶೇಷತಃ ವೀರಶೈವ ಧರ್ಮ ತತ್ವಗಳನ್ನು ರಕ್ಷಿಸುವ ಮತ್ತು ಸಮಾಜ ಸೇವೆಯೇ ತಮ್ಮ ಜೀವನದ ಗುರಿಯಾಗಿ ಇಟ್ಟುಕೊಂಡ ಗುರು ಜಂಗಮರು ತಮ್ಮ ಕರ್ತವ್ಯದಲ್ಲಿ ಚ್ಯುತರಾಗಹತ್ತಿರುವದೇ ಮುಖ್ಯ ಕಾರಣವೆಂದು ಹೇಳ ಬಹುದು. ಪಾಶ್ಚಿಮಾತ್ಯ ಶಿಕ್ಷಣದ ಪ್ರಭಾವದಿಂದ ಧಾರ್ಮಿಕ ಭಾವನೆಯು ಹ್ರಾಸ ವಾಗುತ್ತ ಭೌತಿಕಭಾವನೆಯು ಬೆಳೆಯುತ್ತಿರುವದೂ ಸಹ ಇದಕ್ಕೆ ಕಾರಣವಲ್ಲದಂತಲ್ಲ.

ವೀರಶೈವ ಧರ್ಮ ತತ್ವಗಳು ಕರ್ಮಜ್ಞಾನ ಸಮುಚ್ಚಯದಿಂದ ಜೀವನವನ್ನೇ ಶಿವಮಯವನ್ನಾಗಿ ಮಾಡುವದು. ಇದನ್ನು ಸಾಧಿಸಲು ಗುರು ಲಿಂಗ ಜಂಗಮರು ಬೇಕು. ಹೀಗೆ ಅಖಿಲ ವೀರಶೈವ ಧರ್ಮ ಪ್ರಪಂಚವನ್ನೇ ಕಾಯುವ ಹೊಣೆಗಾರಿ ಕೆಯು ಗುರು–ಜಂಗಮರ ಮೇಲೆ ವಿಶೇಷವಾಗಿದ್ದು ಪರಸ್ಪರರಲ್ಲಿ ಒಮ್ಮತ ಸಹಕಾರ, ಸಹಾನುಭೂತಿ ಗುಣಗಳು ಕಣ್ಮರೆಯಾಗುತ್ತಿರುವದು ಈ ಸಮಾಜದ ದುರ್ದೈವವೇ ಸರಿ. ಸಮಾಜವನ್ನೇ ಅಧೋಗತಿಗೆ ಇಳಿಸುವ ಇಂಥ ವಿಷ ವಾತಾವರಣವು ಸಮಾಜ ದಲ್ಲಿ ಈಗ ಕೆಲವು ವರ್ಷಗಳಿಂದ ಹಬ್ಬುತ್ತಲಿರುವದು ಸಮಾಜದ ಅಭ್ಯುದಯಕ್ಕೆ ವಜ್ರಾಘಾತ. ಪರಸ್ಪರರಲ್ಲಿ ಅಸಹಕಾರ ಅಸಮಾಧಾನ ಅಸೂಯೆಗಳು ಬೆಳೆಯುತ್ತ ಹೋದಲ್ಲಿ ಸುಂದರವಾದ ಅಪ್ರತಿಮ ಮತ್ತು ವಿಶಿಷ್ಟ ತತ್ವಗಳಿಂದ ಕಟ್ಟಲ್ಪಟ್ಟ ಈ ವೀರಶೈವ ಸಮಾಜವು ಕಡೆಗೆ ಹೆಸರಿಗೆ ಮಾತ್ರ ಉಳಿಯುವಂತಾಗುತ್ತದೆ.

ಈಗಿನ ಭೌತಿಕ ಪ್ರಗತಿಯ ಕಾಲದಲ್ಲಿ ನೈತಿಕ ಮೌಲ್ಯಗಳನ್ನು ಧಾರ್ಮಿಕ ತತ್ವ ಗಳೊಂದಿಗೆ ಸಮಾಜದಲ್ಲಿ ಬೆಳೆಸಿ ಶ್ರೇಷ್ಠ ನಾಗರಿಕನನ್ನಾಗಿ ಮಾಡಲು ಗುರು ವಿರಕ್ತ ಸ್ವಾಮಿಗಳು ಮುಂದಾಗಬೇಕು. ಒಕ್ಕಟ್ಟು ಬೆಳೆಯಬೇಕು. ಮಾನವೀಯತೆಯನ್ನು ಬೆಳೆಸ ಬೇಕು. ರಾಷ್ಟ್ರ ಧರ್ಮದ ಜೊತೆಗೆ ನೈತಿಕ ಆಧ್ಯಾತ್ಮಿಕ ತತ್ವಗಳನ್ನು ಬೋಧ ಮಾಡುವದು ಸ್ವಾಮಿಗಳ ಕರ್ತವ್ಯವಾಗಿದೆ. ಆದರೆ ಈಗ ನಡೆದಿದ್ದೇನು ? ಗುರು ವಿರಕ್ತ ಸ್ವಾಮಿಗಳ ಅಂತಃಕಲಹವು ಸಮಾಜದ ಶಕ್ತಿಯನ್ನೇ ಕುಂಠಿತಗೊಳಿಸಿದೆ. ಉಚ್ಚತಮ ಪಾರಮಾರ್ಥಿಕ ತತ್ವಗಳಿಂದ ಕೂಡಿದ ವೀರಶೈವ ಸಮಾಜವು ಅಸೂಯೆ, ಅಸಹಾಕಾರದಿಂದ ಕೆಳಮಟ್ಟಕ್ಕೆ ಇಳಿಯತೊಡಗಿದೆ. ಎಲ್ಲೆಲ್ಲಿಯೂ, ಸಮಾಜದಲ್ಲಿ ಅನೈಕ್ಯತೆಯು ಒಡಮೂಡಿ, ಪರಸ್ಪರರಲ್ಲಿ ಆದರ ಗೌರವಗಳು ಕಡಿಮೆಯಾಗುತ್ತಲಿವೆ.

ವಿಲಾಸಿ ಜೀವನವು ತಾಂಡವಾಡುತ್ತಲಿದೆ. ನೈತಿಕ ಮೌಲ್ಯಗಳನ್ನು ಕಡೆಗಣಿಸಲಾಗಿದೆ. ಧರ್ಮ ಗುರುಗಳಲ್ಲಿ ಭಕ್ತಿ ಪ್ರೇಮಗಳು ಮಾಯವಾಗುತ್ತಲಿವೆ.

ಸಾಮಾಜಿಕ ಅಮೂಲ್ಯ ತತ್ವಗಳೇ ಕಳಚಿ ಬಿದ್ದು ಮಾನವೀಯತೆಯೇ ನಾಶವಾಗಿ ಗೊಂದಲಮಯ ಪರಿಸ್ಥಿತಿಯು ತಲೆದೋರಿದಾಗ್ಗೆ ಅದರ ನಿವಾರಣೆಗಾಗಿ ಆಗಾಗ್ಗೆ ಮಹಾ ವಿಭೂತಿಗಳು, ಸಮಾಜ ಸುಧಾರಕರು ಕಾಣಿಸಿಕೊಳ್ಳುತ್ತಾರೆ. ಮಾನವ-ಮಾನವರ ನಡುವೆ ಗೌರವಾದರಗಳನ್ನು ಬೆಳೆಸುವದು ಮಾನವನ ವೈಶಿಷ್ಟ್ಯವನ್ನು ಸಮಾಜದಲ್ಲಿ ಬೇರೂರಿಸಿ ಮಾನವೀಯತೆಯನ್ನು ಸ್ಥಿರಪಡಿಸುವದು ಸಮಾಜದಲ್ಲಿ ಗುರುಗಳ ಕರ್ತವ್ಯವಾಗಿದೆ. ಶ್ರೀ ವಿವೇಕಾನಂದರು ಒಂದೆಡೆಗೆ ಹೇಳಿದ್ದು – "Are you a man! I do not care to know what religion you belong, I do not care to know what race, to what community, or what nation you belong; But are you a man? We want a man-making education. We want a man-making religion...."—ನೀನು ಮನುಷ್ಯನೋ ? ನೀನು ಯಾವ ಧರ್ಮಕ್ಕೆ ಸಂಬಂಧಪಟ್ಟಿರುವಿಯೆಂಬುದನ್ನು ತಿಳಿದುಕೊಳ್ಳಲು ನಾನು ಹವಣಿಸುವದಿಲ್ಲ, ನೀನು, ಯಾವ ಜಾತಿ, ಯಾವ ಸಮಾಜಕ್ಕೆ, ಯಾವ ದೇಶಕ್ಕೆ ಹೊಂದಿಕೊಂಡಿರುವಿಯೆಂಬುದನ್ನು ತಿಳಕೊಳ್ಳಲು ನಾನು ಇಚ್ಛಿಸುವದಿಲ್ಲ. ಆದರೆ ನೀನು ಮನುಷ್ಯನೋ ! ಮನುಷ್ಯತ್ವವನ್ನು ನಿರ್ಮಿಸುವ ಶಿಕ್ಷಣ ನಮಗೆ ಬೇಕು. ಮನುಷ್ಯತ್ವವನ್ನು ನಿರ್ಮಿಸುವ ಧರ್ಮವು ಬೇಕು. ಈ ವಿಚಾರ ಕ್ರಾಂತಿಯನ್ನು ಹುಟ್ಟಿಸುವ ಶ್ರೀ ವಿವೇಕಾನಂದ ವಾಣಿಯು ಪೂರ್ಣ ಅರ್ಥಗರ್ಭಿತವಾದದ್ದು ಮತ್ತು ವಿಶ್ವ ಬಂಧುತ್ವವನ್ನು ಬೆಳೆಸುವಂಥಾದ್ದು ಆಗಿದೆಯಷ್ಟೇ !

ಈ ಮಾನವೀಯತೆಯ ವಿಶಾಲ ಭಾವನೆಯ ಮೇಲೆ ನಮ್ಮ ವೀರಶೈವ ತತ್ವಗಳು ರಚಿಸಲ್ಪಟ್ಟಿದ್ದು ಇವುಗಳನ್ನು ದೂರಿಟ್ಟು ಸ್ವೇಚ್ಛಾಚಾರದಿಂದ ಮತ್ತು ಸ್ವೈರ್ಯವೃತ್ತಿಯಿಂದ ನಡೆದಿದ್ದಾದರೆ. ಸಾಮಾಜಿಕ ಸುಧಾರಣೆಯು ಎಂದೂ ಸಾಧ್ಯವಿಲ್ಲ. ವೀರಶೈವ ಸಮಾಜದ ಏಳಿಗೆಯು, ವೀರಶೈವ ಧರ್ಮ ಪ್ರಗತಿಯು ಬಹುಮಟ್ಟಿಗೆ ಗುರು – ವಿರಕ್ತ ಸ್ವಾಮಿಗಳ ಸಾಮೂಹಿಕ ಮತ್ತು ಒಮ್ಮನಸ್ಸಿನ ಕಾರ್ಯ ಸಾಧನೆಯ ಮೇಲೆ ಅವಲಂಬಿಸಿದೆ. ಗುರು – ವಿರಕ್ತ ಸ್ವಾಮಿಗಳೊಳಗಿನ ಇಬ್ಬಾಗವು ವೀರಶೈವ ಸಮಾಜದ ಸಾಮಾನ್ಯ ಜನತೆಯ ವರೆಗೆ ಮುಟ್ಟಿ ಸಮಾಜವೇ ಒಡೆದು ಪಂಗಡಗಳ ಪಿಡುಗಿನಿಂದ ಬಾಧಿಸಲ್ಪಟ್ಟಿದೆ. ಇದು ಪರಸ್ಪರರ ವೈಷಮ್ಯಕ್ಕೆ ಕಾರಣವಾಗಿ ಪರಸ್ಪರರನ್ನು ಕೆಳಗಿಳಿಸಬೇಕೆಂಬ ದುಷ್ಟ ಮಹತ್ವಾಕಾಂಕ್ಷೆಯಿಂದ ಸಮಾಜವೇ ದುರ್ಬಲವಾಗುತ್ತ ನಡೆದಿದೆ.

ಸಮಾಜಕ್ಕೆ ಯಾವುದೋ ಕಾರಣದಿಂದ ಬಡಿದ ಈ ರೋಗವನ್ನು ನಿವಾರಣೆ ಮಾಡುವ ಉಪಾಯವನ್ನು ತೀವ್ರ ಕೈಕೊಳ್ಳದೆ ಇದ್ದರೆ ನಮ್ಮ ನಾಶವನ್ನು ನಾವು ಆಹ್ವಾನಿಸಿದಂತೆ. ವೀರಶೈವ ಸಮಾಜದ ಗುರು – ವಿರಕ್ತ ಸ್ವಾಮಿಗಳಲ್ಲಿ ಮತ್ತು ಮುಂದೊರೆದ ಸಮಾಜ ಸುಧಾರಕರಲ್ಲಿ ಈ ವಿಚಾರವು ಆಗಾಗ್ಗೆ ತಲೆದೋರುತ್ತಿದ್ದಾಗ್ಯೂ

ಪ್ರಭಾವಯುತವಾಗಿ ಕಾರ್ಯ ಮಾಡುವ ವ್ಯಕ್ತಿಗಳು ಪರಿಣಾಮಕಾರಕ ರೀತಿಯಿಂದ ಮುಂದೊರೆದಿರುವದಿಲ್ಲ. ಆದರೆ ನಾನು ಕಂಡಂತೆ ಶ್ರೀ ಮೂರುಸಾವಿರ ಮಠದ ಜಗದ್ಗುರುಗಳವರು ಈ ದಿಶೆಯಲ್ಲಿ ಅಂತಃಕರಣ ಶುದ್ಧಿಯಿಂದ ತಮ್ಮ ವಿಚಾರಗಳನ್ನು ವ್ಯಕ್ತಪಡಿಸುವದನ್ನು ಮತ್ತು ಕಳಕಳಿಯಿಂದ ಕಾರ್ಯ ಮಾಡುವದನ್ನು ನಾನು ನೋಡಿ ಮತ್ತು ಕೇಳಿದ್ದಾಗಿದೆ. ಇವರು ವೀರಶೈವ ಸಮಾಜೋದ್ಧಾರದ ಸಲುವಾಗಿ ನಿಷ್ಕಳಂಕ ಮನಸ್ಸಿನಿಂದ ಕಾರ್ಯ ಪ್ರವೃತ್ತರಾದದ್ದನ್ನು ಕಂಡು ನಾನು ಸ್ಫೂರ್ತಿಗೊಂಡಿದ್ದೇನೆ. ಅವರ ವಿಚಾರಧಾರೆಯು ಪರಸ್ಪರದಲ್ಲಿದ್ದ ವಿಷಮ ಭಾವನೆ, ಅಸೂಯೆ, ಮೊದಲಾದವುಗಳನ್ನು ದೂರ ಮಾಡಿ ಮಾನವೀಯತೆಯನ್ನು ಮತ್ತು ಪ್ರೇಮವನ್ನು ಬೆಳೆಸುವದು. ಪರಮತೀಯರ ಮೇಲೂ ವೀರಶೈವ ಧರ್ಮದ ಉದಾತ್ತ ತತ್ವಗಳನ್ನು ಬಿಂಬಿಸಿ ಪರಧರ್ಮ ಸಹಿಷ್ಣುತೆಯನ್ನು ಪ್ರತಿಪಾದಿಸುವದು. ಗುರು – ವಿರಕ್ತ ಸ್ವಾಮಿಗಳ ನಡುವೆ ಅನೈಕ್ಯ, ಅನಾದರತೆ, ಅಸೂಯೆ ಮೊದಲಾದವುಗಳಿಂದ ಕೂಡಿದ ಅನಿಷ್ಟ ವಾತಾವರಣವನ್ನು ಹೋಗಲಾಡಿಸಿ ಪರಸ್ಪರರಲ್ಲಿ ಸೌಹಾರ್ದ, ಸಹಕಾರ, ಪ್ರೇಮ ಮೊದಲಾದ ಉಚ್ಚತಮ ಗುಣಗಳನ್ನು ಬೆಳೆಸುವದು ಇವೇ ಮೊದಲಾದ ಅಪ್ರತಿಮ ಗುಣಗಳು ಶ್ರೀ ಜಗದ್ಗುರುಗಳ ಜೀವನದ ಸಾಧನೆಗಳಾಗಿವೆಯೆಂದು ನಾನು ತಿಳಿದಿದ್ದೇನೆ. ನನ್ನೊಡನೆ ಮಹಾಸ್ವಾಮಿಗಳವರು ಚರ್ಚಿಸುತ್ತಿದ್ದಾಗ ಅವರಲ್ಲಿ ಲಿಂಗೈಕ್ಯ ಶ್ರೀ ಕುಮಾರ ಶಿವಯೋಗಿಗಳ ಚಿತ್ಕಳೆಯೇ ಮೂಡಿ ಬಂದಿದೆಯೆಂದು ನನಗೆ ಭಾಸವಾಗುತ್ತಿತ್ತು.

ನಮ್ಮ ಸಮಾಜದಲ್ಲಿಯ ಮುಖಂಡರ ಮತ್ತು ಕಾರ್ಯಕರ್ತರ ಹೊಣೆಯು ಸಹ ಸಣ್ಣದಲ್ಲ. ಜಗದ್ಗುರುಗಳು, ಕೈಕೊಂಡ ಈ ಸಮಾಜ ಸಂಘಟನೆಯ ಕಾರ್ಯದಲ್ಲಿ ಮತ್ತು ವೀರಶೈವ ಧರ್ಮದ ಸಿದ್ಧಾಂತ ಪ್ರಬೋಧಕರಾದ ಗುರು – ವಿರಕ್ತ ಸ್ವಾಮಿಗಳಲ್ಲಿ ಸಾಮರಸ್ಯ ಭಾವನೆಯನ್ನು ಪುನರುಜ್ಜೀವನಗೊಳಿಸುವಲ್ಲಿ ಅವರು ಸಹಕರಿಸಿ ಒಂದಾಗಬೇಕು. ಗುರು – ವಿರಕ್ತ ಸ್ವಾಮಿಗಳಲ್ಲಿಯ ಅನೈಕ್ಯತೆಯು ನಮ್ಮ ಸಮಾಜಕ್ಕೆ ದೊಡ್ಡ ಪೆಟ್ಟು ಕೊಟ್ಟಿದೆ ಎಂದು ತಿಳಿದಾಗ್ಯೂ ಅದನ್ನು ಹೋಗಲಾಡಿಸಲಿಕ್ಕೆ ಯಾವ ಸೂಕ್ತ ಕ್ರಮಗಳನ್ನೂ ಕೈಕೊಳ್ಳದೆ ಉದಾಸೀನರಾಗಿರುವದು ಸಾಧುವಲ್ಲ, ಇನ್ನಾದರೂ, ಗುರು – ವಿರಕ್ತ ಸ್ವಾಮಿಗಳ ಸಮ್ಮಿಲನ, ಸಮನ್ವಯವನ್ನು ಮೊದಲು ಸಾಧಿಸಿ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಅವರವರ ಸ್ಥಾನಮಾನಕ್ಕನುಸರಿಸಿ ಮುಂದುವರೆಯುವಂತೆ ಶ್ರೀ ಜಗದ್ಗುರುಗಳು ಮಿಗಿಲಾದ ಪ್ರಯತ್ನಶೀಲರಾಗಲೆಂದು ನನ್ನ ಹಾರೈಕೆ. ಅಳಿಗಾಲ, ಉಳಿಗಾಲ ಇವೆರಡರ ನಡುವೆ ಬೇಯು ಬೆಂಡಾದ ಸಮಾಜವನ್ನು ಎಲ್ಲ ಗುರು – ವಿರಕ್ತ ಸ್ವಾಮಿಗಳು, ಸಮಾಜ ಧುರೀಣರು ಪುನರುಜ್ಜೀವನಗೊಳಿಸುವಲ್ಲಿ ಬದ್ಧಕಂಕಣರಾಗಬೇಕು. ಶ್ರೀ ಜಗದ್ಗುರುಗಳು ಕೈಕೊಂಡ ಕಾರ್ಯವು ಎಲ್ಲ ವಿಧದಿಂದಲೂ ಯಶಸ್ವಿಯಾಗಿ ಕೊನೆಗೊಳ್ಳುವಂತೆ ಎಲ್ಲ ಸಮಾಜದ ಬಂಧು ಭಗಿನಿಯರು ಸಹಾಯ ಸಹಕಾರವನ್ನು ನೀಡಲಿ ! ವೀರಶೈವ ಸಮಾಜವು ತನ್ನ ಸರ್ವಶಕ್ತಿಯಿಂದ ಪುನರುಜ್ಜೀವನಗೊಳ್ಳಲಿ ! □

# ಮೂರುಸಾವಿರಮಠದ ದಿನದ ದರ್ಶನ

ಎಚ್. ಪಿ. ಹುಲ್ಯಾಳ

ಹೂಬಳ್ಳಿ ಪುರಪುಣ್ಯ
ವೈಭವದ ಮೇರುವನೆ
ಶೋಭಿಪ ಜಗದ್ಗುರುವೆ ಗುರುಸಿದ್ಧನೆ

ಬೆಳಗಲು ಇನ್ನೂ ಒಂದು ತಾಸು. ಇದಾವ ಹಾಡು, ಮೈಮನಗಳನ್ನು ಸೆಳೆದು ಭಕ್ತಿ ಕಂಪಿತಗೊಳಿಸುತ್ತಲಿದೆ. ಜಡ ನಿದ್ರೆಯಿಂದೆದ್ದ ಈ ದೇಹಕ್ಕೆ ಅದೆಂಥ ಸಮಾಧಾನ ಶಾಂತಿ. ನಡುನಡುವೆ ಡಣ್! ಡಣ್! ಓಂಕಾರ ನಿನಾದ ಮತ್ತೆ ನೂರಾರು ಕಂಠಗಳಿಂದ ಜಯ ಗಂಗಾಧರ! ಜಯ ಗಂಗಾಧರ! ಭಕ್ತಿ ಗೀತೆಯ ಸುನಾದ. ಇದಾವ ಕರೆ? ಇಗೋ; ಬನ್ನಿ; ದರ್ಶನವ ಪಡೆದು ಪಾವನಗೊಳ್ಳಿ. ಆಧ್ಯಾತ್ಮದ ಸರೋವರದಲ್ಲಿ ಮಿಂದು ಮಡಿಯಾಗ ಬನ್ನಿ. ಹರ ಗುರು ಕರಕಮಲ ಸಂಜಾತರಾದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದವರು ಹಾಡುವ ಗುರುಸಿದ್ಧೇಶ್ವರರ ಆ ಸುಪ್ರಭಾತ ಕೇಳ ಬನ್ನಿ. ಕರ್ತೃ ಗುರು ಸಿದ್ಧೇಶನ ಆ ಗಂಟಾನಿನಾದ ಆಲಿಸಬನ್ನಿ. ಕರುಣಾ ಪ್ರಸಾದ ಪಡೆದ ನೂರಾರು ಮಕ್ಕಳು ಆ ಪ್ರಾರ್ಥನೆಯಲ್ಲಿ ಪಾಲುಗೊಂಡಿಹ ಭಾಗ್ಯವನ್ನು ಕಾಣಬನ್ನಿ. ಅದೇ ಆ ತಾಣ; ಸಮಾಜದ ಪ್ರಾಣ; ಸತ್ಯ ದರ್ಶನದ ದಿವ್ಯ ಉಗ್ರಾಣ: ಮಂಗಲ ವಾತಾವರಣದಿಂದ ತುಂಬಿದ ಶ್ರೀ ಜಗದ್ಗುರು ಮೂರುಸಾವಿರಮಠ ಮೂರು ಜಗಕ್ಕೆ ಮಠವಾಗಿದೆ. ಹೆಸರು ಅನ್ವರ್ಥವಾಗಿದೆ, ನಿಜಕ್ಕೂ ಸಾರ್ಥಕವಾಗಿದೆ. ಹಲವು ಅರ್ಥ ಪಡೆದಿದೆ.

ನಾಗರಿಕತೆಯ ನಗಾರಿಯ ಸಪ್ಪಳದಿಂದ ಕಿವಿ ಗಡಚಿಕ್ಕಿವೆ. ವಿಜ್ಞಾನದ ವಿಚಿತ್ರ ಚಿತ್ರಗಳ ಸರಮಾಲೆಯನ್ನು ನೋಡಿ ಕಣ್ಣು ಕಟ್ಟಿವೆ. ವೇಷ ಭಾಷೆಗಳೆರಡೂ ಸಂಸ್ಕೃತಿಯನ್ನು ಮರೆಮಾಚಿಸಿವೆ, ಇದನ್ನು ಬೆಳೆಸಲು ಏನೆಲ್ಲ ನಡೆದಿದೆ. ಈ ವಿಕೃತ ಭಾವನೆಗಳ ಮಧ್ಯದಲ್ಲಿ ಧರ್ಮ ತನ್ನ ಧಾರಣ ಶಕ್ತಿಯನ್ನು ಕಳೆದುಕೊಂಡರೆ ಅದೇ ಲೋಕದ ಅವನತಿಗೆ ನಾಂದಿ. ಹಾಗಾಗದಂತೆ ನೋಡಿಕೊಳ್ಳುತ್ತಿರುವ ಶಕ್ತಿಯನ್ನು ಭಾರತದ ನೆಲ ಬಯಲು ಪಡೆದಿದೆ, ಇದೇ ಅದರ ಹಿರಿಮೆ. ಆ ಹಿರಿಮೆಯ ಹಿರಿಯಪಾಲಿನಲ್ಲಿ

ಇಂದು ಮೂರುಸಾವಿರಮಠ ಪಾಲುಗೊಳ್ಳುತ್ತದೆ. ಪಾರಮಾರ್ಥಿಕತೆಯ ಪಡಿನೆರಳಿ ನಲ್ಲಿ ಲೌಕಿಕತೆ ರಕ್ಷೆ ಪಡೆದಿದೆ. ಸಮಾಜವನ್ನು ಶಾಂತಿ ಸಮತೆಯಿಂದ ಮುನ್ನಡೆಸುವ ಕಾರ್ಯ ಅವ್ಯಾಹತವಾಗಿ ಸಾಗಿದೆ. ಅದರ ವಿವಿಧ ಮುಖಗಳ ದರ್ಶನ ನಾವಿಲ್ಲಿ ಪಡೆ ಯಬಹುದಾಗಿದೆ.

ಒಂದು ಘಟನೆ ನೆನಪಿಗೆ ಬರುತ್ತದೆ. ದೂರದ ಹಳ್ಳಿಯ ಯಜಮಾನನೊಬ್ಬ ಮೂರುಸಾವಿರ ಮಠವೆಲ್ಲಿರುವದೆಂದು ಕೇಳಿದ. ಆತನ ಪ್ರಶ್ನೆ ವಿಚಿತ್ರವಾಗಿತ್ತು. ತಾನು ಎಲ್ಲಿ ನಿಂತು ಕೇಳುತ್ತಿರುವೆನೆಂಬುದನ್ನು ಆತ ಅರಿಯನಾಗಿದ್ದ. ೧೦–೧೨ ವರ್ಷ. ಗಳ ನಂತರ ಅವನು ಪುನಃ ನೋಡಿದಾಗ ಆತನಿಗೆ ಮಠ ಅಪರಿಚಿತವಾಗಿತ್ತು. ಸಮಾಜ ವನ್ನು ನೈತಿಕತೆಯ ನೆಲಗಟ್ಟಿನ ಮೇಲೆ ಕಟ್ಟಬೇಕೆನ್ನುವ ಶ್ರೀ ಜಗದ್ಗುರುಗಳವರ ಸಿದ್ಧ ರಾಮನ ಕಾಯಕ ಅವನಿಗೆ ಪವಾಡಗೈದಂತಿತ್ತು.

## ನಿಲಯಂಗಳು

ನೂರೊಂದು ಫೂಟು ಎತ್ತರದ ಮಹಾದ್ವಾರ. ಕಲೆಯ ಬೆಲೆಯೊಂದಿಗೆ ಸಶಾ ಸ್ತ್ರೀಯ ಕಲ್ಪನೆ ಸಾಹಿತ್ಯದೇವಿಯ ಆರಾಧನೆಗೆ ಅಗ್ರಸ್ಥಾನ. ತುಂಬು ವೆಚ್ಚದ ಗಡಿ ಯಾರ. ಸುತ್ತೆಲ್ಲ ಓಣಿಗಳಿಗೆ ಅದೇ ಸಮಯಸೂಚಿ. ಮಹಾದ್ವಾರದ ಒಳಹೊಕ್ಕು ನೋಡಿದರೆ ಆನೆಯಮನೆ, ಸದಾಪಕಾಲವೂ ಆನೆಯನ್ನು ನೋಡುತ್ತ ಕುಳಿತುಕೊಳ್ಳು ವದು ಹುಡುಗರಿಗೆ ಆನಂದ. ಎಡಭಾಗಕ್ಕೆ ಕಣ್ಣಾಡಿಸಿದರೆ ಮುದ್ದುಮಕ್ಕಳ ಪ್ರಾಥ ಮಿಕಶಾಲೆ, ನಿಮಿಷ ಮುಂದೆ ಬಂದು ಬಲಗಡೆ ನೋಡಿದರೆ ಗಂಡುಮಕ್ಕಳ ಮಾಧ್ಯಮಿಕ ಶಾಲೆ, ಮೇಲ್ಗಡೆ ಮಹಿಳಾ ಕಾಲೇಜು, ಬದಿಗೆ ವಿದ್ಯಾರ್ಥಿ ನಿಲಯಗಳು, ಮುಂದುಗಡೆ ಹೆಣ್ಣುಮಕ್ಕಳ ಮಾಧ್ಯಮಿಕ ಶಾಲೆ, ಮನೋವಿಕಾಸದೊಂದಿಗೆ, ಸತ್‌ಸಂಸ್ಕಾರದೊಂದಿಗೆ ಪವಿತ್ರತಮ ಧ್ಯೇಯವನ್ನು ಗಂಡು ಹೆಣ್ಣುಮಕ್ಕಳ ಹೃದಯಾಂತರಾಳದಲ್ಲಿ ವಿಕಸಿತಗೊಳಿಸಿ ಮನುಜ ಲೋಕವನ್ನು ಮಂದಾರ ಲೋಕವನ್ನಾಗಿ ಮಾಡುವ ಧ್ಯೇಯದ ಸಿದ್ಧತೆ ಸದಾ ಸಾಗಿದೆ.

## ದರ್ಶನ

ಮುಂದೆ ಬಂದು ಎಡಕ್ಕೆ ತಿರುಗಿದಾಗ ಅವ್ಯಕ್ತ ಶಕ್ತಿಯ ವಿದ್ಯುತ್ ಸಂಚಾರ. ಮಹಾಬೆಳಗಿನ ತಂಗಿರಣ ಸೋಂಕಿ ಮನ ಪ್ರಸನ್ ಧರ್ಮದ ದರ್ಪಣದೆದುರುಗಡೆಯಲ್ಲಿ ನಿಂತಂತೆ ಅನುಭವ. ಎತ್ತರ ಬಿತ್ತನೆಯ ಕಂಬುಗಳು ಮೇಲ್ಭಾಗದಲ್ಲಿ ಜೇನು ಗುಂಪು ಗಳು. ಜೇನ್ನೊಣಗಳ ಹಾರಾಟವೇ ಮನಸ್ಸಿಗೆ ಅಲ್ಹಾದಕರ.

## ಕೈಲಾಸದ ಅನುಭವ

ಮುಂಭಾಗದಲ್ಲಿಯೇ ಕರ್ತೃಗುರು ಸಿದ್ಧೇಶನ ಗದ್ದುಗೆ. ನೊಂದ ಬೆಂದ ಜೀವಿ ಗಳಿಗೆ ಸಮಾಧಾನ ಶಾಂತಿ ನೀಡುವ ಪವಿತ್ರತಮ ಸ್ಥಳ, ವಿವಿಧ ಬಣ್ಣಗಳ ಕಲಾತ್ಮಕ

ಕಲ್ಲುಗಳ ಹಾಸುಗೆ ಸುತ್ತಲೂ ಹಾಸಿದೆ. ಸದಾ ನಂದಾದೀವಿಗೆಗಳು ಕಾಂತಿ ಕಟ್ಟಿವೆ. ವಿವಿಧ ಪುಷ್ಪಗಳಿಂದ ಧಾರಣವಾದ ಗದ್ದುಗೆ. ಬೆಳ್ಳಿಯ ಮಂಟಪ. ನಿತ್ಯವೂ ಅಭಿಷೇಕ-ಎರಡು ವೇಳೆ ಪೂಜೆ. ಜಾತಿ, ಮತ, ಪಂಥಗಳ ಬೇಧ ಭಾವವಿಲ್ಲದೆ ಭಕ್ತರು ದರ್ಶನಕ್ಕೆ ಬರುವದು ಸದಾ ನಡೆದಿರುತ್ತದೆ. ಕರಜೋಡಿಸಿ ಒಂದೆರಡು ನಿಮಿಷ ಧ್ಯಾನಾಸಕ್ತರಾದರೆ ಮಹಾ ಬೆಳಗಿನ ಮಧ್ಯ ನಿಂತ ಅನುಭವ. ಮನ ಪ್ರಸನ್ನಗೊಂಡು ಅವ್ಯಕ್ತ ಶಕ್ತಿಯ ಸ್ಪಂದನದಿಂದ ಯಾವುದೋ ದಿವ್ಯ ಲೋಕದಲ್ಲಿ ಹೊಕ್ಕಂತಾಗಿ ಕೈಲಾಸ ಕಂಡಷ್ಟು ಸಮಾಧಾನ, ಶಾಂತಿ.

## ಶ್ರೀ ಜಗದ್ಗುರುಗಳು

ನಾಲ್ವತ್ತೈದರ ಮಧ್ಯದಲ್ಲಿಯೇ ನಾಲ್ಕೂ ನಿಟ್ಟಿನಿಂದ ಜನಗಳನ್ನಾಕರ್ಷಿಸಿದ ಶ್ರೀ ಜಗದ್ಗುರುಗಳು. ಭಸ್ಮಭೂಷಿತ ನಗುಮೊಗ, ಅಷ್ಟೇ ಪ್ರಸನ್ನ. ಸಾಹಿತ್ಯ, ಸಂಸ್ಕೃತಿಗಳನ್ನು; ಧರ್ಮದರ್ಶನಗಳನ್ನು ಆಳವಾಗಿ ಅಭ್ಯಾಸ ಮಾಡಿರುವದರಿಂದ ಪ್ರಖರವಾದ ಧೀಶಕ್ತಿ, ಅನುಭಾವ ಸರೋವರದ ತೀರ್ಥ ಸ್ನಾನದಿಂದ ಪವಿತ್ರವಾದ ಚಿತ್ ತಪಸ್ ಶಕ್ತಿ. ಅಲೌಕಿಕ ಅಭೀಪ್ಸೆ. ಚಿತ್ಪ್ರಭೆಯ ದೀಪ್ತಿ. ಸಾಷ್ಟಾಂಗಗೈದು ಸುತ್ತು ಕಣ್ಣು ಹಾಯಿಸಿದರೆ ಮಹಾತ್ಮಾ ಬಸವೇಶ್ವರ, ಭಗವಾನ್ ಎಡೆಯೂರ ಸಿದ್ದಲಿಂಗೇಶ್ವರ, ಲಿಂ. ಶ್ರೀ ನಿ. ಪ್ರ. ಹಾನಗಲ್ಲ ಕುಮಾರ ಮಹಾಸ್ವಾಮಿಗಳವರ, ಲಿ. ಶ್ರೀ ನಿ. ಪ್ರ. ವಿಜಯಮಹಾಂತ ಶಿವಯೋಗಿಗಳವರ, ಲಿಂ. ಶ್ರೀ ಜಗದ್ಗುರು ಗುರುಸಿದ್ಧೇಶ್ವರರ. ಹಾಗೂ ಲಿಂ. ಶ್ರೀ ಜಗದ್ಗುರು ಗಂಗಾಧರ ಹಾವೇರಿ ಮಹಾಸ್ವಾಮಿಗಳವರ ಚಿತ್ರದ ಪ್ರಶಾಂತ ಕಿರಣಗಳು, ಬೆಳಕು ! ಸುತ್ತಲೂ ಬೆಳಕು !! ಬರೀ ಬೆಳಕು !!! ಪೂರ್ಣಿ-ಮೆಯ ದಿನದಂದು ಪ್ರಶಾಂತ ಪ್ರಕೃತಿಯ ಮಧ್ಯ ನಿಂತಂತೆ ಕಲ್ಪನೆ: ಅಲ್ಲ ಅನುಭವ.

ಬಿದ್ದ ಬೆಳಕಿನ ಮಧ್ಯದಲ್ಲಿಯೆ
ಶಕ್ತಿ ವಿಶಿಷ್ಟಾದ್ವೈತ ದರ್ಶನ
ನಿತ್ಯ ನಿರಂಜನ ನಿಯತಿಯಲ್ಲಿಯೆ
ಕಾಲ ಚಕ್ರದ ಬಂಧನ

ಮಾತು ಮೌನವಾಗಿ; ಮಂತ್ರ ಮುಗ್ಧರಾಗಿ ನಮಿಸುವವರಲ್ಲಿಯೇ ಕುಳಿತುಕೊಳ್ಳಲು ಶ್ರೀ ಜಗದ್ಗುರುಗಳ ಅಂತಃಕರಣದ ಅಪ್ಪಣೆ "ಕಾಯಕವೇ ಕೈಲಾಸ", ಸಾಧ್ಯತೆಯೇ "ಜೀವನ ಸಿದ್ಧಿ" ಯಲ್ಲಿ ವಿಶ್ವಾಸ, ಸದಾ ಕಾರ್ಯ ತತ್ಪರತೆ ವ್ಯಕ್ತಿ ಮಹಾಶಕ್ತಿಯಾಗಿ ಒಂದು ಸಂಸ್ಥೆ ಮಾಡುವಷ್ಟು ಕಾರ್ಯ ಪೂರ್ಣಗೊಂಡಿದೆ. ಅವರ ದರ್ಶನ ಒಂದು ವಿಚಾರಧಾರೆ, ಒಂದು ಆದರ್ಶ, ಮತ್ತು ಜೀವನದ ದಿವ್ಯತೆಯ ದರ್ಶನಕ್ಕೆ ಸಂಕೇತ, ಆಧ್ಯಾತ್ಮಿಕ ಉನ್ನತಿಯೊಡನೆ ಭೌತಿಕ ಪ್ರಗತಿ. ಸಮುದ್ರದಾಚೆಗಿನ ದೇಶಗಳಿಂದ ಬಿನ್ನಹದ ಕರೆ. ವಿಜ್ಞಾನ ಸುಂದರಿಯು ನರ್ತಿಸುವ ಜಪಾನ ಮುಂತಾದ ದೇಶ

ಗಳ ವರೆಗೂ ಪ್ರಯಾಣ ಮಾನವನ ಬಾಳಿಗೆ ಧರ್ಮದ ಕೊಡುಗೆಯ ಕೂಗು. ಅಂತ-ರಾಷ್ಟ್ರೀಯ ಧರ್ಮಪರಿಷತ್ತಿನಲ್ಲಿ ಪ್ರಮುಖ ಸ್ಥಾನ, ಬಾಹ್ಯ ವಿವಿಧತೆಯೊಡನೆ ಮೂಲ ಏಕತೆಯನ್ನೂ; ಆತ್ಮೋತ್ಕರ್ಷದೊಡನೆ ಆತ್ಮ ಸಂಯಮನ್ನೂ ಸಾಧಿಸಿದ ದಿವ್ಯ ಸನ್ನಿಧಾನದ ದರ್ಶನ ಜನ್ಮ ಜನ್ಮಾಂತರದ ಪುಣ್ಯಫಲ.

## ಪರಂಜ್ಯೋತಿ ಕಾರ್ಯಾಲಯ

ದೇಹಕ್ಕೆ ಬರಿ ಆಹಾರ ದೊರೆತರೆ ಮಾನವ ಕೇವಲ ಮಾಂಸದ ಮುದ್ದೆ. ಬುದ್ಧಿಗೂ ಆಹಾರ ದೊರೆಯಬೇಕು. ಪತ್ರಿಕೆಗಳು ಅದರ ಒಂದು ಸಾಧನೆ. ಹಿರಿಯ ಅನುಭಾವದ ನುಡಿಗಳನ್ನು ಪ್ರತಿಯೊಬ್ಬರ ಮನೆ ಮನೆಗಳಿಗೆ ಒಯ್ಯುವ ಕಾರ್ಯ ಪ್ರತಿಕೆಗಳ ಮುಖಾಂತರ. ಈ ಘನ ಉದ್ದೇಶದಿಂದ ಪರಂಜ್ಯೋತಿ ಪತ್ರಿಕೆಯನ್ನು ಪ್ರಕಟಗೊಳಿಸುವ ಕಾರ್ಯ ಸ್ವಂತ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಸಾಗಿದುದು ಪ್ರಗತಿಯ ಹೆಜ್ಜೆ. ಸಂಸ್ಕೃತಿ ಸೌರಭ ಹೊತ್ತುಕೊಂಡು ಒಯ್ಯುವದು ಅದರ ದಿವ್ಯ ಧ್ಯೇಯ.

## ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ

ಇದೊಂದು ಸ್ಫೂರ್ತಿಯ ಸೆಲೆ: ವೈರಾಗ್ಯದ ನೆಲೆ, ವಿಕಸಿತ ದೇವ ಕುಸುಮಗಳ ಆಗರ. ನಡೆಯಲ್ಲಿ ನುಡಿಯಲ್ಲಿ ಒಂದಾದ ಕ್ರಿಯಾತ್ಮಕ ಕಾರ್ಯಾಲಯ ಕಾಲಚಕ್ರದ ಗತಿಯಲ್ಲಿ ಸಿಕ್ಕು ಹತಾಶರಾಗಿ ಬಾಳುವ ಹೀನ ಬಾಳಲ್ಲ; ಅದರ ಗತಿಯನ್ನೇ ನಿಯಂತ್ರಿಸುವ ಸಚೇತನ ಶಕ್ತಿಯ ಸಂಗ್ರಾಮ. ಬಾಲ್ಯದಲ್ಲಿಯೇ ತಂದೆ-ತಾಯಿ, ಬಂಧು-ಬಳಗ, ಭೌತಿಕ ವ್ಯಾಮೋಹವನ್ನು ಹರಿದೊಗೆದ ನಿರಂಜನ ಪುತ್ಥಳಿಗಳು ಚಿಕ್ಕ ವಯಸ್ಸಿನಲ್ಲಿಯೇ ಅದೆಂಥ ಮನೋಸ್ಥೈರ್ಯ ! ತ್ಯಾಗ !! ಗಂಧದ ಕೊರಡಿನ ಬದುಕು, ಭಸ್ಮ ಭೂಷಿತ ತೇಜೋವದನದ ಕಾಷಾಯಾಂಬರ ಧಾರಿಗಳು, ಹಲವರು ಬಿಳಿಯ ಬಟ್ಟೆ, ಅರುಣೋದಯ ಸಮಯದಲ್ಲಿ ಗಗನದ ಅನುಭವ. ವೀರಶೈವ ಧರ್ಮಕ್ಕೆ ಬದ್ಧ, ವಿಶ್ವ ಧರ್ಮವೆಂಬುವದಕ್ಕೆ ನಿಷ್ಠೆ, ಸಿದ್ಧಿ, ಆದರೂ ಹಲವು ಭಾಷೆ; ಹಲವು ಧರ್ಮಗಳ ಅಭ್ಯಾಸ. ತತ್ವಬೋಧನ; ತತ್ವಸಾಧನೆಗಳೊಂದಿಗೆ ವಿಚಾರಕ್ರಾಂತಿಯನ್ನು ಒರೆಗೆ ಹಚ್ಚುವ ಸತ್ವಯುತ ಸಾಮಾಜಿಕ ಕ್ರಿಯೆ. ನಿತ್ಯವೂ ಶಿವಾನುಭವಗೋಷ್ಠಿ ನಡೆದಿರುತ್ತದೆ. ಅಂದು ಲಿಂ. ಹಾನಗಲ್ಲ ಕುಮಾರೇಶ ಕಂಡ ಕನಸನ್ನು ನನಸಾಗಿಸುವದಕ್ಕೋಸುಗ ಸದಾ ಸರ್ವವಿಧದ ಕ್ರಿಯೆಗಳು ಸಾಗಿರುತ್ತವೆ.

## ವೈದಿಕ, ಜ್ಯೋತಿಷ್ಯ, ಸಂಗೀತ ಪಾಠಶಾಲೆ

ಪ್ರತಿ ಪದಾರ್ಥವನ್ನು ಸಂಸ್ಕಾರದಿಂದ ಕಾರ್ಯೋಪಯೋಗವಾಗುವಂತೆ ಮಾಡುವದು ನಮ್ಮ ನಿತ್ಯ ಅನುಭವ. ಚೇತನವಾಗಲಿ ಅಚೇತನವಾಗಲಿ ಸಂಸ್ಕಾರದಿಂದ ತನ್ನ ಮಾಲಿನ್ಯವನ್ನು ಕಳೆದುಕೊಂಡು ಪಾವಿತ್ರ್ಯವನ್ನು ಹೊಂದುತ್ತದೆ. ಪುಟಕ್ಕಿಟ್ಟ

ಮೇಲೆಯೆ ಬಂಗಾರಕ್ಕೆ ಬೆಲೆ ಬರುವದು; ಹಾಗೆಯೆ ಮಾನವನಿಗೂ ಸಹ ಸಂಸ್ಕಾರವೇ ಬೆಲೆಯನ್ನು ತಂದುಕೊಡುವದು. ಅದಕ್ಕಾಗಿಯೆ ನಮ್ಮ ಪೂರ್ವಜರು ಲೌಕಿಕ ವಿದ್ಯೆಯೊಡನೆ ವೈದಿಕ ವಿದ್ಯೆಯನ್ನು ಕೊಡುವ ಸತ್‌ಸಂಪ್ರದಾಯ ಹಾಕಿದರು. ಇಂದು ಕೇವಲ ಲೌಕಿಕ ವಿದ್ಯೆಗೆ ಪುರಸ್ಕಾರ ದೊರೆತು ವೈದಿಕ ವಿದ್ಯೆ ಮಾಯವಾಗುತ್ತ ನಡೆದಿದೆ. ಇದರಿಂದ ನಮ್ಮ ಸಂಸ್ಕೃತಿ ಮರೆಮಾಚಿ ಸಮಾಜದಲ್ಲಿ ಅಶಾಂತಿ ಬೆಳೆಯುವದರ ಜೊತೆಗೆ ನಮ್ಮತನದ ಕಲ್ಪನೆ ಇಲ್ಲದಂತಾಗುತ್ತಲಿದೆ. ಈ ಕಾರಣವಾಗಿ ವೈದಿಕವಿದ್ಯೆ ಕಲಿಸುವದರೊಂದಿಗೆ ಜೋತಿಷ್ಯ, ಸಂಗೀತವಿದ್ಯೆ ಕೊಡುವದಕ್ಕಾಗಿ ಅನೇಕ ರೀತಿಯ ಸೌಲಭ್ಯಗಳು ಉಚಿತವಾಗಿ ಕೊಡಲ್ಪಡುವವು.

## ಗ್ರಂಥಾಲಯ

ಸಂಸ್ಕೃತ, ಇಂಗ್ಲೀಷ, ಹಿಂದಿ, ಕನ್ನಡ ಅನೇಕ ಭಾಷೆಗಳ ಗ್ರಂಥ ಭಾಂಡಾರ. ತಾಡೋಲೆ ಸಂಗ್ರಹ ರಾಸಿ. ಇವುಗಳ ಸಂಶೋಧನೆ ಈಗಾಗಲೆ ಕಾರ್ಯರೂಪದಲ್ಲಿ ಸಾಗಿದೆ. ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಧರ್ಮಪ್ರಚಾರಕ ಮಂಡಳವು ಭವ್ಯ ರೂಪರೇಷೆಗಳನ್ನು ನಿರ್ಮಿಸಿಕೊಂಡಿದೆ. ಅದರ ಫಲವಾಗಿ ಈಗಾಗಲೆ ೪೦ ಗ್ರಂಥಗಳಷ್ಟು ಪ್ರಕಟಗೊಂಡಿವೆ.

## ಪ್ರಸಾದನಿಲಯ

ಇನ್ನೂರಕ್ಕೂ ಮಿಕ್ಕ ಬಡವಿದ್ಯಾರ್ಥಿಗಳ ನಿತ್ಯ ಉದರಪೋಷಣೆ. ಸಕಲಧರ್ಮದವರಿಗೆ ಪ್ರವೇಶ ಮುಕ್ತದ್ವಾರ. ವಸತಿ ಹಾಗೂ ಪ್ರಸಾದದ ಅನುಕೂಲತೆಯೊಂದಿಗೆ ಆಧ್ಯಾತ್ಮದ ಸಂಸ್ಕಾರವನ್ನೂ; ಸತ್ಕ್ರಿಯಾ ಚಟುವಟಿಕೆಗಳನ್ನೂ; ಸೇವಾ ಮನೋಭಾವನೆಯನ್ನೂ ಪಡೆಯುವದೊಂದು ವಿದ್ಯಾರ್ಥಿಗಳ ಪುಣ್ಯ ವಿಶೇಷ. ತನು-ಮನಗಳೆರಡಕ್ಕೂ ಸಮಾಧಾನ; ಶಾಂತಿ ಸಮನ್ವಿತವೂ ಸುದೃಢವೂ ಆದ ಒಂದು ಅಚ್ಚುಕಟ್ಟು, ಅದರಿಂದ ಹೊರಬಂದರೆ ಸಚ್ಚಾರಿತ್ರ್ಯ ಪಡಿಯಚ್ಚಿನಿಂದ ಹೊರಬಂದ ರೂಪು.

ಒಟ್ಟಾರೆ ಇಂದು ಶ್ರೀ ಜಗದ್ಗುರು ಮೂರುಸಾವಿರಮಠವು ಚೇತನಾಸ್ತಿತ್ವದ ಕುರುಹು. ಸಂಸ್ಕೃತಿಯನ್ನು ಪುನರುತ್ಥಾನಗೊಳಿಸುವದರೊಂದಿಗೆ; ಧರ್ಮದೀಪ್ತ ದೇದಿಪ್ಯಮಾನಗೊಳಿಸುತ್ತ ವಿಶ್ವಶಾಂತಿಗೆ ಹೋರಾಡುವ ಚೈತನ್ಯಕ್ಷೇತ್ರವಾಗಿದೆ, ಪುಣ್ಯಧಾಮವಾಗಿದೆ. □

# ಸಮಗ್ರ ಜೀವನದ ನೆನಹು

ಸಂಗಮೇಶ ಹೊಸಮನಿ

ಒಂದು ನಿಟ್ಟಿನಲ್ಲಿ ಕಲೋಪಾಸಕರಾಗಿ ಕಾರ್ಯ ನಿರ್ವಹಿಸುವವರನ್ನು ಕಾಣಬಹುದು ! ಆದರೆ ವಿವಿಧ ಕಲೆಗಳಲ್ಲಿ ಪಳಗಿ ವ್ಯಾಪಕವಾಗಿ ಕಾರ್ಯರೂಪದಲ್ಲಿ ತಂದು ಬೆಳಗಿಸುವವರು ವಿರಳ ! ಮೂರು ಸಾವಿರ ಮಠದ ಜಗದ್ಗುರುಗಳು ಇದಕ್ಕೆ ಅಪವಾದವೆಂದೇ ಹೇಳಬೇಕು.

## ವ್ಯಕ್ತಿತ್ವದ ವಿವಿಧ ಮುಖಗಳು

ಬಾಲ್ಯದಲ್ಲಿ ಕವಿಗಳಾಗಿ ಬೆಳೆದರು. ಮುಂದೆ ಗದ್ಯ ಲೇಖಕರಾದರು. ಹೆಸರಾಂತ ಹೃದಯವಂತ ಭಾಷಣಕಾರರಾದರು. ನಂತರ ಸರ್ವಧರ್ಮ ಸಮನ್ವಯ ದೃಷ್ಟಿಯನ್ನಿಟ್ಟುಕೊಂಡು ಶಾಂತಿ ಸಮತೆಗೆ ಪೋಷಕವಾಗಿ, ದೇಶ, ಪರದೇಶಗಳಲ್ಲಿ ಸಂಚರಿಸಿ ಅಮೋಘ ಭಾಷಣಗಳನ್ನು ಮಾಡುತ್ತಲಿದ್ದಾರೆ. ಅಲ್ಲದೆ ತಮ್ಮ ಪೀಠದ ಯಶೋದುಂದುಭಿಯನ್ನೇ ಮೊಳಗಿಸಲು ಅನೇಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಮತ್ತು ಹುಕ್ಕೇರಿಯ ಆರೋಗ್ಯಧಾಮದಂಥ ಸಂಘವನ್ನು ಕಟ್ಟಿ, ಅವುಗಳ ಸಂಚಾಲಕರಾಗಿ ಅಹೋರಾತ್ರಿ ಚಿಂತನೆ ಗೈಯ್ಯುವ ಕರ್ತೃತ್ವಶಾಲಿಗಳಾಗಿದ್ದಾರೆ.

ವೀರಶೈವ ಧರ್ಮದ ಸಮಗ್ರತೆಗೆ ಅನುವಾಗುವಂತೆ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಧರ್ಮೋಪದೇಶಕರಾಗಿದ್ದಾರೆ. ! ನಾಡಿನ ಅನೇಕ ಸಾಂಸ್ಕೃತಿಕ ಚಟುವಟಿಕೆಗಳಿಗೆ ಮುಂದಾಗಿ, ಒಂದಾಗಿ ನಾಡಿನ ಪ್ರೇರಕ ಶಕ್ತಿಯಾಗಿದ್ದಾರೆ ! ಮೂರುಸಾವಿರ ಮಠದ ಪೀಠದ ಸಂಸ್ಥೆಯಿಂದ 'ಗ್ರಂಥಮಾಲೆ' ಪ್ರಾರಂಭಿಸಿ, ಪ್ರಾಚೀನ ಮತ್ತು ಈಗಿನ ಸಾಹಿತ್ಯ ಕೃಷಿಯ ಪ್ರಕಾಶನಕ್ಕೆ ಅನುವು ಮಾಡಿಕೊಟ್ಟಿದ್ದಾರೆ.

ಇಷ್ಟಲ್ಲದೆ ಶ್ರೀಗಳವರು ಸ್ವತಃ ಪತ್ರಿಕಾಕರ್ತರಾಗಿ ಪ್ರಪಂಚದಲ್ಲಿ ಸಾಗಿಬಂದ ಸಂಗತಿಯೂ ಮಹತ್ವಪೂರ್ಣವಾಗಿದ್ದು ಬಾಲ್ಯ ಜೀವನದ ಅವರ ಆಶೋತ್ತರಗಳೇನೆಂಬುವುದನ್ನು ಚಿತ್ರಿಸುವುದು, ಮತ್ತು ಪತ್ರಿಕಾ ಪ್ರಪಂಚದಲ್ಲಿ ಶ್ರೀಗಳವರ ಹೊಣೆಗಾರಿಕೆಯನ್ನು ನಿರುಕಿಸುವುದು, ಬಹುದಿನಗಳಿಂದ ಶ್ರೀಗಳವರ ಸಂಪರ್ಕದಲ್ಲಿರುವ ನನಗೆ ಸಂತೋಷವನ್ನೂ ಹೆಮ್ಮೆಯನ್ನೂ ನೀಡುತ್ತಲಿದೆ. !

## ಶ್ರೀ ಮಹಾಂತದೇವರು

ಈಗ ಸುಮಾರು ಇಪ್ಪತ್ತು ವರುಷಗಳ ಹಿಂದಿನ ಸಂಗತಿ, ಈಗಿನ ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಜಗದ್ಗುರುಗಳು ಆಗ 'ಇಲಕಲ್ಲ ಮಹಾಂತದೇವ' ರಾಗಿದ್ದರು. ಶಿವಯೋಗಮಂದಿರದ ಪುಣ್ಯ ನಿವಾಸದಲ್ಲಿ ತಮ್ಮ ಶೈಶವಾಸ್ಥೆಯನ್ನು ಕಳೆದ ಕುಮಾರನಿಗೆ ಮನೆ, ಮಠ, ಬಂಧು, ಬಳಗ ಎಲ್ಲವೂ ಮಂದಿರವೇ ಆಯಿತು. ತಮ್ಮ ಪೂರ್ವ ಬಾಲ್ಯದಲ್ಲಿಯೇ ಶಿವಯೋಗ ಮಂದಿರದಲ್ಲಿ 'ಸುಕುಮಾರ' ಪತ್ರಿಕೆಯ ಸಂಪಾದಕರಾಗಿ ಕಾಲಿಟ್ಟರೆನ್ನಬಹುದು. ಕವಿಗಳಾಗಿ ಸಾಹಿತಿಗಳೊಂದಿಗೆ ಹಾರ್ದಿಕವಾಗಿ ಸಾಗಿ, ತಮ್ಮ ಸಾಹಿತ್ಯ ಶಕ್ತಿಯನ್ನು"ಸುಕುಮಾರ" ಪತ್ರಿಕೆಯ ಮುಖಾಂತರ ಬೆಳೆಸಿಕೊಂಡು ಮಾಸಪತ್ರಿಕೆಯ ಪ್ರಕಾಶನಕ್ಕೆ ಒಳ್ಳೆಯ ಕವನಗಳನ್ನು ಲೇಖಗಳನ್ನು ಬರೆದು ಆ ಪತ್ರಿಕೆಯ ಪ್ರಗತಿ ಪರಂಪರೆಗೆ ಪೋಷಕರಾದದ್ದುಂಟು. ಅಂದಿನಿಂದಲೇ ಅವರ ಹಾರ್ದಿಕ ಸಂಪರ್ಕ ನನಗುಂಟು.

### ಸಾಹಿತ್ಯ ವ್ಯಾಸಂಗ

ಆಗಾಗ ಇಲಕಲ್ಲಿಗೆ ದಯಮಾಡಿಸಿದಾಗ ತಮ್ಮ ಕವಿತೆಗಳನ್ನು ಓದುವದು, ನನ್ನ ಕವಿತೆಗಳನ್ನು ಕೇಳುವದು ಮತ್ತು ಕಾವ್ಯಗಳ ಬಗೆಗೆ ವಿಚಾರಿಸುವದೂ ಉಂಟು! ಉತ್ತಮ ಸಾಹಿತ್ಯ, ಸಾಹಿತಿಗಳ ಸಂಪರ್ಕವನ್ನು ಬೆಳೆಸಿಕೊಂಡು ಅವರಿಂದ ಲೇಖನಗಳನ್ನು ತರಿಸಿಕೊಂಡು ಮಂದಿರ ( ಶಿವಯೋಗಮಂದಿರ ) ಪ್ರಕಟನೆಗೆ ಅನುವನ್ನಿತ್ತು ಬೆಳೆಸಿಕೊಂಡು ಸಾಗಿದರು. ಶ್ರೀಗಳವರ ಹಸಿವನ್ನರಿತ ಶ್ರೀ ವಿಜಯಮಹಂತೇಶನು ಇವರನ್ನು ಬನಾರಸಕ್ಕೆ ಹೆಚ್ಚಿನ ವ್ಯಾಸಂಗಕ್ಕೆ ಕಳಿಸಿದನೆನ್ನಬೇಕು. ಅಲ್ಲಿ ಇವರ ಅಭ್ಯಾಸದ ಜೊತೆಗೆ ಪತ್ರಿಕೆ, ಪತ್ರಿಕಾ ಕರ್ತರ ಸಂಪರ್ಕ ಬೆಳೆಸಿಕೊಂಡು ಅಲ್ಲಿಯ ಹೆಸರಾಂತ ಪತ್ರಿಕೆಗಳಲ್ಲಿ ತಮ್ಮ ಲೇಖನ, ಕವನಗಳನ್ನು ಪ್ರಕಟಿಸುತ್ತ ಸಾಗಿದರಲ್ಲದೆ, ಮೇಲ್ಮಟ್ಟದ ಪತ್ರಿಕೆಗಳನ್ನು ಕಟ್ಟುವ ಗೊತ್ತು ಗುರಿಗಳನ್ನು ಕಾಶಿಯ ವಿದ್ಯಾಪೀಠದಲ್ಲಿಯೇ ಅಭ್ಯಸಿಸಿದರೆನ್ನುವ ಸಂಗತಿ ಶ್ರೀಗಳವರು ಬನಾರಸದಿಂದ ನನಗೆ ಬರೆಯುವ ಕಾಗದಗಳಿಂದ ಕಂಡು ಬರುತ್ತಲೇ ಇತ್ತು. !

ಶ್ರೀಗಳವರ ಅಲ್ಲಿಯ ವ್ಯಾಸಂಗಪ್ರಿಯತೆ, ಸಾಹಿತ್ಯಶಕ್ತಿ ಮತ್ತು ಮಹೋನ್ನತ ಆಕಾಂಕ್ಷೆಗಳು ಗರಿಗೆದರಿ ಮುಂಬಾಳಿನಲ್ಲಿ ಬೆಳಗುವ ಸುಳುವು ಅವರ ಕಾಗದಗಳಿಂದ ನನಗೆ ವಿಧಿತವಾಗುತ್ತಲಿತ್ತು. ಪ್ರತಿಯೊಂದು ಕಾಗದದಲ್ಲಿ ಶ್ರೀಗಳವರು " ನಾನು ಉತ್ತಮ ಕವಿಯಾಗಬೇಕು, ಉನ್ನತ ಸಾಹಿತ್ಯ ದರ್ಶನದಲ್ಲಿ ಪತ್ರಿಕೆಯೊಂದನ್ನು ಸಾಗಿಸಿ ಅದರ ಮುಖಾಂತರ ನಾಡಿನ ಸೇವೆ ಕೈಕೊಳ್ಳಬೇಕು." ಎಂಬ ಬಯಕೆಗಳನ್ನು ಸ್ಫುಟವಾಗಿ ವ್ಯಕ್ತಮಾಡುತ್ತಲಿದ್ದರು.

ಬನಾರಸ ವಿದ್ಯಾಪೀಠದಿಂದ ಸಂಸ್ಕೃತದಲ್ಲಿ ಸಾಕಷ್ಟು ಪಳಗಿ, ಇಂಗ್ಲೀಷ ಹಿಂದಿ ಭಾಷೆಗಳನ್ನು ಆಸ್ಥೆಯಿಂದ ಅಭ್ಯಸಿಸಿ, ತಮ್ಮ ಕಾವ್ಯ ಮತ್ತು ಸಾಹಿತ್ಯಶಕ್ತಿಗೆ ಈ

ಮೂರು ಭಾಷೆಗಳ ಉಪಯೋಗವನ್ನು ಮಾಡಿಕೊಂಡು ಮಹೋನ್ನತ ಆದರ್ಶವನ್ನು ಹೃದಯ ಮಂದಿರದಲ್ಲಿ ಹುದುಗಿಸಿಕೊಂಡರು.—

ಈಗ ಹದಿಮೂರು ವರುಷಗಳ ಹಿಂದೆ ಇಲಕಲ್ಲಿಗೆ ಬಂದರು ! ಪೂರ್ವಯೋಜನೆಯಂತೆ ಶ್ರೀ ವಿಜಯಮಹಾಂತೇಶ್ವರನ ಪೀಠವು ಎದೆದೆರೆದು ಅಪ್ಪಿಕೊಳ್ಳಲು ಮುಂದಾಗಿತ್ತು !

ಚಳಿಗಾಲದ ಬಿಡುವಿನ ಒಂದು ದಿನ— ಶ್ರೀಗಳವರನ್ನು ಕಾಣಲು ಇಲಕಲ್ಲಿಗೆ ಹೋದೆ. ಮೃದುಹೃದಯದ ಶ್ರೀ ಮಹಾಂತದೇವರುಗಳು ತಮ್ಮ ಎಂದಿನ ಹಸುಗೂಸಿನ ಅಂತಃಕರುಣವನ್ನು ಬಿಚ್ಚಿಟ್ಟರು. ಊರಹೊರಗಿನ ಗೆದ್ದುಗೆಯ ಹಿಂದಿನ ಬಯಲಿನಲ್ಲಿ ಕುಳಿತೆವು. ಸುಂದರವಾಗಿ ಬೀಗಿ ಬೆಳೆದ ಬಾಳೆ ತೆಂಗಿನ ವನಗಳ ಮಧ್ಯದಲ್ಲಿ ಹುಲ್ಲಿನ ಹಸಿರುಹಾಸುಗೆಯ ಮೇಲೆ ಪವಡಿಸಿ ಮಾತುನಾಡಿದ ನೆನಪು ನನಗಿಂದಿಗೂ ಹೃದಯದಲ್ಲಿ ಅಚ್ಚೊತ್ತಿದಂತಿದೆ !

## ಆಂತರಿಕ ಬಯಕೆ

" ಸಂಗಮೇಶ ಕವಿಗಳೆ ! ಮಹಾಂತೇಶನು ನನ್ನನ್ನು ಬನಾರಸಕ್ಕೆ ಕಳಿಸಿ ವಿಶೇಷ ವ್ಯಾಸಂಗಕ್ಕೆ ಅನುವನ್ನಿತ್ತನು. ಇನ್ನು ಆರು ತಿಂಗಳು ಕಳೆದು ಈ ವೈರಾಗ್ಯನಿಧಿಯ ಚರಣಸೇವೆ ಮಾಡಲು ಬರುವೆ. ಬಂದೊಡನೆಯೇ ಕೈಕೊಳ್ಳಬೇಕಾದ ಕಾರ್ಯವೆಂದರೆ ಒಂದು ಸಾಂಸ್ಕೃತಿಕ–ಧಾರ್ಮಿಕ ಪತ್ರಿಕೆಯನ್ನು ಪ್ರಾರಂಭಿಸುವುದು. ಪ್ರೆಸ್ಸನ್ನು ಕೊಂಡು ಆ ಕಾರ್ಯಕ್ಕೆ ಅಣಿಯಾಗಬೇಕೆಂದಿದ್ದೇನೆ. ನಾವೆಲ್ಲರೂ ಕೂಡಿಕೊಂಡು ಶ್ರೀ ವಿಜಯ ಮಹಾಂತನ ಅನುಗ್ರಹದಂತೆ ಸೇವೆಮಾಡೋಣ." ಮೊದಲಾಗಿ ಮಾತನಾಡಿದರು. ಅವರ ಬಾಯ್ದೆರೆದು ನಿಂತ ಬಯಕೆಗಳನ್ನು, ಭಾವೀ ಜೀವನದ ಹೊಳವು ಸುಳುವುಗಳನ್ನು ಕಂಡು ಶ್ರೀಗಳ ಬಿಚ್ಚು ಹೃದಯ, ನಿರಾಳಮನಸ್ಸುಗಳನ್ನು ಅರಿತುಕೊಂಡಿದ್ದ ನಾನು ತಂಬಲಗಣ್ಣಿನಲ್ಲಿ " ತಾವು ಬನ್ನಿ ! ಮಹಾಂತೇಶನ ಕೃಪೆಯಲ್ಲಿ ಸಾಗೋಣ" ಎಂದಿದ್ದೆ !

## ದೈವೀಸಂಕಲ್ಪ

ಬೇಸಗೆಯ ಬಿಡುವಿಗೆ ದಯಮಾಡಿಸಿದರು. ಶ್ರೀ ವಿಜಯಮಹಾಂತೇಶನ ಪೀಠಕ್ಕೆ ಸಮಸ್ತಭಕ್ತಕೋಟಿಯು ತುಂಬುಹೃದಯದಿಂದ ಸ್ವಾಗತಿಸಿತು, ಮುಂದೇನು ? ಸಾಹಿತ್ಯೋಪಾಸಕರಾಗಿ ಪತ್ರಿಕೆಯನ್ನು ಪ್ರಾರಂಭಿಸುವ ಹಂಬಲ ಸ್ವಾಮಿಗಳದು.

ದೈವೀ ಸಂಕಲ್ಪವೇ ಬೇರೆ. ದಯಾಘನನ ಆದೇಶದಂತೆ ಹುಬ್ಬಳ್ಳಿಯ ಮೂರು ಸಾವಿರ ಮಠದ ಪೀಠವು ಕೈಮಾಡಿ ಕರೆಯಿತು ! ಕರು ಗೋವನ್ನು ಅಗಲಿ ಸಾಗುವಂತೆ, ಶ್ರೀ ವಿಜಯಮಹಾಂತೇಶನ ಪೀಠವನ್ನು ಹೊರಳಿನೋಡುತ್ತ, ಭಕ್ತಕೋಟಿಯ ಅಪ್ಪಣೆಯನ್ನು ಪಡೆದುಕೊಂಡು ಹುಬ್ಬಳ್ಳಿಯ ಜಗದ್ಗುರು ಪೀಠಕ್ಕೆ ದಯಮಾಡಿಸಿದರು !

ಈ ಮೊದಲಿಗೆ ಅವರ ತುಂಬು ಹೃದಯವನ್ನು ಸಾಹಿತ್ಯ ಪ್ರೇಮವನ್ನು ಅಮೋಘ ಕಳಕಳಿ–ನಿಷ್ಠೆಗಳುಳ್ಳ ಸ್ವಾಮಿತ್ವವನ್ನು ಕಂಡುಕೊಂಡಿದ್ದ ನಾನು,

" ಓ ಎನ್ನ ಗುರುದೇವ ಏನಾಗುವೆ ?
ಕನ್ನಡದ ನಾಡು, ನುಡಿ ಜೇನಾಗುವೆ !
ಮುಗಿಲುಮಲ್ಲಿಗೆಗಳ ಮಕರಂದವನ್ನುಣಲು
ಹಗಲಿರುಳು ಎಡೆಬಿಡದೆ ಸಂಚರಿಸುವೆ,
ಬಾಳ ಹಂದರ ಹಾರಿ, ಮಕರಂದವನೆ ಹೀರಿ
ಮಧುಕರನ ಸಿರಿ ಮನೆಯು ಸಿಂಗರಿಸುವೆ !
ಜೇಂ ಗೊಡದ ಜನ್ನಿಗೆಯು ಹಿರಿದುಂಬಿ !
ಮುಂದಾಗಿ–ಬಂದಾಗಿ, ನಲಿದುಲಿಯುವೆ,
ನಿನಗಿರದು ಬೇಸರ. ಕಾಯಕವೆ ಆಸರ,
ಸಂತೃಪ್ತಿ ಸಾಗರವ ಇಮ್ಮಡಿಸುವೆ ॥ "

ಮೊದಲಾಗಿ ಎದೆದುಂಬಿ ಹಾಡಿದ್ದುಂಟು ! ಶ್ರೀಗಳವರ ಮೃದುಹೃದಯ ಬಿಚ್ಚಿದೆ, ನಿಷ್ಕಾಮವಂತ ನಿಲುಮೆ, ನಿರಾಳಮನಸ್ಸು, ಸುವಿಶಾಲ, ಮಹೋನ್ನತ ಸಂಕಲ್ಪಗಳನ್ನು ಅನುಭವಿಸಿದವರು ಯಾರಾದರೂ ಹೇಳಲೇಬೇಕಾದುದು ! !

## ಮೂರುಸಾವಿರಮಠದ ಜಗದ್ಗುರುಗಳು

ಮುಂದೇನು ? ಹುಬ್ಬಳ್ಳಿಯ ಮೂರುಸಾವಿರ ಜಗದ್ಗುರು ಪೀಠಕ್ಕೆ ಅದಾವುದೋ ದಿವ್ಯಯೋಗವು, ಸದ್ಗುರುವಿನ ಸಂಕಲ್ಪವು, ನಾಡಿನ ಹೆಬ್ಬಯಕೆ ಯೊಂದಿಗೆ ಎತ್ತಿ ತಂದಿಳಿಸಿತು !

ಬಾಲಕ ಶ್ರೀ ಮಹಾಂತದೇವರು ಶ್ರೀ ಶ್ರೀ ವಿಜಯಮಹಾಂತರಾದರು ! ವರುಷ ತುಂಬುವದರೊಳಗೆ ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರರಾದರು ! ಬಹು ದೊಡ್ಡ ಪೀಠ, ಗುರುತರಹೊಣೆಗಾರಿಕೆ, ವಿವಿಧ ಕಾರ್ಯಕ್ಷೇತ್ರಗಳ ಜವಾಬುದಾರಿ, ಏಕಾಏಕಿ ಹೆಗಲೇರಿ ಬಂದವು. ತಿಳಿಗಂಗೆಯಲ್ಲಿ ಮೀನು ಈಸುವಂತೆ, ಸುಲಲಿತವಾಗಿ, ಹಾಯಾಗಿ ವಿವರಿಸತೊಡಗಿದರು ! ಕರ್ತೃಪೀಠದ 'ಹುಚ್ಚ'ನು ಸಕಲ ಕಷ್ಟಗಳಿಂದ ಎತ್ತಿತಂದನು !

ವರುಷಕ್ಕೆ ಒಂದೆರಡುಸಾರೆ ಹುಬ್ಬಳ್ಳಿಗೆ ಹೋಗಿ ಶ್ರೀಗಳವರ ದರ್ಶನ ಪಡೆಯುವ ವಾಡಿಕೆ ! ಹೋಗಿ ಹೊರಳಿ ಬಂದಾಗ ಮಠದ ನಿಲುವೇ ಬೇರೆಯಾಗಿರುತ್ತಿತ್ತು ! ಒಂದರ ಮುಂದೊಂದು ಶೈಕ್ಷಣಿಕ ಮಂದಿರಗಳ ಸಾಲು ಕಂಗೊಳಿಸುತ್ತಲಿದ್ದವು !

## 'ಸಿದ್ಧರಾಮ'ನ ಕಾಯಕ

ಹೋದಾಗೊಮ್ಮೆ ಶ್ರೀಗಳವರು ನೂರೆಂಟು ಕಾರ್ಯಗಳ ಗದ್ದಲದಲ್ಲಿದ್ದರೂ ಬದಿಗಿರಿಸಿ ಹೊಸ ಕಟ್ಟಡಗಳನ್ನು ತೋರಿಸುವದೆಂದರೆ ಅವರಿಗಾವ ಸಮಾಧಾನವೋ ! "ನಾಲ್ಕಾರು ವರುಷಗಳಲ್ಲಿ ಎಲ್ಲ ಕಟ್ಟಡಗಳನ್ನು ಮುಗಿಸುತ್ತೇನೆ. ಅಲ್ಲಿಯ ವರೆಗೆ

ಸಿದ್ಧರಾಮನ ಕೆಲಸ. ನಂತರ ಕವಿಯಾಗಿ ಪತ್ರಿಕಾ ವ್ಯವಸಾಯದಲ್ಲಿ ತೊಡಗಿ ಯೋಗಾನಂದದಲ್ಲಿ ಸಾಗುತ್ತೇನೆ " ಎಂದು ಹೇಳಿದ್ದೇ ಹೇಳಿದ್ದು. ಆಗ ಶ್ರೀಗಳವರಿಗೆ ಅದಾವ ಆನಂದವೋ ಹೇಳಲಾಗದು. ಬಹಳ ದಿನ ಕಳೆದಿರಲಿಲ್ಲ, ಮಠದ ಬಯಲೆಲ್ಲ ಮಂದಿರಗಳ ಸಾಲಾಗಿ ಕಂಗೊಳಿಸುತ್ತಲಿದೆ. ಲೀಲಾಜಾಲವಾಗಿ ಲಕ್ಷಲಕ್ಷಗಟ್ಟಲೆ ಖರ್ಚುಮಾಡಿ ಕಟ್ಟಿಸಿದ ವಿದ್ಯಾ ಸಂಸ್ಥೆಗಳನ್ನು ಹುಬ್ಬಳ್ಳಿಗೆ ಹೋದವರು ನೋಡಲೇಬೇಕು ! ಮಹಾದ್ವಾರ ಕೈಮಾಡಿ ಕರೆಯುತ್ತಿದೆ. ಕಾಲೇಜ, ಹೈಸ್ಕೂಲ, ಪ್ರಾಥಮಿಕ ಶಾಲೆ, ಪ್ರಸಾದ ನಿಲಯ, ವಸತಿಗ್ರಹ, ಪಾಚಕನಾಲಯ, ಪ್ರೆಸ್ಸು, ವಟುನಿವಾಸ, ಕಲ್ಯಾಣಮಂಟಪ... ಎಣಿಸಿಯೇ ಹೇಳಬೇಕು. ಸುಮಾರು ದಿನಕ್ಕೊಂದು ಸಾವಿರದಂತೆ ಖರ್ಚುಮಾಡಿ ಸುಮಾರು ಆರೇಳು ವರ್ಷ ಸಾಗಿದ ಈ ಭವ್ಯ ಸಾಧನೆ ಶ್ರೀಗಳವರ ಅಮೋಘ ಕರ್ತೃತ್ವ ಶಕ್ತಿಗೆ ಹೆಗ್ಗುರುತಾಗಿದೆ. 'ಮುಕ್ತಿ'ನ ಪರಮ ಕೃಪಾ ಫಲವಾಗಿದೆ.

## ಪರಂಜ್ಯೋತಿ ಪತ್ರಿಕೆ

ದಿನಗಳೆಯಲಿಲ್ಲ. 'ಪರಂಜ್ಯೋತಿ' ಪತ್ರಿಕೆಯನ್ನು ಪ್ರಾರಂಭಿಸಿಯೇ ಬಿಟ್ಟರು. ಅದರ ಸರ್ವತೋಮುಖ ಬೆಳವಣಿಗೆಗಾಗಿ ಚಿಂತನೆ ಶ್ರೀಗಳವರಿಗೆ, 'ಆಶೀರ್ವಚನ' ವೆಂಬ ಶೀರ್ಷಿಕೆಯಲ್ಲಿ ಪ್ರತಿ ತಿಂಗಳವೂ ಪ್ರಕಟಿಸುವದುಂಟು ಪರಂಜ್ಯೋತಿಯಲ್ಲಿ, ಹೊಸ ಪ್ರೆಸ್ಸಾಗಿದೆ, ಘನದೃಷ್ಟಿ, ದೊಡ್ಡ ಕಾರ್ಯ, ಬಹುದೊಡ್ಡ ವ್ಯಾಪಕ ಚಿಂತನೆ. ಸ್ವಾಮೀಜಿಯವರನ್ನು ಸದಾ ಸಾಗಿಸುತ್ತಲಿದೆ.

ಶ್ರೀ ಅರವಿಂದಾಶ್ರಮದ ಪೂಜ್ಯ 'ಮಾತಾಜಿ' ಯವರ ದರ್ಶನ ಪಡೆದು ಪೂರ್ಣ ಯೋಗದ ಪರಿಪಕ್ವ ಫಲವನ್ನು ಸವಿದರು. ದಿಲ್ಲಿಗೆ ಸರ್ವಧರ್ಮ ಸಮ್ಮೇಲನಕ್ಕೆ ಅತಿಥಿಗಳಾಗಿ ದಯಮಾಡಿಸಿ ವೀರಶೈವ ಧರ್ಮದ ತಿರುಳನ್ನು ಉಣಬಡಿಸಿದರು. ಹೊರದೇಶಗಳಾದ ಜಪಾನ, ಹಾಂಗಕಾಂಗ, ಸಿಂಗಾಪುರಗಳಿಗೆ ತೆರಳಿ ವಿಜಯದುಂದುಭಿಯನ್ನು ಮೊಳಗಿಸಿದ ಸಂಗತಿ ಮನೆ ಮಾತಾಗಿದೆ; ನೂರಾರು ಶೈಕ್ಷಣಿಕ, ಸಾಂಸ್ಕೃತಿಕ, ಸಮ್ಮೇಲನಗಳಿಗೆ ದಯಮಾಡಿಸಿ ಧರ್ಮ ಜಾಗೃತಿ ಮಾಡುತ್ತಲಿದ್ದಾರೆ.

'ಪರಂಜ್ಯೋತಿ' ಯು ಹೆಸರಿಗೆ ತಕ್ಕಂತೆ ಬೆಳಗಿ ಬೆಳಕನೀಡುವ ಭಾಗ್ಯ ಕೂಡಿ ಬಂದಿದೆ. ಸ್ವಾಮೀಜಿಯವರಿಗೆ ಇಷ್ಟರಿಂದ ತೃಪ್ತಿಯಿಲ್ಲ ! ಜಾಗತಿಕ ಶಾಂತಿ, ಸರ್ವಧರ್ಮ ಗುರುಗಳ ಸಂಪರ್ಕ, ಕಾವ್ಯ, ಸಾಹಿತ್ಯ, ಸಂಸ್ಕೃತಿ, ಧರ್ಮಗಳಲ್ಲಿ ಇವರಿಗೆ ಇಲ್ಲದ ಆಸಕ್ತಿ ಅತೃಪ್ತಿ ಸಾಕೆಂಬುವ ಸ್ವಭಾವ ಅವರಿಗೆ ಸೇರದ ಮಾತೇನೊ. ಬೇಕೆಂಬುವ ಅವರ ತುಂಬು ಬಯಕೆ ಅದಾವ ಘನತರ ಕಾರ್ಯಕೆ ಕೈಹಾಕಿಸುವದೋ ಎನಿಸುತ್ತದೆ.

ಸರ್ವ ಧರ್ಮಗಳ ಸಮನ್ವಯ ದೃಷ್ಟಿ, ವಿಶ್ವಶಾಂತಿಯ ದರ್ಶನ, ಹೊಸ ಬಾಳಿಗೆ ತಕ್ಕಂತೆ ಒಂದಾಗುವ ಜಾಣ್ಮೆ, ವೀರಶೈವ ಧರ್ಮ ಪರಂಪರೆಗಳನ್ನು ಎತ್ತಿ ಮುಂದಿನ ಹೊಸ ಬಾಳಿಗಾಗಿ ಹಂಬಲಿಸುತ್ತ ನವನವೀನ–ಸಮಗ್ರ ಜೀವನದ ನೆನೆಕೆಗಳನ್ನು ಮೆಲು

ಕಾಡಿಸುತ್ತ ಸಾಗಿರುವ ಶ್ರೀಗಳವರು ಅದಾವ ಮಹತ್ತರ ದರ್ಶನವನ್ನು ನಾಡಿಗೆ–ಜಗತ್ತಿಗೆ ನೀಡುತ್ತಾರೋ !

ಶ್ರೀ ಶ್ರೀ ಗುರುಸಿದ್ಧೇಶ್ವರನು ಶ್ರೀ ಶ್ರೀ ವಿಜಯಮಹಾಂತೇಶನು ಶ್ರೀ ಶ್ರೀ ಕಾರಣಿಕ ಕುಮಾರಯೋಗಿಯು ಕಣ್ಣಿಟ್ಟು ಕೈಹಿಡಿದು ಮುನ್ನಡೆಸುವ ಮಹಿಮೆ ಕಂಡು ಪರಮಾನಂದವಾಗಿ ಹೃದಯ ಉಕ್ಕಿ ಬರುತ್ತಿದೆ. □

# ಸಾಹಸಪೂರ್ಣ ಶಕ್ತಿ

ಬಸವರಾಜ ತೆಗ್ಗಿನವಂತ

ಶಿವಯೋಗಮಂದಿರದಲ್ಲಿ ಮರಿದೇವರಿಬ್ಬರು, ಮಲಪಹಾರಿ ನದಿಯ ಮೇಲು-ಮಠದ, ಕಲ್ಲುಬಂಡೆಯ ಮೇಲೆ ಕುಳಿತುಕೊಂಡು ಮಾತಿಗೆ ಆರಂಭಮಾಡಿದರು. ಒಬ್ಬರು ಸವದಿಯ ಮಹಾಂತದೇವರಾದರೆ, ಇನ್ನೊಬ್ಬರು ಚಿತ್ತರಗಿಯ ಮಹಾಂತದೇವರು, ಮಂದಿರದ ಮಹಾಮರಿದೇವರೊಬ್ಬರು, ಕಾಶಿಯಲ್ಲಿ ಪಂಡಿತರಾಗಿ ಬಂದುದರಿಂದ ಅಭೂತಪೂರ್ವದ ಸತ್ಕಾರಸಮಾರಂಭ ನಡಿದುಹೋದ ಹಿಂದಿನ ಸಂದರ್ಭವೇ ಇವರ ಮಾತಿಗೆ ಅನುವುಮಾಡಿಕೊಟ್ಟಿತ್ತು. ಆಗ ಚಿತ್ತರಗಿಯ ದೇವರು-

"ಸವದಿಯ ಮಹಾಂತದೇವರೇ, ನಾವು ಹುಟ್ಟಿ ಬಂದುದಕ್ಕೆ ಬೆಟ್ಟದಷ್ಟು ನಮ್ಮ ವ್ಯಕ್ತಿತ್ವ ಬೆಳೆಯಬೇಕು. ನಮ್ಮ ಬಯಕೆ ಒಳ್ಳೆ ಸಾಧನೆಯತ್ತ ತೊಡಗಿ, ಸಮಾಜಕ್ಕೆ ಮಾರ್ಗದರ್ಶನವಾದರೆ ನಮ್ಮ ಬಾಳಿಗೆ ಬೆಲೆಯಿದೆಯಲ್ಲವೆ ? "

"ಹೌದು."

"ನೋಡಿ, ಇಂದು ಮಂದಿರದಿಂದ ಆದ ಸನ್ಮಾದ ಆ ದೇವರಿಗೆ ಸಣ್ಣದೆ ? ಕಾಶಿಯಿಂದ ಆರೀತಿಯ ವ್ಯಕ್ತಿತ್ವ ರೂಪಿಸಿಕೊಂಡು ಬಂದುದಕಲ್ಲವೆ ? ನಮಗಾಗಿ ಮಠಗಳಿವೆ ಮಂದಿರಗಳಿವೆ, ಎಂಬುವ ಸಮಾಧಾನ ನಮಗೆ ಬೇಡ, ಸಾಹಸಪೂರ್ಣ ವ್ಯಕ್ತಿತ್ವ ನಮ್ಮದಾಗಲೇಬೇಕು. ಆ ನಿಟ್ಟಿನತ್ತ ನಾವು ಸಾಗಿದರೇನೇ ಸರಿಯಾದ ಸ್ವಾಮಿಗಳಾಗಿ ಬೆಳೆದುಬರಲು ಅನುವಾಗುವದು."

ಆಗ ಸವದಿಯ ದೇವರು-

"ನಾವೆಲ್ಲಾ ಸಮಾಜದ ಕೈಗೂಸುಗಳು, ಸಮಾಜ ನಮ್ಮನ್ನು ಸರಿಯಾಗಿಕಂಡು ಆ ಸಾಧನೆಯತ್ತ ಕಾರ್ಯ ಮಾಡಿದರೆ, ನಮ್ಮ ಜೀವನದಲ್ಲಿ ನಾವು ಬೆಳಕು ಕಾಣಬೇಕಲ್ಲ.?"

"ಹೌದು ನೀವು ಅನ್ನುವಲ್ಲಿ, ಸತ್ಯವಿದೆ ಆದರೆ ನಾನು ಮಾತ್ರ ಇಂದೇ ಚಿತ್ತರಗಿ, ಇಲಕಲ್ಲ, ಹುನಗುಂದಗಳಿಗೆ ಹೋಗಿ, ನಂತರ ಕಾಶಿಗೆಹೋಗಿ ಪಂಡಿತನಾಗಿಯೇ ಮಂದಿರ ಸೇರುತ್ತೇನೆ. ಇದು ಇಂದಿನ ನನ್ನ ಸತ್ಯಸಂಕಲ್ಪ. ನೋಡಿ ಆ ಗುರ್ತಿಗಾಗಿ ನಾನಿಲ್ಲಿ ಗೆರೆಯೆಳೆಯುತ್ತೇನೆ. ಮರಳಿ ಬಂದೇ ಇದನ್ನು ಅಳಿಸುತ್ತೇನೆ"

ಎಂದು ಸವದಿಯ ಮಹಾಂತದೇವರಿಗೆ ಅಂದಾಗ ಅವರು

" ಹಾಗೇ ; ಆಗಲಿ ಗುರು ಕುಮಾರೇಶನು ನಿಮಗೆ ಕರುಣಿಸಲಿ " ಎಂದು ಮಾತು ಮುಗಿಸಿ ಕೆಳಗಿನ ಮಠಕ್ಕೆ ಬಂದು ಪೂಜ್ಯ ಹಾನಗಲ್ಲ ಸದಾಶಿವ ಸ್ವಾಮಿಗಳವರ ಅಪ್ಪಣೆ ಪಡೆದುಕೊಂಡು ಚಿತ್ತರಗಿ ಪೀಠದ ಪರಮಭಕ್ತರಮುಂದೆ ತಮ್ಮ ಸಾಹಸಪೂರ್ಣ ವಿಚಾರ ಇಟ್ಟಾಗ ಇನ್ನೂ ಹದಿನೈದು ಹದನಾರು ವರ್ಷದ ಬಾಲಕರಾಗಿದ್ದ ಮಹಾಂತ ದೇವರ ವಿಚಾರಕೇಳಿ ಒಬ್ಬಿಬ್ಬರು

" ಮಂದಿರದಲ್ಲಿಯೇ ಇರಲಿ : ಇನ್ನೂ ಸಣ್ಣವರು. "

ಎಂದರು.

ಮತ್ತೆ ಕೆಲವರು

"ಇದು ಸಂಸ್ಥಾನ ಪೀಠ. ಪೀಠಕ್ಕೆ ತಕ್ಕ ಸ್ವಾಮಿಗಳಾಗಿ ಅವರು ಮೂಡಿ ಬರ ಬೇಕು.

ವಿದ್ಯಾಪಾರಂಗತರಾಗಿ ಕೂಡಿ ಬರಬೇಕು. ಅವರು ಕಾಶಿಗೆ ಹೋಗಲೇಬೇಕು" ಎಂದು ನುಡಿದವರೇ ಅಧಿಕ ಭಕ್ತ ಜನರು, ಎಲ್ಲರ ಅಪೇಕ್ಷೆ 'ಪೂಜ್ಯರು ಕಾಶಿಗೆ ಹೋಗಲಿ' ಅಂದಾಗ ಜಗದ್ಗುರುಗಳಿಗೆ ಹಿಡಿಸಲಾರದಷ್ಟು ಆನಂದ. ಕೊಪ್ಪದ ಮಹಾಂತಸ್ವಾಮಿಗಳೇ ಇವರಿಗೆ ಮಾರ್ಗದರ್ಶಕರು. ಯಜಮಾನರಾಗಿದ್ದ ನಾಗರಾಳ ದೊಡ್ಡಪ್ಪನವರು, ಕಂಠಿ ರುದ್ರಪ್ಪನವರು, ಹಾಗೂ ವೇ. ಗುರುಬಸವಾರ್ಯ ಮಠ ಮಾಸ್ತರರ ಒಲುಮೆಯಿಂದ ಕಾಶಿಯತ್ತ-ಅಡಿಯಿಟ್ಟು ಅಲ್ಲಿ ಹೋಗಿ ನಿಂತಾಗ, ಈ ಮರಿದೇವರನ್ನು ನೋಡಿ.

"ಅಯ್ಯೋ, ಇದು ಸಾಹಸಮಯ ಕೆಲಸ, ಪಂಡಿತರಾಗುವದು ಸಣ್ಣ ಮಾತಲ್ಲ" ಎಂದು ಅನೇಕರು- ಬಾಲಕರಾಗಿದ್ದ ಇವರನ್ನು ನೋಡಿ ನಿರಾಶಯುದ-ತೊಡರು-ಕಾಲ ಬಡೆದರು.

" ಬಂದ-ಮೇರೆಗೆ ಸಂಕಲ್ಪ ತೀರಿಸಿಕೊಂಡೇ ಮರಳಿ ಹೋಗುವದು, ಅಂಜ ಬಾರದು" ಎಂದು ಅಡಿಯಿಟ್ಟರು, ತಮ್ಮ ಸಾಹಸಪೂರ್ಣ ಪರಿಶ್ರಮದಿಂದ, ಆದರ್ಶ ವಿದ್ಯಾರ್ಥಿಯಾಗಿ ಮೃದು- ಮಧುರ- ಸ್ವಭಾವದಿಂದ. ಕಾಶಿಯಲ್ಲಿ ಪಂಡಿತರಾಗಿ. ಎಲ್ಲ ರಿಗೂ ಅಚ್ಚುಮೆಚ್ಚಿನವರಾದರಲ್ಲದೇ ಕರ್ನಾಟಕದ ಮರಿದೇವರಲ್ಲಿ- ಆದರ್ಶ ದೇವ ರಾದರು.· ಈ ಮಾತು ಶಿವಯೋಗ ಮಂದಿರದ ಒಡನಾಟವಿದ್ದ ಎಲ್ಲ ಪೂಜ್ಯ ಸ್ವಾಮಿ ಗಳವರಿಗೂ ಹೆಮ್ಮೆ ತರುವಂತಾಯಿತು. ಈ ರೀತಿಯಾಗಿ ತಮ್ಮ ವ್ಯಕ್ತಿತ್ವವನ್ನು ನಿರ್ಮಿಸಿಕೊಂಡು, ಇನ್ನು ವಿದ್ಯಾಭ್ಯಾಸದ ಅವಧಿ ಮುಗಿದು ಮಂದಿರಕ್ಕೆ ಮರಳಿ, ತಮ್ಮ ಚಿತ್ತರಗಿಯ ಪೀಠದ ಅಧಿಕಾರ ವಹಿಸಿಕೊಳ್ಳುವ ಕಾರ್ಯಚಟುವಟಿಕೆಯಲ್ಲಿ ತೊಡಗ ಬೇಕೆನ್ನುವಾಗಲೇ, ತಟ್ಟನೇ ತಂತಿಯೊಂದು ಕಾಶಿಯಲ್ಲಿದ್ದ ಇವರಿಗೆ ಹುಬ್ಬಳ್ಳಿಯ ಜಗದ್ಗುರು ಗುರುಸಿದ್ಧರಾಜಯೋಗೀಂದ್ರ ಮಹಾ ಸ್ವಾಮಿಗಳಿಂದ ಬಂದಾಗ, ಅವರ ಆದೇಶದಂತೆ ಹುಬ್ಬಳ್ಳಿಗೆ ಬಂದಿಳಿದಾಗ, ಜಗದ್ಗುರುಗಳವರು, ಶಿವನ ಚಿಂತನೆಯಲ್ಲಿ

ತೊಡಗಿದ್ದರು.ಈ ಜಗದ ಜಂಜಡದಿಂದ– ದೂರಸರಿದು ಲಿಂಗಮಧ್ಯ ಲೀನವಾಗುವ ಕಾಲ ಕೂಡಿ ಬರುವ ನೆನಕೆಯಲ್ಲಿಯೇ ಸರಳುತ್ತಿದ್ದರು. 'ಮಹಾಂತದೇವರು ಬಂದರು'ಅಂದಾಗ ಎದ್ದು ಕುಳಿತು, ತಮ್ಮ ಸಮೀಪ ಅವರನ್ನು ಕೂಡ್ರಿಸಿಕೊಂಡು ಕಣ್ತುಂಬಾ ನೋಡಿ,

" ಬಂದಿರಾ– ಮಹಾಂತದೇವರೆ ? '

" ಏನಪ್ಪಣೆ "

" ಮಹಾಂತದೇವರೆ, ನನಗೊಂದು ವಚನ ಕೊಡುವಿರಾ ? "

" ಹಿರಿಯರಿಗೆ– ನಾನು– ಪ್ರತಿ ನುಡಿಯಬಹುದೆ "

" ಹಾಗೇನಿಲ್ಲಾ"

" ಹಾಗಾದರೆ ತಮ್ಮ ಅಪ್ಪಣೆಯಾಗಬೇಕು "

"ನೀವು ನಮ್ಮ ಜಗದ್ಗುರು ಪೀಠದ ಉತ್ತರಾಧಿಕಾರಿಗಳಾಗಬೇಕು" ಎಂದು ಜಗದ್ಗುರುಗಳು ನುಡಿದಾಗ ಮಹಾಂತದೇವರು ತಬ್ಬಿಬ್ಬಾದರು. ಆಗ ಮತ್ತೆ ಜಗದ್ಗುರುಗಳು,

" ಏಕೆ, ಮಹಾಂತ ಮರಿದೇವರೆ ? "

" ಪೂಜ್ಯರೆ, ನಾನು ಚಿತ್ತರಗಿಯ ಪೀಠದ ಮರಿದೇವರು– ಭಕ್ತರು ಪ್ರೀತಿ ವಿಶ್ವಾಸದಿಂದ ತಮ್ಮ ಪ್ರಾಣಕ್ಕಿಂತಲೂ ಪ್ರಿಯವಾಗಿ ಕಂಡು, ಇಂದು ನಾಳೆ ಬರುವ ರೆಂದು–ಕಾಯುವಾಗ ನಾನವರಿಗೆ ಏನು ಹೇಳಬೇಕು. "

ಎಂದು ಕಣ್ಣಲ್ಲಿ– ನೀರೂರಿದಾಗ, ಜಗದ್ಗುರುಗಳು

"ಇಲ್ಲಿ, ನಿಮ್ಮ ಅಗತ್ಯವಿದೆ, ಇದೂ ವೀರಶೈವರಿಗೆಲ್ಲಾ– ಮಧ್ಯವರ್ತಿಯ ಜಗ ದ್ಗುರುಪೀಠ, ಈ ಸಂದರ್ಭದಲ್ಲಿ ಭಾರ ಹೊರಲೇಬೇಕು. "

ಅಂದಾಗ "ಭಕ್ತರ ಕಿವಿಯಮೇಲಿಟ್ಟು, ಅವರಿಗೂ ನಾನು ಸಮಾಧಾನ ಪಡಿಸ ಬೇಕಲ್ಲ." ಎಂದು ಹೇಳಿ ಚಿತ್ತರಗಿ ಇಲಕಲ್ಲಿಗೆ ಬಂದು, ಹುನಗುಂದದ ಮಠದಲ್ಲಿ ಸಮಸ್ತ ಸದ್ಭಕ್ತರನ್ನು ಕೂಡಿಸಿ ವಿಚಾರ ಇಟ್ಟಾಗ, ಕ್ರಿಯೆ ಪ್ರತಿಕ್ರಿಯೆಗಳ ದ್ವಂದ್ವದಲ್ಲಿ ಕೊನೆಗೆ ನಮ್ಮ ದೇವರೊಬ್ಬರು ಜಗದ್ಗುರು ಪೀಠ ಏರುತ್ತಾರೆಂದಾಗ, ಜನತೆ ಹೂಗುಟ್ಟಿತು. ಹಾಗೇ ಹುಬ್ಬಳ್ಳಿಗೆ ಬಂದು ಹುಬ್ಬಳ್ಳಿ ಮಠದಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು' ಎಂದು ೧೯೫೮ ರಲ್ಲಿ ಅಧಿಕಾರ ವಹಿಸಿಕೊಂಡು ಜಗದ್ಗುರು ಪಟ್ಟವೇರಿದರು. ಆದರೆ ತಮ್ಮ ಪ್ರೀತಿ ವಾತ್ಸಲ್ಯದ ಚಿತ್ತರಗಿಯ ಪೀಠದ ಅಭಿಮಾನ ವನ್ನು ತಮ್ಮ ಬಾಳಿನುದ್ದಕ್ಕೂ ಸಾಗಿಸಿಕೊಂಡು ಬಂದಿದ್ದಾರೆ.

ತಮ್ಮ ಸಾಹಸಪೂರ್ಣ ವ್ಯಕ್ತಿತ್ವದಿಂದ ಅವರು ಇಂದಿಗೆ ಹತ್ತು ವರ್ಷಗಳಾಚೆ ಅಂದರೆ ಜಗದ್ಗುರುಗಳಾದ ಕೇವಲ ಎರಡೇ ವರ್ಷದಲ್ಲಿ ' ವೀರಶೈವ ಧರ್ಮ ವಿಶ್ವ ಮಾನ್ಯ' ವಾಗಬೇಕು, ಇತರ ಧರ್ಮದಂತೆ ನಮ್ಮ ಧರ್ಮವೂ ಬೆಳಗಬೇಕು, ಆ ನಿಟ್ಟಿ ನತ್ತ ನಾನು ಕಾರ್ಯಮಾಡಬೇಕಾಗಿದೆ.' ಎನ್ನುವ ತಮ್ಮ ನಿರ್ಧಾರದ ನುಡಿಯನ್ನು ನುಡಿದ ಹತ್ತು ವರ್ಷದಲ್ಲಿ ಅದೆಂತಹ ಅದ್ಭುತ ಕ್ರಾಂತಿಮಾಡಿದರು ಎನ್ನುವ

ಮಾತನ್ನು ಜ್ಞಾಪಿಸಿಕೊಂಡಾಗ " ಅಬ್ಬಾ" ಎನ್ನುವ ಉದ್ಗಾರ ಬಾರದೇ ಇರದು.

ಸರಿಯಾದದ್ದು ಯಾವದೇ ಇರಲಿ, ಅದು ಯಾವದೇ ನಿಟ್ಟಿನಿಂದ ಬರಲಿ. ಅದನ್ನು ಆದರದಿಂದಲೇ ಕಾಣುವದು ಪೂಜ್ಯರ ಸ್ವಭಾವವಾಗಿದೆ. ಅದರಿಂದಲೇ ಅವರಿಂದು ವಿಶ್ವಮಾನ್ಯರ ಸಾಲಿನಲ್ಲಿ ನಿಂತಿದ್ದಾರೆ. ಪಾಂಡಿಚೇರಿಯ ಅರವಿಂದಾಶ್ರಮದ ತಾಯಿಯವರು, ಆಶ್ರಮಕ್ಕೆ ದಯಮಾಡಿಸಿದ ಇವರನ್ನು ತುಂಬು ಹೃದಯದಿಂದ ಸ್ವಾಗತಿಸಿ ಕುಲಕುಲನೇ ನಗುತ್ತ

"ವಿಶ್ವ ನಿಮ್ಮಿಂದ ಬೆಳಗಬೇಕಾಗಿದೆ." ಎಂದು ಅವರು ನುಡಿದ ನುಡಿ ಸುಳ್ಳಾಗಲಿಲ್ಲ. ತಮ್ಮ ಮೇಲ್ಮೆಯಿಂದ, ಅವರು ಸಂಪೂರ್ಣ ಆಂಗ್ಲ ಅಭ್ಯಾಸವನ್ನು ಅರಗಿಸಿಕೊಂಡು, ಅದರಲ್ಲಿ ಪಾರಂಗತರಾಗಿ, ದಿಲ್ಲಿಯಲ್ಲಿ ಕೂಡಿದ ವಿಶ್ವಧರ್ಮ ಪರಿಷತ್ತಿನಲ್ಲಿ ವೀರಶೈವ ಧರ್ಮದ ಬಗ್ಗೆ ಪ್ರತಿಪಾದನೆ ಮಾಡಿದ್ದೇ, ಮುಂದೆ ಇವರನ್ನು ಜಪಾನಿನಲ್ಲಿ ಕೂಡಿದ ವಿಶ್ವಧರ್ಮಕ್ಕೆ ಆಮಂತ್ರಣ ಬರುವಂತೆ ಮಾಡಿತು.

ಅಲ್ಲಿಗೆ ಹೋಗಿ–ಅಲ್ಲಿ ಬಂದ ಅಸಂಖ್ಯಾತ ಧರ್ಮಗುರುಗಳ ಮಧ್ಯ ವೀರಶೈವ ಧರ್ಮದ ಬಗ್ಗೆ ಪ್ರತಿಪಾದನೆಯನ್ನು ಮಾಡಲು ಬಂದ ಈ ಬೈರಾಗಿಯ–ಕಾವಿ–ವೇಷ ಭೂಷಣ, ಹಣೆಯಲ್ಲಿಯ ಭಸ್ಮ–ಕೊರಳಲ್ಲಿಯ ರುದ್ರಾಕ್ಷಿಯನ್ನು ನೋಡಿ, ಅದರ ಮಹತ್ವವನ್ನು ಅರಿತುಕೊಳ್ಳಲು ಅವರು ಕುತೂಹಲ ಉಳ್ಳವರಾದಾಗ, ಅದರ ಬಗ್ಗೆ ಸರಿಯಾದ ತಿಳವಳಿಕೆಯನ್ನು ತೋರ್ಪಡಿಸಿದ, ಮೇಧಾವಿಗಳಿವರು. ಈ ರೀತಿಯಾಗಿ ಧರ್ಮದ ಮಹತ್ವ ಹೇಳಿದ ಈ ಪೂಜ್ಯರಿಗೆ ಕ್ವಿಟೋ ರಾಜಧಾನಿಯಲ್ಲಿ ಬಹಿರಂಗ ಅಧಿವೇಶನದಲ್ಲಿ-ಭಾಷಣಮಾಡಲು ಅನುವುಮಾಡಿಕೊಟ್ಟರು. ಅಲ್ಲಿ 'ವೀರಶೈವಧರ್ಮ ವಿಶ್ವಮಾನ್ಯವಾದದ್ದು'ಎಂದು ಪಂಡಿತರಾದವರಿಗೆ ಮನದಟ್ಟುಮಾಡಿಬಂದದ್ದು ಸಣ್ಣಮಾತಲ್ಲ.

ಬಂದ ನಂತರ ಭಾರತವೇ ಇವರನ್ನು ಕಣ್ಣುಬಿಟ್ಟು ನೋಡುವಂತಾಯಿತು. ಅವರು ಮಾಡಿದ ಈ ಸಾಹಸಪೂರ್ಣ ಕಾರ್ಯಕ್ಕೆ–ಸ್ವಾಗತ ಮಾಡಿ ಸನ್ಮಾನಿಸಿದ-ಸಮಾರಂಭಗಳೂ, ಅಭೂತಪೂರ್ವವಾದವುಗಳಾದವು. ತಾವು ಯಾವದೇ ಕೆಲಸವನ್ನು ಕೈಗೆತ್ತಿಕೊಳ್ಳಲಿ ಅದನ್ನು ಕಾಳಜಿಯಿಂದ ಕಾರ್ಯ ರೂಪಕ್ಕೆ ಇಳಿಸುತ್ತಾರೆ. ಅಂದು ಅಂದರೆ ಹನ್ನೆರಡು ವರ್ಷಗಳಾಚೆ, ಹಳೆ ಸಂಪ್ರದಾಯದಮಠ ಇಂದು ನವೀನರೀತಿಯ ಮೇಲು ಪ್ಪರಿಗೆಯ–ಸುಂದರ ಇಮಾರತೆಗಳು-ಸುತ್ತಲೂ ತಲೆಯೆತ್ತಿ ನಿಂತಿದ್ದು, ಅವರ ಕಾರ್ಯಕುಶಲತೆಯ ದ್ಯೋತಕವಾಗಿದೆ. ಒಂದಲ್ಲ–ಎರಡಲ್ಲ–ಹತ್ತಾರುಲಕ್ಷ ರೂಪಾಯಿಗಳ ವೆಚ್ಚದ ಇಮಾರತೆಗಳನ್ನು ಕಂಡಾಗ ಯಾರಿಗೆ ಆನಂದವಾಗಲಿಕ್ಕಿಲ್ಲ ?

ಮುಗಿಲೆತ್ತರದ ಮಹಾದ್ವಾರ ಹುಬ್ಬಳ್ಳಿಯ ನಗರಕ್ಕೇನೇ ರತ್ನಪ್ರಾಯವಾಗಿ ಕಾಣುವ ಆ ಅನುಪಮ ಸುಂದರ ದೃಶ್ಯ ಅವರ ಶಕ್ತಿಯ–ಸಂಕೇತವಾಗಿದೆ. ಅವರು ಸ್ವತಃ ಕವಿಗಳೂ ಸಾಹಿತಿಗಳು ಇರುವರಲ್ಲದೇ-ನುರಿತ ಪತ್ರಿಕೋದ್ಯಮಿಯಾಗಿದ್ದಾರೆ.ಅವರ ಸಾಹಸಮಯ ಪ್ರೌಢಿಮೆಯಿಂದ,ಅಧ್ಯಾತ್ಮಿಕ 'ಪರಂಜ್ಯೋತಿ'ಮಾಸಪತ್ರಿಕೆ ನಾಡಿಗೇನೆ ಮಾರ್ಗದರ್ಶಕವಾಗಿದೆ. ಅವರು ಪರಧರ್ಮ ಸಹಿಷ್ಣುಗಳೂ ಆಗಿದ್ದಾರೆ. ಅನೇಕ ಪರಗುರು ಚರ-

ಮೂರ್ತಿಗಳಿಗೆ ಅವರು ಸ್ವಾಗತ ಬಯಸುತ್ತಾರೆ, ಅಲ್ಲದೆ ನಾಡಿನಲ್ಲಿ ಹೆಸರುವಾಸಿ ಹಾಗೂ ಪಂಡಿತರಾಗಿದ್ದ. ಪೂಜ್ಯ ವಿಶ್ವೇಶತೀರ್ಥ ಶ್ರೀಪಾದಂಗಳವರು ಮೂರುಸಾವಿರಮಠಕ್ಕೆ ಬಂದು ಜಗದ್ಗುರುಗಳೊಂದಿಗೆ-ವಿಶ್ವ ಚಿಂತನ ಮಾಡಿದ್ದು, ಅವರು ಇತರರನ್ನು ಕಾಣುವ ಹಿರಿಯ ಗುಣ-ಎದ್ದು ಕಾಣುವದು. ಇವರು ಭಾರತದ, ಆಧ್ಯಾತ್ಮ ಶಕ್ತಿಯ ಮಧ್ಯ ಬಿಂದುವಿನಂತೆ ಕಾರ್ಯ ಎಸಗುತ್ತಲೇ ಇದ್ದಾರೆ.

ತಾವಾಗ ಬೇಕಿದ್ದ ಚಿತ್ತರಗಿ ಪೀಠದ-ತೆರವಾದ ಸ್ಥಳಕ್ಕೆ ಜಮಖಂಡಿಯಿಂದ ಬಂದಿದ್ದ ಚಂದ್ರಶೇಖರದೇವರನ್ನು-ಪೀಠಕ್ಕೆ ಗುರುಮಹಾಂತಸ್ವಾಮಿಗಳೆಂದು ಮಾಡಿದ್ದರು. ಆದರೆ ಅವರು ಬಹುಕಾಲ ಬಾಳದೇ -ಲಿಂಗಮಧ್ಯ ಲೀನವಾದಾಗ, ಅವರ ನಂತರ ಅಂದು ಶಿವಯೋಗಮಂದಿರದಲ್ಲಿ ಇವರೊಂದಿಗೆ ದೇವರಾಗಿದ್ದ ಸವದಿಯ ಶ್ರೀಗಳವರನ್ನು ಚಿತ್ತರಗಿಯ ಚರವರೇಣ್ಯ ಪೀಠದ-ಮಹಾಂತ ಸ್ವಾಮಿಗಳನ್ನಾಗಿ ಮಾಡಿದರು. ಅಂದು ಮಂದಿರದ ದೇವರಾಗಿದ್ದ ಪೂಜ್ಯ ಶ್ರೀಗಳಿಬ್ಬರೂ—ನಾಡಿಗೆ ಆಶಾಜ್ಯೋತಿಗಳಾಗಿದ್ದಾರೆ.

ಜಗದ್ಗುರುಗಳು ತಮ್ಮ ಹಸನಾದ ಬಾಳಿನಲ್ಲಿ ಹುಸಿಹೋಗದ ಬೆಳೆಯನ್ನೆ ಬೆಳೆದಿದ್ದಾರೆ. ಒಂದೆಡೆ ಧರ್ಮ ಜಾಗೃತಿ ಮಾಡಿ ಸಾಹಿತ್ಯ ಶಕ್ತಿಯನ್ನು ಸ್ಫುಟಗೊಳಿಸಿದರೆ, ಇನ್ನೊಂದೆಡೆಯಲ್ಲಿ ಈ ಧರ್ಮವನ್ನು ವಿಶ್ವದ ತುಂಬೆಲ್ಲಾ ಹರಡಲು ಹದವರಿತಕಾರ್ಯವನ್ನು ಮಾಡಿದರು, ಮಗದೊಂದು ರೀತಿಯಲ್ಲಿ ಮಠದ ಸರ್ವಾಂಗೀಣ ಉನ್ನತಿಯನ್ನು ಚಾಚೂ ತಪ್ಪದೇ ಮಾಡಿದರು.

ಅವರು ಹಮ್ಮಿಕೊಂಡಿರುವ ಕಾರ್ಯಗಳಲ್ಲಿ ವೀರಶೈವಧರ್ಮದ ಆದರಲ್ಲಿ ವಚನ ಸಾಹಿತ್ಯದ ಬಹುಭಾಗಗಳನ್ನು ಪರದೇಶದಲ್ಲಿ ಪ್ರತಿಪಾದಿಸುವ ಕೇಂದ್ರಗಳನ್ನು ತೆರೆದು ಅದರ ಮುಖಾಂತರವಾಗಿ ನಮ್ಮ ಧರ್ಮಪ್ರಚಾರ ಮಾಡಬೇಕೆನ್ನುವ ಸಂಕಲ್ಪ ಅವರದಾಗಿದೆ. ಇಂದು ಅವರ ಈ ಹನ್ನೆರಡು ವರ್ಷದ ಪಟ್ಟಾಭಿಷೇಕ ಮಹೋತ್ಸವದ ಉತ್ಸವ ಆನಂದಮಯವಾಗಿ ನಡೆಯುವಾಗ ಅವರ ಹನ್ನೆರಡು ವರ್ಷದ ಪ್ರಗತಿಯ ಸ್ಪಷ್ಟ ಚಿತ್ರವೇ ಇಷ್ಟಿರುವಾಗ, ಮುಂದಿನ ಅವರ ಜೀವನದ ಬಹು ಬೆಲೆಯುಳ್ಳ ಬಾಳಿನಲ್ಲಿ ನಾವು ಕಂಡುಕೊಳ್ಳುವ ಅವರ ಶಕ್ತಿ ಅಗಮ್ಯವಾಗಿದೆ. ಅಂದಾಗ ಅವರಿಂದು ಸಮಾಜದ ನಾಡಿನ ಶಕ್ತಿಯಾಗಿರದೇ ವೀರಶೈವ ತತ್ವಗಳನ್ನು ಅಳವಡಿಸಿಕೊಂಡು ಜಗತ್ತಿನಲ್ಲಿಯೇ ಎತ್ತಿ ಮೆರೆಯಿಸುವ ಮಹಾ ಮೇಧಾವಿಗಳಾಗಿ ಜಗತ್ತಿಗೇನೇ ಪೂಜ್ಯರಾಗಿ ಮೆರೆಯುವ ಕಾಲ ಬಹುದೂರವಿಲ್ಲವೆಂದಾಗ, ಹಾನಗಲ್ಲ ಕುಮಾರ ಶ್ರೀಗಳವರ ಕೃಪಾನುಗೃಹದಿಂದ ಉದಯಿಸಿ ಬಂದ ಇವರಿಗೆ ಯಾವದರಿಂದಲೂ ಕೊರತೆಯಿಲ್ಲ. ಶ್ರೀ ವಿಜಯಮಹಾಂತೇಶ, ಕರ್ತೃ ಹುಚ್ಚೇಶ, ಅವರನ್ನು ಸದಾ ಆಯುರಾರೋಗ್ಯದಿಂದ ಕಾಪಾಡಿಕೊಂಡು, ವೀರಶೈವ ಸಮಾಜವನ್ನು ವಿಶ್ವಮಾನ್ಯವಾಗುವಂತೆ ಮಾಡಲೆಂದು ಹಾರೈಸುತ್ತೇನೆ. □

# ವಿಶ್ವಹಿತದೃಷ್ಟಿ : ಗಂಗಾಧರ ಸೃಷ್ಟಿ

ಪಂ. ಕಲ್ಲೂರ ಸಂಗಣ್ಣ ಗುಡೂರು

'ಕ್ರಿಯಾ ಸಿದ್ಧಿಸ್ಸತ್ತ್ವೇಭವತಿ ಮಹತಾನ್ನೋಪಕರಣೇ'
'ಸರ್ವೋಮಹತಾಂ ಮಹತ್'
ಸುಭಾಷಿತ

**ಬೆಳಗಿನೊಳಗೆ ಬೆಳೆದ ಬೆಳಕು :** ಹುಬ್ಬಳ್ಳಿ ಮೂರುಸಾವಿರ ಮಠದ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರಿಗೆ ಪಟ್ಟವಾಗಿ ಪಟ್ಟದ ಮೇಲೊಂದುವರೆ ವರುಷ ಮಿಕ್ಕಿದೆ. ಅವರ ಪೀಠಾರೋಹಣದ ದ್ವಾದಶ ವಾರ್ಷಿಕ ಮಹೋತ್ಸವ ಸ್ಮಾರಕ ಸಂಪುಟ : ಚಿತ್ಪ್ರಭೆಗೆ ಲೇಖನವೊಂದನ್ನು ಅಣಿಗೊಳಿಸಿಕೊಡುವ ಭಾರ ಹೊರಿಸಲಾಗಿದೆ. ಅಭಿಮಾನವಿರಿಸಲಾಗಿದೆ. ಸಂಪಾದಕರ ನುಡಿಗೆ ಪ್ರತಿಯುಂಟೆ ? ಮಹಾಸನ್ನಿಧಿಯವರ 'ಜ್ಞಾನಯೋಗ' ವನ್ನು ಪ್ರತಿಪಾದಿಸುವುದು ಶ್ರೀ ಜ. ಚ. ನಿ. ಅವರ ಪಾಲಿಗೆ ಬಂದಿದೆ ; ಅವರ 'ಕರ್ಮಯೋಗ' ವನ್ನು ನಿರೂಪಿಸುವುದು ನನ್ನ ಪಾಲಿಗೆ ಬಂದಿದೆ. ಪಾಲಿಗೆ ಬಂದುದು ಪಂಚಾಮೃತ. ಸ್ವಾರ್ಥತ್ಯಾಗ, ಕಾಯಕಭೋಗ-ಗಳ ಮೇಲೆ ನಿಂತ ಕರ್ಮಯೋಗವನ್ನು ನಾನು 'ಕ್ರಿಯಾ ಸಿದ್ಧಿಯೋಗ' ವೆಂದು ಕರೆಯುತ್ತೇನೆ. ವೀರಶೈವ ದರ್ಶನದಲ್ಲಿ ಜ್ಞಾನ – ಕ್ರಿಯಾ ಸಮನ್ವಯ ತತ್ವದ ಮೇರೆಗೆ, ಜ್ಞಾನ – ಕ್ರಿಯೆಗಳೆರಡೂ ಒಂದಕ್ಕೊಂದು ಅಗಲದಂತೆ ಕೂಡಿಕೊಂಡು ಹೋಗುತ್ತವೆಯಷ್ಟೆ ? ಆತ್ಮೋನ್ನತಿಗೆ ಅವೆರಡು ಅತ್ಯವಶ್ಯ ; ಲೋಕೋನ್ನತಿಗೂ ಅವು ಅತ್ಯಗತ್ಯ. ಘನ ಸನ್ನಿಧಿಯವರು ತಮ್ಮ ಆತ್ಮೋನ್ನತಿಯೊಂದಿಗೆ ಲೋಕೋನ್ನತಿಯನ್ನು ಹೇಗೆ ಸಾಧಿಸುತ್ತಿದ್ದಾರೆಂಬುದರ ಸ್ಥೂಲ ಪರಿಚಯ ಮಾಡಿಕೊಡುವುದೇ ನನ್ನೀ ಬರೆಹದ ಮುಖ್ಯೋದ್ದೇಶ. ಅಗಾಧ ಕರ್ತೃತ್ವಶಕ್ತಿ ಸಂಪನ್ನರಾದ ಅಲೌಕಿಕ ಪುರುಷರು ಪರಬ್ರಹ್ಮ ಸೃಷ್ಟಿಯೊಳಗೆ ತಮ್ಮದೇ ಆದ ಸೃಷ್ಟಿಯೊಂದನ್ನು ರೂಪಿಸಬಲ್ಲರು. 'ಮಂದಿರ' ದ ಕುಮಾರ ಸೃಷ್ಟಿ, ಮುರ್ಗದ ಜಯದೇವ ಸೃಷ್ಟಿ, ಧಾರವಾಡದ ಮೃತ್ಯುಂಜಯ ಸೃಷ್ಟಿ ಮೊದಲಾದುವು ನಿರ್ಮಾಣಗೊಂಡು, ನಿತ್ಯನೂತನವಾಗಿ ನಿರ್ಮಲ ಕೀರ್ತಿಯ ನಿನಾದಗೈಯುತ್ತಿರುವುದಿಲ್ಲವೆ ?

ಅದರಂತೆ, ಹುಬ್ಬಳ್ಳಿ 'ಗಂಗಾಧರ ಸೃಷ್ಟಿ' ಹುಟ್ಟಿಬಂದ ಹುಲುಸಾಗಿ ಹುದಿದಿದೆ. ಮಹಾಪಾದರ ವಿಶ್ವ ಹಿತದೃಷ್ಟಿಯು ಮುಖಾಂತರ ಗಂಗಾಧರ ಸೃಷ್ಟಿ ಪುಷ್ಟಿಗೊಂಡಿರುವ ತೃಷ್ಟಿಗೊಂಡಿರುವ ಬಗೆಯನ್ನು ವಿವರಿಸಿ, ಪೂಜ್ಯಪಾದರ ಕರ್ತೃತ್ವದೀಪ್ತಿಯ ಬೆಳಗಿನೊಳಗೆ ಅವರ ವ್ಯಕ್ತಿತ್ವವ್ಯಾಪ್ತಿಯ ಬೆಳಗನ್ನು — ಹುಚ್ಚ 'ಗುರುಸಿದ್ಧ'ನ ಬೆಳಗಿನೊಳಗೆ ಅಚ್ಚ 'ಗಂಗಾಧರ'ನ ನಿಚ್ಚ ಬೆಳಕನ್ನು ಕಾಣಲಿಚ್ಛಿಸುತ್ತೇನೆ.

**ಸಸಿವಾಳಕಂದ ಸಂಕಲ್ಪದ ಅಂದ :** ಮೈಸೂರು ಸಂಸ್ಥಾನ, ಹಾಸನ ಜಿಲ್ಲೆ ಅರಸಿಕೆರೆ ತಾಲೂಕು, ಕಣಕಟ್ಟೆ ಹೋಬಳಿ, ದೊಡ್ಡ ಮೇಟಿಕುರಿಕೆಯ ಬಳಿ 'ಸಸಿವಾಳ'. ಅಲ್ಲಿ ಕೊಳಗಲ್ಲು ಮಠದ ಮರುಳ ಸಿದ್ದಯ್ಯ, ಚನ್ನಮ್ಮ ದಂಪತಿಗಳು. ಹಿಂದಿನ ಹಾನಗಲ್ಲಪ್ಪಂಗಳವರ ಹರಕೆಯಂತೆ, ಅಕ್ಷಯ ಸಂವತ್ಸರ ಶಾ. ಶ. ೧೮೪೮ ಮಾಘ ಶು. ೧೦ ಶುಕ್ರವಾರ ಕ್ರಿ. ಶ. ೧೯೨೭, ಫೆಬ್ರುವರಿ ೧೧ ರಂದು ರಾತ್ರಿ ೭-೪೫ ಗಂಟೆಗೆ ಮೃಗಶಿರಾ ನಕ್ಷತ್ರವಿದ್ದಾಗ, ಅವರಿಗೆ ಮತ್ತೊಂದು ಗಂಡುಮಗು ಹುಟ್ಟಿತು. **ಮಹಂತಯ್ಯ** ಎಂದು ಹೆಸರಿಟ್ಟರು. ಸಂಸಾರದಿಂದ ಸದ್ಗತಿಕಂಡ ಬಸಲಿಂಗಯ್ಯನವರು ಇದೇ ಮನೆತನದಲ್ಲಿ ಜನಿಸಿದವರು, ಮರುಳಸಿದ್ಧಯ್ಯನ ಅಜ್ಜಂದಿರು. ಶಿವಾನುಭವ ಸಿದ್ಧಿಯಿಂದ ಶಿವಯೋಗ ಸುಖಉಂಡ ಚಿತ್ತರಗಿ ನಿರಂಜನ ಪೀಠಾಧ್ಯಕ್ಷ ವಿಜಯ ಮಹಾಂತ ಮಹಾಸ್ವಾಮಿಗಳವರೂ ಇದೇ ಪ್ರಭಾವೀ-ಪ್ರಾಸಾದಿಕವಂಶದಲ್ಲಿ ಅವತರಿಸಿದವರು, ಬಸವಲಿಂಗಯ್ಯನವರಿಗೆ ತಮ್ಮಂದಿರು. ಮಹಾಸನ್ನಿಧಿಯವರ ಗುರುವಿನ ಗುರು ಲಿಂ. ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಸಹ ಈ ಮನೆತನಕ್ಕೆ ಶರೀರ ಸಂಬಂಧವಿದ್ದ ಅಂಬಳೆ ( ಚಿಕ್ಕಮಗಳೂರು ಜಿಲ್ಲೆ ) ದೊಡ್ಡ ಮಠದಲ್ಲಿ ಹುಟ್ಟಿ ಬೆಳೆದವರು. ಆ ರಕ್ತ ಸಂಬಂಧದಿಂದಲೆ ಹಿಂದಿನ ಗಂಗಾಧರರು ಪುನರ್ಜನ್ಮವೆತ್ತಿ, ಇಂದಿನ ಗಂಗಾಧರರ ರೂಪವಾಗಿ– ನಾಡಿನ ನಂದಾದೀಪವಾಗಿ ಕಂಗೊಳಿಸುತ್ತಿರಬೇಕೇನೊ, ಕಂದ ಮಹಂತಯ್ಯನ ಕಣ್ಣು ಬೇನೆಯ ಘಟನೆಯಿಂದಾಗಿ ಅವನ ತಾಯಿ – ತಂದೆ ಎಚ್ಚರಾದರು : ಕರ್ಮ 'ಸಂಕಲ್ಪ' ವನ್ನು ನೆನೆದು ಹುಚ್ಚರಾದರು, ಅವರು 'ಒಡೆಯನ ಸೊಮ್ಮು ಒಡೆಯನಿಗೇ ಒಪ್ಪಿಸಬೇಕು' ಎಂದರು ; ಮಗು – ಮಹಂತಯ್ಯನನ್ನು ಶಿವಯೋಗ ಮಂದಿರಕ್ಕೆ ತಂದರು.

**'ಮಂದಿರ'ದ ವಾಸ ಮಹೋನ್ನತ ಧ್ಯಾಸ :** ಹಿಂದಿನ ಹಾನಗಲ್ಲು ಕುಮಾರ ಶಿವಯೋಗಿಗಳು ಲಿಂಗೈಕ್ಯರಾಗಿ ಆಗಲೆ ಎರಡು ವರ್ಷವಾಗಿದ್ದುವು. ಕುಮಾರ ಮಹಂತಯ್ಯನಿಗೆ ಆಗತಾನೆ ನಾಲ್ಕು ವರುಷ ತುಂಬಿದ್ದುವು. ಮಹಾಶಿವರಾತ್ರಿ, 'ಮಂದಿರ'ದ ಜಾತ್ರೆ. ಶಿವಯೋಗಿ ಕುಮಾರೇಶನ ಸಮಾಧಿಯ ಹತ್ತಿರ, ಹಾವೇರಿ ಶಿವಯೋಗಿಗಳವರ ಉಡಿಯಲ್ಲಿ ಹಸುಳನನ್ನು ಹಾಕಿದ್ದಾಯಿತು. ಕುಮಾರೇಶಗೆ ಕುಮಾರಾರ್ಪಣವಾಯಿತು. 'ಮಂದಿರ'ದ ಪಟು ಮಹಾಂತಮರಿಯ ವಯಸ್ಸು ಬೆಳೆದಂತೆ, ಆತನ ವಿದ್ಯಾ - ಬುದ್ಧಿ ಶೀಲ – ಸಂಸ್ಕೃತಿ ಬೆಳೆದುವು. 'ಮಂದಿರ' ಆಧ್ಯಾತ್ಮದ ಚಂದಿರ. ಅದರ ತಂಬೆಳಕಿನಲ್ಲಿ **ಸಾಧಕ-ಸಸಿವಾಳ ಮಹಾಂತ ದೇವರು** ಮಿಂದರು, ಶಾಂತಿಯಲ್ಲಿ ನಿಂದರು. ಅಲ್ಲಿ

ಅವರು ಅಧ್ಯಾತ್ಮ ಸಾಧಕರಾಗಿದ್ದಂತೆ, ಸಾಹಿತ್ಯಶೋಧಕರಾಗಿದ್ದರು. ಅಲ್ಲಿ ಅವರು ಸೌಂದರ್ಯಾರಾಧಕರಾಗಿದ್ದಂತೆ ಶಿವಾನುಭವ ಭೋಧಕರಾಗಿದ್ದರು. ಅಲ್ಲಿ ಅವರ ಕವಿತ್ವ, ಲೇಖನ, ಭಾಷಣ, ಸಂಪಾದನ, ಯೋಗಾಸನ-ಗಳಿಗೆ ತಕ್ಕ ಉತ್ತೇಜನ ದೊರೆಯಿತು; ಅವುಗಳಲ್ಲೆಲ್ಲ ಅವರ ಪ್ರತಿಭೆ ಮೆರೆಯಿತು. ಇಪ್ಪತ್ತು ವಯದ ಯುವ ತಪಸ್ವಿ-ಮಹಂತದೇವರಿಗೆ ಚಿತ್ತರಗಿಯ ಕರೆ ಬಂದಿತು; ಹೊಸ ಸಂದೇಶ ಹೊತ್ತುತಂದಿತು.

**ಚಿತ್ತರಗಿ ' ದೇವ ' ಚಿದ್ವ್ಯಾಸಂಗ ಭಾವ :** ಲಿಂ. ಶ್ರೀ ಕೊಪ್ಪದ ಮಹಾಂತ ಸ್ವಾಮಿಗಳು ಚಿತ್ತರಗಿ ಪೀಠದ ಆಡಳಿತಾಧಿಕಾರಿಗಳಾಗಿದ್ದಾಗ, ಮಹಾಂತ ದೇವರನ್ನು ಪೀಠದ ಮರಿದೇವರೆಂದು ನೇಮಕಗೊಳಿಸಲಾಯಿತು. ಉಚ್ಚ ಶಿಕ್ಷಣಕ್ಕಾಗಿ ಕಾಶಿಗೆ ಕಳಿಸ ಲಾಯಿತು. ಕಾಶಿಯಲ್ಲಿ ಜಯದೇವ ಮಠ, ಮಹೇಶ್ವರಾನಂದ ಮಠಗಳು ಅವರಿಗೆ ನಿವಾಸ ಸ್ಥಾನಗಳಾಗಿದ್ದವು. ಅವರಿಗೆ ಹಿಂದು ವಿಶ್ವವಿದ್ಯಾಲಯದಿಂದ ಅಲ್ಲಿರುವವರೆಗೆ ವಿದ್ಯಾರ್ಥಿ ವೇತನ ಸಿಗುತ್ತಿದ್ದಿತು. ಅವರು ಕುಶಾಗ್ರಬುದ್ಧಿಶಾಲಿಗಳು, ಸ್ವಯಂಪಾಕಿಗಳು, ಪರಿಶ್ರಮ ಜೀವಿಗಳು. ಅವರು ಕಲಕತ್ತಾ ಬಂಗಾಲ ಸಂಸ್ಕೃತ ಸಂಸ್ಥೆಯ ಕಾವ್ಯತೀರ್ಥ, ಢಾಕಾ ವಿಶ್ವ ವಿದ್ಯಾಲಯದ ಸಾಹಿತ್ಯರತ್ನ, ಕಾಶೀ ಹಿಂದುವಿಶ್ವವಿದ್ಯಾಲಯದ ವೇದಾಂತಾಚಾರ್ಯ ಪರೀಕ್ಷೆಗಳನ್ನು ಕೊಟ್ಟು ಉತ್ತಮ ರೀತಿಯಿಂದ ಉತ್ತೀರ್ಣರಾದರು. ಪೌರ್ವಾತ್ಯ ಪದವೀ ಧರರಾದಂತೆ, ಅವರು ಪಾಶ್ಚಾತ್ಯ ಪದವೀದಾರರಾಗ ಬಯಸಿ 'ಇಂಟರ ಮಿಡಿಯೇಟ್' ಪರೀಕ್ಷೆಯನ್ನು ಕಟ್ಟಿದರು. ಅಷ್ಟಕ್ಕೇ ನಿಂತಿತು. ಅವರು ಅಲ್ಲಿದ್ದಾಗ ತಕ್ಕಮಟ್ಟಿಗೆ ಸಾಹಿತ್ಯ ಪ್ರಚಾರಕಾರ್ಯದಲ್ಲಿಯೂ ತೊಡಗಿದ್ದರು. ಅವರು ತಮ್ಮ ನಿರಾಡಂಬರ ಜೀವನದಿಂದ ಹಣ ವನ್ನುಳಿಸುತ್ತಿದ್ದರು; ಜಾಣ ಬಡವಿದ್ಯಾರ್ಥಿಗಳಿಗೆ ಸಾಧ್ಯವಿದ್ದಷ್ಟು ನೆರವಾಗುತ್ತಿದ್ದರು. ಅವ ರಲ್ಲಿ ಬುದ್ಧಿ ಭಾವಗಳ ಸಂಪತ್ತಿಗಿಂತ ಹೃದಯಸಂಪತ್ತು ಹೆಚ್ಚಾಗಿದ್ದಿತು. ಕಾಶಿಯಲ್ಲಿದ್ದಾ ಗಿನ ತಮ್ಮ ಎಂಟು ವರ್ಷದ ಅವಧಿಯಲ್ಲಿ ಪ್ರತಿಸಲ ದೊಡ್ಡ ಬಿಡುವಿನೊಳಗೆ ಇತ್ತಕಡೆ ಬಂದಿದ್ದಾಗ, ಅವರು ಅಲ್ಲಲ್ಲಿಯ ಸಾರ್ವಜನಿಕ– ಸತ್ವಮಯ ಕಾರ್ಯಕ್ರಮಗಳಲ್ಲಿ ಆಸಕ್ತಿ ಯಿಂದ ಭಾಗವಹಿಸುತ್ತಿದ್ದರು. ಅವರು ಕಾಶಿಯಲ್ಲಿದ್ದಾಗ ಒಮ್ಮೊಂದೊಮ್ಮೆ ಹುನಗುಂದ ದಿಂದ 'ತಂತಿ' ಬಂದಿತು. ಅವರು ಮುಂದೆ ಚಿತ್ತರಗಿ ಪೀಠದ ಅಧಿಕೃತ ಉತ್ತರಾಧಿಕಾರಿ ಯಾದರು; ಹುನಗುಂದ ಶ್ರೀ ವಿಜಯ ಮಹಾಂತೇಶ ವಿದ್ಯಾವರ್ಧಕ ಸಂಘದ ಉಪಾಧ್ಯಕ್ಷ ರಾದರು. ಅವರೀಗ **ಚಿತ್ತರಗಿ ವಿಜಯ ಮಹಂತ ದೇವರು;** ಮತ್ತೆ ಕಾಶಿಗೆ ತೆರಳಿದರು.

**ಅನಿರೀಕ್ಷಿತ ಘಟ್ಟ ಜಗದ್ಗುರು ಪಟ್ಟ :** ವಿಜಯ ಮಹಂತದೇವರಿಗೆ ಇಪ್ಪ ತ್ತೊಂಭತ್ತು ನಡೆಯುತ್ತಿದ್ದುವು. ಅವರಿನ್ನೂ ಕಾಶಿಯಲ್ಲಿ ಓದುತ್ತಿದ್ದರು. ಹುಬ್ಬಳ್ಳಿ ಮೂರುಸಾವಿರ ಮಠದ ಶ್ರೀ ಮ. ನಿ. ಜಗದ್ಗುರು ಗುರುಸಿದ್ಧ ರಾಜಯೋ ಗೀಂದ್ರ ಮಹಾಸ್ವಾಮಿಗಳು ತಮಗೆ ದೇಹಾಲಸ್ಯ ಹೆಚ್ಚಾದುದರಿಂದ ಕಾಶಿಗೆ ' ತಾರು ' ಮಾಡಿ ವಿಜಯ ಮಹಂತದೇವರನ್ನು ಕರೆಯಿಸಿಕೊಂಡರು: ತಮ್ಮ ಹೃದ್ಗತವನ್ನು ಅವರ ಮುಂದಿಟ್ಟರು ; ಕೆಲ ದಿನದ ಬಳಿಕ, ' ತಂತಿ' ಕಳಿಸಿ ಮತ್ತೊಮ್ಮೆ ಕಾಶಿಯಿಂದ ಕರೆಯಿಸಿ ಕೊಂಡಾಗ, ದೇವರನ್ನು ತಮ್ಮ ಉತ್ತರಾಧಿಕಾರ ವಹಿಸಿಕೊಳ್ಳುವ ಬಗೆಗೆ ಒಪ್ಪಿಸಿಯೇ

ಬಿಟ್ಟರು. "ದೇವ"ರು ವಚನಕೊಟ್ಟರು. ಚಿತ್ರಗಿ ಪೀಠದ ಭಕ್ತಾದಿಗಳ ಒಲವಿನ ಒಪ್ಪಿಗೆ ದೊರೆತ ಮೇಲೆ, ತುಸ ದಿನ ತಡೆದು "ದೇವರ ಹೆಸರಿನಲ್ಲಿ ಕಾಗದಪತ್ರಗಳಾದುವು. ಚಿತ್ರಗಿ ವಿಜಯಮಹಾಂತದೇವರು ಇದೀಗ ದಿ. ೨-೧೧-೧೯೫೭ರಂದು ಮೂರುಸಾವಿರಮಠದ ಭಾವೀ ಜಗದ್ಗುರುಗಳಾದರು ; **ಹುಬ್ಬಳ್ಳಿ ವಿಜಯ ಮಹಾಂತಸ್ವಾಮಿಗಳಾದರು ;** ಸ್ವಲ್ಪ ಹೆಚ್ಚುಕಡಿಮೆ ಮೂರುವರೆ ತಿಂಗಳು ಮಾತ್ರ ತಮ್ಮ ಗುರುಗಳ ಗರಡಿಯಲ್ಲಿ ಅನುಭವಹೊಂದಿದರು. ದಿ. ೧೭-೨-೧೯೫೮ರಂದು ಮಹಾಶಿವರಾತ್ರಿ ಗುರುಗಳು ದೇಹಬಿಟ್ಟರು ; ಭಕ್ತಜನ ಕಣ್ಣೀರಿಟ್ಟರು.

ಶ್ರೀ ಜಗದ್ಗುರು ಮೂರುಸಾವಿರಮಠದ ಸರ್ವಭಕ್ತಾದಿಗಳು ಗೊತ್ತುಪಡಿಸಿದ ಪ್ರಕಾರ, ವಿಜಯಮಹಾಂತಸ್ವಾಮಿಗಳಿಗೆ ವಿಧಾನೋಕ್ತವಾಗಿ, ವಿಲಂಬ ಸಂವತ್ಸರ ಶಾ.ಶ. ೧೮೮೦ ವೈಶಾಖ ಶು. ೧೩ ಗುರುವಾರ : ಕ್ರಿ. ಶ. ೧೯೫೮, ಮೇ ೧ರಂದು ನಿರಾಭಾರ ಜಗದ್ಗುರು ಪಟ್ಟಾಭಿಷೇಕವಾಯಿತು ; **ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು** ಎಂಬುದಾಗಿ ನೂತನ ನಾಮಕರಣವಾಯಿತು ; ಅತ್ಯಂತ ವೈಭವದಿಂದ ಪಟ್ಟಾಭಿಷೇಕ ಮಹೋತ್ಸವದ ಮಂಗಲವಾಯಿತು. ಇದೇನು ಗುರುಸಿದ್ಧೇಶನ ಮೋಡಿಯೋ—ಕಾರುಣ್ಯದ ಕೋಡಿಯೋ ! ದೈವ-ಪ್ರಯತ್ನದ ಜೋಡಿಯೋ—ಸೌಭಾಗ್ಯದ ಗಾಡಿಯೋ !!

## ಕರ್ತೃತ್ವದೀಪ್ತಿ

**ಜಗದ್ಗುರುವರ್ಯ ಜನೋದ್ಧಾರಕಾರ್ಯ :–** ಭಾರತದ ಪುರಾತನ ಧರ್ಮ ಪೀಠಗಳಿಗೆಲ್ಲ ಒಂದೊಂದು ಉದಾತ್ತ ಪರಂಪರೆಯುಂಟು. ಆಯಾ ಪೀಠಾಧೀಶ್ವರರು ಜಗತ್ಕಲ್ಯಾಣದ ಆಧಾರದ ಮೇಲೆ ಅಂತಹ ಪರಂಪರೆಯನ್ನು ಕಟ್ಟಿ ಹೋಗಿದ್ದಾರೆ. ಪೀಠದ ಮೇಲೆ ಪರಿವಿಡಿದು ಬರುವ ಗುರುವರ್ಯರು ಆ ಸಂಪ್ರದಾಯವನ್ನು ಗಟ್ಟಿ ಮುಟ್ಟಿಯಾಗಿ ಕಾಯ್ದುಕೊಂಡು ಹೋದರೆ ಸಾಕು. ಲಿಂ. ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ತಮ್ಮ ಪೂರ್ವಜರ ಪರಂಪರೆಯನ್ನು ಉಳಿಸಿ ಕೊಂಡು ಬಂದು, ಆ ಸಂಪ್ರದಾಯಕ್ಕೆ ಕಾಲೋಚಿತವಾಗಿ ಹೊಸತನದ ಮುದ್ರೆಯೊತ್ತಿ, ಅದು ಇನ್ನಷ್ಟು ಎದ್ದು ಕಾಣುವಂತೆ ಮಾಡಿದರು. ಅವರು ಹಮ್ಮಿದ ಲೋಕ ಸಂಗ್ರಹ ಯೋಜನೆಗಳು ಕೈಗೂಡುವ ಕಾಲ ಬಂದಿರಲಿಲ್ಲವೇನೋ. ಅವರು ಕೆಲವೇ ವರ್ಷಗಳಿದ್ದು ಲಿಂಗದೊಳಗಾದರು. ಅವರ ಉತ್ತರಾಧಿಕಾರಿಗಳಾಗಿ ಬಂದ ಲಿಂ. ಶ್ರೀ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು ಆರ್ಥಿಕ ಬೆಳವಣಿಗೆಯ ಕಡೆ ವಿಶೇಷ ಗಮನವಿತ್ತು, ತಮ್ಮ ಗುರುವರೇಣ್ಯರು ಹಾಕಿಕೊಟ್ಟ ಪರಂಪರೆಗೆ ನವನವೋದಯದ ಶ್ರೀಮೃತ ಸಿಂಚನಗೈದು, ಅದನ್ನು ವಿವಿಧ ರೀತಿಯಿಂದ ಬೆಳೆಸಿಕೊಂಡು ಬಂದರು. ಈಗಿರುವ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ತಮ್ಮ ಗುರೂತ್ತಮರು 'ನಡೆದು ಬಂದ ದಾರಿ' ಯಲ್ಲಿಯೇ

ಚಾಚೂ ತಪ್ಪದೆ ನಡೆಯುತ್ತ, ಸಮಾಜಕ್ಕೆ – ರಾಷ್ಟ್ರಕ್ಕೆ – ವಿಶ್ವಕ್ಕೆ ಹೊಸ ಬೆಳಕನ್ನು ಚೆಲ್ಲಬಹುದಾದ ಹರವಾದ ಹಲವು ಬಗೆಯ ಕಾರ್ಯಕ್ರಮಗಳಿಂದ ತಮ್ಮ ಪೀಠದ ಕೀರ್ತಿ ದಿಗ್ದಿಗಂತದ ವರೆಗೆ ಹರಡುವಂತೆ ಹವಣಿಸುತ್ತಿದ್ದಾರೆ. ಕೊಂಚ ಕಡಿಮೆ ಹದಿನಾಲ್ಕು ವರ್ಷಾವಧಿಯಲ್ಲಿ ಮಹಾಸನ್ನಿಧಿಯವರಿಂದಾದ ಉತ್ತರೋತ್ತರ ಸರ್ವತೋಮುಖ ಅಭಿವೃದ್ಧಿ ಕಾರ್ಯಗಳೇ ಈ ಮಾತಿಗೆ ಸಜೀವ ಸಾಕ್ಷಿಯನ್ನು ನುಡಿಯುತ್ತವೆ; ಧರ್ಮ–ಸಾಹಿತ್ಯ ಸಂಸ್ಕೃತಿಗಳ ತ್ರಿವೇಣೀ ವೀಣೆಯನ್ನು ಮಿಡಿಯುತ್ತವೆ. ಹೇಗೆಂದರೆ :—

**ಪರಂಪರೆಯ ಪರಿಪೋಷಣೆ :**– ಜಗದ್ಗುರುಗಳು ಗುರುವರ್ಯರ 'ಪುಣ್ಯ ತಿಥಿ' ಯನ್ನು ಆಧುನಿಕ ರೀತಿಯಲ್ಲಿ ಆಚರಿಸುವರು ; ಜಾತಿ – ಮತ, ಪಂಥ – ಪಕ್ಷ ಗಳೆನ್ನದೆ, ಶ್ರಾವಣದಲ್ಲಿ ಲಕ್ಷಾಂತರ ಜನರಿಗೆ ಅನ್ನ ಸಂತರ್ಪಣೆಗೈಯುವರು : ಸಂದ ರ್ಭೋಚಿತವಾಗಿ ಪುರಾಣ – ಪ್ರವಚನ, ಭಾಷಣ – ಭಜನೆ, ಕೀರ್ತನೆ – ಗಾಯನ ಕಾರ್ಯಕ್ರಮಗಳನ್ನು ಏರ್ಪಡಿಸುವರು ; ವರ್ಷಕ್ಕೊಮ್ಮೆ 'ವಕೀಲ' ರ ಮಂಡಳಿ, ಪತ್ರಿಕಾ ಕರ್ತರ ತಂಡ, ವಿವಿಧ 'ನೌಕರ' ರ ಸಿಬ್ಬಂದಿಗಳನ್ನು ಆಮಂತ್ರಿಸಿ ಊಟ ಮಾಡಿಸಿ ಸಮಯೋಚಿತ, ಸಂದೇಶವೀಯುವರು ; ಪೀಠದ ವಿಶಿಷ್ಟ ಸದ್ಭಕ್ತರ ಬಿನ್ನಹ ತೀರಿಸಿ ಆಶೀರ್ವದಿಸುವರು ; ಪ್ರತಿ ವರ್ಷ ಮಠದಲ್ಲಿ ಶ್ರೀ ಗಜಾನನೋತ್ಸವಕ್ಕೆ ಅವಕಾಶ ಕಲ್ಪಿಸಿಕೊಡುವರು, ವಿಜಯ ದಶಮಿಯ ದಿನ ಬನ್ನಿ ಮುಡಿಮು ಮೇಣೆಯಲ್ಲಿ ಮಂಡಿಸಿ, ಊರೊಳಗೆ ಸದ್ಭಕ್ತರಿದ್ದೆಡೆ ದಯಮಾಡಿಸಿ ದರ್ಶನಾಶೀರ್ವಾದ ನೀಡುವರು ; ಶ್ರಾವಣದಲ್ಲಿ ಶ್ರೀ ಗುರು ಸಿದ್ಧೇಶ್ವರ ರಥೋತ್ಸವವನ್ನು ಜರುಗಿಸುವರು ; ಪೀಠದ ಕೆಳಗಿರುವ ಸಂಘ – ಸಂಸ್ಥೆಗಳ ಆಡಳಿತವನ್ನು ಸಾಗಿಸುವರು ; ಅವಶ್ಯವೆನಿಸಿದಲ್ಲಿ ಇತರ ಸಂಘ – ಸಂಸ್ಥೆಗಳಿಗೆ ಸ್ಥಳದಾನ, ಸಂಪತ್ತಿದಾನಗಳನ್ನು ಮಾಡುವರು ; ಗುರುವರ್ಯರು ರೂಪಿಸಿಟ್ಟ ಯೋಜನೆಗಳನ್ನು ಸಾಧ್ಯವಾದಾಗೆಲ್ಲ ಕಾರ್ಯರಂಗಕ್ಕೆ ಇಳಿಸಿರುವರು ; ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಲದ ಕಾರ್ಯ ನಡೆಯಿಸಿ, ಶ್ರೀ ಜಗದ್ಗುರು ಮೂರುಸಾವಿರ ಮಠದ ಗ್ರಂಥ ಮಾಲೆಯನ್ನು ಮುಂದುವರಿ ಸಿರುವರು ; ಸ್ವಕೀಯರು ಪರಕೀಯರು ಇಚ್ಛಿಸಿದಲ್ಲಿ ಶಿವದೀಕ್ಷಾ ಸಂಸ್ಕಾರ ಕೊಡಿ ಸಿರುವರು ; ಮಠದ ಹಾಗೂ ಮಠಕ್ಕೆ ಸಂಬಂಧಪಟ್ಟ ವಿದ್ಯಾವರ್ಧಕ ಸಂಘದ– ಪುರೋಭಿವೃದ್ಧಿಗೆ ಸಲ್ಲಿಸಿದ ಭಕ್ತಾದಿಗಳ ದಾನ – ದಕ್ಷಿಣೆಗಳನ್ನು ಸ್ವೀಕರಿಸಿರುವರು : ತಮ್ಮ ಮಠದ ಜೀರ್ಣೋದ್ಧಾರ ಮತ್ತು ಹೊಸ ಕಟ್ಟಡದ ನಿರ್ಮಾಣ ಕಾರ್ಯಗಳನ್ನು ಕೈಗೊಂಡಿರುವರು ; ಕರ್ತೃ ಗದ್ದುಗೆಗೆ ದಿನಾಲು ತ್ರಿಕಾಲ ಪೂಜೆ – ಆಗಾಗ ಅಭಿಷೇಕ ಆಗುವಂತೆ ನೋಡಿಕೊಳ್ಳುವರು ; ಹುಬ್ಬಳ್ಳಿ ಕರ್ನಾಟಕ ಮಧ್ಯವರ್ತಿ ಸಹಕಾರಿ 'ಬ್ಯಾಂಕಿ' ನಲ್ಲಿಯೇ ಠೇವಿನಂತೆ ತಮ್ಮ ಮಠದ ವಿಪುಲ ಧನವಿಡುವ ಪರಂಪರೆಯನ್ನೂ ಪಾಲಿ ಸುವರು ; ಶಿವಯೋಗ ಮಂದಿರದ ಮೇಲೆ ಲಕ್ಷ್ಯವಿರಿಸಿರುವರು :

**೧. ಧಾರ್ಮಿಕ ರಂಗದಲ್ಲಿ :**– ಬೀಡನಾಳ ಶ್ರೀಮಂತ ಅಸುಂಡಿ ಚನ್ನಮಲ್ಲಪ್ಪ ನವರು ಸಲ್ಲಿಸಿದ ೧೫,೦೦೦ ರೂ. ಯಿಂದ ಜಗದ್ಗುರುಗಳು ತಮ್ಮ ಗುರುಗಳ ಸಮಾಧಿ

ಮಂಟಪ ನಿರ್ಮಾಣಗೊಳ್ಳುವಂತೆ, ಅನುವು ಮಾಡಿಕೊಟ್ಟರು, ಹುಬ್ಬಳ್ಳಿ ಶ್ರೀಮಂತ ಕೌಸಾಳಿ ತಮ್ಮಪ್ಪನವರು ಸಮರ್ಪಿಸಿದ ೫೦೦೦ ರೂ. ಯಿಂದ ಕರ್ತೃ ಸಮಾಧಿ ಮಂಟಪವೆಲ್ಲ ಅಮೃತ ಶಿಲೆಗಳಿಂದ ಅಲಂಕರಣಗೊಳ್ಳುವಂತೆ ಅಪ್ಪಣೆ ಕೊಟ್ಟರು; ಹುಬ್ಬಳ್ಳಿ ಶ್ರೀಮಂತ ಜಾಧವ ರಾಮಣ್ಣನವರು ಮತ್ತು ಶ್ರೀಮಂತ ಕನ್ನಾಳ ಹನುಮಂತಪ್ಪನವರು ಅರ್ಪಿಸಿದ ಧನರೂಪದ ಕಾಣಿಕೆಗಳಿಂದ ಅವರವರ ಅಪೇಕ್ಷೆಯಂತೆ, ಸುವರ್ಣ ಸಿಂಹಾಸನ ಹಾಗೂ ರಜತ ಪಾದಪೀಠಗಳನ್ನು ಸಿದ್ಧಪಡಿಸುವಂತೆ ವ್ಯವಸ್ಥೆ ಗೊಳಿಸಿದರು: ತಮ್ಮ ಮಹಾ ಮಠವನ್ನು ಲಕ್ಷಾಂತರ ರೂಪಾಯಿ ವೆಚ್ಚ ಮಾಡಿ, ಆಧುನಿಕ ರೀತಿಯಲ್ಲಿ ಸರ್ವಾಂಗ ಸುಂದರವಾಗುವಂತೆ ಜೀರ್ಣೋದ್ಧಾರಗೊಳಿಸಿದರು. ಜಗದ್ಗುರುಗಳು ತಮ್ಮ ಪಟ್ಟಾಭಿಷೇಕದ ವರ್ಷ, ಹುನಗುಂದ – ಇಲಕಲ್ಲ – ಸೂಳಿಬಾವಿ – ಚಿತ್ತರಗಿ – ನವಿಲಗುಂದ – ಮರಬ ಮುಂತಾದ ಊರುಗಳಲ್ಲಿ – ಅಭೂತ ಪೂರ್ವ ಸ್ವಾಗತ ಕೈಕೊಂಡು ಅಷ್ಟ ಪಲ್ಲಕ್ಕಿಯಲ್ಲಿ ಮೆರೆದರು; ದಿಗ್ವಿಜಯ ಯಾತ್ರೆಗಳಲ್ಲಿ ಜಿರೆದರು. ಮರು ವರುಷ ಅವರು ಹಾನಗಲ್ಲು ಕುಮಾರ ಶಿವಯೋಗೀಶ್ವರ ಸ್ಮಾರಕ ಶಿವಾದ್ವೈತ ತತ್ತ್ವ ಪ್ರಚಾರಕ ಸಮಿತಿಯ ಅಂಗವಾಗಿ, ಗಿರಿಯಾಪುರ ಶ್ರೀ ಗುರು ಕುಮಾರಾಶ್ರಮದಲ್ಲಿ ಸೇರಿದ ಹತ್ತನೆಯ ಶಿವಾನುಭವ ಸಮ್ಮೇಲನದ ಅಧ್ಯಕ್ಷ ಪೀಠದಿಂದ ಶಕ್ತಿ ವಿಶಿಷ್ಟಾದ್ವೈತದ ತಿರುಳನ್ನು ತಿಳಿನುಡಿಯಲ್ಲಿ ತಿಳಿಯಪಡಿಸಿದರು: ಆದಾದ ಮರು ವರುಷವೆ ಮಾಘ ಮಾಸದೊಳಗೆ ಲಿಂ. ಶ್ರೀ ಮೃತ್ಯುಂಜಯ ಮಹಾ ಸ್ವಾಮಿಗಳ ಅರಿಕೆಯ ಮೇರೆಗೆ, ಧಾರವಾಡ ಮುರುಘಾ ಮಠದಲ್ಲಿ ಲಿಂ. ಶ್ರೀ ಚಿತ್ರ ದುರ್ಗದ ಜಗದ್ಗುರು ಜಯವಿಭವ ಮುರುಘರಾಜೇಂದ್ರ ಮಹಾಸ್ವಾಮಿಗಳು, ಲಿಂ. ಶ್ರೀ ಡಂಬಳ (ಗದಗ) ಜಗದ್ಗುರು ಗುರುಬಸವ ತೋಂಟದಾರ್ಯ ಮಹಾಸ್ವಾಮಿಗಳು– ಇವರೀರ್ವರೊಡನೆ ಲಿಂಗಪೂಜೆಗೈದು ಲಿಂಗಾನಂದದಲ್ಲಿ ವೇಳೆಗಳೆದು ಯಾವುದೇ ಸಾಮಾಜಿಕ – ಧಾರ್ಮಿಕ ಕಾರ್ಯಕ್ಕೆ ತಮ್ಮ ಸಹಕಾರ ಹಸ್ತ ಚಾಚಲು ಅಭಯವಿತ್ತರು: ಅದೇ ಮಾಸದೊಳಗೆ ಶಿವಯೋಗ ಮಂದಿರದ 'ಕುಮಾರ ನಗರ' ವಲ್ಲಿ ನೆರೆದ 'ಮಂದಿರ' ದ ಸುವರ್ಣ ಮಹೋತ್ಸವದ ಅಧ್ಯಕ್ಷ ಪೀಠದಿಂದಲೂ, 'ಮಂದಿರ' ದ ತಮ್ಮ ಅಧ್ಯಕ್ಷ ಪೀಠದಿಂದಲೂ ಆದರ್ಶಪ್ರಾಯವಾದ – ಅಧಿಕೃತವಾದ ಉಪನ್ಯಾಸ ವಿತ್ತು 'ಮಂದಿರ' ದ ಮಹತಿಯನ್ನು ಭಾವದುಂಬಿ ಬಣ್ಣಿಸಿದರು; ಅದೇ ಕಾಲಕ್ಕೆ ಅಲ್ಲಿ ಕೂಡಿದ ಅಖಿಲ ಭಾರತ ವೀರಶೈವ ಮಹಾಸಭೆಯ ಹದಿನೇಳನೆಯ ಅಧಿವೇಶನ ವನ್ನು ಉದ್ಘಾಟಿಸುತ್ತ ಜನತೆಗೆ ಉತ್ಕೃಷ್ಟ ಸಂದೇಶ ಉಣ್ಣಿಸಿದರು. ಕ್ರಿ.ಶ. ೧೯೬೧ ರಲ್ಲಿ ಜಗದ್ಗುರುಗಳು ಹೇರೂರು ಮಹಾ ಪ್ರಸ್ಥಕ್ಕೆ ದಯಮಾಡಿಸಿ ಹುನಗುಂದ ತಾಲೂಕಿನ ಶ್ರೀ ಮಹಾಂತೇಶ ಭಕ್ತ ಸಮ್ಮೇಲನದ ಅಧ್ಯಕ್ಷತೆ ವಹಿಸಿ, ಭಕ್ತಾದಿಗಳಲ್ಲಿ ಒಕ್ಕಟ್ಟು ನೆಲೆಗೊಳ್ಳುವಂತೆ – ಧರ್ಮಭಾವನೆ ದೃಢಗೊಳ್ಳುವಂತೆ ಪ್ರೇರೇಪಿಸಿದರು; ಅದೇ ವರ್ಷ ಚಿತ್ತರಗಿ ಯಾತ್ರಾ ಮಹೋತ್ಸವದಲ್ಲಿ ತಮ್ಮ ೪೦೦೦ ರೂ. ವೆಚ್ಚ ಮಾಡಿ ಕಟ್ಟಿಸಿದ ಹೊಸ ತೇರನ್ನು ತರಿಸಿಕೊಂಡು ದೈವದವರಿಗೆ ದಯಪಾಲಿಸಿದರು; ಮರು ವರುಷ

ಇಳಕಲ್ಲ ಹಳ್ಳದ ನಡುಗಡ್ಡೆಯಲ್ಲಿರುವ ಗುರು ಮಹಂತೇಶ, ವಿಜಯ ಮಹಂತೇಶರ, ಸಮಾಧಿ ಮಂಟಪಗಳಿಗೆ ೯೦೦೦ ರೂ. ವಿನಿಯೋಗಿಸಿ ರಮಣೀಯವಾದ ಎರಡು ದೊಡ್ಡ ಗೋಪುರಗಳನ್ನು ಕಟ್ಟಿಸಿಕೊಟ್ಟರು. ಕ್ರಿ. ಶ. ೧೯೬೩ ರಲ್ಲಿ ಜಗದ್ಗುರುಗಳು ಜಮಖಂಡಿ ವಿರಕ್ತಮಠದ ಮರಿದೇವರಾಗಿದ್ದ ಹಲಗಲಿ ಹಿರೇಮಠದ ಶ್ರೀ ಚಂದ್ರ ಶೇಖರ ದೇವರಿಗೆ ಇಳಕಲ್ಲಿನಲ್ಲಿ ಚಿತ್ತರಗಿ ಪೀಠದ ಚರಪಟ್ಟಾಧಿಕಾರ ವಹಿಸುವಂತೆ ಅನುಕೂಲಿಸಿದರು.

ಧರ್ಮಜಾಗೃತಿಗೆ ಸಂಬಂಧಿಸಿದ ಇನ್ನೂ ಕೆಲವು ಮಹತ್ತ್ವದ ಸಂದರ್ಭಗಳನ್ನು ಕ್ರಮವಾಗಿ ಹೇಳಬೇಕೆಂದರೆ: ಜಗದ್ಗುರುಗಳು ಬೆಂಗಳೂರು ಬಸವಸಮಿತಿಯ ಪರವಾಗಿ ಜರುಗಿದ ಬಸವಜಯಂತಿಯಲ್ಲಿ ಅಧ್ವರ್ಯುಗಳಾಗಿ ತಮ್ಮ ಅಮೋಘ ವಾಣಿಯಿಂದ "ಷಟ್‌ಸ್ಥಲ ವಿವೇಚನೆ" ಮಾಡಿದರು; ಬಾಗಿಲಕೋಟೆ ಸಹಸ್ರ ಗಣಾಧೀಶ್ವರ ಮಂಟಪಪೂಜಾ ಮಹೋತ್ಸವದ ಕಾಲಕ್ಕೆ ಶಿವಾನುಭವ ಸಮ್ಮೇಲನದ ಅಧ್ಯಕ್ಷಪೀಠವೇರಿ "ಶಿವಾನುಭವ ಮಹತಿ"ಯನ್ನು ಬಿತ್ತರಿಸಿದರು; ಬಸವಕಲ್ಯಾಣದಲ್ಲಿ ನಡೆದ ಶ್ರೀ ಬಸವಣ್ಣನವರ ಅಷ್ಟಶತಮಾನೋತ್ಸವದ ಸಂನಿವೇಶದಿಂದ ಸ್ಫೂರ್ತಿ ಗೊಂಡು "ಅಕ್ಕನ ಅನುಭಾವ ಕ್ರಾಂತಿ"ಯ ಕಿಡಿಗಳನ್ನು ಹಾರಿಸಿದರು; ಹುಬ್ಬಳ್ಳಿ ಅಕ್ಕನಬಳಗದವರ ಮುಂದೆ "ಅಕ್ಕನ ಆಧ್ಯಾತ್ಮಿಕ ಶಕ್ತಿ"ಯನ್ನು ತೋರಿಸಿದರು. ಅವರು ತಮ್ಮ ಮಠದಲ್ಲಿ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘವನ್ನು ಸ್ಥಾಪಿಸಿದರು; ಶಿವಯೋಗಿ ಸಂಘದವರು "ಧರ್ಮತರಂಗಿಣಿ" ಎಂಬ ಹಸ್ತಲಿಖಿತ ತ್ರೈಮಾಸಿಕವನ್ನು ಹೊರಡಿಸುವಂತೆ ಪ್ರೇರಣೆಗೈದರು; ತಮ್ಮ ಮಠದ ಎರಡನೆಯ ಅಂತಸ್ತಿನಲ್ಲಿ "ಶಿವಾ ನುಭವ ಮಂಟಪ"ವೊಂದು ಮುರಗೋಡ ಶ್ರೀ ಮ. ಪ್ರ. ಸ್ವ. ಮಹಂತ ಶಿವಯೋಗಿ ಗಳವರ ಅಮೃತಹಸ್ತದಿಂದ ಉದ್ಘಾಟನೆಗೊಳ್ಳುವಂತೆ, ಅದರ ಕಾರ್ಯಕಲಾಪ ಮುಂದು ವರಿಯುವಂತೆ ಏರ್ಪಾಡುಮಾಡಿದರು, ಅವರು ದಕ್ಷಿಣ ಭಾರತದ ಬೌದ್ಧಸಂಸ್ಥೆಯ ಹುಬ್ಬಳ್ಳಿ ಶಾಖೆಯವರು ಕಟ್ಟಿಸಿದ "ಬೌದ್ಧವಿಹಾರ"ವನ್ನು ಟಿಬೇಟಿದ ಪೂಜ್ಯ ದಲಾಯಿಲಾಮಾ ಅವರ ನೇತೃತ್ವದಲ್ಲಿ ಉದ್ಘಾಟಿಸುತ್ತ, ಹಿಂದಿಯಲ್ಲಿ ತಮ್ಮ "ಆಶೀರ್ವಾಣಿ"ಯನ್ನು ನೀಡಿದರು. ಅವರು ಕಲ್ಲಾಪುರ, ಉಡುತಡಿ, ಗದಗ, ಕಲಘಟಗಿ, ಧಾರವಾಡ, ಹುಬ್ಬಳ್ಳಿ ಮೊದಲಾದ ಊರುಗಳಲ್ಲಿ ಸಮಾವೇಶವಾದ ಶ್ರೀ ಬಸವಣ್ಣ ನವರ ಅಷ್ಟಶತಮಾನೋತ್ಸವ, ಎಡೆಯೂರು ತೋಂಟದ ಶ್ರೀ ಸಿದ್ಧಲಿಂಗ ಶಿವಯೋಗಿ ಪಂಚಶತಮಾನೋತ್ಸವ, ಮಹಾತ್ಮ ಗಾಂಧೀಜಿ ಶತಮಾನೋತ್ಸವ ಗಳೊಳಗೆ ಆಯಾ ಸನ್ನಿವೇಶಗಳಿಗೆ ತಕ್ಕಂತೆ ಅವರವರ ಜೀವನ ಸಂದೇಶಗಳನ್ನು ಅನುಭವಪೂರ್ಣ ಉಪನ್ಯಾಸಗಳಿಂದ ಹರಡಿದರು. ಅವರು ಆಗ "ಬಸವಣ್ಣವರ ವಚನಗಳಲ್ಲಿ ಧರ್ಮ ಮತ್ತು ಭಕ್ತಿ"ಯನ್ನು ಬಿತ್ತಿದರು. ಮುಂದೆ ತಮ್ಮ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ "ಶರಣರ ಅಮರ ಜೀವನ"ದ ಮುದ್ರೆಯನ್ನು ಒತ್ತಿದರು. ಹೊಸದಿಲ್ಲಿಯಲ್ಲಿ "ಜಾಗತಿಕ ಶಾಂತಿ"ಯ ಮೇಲೆ ವಿಚಾರಗೋಷ್ಠಿ ನಡೆಸುವದಕ್ಕಾಗಿ

ಅಂತರರಾಷ್ಟ್ರೀಯ ಸರ್ವಧರ್ಮ ಪರಿಷತ್ತು ಕೂಡಿದ್ದಾಗ ಜಗದ್ಗುರುಗಳು "ಜಾಗತಿಕ ಶಾಂತಿಗೆ ವೀರಶೈವ ದರ್ಶನದ ಕೊಡುಗೆ" ಎಂಬ ತಮ್ಮ ವಿಚಾರಪರಿಪ್ಲುತ ಉಪನ್ಯಾಸ ವನ್ನೊದಿ ಸಭಿಕರ ಲಕ್ಷ್ಯವನ್ನೆಲ್ಲ ಸೆಳೆದರು. ಅವರು ಕಾಶಿಯಲ್ಲಿ ಜಂಗಮವಾಡಿಮಠದ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರಿಂದ ಸತ್ಕಾರಹೊಂದಿ ದರು. ಗುರುವಿರಕ್ತಸಾಮರಸ್ಯವನ್ನು ಕುರಿತು ಚರ್ಚಿಸಿದರು. ಅವರು ಅಲ್ಲಿ ತಮಗೆ ಪೂರ್ವಾಶ್ರಮದಲ್ಲಿ ವಿದ್ಯಾಗುರುಗಳಾಗಿದ್ದವರನ್ನು ಕರೆಯಿಸಿಕೊಂಡು ಸತ್ಕರಿಸಿ ಕಾಶ್ಮೀರ ಶಾಲುಗಳಿಂದ ಸಂಭಾವಿಸಿದರು. ಧಾರ್ಮಿಕ ಸಂಶೋಧನಾಕೇಂದ್ರದ ಬಗೆಗೆ ಕೂಲಂಕಷ ವಾಗಿ ವಿಚಾರಿಸಿದರು. ಅವರು ಹೊಸದಿಲ್ಲಿಯಲ್ಲಿ ಕೇಂದ್ರ ಸರಕಾರದ ಹಿಂದಿನ ಮಂತ್ರಿ ಶ್ರೀ ಗುರುಪಾದಸ್ವಾಮಿ, ಉಪಮಂತ್ರಿ ಡಾ. ಸರೋಜಿನಿ ಮಹಿಷಿ—ಅವರೊಂದಿಗೆ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರನ್ನು ಕಂಡು ಆಶೀರ್ವದಿಸಿದರು. ಅಪೂರ್ವವಾದ **'ಜನತಾ ಕಾಲೇಜಿ'**ನ ಸಂಸ್ಥಾಪನೆಯ ವಿಷಯವಾಗಿ ವಿಚಾರವಿನಿ ಮಯಮಾಡಿದರು. ಅಲ್ಲಿ ತಮ್ಮ ಪೀಠದ ಶಾಖಾಮಠವನ್ನು ಸ್ಥಾಪಿಸಬೇಕೆಂದು ಯೋಚಿಸಿದರು. ಅವರು ಕಲಕತ್ತೆಯಲ್ಲಿ ಶ್ರೀರಾಮಕೃಷ್ಣಾಶ್ರಮವನ್ನು ಸಂದರ್ಶಿ ಸಿದರು. ಒಟ್ಟಿಗೆ ಜಗದ್ಗುರುಗಳು ಉತ್ತರಭಾರತ ಸಂಚಾರದಿಂದ ಹೊಸದೃಷ್ಟಿ ಕೋನದೊಂದಿಗೆ ಹೊಸ ಅನುಭವವನ್ನು ಸಂಪಾದಿಸಿಕೊಂಡು ಬಂದರು.

ಜಗದ್ಗುರುಗಳು ಮುರಗೋಡದಲ್ಲಿ ಶ್ರೀದುರುದುಂಡೀಶ್ವರ ಮಠದ ಶ್ರೀಮ.ಪ್ರ. ಮಹಾಂತಮಹಾಸ್ವಾಮಿಗಳವರ ಶತಮಾನೋತ್ಸವಕ್ಕೆ ದಯಮಾಡಿಸಿ, ಮುರಗೋಡದ ಅಜ್ಜನವರ ತೈಲಚಿತ್ರ ಹಾಗೂ ಶ್ರೀದುರದುಂಡೀಶ್ವರ ಪುರಾಣ ಕಾವ್ಯ–ಇವೆರಡನ್ನೂ ಅಮೃತ ಹಸ್ತದಿಂದ ಅನಾವರಣಗೊಳಿಸಿದರು; ವೀರಶೈವ ಸಿದ್ಧಾಂತ ಸಮಗ್ರಗ್ರಂಥದ ರಚನಾ ಕಾರ್ಯವನ್ನು ತಾವು ಮಾಡಿಸುವುದಾಗಿಯೂ ಅಪ್ಪಣೆಪಡಿಸಿದರು. ಅವರು ಧಾರೇಶ್ವರ (ತಾ. ಕುಮಟಾ)ದಲ್ಲಿ ಪಂಚಲಿಂಗ ಒಂದಾದ ಧಾರಾನಾಥ ದೇವಸ್ಥಾನದ ಅಷ್ಟಬಂಧಕಾರ್ಯಕ್ರಮಕ್ಕೆ ದಯಮಾಡಿಸಿ ಸದ್ಧರ್ಮ ಬೋಧಿಸಿದರು; ಅಷ್ಟಬಂಧ ಸಮಿತಿಯವರು ಸಮರ್ಪಿಸಿದ ಸನ್ಮಾನಪತ್ರವನ್ನು ಸ್ವೀಕರಿಸಿದರು. ಅವರು ಲಚ್ಯಾಣ ದಲ್ಲಿ ಜರುಗಿದ ಒಂದುಲಕ್ಷ ತೊಂಬತ್ತುಸಾವಿರ ಗಣ ಇಷ್ಟಲಿಂಗೋತ್ಸವದ ಕಾಲಕ್ಕೆ ಸರ್ವಧರ್ಮ ಪರಿಷತ್ತಿನ ಅಧ್ಯಕ್ಷ ಪೀಠವನ್ನಲಂಕರಿಸಿ ಮನನೀಯ ಉಪನ್ಯಾಸವಿತ್ತರು. ಅವರು ತಮ್ಮ ಭಕ್ತರ ೪೫.೦೦೦ ರೂ. ಕಾಣಿಕೆ ಹಣದಿಂದ ಸಿದ್ಧವಾದ ಕಲಾತ್ಮಕವಾದ ಬೆಳ್ಳಿಯ ಮಂಟಪವನ್ನು ಕರ್ತೃಗದ್ದುಗೆಯಲ್ಲಿ ಬಹಳ ವಿಜೃಂಭಣೆಯಿಂದ ಪ್ರತಿಷ್ಠಾಪನೆ ಗೊಳಿಸಿದರು. ಅವರು ಹುಬ್ಬಳ್ಳಿಯಲ್ಲಿ ಸ್ವಾಮಿ ದಯಾನಂದರು ಹೂಡಿದ ೪೦ ನೆಯ ಗೀತಾ ಜ್ಞಾನಯಜ್ಞದ ಪ್ರಾರಂಭೋತ್ಸವದ ಕಾಲಕ್ಕೆ ಇಂಗ್ಲಿಷದೊಳಗೆ 'ಧ್ಯಾನಯೋಗ' ವನ್ನು ಕುರಿತು ಭಾಷಣ ಮಾಡಿದರು. ಜಗದ್ಗುರುಗಳು ವಿಮಾನ ಮಾರ್ಗದಿಂದ ವಿದೇಶ ಪ್ರಯಾಣ ಕೈಗೊಂಡು 'ಜಾಗತಿಕ ವಿಶ್ವಧರ್ಮ ಶಾಂತಿಪರಿಷತ್ತಿ'ಗೋಸ್ಕರ ಭಾರತದ ಹಿಂದೂಧರ್ಮದ ಪ್ರತಿನಿಧಿಗಳಲ್ಲೊಬ್ಬರಾಗಿ ಜಪಾನಕ್ಕೆ ದಯಮಾಡಿಸಿ, ಕಿಯೋಟೋ

ವಲ್ಲಿ ದಿ. ೧೭-೧೦-೭೦ ರಂದು ಇಂಗ್ಲೀಷದೊಳಗೆ ಉದಾತ್ತ ವ್ಯಾಖ್ಯಾನವನ್ನಿತ್ತರು; ಜೊತೆಗೆ ಬಸವಾದಿ ಶರಣರ ಶಾಂತಿ ಸಂದೇಶದೊಂದಿಗೆ ವೀರಶೈವದ ವಿಶ್ವವಿಶಾಲ ತತ್ತ್ವಪ್ರಣಾಲಿಕೆಯನ್ನೂ ಬಿತ್ತರಿಸಿದರು. ಮುಂದಿನ ವರುಷ ಅಮೇರಿಕೆಯಲ್ಲಿ ಸಂಧಿಸ ಲಿರುವ ಜಾಗತಿಕ ವಿಶ್ವಧರ್ಮ ಮತ್ತು ವಿಶ್ವಶಾಂತಿ ಸಮ್ಮೇಲನಕ್ಕೆ ಆಮಂತ್ರಣ ರೂಪ ದಲ್ಲಿ ಜಗದ್ಗುರುಗಳವರು ಈಗಾಗಲೆ ಅದರ ಸದಸ್ಯತ್ವವನ್ನು ಪಡೆದಿರುವರು. ಹುಬ್ಬಳ್ಳಿ ರುದ್ರಾಕ್ಷಿ ಮಠದಲ್ಲಿ ವಾಡಿಕೆಯಂತೆ ಆಚರಿಸಿದ ಶಿವಯೋಗಿ ನಿಜಗುಣರ ಸ್ಮಾರಕೋತ್ಸ ವದ ಕಾಲಕ್ಕೆ ಮಹಾಸನ್ನಿಧಿ ಪೀಠದಿಂದ ಸಮಯೋಚಿತವಾಗಿ ಅಭ್ಯಾಸಪೂರ್ಣ ಪ್ರವಚನ ಮಾಡಿದರು. ಅವರು ತಮ್ಮ ಆಧ್ಯಾತ್ಮತೃಷೆಯನ್ನು ಇನ್ನಷ್ಟು ಹಿಂಗಿಸಿಕೊಳ್ಳುವದ ಕ್ಕಾಗಿ-ಗ್ರಂಥಲೇಖನಕಾರ್ಯವನ್ನು ಪುನಃ ಪ್ರಾರಂಭಿಸುವದಕ್ಕಾಗಿ ವಾಸ್ತವ್ಯಕ್ಕೆಂದು ಶಿವಯೋಗಮಂದಿರದಲ್ಲಿ ಕಟ್ಟಿಸಲಿರುವ ತಮ್ಮದೊಂದು ಮಠದ ಶಂಕು ಸ್ಥಾಪನೆ ಮಾಡಿಸಿ ಬಂದರು. ಅವರು ಇಳಕಲ್ಲದಲ್ಲಿ ಜರಗಿದ ಲಿಂ. ಶ್ರೀಚಿತ್ತರಗಿ ವಿಜಯ ಮಹಾಂತ ಶಿವಯೋಗಿಗಳವರ ಅರವತ್ತನೆಯ ಪುಣ್ಯತಿಥಿ ಮಹೋತ್ಸವದ ಅಧ್ಯಕ್ಷತೆ ವಹಿಸಿ, ಅಗಿನ ಕವಿಸಮ್ಮೇಲನ, ಪ್ರಶಸ್ತಿ ಪ್ರದಾನ ಗ್ರಂಥ ಪ್ರಕಟನ-ಗಳು ಬಹುಯಶ ಸ್ವಿಯಾಗಿ ಮಂಗಲಗೊಳ್ಳುವಂತೆ ಪ್ರೇರೇಪಿಸಿದರು. ಅಲ್ಲದೆ ಅವರು ದಾಂಡೇಲಿಯಲ್ಲಿ ನೆರೆದ ವಿಶ್ವಹಿಂದು ಪರಿಷತ್ತನ್ನು ನಂದಾದೀಪ ಹೊತ್ತಿಸುವದರೊಂದಿಗೆ ಉದ್ಘಾಟಿಸುತ್ತ ಹಿಂದು ಸಂಘಟನೆಯ ಬಗೆಗೆ ಸಕಾಲಿಕ ಸಂದೇಶವಿತ್ತರು.

೨. **ಸಾಹಿತ್ಯರಂಗದಲ್ಲಿ :**- ಜಗದ್ಗುರುಗಳು ಶಿವಯೋಗಮಂದಿರದಲ್ಲಿ ಸಾಹಿತ್ಯ ಗೋಷ್ಠಿಯ ಅಧ್ಯಕ್ಷ ಪೀಠದಿಂದ 'ಸಾಹಿತ್ಯ ಮತ್ತು ಮನೋ ವಿಜ್ಞಾನ'ದ ಮೇಲೆಯೂ, ನಾಡಹಬ್ಬದ ಸಂಬಂಧದಲ್ಲಿ ' ಸೌಂದರ್ಯ ಮತ್ತು ಕಲೆ ' ಯ ಮೇಲೆಯೂ ಉಪನ್ಯಾ ಸಗಳ ಮೂಲಕ ಅಪ್ಪಣೆಕೊಡಿದರು : ಚಿತ್ತರಗಿ ಯಾತ್ರಾಮಹೋತ್ಸವದ ಕಾಲಕ್ಕೆ ' ಐವಳ್ಳಿ ಶರಣರು ' ಎಂಬ ಗ್ರಂಥವನ್ನು ಉದ್ಘಾಟಿಸುತ್ತ ಕನ್ನಡ ಸಾಹಿತ್ಯದಲ್ಲಿ ಜೀವನ ಚರಿತ್ರೆಗಳ ಪಾತ್ರದ ವಿಷಯವಾಗಿ ಅಪ್ಪಣೆ ಕೊಡಿಸಿ ಪ್ರೋತ್ಸಾಹಿಸಿದರು ; ತಮ್ಮ ಪೀಠದ ಸಮಗ್ರ ಇತಿಹಾಸ ಬರುವಂತೆ, ' ಹುಬ್ಬಳ್ಳಿ ಶ್ರೀ ಜಗದ್ಗುರು ಮೂರುಸಾವಿರ ಮಠದ ' ಹೊಂಬೆಳಗು ' ಎಂಬ ಗ್ರಂಥ ಬರೆಯಿಸಿ, ಅದರ ಅಚ್ಚಿನ ವೆಚ್ಚದ ಭಾರವನ್ನು ವಹಿಸಿ ಗ್ರಂಥಕರ್ತರಿಗೆ ಯೋಗ್ಯಸಂಭಾವನೆಯಿತ್ತು ಗೌರವಿಸಿದರು. ಜಗದ್ಗುರುಗಳಿಂದ ಒಟ್ಟು **ಹದಿನಾಲ್ಕು ಸಾಹಿತ್ಯಕೃತಿಗಳು** ರಚಿತವಾಗಿವೆ.

೧. ಪಥಿಕ (ಕವನ ಸಂಗ್ರಹ) ೨. ಬಿದಿರೆ ಶ್ರೀಮರುಳಸಿದ್ಧೇಶ್ವರ ಅಷ್ಟೋತ್ತರ ಶತನಾಮಾವಳಿ ೩. ಹಾವೇರಿ ಶ್ರೀ ಶಿವಬಸವೇಶ್ವರ ಅಷ್ಟೋತ್ತರ ಶತನಾಮಾವಳಿ ೪. ಚಿತ್ತರಗಿ ಶ್ರೀ ವಿಜಯಮಹಾಂತೇಶ ಲಾವಣಿ ೫. ಸವದತ್ತಿ ಶ್ರೀ ಅಪ್ಪಯ್ಯ ಸ್ವಾಮಿಗಳ ಜೀವನ ಚರಿತ್ರೆ. ೬. ಪೂಮಾಲೆ (ಕವನ ಸಂಕಲನ) ೭. Yogiraja-of Karnataka (ವ್ಯಕ್ತಿ ಚಿತ್ರ) ೮. ಸಾಹಿತ್ಯ ( ವಿಮರ್ಶೆ ) ೯. ಯೋಗಿಕುಮಾರ (ಜೀವನ ಚರಿತೆ) ೧೦. ಪೂದೋಟ (ಲಘುಕಾವ್ಯ) ೧೧. ಲಿಂ. ಶ್ರೀ ಕೊಪ್ಪದ

ಮಹಾಂತಸ್ವಾಮಿಗಳ ಉಪನ್ಯಾಸ ಮಾಲೆ. ೧೨. ಜೀವನ ವಿಕಾಸ (ತಮ್ಮ ಉಪನ್ಯಾಸಗಳ ಸಂಗ್ರಹ) ೧೩. ಅಮೃತ ಬಿಂದು (ತಮ್ಮ 'ಆಶೀರ್ವಾಣಿ' ಸಂಗ್ರಹ) ೧೪. ಆಶೀರ್ವಾಣಿ (ತಮ್ಮ ಉಪನ್ಯಾಸಗಳ ಸಂಗ್ರಹ).

ಇವುಗಳಲ್ಲಿ ೧ ರಿಂದ ೭ರ ವರೆಗಿನ ಕೃತಿಗಳು ಜಗದ್ಗುರುಗಳಾಗುವ ಮುಂಚೆ ಬರೆದುವೂ, ೮ ರಿಂದ ೧೧ರ ವರೆಗಿನ ಕೃತಿಗಳು ಜಗದ್ಗುರುಗಳಾದ ಮೇಲೆ ಬರೆದುವಾಗಿದ್ದು ಅಪ್ರಕಟಿತವಾದುವೂ, ಕೊನೆಯ ಮೂರು ಕೃತಿಗಳು ಸಂಗ್ರಹಿಸಿದುವೂ ಇರುತ್ತವೆ. ಇದಲ್ಲದೆ, ಜಗದ್ಗುರುಗಳು ತಮ್ಮ 'ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಲ'ದ ದುಡ್ಡಿನಿಂದ 'ಶ್ರೀಜಗದ್ಗುರು ಮೂರುಸಾವಿರಮಠದ ಗ್ರಂಥಮಾಲೆ'ಯ ಪರವಾಗಿ ಕೆಳಗಿನ ಪುಸ್ತಕಗಳನ್ನು ಪ್ರಕಾಶಪಡಿಸಿರುವರು. ೧. ಕ್ಷೇತ್ರಜ್ಞ ಸುಮನೋವಾದ (ಸಂಶೋಧಿತ ಕನ್ನಡ ಕಾವ್ಯ) ೨. ವಿವೇಕಚಿಂತಾಮಣಿ (ಸಂಪಾದಿತ ಕನ್ನಡ ಶಾಸ್ತ್ರಗ್ರಂಥ) ೩. ಮಣಿವಚನಗಳು (ಅನುವಾದಿತ ಕನ್ನಡ ಧರ್ಮಗ್ರಂಥ, ೪. ಸದಾಚಾರ ಸಂಗ್ರಹ (ಕನ್ನಡ ಟೀಕೆಸಹಿತ ಸಂಸ್ಕೃತ ಗ್ರಂಥ) ೫. ಕುಮಾರಗೀತಾ (ಸಂಸ್ಕೃತ ಗ್ರಂಥ) ೬. ವಚನಶಾಸ್ತ್ರ ರಹಸ್ಯ (ಕನ್ನಡ ಬೃಹದ್ಗ್ರಂಥ) ೭. ಸಂಸ್ಕೃತ ಪ್ರವೇಶ (ಪಠ್ಯಪುಸ್ತಕ) ೮. ಸಂಸ್ಕೃತ ಪ್ರಕಾಶ (ಪಠ್ಯಪುಸ್ತಕ) ೯. ಸಂಸ್ಕೃತದರ್ಪಣ (ಪಠ್ಯಪುಸ್ತಕ) ೧೦. ಶಿವಾದ್ಯಷ್ಟಕ ಸ್ತೋತ್ರಮಣಿಮಾಲಾ (ಸಂಸ್ಕೃತ ಅಷ್ಟಕಗಳು) ೧೧. ಶ್ರೀಗುರು ಸಿದ್ಧೇಶ್ವರ ಸುಪ್ರಭಾತ (ಕನ್ನಡಗೀತ) ೧೨. ಶ್ರೀಮಜ್ಜಗದ್ಗುರು ಗುರುಸಿದ್ಧರಾಜೇಂದ್ರ ಮಹಾಸ್ವಾಮಿಗಳು ಮೂರುಸಾವಿರ ಮಠ ಹುಬ್ಬಳ್ಳಿ ಅವರ ಸಂಕ್ಷಿಪ್ತ ಚರಿತ್ರೆ (ಪದ್ಯ-ಕಾವ್ಯ) ೧೩. ಪಥಿಕ (ಪುನರ್ಮುದ್ರಣ) ೧೪. ಪೂಮಾಲೆ (ಪುನರ್ಮುದ್ರಣ) ೧೫. ಹೂವು ಹಣ್ಣು (ಕವನ ಸಂಕಲನ) ೧೬, ಚಿದಾನಂದದ ಚಿಲುಮೆ (ನವ್ಯಕಾವ್ಯ) ೧೭. ಜೀವನ ವಿಕಾಸ ೧೮. ಅಮೃತಬಿಂದು ೧೯. ಆಶೀರ್ವಾಣಿ.

ಇವು ಹೊರತಾಗಿ, ಕೈ. ಪಂ. ಕಂದಗಲ್ಲ ಪರ್ವತಶಾಸ್ತ್ರೀ ಕೃತ 'ಶ್ರೀಕರಡೀಶ ಚರಿತಾಮೃತ ಚಂಪೂ ಪ್ರಬಂಧ.' 'ಸುಭಾಷಿತ ಸುಧಾಝುರಿ' ಹಾಗೂ ಕೈ. ಪಂ. ಛತ್ರದಹಳ್ಳಿ ಚಂದ್ರಶೇಖರಶಾಸ್ತ್ರೀ ಪ್ರಣೀತ 'ಪ್ರಭುದೇವ ವಚನಂ'—ಈ ಮೂರುಸಂಸ್ಕೃತಿಗಳ ಪ್ರಕಾಶನ ಕಾರ್ಯವೂ ನಡೆಯಲಿದ್ದು, ಜಗದ್ಗುರುಗಳವರು ತಮ್ಮ 'ಪೀಠಾರೋಹಣದ ದ್ವಾದಶ ವಾರ್ಷಿಕ ಮಹೋತ್ಸವ" ದ ಸಂಸ್ಮರಣ ಸಂಪುಟ "ಚಿತ್ಪ್ರಭೆ" ಯೊಂದಿಗೆ ಹನ್ನೆರಡು ಗ್ರಂಥಗಳನ್ನು ಬೆಳಕಿಗೆ ತರುವವರಿದ್ದಾರೆ.

**೩ ಸಾಂಸ್ಕೃತಿಕ ರಂಗದಲ್ಲಿ:** ಜಗದ್ಗುರುಗಳು ಸೂಳಿಭಾವಿ (ತಾ. ಹುನಗುಂದ) ಯಲ್ಲಿ "ಗ್ರಂಥಾಲಯ ಭವನ"ದ ಶಂಕು ಸ್ಥಾಪನೆ ಮಾಡಿದರು; ಹುಬ್ಬಳ್ಳಿ ನಗರ ಸಹಕಾರಿ "ಬ್ಯಾಂಕಿನಲ್ಲಿ ರಾಷ್ಟ್ರಕವಿ ಶ್ರೀ ದ. ರಾ. ಬೇಂದ್ರೆಯವರ ಅಧ್ಯಕ್ಷತೆಯೊಳಗೆ ಸ್ಥಾಪಿತವಾಗಲಿದ್ದ "ಕನ್ನಡ ಸಂಘ" ದ ಉದ್ಘಾಟನೆ ಮಾಡಿದರು. ಅವರು ಹುಬ್ಬಳ್ಳಿ ನಗರಭವನದಲ್ಲಿ ನಡೆಯಲಿದ್ದ ನಾಡಹಬ್ಬವನ್ನು ಅನಾವರಣಗೊಳಿಸುತ್ತ ಡಾ. ಡಿ. ಎಸ್. ಕರ್ಕಿ., ಪ್ರೊ. ಆರ್, ವೈ. ಧಾರವಾಡಕರ ಅವರೀರ್ವರ ಸತ್ಕಾರಕೂಟಕ್ಕೆ

ತಮ್ಮ ಆಶೀರ್ವಾದನೀಯುತ್ತಿರು : ಆ ಮುಂಚೆ ಧಾರವಾಡ ಕರ್ನಾಟಕ ಮಧ್ಯವರ್ತಿ ಸಹಕಾರಿ "ಬ್ಯಾಂಕ"ನಲ್ಲಿ ರಾಜ್ಯಪ್ರಶಸ್ತಿ ವಿಜೇತರಾಗಿದ್ದ ಕೈ. ಶ್ರೀ ವ್ಹಿ. ಎಸ್. ಬಸವನಾಳರ ಸತ್ಕಾರಕೂಟದೊಳಗೆ ನೇತೃತ್ವವನ್ನು ವಹಿಸಿದ್ದರು. ನಾಲ್ವತ್ತುನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಲನದ ನಿಯೋಜಿತ ಅಧ್ಯಕ್ಷರಾಗಿದ್ದಾಗ, ಪ್ರಿ. ಆರ್. ಎಸ್. ಮುಗಳಿಯವರಿಗೆ ತಾವೇ ಸ್ವತಃ ತಮ್ಮ ಮಠದಲ್ಲಿ ಸತ್ಕಾರಕೂಟವನ್ನು ಏರ್ಪಡಿಸಿದ್ದರು. ಅವರು ಹುಬ್ಬಳ್ಳಿ "ಕಲಾಸೇವಾ ಸಂಘ"ದ ಇಪ್ಪತ್ತನೆಯ ವಾರ್ಷಿಕೋತ್ಸವವನ್ನು ಉದ್ಘಾಟಿಸುತ್ತಾ, ಗೋಕಾಕ ಶಾರದಾ ಸಂಗೀತ ನಾಟಕ ಮಂಡಲಿಯ ಒಡೆಯ : ಶ್ರೀ ಬಿ. ಟಿ. ಹೊಸಮನಿಯ ಸನ್ಮಾನವೀಯುವ ಸನ್ನಿವೇಶದಲ್ಲಿ ಉಪಸ್ಥಿತರಾಗಿದ್ದರು. ಅದರಂತೆ, ಆರ್. ಬಿ. ಪಾಟೀಲರಿಗೆ ರಾಷ್ಟ್ರಪ್ರಶಸ್ತಿ ಸಿಕ್ಕಾಗ, ಕನ್ನಡ ರಾಜ್ಯೋತ್ಸವದ ಕಾಲಕ್ಕೆ ಅವರನ್ನು ಸನ್ಮಾನಿಸುವ ಸಂದರ್ಭದಲ್ಲಿಯೂ ಉಪಸ್ಥಿತರಾಗಿದ್ದರು. ಅವರು ತಮ್ಮ "ಪರಂಜ್ಯೋತಿ" ಮಾಸಿಕದ ಪ್ರಥಮ ಸಂಚಿಕೆಯನ್ನು ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿ ಡಾ. ಎ. ಎಸ್. ಅಡಕೆಯವರಿಂದಲೂ, ತಮ್ಮ "ಪರಂಜ್ಯೋತಿ" ಮುದ್ರಣಾಲಯವನ್ನು ತ್ರಿವಿಧ ದಾಸೋಹ ಮೂರ್ತಿಗಳಾದ ಶ್ರೀ ಮ. ಪ್ರ. ಸ್ವ. ಮಹಾಂತ ಸ್ವಾಮಿಗಳು ಮುರಘಾಮಠ, ಧಾರವಾಡ ಅವರಿಂದಲೂ ಉದ್ಘಾಟನೆ ಮಾಡಿಸಿದರು. ಅವರು ಹುಬ್ಬಳ್ಳಿ ವಿಶ್ವಭಾರತಿ ಪ್ರಕಟನಾಲಯದ ಪರವಾಗಿ ಏರ್ಪಡಿಸಿದ "ಕನ್ನಡಿಗ" ಪತ್ರಿಕೆಯ ಇಪ್ಪತ್ತುಮೂರನೆಯ ವಾರ್ಷಿಕೋತ್ಸವದ ಅಧ್ಯಕ್ಷತೆ ವಹಿಸಿ ಪತ್ರಿಕೆಗೆ ಯಶಸ್ಸನ್ನು ಕೋರಿ ಆಶೀರ್ವದಿಸಿದರು. ಅವರು ಹುಬ್ಬಳ್ಳಿ ದಾಜಿಬಾನಪೇಟೆಯಲ್ಲಿ ಸ್ಥಾಪನೆಗೊಳ್ಳಲಿದ್ದ ಸಿಂಡಿಕೇಟ ಬ್ಯಾಂಕಿನ ಸುಪರ್ ಮಾರ್ಕೆಟ ಶಾಖೆಯನ್ನೂ, ಅಲ್ಲಿಯ ಆರ್ಯ ವೈಶ್ಯ ಸಹಕಾರಿ ಬ್ಯಾಂಕಿನ ಸುವರ್ಣಮಹೋತ್ಸವದ ಕಾಲಕ್ಕೆ ಸಂಸ್ಥಾಪ್ರೇರೇಪಕರ "ರೂಪಚಿತ್ರ (Photos) ಗಳನ್ನೂ ತಮ್ಮ ಅಮೃತ ಹಸ್ತದಿಂದ ಅನಾವರಣಗೊಳಿಸಿದರು; ಕಲಾಸೇವಾ ಸಂಘದ ಬೆಳ್ಳಿಹಬ್ಬಕ್ಕೂ ದಯಮಾಡಿಸಿದ್ದರು.

೪. **ಸಾಮಾಜಿಕ ರಂಗದಲ್ಲಿ :** ಹುಬ್ಬಳ್ಳಿಯಲ್ಲಿ ಹಿಂದೊಮ್ಮೆ ಹಿಂದು ಮುಸಲ್ಮಾನರಲ್ಲಿ ಮನಸ್ತಾಪ ಬೆಳೆದಿದ್ದಾಗ, ಜಗದ್ಗುರುಗಳವರು ತಮ್ಮ ಮಠದಲ್ಲಿ ಉಭಯ ಪಕ್ಷದ ಮುಖಂಡರನ್ನು ಬರಮಾಡಿಕೊಂಡು 'ಸಹಜೀವನ' ದ ಬಗೆಗೆ ಸಂದೇಶವಿತ್ತು, ಶಾಂತಿಸ್ಥಾಪನೆ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿದರು. ಅವರು ವೀರಶೈವ ಸಜ್ಜನ ಸಮಾಜ ಸುಧಾರಣಾ ಸಂಘದ ಪರವಾಗಿ ಹುಬ್ಬಳ್ಳಿಯಲ್ಲಿ ಸಮಾವೇಶವಾಗಿದ್ದ ಆರನೆಯ ಅಧಿವೇಶನದ ಅಧ್ಯಕ್ಷ ಪೀಠದಿಂದ 'ವೀರಶೈವರಲ್ಲಿ ಒಳಪಂಗಡಗಳ ಏಕೀಕರಣದ ಮಹತ್ವ' ವನ್ನು ಸಾಮಾಜಿಕರಿಗೆ ಸರಿಯಾಗಿ ಬಿಂಬಿಸಿದರು. ಹುಬ್ಬಳ್ಳಿಯಲ್ಲಿ ಶ್ರೀ ಹರಳಯ್ಯ ಸಮಾಜದವರ ಸಭೆ ಕೂಡಿದ್ದಾಗ— ಶ್ರೀಮಾತೆ ಮಹಾದೇವಿ, M.A., ಶ್ರೀ ಜಗನ್ಮಾತಾ ಅಕ್ಕಮಹಾದೇವಿ ಆಶ್ರಮ, ಧಾರವಾಡ ಅವರು ಮುಖ್ಯ ಅತಿಥಿಗಳಾಗಿ

ಆಗಮಿಸಿದ್ದಾಗ, ಜಗದ್ಗುರುಗಳವರು, ಅಧ್ಯಕ್ಷ ಪೀಠವನ್ನಲಂಕರಿಸಿ ಪುನರ್ಮುದ್ರಿತ— ಪರಿಷ್ಕೃತ— ಶಿವಶರಣ ಹರಳಯ್ಯನವರ ಜೀವನ ಚರಿತ್ರೆ' ಗ್ರಂಥವನ್ನು ಉದ್ಘಾಟಿಸಿದರು; ಸದ್ಭಕ್ತಿ–ಸದಾಚಾರಗಳಿಂದ ನಡೆದು ಶರಣ ಜೀವನ ಬಾಳಲು ಸಮಾಜದವರಿಗೆ ಉಪದೇಶಿಸಿದರು.

೫. **ಶೈಕ್ಷಣಿಕ ರಂಗದಲ್ಲಿ:** ಜಗದ್ಗುರುಗಳು ಧಾರವಾಡ 'ಕಲಾಮಂದಿರ' ಮಹಾವಿದ್ಯಾಲಯ (College) ವಾಗಿ ಪರಿವರ್ತನಗೊಳ್ಳುತ್ತಿದ್ದಾಗ; ತಾವು ೫೫,೦೦೦ ರೂ. ಯನ್ನು ನೂತನ ಮಹಾವಿದ್ಯಾಲಯದ ಪುರೋಭಿವೃದ್ಧಿಗೆ ಆಶೀರ್ವ–ದಿಸುವುದಾಗಿಯೂ, ಅದಕ್ಕೆ 'ವಿಜಯಮಹಾಂತೇಶ ಲಲಿತಕಲಾ ಮಹಾವಿದ್ಯಾಲಯ' ಎಂದು ಹೆಸರಿಡಬೇಕೆಂಬುದಾಗಿಯೂ ಅಪ್ಪಣೆಕೊಡಿಸಿದರು; ನಮ್ಮ ರಾಜ್ಯದ ಆಗಿನ ಶಿಕ್ಷಣಮಂತ್ರಿ ಶ್ರೀ ಅಣ್ಣಾರಾವ ಗಣಮುಖಿಯವರಿಂದ ಅದರ ಉದ್ಘಾಟನೆ ಮಾಡಿಸಿ–ದರು, ಮುಂದೆ ಕೆಲವು ವರ್ಷ ಕಳೆದ ಮೇಲೆ, ಅವರು ಮಹಾವಿದ್ಯಾಲಯದ ಹೊಸ ಕಟ್ಟಡಕ್ಕೆ ಅಡಿಗಲ್ಲಿಡುವ ಸಮಾರಂಭವನ್ನು ತಮ್ಮ ಕೃಪಾಹಸ್ತದಿಂದ ನೆರವೇರಿಸಿದರು. ಅವರು ಹೊಳೆ ಆಲೂರ ಶ್ರೀ ಕಲ್ಮೇಶ್ವರ ವಿವಿಧೋದ್ದೇಶ ಪ್ರೌಢಶಾಲೆಯ ನೂತನ ಕಟ್ಟಡದ ಪ್ರವೇಶೋತ್ಸವವನ್ನು ಪ್ರಾರಂಭಗೊಳಿಸಿದರು; ಇಳಕಲ್ಲದಲ್ಲಿ ಲಿಂ. ಶ್ರೀ ಮ. ಪ್ರ. ಗುರುಮಹಾಂತಸ್ವಾಮಿಗಳವರಿಗೆ ಪ್ರೇರೇಪಿಸಿ, ಶ್ರೀ ವಿಜಯಮಹಾಂತೇಶ ವಿದ್ಯಾ-ವರ್ಧಕ ಸಂಘವನ್ನು ಸ್ಥಾಪನೆಮಾಡಿಸಿದರು; ಅಲ್ಲೊಂದು ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ ತರೆಯುವದನ್ನೂ ನಿರ್ಧಾರಗೊಳಿಸಿದರು; ಮುಂದೆ ಮೂರು ವರ್ಷಕ್ಕೆ ಶ್ರೀ ವಿಜಯಮಹಾಂತೇಶ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯದ ಭವ್ಯ ಕಟ್ಟಡದ ಶಂಕುಸ್ಥಾಪನೆ ತಮ್ಮ ದಿವ್ಯ ಸನ್ನಿಧಾನದಲ್ಲಿ— ನಮ್ಮ ರಾಜ್ಯದ ಆಗಿನ ಶಿಕ್ಷಣ ಮಂತ್ರಿ— ಕೈ. ಶ್ರೀ. ಎಸ್, ಆರ್. ಕಂಠಿ ಅವರ ಅಧ್ಯಕ್ಷತೆಯಲ್ಲಿ— ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿ ಡಾ. ಡಿ. ಸಿ. ಪಾವಟೆಯವರಿಂದ ನೆರವೇರುವಂತೆ ಪ್ರೇರಣೆಗೈದರು. ಅದಕ್ಕೆ (೨೫೦೦೦) ಇಪ್ಪತ್ತೈದು ಸಾವಿರ ರೂಪಾಯಿಗಳನ್ನು ಆಶೀರ್ವದಿಸಿದ್ದಾರೆ. ಜಗದ್ಗುರುಗಳು ಕುಸೂಗಲ್ಲು ಮತ್ತು ಮಲ್ಲಾಪುರ ಕನ್ನಡ ಪ್ರಾಥಮಿಕ ಶಾಲೆಗಳ ಹೊಸ ಕಟ್ಟಡಗಳು ತಮ್ಮ ಅಮೃತ ಹಸ್ತದಿಂದ ಶಂಕುಸ್ಥಾಪನೆಗೊಳ್ಳುತ್ತಿದ್ದಾಗ. ಅವುಗಳ ನಿರ್ಮಾಣ ಕಾರ್ಯಕ್ಕೆ ಧಾರಾಳವಾಗಿ ಧನ ಸಹಾಯವಿತ್ತು ಆಶೀರ್ವದಿಸಿದರು. ಅವರು 'ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘವನ್ನು ಸಂಸ್ಥಾಪಿಸಿ; ಅದರ ಕೆಳಗೆ ಮಹಿಳಾ ಮಹಾವಿದ್ಯಾಲಯ, ಬಾಲಿಕೆಯರ ಪ್ರೌಢಶಾಲೆ, ಬಾಲಿಕೆಯರ ಕನ್ನಡ ಪ್ರಾಥಮಿಕಶಾಲೆ ಮತ್ತು ಶ್ರೀ ಜಗದ್ಗುರು ಗಂಗಾಧರ ರಾಷ್ಟ್ರಭಾಷಾ ವಿದ್ಯಾಲಯಗಳು ಸ್ಥಾಪನೆಗೊಂಡು ತಲೆಯೆತ್ತಿ ನಿಲ್ಲುವಂತೆ ಮಾಡಿದರು. ಅವರು ಬೆಳಗಾಂವಿಯಲ್ಲಿ ಶ್ರೀ. ಮ. ಪ್ರ. ನಾಗನೂರು ರುದ್ರಾಕ್ಷಿಮಠದ ಶಿವಬಸವಮಹಾಸ್ವಾಮಿಗಳವರು ಹೊಸದಾಗಿ ಕಟ್ಟಿಸಿದ ದೊಡ್ಡ ಪ್ರಮಾಣದ ವಿದ್ಯಾರ್ಥಿ ಗೃಹ— ಪ್ರಸಾದ ನಿಲಯಗಳ ಸಮಾರಂಭದ ಅಧ್ಯಕ್ಷತೆವಹಿಸಿದ್ದರು; ಮುಂಚಿನ

ಗುರುಶಿದ್ಧೇಶ್ವರ ಪ್ರಸಾದ ನಿಲಯದ ಆಜೀವ ಅಧ್ಯಕ್ಷರಾಗಿದ್ದಾರೆ. ಅವರು ತಮ್ಮ 'ಮಹಿಳಾ ಮಹಾವಿದ್ಯಾಲಯದ ಮೂರನೆಯ ವಾರ್ಷಿಕೋತ್ಸವದ ಅಧ್ಯಕ್ಷಪೀಠದಿಂದ 'ಸ್ತ್ರೀ ಶಿಕ್ಷಣ' ವನ್ನು ಕುರಿತು ಸುಂದರವಾಗಿ ಭಾಷಣ ಮಾಡಿದರು.

೬. **ರಾಷ್ಟ್ರೀಯ ರಂಗವಲ್ಲಿ:** ಜಗದ್ಗುರುಗಳವರು ಅಖಿಲ ಭಾರತ ಆಕಾಶ ವಾಣಿ ಧಾರವಾಡ ಕೇಂದ್ರದ ಮುಖಾಂತರ (ಆಗಾಗ ತಮ್ಮ ಅಮೌಲ್ಯ ವೇಳೆಯನ್ನು ಮೀಸಲಿರಿಸುತ್ತ) ವಿಚಾರಗೋಷ್ಠಿ— ವಿಶೇಷ ಕಾರ್ಯಕ್ರಮಗಳಲ್ಲಿ ತಮ್ಮ ಅಮೋಘ ಜ್ಞಾನಾನುಭವ ದಾನಮಾಡಿ, ರಾಷ್ಟ್ರೀಯ ಜಾಗೃತಿಗೆ ಅನುವುಗೊಳಿಸಿಕೊಟ್ಟಿದ್ದಾರೆ:—

ಅ) ಕ್ರಿ. ಶ, ೧೯೬೬ ರಲ್ಲಿ: ಅವರು ಕರ್ನಾಟಕದ ಯುವಜನಾಂಗವನ್ನುದ್ದೇಶಿಸಿ 'ಕಾಯಕವೆ ಕೈಲಾಸ' ದ ಮೇಲೆಯೂ, ಆಗಸ್ಟ್ ೧೫ ರಂದು ಭಾರತೀಯ-ರನ್ನುದ್ದೇಶಿಸಿ 'ಸ್ವಾತಂತ್ರ್ಯ ರಕ್ಷಣೆ' ಯ ಮೇಲೆಯೂ, ಕನ್ನಡ ರಾಜ್ಯೋತ್ಸವ ದಿನದಂದು ಕನ್ನಡಿಗರನ್ನುದ್ದೇಶಿಸಿ 'ನೀತಿ ಮತ್ತು ಸಮಾಜದ' ದ ಮೇಲೆಯೂ ಉಪನ್ಯಾಸವಿತ್ತರು.

ಬ) ಕ್ರಿ. ಶ, ೧೯೬೭ ರಲ್ಲಿ: ಅವರು 'ಹಾನಗಲ್ಲು ಶಿವಯೋಗಿಗಳ ಪುಣ್ಯತಿಥಿ'ಯಂದು 'ಮಾನವ ಕುಲದೀಪಕಯೋಗಿ ಕುಮಾರ' ಎಂಬ ವಿಷಯದ ಮೇಲೆಯೂ, ಬಸವಜಯಂತಿಯಂದು 'ಕನ್ನಡನಾಡಿನ ಕಾರಣ ಪುರುಷ ಬಸವಣ್ಣನವರು' ಎಂಬ ವಿಷಯದ ಮೇಲೆಯೂ, ಬಸವಕಲ್ಯಾಣದ ಶ್ರೀಬಸವೇಶ್ವರ ಅಷ್ಟಶತಮಾನೋ-ತ್ಸವ ದಿನದಂದು 'ಬಸವ ಸಂದೇಶ'ದ ಮೇಲೆಯೂ ರಾಷ್ಟ್ರೀಯ ಭಾವೈಕ್ಯತಾ ದಿನಾಚರಣೆಯ ದಿನದಂದು 'ಅವಿಭಕ್ತಂ ವಿಭಕ್ತೇಷು' ಎಂಬ ವಿಷಯದ ಮೇಲೆಯೂ. ಗೀತಾಜಯಂತಿಯದು 'ಗೀತೆಯ ಒಳಗುಟ್ಟು' ಎಂಬ ವಿಷಯದ ಮೇಲೆಯೂ ಪ್ರವಚನ ನೀಡಿದರು.

ಕ) ಕ್ರಿ. ಶ. ೧೯೬೮ ರಲ್ಲಿ: ಅವರು 'ಶೀಲವೇ ಧರ್ಮ' ವನ್ನು ಪ್ರಸ್ತಾಪಿಸಿ. ಯಾವತ್ತೂ ವಿಶ್ವವಿದ್ಯಾಲಯಗಳ ವಿದ್ಯಾರ್ಥಿ ಲೋಕವನ್ನುದ್ದೇಶಿಸಿ, ನಾಲ್ಕೂ ಬಾನುಲಿಯ ಕೇಂದ್ರಗಳಲ್ಲಿ ಏಕಕಾಲಕ್ಕೆ ಪ್ರಸಾರವಾಗುವಂತೆ ವ್ಯಾಖ್ಯಾನಮಾಡಿ ದರು; ಆಯಾ ಸಂದರ್ಭಗಳಿಗೆ ತಕ್ಕಂತೆ. ಶ್ರೀರಾಮಕೃಷ್ಣ. ಚನ್ನಬಸವಣ್ಣ. ಅಕ್ಕನಾಗಮ್ಮ— ಈ ಮಹಾವ್ಯಕ್ತಿತ್ರಯರ ಮೇಲೆ ಮಾರ್ಮಿಕ ಉಪನ್ಯಾಸ ನೀಡಿದರು.

ಡ) ಕ್ರಿ. ಶ. ೧೯೬೯ ರಲ್ಲಿ; ವಿಚಾರಗೋಷ್ಠಿಗಳ ಮುಖಾಂತರ 'ಸ್ವಾಮಿವಿವೇಕಾನಂದ' ಹಾಗೂ 'ಸ್ವಾಮಿವಿವೇಕಾನಂದರ ರಾಜಯೋಗ'; 'ಮಹಾತ್ಮಾಗಾಂಧೀಜಿ' ಹಾಗೂ 'ಮಹಾತ್ಮಾಗಾಂಧೀಜಿ ದೃಷ್ಟಿಯಲ್ಲಿ ಮಾನವ ಮತ್ತು ಆತನ ಸಂಪತ್ತು ಇವುಗಳ ಸಂಬಂಧ'—ಈ ಪ್ರಸಂಗಗಳ ಮೇಲೆ ಚಿಕ್ಕಚಿಕ್ಕ ಉಪನ್ಯಾಸಗಳನ್ನಿತ್ತರು.

ಇದರಂತೆ. ಮಹಾಸನ್ನಿಧಿಯವರು ಕ್ರಿ. ಶ. ೧೯೭೦–೧೯೭೧ ರಲ್ಲಿ "ಸತ್ಯವೇ ದೇವರು" ಮೊದಲಾದ ಪ್ರಸಂಗಗಳ ಮೇಲೆ ಭಾಷಣ ಮಾಡಿದರು. ಆಕಾಶವಾಣಿ

ಕೇಂದ್ರದವರು ಘನ ಸನ್ನಿಧಿಯವರ "ಅಮೃತವಾಣಿ"ಯನ್ನು ತಮ್ಮ "ಧ್ವನಿ ಗ್ರಹಣ ಯಂತ್ರ" (Tape Record) ದಲ್ಲಿ ಸಂಚಯಿಸಿಕೊಂಡಿದ್ದು, ಕಾಲ ಕಾಲಕ್ಕೆ ಆ ಪ್ರಸಾದ ವಾಣಿಯನ್ನು ಪ್ರಸಾರಗೊಳಿಸುತ್ತಿದ್ದಾರೆ.

ಜಗದ್ಗುರುಗಳು ರಾಷ್ಟ್ರೀಯ ಪ್ರಗತಿಗೆ ಅನುಗುಣವಾಗಿಯೇ ತಮ್ಮ ಕಾರ್ಯ ಕ್ರಮಗಳನ್ನು ಹಮ್ಮಿಕೊಂಡಿರುತ್ತಾರೆ. ಹಿಂದೊಮ್ಮೆ ರಾಷ್ಟ್ರಪತಿ ದಿ. ಡಾ. ಬಾಬು ರಾಜೇಂದ್ರ ಪ್ರಸಾದರು ಮೂರು ಸಾವಿರಮಠವನ್ನು ಸಂದರ್ಶಿಸಿ, ಜಗದ್ಗುರುಗಳ ಕಾರ್ಯವನ್ನು ಪ್ರಶಂಸಿಸಿ ಶುಭಾಶೀರ್ವಾದ ಪಡೆದುಕೊಂಡು ಹೋದುದುಂಟು. ಉಜ್ವಲ ದೇಶಭಕ್ತರಾಗಿದ್ದುಕೊಂಡು ಉಚ್ಚ ಹುದ್ದೆಯಲ್ಲಿದ್ದ ಸರ್ವಶ್ರೀ ದಿ. ಪ್ರೊ. ಹುಮಾಯೂನ ಕಬೀರ, ಕೈ. ಎಸ್. ಆರ್. ಕಂಠಿ, ಡಾ. ಆರ್. ಆರ್. ದಿವಾಕರ, ಬಿ. ಡಿ. ಜತ್ತಿ, ಆರ್. ಎಂ, ಪಾಟೀಲ, ಡಾ. ಕೆ. ಕೆ. ಹೆಗಡೆ, ಎಸ್. ನಿಜಲಿಂಗಪ್ಪ, ವೀರೇಂದ್ರ ಪಾಟೀಲ, ರಾಮಕೃಷ್ಣ ಹೆಗಡೆ, ಅಣ್ಣಾರಾವ ಗಣಮುಖಿ, ಶ್ರೀಮತಿ ಸೌಂದರಮ್ಮ, ಕೆ. ವ್ಹಿ. ಶಂಕರೇಗೌಡ ಮೊದಲಾದವರು ಜಗದ್ಗುರುಗಳ ದರ್ಶನಾ ಶೀರ್ವಾದ ಪಡೆದಿದ್ದಾರೆ; ಮಹಾ ಸನ್ನಿಧಿಯವರ ಮಹತ್ಕಾರ್ಯಗಳನ್ನು ಮನವಾರೆ ಮೆಚ್ಚಿದ್ದಾರೆ. ಮಹಾಪಾದರವರು ಹಿಂದೊಮ್ಮೆ ರಾಷ್ಟ್ರೀಯ ರಕ್ಷಣಾನಿಧಿಗೆ ತುಂಬ ಧನಸಂಪತ್ತಿಯನ್ನು ಆಶೀರ್ವದಿಸಿರುವರು.

## ವ್ಯಕ್ತಿತ್ವ ವ್ಯಾಪ್ತಿ:

**ಇತರ ಗಣ್ಯ ವ್ಯಕ್ತಿಗಳ ಸಂದರ್ಶನ:** ಮೇಲ್ಕಾಣಿಸಿದ ಮಹಾಜನರಲ್ಲದೆ, ಇತರ ಪ್ರತಿಷ್ಠಿತ ಪ್ರತಿಭಾವಂತ ಸದ್ಗೃಹಸ್ಥರನೇಕರು ಸಂದರ್ಭೋಚಿತವಾಗಿ ಜಗ ದ್ಗುರುಗಳವರ ಸಂದರ್ಶನ ಲಾಭ ಹೊಂದಿ ಅವರ ಅನುಪಮ ಕರ್ತೃತ್ವಶಕ್ತಿಯನ್ನು ಮುಕ್ತಕಂಠದಿಂದ ಶ್ಲಾಘಿಸಿದ್ದಾರೆ. ಅವರಲ್ಲಿ ಕೆಲವರ ಹೆಸರು ಹೇಳುವುದಾದರೆ: ೧. ಶ್ರೀ ಜಯಚಾಮರಾಜೇಂದ್ರ ಒಡೆಯರು, ಮೈಸೂರು ರಾಜ್ಯಪಾಲರು. ೨. ರ್‍ಯಾಂ. ಡಿ. ಸಿ. ಪಾವಟೆ, ಉಪಕುಲಪತಿಗಳು–ಕರ್ನಾಟಕ ವಿಶ್ವವಿದ್ಯಾಲಯ. ೩. ಪೂಜ್ಯ ಶಿವಕುಮಾರ ಮಹಾಸ್ವಾಮಿಗಳು, ಸಿರಿಗೆರೆ ತರಳಬಾಳು ಜಗದ್ಗುರುಗಳು. ೪. ಡಾ. ವಿ. ಕೆ. ಆರ್. ವಿ. ರಾವ, ಉಪಕುಲಪತಿಗಳು: ದಿಲ್ಲಿ ವಿಶ್ವವಿದ್ಯಾಲಯ ೫. ಡಾ. ಆರ್. ಎಸ್. ಮುಗಳಿ, ಪ್ರಾಚಾರ್ಯರು : ಸಾಂಗ್ಲಿ ವಿಲಿಂಗ್ಡನ್ ಕಾಲೇಜು. ೬. ಸಂತ ಆಚಾರ್ಯ ವಿನೋಬಾ ಭಾವೆ.

## 'ಮಠ'ದ ಆಡಳಿತದಲ್ಲಿರುವ ಸಂಘ–ಸಂಸ್ಥಾದಿಗಳು :

೧. ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಮಹಾವಿದ್ಯಾಲಯ.
೨. ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಚಿಕಿತ್ಸಾಲಯ, ಘಟಪ್ರಭೆ.
೩. ಶ್ರೀ ಜಗದ್ಗುರು ಗಂಗಾಧರ ಔಷಧಶಾಲೆ.

೪. ಶ್ರೀ ಜಗದ್ಗುರು ಗಂಗಾಧರ ಗಂಡುಮಕ್ಕಳ ಮಾದರಿಯ ಪ್ರಾಥಮಿಕಶಾಲೆ.
೫. ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಲ.
೬. ಶ್ರೀ ಜಗದ್ಗುರು ಗಂಗಾಧರ ಶಿವಾದ್ವೈತ ಗ್ರಂಥ ಸಂಶೋಧನಾ ಸಂಸ್ಥೆ.
೭. ಶ್ರೀ ಜಗದ್ಗುರು ಮೂರುಸಾವಿರಮಠದ ಗ್ರಂಥಮಾಲೆ
೮. ಶ್ರೀ ಲಿಂಗರಾಜ ಪ್ರಸಾದನಿಲಯ,
೯. ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಾರ್ವಜನಿಕ ವಿದ್ಯಾರ್ಥಿ ನಿಲಯ.
೧೦, ಶ್ರೀ ಅಕ್ಕಿ ಉಳುವಪ್ಪ ವಿದ್ಯಾರ್ಥಿನಿಲಯ.
೧೧. ಶ್ರೀ ಅಸುಂಡಿ ಚನ್ನಮಲ್ಲಪ್ಪ, ಕಲ್ಯಾಣಮಂಟಪ.
೧೨. ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಗ್ರಂಥಾಲಯ
೧೩. ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘ, ಹುಬ್ಬಳ್ಳಿ
೧೪. ಶ್ರೀ ಜ. ಮೂ. ವಿ. ಸಂಘದ ಮಹಿಳಾ ವಿದ್ಯಾಲಯ
೧೫. " " " ಬಾಲಿಕೆಯರ ಪ್ರೌಢಶಾಲೆ
೧೬. ಶ್ರೀ ಜಗದ್ಗುರು ಗಂಗಾಧರ ಹೆಣ್ಣುಮಕ್ಕಳ ಮಾದರಿಯ ಪ್ರಾಥಮಿಕ ಶಾಲೆ
೧೭. " " " ರಾಷ್ಟ್ರೀಯ ವಿದ್ಯಾಲಯ
೧೮. ಶ್ರೀಕುಮಾರೇಶ್ವರ ಶಿವಯೋಗಿ ಸಂಘ
೧೯. ಶ್ರೀ ಗುರುಶಿದ್ಧೇಶ್ವರ ಜ್ಯೋತಿಷ್ಯ ವೈದಿಕ ಪಾಠಶಾಲೆ
೨೦. " " " ಸಂಗೀತ ಪಾಠಶಾಲೆ
೨೧. ಶ್ರೀ ಜಗದ್ಗುರು ಮೂರುಸಾವಿರಮಠದ 'ಪರಂಜ್ಯೋತಿ ಮುದ್ರಣಾಲಯ' ಮತ್ತು ಪರಂಜ್ಯೋತಿ ಕಾರ್ಯಾಲಯ
೨೨. " " " ಕಾರ್ಯಾಲಯ.
೨೩. ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಮೂರುಸಾವಿರಮಠ ವಿದ್ಯಾರ್ಥಿನಿಲಯ. ಬೆಳಗಾಂವಿ
೨೪. ಶ್ರೀ ಜಗದ್ಗುರು ಗಂಗಾಧರ ಹತ್ತಿ ಅರೆಯುವ ಮತ್ತು ಅರಳೆ ಗಂಟು ಕಟ್ಟುವ ಯಂತ್ರಾಲಯ
೨೫. ಗೋಕಾಕ ತಾಲೂಕಿನ ಮಲ್ಲಾಪೂರದಲ್ಲಿರುವ ಹುಬ್ಬಳ್ಳಿ ಮೂರುಸಾವಿರ ಮಠದ ಶಾಖಾಮಠವಾದ ಗೂಬಲ ಗುಡ್ಡದ ಮಠ.

ಇವುಗಳಲ್ಲಿ ೧ ರಿಂದ ೮ ವರೆಗಿನವು ಲಿಂ. ಶ್ರೀ ಜಗದ್ಗುರು ಗುರುಸಿದ್ಧ ಮಹಾ ಮಹಾಸ್ವಾಮಿಗಳ ಕಾಲದಲ್ಲಿ ಸ್ಥಾಪಿತವಾದುವಿರುತ್ತವೆ; ೯ ರಿಂದ ೨೩ ರ ವರೆಗಿನವು ಈಗಿನ ಜಗದ್ಗುರುಗಳವರ ಕಾಲದಲ್ಲಿ ಸ್ಥಾಪನೆಗೊಂಡಿರುತ್ತವೆ; ಆದರೆ ಕೊನೆಯದು ಲಿಂ. ಜಗದ್ಗುರು ಗಂಗಾಧರ ಮಹಾಸ್ವಾಮಿಗಳವರ ಕಾಲದಲ್ಲಿ ನಿರ್ಮಿತವಾಗಿರುತ್ತದೆ,

ಇವುಗಳಲ್ಲಿ ಮಂಟಪ–ಚಿಕಿತ್ಸಾನಿಲಯುಗಳು ಸಾಮಾಜಿಕ ಸೇವೆಗೆ ಅಣಿಯಾಗಿರುತ್ತವೆ; ಶಾಲೆ, ವಿದ್ಯಾಲಯ, ವಿದ್ಯಾವರ್ಧಕ ಸಂಘಗಳು ಶೈಕ್ಷಣಿಕ ಸೇವೆಗೆ ಸಜ್ಜಾಗಿರುತ್ತವೆ;

ಮಂಡಲ ಸಂಶೋಧನಾಸಂಸ್ಥೆ ಶಿವಯೋಗಿ ಸಂಘಗಳು ಧಾರ್ಮಿಕ ಸೇವೆಗೆ ಸಿದ್ಧವಾಗಿರುತ್ತವೆ; ಗ್ರಂಥಾಲಯ-ಗ್ರಂಥಮಾಲೆ ಸಾಹಿತ್ಯಕ ಸಾಂಸ್ಕೃತಿಕ ಸೇವೆಗೆ ಟೊಂಕ ಕಟ್ಟಿರುತ್ತವೆ; ಉಳಿದುವು ಮಠದ ಸಾರ್ವತ್ರಿಕ ಸೇವೆಗೆ ಬದ್ಧ ಕಂಕಣವಾಗಿರುತ್ತವೆ.

## 'ಮಠ'ದ ಸಹಾಯ ಪಡೆದ ಸಂಘ-ಸಂಸ್ಥಾದಿಗಳು

೧. ಲಿಂಗಾಯತ ವಿದ್ಯಾವರ್ಧಕ ನಿಧಿ ಸಮಿತಿ, ಧಾರವಾಡ
೨. ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆ, ಬೆಳಗಾಂವಿ
೩. ಶ್ರೀ ಮದ್ವೀರಶೈವ ಶಿವಯೋಗಮಂದಿರ
೪. ಗೋರಕ್ಷಣ ಸಂಸ್ಥೆ, ಹುಬ್ಬಳ್ಳಿ
೫. ಶ್ರೀ ಜಗದ್ಗುರು ಗುರುಸಿದ್ಧೇಶ್ವರ ವಿದ್ಯಾನಿಲಯ; ಬೆಳಗಾಂವಿ
೬. ಗಡ ಹಿಂಗ್ಲಜ ಹೈಸ್ಕೂಲು, ಗಡ ಹಿಂಗ್ಲಜ
೭. ಅನಾಥ ಬಾಲಕಾಶ್ರಮ, ಹುಬ್ಬಳ್ಳಿ
೮. ಶ್ರೀ ಜಗದ್ಗುರು ಗಂಗಾಧರ ವಾಣಿಜ್ಯ ಮಹಾವಿದ್ಯಾಲಯ, ಹುಬ್ಬಳ್ಳಿ
೯. ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪ್ರಾಥಮಿಕ ಶಿಕ್ಷಕರ ಪ್ರಶಿಕ್ಷಣ ಮಹಾವಿದ್ಯಾಲಯ ಹುಬ್ಬಳ್ಳಿ
೧೦. ಶ್ರೀ ಕಾಡಸಿದ್ಧೇಶ್ವರ ಕಲಾ ಮಹಾವಿದ್ಯಾಲಯ. ಹುಬ್ಬಳ್ಳಿ
೧೧. ವಿಜಯ ಮಹಾಂತೇಶ ಪ್ರೌಢಶಾಲೆ. ಹುನಗುಂದ
೧೨. ಶ್ರೀ ಪಿ. ಸಿ. ಜಾಬಿನ ವಿಜ್ಞಾನ ಮಹಾವಿದ್ಯಾಲಯ, ಹುಬ್ಬಳ್ಳಿ
೧೩. ಶ್ರೀ ಜಗದ್ಗುರು ಗಂಗಾಧರ ಗಾಂಧಿ ಸ್ಮಾರಕ. ನೇತ್ರ ಚಿಕಿತ್ಸಾ ಪ್ರಶಿಕ್ಷಣ ಕೇಂದ್ರ ಹುಬ್ಬಳ್ಳಿ
೧೪. ಕೈ. ಶ್ರೀ ಶಿವಲಿಂಗಪ್ಪ ಬಸವನಾಳ ಸ್ಮಾರಕ ನಿಧಿ ಸಮಿತಿ, ಧಾರವಾಡ
೧೫. ಮಹಿಳಾ ಮಂಡಲ (ಅಕ್ಕನ ಬಳಗ), ಹುಬ್ಬಳ್ಳಿ
೧೬. ಮಹಿಳಾ ವಿದ್ಯಾಪೀಠ, ಹುಬ್ಬಳ್ಳಿ
೧೭. ಶ್ರೀ ಕುಮಾರೇಶ್ವರ ವೈದಿಕ ಪಾಠಶಾಲೆ, ಹಾವೇರಿ
೧೮. ಶ್ರೀ ಕುಮಾರೇಶ್ವರ ಕೃಪಾಪೋಷಿತ ಸಂಗೀತ ಸಾಹಿತ್ಯ ಮಹಾವಿದ್ಯಾಲಯ ಗದಗ
೧೯. ಶ್ರೀ ಕಾಡಸಿದ್ಧೇಶ್ವರ ಪ್ರೌಢಶಾಲೆ, ಹುಕ್ಕೇರಿ
೨೦. ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಆಯುರ್ವೇದ ಚಿಕಿತ್ಸಾಲಯ, ಧಾರವಾಡ
೨೧. ಶ್ರೀ ಕುಮಾರೇಶ್ವರ ಉಚಿತ ಆಯುರ್ವೇದ ಚಿಕಿತ್ಸಾಲಯ, ಧಾರವಾಡ
೨೨. ಶ್ರೀ ಜಗದ್ಗುರು ಗಂಗಾಧರ ಉಚಿತ ಆಯುರ್ವೇದ ಚಿಕಿತ್ಸಾಲಯ, ಚಿತ್ತರಗಿ
೨೩. ಚಿತ್ತರಗಿ ನಿರಂಜನ ಪೀಠ, ಇಳಕಲ್ಲ
೨೪. ಶ್ರೀ ವಿಜಯಮಹಾಂತೇಶ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ. ಇಳಕಲ್ಲ
೨೫. ಶ್ರೀ ವಿಜಯ ಮಹಾಂತೇಶ ಲಲಿತಕಲಾ ಮಹಾ ವಿದ್ಯಾಲಯ, ಹುಬ್ಬಳ್ಳಿ

೨೬. ಕನ್ನಡ ಗಂಡು ಮಕ್ಕಳ ಪ್ರಾಥಮಿಕ ಶಾಲೆ, ಮಲ್ಲಾಪುರ
೨೭. ಕನ್ನಡ ಗಂಡು ಮಕ್ಕಳ ಪ್ರಾಥಮಿಕ ಶಾಲೆ, ಕುಸೂಗಲ್ಲ
೨೮. ಭಾರತ ಕೇಂದ್ರ ಸರಕಾರ (ರಾಷ್ಟ್ರೀಯ ರಕ್ಷಣಾ ನಿಧಿ ಸಮಿತಿ)
೨೯. ಮೈಸೂರು ರಾಜ್ಯ ಸರಕಾರ (ವಿದ್ಯಾ ಶಾಖೆ ಬಡವಿದ್ಯಾರ್ಥಿ ನಿಧಿ ಸಮಿತಿ)
೩೦. 'ಬಸವ ಭವನ' ನಿರ್ಮಾಣ ಸಮಿತಿ, ಮುಂಬಯಿ
೩೧. ಬಸವ ಸಮಿತಿ ಬೆಂಗಳೂರು
೩೨. ಹುಬ್ಬಳ್ಳಿ ಅಕ್ಕಿ ಹೊಂಡದಲ್ಲಿರುವ ಹೊಸ ಮಠ

ಇವುಗಳಲ್ಲಿ ೧ ರಿಂದ ೪ ರ ವರೆಗಿನವು ಲಿಂ. ಶ್ರೀ ಜಗದ್ಗುರು ಗಂಗಾಧರ ಮಹಾಸ್ವಾಮಿಗಳ ಕಾಲದಲ್ಲಿ ವಿದ್ಯಾರ್ಥಿ ವೇತನ, ಸಂಪತ್ತಿದಾನ ಭೂದಾನಗಳ ರೂಪದಲ್ಲಿ ಸಹಾಯವನ್ನು ಹೊಂದಿದವು. ೫ ರಿಂದ ೧೪ ರ ವರೆಗಿನವು ಲಿಂ. ಶ್ರೀ ಜಗದ್ಗುರು ಗುರುಸಿದ್ಧ ಮಹಾಸ್ವಾಮಿಗಳ ಆಡಳಿತದಲ್ಲಿ ಹಲವಾರು ಲಕ್ಷ ರೂ. ಯ ಧನಸಹಾಯವನ್ನು ಮಾತ್ರ ಪಡೆದುವು; ೧೫ ರಿಂದ ೩೧ ರ ವರೆಗಿನವು ಈಗಿನ ಜಗದ್ಗುರುಗಳ ಆಳಿಕೆಯಲ್ಲಿ ಬಹುಮಟ್ಟಿಗೆ ಸಂಪತ್ತಿದಾನ, ಸ್ವಲ್ಪ ಮಟ್ಟಿಗೆ ಸ್ಥಳದಾನಗಳ ರೂಪದಲ್ಲಿ ನೆರವನ್ನು ದೊರಕಿಸಿರುತ್ತವೆ.

ಇದಲ್ಲದೆ, ಮಠದ ಪರಂಪರೆಯಂತೆ ಈಗಿನ ಜಗದ್ಗುರುಗಳವರು ಕನ್ನಡಿಗ ಶರಣ ಸಾಹಿತ್ಯ, ಅಮರವಾಣಿ, ಪಂಚಾಕ್ಷರ ಪ್ರಕಾಶ ಮುಂತಾದ ಪತ್ರಿಕೆಗಳಿಗೆ ಧನರೂಪದಿಂದ ಆಶೀರ್ವಾದ ಮಾಡಿರುವರು; ಕೀರ್ತನಕಾರ ಕಲಾವಿದ–ಗ್ರಂಥಕರಿಗೆ ಕಾಣಿಕೆ ನೀಡಿ ಪ್ರೋತ್ಸಾಹಿಸಿರುವರು. ಮೆಡಿಕಲ್-ಇಂಜನಿಯರಿಂಗ್-ಕಾಮರ್ಸ್, ಆರ್ಟ್ಸ್, ಸೈನ್ಸ್, ಕಾಲೇಜುಗಳಲ್ಲಿ ಓದುತ್ತಿರುವ ಅನೇಕ ಜಾಣ–ಒಳ್ಳೆಯ–ಬಡ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಶುಲ್ಕ ಮತ್ತು ವಿದ್ಯಾರ್ಥಿ ವೇತನಗಳನ್ನು ದಯಪಾಲಿಸುತ್ತಿರುವರು. ಅಲ್ಲದೆ ಕೆಳಗೆ ಕಾಣಿಸಿದವರು ತಂತಮ್ಮ ಉದ್ದೇಶ ಸಾಧನೆಗಾಗಿ ಸನ್ನಿಧಿಯವರಿಂದ ಸಾವಿರಾರು ರೂ. ಯ ಸಹಾಯ ಹೊಂದಿರುವರು:—

೧ ಪ್ರೊ. ಗಂಗಾಧರಯ್ಯ ಭೂಮರಡ್ಡಿ ಇಂಜನಿಯರಿಂಗ್ ಕಾಲೇಜ ಹುಬ್ಬಳ್ಳಿ (ಪರದೇಶಕ್ಕೆ ಉಚ್ಚ ಶಿಕ್ಷಣಕ್ಕಾಗಿ ಹೋಗುವಾಗ)
೨ ಗಂಗಾಧರಯ್ಯ ಮಠದ (ಪರದೇಶಕ್ಕೆ ಉಚ್ಚ ಶಿಕ್ಷಣಕ್ಕಾಗಿ ಹೋಗುವಾಗ)
೩ ಪೂಜ್ಯ ಇಳಕಲ್ಲ ಗುರುಸಿದ್ಧದೇವರು (ಈಗ ಕೆಳದಿ ಬೃಹನ್ಮಠಾಧ್ಯಕ್ಷ: ಶ್ರೀ ಷ. ಬ್ರ. ಪಂ. ಗುರುಸಿದ್ದ ಶಿವಾಚಾರ್ಯಸ್ವಾಮಿಗಳು – ಇವರು ಕಾಶಿಯಲ್ಲಿ ಅಭ್ಯಸಿಸುತ್ತಿದ್ದಾಗ)
೪ ಪರಮಪೂಜ್ಯ ಶ್ರೀ ಶಾಂತವೀರದೇಶಿಕೇಂದ್ರರು, ಕುಂಭಕೋಣ (ಧರ್ಮೋತ್ಕರ್ಷ ಕಾರ್ಯಕ್ಕೆ ೨೦೦೦ ರೂ.)

**ಸನ್ನಿಧಿ ಕೈಗೊಂಡ ಸಿದ್ಧರಾಮ ಕಾಯಕ:** ಜಗದ್ಗುರುಗಳು ತಮ್ಮ ಮಹಾಮಠದ ಜೀರ್ಣೋದ್ಧಾರ ಕಾರ್ಯದೊಂದಿಗೆ, ಮಠದ ಮುಂದಿನ ಥರವಾಥ ಬಯಲಲ್ಲಿ

ಉಪಯುಕ್ತ ಕಟ್ಟಡಗಳನ್ನು ಕಟ್ಟಿಸುವಲ್ಲಿ ಅಪಾರ ಧನರಾಶಿಯು ವೆಚ್ಚವೆಸಗಿದ್ದಾರೆ; ಅವರು ಯೋಜಿಸಿದ ಕಟ್ಟಡ ನಿರ್ಮಾಣ ಯೋಜನೆಗೆ ದೈವುಳ್ಳ ಭಕ್ತಾದಿಗಳೂ ಅಧಿಕ ಪ್ರಮಾಣದಲ್ಲಿ ದೇಣಿಗೆ ಸಲ್ಲಿಸಿ ನೆರವಾಗಿದ್ದಾರೆ. ಆ ಕಟ್ಟಡಗಳು ಕೆಳಗೆ ಕಾಣಿಸಿ-ದಂತಿರುತ್ತವೆ :—

೧ ಶ್ರೀ ಅಕ್ಕಿ ಉಳವಪ್ಪ ವಿದ್ಯಾರ್ಥಿನಿಲಯ
೨ ಶ್ರೀ ಅಸುಂಡಿ ಚನ್ನಮಲ್ಲಪ್ಪ ಕಲ್ಯಾಣಮಂಟಪ
೩ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಾರ್ವಜನಿಕ ವಿದ್ಯಾರ್ಥಿನಿಲಯ ...
೪ ,, ,, ,, ಗ್ರಂಥಾಲಯ
೫ ,, ,, ,, ವೀರಶೈವ ಪುರಾತನ ಗ್ರಂಥ ಸಂಶೋಧನಾಲಯ
೬ ಶ್ರೀ ಜಗದ್ಗುರು ಮೂರುಸಾವಿರಮಠದ "ಪರಂಜ್ಯೋತಿ" ಮುದ್ರಣಾಲಯ ಮತ್ತು ಕಾರ್ಯಾಲಯ,
೭ ಶ್ರೀ ಜಗದ್ಗುರು ಗಂಗಾಧರ ಪ್ರೌಢಶಾಲೆ ಹಾಗೂ ಶ್ರೀ ಜಗದ್ಗುರು ಮೂರು-ಸಾವಿರಮಠ ವಿದ್ಯಾವರ್ಧಕ ಸಂಘದ ಬಾಲಿಕೆಯರ ಪ್ರೌಢಶಾಲೆ.
೮ ಶ್ರೀ ಜಗದ್ಗುರು ಗಂಗಾಧರ ಕನ್ನಡ ಪ್ರಾಥಮಿಕ ಗಂಡುಮಕ್ಕಳ ಮಾದರಿಯ ಶಾಲೆ ಮತ್ತು ಶ್ರೀ ಜಗದ್ಗುರು ಗಂಗಾಧರ ಕನ್ನಡ ಪ್ರಾಥಮಿಕ ಹೆಣ್ಣುಮಕ್ಕಳ ಮಾದರಿಯ ಶಾಲೆ.
೯ ಪೂರ್ವಜರ ಅನೇಕ ಗದ್ದುಗೆಗಳುಳ್ಳ 'ಸಮಾಧಿ ಮಂಟಪ'.
೧೦ ಶ್ರೀ ಜಗದ್ಗುರು ಮೂರುಸಾವಿರಮಠದ ಹೆಸರಿನಲ್ಲಿ 'ಅಂಚೆಯ ಕಾರ್ಯಾಲಯ'.
೧೧ ಆಧುನಿಕ ಶೈಲಿಯಲ್ಲಿ ಕಟ್ಟಿಸಿದ ಮನೋಹರವಾದ ಒಳಮಹಾದ್ವಾರ.
೧೨ ಅತ್ಯಾಧುನಿಕ ರೀತಿಯಲ್ಲಿ, ಆರು ಅಂತಸ್ತುಗಳಲ್ಲಿ ಕಟ್ಟಿಸಿದ ಭವ್ಯ-ದಿವ್ಯ ಹೊರ ಮಹಾದ್ವಾರ : 'ಗಡಿಯಾರ ಸೌಧ'.
೧೩ ಲಿಂಗರಾಜ ಪ್ರಸಾದನಿಲಯ.
೧೪ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಮಾಧಿ ಮಂಟಪ.
೧೫ ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘದ ಮಹಿಳಾ ಮಹಾವಿದ್ಯಾಲಯ (ಇನ್ನೂ ಪೂರ್ತಿಯಾಗಿಲ್ಲ).
೧೬ ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘದ ಸಾರ್ವಜನಿಕ ವಿದ್ಯಾರ್ಥಿನಿ-ನಿಲಯ (ಇನ್ನೂ ಪೂರ್ತಿಯಾಗಿಲ್ಲ).

ಒಟ್ಟಿಗೆ, ಹಿಂದಿನ ಶ್ರೀ ಜಗದ್ಗುರು ಗಂಗಾಧರ ಮಹಾಸ್ವಾಮಿಗಳವರು ನವ ಸಮಾಜ ನಿರ್ಮಾಣಕಾರ್ಯಕ್ಕೆ ನಾಂದಿಹಾಕಿದರು ; ಲಿಂ. ಜಗದ್ಗುರು ಗುರುಸಿದ್ಧ ಮಹಾಸ್ವಾಮಿಗಳು ಆ ಕಾರ್ಯವನ್ನು ನಾನಾಮುಖವಾಗಿ ಬೆಳೆಸಿದರು ; ಈಗಿನ ಶ್ರೀ ಜಗದ್ಗುರು ಗಂಗಾಧರ ಮಹಾಸ್ವಾಮಿಗಳವರು ಅದನ್ನು ಮತ್ತಷ್ಟು ಬೆಳೆಸಿ ಬೆಳಗಿ ಸುತ್ತಿದ್ದಾರೆ. ವಿವೇಕಪೂರ್ಣವಾದ ವಿಚಕ್ಷಣವಾದ ವ್ಯಾವಹಾರಿಕವಾದ ಧಾರ್ಮಿಕ,

ಸಾಮಾಜಿಕ, ಶೈಕ್ಷಣಿಕ ದೃಷ್ಟಿಕೋನವಿರುವ ಅವರ ಆದರ್ಶ ಧ್ಯೇಯ–ಧೋರಣಗಳು ನಾಡಿನ ಸರ್ವಾಂಗೀಣ ಪ್ರಗತಿಗೆ ಅತ್ಯಂತ ಪೋಷಕವಾಗಿರುವುವೆಂಬುದನ್ನು ಅವರು ಕೈಗೆತ್ತಿಕೊಂಡು ಪೂರ್ತಿಗೊಳಿಸಿದ ಕಾರ್ಯಗಳೂ, ಅವರು ನೀಡಿದ ಮಹಾದಾನಗಳೂ, ಅವರು ಸ್ಥಾಪಿಸಿದ ಸಂಘ–ಸಂಸ್ಥೆಗಳೂ ಹಾಗೂ ಸ್ವದೇಶ–ವಿದೇಶಗಳಲ್ಲಿ ಅವರು ಕೈಗೊಂಡ ಚಟುವಟಿಕೆಗಳೂ ಎತ್ತಿಹೇಳುತ್ತಿವೆಯಲ್ಲದೆ ; ಅವೆಲ್ಲವೂ ಅವರ ಔದಾರ್ಯ–ಔನ್ನತ್ಯಗಳಿಗೂ ಅವರ ಅದ್ವಿತೀಯ ಕರ್ತೃತ್ವದೀಪ್ತಿ–ವ್ಯಕ್ತಿತ್ವವ್ಯಾಪ್ತಿಗಳಿಗೂ ನಿಚ್ಚಳ ನಿದರ್ಶನವಾಗಿ ನಿಂತಿವೆ. ಎಳೆತನದಲ್ಲಿಯೇ ಘನತರವಾದ ಸತ್ಯಧರ್ಮದ ತಿರುಳನ್ನು ಹೀರಿಕೊಂಡು, ಶಿವಯೋಗಮಂದಿರದ ಅಧ್ಯಾತ್ಮದ ಗರಡಿಯಲ್ಲಿ ಸಾಧನೆಗೈದು, ಕ್ರಿಯಾ ಸಿದ್ಧಿಯನ್ನು ಪಡೆದ ಆ ಚಿತ್ತರಗಿ ವಿಜಯಮಹಾಂತದೇವರು ಜಗನ್ಮಾನ್ಯ ಜಗದ್ಗುರುಗಳಾಗಿ ನವೋನವವಾದ 'ಸರ್ವೋದಯ ಸಮಾಜ'ದ ನಿರ್ಮಾಣಕಾರ್ಯದಲ್ಲಿ ಹಗಲಿರುಳೂ ಹೆಣಗಾಡುತ್ತಿರುವುದು ಕರ್ನಾಟಕದ ಪುಣ್ಯವಲ್ಲದೆ ಮತ್ತೇನು ? ಭಾರತದ ಭಾಗ್ಯವಲ್ಲದೆ ಇನ್ನೇನು ?—ಎಂಬುದಾಗಿ ಶ್ರೀ ಎಸ್. ಡಿ. ಇಂಚಲರವರ ವಿಚಾರಧಾರೆಯಲ್ಲಿ ನಿಂದು ಒಡನುಡಿಯಬಹುದಲ್ಲವೆ ? ಜಗದ್ಗುರುಗಳವರು ಇನ್ನೂ ದೊಡ್ಡ ಯೋಜನೆಗಳನ್ನು ಹಮ್ಮಿಕೊಂಡಿದ್ದು, ಅವೆಲ್ಲವೂ ಅವರ ಅಂತಃಪ್ರೇರಣೆಯ ಮೇರೆಗೆ ಬೇಗನೆ ಕಾರ್ಯರಂಗಕ್ಕಿಳಿಯಲಿ ! ಅವರ ಅಂತಶ್ಶಕ್ತಿ ಇನ್ನಷ್ಟು ಬೆಳೆ ಬೆಳೆದು ಅವರಿಂದ ಇನ್ನೂ ಹೆಚ್ಚಾಗಿ ಸಮಾಜಜಾಗೃತಿಯಾಗಲಿ, ಧರ್ಮಜಾಗೃತಿಯಾಗಲಿ !! □

# ಜಗದ್ಗುರು ಗಂಗಾಧರ ರಾಜಯೋಗೀಂದ್ರ

ಈಶ್ವರ ಸಣಕಲ್ಲ

೧

ಶ್ರೀಮನ್ಮಹಾರಾಜನಿರಂಜನ ಜಗದ್ಗುರು
ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿ !
ಮೂರುಸಾವಿರಮಠಗಳೈಸಿರಿಯಕಲ್ಪತರು
ಹೂಬಳ್ಳಿ, ಮುಗಮುಗಿಪುದಿನಿಗಂಪರಸನೇಮಿ !
ರಮ್ಯಹರ್ಮ್ಯೋಪಮ ಸುವಿದ್ಯಾಲಯ-ಶ್ರೇಣಿ !
ನರ್ತಿಪಳು ವಿವಿಧ ವಿನ್ಯಾಸದಲಿ ರಸ-ವಾಣಿ !
ರಮಿಸುವಳು ಪ್ರಾಸಾದ-ಸಮ-ಮಠದಿ ವರ-ರಮೆಯುಂ !
ತಪಿಸುವಳು ಏಕಾಂತ ಮೌನದಲಿ ಶ್ರೀಯುಮೆಯು !
ಈ ಪೀಠದಲಿಯೊಂದ ಪದವಿಡುತಲಿನ್ನೊಂದ
ಕರುನಾಡ, ಹೊರನಾಡಿನಾಚೆ, ವಾರಿಧಿಯಾಚೆ
ಚಾಚುತೆ, ಜಪಾನಿನಲಿಯಧ್ಯಾತ್ಮ ಧ್ವಜವೆತ್ತಿ
ವೀರಶೈವಶ್ರೀಯನೊರೆದ ಪಟು ! ಎದೆಬಾಚಿ !
ಹೊಗಳಿಕೆಯು ಹೆಗ್ಗಡಲು ಘೂರ್ಮಿಸಿತು ಜಗಸುತ್ತಿ !
ವಿಕ್ರಮ-ದ್ವಯದ ವಿಕ್ರಮದ ಪರಿಯೇನಂದ !

೨

ವಿದ್ಯಾರ್ಥಿ-ಸರಸಪ್ರಸಾದನಿಲಯದ ಜಸವು !
ಕಲ್ಯಾಣಮಂಟಪದ ವರ-ವಧೂ-ಸಮರಸವು !
ಎದ್ಗ್ರಂಥ ಭಾಂಡಾರದೂರ್ಧ್ವಲೋಕದ ಬೆಳಕು !
ಭೂತ-ಗರ್ಭದ ಗಾಢಗೂಢತಮ ಗಹ್ವರಕೆ
ಭೂತಗನ್ನಡಿ ಹಿಡಿವ ಸಂಶೋಧನೆಯು ತಳಕು !

ಗರಡಿ-ಸಾಧನೆಯೋಗ-ಸಾಧನೆಗಳಂಬ್ಬರಕೆ
ಬೆದರಿ ಚದರಿವೆ ದುಷ್ಟಗ್ರಹಕುಲವು ಭೀತಿಯಲಿ
ದಿಗ್ದೇಶ ಕಿರಣೆಸಿವೆ ಓ ಪರಂಜ್ಯೋತಿಯಲಿ !
ಪೀಠಸ್ಥ ಪದಪದವಿ ವರ್ಷದ್ವಾದಶಗಳಲಿ
ದ್ವಾದಶಾದಿತ್ಯ–ಸೋಜ್ಜ್ವಲ–ಪ್ರಭೆಯು ಮಸಗಿಹುದು !
ಸ್ಪಂದಿಪ ಪವಾಡವೇ ಬಿತ್ತರೆತ್ತರಗಳಲಿ
ಬಯಲ ಸ್ಪರ್ಧಿಸಿ ಬೆರಗ ನಿಬ್ಬೆರಗ ನೆನಸಿಹುದು !
ಹೊರಗೆ ಯಿನಿತೊಂದದ್ಭುತವು ವೈಭವದಿ ಬೆಳಗೆ
ಎಂತಿಹುದೊ ಅಂತಸ್ತಪೋಜ್ಜ್ವಲ–ಪ್ರಭೆಯೊಳಗೆ ! □

# ಹೋಗಿ ಬಾ ಗಂಗಾಧರ !

ಜಿ. ಎಚ್. ಹನ್ನೆರಡುಮಠ

[ಪೂಜ್ಯ ಜಗದ್ಗುರುಗಳು ವಿಶ್ವಧರ್ಮಗಳ ಶಾಂತಿ ಪರಿಷತ್ತಿನಲ್ಲಿ ಭಾಗವಹಿಸಲು
ಜಪಾನಿಗೆ ತೆರಳುವಾಗ ಹಾಡಿದ ಕವನ]

ಗೆಲುವಕ್ಕೆ ಓ ಯೋಗಿ ಗಂಗಾಧರೇಶ್ವರನೆ
ಹೋಗಿ ಬಾ ಗೆಲುವಿಂದ ಗುಡಿಯ ಹಿಡಿದು
ಕನ್ನಡೆತಿ ಕೂಗಿಹಳು ಓ ಕೇಳು ಕೇಳಿಲಿ
ಹೋಗಿ ಬಾ ಗುರುವರ್ಯ ಎಂದು ಮಣಿದು

ಶರಣರಾಡಿದ ಮಾತು ಅನುಭಾವ ಮನ್ಮಥವ
ಸುರಿದು ಬಾ ಆ ದೂರ ನಾಡಿನಲ್ಲಿ
ವಿಜ್ಞಾನ ಸುಂದರಿಯ ಭೋಗಭೂಮಿಯ ಮೇಲೆ
ಶರಣ ಪಾದವನೂರಿ ನೀ ಬೆಳಗಿ ಬಾ

ದಯೆಯೆ ಧರ್ಮದ ಮೂಲ ವಿಶ್ವಧರ್ಮದ ಸಾರ
ಶಾಂತಿ ಸೈರಣೆ ತಾನೆ ಅಂತರಾರ್ಥ
ಸಕಲ ಜೀವರ ಲೇಸು ನಮ್ಮ ಶರಣರ ಕನಸು
ನನಸು ಗೈಯಲು ಹೋಗು ಭಾಗ್ಯ ಪುರುಷ

ಕೋಟ್ಯಂತ ಕಂಠಗಳ ಉತ್ಕಂಠ ಭಾವದಲಿ
ಕನ್ನಡದ ಕುಲಕೋಟಿ ಕೂಗುತ್ತಿದೆ
ನಮಗಾಗಿ ನಮ್ಮೆದೆಯ ಶರಣ ಸಿದ್ಧರಿಗಾಗಿ
ಹೋಗಿ ಬಾ ಗೆಲುವಿಂದ ಎನ್ನುತ್ತಿದೆ

ಓ ನೋಡು ಹಕ್ಕಿಗಳು ಮೂಡಲದ ಮೋಡಗಳು
ಮಂದ ಮಾರುತ ಗಾನ ತೀಡುತ್ತಿವೆ
ಗಗನ ದಾರಿಯ ಮೇಲೆ ನಕ್ಷತ್ರ ಮಿನುಗಿಹವು
ಚಂದ್ರಮನ ಕಿರಣಗಳಂ ಚೆಲ್ಲುತ್ತಿವೆ

ವಿಶ್ವದೇವತೆ ಎದ್ದು ಚಲುವಿಂದ ಸಿಂಗರಿಸಿ
ಆರತಿಯ, ಮಾಡಿಹಳು ಗಂಗಾಧರ
ದೇವತ್ವ ಬಾಳಿಸುತ ದಾನವತೆ ಕೊನೆಗೊಳಿಸು
ಎಂದವಳು ಕೇಳಿಹಳು ಗಂಗಾಧರ

ಓ ಹೇಳು ವಿಶ್ವಕ್ಕೆ ರಕ್ತ ರಾತ್ರಿಯ ಸವಿಗೆ
ಘೋರ ಯದ್ಧದ ಅಸ್ತ್ರ ಶಸ್ತ್ರಾಸ್ತ್ರಕೆ
ಶಾಂತಿ ಮಂತ್ರವ ಹೇಳು ಜಗಕೆ ಮಂಗಳ ಹೇಳು
ಬಾರೆಂದು ಬರಹೇಳು ಶಿವಯೋಗಕೆ

ನೋಡಲ್ಲಿ ಹಾನ್ಗಲ್ಲ ಕುಮಾರ ಸ್ವಾಮಿಯ ಜೊತೆಗೆ
ಬಂದಿಹನು ಆ ವಿಜಯ ಮಹಾಂತೇಶನು
ಹುಬ್ಬಳ್ಳಿ ಹುಚ್ಚೀಶ ವರಸಿದ್ಧ ಗುರುಸಿದ್ಧ
ಅಥಣೀಯ ಮುರುಗೇಶ ಬಂದಿರುವರು

ಆ ಅವರ ಹರಕೆಗಳ ನಿತ್ಯಾತ್ಮ ಹರುಷಗಳ
ಮುದದಿಂದ ನೀ ಹೊತ್ತು ಹೋಗಿ ಬಾರಾ
ಗಂಗಾಧರೇಶ್ವರನೆ ಸೂರ್ಯ ರಶ್ಮಿಯ ಶಿವನೆ
ಹೋಗಿ ಬಾರೈ ವಿಜಯ ತೋರಿ ಬಾರಾ. □

## ಸಂಸ್ಮರಣೆ

ಪಂ. ಪುಟ್ಟರಾಜಕವಿ ಗವಾಯಿಗಳು

ತಾಳ-ಝಂಪ್ತಾಲ

ಶ್ರೀಮನ್ನಿರಂಜನ ಜಗದ್ಗುರುವರೇಣ್ಯನೇ |
ಪ್ರೇಮಾಬ್ಧಿ ಗಂಗಾಧರನೆ ರಾಜಯೋಗೀಂದ್ರ || ಪ ||

ಹಾನಗಲ್ಲ್ ಕುಮಾರ ಶಿವಯೋಗಿ ಕರುಣೆಯಿಂ |
ಮಾನೀತನೆ ಸಸಿವಾಳ ಗ್ರಾಮದ ಬೃಹನ್ ಮಠದೆ ||
ನೀನವತರಿಸದಿರಲು ಜಗದಲ್ಲಿ ಚಿತ್‌ಪ್ರಭೆಯು |
ಮಾನನಿಧಿಯತಿವರನೆ ಇಂದು ಬೆಳಗುತ್ತಿಹುದೆ || ೧ ||

ನಿಷ್ಕಾಮಿ ನಿರ್ಮೋಹಿ ಸತ್‌ಪ್ರೇಮಿ ಸನ್ಮೋಹಿ |
ಚಿತ್‌ಕಾಮಿ ಚಿನ್ಮೋಹಿ ಚಿತ್‌ಪ್ರೇಮಿ ಚಿನ್ಮಯನೆ ||
ಭೋಕಾಮ ಹರನೆ ವರಶಿವಯೋಗಮಂದಿರವ |
ನೀ, ಕಾಣದಿರಲೆಲ್ಲಿ ಚಿತ್‌ಪ್ರಭೆಯಂ ಬೆಳಗುವದು || ೨ ||

ಮೊಗ ಬೆಳಗು ಬಂಗಾರ ಮೈ ಬೆಳಗು ಬಂಗಾರ |
ನಗೆ ಬೆಳಗು ಬಂಗಾರ ಬಾಳ್ ಬೆಳಗು ಬಂಗಾರ ||
ಜಗದ ಬಾಳ್ ಬಂಗಾರ ಗೆಯ್ಯಲೆಂದಿಹ ಕಿಳಿದೆ |
ಮಿಗೆ ಬೆಳಗುತಿಹುದೆ ಪರದೇಶದೊಳ್ ಚಿತ್‌ಪ್ರಭೆಯು || ೩ ||

ಮೂರುಸಾವಿರಮಠದ ಜೀರ್ಣೋದ್ಧೃತಿಯಗೆಯ್ದು |
ತೋರಿ ಶ್ರೀಸಿದ್ಧರಾಮನ ಕೀರ್ತಿಯಂ ಪಡೆದು ||
ವೀರಶೈವವ ವಿಶ್ವಧರ್ಮಮೆಂದುರೆ ನುಡಿದು |
ತೋರಿಸಿದ ಜಸದಪ್ರಭೆ ಚಿತ್ ಪ್ರಭೆಯು ಬೆಳಗುತಿದೆ || ೪ ||

ನುಡಿಚಂದ ನಡೆಚಂದ ನುಡಿನಡೆಯು ಪಡಿ ಚಂದ |
ಮೃಡರೂಪ ನಂ ನರನ ಗೆಯ್ವ ನಿಮ್ಮಡಿ ಚಂದ ||
ದೃಡಯಶಂ ಗುರುಸಿದ್ಧನಿಂ ಬಂದ ಪಿಡಿ ಚಂದ |
ಪಿಡಿದ ರೀತಿಯ ಚಿತ್‍ಪ್ರಭೆಯು ಬೆಳಗುತಿದೆ ಚಂದ || ೫ ||

□

# ಬೆಳಕಿಂ ಬೆಳಕಿನೆಡೆ

ಸಂಗಮೇಶ ಹೊಸಮನಿ

( ಜಪಾನದ ಕಿಯೋಟೋದ ವಿಶ್ವಧರ್ಮ-ಶಾಂತಿ ಸಮ್ಮೇಲನಕ್ಕೆ ತೆರಳುವಾಗ
ಶ್ರೀ ಜಗದ್ಗುರುಗಳವರಿಗೆ ಬೀಳ್ಕೊಡುವಾಗ ಹಾಡಿದ ಗೀತೆ)

ಬೆಳಕಿಂ ಬೆಳಕಿನೆಡೆ ಸಾಗುತಿದೆ ದೀವಟಿಗೆ
ಭಸ್ಮಭೂಷಿತ ಕರವನೆತ್ತಿ
ನೆಲ ಜಲ ದಿಕ್ ದಿಗಂತವನೆಸುತ್ತಿ
ಅಧ್ಯಾತ್ಮದಾನಂದ ಶಿಖರ ಹತ್ತಿ ॥ ೧ ॥

ಭಾರತಿಯ ದಿವ್ಯಾತ್ಮ ಬೆಳಕಾಗಿದೆ
ಅಧ್ಯಾತ್ಮ ಕಣ್ಣಾಗಿ ಕೈಗಿಳಿದಿದೆ
ಕೋಟಿಕೋಟಿಯ ಎದೆಯ ದೀಪಾವಳಿ
ಬೆಳಕಿನಲಿ ನಾನು ನೀ ಬತ್ತಿಯ ಸುಳಿ ॥ ೨ ॥

ಗುರುದೇವ, ಅರವಿಂದ, ಪರಮಹಂಸ
ವಿವೇಕರಾನಂದ ಮೈಗೂಡಿದೆ
ಸತ್ಯಸನಾತನವು ಜೋಡಾಗಿದೆ
ಇಂದಿನೀ ಪಯಣಕ್ಕೆ ಈಡಾಗಿದೆ ॥ ೩ ॥

ವಿಜ್ಞಾನ ಸುಜ್ಞಾನ ಒಂದುಗೂಡುವ ಕಾಲ
ಗಡಿಗೆರೆಯ ನೇರುತಿದೆ ಗುರುದೇವದೀಪ
ತಂಗಾಳಿ ತೀಡುತಿದೆ ಮುಂಗೋಳಿ ಕೂಗುತಿದೆ
ಗಡಿಯಂಚು ಹೊಂಬಣ್ಣ ಚಂಬಣ್ಣ ರೂಪ ॥ ೪ ॥

ಚಿತ್ರಚಿತ್ರಾರದಲಿ ಚಿತ್ಕಳೆಯ ಬೆಳಕು
ಸುಕುಮಾರ ಕೃಪೆಯಲ್ಲಿ ಥಳಕು ಥಳಕು
ವಿಜಯ ಮಹಾಂತೇಶನಡಿ ಅದಕು ಇದಕು || ೫ ||

ಕೈಗೂಡಿ ಬಂದಿಹುದು ಕಾವ್ಯಮಾಲಾ
ಹೃದಯದರವಿಂದ ಬಗೆ ನಾಡಲೀಲಾ
ಭಾರತಿಯ ಕೀರುತಿಗೆ ಧೂಪಾರತಿ
ಈ ಯೋಗ, ಈರಾಗ ಚಿರ ಕಿರೂತಿ || ೬ ||

# ಶಿವಯೋಗ ಶ್ರೀಸತ್ತ್ವ

ಸಿಂಪಿ ಲಿಂಗಣ್ಣ

ದೇವಗಂಗೆಯನೊಲಿಸಿ ಗಂಗಾವತರಣಕ್ಕೆ
ದಾರಿಮಾಡುವ ಕೆಚ್ಚು ತಮ್ಮ ಘನಪೀಠಕ್ಕೆ ||

ಶ್ರೀಗಂಗಾಧರನಿಗದು ಸುಲಭಸಾಧ್ಯದ ಕಾರ್ಯ
ರಾಜೇಂದ್ರಯೋಗೀಂದ್ರ ಇವರಿಗಿದೆ ಆ ವೀರ್ಯ ||

ಬುದ್ಧಿಯಾಚೆಯ ಧರ್ಮ ಅಧ್ಯಾತ್ಮ–ಶಿವಯೋಗ
ಅದರ ಜಾಗೃತಿಯೊಂದೆ ಕಳೆಯುವದು ಭವರೋಗ ||

ಸಾಕ್ಷರತೆ ಗುರಿಯಲ್ಲ ಇಂದಿನೀ ಶಿಕ್ಷಣಕೆ
ಸಂಸ್ಕೃತಿಯು ಬೆಳೆದು ಬರೆ ನೆಮ್ಮದಿಯು ಜೀವನಕೆ ||

ತಾವೇರ್ದ ಪಟ್ಟಕ್ಕೆ ಹನ್ನೆರಡು ತುಂಬಿತ್ತು
ಹನ್ನೆರಡು ವರ್ಷಗಳ ಪಟ್ಟವೆಂದೆನಿಸಿತ್ತು ||

ಅಗೊ ಅಲ್ಲಿ ನಡೆಯುತಿದೆ ಮಂಟಪದ ಶ್ರೀಪೂಜೆ
ಇಗೊ ಸರ್ವಧರ್ಮಸಮ್ಮೇಲನದ ಹಿರಿಯೋಜೆ ||

ಅಲ್ಲಿ ಆ ಗುರುವೃಂದ ಒಂದೆಡೆಗೆ ಸೇರಿಹುದು
ಇಲ್ಲಿ ಈ ಕವಿವರ್ಗ ಮೇಳಯಿಸಿ ಸಾರಿಹುದು ||

ಸು–ಕುಮಾರ ಸ್ವಾಮಿಗಳ ಶತಮಾನದುತ್ಸವವು
ಯತಿಸಿದ್ಧಲಿಂಗೇಶರೈನೂರರುತ್ಸವವು ||

ಆ ಅಖಿಲಭಾರತ ಶಿವಾನುಭವ ಸಂಘಟನೆ
ಕೀರ್ತನದ ಕಲೆಯುವರ ಕೂಟಪೂರಕ ಘಟನೆ ||

ಸಂಗೀತ ಸಮ್ಮೇಲನಕೆ ಸ್ಥಾನ ಮರೆತಿಲ್ಲ
ಮಹಿಳೆಯರ ಸಮ್ಮೇಲನವು ತಾನು ಹೊರತಿಲ್ಲ ||

ಆಧ್ಯಾತ್ಮ ಸಾಹಿತ್ಯ ಗ್ರಂಥ ಪ್ರಕಟನೆ ಮೊದಲು
ಹಲವು ಭಾಷೆಗಳಲ್ಲಿ ಹನ್ನೆರಡು ಗ್ರಂಥಗಳು ||

ಕಾರ್ಯವಿಸ್ತಾರವಿದು ಬೆರಗುಗೊಳಿಸುವ ಮೋಡಿ
ಹಣದ ಹೊಳೆ ಇದಕಾಗಿ ಹರಿದು ಬಂದಿತು ಕೋಡಿ ||

ಈ ಎಲ್ಲ ಅದ್ಭುತವು ನಾಡ ಮೈಗೂಡಿದರೆ
ಬೆಳಗಾಗುವಷ್ಟರಲಿ ಸ್ವರ್ಗವುಳಿಯದು ಬೇರೆ ||

ವರ ಪವಾಡದ ಮಹಿಮೆ ಮೊದಲೆಮಗೆ ತಿಳಿದಿತ್ತೆ
ಘನಪೀಠದಾ ಹಿರಿಮೆ ಮನಗಂಡೆವೀ ಹೊತ್ತೆ ||

ಪಟ್ಟಪಟ್ಟಕು ಪೀಠಮಹಿಮೆ ವರ್ಧಿಸುತಿರಲಿ
ಮಠದ ಪಟ್ಟಕೆ ದಿವ್ಯಶಕ್ತಿ ಸ್ಪರ್ಧಿಸುತಿರಲಿ ||

ಪೂಜ್ಯಭಾವನೆ ಥಾಳಗೊಳ್ಳಲೀ ನಾಡಿನಲಿ
ಶಿವಯೋಗ ಶ್ರೀಸತ್ತ್ವ ನೆಲೆಗೊಳಲಿ ನಾಡಿಯಲಿ || □

# ನಿಮ್ಮ ಸನ್ನಿಧಿಯಲ್ಲಿ

ಗಂಗಪ್ಪ ವಾಲಿ

ಕನಸುಗಂಗಳ ಕನ್ನಡಿಯಲಿ ಮಂಗಳಚಿತ್ರ
ಮನವು ನಿಮ್ಮದು ಲೋಕಹಿತಚಿಂತನದ ಕ್ಷೇತ್ರ
ಹಸ್ತರೇಖೆಗಳೆಲ್ಲ ಸ್ತುತ್ಯಕೃತಿಗಳ ಸೂತ್ರ
ನುತ್ಯ ಸದ್ಗುರು ನೀವು ನಾಡಿನಲಿ ಸರ್ವತ್ರ

ಶರಣಸಂಸ್ಕೃತಿ ಪರಂಜ್ಯೋತಿಯನು ಬೆಳಗುತಿಹ
ಪರತರ ಸುಬೋಧ ಸಾರಾಮೃತವನುಣಿಸುತಿಹ
ಕವಿತಾಗುಣೋಪೇತ ಧರ್ಮಪೀಠಾಧ್ಯಕ್ಷ
ಶಿವತತ್ತ್ವ ಸಾಹಿತ್ಯಗುಣಭರಿತಕೃತಿದಕ್ಷ

ನಿಮ್ಮ ಶಕ್ತಿಯ ಬಿಂಬ ಶ್ರೀಮಠದ ಗೋಪುರವು
ನಿಮ್ಮಿಂದ ಕಳೆಯೇರುತಿಹುದು ಹುಚ್ಚನ ಪುರವು
ಹನ್ನೆರಡು ವರುಷಗಳು ತುಂಬಿದೀ ಸಮಯದಲಿ
ನನ್ನೆರಡು ನುಡಿಹೂವು ನಿಮ್ಮ ಸನ್ನಿಧಿಯಲ್ಲಿ

□

# ಸಾಸಿರ ನಮನ !

ಪಂಚಾಕ್ಷರಿ ಹಿರೇಮಠ

ಈ ಸಚರಾಚರ ಶಿವನ
ರೂಪವೆನ್ನುವ ಪ್ರಭುವೆ

ಮಮತೆ ಪ್ರೀತಿಯ ಬೀಜ
ಮನುಜರೆದೆಯಲಿ ಬಿತ್ತಿ

ಚಿತ್ತದಲಿ ಮೈ ಮುರಿವ
ವೈರ ಸ್ವೈರವ ಕಳೆದು

ಜಗಕೆ ನೀಡು ಕರುಣೆ
ದಯೆಯ ಬುತ್ತಿ !

ಹತ್ತು ದೇಶಗಳ ವಿಸ್ತೃತ
ಆಕಾಶದಡಿಯಲಿ ನಿಂದು

ಬಾಂಧವ್ಯದ ಬೆಸುಗೆಯನು ಬೆಸೆದು
ಭಾರತೀಯ - ವೀರಶೈವ - ಸಂಸ್ಕೃತಿಯ

ಅಂತರಾತ್ಮವ ತೆರೆದು ತೋರಿ
' ದಯೆಯೇ ಧರ್ಮದ ಮೂಲ ' ವೆಂದು

' ಅಹಿಂಸಾ ಪರಮೋ ಧರ್ಮಃ ' ಎಂದು
ಲೋಕಕೆಲ್ಲ ಸಾರಿದ ವಿಭೂತಿನೀನಂ

' ಸರ್ವೇ ಜನಾಃ ಸುಖಿನೋ ಭವಂತು '
ಅಣು ಅಣುವಿನಲಿ ಹೊಮ್ಮಿ

ಅಲ್ಲಿ ಇಲ್ಲಿ ಎಲ್ಲಲೂ ಶುಭ
ತರಂಗಿತ ಗಾನ – ಲೋಕವೆಲ್ಲ ನಾದಬ್ರಹ್ಮ !

ಜಾಗತಿಕ ಧರ್ಮವೇದಿಕೆಯಲಿ ನಿಂದು
' ಧರ್ಮೋರಕ್ಷತಿ ರಕ್ಷಿತಃ ' ಅನ್ಯಮಲ್ತು

ಎಂದುದ್ಘೋಷಿಸಿದ ವೀರ ವಿರಾಗಿ
ನಿನಗಿದೋ ಸಾಸಿರ ನಮನಗಳು !

# ಗಂಗಾಲಹರಿ

" ಶಾರದಾ"

ಗಂಗೆಯನು ಹರಿಸಿರುವೆ, ನೀ ಗಂಗಾಧರ ।
ಕಂಗೊಳಿಪ ' ಹೂಬಳ್ಳಿ ' ಬಳಸಿ ಬರುವಂತೆ ॥ ಪ ॥

' ಮೂರು ಸಾವಿರ ' ಗಿರಿಯ,
ಏರಿ ನಿಂತಿಹೆ ಗುರುವೆ,
ಮೂರಾರಿ ಮೈದಳೆದು, ಬುವಿಗೆ ಬಂದಂತೆ ।
ದಾರಿಗರು ಭವದೊಳಗೆ,
ನೀರಡಿಸಿ ಬಂದಿರಲು,
ಕಾರುಣ್ಯ ಗಂಗೆಯನು ನೀ ಹರಿಸುತಿರುವೆ. ॥ ೧ ॥

' ವಾಣಿ ' ರೂಪವ ತಾಳಿ,
ಕಾಣುವಳು ಸಿರಿಗಂಗೆ
ಮಾಣಿಕದ ಕಾಂತಿಯಲಿ ' ಪರಂಜ್ಯೋತಿ ' ಯಲಿ ।
ಜ್ಞಾನ ಮಂದಿರಗಳಲಿ,
ದಾನಮಯಿ ತಾನಾಗಿ
ಆನಂದ ಲಹರಿಯನು ಚೆಲ್ಲಿ ಸೂಸುವಳು ॥ ೨ ॥

ಸಾಗರಾಂತರದೊಳಗೆ,
ಜಾಗತಿಕ ಮೇಳವಿರೆ,
ಸಾಗಿ ನೀ ಪೋಗಿದ್ದೆ, ಯೋಗಿ ರಾಜೇಂದ್ರ
ಆಗ ನೀ ಹರಿಸಿದ್ದ,
ವಾಗ್ಧಾರೆಯನುಪಮವು,
ಜಾಗತಿಕ ಶಾಂತಿಗದು ದಿವ್ಯ ಚೇತನವು ॥ ೩ ॥

ನಿನ್ನ ' ಪಟ್ಟ ' ದ ಗಂಗೆ
ತನ್ನ ಪಾತ್ರವ ಹಿಡಿದು.
' ಹನ್ನೆರಡು ' ಯೋಜನವ ಹರಿದು ಬಂದಿಹಳು ।
ಇನ್ನು ಮುಂದಕೆ ಸಾರಿ
ತನ್ನ ಮಹಿಮೆಯ ಬೀರಿ,
' ರನ್ನ ' ದುತ್ಸವವನ್ನು ಮೆರೆಯಲೆನ್ನುವೆವು || ೪ ||

# ಜಪಾನಿನಿಂದ ಮರಳಿದ ಜಗದ್ಗುರುಗಳಿಗೆ

ಆಯ್. ಎಸ್. ಬಿದರಿ

ಓ ಗುರುವೆ ಸದ್ಗುರುವೆ ಜಗಕೆ ನೀಂ ಗುರುವಾದೆ
ಅಜ್ಞಾನ ಕತ್ತಲಲಿ ತೊಳಲುತಿಹ ಭಕ್ತರಿಗೆ
ಜ್ಞಾನ ದಾಸೋಹದಾ ಬುತ್ತಿಯಂ ನೀಡಿದಿರಿ
ಧರ್ಮದೀಕ್ಷೆಯನವರ ಬಾಳ ಬೆಳಗಿದಿರಿ || ೧ ||

ಹೂಬಳ್ಳಿ ಶಹರಕೆ ಹೂವಿನೋಪಾದಿಯಲಿ
ಮೂಡಿದಿರಿ ಅರಳಿದಿರಿ ಬೀರಿದಿರಿ ಗಂಧವನು
ಘಮಘಮಿಪ ಗಂಧವನು ಭಕ್ತರೆಲ್ಲರ್ಗೆ
ಅವರ ಬದುಕಿಗೆ ಆಗಿ ಶ್ರೀಗಂಧದಂತೆ || ೨ ||

ಶಿಕ್ಷಣವೆ ಜನರುಸಿರು ಅದುವೆ ತಮ್ಮದು ಎಂದು
ಶಿಕ್ಷಣದ ಕಾರ್ಯದಿ ತೊಡಗಿದಿರಿ ತಾವು
ವಿಪುಳ ದ್ರವ್ಯವನಿತ್ತು ಸಂಸ್ಥೆಗಳ ಕಟ್ಟಿದಿರಿ
ಮನವಾರೆ ಹರಸುತ್ತ ಅಹರ್ನಿಶಿಪರ್ಯಂತ || ೩ ||

ಜನಿತಕ್ಕೆ ತಾಯಾಗಿ ಪೋಷಣೆಗೆ ಸುಧೆಯಾಗಿ
ಹಿಂದುಳಿದ ಭಗಿನಿಯರ ಉತ್ಕರ್ಷಗೆಂದು
ಒಂದಾಗಿ ಮುಂದಾಗಿ ಸಾಗಿಬಂದಿರಿ ತಾವು
ಶಿಕ್ಷಣವ ನೀಡುತಲಿ ಧರ್ಮದೀಕ್ಷೆಯಲಿಂತು || ೪ ||

ಬಡವ ಬಲ್ಲಿದರೆಂದು ಜನ ಸಾಮಾನ್ಯರೆಂದು
ಭೇದವನು ಮಾಡದಲೆ ಸಮತೆಯಂ ಬೀರಿ
ವಿದ್ಯೆಯನು ನೀಡಲ್ಕೆ ' ಪರಂಜ್ಯೋತಿ ' ಪತ್ರಿಕೆಯ
ನಡೆಸಿದಿರಿ ಹರಸಿದಿರಿ ಸರಸತಿಯೆ ತಾವಾಗಿ || ೫ ||

ನಾಡಿನಲಿ ನೆಲೆಸಿರ್ದ ಧರ್ಮಾಧಿಕಾರಿಗಳ
ಧರ್ಮದರ್ಶಿಯು ಆಗಿ ಪ್ರ ಪ್ರಮಾಥರಂತೆ
ಕಿಯೊಟೊ ಪರಿಷತ್ತಿಗೆ ಹೋಗಿಬಂದಿರಿ ಅಲ್ತೆ !
ಹಿಂದು ಧರ್ಮದ ತಿರುಳ ಸಾರಿದಿರಿ ಅಲ್ತೆ || ೬ ||

ವೀರಶೈವದ ತಿರುಳು ಹಿಂದು ಧರ್ಮದ ಬೇರು
ಭಾರತೀಯ ಸಂಸ್ಕೃತಿಯ ತಾಯಿಬೇರು
ಜಾಗತಿಕ ಶಾಂತಿಯ ಮೂಲಬೇರು
ಎಂಬುದರ ಅರಿವನ್ನು ಬೀರಿ ಬಂದಿರಿ ಅಲ್ತೆ || ೭ ||

ನಾಡು ಗೌರವಿಸಿತ್ತು ನುಡಿಯು ಆದರಿಸಿತ್ತು
ನಿಮ್ಮ ನಡೆ – ನುಡಿಗಳೆ ಮಾರುಹೋಯ್ತು
ನಿಮ್ಮ ಯಶ ದುಂದುಭಿಯು ಸತ್ಯವಾಯ್ತು
ಸಿದ್ಧೇಶ ಗುರುವಿಗೆ ಸಂತಸವದಾಯ್ತು .... ॥ ೮ ॥

# ಹರಸು ಬಾ ರಾಜಯೋಗಿ ಗಂಗಾಧರೇಶ್ವರ

ಆರ್. ಕೆ. ಹಿರೇಮಠ

೧

ಶರಣ ಸಂಘದ ಬಲದ ಶಿವಯೋಗದಾಶ್ರಮದ,
ವರಮೂರ್ತಿ ಚಿರಕೀರ್ತಿ ಗಂಗಾಧರ.
ಸಾಧನೆಯ ಪುಂಗವರು, ಶಿವಯೋಗದಾಶ್ರಮದ,
ಶರಣಾನುಭವ ಮೂರ್ತಿ ಮನ್ವಂತರ.

೨

ಎನಿತು ಪುಣ್ಯಾರಣ್ಯ ಮಂಗಳದ ಯತಿ – ಕುಲಕೆ,
ಶ್ರೀಗಂಧ ಚಿರಜ್ಯೋತಿಯಾಗಿ ಬಂದೆ.
ಅನಿತೆ ವಿಶ್ವಸ್ಥಮಯ, ಸಂಕೀರ್ಣ ಸಾತ್ವಿಕಕೆ,
ಸಂಪೂರ್ಣ ಯೋಗಬಲ ತಳೆದು ಬಂದೆ.

೩

ತಮ್ಮಾತ್ಮ ಸಿದ್ಧವಿಹ ಸರ್ವ ಸಂಪದ – ಬಲಕೆ,
ಸಾಂಸ್ಕೃತಿಕ ಧರ್ಮ ದುಂದುಭಿ ಮೊಳಗಿಸಿ,
ಉತ್ತರೋತ್ತರ ಪರಮ ಚಿತ್ಕಳಾನಂದ ಬಲ,
ಸಾತ್ವಿಕದ ಸಂಸ್ಕಾರ ಚಿರಮೊಳಗಿಸಿ.

೪

ಉದ್ದಂಡ ಮಾಗಿರುವ ದಟ್ಟ ಹೆಜ್ಜೆಯಯಾತ್ರೆ,
ದೂರ ದೂರದ ನಾಡಿನಲ್ಲಿ ತೇಲಿ.
ಸಿದ್ಧಾತ್ಮ ತಪಸಿಗಳ ಮಂಗಲಾಂಗದ ಬದುಕೆ,
ವಿಶ್ವಶಾಂತಿಯ ತರುವ ಶಕ್ತಿಯಾಲಿ.

೫

ಪರಮ – ನಂಬುಗೆ – ಬೆಳೆದ, ವಿಶ್ವಾತ್ಮ ಸಂಘಟನೆ,
ಅರಿವ ಮುನ್ನವೆ ಹರಿಸು ಮಹಾಯೋಗಿಯೆ,
ಶರಣರೆಲ್ಲರು – ಬರೆದ ಅನುಭಾವದಂಗಣಕೆ,
ಆಹ್ವಾನ ಗೈಯ್ಯುತಿರು ಶಿವಯೋಗಿಯೆ.

೬

ದೂರ ದೂರದ ನಾಡಿನಲ್ಲಿ ಶರಣಾಮೃತವೆ,
ಅಚ್ಚಳಿಯ ದಂತಿರುವ ಶರಣ ಲೋಕ.
ಪರಮ ಸಮತಾವಾದ ಸತ್ಯ – ಸಾತ್ವಿಕವಾದ,
ತಳೆದಿರುವುದೀ ತೀರ್ಥ ಪರಮನಾಕ.

೭

ಕಾಯಕವೆ ಕೈಲಾಸವೆಂದೊರೆದ ಬಸವ – ನುಡಿ.
ಸೀಮೆ ದಾಟಿದ ಮಧುರ ಮಂತ್ರ ಯೋಗ.
ಕನ್ನಡತಿ, ಕಾವ್ಯ – ನುಡಿ, ಶರಣ – ಸ್ವಾಮಿಗಳೆಲ್ಲ.
ಕಳುಹಿ ಕೈಗೊಳ್ಳುತಿಹ ಮಂಗಲಾಂಗ.

೮

ಶರಣ ಸಿದ್ಧರ – ಸಮತೆ, ಪರಮಕಾಯಕ ದಿಟ್ಟಿ,
ಅರುಹಿ ಪರಿಸಯ್ಯ ಶ್ರೀ ಶಿವಯೋಗಿಯೆ.
ತಮ್ಮ ಈ ಯಾತ್ರೆಯಲಿ, ಶರಣ ತಿಂಥಿಣಿಯೆಲ್ಲ,
ಕೈಗೊಂಡ ಅನುಭಾವ ಮಾಡಿ – ಬಿರಿಯೆ.

೯

ನಾಡು, ಪಾವನ ರಂಗ, ಧರ್ಮದುಂದುಭಿಯಲ್ಲಿ,
ಅರಳಿ ಸಂತ್ರಸ್ತ – ಸಗ – ಶಾಂತಿ ತರಲಿ.
ವಿಶ್ವ – ಸುಖ – ಶಾಂತಿ – ಬಗೆ, ಶರಣರನುಭಾವದಲಿ,
ಮೂಡಿ ಸಂಪ್ರೀತಿ ಬಗೆ ಯುದಿಸಿಬರಲಿ.

೧೦

ಹುಚ್ಚೀಶ, ಗುರುಸಿದ್ಧ ಮುರುಗೇಶ ತೋಂಟೇಶ,
ಸರ್ವಸಿದ್ಧತೆಯೊಡನೆ ಕಳುಹಿನಿಲಲಿ.
ಹರಸು ಬಾ ಶಿವಯೋಗಿ ಗಂಗಾಧರೇಶ್ವರನೆ,
ಪರಮಶರಣಾನುಭವ ತಳೆದು – ನಿಲಲಿ. □

# ಬೆಳಗು ಪರಂಜ್ಯೋತಿ

ಸೌ. ಶಶಿಕಲಾದೇವಿ ಮಡಕಿ

ಬೆಳಗು ಬೆಳಗು ಜಗವ ಬೆಳಗು
ಬೆಳಗು ಪರಂಜ್ಯೋತಿ

ಅರಿವು ಅರಳಿಸಿ ಮರೆವು ಮರೆಯಿಸಿ
ಬೆಳಗು ಪರಂಜ್ಯೋತಿ

ಅಶಾಂತಿ ಅಸ್ಥಿರತೆಯ ಕವಿದಿದೆ ಕಗ್ಗತ್ತಲೆ
ಶಾಂತಿ ಕಿರಣದ ಕಾಂತಿ ಬೆಳಗುವದು ಎಂದಿಗೆ ?
ಮಮಕಾರ ಅಹಂಕಾರದ ತಾಂಡವವು ನಡೆದಿದೆ
ಪ್ರೇಮದ ಎದೆ ಮೆಟ್ಟಿ ದ್ವೇಷದ ಗೆಲುವಾಗುತಿದೆ
ಬೆಳಗು ಪರಂಜ್ಯೋತಿಯೇ || ೧ ||

ಜಾತಿ ಮತ ಕುಲಗೋತ್ರದ ಭೇದ ಭಾವ ಎಲ್ಲೆಲ್ಲಿ
ಪ್ರೀತಿ ಶಾಂತಿ ಸುಖ ಸಮೃದ್ಧಿ ಅಡಗಿದೆ ಇಂದೆಲ್ಲಿ ?
ನಿರ್ಮಲತೆ ನೀರವತೆ ಒರತೆ ಬತ್ತಿ ಹೋಗಿದೆ
ಶಾಂತಿ – ಆನಂದದ ಬುಗ್ಗೆ ಚಿಮ್ಮುವದು ಎಂದಿಗೆ ?
ಬೆಳಗು ಪರಂಜ್ಯೋತಿಯೇ || ೨ ||

ನಿಷ್ಪಾಪ ಜೀವಿಗಳ ಬಿಸಿ ನೆತ್ತರದುರಿ ಎದ್ದು
ಸುಡದೆ ಈ ಕುಹಕಿಗಳ ಎದೆ ಹುಚ್ಚೆದ್ದು
ದ್ವೇಷದುರಿಯ ನಂದಿಸು ಪ್ರೇಮ ಪ್ರತಿಭೆಯ ಹೊತ್ತಿಸು
ಹೃದಯದಾಕಾಶದಲಿ ಶಾಂತಿ ತಾರೆ ಮಿರುಗಿಸು
ಬೆಳಗು ಪರಂಜ್ಯೋತಿಯೇ || ೩ ||

ವಿಶ್ವವೇ ದೇಗುಲವೆಂಬ ಭಾವನೆಯು ಬಲಿಸುತ
ಎಲ್ಲ ಮಾನವರ ಆತ್ಮ ದೀಪ್ತಿ ದೇವ ನೆನಿಸುತ
ನಿಷ್ಕಾಮ ಸೇವೆ ಎಂಬುದೆ ಅರ್ಚನೆಯಾಗುತ
ಎಲ್ಲರಾತ್ಮ ಕಲ್ಯಾಣದಿ ಶುಭ ಸೊಬಗನು ಬೀರುತ
ಬೆಳಗು ಪರಂಜ್ಯೋತಿಯೇ || ೪ ||

ಜ್ಞಾನಿಗಳ ನುಡಿಯಿಂದ ಯೋಗಿಗಳ ಕಂಗಳಿಂದ
ಅನುಭಾವಿಗಳ ಎದೆಯಿಂದ ಹೊರಹೊಮ್ಮು ಜ್ಯೋತಿ
ಭಾವೈಕ್ಯತೆ ಅರಳುವಂತೆ ನೀಡು ಜಗಕೆ ಸನ್ಮತಿ
ಆತ್ಮ ವೈಶಾಲ್ಯತೆಗೆ ನೀನೇ ಪ್ರೇಮದ ಸ್ಫೂರ್ತಿ
ಭಾವೋನ್ಮಾದದಿ ತರಂಗಿಸುವ ಪ್ರಭು ಶಕ್ತಿ
ಆಧ್ಯಾತ್ಮ ದೈಸಿರಿಗೆ ನೀನೇ ಸರಸತಿ
ಬೆಳಗು ಪರಂಜ್ಯೋತಿ || ೫ ||

# ವರಗುರು ಗಂಗಾಧರ

ನಾರಾಯಣ ಘಳಗಿ

ಒಂದಿರುಳು ಕನಸಿನಲಿ
ಕಂಡೆನಾ ಕೌತುಕವ
ವಿದ್ಯೆ ಸಿರಿದೇವಿಯರ ಮೇಲು ಘರ್ಷಣೆಯು |
ಅತ್ತೆ ಸೊಸೆಯರ ಕದನ
ಬಿಟ್ಟಿಲ್ಲ ಇಲ್ಲಿಯೂ
ಇಂತು ಬೆರಗಾದೆ ನಾ ವಿಷ್ಣುಪುರದಲ್ಲಿ ||೧||
ಸೃಷ್ಟಿರಚಯಿಪ ಬ್ರಹ್ಮ
ಮತ್ತೆ ನಾರಾಯಣರು
ಅತ್ತೆ ಸೊಸೆಯರ " ಕೆಳೆ"ಗೆ ವಿಫಲರಾದರ್ |
ಇತ್ಯರ್ಥಗೈಯಲು
ಮತ್ತಲ್ಲಿಗೆ ಬಂದ
ಶಕ್ತಿದೇವಿಯು ತಾನೆ ಹೆಚ್ಚೆಂದಳು ||೨||

ಮೂರುಸಾವಿರಮಠಕೆ
ಮೂರು ಮಹಾದೇವಿಯರು
ಹರಿಹರಬ್ರಹ್ಮರೊಡನೈತಂದರು |
ವರಗುರು ಗಂಗಾಧರನು
ವರ ಪವಾಡವ ಗೈದ
ಪುರ ಹುಬ್ಬಳ್ಳಿಯಲಿ ನೆಲೆಗೊಳಿಸಿದ ||೩||

ಸಿರಿತನದ ಹುಬ್ಬಳ್ಳಿ
ಶಾರದೆಯ ತವರೂರು
ವರಶಕ್ತಿ ಸಾನ್ನಿಧ್ಯವಿಲ್ಲಿ ಉಂಟು |
ವರಗುರು ಗಂಗಾಧರನು
ವರ ಪವಾಡವಗೈದ
ಮೂರುಸಾವಿರಮಠವು ಇಲ್ಲಿಉಂಟು || ೪ ||

## "ಕಿಯೊಟೊ"ದ ವಿಜಯದುಂದುಭಿ

ಗಿರಿರಾಜ ಹೊಸಮನಿ

ಅಂದು ಬಸವನು ಬಿತ್ತಿಬೆಳೆದಿಹ
ಧರ್ಮ ಬೀಜವ ಹಂಚಿದ
ಅಂದು ಅಣ್ಣನು ಗೈದ ಕ್ರಾಂತಿಯು
ನೆನಪ ವಿಶ್ವಕೆ ತೋರಿದೆ ‖ ೧ ‖

ಭಕ್ತಿಬಿಂಬದ ಬಸವ ತತ್ವವ
" ಕಿಯೊಟೊ " ನಗರದಿ ಸಾರಿದೆ
ವೀರಶೈವದ ವೀರ ಬಾವುಟ
ವಿಶ್ವಧರ್ಮದಿ ಬೆಳಗಿದೆ ‖ ೨ ‖

ನಮ್ಮ ನಾಡಿನ ತತ್ವದೀಪ್ತಿಯು
ಮಿಂದು ಸಭೆಯಲಿ ಮಿಂಚಿಸಿ,
ಶರಣತತ್ವವ ಶರಣಬಾಳಿನ
ಪರಮ ದರ್ಶನ ತೋರಿದೆ ‖ ೩ ‖

ಬಸವ ನುಡಿದಿಹ ವಚನ ವಾಙ್ಮಯ;
ಕನ್ನಡಕಷ್ಟೆ ಸೀಮಿತ
ತಮ್ಮದಯದಿಂದ ತಮ್ಮ ನುಡಿಯಿಂ
ಇಂದು ವಿಶ್ವದಿ ವ್ಯಾಪಿತ ‖ ೪ ‖

ಆ ನರೇಂದ್ರನು ಅಂದು ಮಾಡಿದ
" ಚಿಕ್ಯಾಗೊ " ನಗರದ ಭಾಷಣ
ಹಿಂದು ಧರ್ಮದ ತತ್ವತಿರುಳನು
ತಿಳಿಸಿ ಹೇಳಿತು ಆಕ್ಷಣ ‖ ೫ ‖

ಅಂದಿನಾತೆರ ಇಂದು ನಿಮ್ಮಯ
ಮಾತು ಮೊಳಗಿತು ಸಭೆಯಲಿ
ವಿಶ್ವಶಾಂತಿಗೆ ವೀರಶೈವವೆ
ತಾರಕೆಂದಿತು ಸಭೆಯಲಿ ॥ ೬ ॥

ಸಿಂಹವಾಣೆರಡು ಧೀರನುಡಿಗಳ
"ಮಾತು ಮುತ್ತಿನ ಹಾರವು"
ಭೇರಿಯೊಡೆಯಿತು ಧೀರ ತನದಲಿ
ವೀರಯೋಗಿಯ ರೂಪವು" ॥ ೭ ॥

ದೇವ ನಮ್ಮಯ ಮನದಲಿರುವನು
ಎಂಬ ಸತ್ಯದ ಅರಿವನು
ಬಸವ ಬಿತ್ತಿದ ವಚನ ತತ್ತ್ವದಿ
ತಿಳಿಸಿ ಹೇಳಿದ ಧೀರನು ॥ ೮ ॥

ವಿಶ್ವ ಧರ್ಮದ ತತ್ತ್ವಸಾರವು
ಅಣ್ಣನೋಚನದ ಆಗರ
ತತ್ತ್ವದಾಗರ ಕುಡಿದು ತೇಗಿದ
ಸತ್ಯರೂಪಿಯೆ "ಜಲಧರ" ॥ ೯ ॥

ನಿಮ್ಮ ಯಶವದು ನಾಡಗೆಲುವದು
ನಾಡ ತಾಯಿಯ ವಿಜಯವು
ಕನ್ನಡಾಂಬೆಗೆ ವಜ್ರಕವಚವು
ನಿಮ್ಮದೀ ಪ್ರಯಾಣವು ॥ ೧೦ ॥

# ನಮನ

ಶಂ. ಗು. ಬಿರಾದಾರ

ನಮನವಿದೋ ನಮನವಿದೋ
ನಮನ ಜಗದ್ಗುರುವಿಗೆ
ಜಗದ ಶಾಂತಿಗಾಗಿ ಶ್ರಮಿಸು
ತಿರುವ ಗಂಗಾಧರನಿಗೆ
ಪಟ್ಟವೇರಿ ಪಟ್ಟವಾಯ್ತು
ಹೃದಯ ತುಂಬಿ ಹಾಡುವೆ
ನೂರು ವರುಷ ಬಾಳಲೆಂದು
ದೇವನಲ್ಲಿ ಬೇಡುವೆ
ಶಾಂತಿ ವದನ ಕಾಂತಿನಯನ
ದಿವ್ಯರೂಪ ಪಾವನ
ವರದಪಾಣಿ ಅಮೃತವಾಣಿ
ಭಾವದುಂಬಿ ಚೇತನ
ನಿಮ್ಮ ಒಡಲು ಜ್ಞಾನಗಡಲು
ಪಾದಪದ್ಮ ಮಂಗಲ
ಅಡಿಯ ಸ್ಪರ್ಶದಿಂದ ಪುಳಕ
ವಾಯ್ತು ಭುವಿಯ ಅಂಗಳ
ನಿಮ್ಮ ಉಕ್ತಿಯಲ್ಲಿ ದೇವ
ಶಕ್ತಿತುಂಬಿ ಹರಿದಿದೆ
ಭಾವದಲ್ಲಿ ಭಕ್ತರೊಲುಮೆ
ಚಿಲುಮೆಯಾಗಿ ಸುರಿದಿದೆ
ನಿಮ್ಮ ಪೂಜೆ ಜಗದ ಸೇವೆ
ಗಾಗಿ ಮೀಸಲಿರುವದು

ದೀನದಲಿತರೆದೆಯ ನೋವ
ನೆಲ್ಲಕಳೆಯುತ್ತಿರುವದು
ವಿದ್ಯೆಗಾಗಿ ಕಟ್ಟಿದಂಥ
ಸಂಘ–ಸಂಸ್ಥೆ ಬೆಳೆದಿವೆ
ನಿಮ್ಮ ಕೊಡುಗೆಯಿಂದ ಉಳಿದು
ಭವ್ಯರೂಪ ತಳೆದಿವೆ
ವಿದ್ಯೆ ಕಲಿತು ಜಾಣರಾದ
ಕೋಟಿ ಕೋಟಿ ಎಳೆಯರು
ನಾಳೆ ನಮ್ಮ ನಾಡಿನಲ್ಲಿ
ತಾರೆಯಂತೆ ಹೊಳೆವರು
ಕಣ್ಣುಮುಂದೆ ಕುಣಿಯುತಿಹಳು
ವಿಶ್ವಧರ್ಮ ದೇವತೆ
ಸರ್ವ ಧರ್ಮ ಸಮನ್ವಯಕೆ
ನಿಮ್ಮದಿಹುದು ಮಾನ್ಯತೆ
ಕಿಯೊಟೊ ನಗರದಲ್ಲಿ ನಡೆದ
ಸರ್ವ ಧರ್ಮ ಸಭೆಯಲಿ
ವಿಶ್ವಧರ್ಮ ತತ್ವಗಳನು
ತಿಳಿಸಿ ಹಲವು ವಿಧದಲಿ
ಭಾರತೀಯ ಧರ್ಮಧ್ವಜವ
ನೆತ್ತಿ ಹಿಡಿದ ವೀರನು
ನೈಜಧರ್ಮ ತತ್ವಗಳನು
ಸಾರಿದಂಥ ಧೀರನು
ಬೆಳಗುತಿಹುದು ಪರಂಜ್ಯೋತಿ
ನಾಡದೇವಿ ಗುಡಿಯನು
ಜ್ಞಾನದೀಪ ಕಿರಣ ತೂರಿ
ಶಾರದಾಂಬೆ ಅಡಿಯನು
ಜ್ಞಾನಗಂಗೆ ಭಾವತುಂಗೆ
ಮನದೊಳಿರಡು ಸಂಗಮ
ಮನುಜ ಕುಲಕೆ ಕಣ್ಣನಿತ್ತು
ನೀವೆ ಜಗದ ಜಂಗಮ
ನನ್ನ ಅಲ್ಪ ಕವನ ಪುಷ್ಪ
ನಿಮ್ಮ ಅಡಿಗೆ ನೀಡುವೆ

ನಿಮ್ಮ ಪಾದ ಪದ್ಮಗಳಿಗೆ
ನಮಿಸಿ ವರವ ಬೇಡುವೆ
ನಮನವಿದೋ ನಮನವಿದೋ
ನಮನ ಜಗದ್ಗುರುವಿಗೆ
ಜಗಕೆ ಶಾಂತಿಸುಖವ ಬಯಸು
ತಿರುವ ಕಲ್ಪತರುವಿಗೆ □

## ಸಿಡಿದುಬಂತು ತಾರೆ ದೇವಂಗಳದಿಂದ

ಕುಮಾರಿ ಪೌಲಿನಾ ನಂದಗಾಂವ

ದೇವನಂಗಳದಿಂದ ಸಿಡಿದು ಬಂದಿಹ ತಾರೆ
ಬುವಿಯ ರಂಗದಿ ನಿಂತು ಅಮರ ಗೀತೆಯಹಾಡೆ,
ತೋಗರದ ಕೇಳಿ ಸಂಭ್ರಮದಿ ಮೈಮರೆಯೆ
ಇಳೆಯು ಗೀತೆಯು ಸತ್ವ ಗಗನ ಹೂವಲಿ ಬೆರೆಯೆ,
ತಾರೆ ಹಾಡಿದ ಹಾಡು ಮೋಹ ಮಂತ್ರವು ಆಗೆ
ಭಕ್ತಿಯಲಿ ಜನಪದವು ಜಪಿಸಿರಲು ತಾರೆಯನೆ,
ನಿನದಿಸಿತು ಎಲ್ಲೆಲ್ಲೂ ಪಂಚಾಕ್ಷರೀ ಮಂತ್ರ
" ಶ್ರೀ ಗಂಗಾಧರ " ಎನಿಸಿತ್ತು ಜೀವ ಜೀವದ ಮಂತ್ರ ! □

# ಹೇ ಜಗದ್ಗುರೋ !

ನಿವೇದಿತಾ

ಹೇ ಜಗದ್ಗುರೋ ! ತವ ಚರಣಕೆ ವಂದಿಪೆವು ! ॥ ಪಲ್ಲವಿ ॥
ಪರಂಪರೆಯ ಪೀಠಕೆ ಕಳೆ ತರಿಸುತೆ ।
ಸದ್ಭಾವದ ಭೂಷಣಗಳ ಧರಿಸುತೆ ।
ದಯಾ–ಧರ್ಮ ಮಾರ್ಗವನಾಚರಿಸುತೆ ।
ಕೀರ್ತಿ ಕಲಶ ಮೆರೆಸಿದೆ, ಗುರುವೇ! ಹೇ ಜಗದ್ಗುರೋ... ॥ ೧ ॥

ಕರ್ತವ್ಯದ ಎಚ್ಚರ ಚಿರವಿರಿಸುತೆ ।
ಆಧ್ಯಾತ್ಮ ಭೋಧದ ಸರಿಯನು ಸುರಿಸುತೆ ।
"ಸರಸತಿ"ಯ ತೆರ ಓಘವ ಹರಿಸುತೆ
ಜ್ಞಾನ–ದೀಪ ಉರಿಸಿದೆ, ಗುರುವೇ ! ಹೇ ಜಗದ್ಗುರೋ... ॥ ೨ ॥

ಜನಹಿತ ಕಾರ್ಯಕೆ ತನು–ಮನ ಸವೆಸುತೆ ।
ದಿವ್ಯ ಭಾವಮಯ ಹೃದಯವ ಗೈಯುತೆ ।
ಔದಾರ್ಯದಿ ದ್ರವ್ಯವ ಸಲೆ ವ್ಯಯಿಸುತೆ।
ಸಂಸ್ಥೆ ಎಷ್ಟೋ ಕಟ್ಟಿದೆ, ಗುರುವೇ ! ಹೇ ಜಗದ್ಗುರೋ... ॥ ೩ ॥

ಮಹದ್ಭಾಗ್ಯದೀ ದೈವೀ ತವ ಗುಣ।
ಅಂತರಂಗದಲಿ ಈಶ್ವರ ಚೇತನ।
ಆತ್ಮಾನಂದದಿ ನಿಮಗ್ನ ತವ ಮನ।
ತೋರಿದೆ ನಿಜಸುಖತರು, ಗುರುವೇ ! ಹೇ ಜಗದ್ಗುರೋ... ॥ ೪ ॥

ಸರ್ವಧರ್ಮಗಳಲೊಂದೇ ತತ್ವವು |
ಅದುವೇ ಅಹುದವಿನಾಶೀ ಸತ್ವವು |
ಸುವಿದಿತವೈ ನಿನಗೆದರ ಮಹತ್ವವು |
ಮೆರೆಸಿದೆ ಧರ್ಮಧ್ವಜ. ಗುರುವೆ! ಹೇ ಜಗದ್ಗುರೋ.... ||೫||

ಜಾತಿ–ವಿಜಾತಿಯ ಭಾವ ಸುದೂರ |
ರಾಜ–ರಂಕ ಭೇದವು ಅತಿದೂರ |
ಪಾಪ ಬೇರುಗಳ ದೂಡದೆ ದೂರ |
ಸರ್ವರನೂ ಹರಸುವೆ. ಗುರುವೆ! ಹೇ ಜಗದ್ಗುರೋ... ||೬||

# ಸೋಽಯಂ ಗಂಗಾಧರಃ

ಶ್ರೀ ಗುರುಸಿದ್ಧ ಶಿವಾಚಾರ್ಯರು ಕೆಳದಿ.

॥ ಶಾರ್ದೂಲ ವಿಕ್ರೀಡಿತವೃತ್ತ ॥

೧

ಸಿಧ್ಧ್ಯಾಮ್ನಾಯವಸುಸ್ಥಿರಾ–ಪರಿಮಿತೇ ವರ್ಷೇಽಕ್ಷಯೇ ಶೋಭನೇ
ಶ್ರೀಶ್ರೀಮನ್ನೃಪ ಶಾಲಿವಾಹನಶಕೇ ಮಾಘೇ ವಿಶುದ್ಧೇ ದಲೇ।
ನಕ್ಷತ್ರೇ ಮೃಗಶೀರ್ಷಕೆ ಕವಿದಿನೇ ರಾತ್ರೌ ದಶಮ್ಯಾಂ ತಿಥೌ
ಚನ್ನಮ್ಮಾ ಮರುಳಾರ್ಯ–ಭಾಗ್ಯನಿಚಯಾಜ್ಜಾತೋಽತ್ರ ಗಂಗಾಧರಃ ॥

೨

ವೇದಪ್ರಾಣ ವಸುಸ್ಥಿರಾಮಿತಶಕೇ ಚೈತ್ರೀಯ–ಶುಕ್ಲಾಽನ್ತಿಮೇ
ಪೂರ್ವಾಹ್ಣೇ ಶಿವಯೋಗ ಮಂದಿರವಟುಭೂತ್ವಾ ಕ್ರಮೇಣ ಸ್ವಯಂ।
ಆಚಾರ್ಯಪ್ರಮುಖಾತ್ ಪ್ರಬುದ್ಧಮತಿವಚ್ಛಾತ್ರೈಶ್ಚ ವಿದ್ಯಾಃಪಠನ್
ಧೀ–ರತ್ನೈಃ ಪರಿಶೋಭತೇಽತ್ರ ಪರಮಃ ಪೂಜಾರ್ಹ–ಗಂಗಾಧರಃ ॥

೩

ಪೂರ್ವಂ ಶ್ರೀ ಶಿವಯೋಗಮಂದಿರಮಠೇ ಪಶ್ಚಾಚ್ಚ ಕಾಶ್ಯಾಂ ಪಠನ್
ವೇದಾಂತೇ ಪರಮೋಚ್ಚ–ಮಾನ್ಯ–ಪದವೀಮ್ 'ಆಚಾರ್ಯ'–
ಶಬ್ದಾಽಽದೃತಮ್।
ಸಾಹಿತ್ಯೇ ಕವಿ–'ಕಾವ್ಯತೀರ್ಥ' ಮಥ ತದ್ 'ರತ್ನಂ'ಚ ಸಂಪಾದಿತಂ
ಭಾಷಾ ಚಿತ್ರಕಲಾಽಽಂಗ್ಲ 'ಕನ್ನಡ'ಗಿರಾಂ ಪಾಂಡಿತ್ಯ ಮಂತ್ರ ಸ್ಫುಟಮ್ ॥

೪

ಭಕ್ತ್ಯೌಘೇ ಶಿವನಾಮಕೀರ್ತನಮಥೋ ಶಾಸ್ತ್ರಾರ್ಥಸಂಭಾಷಣಂ
ಚಛಾತ್ರಾನ್ ಪ್ರತಿಪಾಠನಂ ನಿಯಮತೋ ಯೋಗಾಸನಂ ಪೂಜನಂ।

ರುದ್ರಾಧ್ಯಾಯ–ಸಪಸ್ರ ಬಿಲ್ವನುತಿಗೀಃ ಪಾರಾಯಣಂ ಗೀತಿನಾಂ
ಶಾಸ್ತ್ರೋಕ್ತ್ಯಾ ಶತರುದ್ರಸೂಕ್ತಿ ಪಠನಂ ಖ್ಯಾತಾನಿ ತತ್ಸಾಧನೇ ॥

೫

ಯೋಗಾಭ್ಯಾಸಮುಖಾನ್ ಸ್ವಕಾರ್ಯನಿವಹಾನ್ ಶ್ರದ್ಧಾಽನ್ವಿತೋ
'ಹ್ಯಾಚರನ್
ಪ್ರಾತಃಕಾಲನುತಿಂ ಕ್ರಿಯಾಂ ಪ್ರಥಮತಃ ಕೃತ್ವಾಽಥ ಶಾಸ್ತ್ರಂ ಪಠನ್।
ಪೂಜಾಪಾಠ ಪುರಾಣ ಭಾಷಣಕಲಾಶಿಕ್ಷಾಸು ಯೋಗ್ಯೋ ಭವನ್
ಲೋಕೇಽಸ್ಮಿನ್ ಸಕಲಪ್ರಶಸ್ತ್ಯಯಮಿನಾಂ ಗಣ್ಯೋಽತ್ರ ಗಂಗಾಧರಃ॥

೬

ಹಾವೇರಿ–ಬಿದರೀ–ವಿರಾಟ್‌ಪುರಯತಿ ಸ್ತೋತ್ರಾಣಿ ಗೀತಾನ್ಯಥೋ
ಇಲ್‌ಕಲ್ಲೇಶ್ವರ–'ಲಾವಣೀ' 'ನಿಗದಿತಾ, ಪೂಮಾಲಿಕಾ' ಗುಮ್ಫಿತಾ।
ಅಪ್ಪಯ್ಯಾದಿ–ಚರೇಶಜೀವನಕಥಾ ನಾನಾವಿಧಾ ಗೀತಿಕಾಃ
ಶ್ರೀ ಗಂಗಾಧರಯೋಗಿನಾ ವಿರಚಿತಾಃ ಸರ್ವಾಃಪ್ರಸಿದ್ಧಿಂಗತಾಃ ॥

೭

ಯೋಮ್ಯಾಽಷ್ಟ್ಯಷ್ಟಧರಾ–ಸುಸಮ್ಮಿತಶಕೇ ವರ್ಷೇ ವಿಲಮ್ಬ್ಯಭಿಧೇ
ನಿರ್ದಿಷ್ಟೇ ಸಮಯೆ ತ್ರಯೋದಶದಿನೇ ವೈಶಾಖಶುದ್ಧೇ ದಲೇ।
ಲಗ್ನೇಽಯಂ ಗುರುವಾಸರೀಯ–ಮಿಥುನೇ ಬ್ರಹ್ಮೋಪದೇಶಾದ್ ಧ್ರುವಂ
ಪ್ರಾತಃ ಷಟ್‌ಸ್ಥಲಮಂತ್ರ ಸಂಸ್ಕೃತವಪುಃ ಸಿದ್ಧೋಽತ್ರ ಗಂಗಾಧರಃ ॥

೮

ತಸ್ಮಿನ್ನೇವ ದಿನೇ ನಿಶೀಥಸಮಯೇ ಸಿಂಹಾಸನಾಽಽರೋಹಣಂ
ಭಕ್ತ್ಯಾಽರ್ಪಿತ–ಸೂಪದಾ–ನವನಿಧಿ ಸ್ವೀಕಾರಕಾರ್ಯಂ ತಥಾ॥
ಸಂಕ್ಷಿಪ್ತಂ ಪರಮಾರ್ಥಸಾರಸಹಿತಂ ಸ್ವಾಽಽಶೀರ್ವಚಃ ಶ್ರಾವಣಂ
ಕೃತ್ವಾ ಪೂಜ್ಯ ಜಗದ್ಗುರುರ್ವಿಜಯತೇ ಹುಬ್ಬಳ್ಳಿ–ಪೀಠಾಽಧಿಪಃ ।

೯

ಹುಬ್ಬಳ್ಳೀ–ಸ್ಥಿತ-ಮೂರುಸಾವಿರಮಠಾನ್ನಿರ್ಗತ್ಯ ಭಕ್ತೈಃಸಹ
ದೀಲ್ಲಿಮುಖ್ಯಪುರೇಷು ಚಾಽತ್ರ ಜನತಾಂ ಸಂಬೋಧಯನ್ ಸ್ವಾಽಽಶಿಷಂ ॥
ಭಕ್ತಾನಾಂ ಶ್ರವಣಾರ್ಥಿನಾಂ ಹಿ ಹೃದಯೇ ಸದ್ಬೋಧಮುದ್ಬೋದಯನ್–
ಅತ್ರೈವಾಽಽಗತಯೋಗಿನಃ ಪರಿಚಿತಾಃ ಕುರ್ಮೋವಯಂ ಸ್ವಾಗತಮ್ ॥

### ೧೦

ಹುಬ್ಬಳ್ಳೀ-ನಗರಾತ್ ಪ್ರಯಾಣಸಮಯೇ ಕಾಶೀಯುಪೇತ್ಯಾಽಽದರಾತ್
ವಿದ್ವದ್‌ವೃಂದಸಮಾಜಮುಖ್ಯ ಪುರುಷೈಃ ಸಂಪ್ರಾರ್ಥಿತೇಽಸ್ಮಿನ್ ದಿನೇ*।
ಅತ್ರತ್ಯಾನ್ ವಿದುಷಃ* ಪ್ರಭೂತ ಕರುಣಾದೃಷ್ಟ್ಯಾ ಸದಾ ಪಾತ್ವಿತಿ
ಸಶ್ರದ್ಧಾ ಗುರು-ಸಿದ್ಧ-ಮುಖ್ಯ-ಕವಯೋಭಕ್ತ್ಯಾ ಪ್ರಣಾಮಂವ್ಯಧುಃ ॥

---

*೧೬-೧-೧೯೬೮ ನೇ ದಿನ.

*ಕಾಶೀ ಪಂಡಿತರನ್ನು.

# ಶ್ರೀ ಭ್ರೂಲತಾ ಪುರಸ್ಥಿತ ತ್ರಿಸಹಸ್ರ ಮಠಾಧ್ಯಕ್ಷಾಣಾಮ್
# ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು
# ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿನಾಮ್
# ಸ್ತುತಿ ಪಂಚಕಮ್

---

ಶ್ರೀ ನೀಲಕಂಠ ಸ್ವಾಮಿಗಳು '' ಕಾವ್ಯತೀರ್ಥ '' ಚಿಕ್ಕೋಡಿ.

(ಶಾರ್ದೂಲ ವಿಕ್ರೀಡಿತಮ್)

ವಿದ್ಯಾ ಬುದ್ಧಿ ವಿವೇಕ ಶಿಕ್ಷಣ ಪರೈ ರ್ನಾನಾ ವಿಧೈರ್ಭಾ ಸುರೈಃ ।
ವಿಖ್ಯಾತಮ್ ದಶದಿಕ್ಷು ಸ್ವಾತ್ಮಕೃತಿಭಿಃ ಕಾಲೇಜ ನಾಮಾಂಕಿತೈಃ ।
ಶ್ರೀಮನ್ನಿತ್ಯ ನಿರಂಜನಮ್ ಪರತರಮ್ ಗಂಗಾಧರಮ್ ಯೋಗಿನಮ್ ।
ವಂದೇಽಹಮ್ ವರರಾಜಯೋಗಿ ವಿಭವಮ್ ಶ್ರೀಭ್ರೂಲ ತಾಯಾಮ್‌ಪುರಿ ॥ ೧ ॥

ವಿದ್ಯಾ ಸದ್ಮನವಮ್ ನವಮ್ ವಿರಚಿತಮ್ ಶಕ್ತ್ಯಾ ತ್ವಯಾ ಸುಂದರಮ್ ।
ವಿದ್ಯಾರ್ಥೀವರ ಜೀವನಮ್ ಸುಸಫಲಮ್ ವಿದ್ಯಾರ್ಜನೇ (ಭೂದುವಮ್) ಪಾವನೇ ।
ಆತ್ಮಶ್ರೀ ಕಿರಣೈರ್ನೃಣಾಮ್ ಪರಿಹೃತಮ್ ಪಾಪಾತ್ಮಕಮ್ ತಾಮಸಮ್ ।
ಹೃಷ್ಟ್ವಾ ಭಕ್ತಜನಾಃಸ್ತುವಂತಿ ಮನಸಾ ಧ್ಯಾಯಂತಿ ಗಾಯಂತಿ ಚ ॥ ೨ ॥

ನಾನಾ ಜಾನಪದಾಃ ಸಮೇತ್ಯ ಸುಹೃದಾ ಲಕ್ಷಾಧಿಕಾಃ ಸಂಖ್ಯಕಾಃ ಯಾ ।
ಏಕತ್ರಾತ್ರ ಸಮಾಶ್ರಿತಾಃ ಸುಚರಿತಾಃ ಸದ್ಭಾವ ಭಾವಾನ್ವಿ ತಾಃ ।
ವಿಶ್ವವ್ಯಾಪಕ ಬಂಧು ಭಾವ ಮನಿಶಮ್ ಪ್ರದ್ಯೋತತೇ ಸದ್ಗುರೋ ।
ಭಾವೈಕ್ಯಾರ್ಥ ಕೃತಾ ಮಹೋತ್ಸವ ಕೃತಿಃ ಕುರ್ಯಾತ್ ಸದಾ ಮಂಗಲಮ್ ॥ ೩ ॥

ಪೀಠಾರೋಹಣ ದರ್ಶಕಮ್ ಪ್ರಕಟಿತಮ್ ಸದ್ಗ್ರಂಥಮವಲೋಕ್ಯ ತೇ ।
ಸಂತಃ ಸಂತತಮುಲ್ಲ ಸಂತಿ ವಿಬುಧಾಃ ಪಾಂಡಿತ್ಯ ಪೂರ್ಣಾ ಮುದಾ ।
ಕೀರ್ತ್ಯಾತ್ಯಃ ಮಲಯಾ ಯತೀಂದ್ರ ಯಮಿನಾಮಾದರ್ಶತಾಮಾಪ್ನುವಾನ್ ।
ಹುಬ್ಳೀನಾಮಕ ಪತ್ರನೇತವ ಯಶೋ (ದೇದೀಪ್ಯತೇ) ಸರ್ವದಾ ॥ ೪ ॥

ಸರ್ವಜ್ಞಾನ ನಿಧಿಜಗದ್ಗುರು ರಸಾ – ವಧ್ಯಾತ್ಮ ವಿದ್ಯಾಪರಃ ।
ಸರ್ವೇಷಾಂ ಸುಖಜೀವನಾಯ ಯತತೇ ನಿಃ ಸ್ವಾರ್ಥಭಾವಾನ್ವಿತೋ ।

ವಿಶ್ವವ್ಯಾಪಕ ಷೋಢಶಾತ್ಮಕ ಮಹತ್ಕರ್ಮಾಣಿ ಕುರ್ವನ್ಸದಾ ।
ಕೃತ್ವಾವೀರ ಮಠಾಭಿವೃದ್ಧಿ ಮನಿಶಮ್ ಗಂಗಾಧರೋಜೀಯತಾಮ್ ॥ ೫ ॥

ಭೂಲತಾಯಾಃ ಪರಮ್‌ಜ್ಯೋತಿಮ್ ಸುಪ್ರಸಿದ್ಧಮ್ ಜಗದ್ಗುರಮ್ ।
ತ್ರಿ ಸಹಸ್ರ ಮಠಾಧ್ಯಕ್ಷಮ್ ವಂದೇ ಗಂಗಾಧರಂ ಯತಿಮ್ ।
ನೀಲಕಂಠ ಕೃತಮ್ ಹೃದ್ಯಮ್ ದೇವ ಭಾಷಾನ್ವಿತಮ್ ಶ್ರುತಮ್ ।
ಜಗದ್ಗುರೋಃ ಪಾದಯುಗ್ಮೇ ಚಾರ್ಪ್ಯತೆಸ್ತುತಿ ಪಂಚಕಮ್ ।

## ಶೂನ್ಯ ಸಿಂಹಾಸನಾರೋಹಣ ಸಮಯೆ ಶ್ರೀ ಜಗದ್ಗುರೂಣಾಮ್ ಸಂದೇಶಃ

" ಕಾಯಕ ಏವ ಕೈಲಾಸೋ " ಮೂಲ ಮಂತ್ರಮ್ ಮಹೋನ್ನತಮ್ ।
ಸತ್ಸಮಾಜ ಕ್ರಿಯಾ ಧ್ಯೇಯ ಸ್ತ್ವಸ್ಮಾಕಮ್ ವಿದ್ಯತೇಹೃದಿ ।
ಭಕ್ತಹೃನ್ಮಂದಿರಂಜಿತ್ವಾ ಜ್ಞಾನ ದೀಪಂ ಜ್ವಲಾಮ್ಯಹಮ್ ।
ಸಂದೇಶೋಽಯಮ್ ಮಹಾಶ್ರೀಣಾಮ್ ಜಗದ್ಗುರು ಮುಖೋದಿತಃ ॥ ೭ ॥



ಶ್ರೀಯುತ ರಾಮಣ್ಣನವರು ಜಾಧವ ಮತ್ತು ಕನ್ನಾಳ ಹನಮುಂತಪ್ಪನವರು ಇವರು ಸಿಂಹಾಸನವನ್ನು ಮಾಡಿಸಿ ಮೂರುಸಾವಿರಮಠಕ್ಕೆ ಅರ್ಪಿಸಿದ ನಂತರ ಸಿಂಹಾಸನಾರೋಹಣ



ಇಲಕಲ್ಲದಲ್ಲಿ ಹುಬ್ಬಳ್ಳಿ ಮೂರುಸಾವಿರಮಠದ ಜಗದ್ಗುರುಗಳು ಅಡ್ಡಪಲ್ಲಕ್ಕಿ
ಮಹೋತ್ಸವ ಸಮಾರಂಭದ ಪೂರ್ವದಲ್ಲಿ —
ಎಡಗಡೆ - ನಿ ಪ್ರ. ಅನ್ನದಾನಸ್ವಾಮಿಗಳು ಹಾಲಕೆರೆ
ಬಲಗಡೆ - ಲಿಂ. ನಿ. ಪ್ರ. ಮಹಾಂತಸ್ವಾಮಿಗಳು ಚಿತ್ತರಗಿ, ಇಲಕಲ್ಲ
೧೯೫೯



ರಾಷ್ಟ್ರಪತಿಗಳಾದ ದಿ. ಡಾ. ರಾಜೇಂದ್ರ ಪ್ರಸಾದರು ಮೂರುಸಾವಿರಮಠಕ್ಕೆ ಆಗಮಿಸುತ್ತಿರುವ ಸಮಯದಲ್ಲಿ ೧೯೫೫



ಲಿಂ., ಜಗದ್ಗುರು ಗುರುಸಿದ್ಧರಾಜಯೋಗೀಂದ್ರರ ಗದ್ದುಗೆಯ ಗೋಪುರಕ್ಕೆ ಹಾಲಕೆರೆ ಅನ್ನದಾನಸ್ವಾಮಿಗಳವರು ಕಲಶಾರೋಹಣ ಮಾಡುತ್ತಿರುವರು



ಜಗದ್ಗುರುಗಳ ಸನ್ನಿಧಿಯಲ್ಲಿ ಹುಬ್ಬಳ್ಳಿ ಮೂರುಸಾವಿರ ಮಠದ ಲಿಂಗರಾಜ ಉಚಿತ ಪ್ರಸಾದ ನಿಲಯವನ್ನು ನಾಗನೂರು ಶ್ರೀ ಶಿವಬಸವಸ್ವಾಮಿಗಳು ಉದ್ಘಾಟಿಸಿದರು. ಎಡದಿಂದ ಕ್ರಮವಾಗಿ ಕಾಣುವವರು ಹೊಸಹಳ್ಳಿ, ಹುಬ್ಬಳ್ಳಿ, ರುದ್ರಾಕ್ಷಿಮಠ, ಹೊಸಮಠ, ಶಿರ್ಶಿ, ಹಾನಗಲ್ಲ, ಮಲ್ಲಾಪುರ, ಮೂರುಸಾವಿರಮಠ, ನಾಗನೂರ ಶ್ರೀಗಳು ಮತ್ತು ಟಿ. ಎಮ್. ಕೌಸಾಳಿ



ಶಿವಯೋಗಮಂದಿರದ ಪಾಲಕರ, ಸಂಚಾಲಕರ, ಹಾಗು ಸಾಧಕರ ಮಧ್ಯದಲ್ಲಿ ಜಗದ್ಗುರುಗಳು ೧೯೬೦



ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯುದ ಉಪಕುಲಪತಿ ರ್‍ಯಾಂಗ್ಲರ್ ಡಿ. ಸಿ. ಪಾವಟೆ
ಮತ್ತು ಕೈ. ಎಸ್. ಆರ್. ಕಂಠಿಯವರು ಮೂರುಸಾವಿರಮಠಕ್ಕೆ ಆಗಮಿಸಿದಾಗ



ಎಸ್. ನಿಜಲಿಂಗಪ್ಪನವರು ಮತ್ತು ಮಾಜಿ ಮುಖ್ಯಮಂತ್ರಿಗಳಾದ ವೀರೇಂದ್ರ ಪಾಟೀಲರು
ಮೂರುಸಾವಿರಮಠಕ್ಕೆ ಆಗಮಿಸಿದಾಗ



ಮೂರುಸಾವಿರ ಮಠದ ಗರ್ಲ್ಸ್ ಹಾಯ್‌ಸ್ಕೂಲ
ಕೈ. ಶ್ರೀ ಎಸ್. ಆರ್. ಕಂಠಿಯವರು ಉದ್ಘಾಟಿಸುತ್ತಿರುವ ಸಂದರ್ಭದಲ್ಲಿ



ಘಟಪ್ರಭೆಯ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆಯಲ್ಲಿ
ನೇತ್ರದಾನಿ ಡಾ. ಮೋದಿಯವರು ಕಣ್ಣಿನ ಆಪರೇಶನ್ ಮಾಡುತ್ತಿರುವಾಗ



ಧಾರವಾಡದ ಮುರುಘಾ ಮಠದಲ್ಲಿ ಹುಬ್ಬಳ್ಳಿ ಗದಗ, ಚಿತ್ರದುರ್ಗ ಜಗದ್ಗುರುಗಳು.



ಮೂರುಸಾವಿರಮಠದಲ್ಲಿ ಅಣುವ್ರತ ಆಂದೋಲನಕರ್ತರಾದ ಆಚಾರ್ಯ ತುಲಸೀಜಿ.



ಹುಬ್ಬಳ್ಳಿ ಮೂರುಸಾವಿರ ಮಠದ ಜಗದ್ಗುರುಗಳು ಬೆಂಗಳೂರಿನ ''ಸಂಯುಕ್ತ ಕರ್ನಾಟಕ'' ಪ್ರೆಸ್ಸಿಗೆ ದರ್ಶನವಿತ್ತಾಗ ಶ್ರೀ ರಂಗನಾಥ ದಿವಾಕರರು ಪರಿಚಯ ಮಾಡುತ್ತಿರುವರು.



ಹುಬ್ಬಳ್ಳಿ ಮೂರುಸಾವಿರಮಠದ ಶಾಖಾಮಠವಾದ ಘಟಪ್ರಭೆಯ
ಗೂಬಲಗುಡ್ಡ ಮಠದಲ್ಲಿ ಜಗದ್ಗುರುಗಳು, ನಾಗನೂರು ಶ್ರೀಗಳು,
ಶಿವರುದ್ರಸ್ವಾಮಿಗಳು, ಹೆದ್ದೂರು ಶೆಟ್ಟರು



ಘಟಪ್ರಭೆ ಜಗದ್ಗುರು ಗುರುಸಿದ್ದೇಶ್ವರ ಸಹಕಾರಿ
ಆಸ್ಪತ್ರೆಯಲ್ಲಿಯ ಜಗದ್ಗುರುಗಳ ನಿವಾಸದಲ್ಲಿ ಮಾಜಿ
ಮಂತ್ರಿಗಳಾದ ಕೌಜಲಗಿ ಹಾಗು ಜೇವೂರಸಾಹೇಬರು



ಶತಾಯುಷಿಗಳಾದ ಶ್ರೀ ನಿ. ಪ್ರ, ಮಹಾಂತಶಿವಯೋಗಿಗಳು ಮುರಗೋಡ
ಅವರಿಂದ ಮೂರುಸಾವಿರಮಠದಲ್ಲಿ "ಶಿವಾನುಭವಮಂಟಪ"ದ ಪ್ರಾರಂಭೋತ್ಸವ



ಹುಬ್ಬಳ್ಳಿ ಮೂರುಸಾವಿರಮಠದ ಕುಮಾರೇಶ್ವರ ಶಿವಯೋಗಿ ಸಂಘದ
ಪ್ರಾರಂಭೋತ್ಸವದ ಸಮಾರಂಭ



ಮೈಸೂರು ಮಹಾರಾಜರು ಮೂರುಸಾವಿರ ಮಠಕ್ಕೆ
ಆಗಮಿಸಿದಾಗ



ಜಗದ್ಗುರುಗಳನ್ನು ದಿಲ್ಲಿಯ ವಿಶ್ವಶಾಂತಿಯ ಪರಿಷತ್ತಿಗೆ ಬೀಳ್ಕೊಡುವ ಮುನ್ನ



ಜಗದ್ಗುರುಗಳು ದಿಲ್ಲಿಯ ಅಂತರ್ಧಾರ್ಮಿಕ ವಿಶ್ವಶಾಂತಿ ಪರಿಷತ್ತಿಗೆ
ಭಕ್ತವೃಂದದೊಡನೆ ಹೊರಟಾಗ ವಿಮಾನ ನಿಲ್ದಾಣದಲ್ಲಿ



ದಿಲ್ಲಿಗೆ ಹೋಗುವಾಗ ಬೆಳಗಾವಿಯ ವಿಮಾನದಲ್ಲಿ ಜಗದ್ಗುರುಗಳು,
ಲಿಂ., ಗುರುಮಹಾಂತಸ್ವಾಮಿಗಳು ಚಿತ್ತರಗಿ ಚಿಂಚಣಿ ಶ್ರೀ ಸಿದ್ಧಪ್ರಭುಸ್ವಾಮಿಗಳು



ಕಾಶಿಯ ಜಂಗಮವಾಡಿಯ ಮಠದಲ್ಲಿ ಶ್ರೀ ಜಗದ್ಗುರುಗಳು



ಕಾಶಿಯ ಜಂಗಮವಾಡಿ ಮಠದಲ್ಲಿ ಹುಬ್ಬಳ್ಳಿ ಮೂರುಸಾವಿರಮಠದ ಜಗದ್ಗುರುಗಳವರ ಜೊತೆಗೆ ಜಂಗಮವಾಡಿ ಮಠದ ಜಗದ್ಗುರುಗಳು ಹಾಗು ಕಾಶಿಯ ಸುಪ್ರಸಿದ್ಧ ಪಂಡಿತರು.



ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿಯವರೊಡನೆ ಮೂರುಸಾವಿರ ಮಠದ ಜಗದ್ಗುರುಗಳು. ನಿಂತವರು: ಲಿಂ. ಗುರುಮಹಾಂತ ಸ್ವಾಮಿಗಳು ಚಿತ್ತರಗಿ, ಶ್ರೀ ಸಿದ್ಧಪ್ರಭು ಸ್ವಾಮಿಗಳು ಚಿಂಚಣಿ, ಡಾ. ಸರೋಜಿನಿ ಮಹಿಷಿ.



ಭಾರತದ ಉಪರಾಷ್ಟ್ರಪತಿಗಳಾದ
ಪಾಠಕರೊಡನೆ ಜಗದ್ಗುರುಗಳು.



ಸಿಂದಗಿಯಲ್ಲಿ ಅಡ್ಡ ಪಲ್ಲಕ್ಕಿ ಮಹೋತ್ಸವ.



ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘದಿಂದ ಪ್ರಾರಂಭವಾದ ಮಹಿಳಾ ಕಾಲೇಜಿನ ಉದ್ಘಾಟನೆಯನ್ನು ಶಿಕ್ಷಣ ಮಂತ್ರಿಗಳಾದ ಶಂಕರೇಗೌಡರು ಜಗದ್ಗುರುಗಳ ಸನ್ನಿಧಿಯಲ್ಲಿ ಮಾಡುತ್ತಿರುವ ಸಂದರ್ಭದಲ್ಲಿ





ಹುಬ್ಬಳ್ಳಿ ಮೂರುಸಾವಿರ ಮಠದ ಜಗದ್ಗುರುಗಳ ಸನ್ನಿಧಿಯಲ್ಲಿ ನಡೆದ, ಚಿತ್ತರಗಿ, ಇಲಕಲ್ಲ ಮಹಾಂತ ಸ್ವಾಮಿಗಳ ಪಟ್ಟಾಭಿಷೇಕ ಸಮಾರಂಭ.



ಜಗದ್ಗುರುಗಳು ವಿದೇಶಯಾತ್ರೆಗೆ ದಯಮಾಡಿಸುವಾಗ ಬೆಳಗಾವಿಯ
ವಿಮಾನ ನಿಲ್ದಾಣದಲ್ಲಿ
ಕರ್ನಾಟಕದ ಸ್ವಾಮಿಗಳು ಬೀಳ್ಕೊಡುತ್ತಿರುವರು.



ಜಪಾನಕ್ಕೆ ಪಯಣಮಾಡಿಸುವಾಗ ಬೆಳಗಾಂವಿ ವಿಮಾನ ನಿಲ್ದಾಣದಲ್ಲಿ



ಜಪಾನದಲ್ಲಿರುವ “ನಾರಾ”ದಲ್ಲಿ ಜಗದ್ಗುರುಗಳು
ಎಡಗಡೆಯಿರುವವರು ಪ್ರೊ. ಎ. ಎಲ್. ಹಿರೇಮಠ



ಜಪಾನದಲ್ಲಿರುವ "ಕ್ಯೋಟೋ"ದ ಸಭಾಭವನದಲ್ಲಿ ವಿಚಾರಮಗ್ನರಾಗಿದ್ದ
ಮೂರುಸಾವಿರ ಮಠದ ಜಗದ್ಗುರುಗಳು



ಜಪಾನದ ಕ್ಯೋಟೋದ ಬಹಿರಂಗ ಅಧಿವೇಶನದಲ್ಲಿ ಮೂರುಸಾವಿರ ಮಠದ
ಜಗದ್ಗುರುಗಳು ಭಾಷಣ ಮಾಡುತ್ತಿರುವರು



ಜಪಾನ ದೇಶದ ''ನಾರಾ'' ದಲ್ಲಿಯ ಬೌದ್ಧ ಮಂದಿರದಲ್ಲಿ ಜಗದ್ಗುರುಗಳು



ಜಪಾನದ ಪ್ರವಾಸದಲ್ಲಿ ವಿಶ್ವಶಾಂತಿ ಪರಿಷತ್ತಿನ ಪ್ರತಿನಿಧಿಗಳೊಂದಿಗೆ



ಹುಬ್ಬಳ್ಳಿ ಹಿರೇಪೇಟೆಯಲ್ಲಿ ಜಗದ್ಗುರುಗಳ ಹಾಗೂ ಶ್ರೀ ರಂಗನಾಥ ದಿವಾಕರರ ಸತ್ಕಾರ ಸಮಾರಂಭ.



ಲೆಫ್ಟನೆಂಟ್ ಗೌರ್ನರ್ ಬಿ. ಡಿ. ಜತ್ತಿಯವರೊಡನೆ.



ಹಾವೇರಿ ಹುಕ್ಕೇರಿಮಠದ ಸತ್ಕಾರ ಸಮಾರಂಭದಲ್ಲಿ



ಹಾವೇರಿ ಹುಕ್ಕೇರಿ ಮಠದಲ್ಲಿ ಶ್ರೀ ಜಗದ್ಗುರುಗಳ ಮತ್ತು ರಂಗನಾಥ ದಿವಾಕರರ ಸತ್ಕಾರ ಸಮಾರಂಭ.



ಮಹರ್ಷಿ ದೈವರಾತರ ಸತ್ಕಾರ ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಿದಾಗ.



ಜಗದ್ಗುರು ಮಹಾ ಸನ್ನಿಧಿಯಲ್ಲಿ ಹಾವೇರಿ ಶ್ರೀಗಳು. ಲಿಂ. ಶಿವಬಸವ ಶಿವಯೋಗಿಗಳವರ
೨೫ನೆಯ ವರ್ಷದ ಪುಣ್ಯ ತಿಥಿಯ ಸಂದರ್ಭದಲ್ಲಿ...



ಹುಬ್ಬಳ್ಳಿ ಮೂರುಸಾವಿರಮಠದ ಜಗದ್ಗುರು ಮಹಾ ಸನ್ನಿಧಿಯವರ ಅಧ್ಯಕ್ಷತೆಯಲ್ಲಿ
ಲಿಂ. ಚಿತ್ತರಗಿ ವಿಜಯ ಮಹಾಂತ ಶಿವಯೋಗಿಗಳವರು, ಇಲಕಲ್ಲ
ಅವರ ಅರವತ್ತನೆಯ ವರುಷದ ಸ್ಮಾರಕೋತ್ಸವ ಸಂದರ್ಭದಲ್ಲಿ
ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು ಚಿತ್ತರಗಿ ಇಲಕಲ್ಲ.



ಈ ಗ್ರಂಥದ ಪ್ರಕಟನೆಗೆ ಸೇವೆಸಲ್ಲಿಸಿದವರು
ಶ್ರೀ ಸಿಂಧೆ.



ಜಗದ್ಗುರು ಮೂರುಸಾವಿರ ಮಠದ ಸೇವೆಗಾಗಿ ಜೀವನವನ್ನೇ
ಮುಡುಪಾಗಿಟ್ಟ ಸೊಲಬಪ್ಪಜ್ಜ



ಹುಬ್ಬಳ್ಳಿ ಮೂರುಸಾವಿರ ಮಠದ ಪ್ರಸಾದ ನಿಲಯದ ವಿದ್ಯಾರ್ಥಿಗಳು,



ಹುಬ್ಬಳ್ಳಿ ಜಗದ್ಗುರುಗಳ ಅಧ್ಯಕ್ಷತೆಯಲ್ಲಿ ಶ್ರೀ ಜ.ಚ.ನಿ. ಯವರ
ಷಷ್ಠ್ಯಬ್ದಿ ಸಮಾರಂಭ, ಕೊಪ್ಪಳ



ಜಗದ್ಗುರುಗಳು ಹಂಪಿಗೆ ದಯಮಾಡಿಸಿದಾಗ.
ಜೊತೆಯಲ್ಲಿ ಕಪನಹಳ್ಳಿ ಶಿವಯೋಗ ಮಂದಿರ ಹಾಗೂ
ಹುಬ್ಬಳ್ಳಿ ಎರಡೆತ್ತಿನ ಮಠ ಶ್ರೀಗಳಿರುವರು



ಸುತ್ತೂರ ಜಗದ್ಗುರುಗಳ ಸತ್ಕಾರ ಸಮಾರಂಭದಲ್ಲಿ



ಹುಬ್ಬಳ್ಳಿ ಮೂರುಸಾವಿರಮಠದ ಜಗದ್ಗುರುಗಳು ಹೊಸಪೇಟೆಯಲ್ಲಿರುವ
ತುಂಗಭದ್ರಾ ಜಲಾಶಯ ನಿರೀಕ್ಷಿಸುತ್ತಿರುವ ದೃಶ್ಯ



ಶ್ರಾವಣ ಮಾಸದ ಮೂರುಸಾವಿರಮಠದ ಯಾತ್ರಾ ಮಹೋತ್ಸವ ಸಂದರ್ಭದಲ್ಲಿ
ಶ್ರೀ ಜಗದ್ಗುರುಗಳು ಸಿಂಹಾಸನಾರೋಹಣ ಮಾಡಿದಾಗ
೧೯೭೧



ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘದ ಮಹಿಳಾ ಕಾಲೇಜನಲ್ಲಿ



ಬೆಳಗಾಂವಿ ಜಿಲ್ಹೆಯ ನಾಗನೂರ ಭಕ್ತರಿಂದ ನಡೆದ ನೃತ್ಯ ಪ್ರದರ್ಶನ
(ಸಿಂಹಾಸನಾರೋಹಣ ಸಮಾರಂಭದಲ್ಲಿ)



ಮೂರುಸಾವಿರಮಠದ ಬಸವ ಜಯಂತಿಯ ಸಮಾರಂಭದಲ್ಲಿ
ಶ್ರೀ ನಿ. ಪ್ರ. ಬಸವಲಿಂಗಸ್ವಾಮಿಗಳು ಶಿಗ್ಗಾಂವಿಮಠ ಹುಬ್ಬಳ್ಳಿ
ತಪಸ್ವಿ ಶ್ರೀ ಕುಮಾರಸ್ವಾಮಿಗಳು ತಪೋವನ ಧಾರವಾಡ



ಶ್ರೀ ಜಗದ್ಗುರುಗಳವರೊಂದಿಗೆ ಮೂರುಸಾವಿರಮಠದ
ಕುಮಾರೇಶ್ವರ ಶಿವಯೋಗಿ ಸಂಘದ ಸಾಧಕರು ಹಾಗು ವಟುಗಳು ೧೯೬೨



ಚಿಂಚಣಿಯ ೬೩ ಮಂಟಪ ಪೂಜಾ ಮಹೋತ್ಸವ ಸಮಾರಂಭದಲ್ಲಿ



ಮೂರುಸಾವಿರ ಮಠದ ಕುಮಾರೇಶ್ವರ ಶಿವಯೋಗಿ ಸಂಘದ
ಸಾಧಕರು ಆಸನವನ್ನು ಹಾಕುತ್ತಿರುವ
ದೃಶ್ಯ. (೧)



ಮೂರುಸಾವಿರ ಮಠದ ಕುಮಾರೇಶ್ವರ ಶಿವಯೋಗಿ
ಸಂಘದ ಸಾಧಕರು ಆಸನವನ್ನು ಹಾಕುತ್ತಿರುವ
ದೃಶ್ಯ. (೨)



ಶ್ರೀ ಜಗದ್ಗುರು ಮೂರುಸಾವಿರ ಮಠದ ಲೆಕ್ಕಪತ್ರಗಳನ್ನು ನಿರೀಕ್ಷಿಸುತ್ತಿರುವ ಸಂದರ್ಭದಲ್ಲಿ



ಮೂರುಸಾವಿರ ಮಠದ ಕುಮಾರ ವನದಲ್ಲಿ



ಪ್ರೊ: ಜಿ. ಎಚ್. ಹನ್ನೆರಡುಮಠ M. A.
ಸಂಪಾದಕರು : 'ಚಿತ್ರಭೆ' ಹಾಗೂ 'ಪರಂಜ್ಯೋತಿ'



ಪೂಜ್ಯ ಜಗದ್ಗುರುಗಳೊಂದಿಗೆ ಶ್ರೀ ನಿ. ಪ್ರ. ಸಿದ್ಧಪ್ರಭುಸ್ವಾಮಿಗಳು ಚಿಂಚಣಿ, ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು, ಇಲಕಲ್ಲ

# ಜಗದ್ಗುರು ಗಂಗಾಧರ ಕವಿ

ಡಾ. ಡಿ. ಎಸ್. ಕರ್ಕಿ

ಹುಬ್ಬಳ್ಳಿಯ ಮೂರುಸಾವಿರಮಠದ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಕಾವ್ಯರಚನೆಯಲ್ಲಿ ತುಂಬಾ ಅಭಿರುಚಿ ಆಸಕ್ತಿಗಳನ್ನೂ ತಳೆದವರು. ಅವರ ಕಾವ್ಯರಚನೆ ಎಳವಯದಲ್ಲಿಯೇ ಆರಂಭವಾಯಿತು. ಶಿವಯೋಗಮಂದಿರದಲ್ಲಿ ವಟುವಾಗಿ ಅಧ್ಯಯನ ಮಾಡುತ್ತಿರುವಾಗಲೇ ಅವರು ಕವಿತೆಯ ರಚನೆಗೆ ತೊಡಗಿದರು. ಆಗ ಅವರು ಬರೆಯುತ್ತಿದ್ದುದು 'ಮಹಾಂತದೇವರು' ಎಂಬ ಹೆಸರಿನಲ್ಲಿ, ಅವರ ಪ್ರಪ್ರಥಮ ಪ್ರಕಟಿತ ಕವಿತೆ 'ಶ್ರೀ ವಿಜಯಮಹಾಂತೇಶ ಲಾವಣಿ'. ಆ ಲಾವಣ್ಯ-ಮಯವಾದ ಲಾವಣಿಗೆ ಮುನ್ನುಡಿ ಬರೆಯುತ್ತ "ಇವರು ಇಂಥ ಚಿಕ್ಕವಯಸ್ಸಿನಲ್ಲಿ ಇಂಥ ಸಾಹಸ ಮಾಡಿದ್ದು ನೋಡಿದರೆ ಇವರು ಸನಿಹದಲ್ಲಿ ಗಣ್ಯ ಸಾಹಿತಿಗಳಾಗುವ ರೆಂಬುದು ನಿಸ್ಸಂದೇಹವು" ಎಂದು ಮುನ್ನುಡಿ ಬರೆದವರು ಆಗ ಹೇಳಿದ ಮಾತನ್ನು ಇಲ್ಲಿ ಗಮನಿಸಬೇಕು. ಆ ಮಾತು ಈಗ ಸತ್ಯವಾಗಿ ಪರಿಣಮಿಸಿದೆ. ಆ ಮೊದಲೇ ಉದಯೋನ್ಮುಖ ಕವಿ ಮಹಾಂತದೇವರು ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನ ಮಠದ ಮರಿಗಳಾಗಿದ್ದರೆಂಬುದನ್ನು ಮುನ್ನುಡಿಕಾರರು ಒಂದು ನುಡಿಯಲ್ಲಿ ಸುಳುಹುಗಾಣಿಸಿದ್ದಾರೆ. ಇಲ್ಲಿ ಗಮನಿಸಬೇಕಾದ ಮಾತೆಂದರೆ ಆಗಿನ ಆ ಎಳೆವಯದ ಮಹಾಂತದೇವರ ಹೃದಯದಲ್ಲಿ ವಾಸಮಾಡಿದ್ದ ಆ ಎಳೆ ಕವಿಯ ಬೆಳವಣಿಗೆಗೆ ತಕ್ಕ ಪರಿಸರ ದೊರೆಯಿತೆಂಬುದು. ಬೆಳೆಯುವ ಎಳೆ ಜೀವಕ್ಕೆ ಒಳ್ಳೆಯ ಪರಿಸರದಿಂದ ತುಂಬ ಅನುಕೂಲವಾಗುತ್ತದೆ. ಈ ಕವಿಯ ಚಿತ್ತ ಅರಳಿದುದು ಶಿವಯೋಗಮಂದಿರದ ಶುದ್ಧವೂ ಚೇತೋಹಾರಿಯೂ ಆದ ವಾತಾವರಣದಲ್ಲಿ. ಶಿವಯೋಗಮಂದಿರದ ವಟು ವಿದ್ಯಾರ್ಥಿಯಾಗಿ ಅಧ್ಯಯನ ಮಾಡುವ ಯೋಗ ಅವರಿಗೆ ಒಂದು ಸುಯೋಗವಾಗಿ ಪರಿಣಮಿಸಿತು. ಮಲಯ ಪ್ರಭೆಯ ಸೊಗಸಾದ ತೀರ ಪ್ರದೇಶದಲ್ಲಿ ನೆಲಸಿದ ಶಿವಯೋಗಮಂದಿರವು ಪ್ರಕೃತಿ ಸೌಂದರ್ಯದ ನೆಲವೀಡೂ ಆಗಿದೆ. ಹೊಳೆ ಅಲ್ಲಿ ಅಂದವಾಗಿ ಹರಿದಿದೆ; ಸಲಿಲನಿನಾಡದೊಡನೆ ಹರಿಯುತ್ತಿದೆ. ತೀರದ ಆಚೆ ಈಚೆ ಹಸಿರು ಮುರಿಯುವ ಪುಟ್ಟ ಗಿಡ ಬಳ್ಳಿಗಳ ಚೆಲುವಾದ ನೋಟವನ್ನೊಳಗೊಂಡ ಮಲೆ

ಮಲೆಗಳು ಶಿವಯೋಗಮಂದಿರದ ಕ್ಷೇತ್ರವನ್ನೂ ಸುತ್ತುವರಿದು ಮನೋಹರವಾದ ನಿಸರ್ಗದ ದೃಶ್ಯಗಳನ್ನೂ ನಿರ್ಮಿಸಿವೆ. ಸನಿಹದಲ್ಲಿ ಒಂದೆಡೆಗೆ ಪ್ರಕೃತಿರಮ್ಯವಾದ ಮಹಾಕೂಟದ ಪುಣ್ಯಕ್ಷೇತ್ರ. ಇನ್ನೊಂದೆಡೆಗೆ ಬನದಬಿನದವೆಂಬಂತಿರುವ ಬನಶಂಕರಿಯ ರಮಣೀಯ ಕ್ಷೇತ್ರ. ಅನತಿದೂರದಲ್ಲಿಯೇ ಬಾದಾಮಿಯ ಸುವಿಖ್ಯಾತ್ ಗುಹಾ–ದೇವಾಲಯಗಳು. ಅದರಂತೆ ಶಿಲ್ಪಕ್ಕೆ ಪ್ರಸಿದ್ಧವಾದ ಪಟ್ಟದಕಲ್ಲೂ ದೂರವಿಲ್ಲ. ಸುಪ್ತಕಾವ್ಯ ಶಕ್ತಿಯನ್ನು ಜಾಗೃತಗೊಳಿಸಲು ತಕ್ಕ ಸನ್ನಿವೇಶ ಶಿವಯೋಗಮಂದಿರ.

## ಶ್ರೀ ವಿಜಯಮಹಾಂತೇಶ ಲಾವಣಿ

ಸರಿ; ಕಾವ್ಯಶಕ್ತಿ ಜಾಗೃತವಾಯಿತು. ಅದಕ್ಕೆ ಗುರುಭಕ್ತಿ ಕೂಡಿತು. ಶ್ರೀ ವಿಜಯ ಮಹಂತೇಶ ಲಾವಣಿ ರಚನೆಗೊಂಡು ಪ್ರಕಾಶನ ಪಡೆಯಿತು— ಶಿವಯೋಗಮಂದಿರ ದಲ್ಲಿ ೧೯೪೪ರಲ್ಲಿ. ಈ ಲಾವಣಿ ಮಂದಾನಿಲಯದ ತ್ವರಿತ್‌ಗತಿಯಲ್ಲಿ ಸರಳ ಶ್ರುತಿ ಗೂಡಿಬಂದಿದೆ. ಈ ಲಾವಣಿಯ ಸರಳ ಸಂಗಮ ಛಂದದ ಅಂದವನ್ನು ಅರಿಯಲು ನಾಲ್ಕು ಚರಣಗಳನ್ನು ಉದಾಹರಿಸಿದರೆ ಸಾಕು.

ತರತರ ತರುಗಳ ಲತೆಗಳ ಹಳ್ಳಗಳಂದದಿ ಶೋಭಿಸ ಕರುನಾಡು
ಉರುತರ ಜ್ಞಾನದ ಕಣಿಗಳ ಯತಿಕುಲ ತಿಲಕರ ಹಿರಿನಾಡು

ಕರುನಾಡಿನ ಸಂಬಂಧದಲ್ಲಿ ಸಾಮಾನ್ಯವಾಗಿ ಹೇಳಬಹುದಾದ ಪ್ರಕೃತಿಯ ಚೆಲುವಿನ ಬಗೆಗಿನ ಮಾತುಗಳು ಶಿವಯೋಗಮಂದಿರಕ್ಕೆ ವಿಶಿಷ್ಟವಾಗಿ ಅನ್ವಯಿಸುತ್ತದೆ. ಪ್ರಕೃತಿ ಸೌಂದರ್ಯದ ಪ್ರಜ್ಞೆ ಕವಿಚಿತ್ತಕ್ಕೆ ಶಿವಯೋಗಮಂದಿರದಲ್ಲಿ ಮೂಡಿಬಂದಂತೆ ಗುರು–ಕುಲದ ಅನುಭವವೂ ಆಯಿತು. ಕವಿಯ ಅಂದವಾದ ಶೈಲಿಗೆ ಕೆಳಗಣ ಚರಣಗಳು ಕನ್ನಡಿ ಹಿಡಿಯುವಂತಿವೆ,

ಶ್ರೀ ಮರುಳಸಿದ್ಧೇಶ್ವರ ಅಷ್ಟೋತ್ತರಶತನಾಮಾವಳಿ.

ಮುತ್ತುಗಳಿಂದಲಿ ಶೋಭಿಸ ತೊಟ್ಟಿಲ ಮುತ್ತೈದೆಯರಾಗ
ಉತ್ತಮ ಪೂಗಳ ಪಾಸುತ ಕಂದನ ಮಲಗಿಸಿದರು ಬೇಗ
ಸುಂದರ ಮೂರ್ತಿಯೆ ಶರಣರ ಕಂದನೆ ಎನ್ನುತ ಜೋಗುಳಪಾಡಿದರು
ಚಂದಿರ ರೂಪನೆ ಪಾಪವಿನಾಶನೆ ಜೋ ಜೋ ಎನ್ನುತ ತೂಗಿದರು

'ಶ್ರೀ' ವಿಜಯ ಮಹಾಂತೇಶ ಲಾವಣಿ'ಯಲ್ಲಿ ಅಂದಿನ ಉದಯೋನ್ಮುಖ ಕವಿ ಮಹಾಂತದೇವರು ತೋರಿದ ಮಂದಾನಿಲ ಗತಿಯ ಸರಳತೆ ಹಾಗು ಸುಗಮತೆಗಳನ್ನು ಮುಂದೆ ಅವರು ಮರುಳಸಿದ್ಧೇಶ್ವರ ಅಷ್ಟೋತ್ತರಶತನಾಮಾವಳಿಯಲ್ಲಿ ಹಾಗು ಶಿವಬಸವೇಶ್ವರ ಅಷ್ಟೋತ್ತರಶತನಾಮಾವಳಿಯಲ್ಲಿ ಉತ್ಸಾಹಗತಿಯ ಮೂಲಕ ತೋರಿದ್ದುಂಟು. ಅಗುಳಿನ ಮೇಲಿಂದ ಅನ್ನದ ಪರೀಕ್ಷೆ ಮಾಡಬಹುದು.

ಬಾಲಲೀಲೆ ತೋರ್ದು ಜನಕೆ ಮೋದವಿತ್ತೆ ಮರುಳಸಿದ್ಧ
ಫಾಲನಯನ ನೆನಹಿನಲ್ಲಿ ಕಾಲ ಕಳೆದೆ ಮರುಳಸಿದ

—ಮರುಳಸಿದ್ದೇಶ್ವರ ಅ. ಶ.

ದಾರಿ ತಪ್ಪಿ ನಡೆವರನ್ನು ಕಂಡು ನೊಂದೆ ಶಿವನೆ ಬಸವ
ದಾರಿ ತೋರಿ ಬೆಳಕ ನೀಡಿ ಕಳೆಯಿತ್ತೆ ಶಿವನೆ ಬಸವ

—ಶ್ರೀ ಶಿವಬಸವೇಶ್ವರ ಅ. ಶ.

ಮೂರು ಮೂರು ಮಾತ್ರೆಗಳ ಎಂಟೆಂಟು ಗುಣಗಳು ಈ ಚರಣಗಳಲ್ಲಿ ಸರಾಗವಾಗಿ ಈ ಉತ್ಸಾಹ ಲಯದಲ್ಲಿ ನುಡಿಯುತ್ತವೆ ಎಂಬುದನ್ನು ಅರಿಯಬಹುದು.

## ಪೂಮಾಲೆ

ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರರವರು ಇಡಿಯಾಗಿ ಕಂದ ಪದ್ಯಗಳಲ್ಲಿ ರಚಿಸಿದ 'ಪೂಮಾಲೆ' ನಿಜಕ್ಕೂ ಅಂದವಾದ ಪೂಮಾಲೆ. ಅದೊಂದು ಭಕ್ತಿಪುಷ್ಪಗಳ ಮಾಲೆ ಎಂದು ಹೇಳಲು ಅಭ್ಯಂತರವಿಲ್ಲ. ಈ ಕಂದ-ಗೀತ ಸಂಗ್ರಹವು ಚಿಕ್ಕದಾದರೂ ಚೊಕ್ಕಟವಾದುದು ಭಕ್ತಿಯನ್ನು ಹೃದಯಂಗಮವಾಗಿ ಕಂದ ಪದ್ಯಗಳಲ್ಲಿ ಅಭಿವ್ಯಕ್ತ ಮಾಡಬಹುದೆಂಬುದನ್ನು ಪೂಮಾಲೆ ಚೆನ್ನಾಗಿ ಎತ್ತಿ ತೋರಿದೆ. ಕಂದಪದ್ಯ ಜಗದ್ಗುರುಗಳ ಕೈಯಲ್ಲಿ ಹೃದ್ಯವಾಗಿ ನುಡಿದಿದೆ. ಸುಂದರ ಶೈಲಿಯಲ್ಲಿ ಬಂಧುರ ಭಾವ ಅರಳಿದಂತಿದೆ. ಒಂದೊಂದು ಕಂದಪದ್ಯಗಳಲ್ಲಿ ಕಂದದ ಮೇಲೆ ಜಗದ್ಗುರು-ಕವಿಗಳಿಗೆ ನಿಜವಾದ ಪ್ರಭುತ್ವವಿದೆಯೆಂಬುದನ್ನು ಕಂದ ಪದ್ಯದ ಸೊಗಸನ್ನು ಬಲ್ಲವರು ಸಹಜವಾಗಿ ಅರಿಯಬಲ್ಲರು.

ಕಂದುಗಳಮೃತಲತಿಕಾ
ಕಂದಂಗಳಮಾನ ಜಾತಿ ವಿಲಸನ್ಮಾ
ಕಂದಂಗಳ್ ತನಿರಸದು
ಕ್ಕಂದಂಗಳ್ ಸೊನಯಿಸಿರ್ಪುವೀನುತ ಕೃತಿಯೊಳ್

ಎಂದು ಹರಿಹರನು ಗಿರಿಜಾ ಕಲ್ಯಾಣದಲ್ಲಿ ಕಂದ ಪದ್ಯಗಳ ಸೊಬಗನ್ನು ಬಾಯ್ತುಂಬ ಹೊಗಳಿದುದು ನೆನಪಿಗೆ ಬರುತ್ತದೆ. 'ಪೂಮಾಲೆ'ಯ ಕಂದ ಪದ್ಯಗಳನ್ನು ಪರಿಶೀಲಿಸಿದಾಗ ಛಂದ ಹಾಗು ಭಾವ ಬಂಧುರವಾಗಿ ಬೆರೆದಿವೆ. ಪೂಮಾಲೆಯಕಂದ ಪದ್ಯಗಳಲ್ಲಿ.

ಪೂಮಾಲೆ ಪ್ರಕಟವಾದುದು ೧೯೫೪ರಲ್ಲಿ ಶ್ರೀ ಗಂಗಾಧರ ರಾಜಯೋಗೀಂದ್ರರು ಜಗದ್ಗುರುಗಳಾಗುವ ಮುನ್ನ, ಅವರು ಇನ್ನೂ ಚಿತ್ತರಗಿ ಮಹಾಂತದೇವರು ಎಂಬ ಹೆಸರನ್ನು ತಳೆದಾಗ. 'ಸಾಹಿತ್ಯ ರತ್ನ'ರಾಗಿ ಕಾವ್ಯತೀರ್ಥರಾಗಿ ರಚಿಸಿದ ಶ್ರುತಿಸುಭಗವಾದ ಕಾವ್ಯಕೃತಿಯಿದು- ೯೪ ಕಂದಪದ್ಯಗಳ ಪೂಮಾಲೆ ಕವಿಯಲ್ಲಿ ಭಕ್ತಿಯನ್ನು

ಪ್ರೇರಿಸಿದ ಸುಕುಮಾರಯೋಗಿಗಳಿಗೆ ಶಿವಯೋಗಮಂದಿರವನ್ನು ಸ್ಥಾಪಿಸಿ ಕೀರ್ತಿ-ಶೇಷರಾದ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳವರಿಗೆ ಅರ್ಪಿತವಾಗಿದೆ. 'ಅರ್ಪಣೆ' ಕೂಡ ಒಂದು ಸುಂದರವಾದ ಕಂದಪದ್ಯದಲ್ಲಿ ರೂಪತಾಳಿದೆ.

ನಿನ್ನಡಿಯು ಧ್ಯಾನಿಸುತ್ತ
ನಿನ್ನ ಸುನಾಮವನೆ ಪಾಡಿ ಪರಿಣಮಿಸುತ್ತಂ
ನಿನ್ನ ಕೃಪೆಯಿಂದ ಪೇಳ್ದೀ
ಸನ್ನುತ ಪದ್ಯಗಳ ಪದಕರ್ಪಿಸುವೆಂ

ಪದಗಳು ಪದ್ಯಗಳಲ್ಲಿ ತಾವಾಗಿಯೇ ಸರಳವಾಗಿ ಸುಲಲಿತವಾಗಿ ಹೊಂದಿಕೊಳ್ಳುವುದು ಈ ಕವಿಗಳ ಕವಿತೆಗಳಲ್ಲಿ ಎಂಬುದಕ್ಕೆ ಈ ಕಂದ ಪದ್ಯ ನಿದರ್ಶನವಾಗಿದೆ. ಹರಿಹರ ದೇವನ ಮಾತಿನಲ್ಲಿ ಹೇಳುವುದಾದರೆ ಪೂಮಾಲೆಯು "ಕಂದಂಗಳ್ ತನಿರಸದುಕ್ಕಂದಗಳ್."

ಮೊದಲ ಪದ್ಯದಲ್ಲಿ ಈ ಕವಿಗಳು ತಮಗೆ ಮತಿಯನ್ನು ಪಾಲಿಸಲು ನರವರ ಸುರವರ ಗುರುವರ......ಸುಕುಮಾರಯೋಗಿವರ್ಯರನ್ನು ಪ್ರಾರ್ಥಿಸಿದ್ದಾರೆ. ಯೋಗ ಮಾರ್ಗದಿ ಶಿವಯೋಗಮಾರ್ಗದ ಇರವನ್ನು ಪಾಲಿಸಬೇಕೆಂಬುದು ಅವರ ಪ್ರಾರ್ಥನೆ. ಪೂಮಾಲೆಯಯನ್ನು ರಚಿಸಿದ ಕವಿಗೆ 'ಸುವಿಚಾರದ ಇರವು' ಮುಖ್ಯವೆಂಬುದನ್ನು ಗಮನಿಸಬೇಕು. ಅದರಂತೆಯೇ ಸತ್ಯ ಸುಮಾರ್ಗ ಮುಖ್ಯ. ಗುರುವಾದವನು "ಶಿವ ಸದ್ಧರ್ಮದ ಹಾದಿಯೊಳರಿಸುವನು" ಎಂಬುದು ಅವರ ನಂಬಿಗೆ. ಪೂಮಾಲೆಯ ಮೊದಲಿನ ಹದಿನಾರು ಪದ್ಯಗಳು ಗುರುವಿನ ಮಹತಿಯನ್ನು ಕುರಿತು ಗುರುವಿನ ಅಡಿಗೆ ಸಲ್ಲಿಸಿದ ಪದ್ಯಪುಷ್ಪಗಳು. ಮುಂದಣ ಕೆಲವು ಪದ್ಯಗಳು ಲಿಂಗದ ಹಾಗೂ ಜಂಗಮದ ಮಹತಿಗೆ ಮೀಸಲಾಗಿದ್ದ ಬಗೆಯನ್ನು ಸದ್ಭಾವದತ್ತ ಸುಳಿಯಿಸುತ್ತದೆ

ಆರಾಧನೆಯಲ್ಲಿ ಧ್ಯಾನ ಮುಖ್ಯ. ಧ್ಯಾನದ ರೀತಿಯನ್ನು ಸುಳುಹುಗಾಣಿಸುತ್ತ

"ಮನದೊಳ್ ನೆನೆಯುವ ಮನುಜಗೆ ಮನೆಯೇಂ ಮಠವೇಂ ?"

ಎಂದು ಹೇಳಿದ ನುಡಿ ಮನಸ್ಸನ್ನು ಹಿಡಿಯದಿರದು.

ಪೂಮಾಲೆಯಲ್ಲಿ ಆ ತರುವಾಯ ಪವಣಿಕೆಗೊಂಡ ಕಂದ ಕುಸುಮಗಳು ನೀತಿ ನೈರ್ಮಲ್ಯಗಳ ಸಂಪಾಸನೆಯನ್ನು ಸೂಸಿವೆ. ದೇವಾರಾಧನೆಯಲ್ಲಿ ಚಿತ್ತವಂದಾಗುವು ದಲ್ಲಿ ಧ್ಯಾನ ಮುಖ್ಯ ಎಂಬುದನ್ನು ಮನಮುಟ್ಟುವಂತೆ ಹೇಳಿದ್ದಾರೆ ಕವಿ.

"ಚಿತ್ತವು ನಿಲ್ಲದೆ ದೇವರ ಹತ್ತಿರ ಕುಳ್ಳಿರ್ದು ಹೆಚ್ಚು ಪೂಜೆ ಮಾಡಿದರೆ ಅದು ಕೃತ್ರಿಮ ಪೂಜೆ."

ಬಣ್ಣದ ಮಾತಿನಿಂ ಭಕ್ತಿ ಸಾಧ್ಯವಾಗದು ಎಂಬ ಅಭಿಪ್ರಾಯವು ಕೆಳಗಣ ಕಂದ ದಲ್ಲಿ ಚನ್ನಾಗಿ ಮನಂಬುಗುವಂತೆ ಅಭಿವ್ಯಕ್ತವಾಗಿದೆ. ಅದು ಒಂದು ಒಳ್ಳೆಯ ಶಬ್ದ ಚಿತ್ರವಾಗಿ ಚಿತ್ತಾಕರ್ಷಕವಾಗಿ ಮೂಡಿದೆ.

ಕಣ್ಣಿನ ಕೊನೆಯೊಳಗಿರುತಿಹ
ಬಣ್ಣದ ಪಕ್ಷಿಯನು ಹಿಡಿದು ಕಟ್ಟುವರಾರೈ
ಅಣ್ಣಗಳೇ ಪೇಳಿರಿ ಬರಿ
ಬಣ್ಣದ ಮಾತಿನೊಳು ಸಾಧ್ಯವಾಗುವದಲ್ಲೆ ?

ಇದೋ ಈ ಮುಂದಣ ಪದ್ಯ ಶಾಂತಿ ಸುಖದ ತಿರುಳನ್ನೇ ಚಿತ್ತದ ಮುಂದೆ ಎತ್ತಿಹಿಡಿದಂತಿದೆ.

ಮನದೊಳ್ ಸಮತೆಯುದಳವಡೆ
ಮನೆ ಮಾಡಿಹುದಯ್ಯ ಶಾಂತಿ ಸುಖ ಸಂಪದವು
ಘನವಾದ ಸುಧೆಯ ಸೇವನೆ
ಯನುಕೂಲಿಸಿದಂಗೆ ಹಸಿವು ಬಾಧಿಪುದೆಂತೈ

'ಕಂದ'ವೆಂಬುದು ಹಳೆಯ ಛಂದೋಬಂಧ: ಆದರೇನು ಅದನ್ನು ಚೆನ್ನಾಗಿ ಪ್ರಯೋಗಿಸಿದರೆ ಅದು ಯಾವಾಗಲೂ ಹೊಸ ಆನಂದವನ್ನು ನೀಡಬಲ್ಲುದೆಂಬುದಕ್ಕೆ ಮಹಾಂತದೇವ-ಗಂಗಾಧರ ಜಗದ್ಗುರುಗಳ ಪೂಮಾಲೆ ಸಾಕ್ಷಿಯಾಗಿದೆ ಎಂದು ಹೇಳಬಹುದು. ಪೂಮಾಲೆಯ ಕಂದ ಪುಷ್ಪಗಳು ಅಷ್ಟೊಂದು ಸೊಗಸಾಗಿವೆ; ಸದ್ಭಾವಯುಕ್ತವಾಗಿವೆ; ಸ್ವಾಗತಾರ್ಹವಾಗಿವೆ.

**ಪಥಿಕ**

'ಪಥಿಕ' ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಕವಿಗಳ ಇನ್ನೊಂದು ಕವನ ಸಂಗ್ರಹ. ಆಧುನಿಕ ಯುಗದ ಸಂಪೂರ್ಣ ಭಾವಗೀತ ಸಂಪ್ರದಾಯದ ಪಥದಲ್ಲಿ ಶ್ರುತಿಗೂಡಿ ಬಂದಿದೆ. 'ಪಥಿಕ' ಸಜ್ಜೀವನದ ಮಾರ್ಗದಲ್ಲಿ ನಡೆಯಲೆಳಸಿದ ಪಥಿಕನ ಅನುಭವ ಹಾಗು ಆದರ್ಶಗಳನ್ನು ಸುಳುವುಗಾಣಿಸುವಂತಿವೆ. ಈ ಕವನ ಸಂಕಲನದ ಕವಿತೆಗಳು ಸನ್ಮಾರ್ಗ ಗ್ರಂಥಮಾಲೆಯ ೬ನೆಯ ಹೂವಾಗಿ ಅರಳಿ ಬಂದಿತು ಈ ಕವನ ಸಂಗ್ರಹ ೧೯೫೪ರಲ್ಲಿ. ಅದು ಮೂಡಿ ಬಂದಾಗ ಕವಿ ಇನ್ನೂ ಚಿತ್ತರಗಿಯ ಮಹಾಂತ ದೇವರಾಗಿದ್ದರು. ಅಂದಿನ ಅವರ ಚಿತ್ತರಗಿಯ ಚಿತ್ತವೇ ಚಿತ್ರವಾಗಿ ಮೂಡಿದೆ 'ಪಥಿಕ'ದ ಕವಿತೆಗಳಲ್ಲಿ- ಎಂದು ಹೇಳಬಹುದು. ಪಥಿಕ ಕವನ ಸಂಗ್ರಹ ಪುಸ್ತಕದ ಮೇಲು ಹೊದಿಕೆ ಪಥಿಕ ಸಾಗಿದ ಪಥವನ್ನು ಅಂದವಾಗಿ ಸುಳುಹುಗಾಣಿಸಿದೆ. 'ಬೆಟ್ಟದ ಮೇಲೆ ಅದೇ ಮೂಡುವ ಸೂರ್ಯ, ದಾರಿಯ ಆಚೆ ಈಚೆಯ ಎತ್ತರದ ಮರಗಳು, ಬೆಟ್ಟ ಬೆಟ್ಟಗಳ ಓರೆ ಏರಿ ಹೋಗುವಂತಹ ದಾರಿ, ಪ್ರಶಾಂತ ವಾತಾವರಣವನ್ನು ಸೂಚಿಸುವ ಪರಿಸರ- ಇವೆಲ್ಲ ಸಮುಚಿತವಾಗಿ ರೇಖೆಗೊಂಡಿವೆ. ಹೊದಿಕೆಯ ಚಿತ್ರ ದಲ್ಲಿ, ಶ್ರೀ ಜ. ಚ. ನಿ. ಎಂಬ ಹೆಸರಿನಿಂದ ಸುಪ್ರಸಿದ್ಧರಾದ ಸಾಹಿತಿಗಳು 'ಪಥಿಕ' ಕವನ ಸಂಕಲನಕ್ಕೆ ಮುನ್ನುಡಿ ಬರೆದುದು ಯಥಾ ಯೋಗ್ಯವಾಗಿದೆ.

'ಪಥಿಕ'ದ ಕವಿತೆಗಳಲ್ಲಿ ಭಾವಕ್ಕೆ ತಕ್ಕೆ ಛಂದಸ್ಸು ಹೊಂದಿಕೊಂಡಿದೆ ಎಂಬ ಮಾತನ್ನು ಮೊದಲು ಹೇಳಬಹುದು— 'ಲಲಿತ ಪದ' ವನ್ನು ಈ ಕವಿತೆಗಳು ವಿಶೇಷ ವಾಗಿ ಒಳಗೊಂಡಿವೆ. ಮಂದಾನಿಲ ಉತ್ಸಾಹ ಲಯಗಳೂ ಅಲ್ಲಲ್ಲಿ ಸ್ಪಂದಿಸಿವೆ.

'ಪಥಿಕ' ಸಂಗ್ರಹದ ಮೊದಲನೆಯ ಕವನ ಪಥಿಕ್. ದಾರಿ ತೋರಲು ಪರ ಮಾತ್ಮನನ್ನು ಕವಿ ಪ್ರಾರ್ಥಿಸಿದ ಪ್ರಾರ್ಥನೆ ಪಥಿಕ– ಎಂಬ ಕವಿತೆಯಲ್ಲಿ ರೂಪತಾಳಿದೆ. ಶೈಲಿ ಸರಳವಾಗಿದ್ದಂತೆ. ಭಾವನೆಯೂ ತಿಳಿಯಾಗಿದೆ. ಪಥಿಕನಿಗೆ ಗುರಿಯೆಂಬುದು ಬೇಕಷ್ಟೇ? ಅಂತಹ ಸರಿಯಾದ ಗುರಿಯತ್ತ– ಬೆಳಕಿನತ್ತ ನಡೆಯುವತನಕವು 'ನಡೆ ಮುಂದೆ, ಎಂಬ ಕವಿತೆಯಲ್ಲಿ ನುಡಿ ಪಡೆದಿದೆ. ಈ ಕವಿತೆಯಲ್ಲಿ ಕವಿ ತನ್ನನ್ನು ತಾನೇ ಎಚ್ಚರಿಸಿಕೊಂಡಿದ್ದಾನೆ; 'ಮುನ್ನಡೆಯಲು ಪ್ರೇರಿಸು–' ಎಂದು ಅಂತ ರಂಗವನ್ನು ಜಾಗ್ರತಗೊಳಿಸಿ ಕೇಳಿಕೊಂಡ ರೀತಿಯಲ್ಲಿ ಸ್ವಾರಸ್ಯವಿದೆ; ಯಾವುದೇ ಅನಾನುಕೂಲತೆಯುಂಟಾದರೂ ಶಿಲ್ಪಿ ಶಿಲೆಯಲ್ಲಿ ಕಲೆಯನ್ನರಳಿಸದೆ ಬಿಡುವನೇ? ತಾನೂ ಹಾಗೆಯೇ ಜೀವನದಲ್ಲಿ ಉತ್ತಮಿಕೆಯನ್ನು ಸಾಧಿಸಬೇಕೆನ್ನುವ ಹವಣಿಕೆ ಅನು ಭವದ ಪಥದಲ್ಲಿದ್ದ 'ಪಥಿಕನಿಗೆ.'

'ಭಿಕ್ಷುಕ' ವೆಂಬ ಕವಿತೆ ಕೂಡ ಅನುಭಾವದ ರೀತಿಯಲ್ಲಿ ಇದೆ. 'ಹೃದಯ ವೆಂಬುದು ಪ್ರಣತಿ, ಸದ್ಭಕ್ತಿಯೆಂಬುದು ತೈಲ, ಸುವಿಚಾರವೆಂಬುದು ಭಕ್ತಿ, ಈ ಬಗೆಯ ದೀಪ ಮೂಡಿಸಿದರೆ ಹೊಮ್ಮಿದ ಜ್ಯೋತಿಯಲ್ಲಿ ಪರಂಜ್ಯೋತಿಯಾದ ಪರ ಮಾತ್ಮನು ದರ್ಶನವನ್ನೀಯುವನು ಎಂಬ ಭಾವ ಈ ಕವಿತೆಯ ಜೀವಾಳ. ಅಂತ ರ್ಯದ ಜ್ಯೋತಿಗಳು ಬೆಳಗಿ ಅಜ್ಞತೆಯ ಅಂಧಕಾರವನ್ನು ಅಳಿಸಿ, ಜಗದಲ್ಲಿ ಶಿವ ಶಾಂತಿ ಕಾಂತಿಗಳನ್ನು ಹರಡಲಿ ಎಂಬುದು ಕವಿಯ ಆಶೆ.

'ಶಿವನ ಪುಟ್ಟಿ' ಎಂಬ ಕವಿತೆ ಹೃದಯಾಕಾಶದಿ ಏರಿಸು ಪುಟ್ಟಿ ಎಂಬ ಪ್ರೇರಣೆಯೊಂದಿಗೆ ಪರಿಣಾಮವನ್ನು ಬೆಳಗುವಂತೆ ಪ್ರಾರಂಭವಾಗಿದೆ. ಆರಂಭವಾ ದಂತೆ ಅನುಭವವನ್ನು ವಿವರಿಸುತ್ತ ಮುಂದುವರಿದ ಕವಿತೆ ಇದು. ಸ್ಫೂರ್ತಿಗೆ ತಕ್ಕಂತೆ ಧಾವಿಸುವ ಛಂದೋಗತಿಯಿಂದಾಗಿ ಈ ಕವಿತೆ ಭಾವಗೀತದ ರೀತಿಯಲ್ಲಿ ಮನ ಮೆಚ್ಚುವಂತೆ ರೂಪಗೊಂಡಿದೆ. ಹೃದಯಾಕಾಶದಲ್ಲಿ ಏರಿಸುವ "ಶಿವನ ಪುಟ್ಟಿ"ಯು—

ನಭದಲಿ ಬೆಳಗಲಿ ಚಿನ್ಮಯ ಕಿರಣ
ತುಂಬಲಿ ಪುಟ್ಟಿಯು ದೇವರ ಸ್ಮರಣ
ಆಗಲಿ ಜನನದ ಮರಣದ ಹರಣ
ಇಂತೇರಿಸು ಶಿವ ಪುಟ್ಟಿಯ ಜಾಣ.

ಎಂಬ ಸಂದೇಶದೊಡನೆ ಮುಗಿಯುತ್ತದೆ. ಈ ಗೀತದ ಛಂದೋಬಂಧ ಉತ್ಸಾಹವನ್ನು ತುಂಬುಕೊಂಡಿದೆ.

ಈ ಭಾವಗೀತಗಳು ವಿವಿಧ ವಿಷಯಗಳನ್ನೊಳಗೊಂಡಿವೆ. ಸ್ವಾತಂತ್ರ್ಯ ಗೀತ, ವಿಜಯಗೀತ, ಆಹ್ವಾನ, ನಿಶೆಗೆ, ಮೊಟ್ಟೆಹೊಡೆವವ, ಶಿವಯೋಗಮಂದಿರ, ಮರೆಯಾದ ಮಹಾತ್ಮ, ಕವಿ, ನಾವಿಕನನ್ನು ಕುರಿತು, ಸುಕುಮಾರನಿಗೆ, ಕವಿ ಸಮರ್ಪಣ, ಉತ್ತಿಷ್ಠಿತ, ಪ್ರೇರಣೆಗೆ, ಹೀಗೆ ವಿವಿಧ ವಿಷಯಗಳನ್ನು ಕುರಿತು ಬರೆದ ಕವನಗಳು 'ಪಥಿಕ'ನ ದಾರಿಯಲ್ಲಿ ಕೂಡಿಬಂದಿವೆ. 'ಶಿವಯೋಗ ಮಂದಿರ' ಎಂಬ ಕವಿತೆಯಲ್ಲಿ ಹೃದಯವೆಂಬ ಶಿವಯೋಗ ಮಂದಿರದ ಬಾಗಿಲು ತೆರೆದುದನ್ನು ಕಾಣುತ್ತೇವೆ. 'ನಾವಿಕ' ಎಂಬ ಕವಿತೆಯಲ್ಲಿ ನಾವಿಕನಲ್ಲಿ ನಂಬಿಗೆಯನ್ನು ಇಟ್ಟ ಶರಣನನ್ನು ಕಾಣುತ್ತೇವೆ. 'ಸುಕುಮಾರ'ನಲ್ಲಿ ಸನ್ಮಾರ್ಗದೀಪಕನನ್ನು ಸಂದರ್ಶಿಸುತ್ತೇವೆ. ಶಮಿ ಸಮರ್ಪಣದಲ್ಲಿ ಸುಜ್ಞಾನದ ಸುವರ್ಣವನ್ನು ವಿನಿಮಯ ಮಾಡುವ ಸದ್ಭಕ್ತನು ಸುಳುಹು ದೋರಿದ್ದಾನೆ. ಚಂದ್ರನಂತೆ ತಂಪು ತಳೆದು, ಸೂರ್ಯನಂತೆ ದೀಪ್ತಿಪಡೆದು ಸಲಿಲದಂತೆ ಸರಸವಾಗಿ ಕಾಣುವ ಕವಿಯ ದೃಷ್ಟಿ 'ಕವಿ' ಎಂಬ ಕವನದಲ್ಲಿ ಅರಳಿದೆ. ಹೃದಯವೆಂಬ ಭಾವಿಯನ್ನು ಸ್ವಚ್ಛವಮಾಡುವ ನೇಗಿಲಯೋಗಿ ಮೊಟ್ಟೆ ಹೊಡೆವವನಿಗೆ ಎಂಬ ಅನುಭವ ಪರವಾದ ಪದದಲ್ಲಿ ದರ್ಶನ ಕೊಡುತ್ತಾನೆ. "ಬಾಗಿಲನು ತೆರೆದಿರುವೆ ಬಾ ಬೇಗ ಓ! ಗುರುವೆ" ಎಂದು ಮೊದಲಾಗುವ 'ಆಹ್ವಾನ' ಎಂಬ ಕವಿತೆಯಲ್ಲಿ ಭಕ್ತಿಭಾವ ಹುರಿಗೂಂಡು ನಿಂತಿದೆ. ನಂಬಿ ಕರೆವ ಕರೆ ಇಲ್ಲಿ ಸ್ವರವೆತ್ತಿದೆ. ಕವಿ ಇಲ್ಲಿ ಶಿವನನ್ನು ಹೃದಯ ಮಂಟಪಕ್ಕೆ ಆಹ್ವಾನಿಸಿದ್ದಾನೆ. 'ಬಳಲುತಿಹ ಬಡವರಿಗೆ ಆಹಾರದಾನಂದ 'ದೊರೆತಾಗೆ ನಿಜವಾದ ಸಂಪೂರ್ಣ ಸ್ವಾತಂತ್ರ್ಯ' ಎಂಬ ಉದ್ಗಾರ 'ಸ್ವಾತಂತ್ರ್ಯ' ಎಂಬ ಕವಿತೆಯಲ್ಲಿ ಕರುಣೆಯೊಂದಿಗೆ ಹೊರಹೊಮ್ಮಿದೆ. ಕವಿತೆ ತನಗೆ ಬರೀ ಆನಂದವನ್ನುಂಟು ಮಾಡಿದರೆ ಸಾಲದು ಜನ ಬದುಕಬೇಕೆಂಬ ನಿಸ್ವಾರ್ಥ ಭಾವವು ಮೂಡಿ ಬರಬೇಕು– ಎಂಬುದನ್ನು ಈ ಸಂಗ್ರಹದ ಒಂದೆರಡು ಕವಿತೆಗಳು ಸುಳುಹುಗಾಣಿಸಿವೆ.

ಜಗದ್ಗುರು ಗಂಗಾಧರ ಕವಿಗಳಿಂದ ಹೀಗೆ ಕಾವ್ಯ ಗಂಗಾಧಾರೆ ಹೊನಲಾಗಿ ಹರಿದಿದೆ. ಅನುಭವ, ಅನುಭಾವಗಳೆರಡೂ ಬೆರೆತ ಈ ಕಾವ್ಯ ಸಲಿಲದಲ್ಲಿ ಮಿಂದವರು ಆನಂದವನ್ನು ಹೊಂದಬಲ್ಲರು. □

# *" ರತ್ನಪಕ್ಷಿ " ಕವನ ಕುರಿತು

ಶ್ರೀ ಜ. ಚ. ನಿ.

ಕನ್ನಡದ ಒಂದು ಹಿರಿಯೂರು ಹುಬ್ಬಳ್ಳಿ. ಅಲ್ಲಿರುವುದೊಂದು ಹೂಬಳ್ಳಿ ಅದು ಉಸಿರುಳ್ಳ ಹೂಬಳ್ಳಿ. ಆ ಬಳ್ಳಿಯೊಳಗೊಂದು ಬೆಳ್ಳಕ್ಕಿ, ಆ ಹಕ್ಕಿಯ ಗೂಡು (ಮಠ) ಮೂರುಸಾವಿರ. ಅದರ ಹೆಸರು ಆರು ಸಾವಿರ. ಅದು ರಸಧರ. ಅದರ ಬಾಳ ಆಳ ಅಪಾರ. ಅದು ಹಾಡಿದ ಹಾಡು "ರತ್ನಪಕ್ಷಿ" ಅದನ್ನು ಪ್ರಕಟಿಸಿದೆ "ಕಸ್ತೂರಿ" ಅದರ ಕಂಪು ಅದರ ಪೆಂಪು ಅದ್ಭೂರಿ. ಅದಕಾಗಿದೆ ಮತಿ ಸೂರಿ. ಅದು ಕವನ ಕಲೆಯ ರೂವಾರಿ; ಭಾವ ಜೀವನ ಕೈವಾರಿ.

ಹಾರುತಿಹುದು ರತ್ನಪಕ್ಷಿ
ಕೋರುತಿಹುದು ಆತ್ಮಸಾಕ್ಷಿ
ಗರಿಗೆದರಿ ಗಿರಿಯೇರಿ
ಕರೆಯುವುದು ಗುರಿತೋರಿ ॥ ೧ ॥

ಹಾರು–ಕೋರು, ರತ್ನಪಕ್ಷಿ–ಆತ್ಮಸಾಕ್ಷಿ, ಗರಿ–ಗಿರಿ–ಗುರಿ, ಕೆದರಿ–ಏರಿ–ತೋರಿ ಈ ಶಬ್ದಾನುಪ್ರಾಸದಲ್ಲಿ ಶಬ್ದಾಲಂಕಾರ ಮೈವೆತ್ತು ನಿಂತಂತೆ ಅರ್ಥಾಲಂಕಾರವೂ ಅಭಿವ್ಯಕ್ತವಾಗದಿರದು.

" ರತ್ನಪಕ್ಷಿ " ಇದೊಂದು " ಶ್ರೀ ಮೂಜಗಂ " ಅವರ ಭಾವಗೀತ, " ಮೂಜಗಂ " ಇದು ಕಾವ್ಯನಾಮ. ಬಿತ್ತರದ ಹೆಸರು ಹೀಗಿದೆ: ಮೂರುಸಾವಿರ ಮಠದ ಜಗದ್ಗುರು ಗಂಗಾಧರರಾಜಯೋಗೀಂದ್ರಸ್ವಾಮಿಗಳು–ಎಂದು ! "ಅಮೃತ ಬಿಂದು" " ಆಶೀರ್ವಾಣಿ " ಪುಸ್ತಕಗಳಿಂದ ಮತ್ತು ಇವರು ಪ್ರತಿತಿಂಗಳ ಪ್ರಕಟಿಸುತ್ತಿರುವ 'ಪರಂಜ್ಯೋತಿ' ಮಾಸಿಕದಿಂದ ಈಗಾಗಲೆ ಖ್ಯಾತನಾಮರಾಗಿದ್ದಾರೆ. ಈ ಮಠಕ್ಕೆ ಆಗುವ ಮೊದಲು ಇವರು ' ಪಥಿಕ ' ಎಂಬ ಒಂದು ಕವನ ಸಂಕಲನವನ್ನು ರಚಿಸಿ ಪ್ರಕಟಿಸಿದ್ದಾರೆ. ಅದಕ್ಕೆ ನಾವೇ ' ಮುನ್ನುಡಿ ' ಯನ್ನು ಬರೆದಿದ್ದೇವೆ. ಓದು

* ಪ್ರಕಟವಾಗಲಿರುವ " ರತ್ನಪಕ್ಷಿ " ಕವನ ಸಂಗ್ರಹದ ಮೊದಲನೆ ಕವನ.

ಪಾಗಲೆ ಇವರು ಕವಿ ಹೃದಯರು, ಕವನರಚನ ಪ್ರಿಯರು. ಮಠಕ್ಕೆ ಆದ ಮೇಲೆ ಬೇರೆ ಇನ್ನೆಷ್ಟು ಕವನಗಳನ್ನು ಕಟ್ಟಿದ್ದಾರೋ—ನಮಗೆ ಗೊತ್ತಿಲ್ಲ. ಮಠದ ಮುಂದೆ ಹಲವಾರು ಹಿರಿಯ ಕಟ್ಟಡಗಳನ್ನು ಕಟ್ಟಿಸಿದ್ದಾರೆ: ಕಟ್ಟಿಸುತ್ತಿದ್ದಾರೆ. ಇದಾದೊಡನೆ ಕವನ ಕೃತಿಗಳ ಕಟ್ಟುವಿಕೆ ಹೆಚ್ಚು ಮುಂದುವರಿವ ಮುಂದಾಲೋಚನೆ ಇವರಿಗಿದೆ. ಇದೀಗೆ ಈ ಒಂದು ಇವರ 'ಭಾವಗೀತ'ಕ್ಕೆ ವಿವರಣೆ ಬರೆವ ಕೆಲಸ ನಮ್ಮದಾಗಿದೆ. ಈ ಕವನವೂ ಇವರ ಆ ಮುಂದಾಲೋಚನೆಯ ಕುರುಹಾಗಿದೆ.

ಕವಿಗುರು ತನ್ನ ಹೊರನೋಟವನ್ನು ಒಳನೋಟವನ್ನಾಗಿಸಿದ್ದಾರೆ. ರತ್ನಪಕ್ಷಿಯನ್ನು ಕಂಡ ಇವರ—ಅಕ್ಷಿ ಅದೊಂದು ಅಂತರಾಕ್ಷಿ. ಅದಕ್ಕೆ ಬೇಕಾಗಿದೆ ಆತ್ಮಸಾಕ್ಷಿ. ಇವರು ಕಂಡುದು ಬರೀ ಸಮಗಾರ ಕಾಗೆಯನ್ನಲ್ಲ; ಜತೆಗೆ ಬಾಳಿಗೆ ಬೆಳಕನ್ನು ತರುವ ಜ್ಞಾನಪಕ್ಷಿಯನ್ನು! ಬಾಳಿಗೆ ಬೆಳಕನ್ನು ತರುವ ಅರಿವಿಗಿಂತ ಬೇರಿಲ್ಲ ರತ್ನ; ಬೇರಿಲ್ಲ ಯತ್ನ. ಅದು ಕೇವಲ ಲೌಕಿಕ ಜ್ಞಾನವಲ್ಲ; ಜನ್ಯಜನವಲ್ಲ. ಈ ಲೌಕಿಕ ಜನ್ಯ ಜ್ಞಾನವು ರತ್ನವೆನಿಸದು, ಅದು ಅಲೌಕಿಕ ಅಂದರೆ ಪಾರಮಾರ್ಥಿಕ ಅಜನ್ಯ ಜ್ಞಾನ: ಅದೇ ಚಿದ್ರತ್ನ. ಅದು ಅಚೇತನವಲ್ಲ, ಅದು ಸಚೇತನ. ಅದರಿಂದಾಗಿ ಅದು ಹಾರುತಿಹುದು. ಎಲ್ಲಿಗೆ ? ಪ್ರಪಂಚದಿಂದ ಪರಮಾರ್ಥದತ್ತ ! ನೆಲದಿಂದ ಮುಗಿಲಿನತ್ತ !! ಆಧಾರದಿಂದ ಆಜ್ಞೇಯದತ್ತ, ಸಹಸ್ರಾರದತ್ತ, ಶಿಖಾಚಕ್ರದತ್ತ !!! ಅದು ಕೋರುವುದು ಆತ್ಮಸಾಕ್ಷಿಯನ್ನು, ಸತ್ಯ ಸಾಕ್ಷಿಯನ್ನು

ಆತ್ಮನು ಸಾಕ್ಷಿಗಾರ, ಅಂದರೆ ಎಲ್ಲ ಬಲ್ಲವ, ಯಾವುದರ ಸೋಂಕಿಲ್ಲದವ, ಎಲ್ಲವನ್ನು ಕಂಡವ. ಅದರಿಂದಾಗಿ ಆತ್ಮಸಾಕ್ಷಿಗಿಂತ ಅತ್ಯಧಿಕ ಸಾಕ್ಷಿಯಿಲ್ಲ, ಆತ್ಮನಿಗಿಂತ ಬೇರಿಲ್ಲ ಸಾಕ್ಷಿಗಾರ. ನಿಜವಾದ ಶಾಶ್ವತವಾದ ಕಕ್ಷಿಗಾರ ಆತ್ಮನೊಬ್ಬನೆ! ಆತ ಋಜುವುಳ್ಳವ, ಋತಚಿದ್ಘಮ್ಯ. ಆದರೆ ಆತನಿರುವುದು ಅತ್ಯಂತ ಎತ್ತರ. ಅಲ್ಲಿಗೆ ಏರಬೇಕಾದರೆ ರತ್ನಪಕ್ಷಿ 'ಗರಿಗೆದರಿ ಗಿರಿಯೇರಿ' ಮುನ್ನಡೆಯಬೇಕು. ಅಂತಾಗ ಬೇಕಾದರೆ ರೆಕ್ಕೆ ಪುಕ್ಕಗಳನ್ನು ಕೆದರದೆ ಹರಡದೆ ಬೇರೆ ಹೊಲಬಿಲ್ಲ. ಇಲ್ಲಿ ರೆಕ್ಕೆಗಳೆಂದರೆ ದ್ವಿಕ್ರಿಯೆಗಳು. ಮಾರ್ಗಕ್ರಿಯೆ ಒಂದು ರೆಕ್ಕೆ. ಮೀರಿದ ಕ್ರಿಯೆ ಇನ್ನೊಂದು ರೆಕ್ಕೆ. ಎರಡರ ವಿಸ್ತರಣ ಅನಿವಾರ್ಯ, ಜ್ಞಾನೋನ್ನಯನಕ್ಕೆ ಇವುಗಳ ನೆರವು ಇದ್ದಾಗ ಬೇಕು. ಅಂತೆಯೆ ಆತ್ಮವಿಕಾಸ ಪ್ರತೀಕಗಳೂ ಆಗಿವೆ. ಅಹಂಕಾರದ ಗಿರಿಯನೇರಲು ಅವಧಾನದಿಂದಿರಲು ಅವಿಧೇಯತೆಗೀಡಾಗದಿರಲು ಗುರಿಯ ಬಳಿ ಸಾರಲು ಸಾರಿ ತೋರಲು ಸಾಧನವಾಗಿವೆ.

ಜ್ಞಾನಪಕ್ಷಿಯು ರತ್ನಪಕ್ಷಿ ಅದಕ್ಕೆ ಆ ಗುರಿ ತೋರಿದೆ. ಆದರೆ ಸನ್ನಿಹಿತವಾಗಿಲ್ಲ. ಸಮರಸಮುನ್ನಿಲ್ಲ, ಆ ಹಂಬಲ ಹೆಚ್ಚಿದೆ, ಹುರಿಗೂಡಿದೆ. ಅಂತೆಯೆ ಕಕ್ಕುಲತೆಯಿಂದ ಕರೆಯತೊಡಗಿದೆ. ಬರಮಾಡಿಕೊಳ್ಳಲು ಬಯಕೆ ಬಲವಾಗಿದೆ.

ಕವಿಯ ಕ್ರಿಯೆ ಕೊನರಿದೆ. ಅರಿವು ಹಕ್ಕಿ ಆ ಚಿಗುರ ಆರೋಗಿಸಿ ಮೇಲಕ್ಕೆ ಹಾರುವ ಏರುವ ಕಲಿತನವನ್ನು ಕೈಗೂಡಿಸಿಕೊಂಡಿದೆ. ಕೋರುವ-ಕರೆಯುವ ತವಕ ತಳೆದಿದೆ.

'ಗರಿಗೆದರಿ' ನುಡಿ ವ್ಯಕ್ತಿ ಕ್ರಿಯಾ ವಿಕಾಸ ಸೂಚಿ. ಗಿರಿ ಎಂಬುದು ಅಹಂಕಾರವನ್ನು ಸೂಚಿಸುವಂತೆ ಶಿಖಾಶಿಖರವನ್ನೂ ಸೂಚಿಸುತ್ತದೆ. ಗುರಿಯೆಂದರೆ ಬರೀ ಧ್ಯೇಯ ಮಾತ್ರವಲ್ಲ. ದೃಷ್ಟಿ-ಲಕ್ಷ್ಯಗಳನ್ನೂ ಲಕ್ಷಿಸುತ್ತದೆ.

ಬನದ ಹಕ್ಕಿ ಮನದ ಹಕ್ಕಿಯಾಗಿ ರೂಪಗೊಂಡಿದೆ. ನಿಜ ಕಂಡ ನಿಜಗುಣ ಶಿವಯೋಗಿಗೆ ಕೋಗಿಲೆ ಮನವಾಗಿ ರೂಪಗೊಂಡಿದ್ದರೆ ಈ ಶ್ರೀ 'ಮೂಜಗಂ' ಅವರಿಗೆ ಸಂಬಾರಕಾಗೆ ರನ್ನವೆಳಗಿನ ಜ್ಞಾನವಾಗಿ ರೂಪುಗೊಂಡು ದೃಷ್ಟಾಂತ ದಿವ್ಯತೆಗೇರಿದೆ, ವಿಹಗವಾಗಿ ವಿಹರಿಸುತಿದೆ.

ಮೇಲೊಮ್ಮೆ ಕೆಳಗೊಮ್ಮೆ
ಹಾರುವುದು ಭಯಗೊಂಡು
ತರುಗಳಿರುವ ಗುಂಪಿನೊಳು
ಕೂಡ್ರುವುದು ಒಮ್ಮೊಮ್ಮೆ

ಗುರಿ ತೋರಿದರೂ ಗಿರಿಯೇರಿದರೂ ಏರಿಳಿತ ತಪ್ಪಿಲ್ಲ. ಒಮ್ಮೆ ಮೇಲಕ್ಕೇರಿದರೆ ಇನ್ನೊಮ್ಮೆ ತೀರ ಕೆಳಕ್ಕೆ ಇಳಿಯುತ್ತದೆ ರತ್ನಪಕ್ಷಿ ! ಇದು ನಿಸರ್ಗ ನಿಯತಿ! ಜಗಚ್ಚಕ್ಷುವಾದ ರವಿ ನಿಚ್ಚ ಏರಿ ಇಳಿಯುತ್ತಾನೆ. ಅಂತೆಯೆ ಹಕ್ಕಿಯೂ ಏರಿ ಇಳಿಯುತ್ತದೆ. ಕೈವಲ್ಯಾರ್ಥಿಯೂ ಆರೂಢ ಪತಿತನಾಗುವದುಂಟು. ಅದರಲ್ಲಿಯೂ ಅಭಯ (ನಿರ್ಭಯ) ವಾಗಿ ಹಾರಾಡುವಂತಿಲ್ಲ. ಕಂಡ ಆ ಗುರಿಗೆ ನಿಲುಕುವೆನೊ ಇಲ್ಲೊ ಎಂಬ ಅಂಜಿಕೆ ಅಂತರಂಗದಲ್ಲಿ ಮೊಳೆತು ತಲೆಯೆತ್ತುತ್ತಿರುತ್ತದೆ. ಮೇಲೇರಿದಾಗ ಗಾಬರಿ (ವಿಸ್ಮಯಯಾಗುವದೂ) ಉಂಟು. ಮೇಲೆಂಬುದು ಎಂದಿಗೂ ಭಯಾನಕವೆ ! ಭಗ್ನತೆಗೆ ಹೇತುವೆ ! ಭಯಾತೀತವಾದಾಗ ಅದು ಭದ್ರತೆಗೆ ಬುನಾದಿಯಾಗುತ್ತದೆ. ಎದೆಗಾರಿಕೆಯಿಲ್ಲದ ಮೇಲೆ ಮೇಲೇರುವಿಕೆ ಮುನ್ನಡೆಯದು. ಅದೇ ವೇಗದಲ್ಲಿ ಅದು ಸಾಗದು. ಇದಿಷ್ಟು ಅಂತರಂಗದ ಬಲಾಬಲದ ಮಾತಾಯಿತು. ಇನ್ನೂ ಬಹಿರಂಗದ ಬಳಲಿಕೆಯೂ ಬಿಟ್ಟಿದ್ದಲ್ಲ; ಬಿಟ್ಟಿಲ್ಲ. ಅದೋ ನೋಡಿ : 'ತರುಗಳಿರುವ ಗುಂಪಿನೊಳು ಕೂಡ್ರುವುದು ಒಮ್ಮೊಮ್ಮೆ !' ಮೆಚ್ಚುವ ಮಾತು. ಪುಕ್ಕಗಳೆ ಸೋತವೊ ? ಇಲ್ಲವೆ ಪುಕ್ಕಲು ಮನವೇ ಸೋತಿತೋ ? ತರುಗಳನಾಶ್ರಯಿಸಬೇಕಾಯಿತು. ಆದರೆ ನಿಯತ ಕಾಲಿಕವಾಗಿಯಲ್ಲ. ಒಮ್ಮೊಮ್ಮೆ ಈ ಪದ ಪ್ರಯೋಗದ ಔಚಿತ್ಯವನ್ನು ಕಂಡರಿಯಬೇಕು. ರತ್ನಪಕ್ಷಿ ತನ್ನ ಎತ್ತರದ ಗುರಿಯನ್ನು ಮರತಿಲ್ಲ. ಮರತು ಕುಳಿತಿಲ್ಲ ವಿಶ್ರಾಂತಿಯಿಂದ ಇಮ್ಮಡಿ ಕಸುವನ್ನು ಕೂಡಿಸಿಕೊಂಡು ಮರಳಿ ಮೇಲು ಮೇಲಕ್ಕೆ ಹಾರಬಲ್ಲದು. ಅದರ ಆ ಹಾದಿ ಹುಮ್ಮಸದಿಂದ ಹದುಳತೆಯಿಂದ ಸಾಗಬಲ್ಲದು. ಆಸರಿಕೆ ಬೇಸರಿಕೆಗಳನ್ನು ಬಿಸಿಲಿನ ಬಳಲಿಕೆಯನ್ನು ದಾಟಿಸಬಲ್ಲುದು ತರು. ಇಲ್ಲಿ ಈ ಕಾಯೇಂದ್ರಿಯಗಳೇ ತರುಗಳ ಗುಂಪು. ಇವು ಹಸಿರು-ಹೂವು ಹಣ್ಣುಗಳಿಂದ ತುಂಬಿರುತ್ತವೆ. ಇವುಗಳ ಮೇಲೆ ಕುಳ್ಳಿರದೆ ವಿಶ್ರಾಂತಿ ಲಭಿಸದು. ಹಸಿವು ಹಿಂಗದು. ಉನ್ನ

ಯನ ಕ್ರಿಯಾಶಕ್ತಿ ಮೈಗೊಡದು. ಮೇಲೇರುವವನಿಗೆ ಇವು ಕೀಡಾಳಿಗಳಲ್ಲ. ಅಳಲಿಕೆ ಅಂಜಿಕೆಗಳನ್ನು ದಾಟಿಸುವ–ತೀರಿಸುವ ತರುಗಳು ಪ್ರಾಸಾದಿಕವಾದವುಗಳು. ಅಂತೆಯೆ ಇವು ಆ ಆತ್ಮನೊಡನೆ ಕೂಡಿರಿಸುವುವು. ಇದರಿಂದಾಗಿ ಆ ರತ್ನಪಕ್ಷಿ ಇವುಗಳ ಗುಂಪಿನಲ್ಲಿ 'ಕೂಡುವುವುದು.'

ತರುಗಳ ಗುಂಪು ಹಾರುವ ಹಕ್ಕಿಗೊಂದು ಆಧಾರ. ಗುಂಪು ನುಡಿಯರ್ಥ ಆಳ. ಈ ಸಮೂಹವನ್ನು ಇಲ್ಲಿಯೆ ಬಿಟ್ಟು ಹಾರುವದಿಲ್ಲ ಹಕ್ಕಿ. ತನ್ನ ಆ ಆಳ ಗುರಿಗೆ ಒಯ್ದು ಸೇರಿಸುತ್ತದೆ. ಇದೊಂದು ಸಾಂಘಿಕ ಜೀವನದ ಜೀವನೋತ್ತೀರ್ಣದ ಕುರುಹಾಗಿದೆ. ಜಡಾಜಡತೆಯ ಅನ್ಯೋನ್ಯಾಶ್ರಯ ಭಾವೋದ್ದೀಪನವಿದೆ. ಪ್ರಾಕೃತಿಕತೆ ಒಮ್ಮೆ, ಪರಮಾರ್ಥತೆ ಇನ್ನೊಮ್ಮೆ ಎಂಬುದನ್ನು ಎತ್ತಿ ಹಿಡಿಯುತ್ತದೆ ಒಮ್ಮೊಮ್ಮೆ ಎಂಬ ಒಳ್ನುಡಿ!

ತೋರುವುದು ಬಣ್ಣವನು
ರೌದ್ರ್ಯವನು ನಶಿಸುವುದು
ನರರಿದನು ನೋಡವರು
ಮರವೆಯನು ಕಳೆಯುವರು

ಬಯಲು ಬಣ್ಣವಾಗುವಿಕೆಯನ್ನು ಅಂದರೆ ಸಾಕಾರವಾದುದನ್ನು ತೋರುವುದು. ನಿರಾಳವು ಸುರಾಳವಾಗಿ ಬಣ್ಣವೇರಿದೆ. ಬಣ್ಣವೇರಿದರೂ ಉಗ್ರವಲ್ಲ. ರಕ್ತದಂತಹ ರೌದ್ರವಲ್ಲ. ಅದರದು ಕೆಂಜವಣ್ಣ, ಅಂತೆಯೆ ಅದಕ್ಕೆ ಸಂಬಾರ ಕಾಗೆಯೊಂದು ಕರೆಯುವರು ಕನ್ನಡದಲ್ಲಿ! 'ಸಂಬಾರ' ಎಷ್ಟು ಸೊಗಸಾದ ಸವಿನುಡಿ! ಮೇಲೋಗರಕ್ಕೆ ಸವಿ ಬರಲು ಹಾಕುವ ಸೀಮಸಾಲೆ ಸಂಬಾರ! ನಸುಗೆಂಪು; ಕಪ್ಪು ಕೂಡಿದ ಕೆಂಪು. ಆದರಿಂದಾಗಿ ಅದಕ್ಕೆ ರೌದ್ರತೆಯಿಲ್ಲ; ರಜೋವಂತಿಕೆಯಿಲ್ಲ, ರತ್ನಪಕ್ಷಿಯನ್ನು ಕಂಡರೆ ರೌದ್ರತೆ ರಾಜಸಿಕತೆ ನಶಿಸುತ್ತವೆ. ಅಂತೆಯೆ ಜ್ಞಾನಪಕ್ಷಿ ತೇಜೋಮಯಿಯಾದರೂ ತೀವ್ರವರ್ಣದ್ದಲ್ಲ. ತಿಳಿಗಾವಿಯಂತಹದು; ಎಳೆಗೆಂಪಿನಂತಹದು. ನೋಟಕ್ಕೆ ಉಚಿತವಾದುದು. ಜ್ಞಾನ ದರ್ಶನೋಚಿತ ತಾನೆ? ಅಂತೆಯೆ 'ನರರಿದನು' ನೋಡುವರು. ಮರವೆಯನು ಕಳೆಯುವರು.' ಜ್ಞಾನವನ್ನು ಕಂಡ ಬಳಿಕ ಅಜ್ಞಾನವುಳಿಯುವದು ಹೇಗೆ? ಅರಿವು ಮರವೆಯ ವೈರಿ.

ಜೀವನದಲ್ಲಿ ಉದ್ಗಮನ ಕಾರಣವಾದ ಚಿತ್ಕಳೆಯನ್ನು ಕಾಣುವುದೆ ರತ್ನಪಕ್ಷಿಯ ನೋಟ; ಮರವೆಯ ಓಟ. ಅಂತಹ ಬಾಳಿನಲ್ಲಿ ಇರದು ಅಜ್ಞಾನ ಸಂಶಯ ಭ್ರಾಂತಿ ವಿಕಲ್ಪ ವಿಪರ್ಯಾಯಗಳ ನಾಲ್ದೆಸೆಯ ಚೆಲ್ಲಾಟ. ಇಲ್ಲಿ ಮರೆವೆಯೆಂದರೆ ಬರೀ ಅಜ್ಞಾನ ಮಾತ್ರವಲ್ಲ; ನೆನಪಿಲ್ಲದಿರುವಿಕೆ, ಮೈಮರೆಯುವಿಕೆ, ಮತ್ತತೆಯಿಂದಿರುವಿಕೆ–ಎಂದರ್ಥಗಳಿವೆ. ಚಿತ್ಪಕ್ಷಿಯ ಚೆಲುವಣ್ಣವನ್ನು ಕಂಡ ಬಳಿಕ ಇವು ಇರವು. ಚಿತ್ಕಳೆಯನ್ನು ಕಂಡವರು ಇವನ್ನೆಲ್ಲ ಕಳೆಯುವರು. ಆ ಚಿತ್ಕಳೆ ಈ ಚಕ್ಷುವಿಗೆ ತೋರುವ ಬಣ್ಣವಲ್ಲ. ಅದು ಅಂತಶ್ಚಕ್ಷುಗೋಚರ ಅಂದರೆ ಅಜ್ಞಾನಾದಿಗಳ ಸಂಹರ.

ಮರವೆ ನರತ್ವದ ಕುರುಹು. ಮರವೆ ಹರಿದ ಬಳಿಕ ನರತ್ವ ನಿಲ್ಲದು. ಅಂದರೆ ನರಜನ್ಮ ಕಳೆದು ಹರಜನ್ಮ ಕರೆಗೊಳ್ಳುವುದು. ಕಪ್ಪುಗೊರಲನ ಐಸಿರಿ ಮೈಗೂಡುವುದು.

ಕಪ್ಪು ಬಣ್ಣವ ಪಡೆದು
ಕಪ್ಪು ಗುಣವನು ತೆಗೆದು
ಸುಪ್ತ ಜೀವಿಗೆ ತಾನು
ದೀಪ್ತಿಯನು ಕೊಡುತಿಹುದು ॥ ೪ ॥

ಸಂಬಾರ ಅಥವಾ ಸಮಗಾರ ಕಾಗೆಗೆ ಕೆಂಪು ಬಣ್ಣದೊಡನೆ ಕಪ್ಪು ಬಣ್ಣವೂ ಇರುವುದು. ಅಂತೆಯೆ ಅದು ನೀಲಲೋಹಿತ, ಅಗ್ನಿ ತತ್ತ್ವದಲ್ಲಿಯೂ ಇವೆರಡು ಇರುವವು. ಅಂತೆಯೆ ಚಿತ್ಕಳೆಗೂ ಇವೆರಡಿರುವವು. ಅದು ಮಹಾ ತಮಸ್ಸೂ ಅಹುದು; ಮಹಾ ತೇಜಸ್ಸೂ ಅಹುದು. ಆದರೆ ಆ ತಮಸ್ಸು ತಾಮಸದ್ದಲ್ಲ: ಅದು ಮಹಾನೀಲ. ಅದಿಲ್ಲದೆ ಗುರಿ ತೋರದು.

ಬಣ್ಣ ಮುಖ್ಯವಲ್ಲ; ಗುಣ ಮುಖ್ಯ. ಕಾಣಿಸದ ಕಪ್ಪಿಗಿಂತ ಕಾಣಿಸುವ ಕಪ್ಪು ಲೇಸು. ಕಣ್ಣು ಕಪ್ಪು ಇಲ್ಲದಿದ್ದರೆ ಗತಿಯೇನು ? ಆ ಸುನೀಲದಲ್ಲಿ ಸಜ್ಜ್ಯೋತಿ ತೋರಿದಾಗ ಚಿಜ್ಜ್ಯೋತಿ ಸಾರಿದಾಗ ಸುಪ್ತ ಜೀವಿಗೆ ದೀಪ್ತಿ ಮೂಡಿ ಬರುತ್ತದೆ, ನವ ಚೇತನ ಕೂಡಿ ಬರುತ್ತದೆ. ರೂಹಿಲ್ಲದ ಸ್ವರೂಪದ ಸಾಕ್ಷಾತ್ಕಾರವಾಗುತ್ತದೆ. ಲಿಂಗ ಕಪ್ಪಿನಲಿ ದಿವ್ಯದೀಪ್ತಿಯಿದೆ. ಅದರಿಂದ ದಿವ್ಯದೃಷ್ಟಿಯೊದಗುತ್ತದೆ. ಇಲ್ಲಿ ರತ್ನಪಕ್ಷಿಯೆಂದರೆ ಪ್ರಾಣಲಿಂಗ; ಇಷ್ಟಲಿಂಗವೂ ಅಹುದು. ಇಷ್ಟ ಬಿಟ್ಟು ಪ್ರಾಣವಿಲ್ಲ. ಕ್ರಿಯೆಯ ಬಿಟ್ಟು ಜ್ಞಾನವಿಲ್ಲ. ಕ್ರಿಯಾ ( ಕಪ್ಪು ) ಲಿಂಗದೊಡಲಲ್ಲಿ ದೀಪ್ತ ಜ್ಞಾನಲಿಂಗವಿದೆ. ಕ್ರಿಯೆ ಜ್ಞಾನಗಳಿರುವಲ್ಲಿ ಸುಪ್ತತೆ ಅದೆಂದಿಗೂ ಇರದು. ಅವಧಾನ ಅನುಭವಗಳು ಅಳವಟ್ಟು ಅಲ್ಲಿ ದೀಪ್ತದಿವ್ಯವಾಗುತ್ತದೆ, ಸುಪ್ತತೆ ಲುಪ್ತವಾಗಿ ನಿತ್ಯ ಚೇತನತೆ ನೆಲಸುತ್ತದೆ. ನೀಲಾಕಾಶವಿಲ್ಲದೆ ನೆಲಸಲು ಅವಕಾಶವಿಲ್ಲ. ಕಾರಣ ಕಪ್ಪನ್ನು ಕಡೆಗಣ್ಣಿನಿಂದ ಕಾಣು–ವಂತಿಲ್ಲ. ಅಂತೆಯೆ ಸಂಬಾರಕಾಗೆ ' ರತ್ನಪಕ್ಷಿ ' ಯೆಂದೆ ಹೆಸರಾಂತಿದೆ.

ನೋಡಿದೊಡೆ ರತ್ನಪಕ್ಷಿ-
ಯೋಡುವವು ಪಾಪಗಳು
ಪೇಳುವರು ಬಲ್ಲವರು
ತೆರೆಯುವುದು ಅಂತಶ್ಚಕ್ಷು ॥ ೫ ॥

ರತ್ನಪಕ್ಷಿಯ ನೋಡಿದರೆ ಪಾಪಗಳು ಬಿಟ್ಟೋಡುವವೆಂದು ಬಲ್ಲವರು ಹೇಳುವರು; ಇದೊಂದು ರೂಢವಾಗಿ ಬಂದ ನುಡಿ. ಅಂತೆಯೆ ಅನೇಕರು ಅದನ್ನು ಹುಡುಕಿಕೊಂಡು ಹೊತ್ತಾರೆ ಹೋಗುವರು ಹಬ್ಬದ ದಿನಗಳಲ್ಲಿ ! ಸಂಬಾರ ಕಾಗೆಯಲ್ಲಿ ಅಂತಹ ಪವಿತ್ರತೆ ಇದೆಯೆಂಬ ನಂಬಿಕೆ ಉಳಿದು ಬಂದಿದೆ ಭಾವುಕರಲ್ಲಿ ! ಇದಕ್ಕೆ ಕಾರಣವೇನೊ ತಿಳಿಯದಿದೆ, ಕಾಗೆಯಲ್ಲಿರುವ ಸಾಂಘಿಕ ಜೀವನ ಗುಣ, ಸೂಕ್ಷ್ಮದೃಷ್ಟಿಗಳೆ ಕಾರಣ

ಮೆಂದರೆ ಅದಕೇಕೆ ಈ ಹೆಚ್ಚುಗಾರಿಕೆ ಬರಲಿಲ್ಲ ? ಈ ಹೆಸರು ಬರಲಿಲ್ಲ ? ಶ್ರೀ ಮೂಜಗಂ ಕವಿ 'ತೆರೆಯುವುದು ಅಂತಶ್ಚಕ್ಷು' ಎನ್ನುತ್ತಾನೆ. ಪಾಪಗಳ ಪಲ್ಲಟಿತನಕ್ಕೆ ಬಲ್ಲವರ ನೆರವು ಪಡೆದ ಕವಿಗೆ ಹಟಾತ್ತಾಗಿ ಈ ಉನ್ನತ ಉಕ್ತಿಯನ್ನಾಡುವ ಧೃತಿ ಬಂದಿದೆ; ದೃಢದೃಷ್ಟಿ ಬಂದಿದೆ. ಕವಿಯ ದೃಷ್ಟಿಯಲ್ಲಿ ರತ್ನಪಕ್ಷಿಯೆಂದರೆ ಜ್ಞಾನವಿಹಂಗಮ. ಜ್ಞಾನೋದಯ. ವಾದರೆ ಒಳಗಣ್ಣು ತೆರೆಯುವುದರಲ್ಲಿ ಆಶ್ಚರಿಯೇನಿಲ್ಲ. ಇದನ್ನು ರವಿ ಕಾಣನು; ಕವಿ ಕಂಡಿರುವನು. ಹೊರಗಿನ ರತ್ನಪಕ್ಷಿಯ ನೋಡಿದರೆ ಪಾಪ ಪರಿಹಾರವಾಗುವುದನ್ನು ಯಾರು ಅನುಭವಿಸಿರುವರು ? ಅದೊಂದು ಸಂಪ್ರದಾಯಕವಾಗಿ ಬಂದ ಮಾತು.

ಹೊಸ ದಿನದಿ ಹೊಸ ಭಾವ
ನಸುನಗುತ ಬರಲೆಂದು
ಬಸವಳಿದು ಹುಡುಕುವರು
ಜಸ ತರಲು ಪಕ್ಷಿಯನು ॥ ೬ ॥

ವರುಷದ ಮೊದಲನೆಯ ದಿನ ಹರುಷದಿಂದ ಹೊಸ ಬಗೆ ಬರಲು—ಜಸ ತರಲು ರತ್ನಪಕ್ಷಿಯನ್ನು ಶಕ್ತಿಗುಂದಿ ದಣಿಯುವನಿತು ಕಾಲ ಹುಡುಕುವರು ಜನರು. ಕೆಲವು ಜನರ ವರ್ತನೆ ಇಲ್ಲಿ ಸಹಜವಾಗಿ ಚಿತ್ರಿತವಾಗಿದೆ.

ಯುಗಾದಿಯ ದಿನ ಉದಯಕ್ಕೆ ಮುನ್ನ ಯಾರ ಮೊಗ ನೋಡದ ಮುನ್ನ ರತ್ನಪಕ್ಷಿಯನ್ನು ಮೌನದಿಂದ ನೋಡಿದರೆ ಆ ವರ್ಷದಾದ್ಯಂತವೂ ಯಾವ ತೊಡಕು-ತೊಂದರೆಗಳು ತನಗೆ ಬಾರವೆಂದು ಹಿರಿಯರ ಹೇಳಿಕೆ !

ಇಲ್ಲಿ ಭಾವವೆಂದರೆ ಇರುವಿಕೆ. ಅಭಿಪ್ರಾಯ, ಸತ್ತೆ ಎಂಬರ್ಥಗಳು, ಇವೆಲ್ಲವೂ ಹೊಸವಾಗುವವೆಂದು ಹಸನಾಗುವವೆಂದು ಭಾವುಕರ ಭಾವನೆ. ಇದು ಹೇಗೆ ಇರಲಿ; ಜ್ಞಾನೋದಯವಾದರೆ ಇವೆಲ್ಲವೂ ಉಂಟಾಗುವುದು ಸತ್ಯಕ್ಕೆ ಸತ್ಯ. ಪ್ರಗತಿಶೀಲನಿಗೆ ಪ್ರತಿದಿನವೂ ಹೊಸದು. ಶಿವಜ್ಞಾನವೆಂಬ ಪಕ್ಷಿಯನ್ನು ಪ್ರತಿನಿತ್ಯ ಹುಡಕಬೇಕು ಹೊಸ ಭಾವಾರ್ಥೀ; ಹೊಸ ಜೀವನಾರ್ಥಿ. ಇದೇ ಅಭಿಪ್ರಾಯವನ್ನು ಕವಿ ಮುಂದಿನ ಮುದ್ದು ನುಡಿಯಲ್ಲಿ ಭಾವಪೂರ್ಣವಾಗಿ ಹೇಳುವುದನ್ನು ಹೃದಯಾರೆ ಕೇಳಿ !

ಹಾರುತಿದೆ ಚಿತ್ಪಕ್ಷಿ
ವ್ಯೋಮದಲಿ ತಿರುತಿರುಗಿ
ಕೊಳೆಕಳೆದು ನಿಶೆ ತೊಲಗಿ
ಬೆಳಗು ಬರೆ ಚಿರಮೋಕ್ಷ ॥ ೭ ॥

ಹುಡುಕಿ ಪಡೆದವನ ಹೃದಯಾಕಾಶದಲ್ಲಿ ಚಿತ್ಪಕ್ಷಿ ಸುತ್ತಿ ಸುತ್ತಿ ಸುಳಿಯುತ್ತದೆ. ಸಂದೆಗದ ಕೌಳಿಕೆಯನ್ನು ಕಳೆಯುತ್ತದೆ; ಅಜ್ಞಾನ ನಿಶೆಯನ್ನು ತೊಲಗಿಸುತ್ತದೆ. ಬೆಗಡು ಬೇಗುದಿ ಬೆಚ್ಚರಗಳು ಬಿಟ್ಟೋಡುತ್ತವೆ. ಪರಮನ ಪ್ರಜ್ಞೆಯ ಪ್ರಭೆ ಪ್ರಕಾಶಿಸುತ್ತದೆ. ಆಗ ಚಿರಮೋಕ್ಷ ಸ್ವರೂಪ ಕೈವಲ್ಯ ಕೈಗೂಡುತ್ತದೆಯೆಂದು ಕವಿ

ಮನೀಷೆ. ರತ್ನಪಕ್ಷಿಯ ರೂಪಕ ಈ ನುಡಿಯಲ್ಲಿ ನಿರ್ದಿಷ್ಟವಾಗಿದೆ. ತೆರದಿದೆ ಕವಿಯ ಅಂತಶ್ಚಕ್ಷು ಇಲ್ಲಿ ! ತೆರೆಯಿಸುತ್ತಾನೆ ಓದುಗರ ಒಳಗಣ್ಣನ್ನು !

ಈ ನುಡಿಯಲ್ಲಿ ಕವಿಯ ಸಂದಿತ್ ಶ್ರೀಮಂತಿಕೆ ಹೊಮ್ಮೂಡಿದೆ. ಜತೆಗೆ ಚಿರ ಮೋಕ್ಷದ ಭಾವುಕತೆಯೂ ಮುದ್ರಿತವಾಗಿದೆ. ಬುದ್ಧಿ ಭಾವಗಳ ಮಿಲನದಿಂದ ಈ ನುಡಿಗುಡಿ ಬಾನೆತ್ತರಕ್ಕೆ ಹಾರಿದೆ. ಅಂತರಂಗದ ಜೀವಾಳವಾಗಿದೆ. ಚಿದ್ರತ್ನವನ್ನು ಚಲುವಾಗಿ ಚಿತ್ರಿಸಿದೆ. ಚಿತ್ರು ಜಡವಲ್ಲ; ಚೇತನಾತ್ಮಕ. ಅಂತೆಯೆ ಅದಕ್ಕೆ ಹಾರಾಡುವ ಹೊಗರಿದೆ. ಆಧಾರವಿಲ್ಲದೆ ಆಗಸದಲ್ಲಿ ಸುಳಿದಾಡುವ ಶಕ್ತಿಯಿದೆ. ಅದು ಜ್ಯೋತಿ ಸ್ವರೂಪ. ಅದರಿಂದ ಕೊಳೆ ನೀಗುತ್ತದೆ ನಿಶೆ ತೊಲಗುತ್ತದೆ. ನಿಡುಗಾಲ ನಿಲ್ಲುತ್ತದೆ. ಹುಟ್ಟು ಸಾವಿನ ಹೆದರಿಕೆ ಕೊಚ್ಚಿಹೋಗುತ್ತದೆ. ತ್ರೈಕಾಲಿಕ ಸ್ಥಿರತೆ ಯುಂಟಾಗುತ್ತದೆ. ಬಾಳಿನಲ್ಲಿ ಹೊಸಯುಗ ಮೊದಲಾಗುತ್ತದೆ. ಹೊಸಬಗೆ ಮೂಡುತ್ತದೆ. ಹೊಸ ನಗೆ ಸುಳಿಯುತ್ತದೆ. ಗುರಿ ಕೈಸಾರಿ ಸಂತೃಪ್ತಿ ಸಮನಿಸುತ್ತದೆ.

ಇದು ಒಬ್ಬರಿಗಾದರೆ ಸಾಲದು ಸಬ್ಬರಿಗೆ ಆಗಬೇಕು ಎಂಬ ಸರ್ವೋದ್ಧಾರ ಭಾವ ಕವಿಗೆ ಮೂಡಿ ಬಂದು ಹೀಗೆ ಹಾಡಿಸಿದೆ.

ಹಸಿರು ವನ ಬಳಿ ಸಾರು
ಬಿಸುಟು ನೀಕಸ ಬೇರು
ಜ್ಞಾನ ಪರಿಮಳ ಹೀರು
ಸತ್ಯ ಶಿವನೊಳು ಸೇರು ॥೮॥

ಕಸ ಜಡಕರ್ಮ. ಹಸಿರು ಸಕ್ರಿಯಾ ಕಲಾಪ. ಕಸ ಬಿಸಾಕಿ ಸಕ್ರಿಯಾ ಹಸಿರಿಗೆಳ ಸದಲ್ಲಿ ಅಲ್ಲಿ ಅರಳುವ ಅರಿವಿನ ಪರಿಮಳ ಸಿಕ್ಕುತ್ತದೆ. ಅದನ್ನು ಆಘ್ರಾಣಿಸಿದಲ್ಲಿ ಅಂದರೆ ಸದ್ವಾಸನಾಯುಕ್ತನಾದಲ್ಲಿ ಸತ್ಯ ಶಿವನನ್ನು ಸೇರುವ ಭಾಗ್ಯವುಂಟಾಗು-ತ್ತದೆಂದು ಕವಿ ಶಿವಕಾಂಕ್ಷಿಗೆ ಒಂದು ರತ್ನಪಾಠವನ್ನು ಒದಗಿಸಿದ್ದಾನೆ. ಇದು ತನ್ನ ಮನಸ್ಸಿಗೂ ಒಂದು ಹಿತೋಪದೇಶ.

ಕವಿ ಅಂತಶ್ಚಕ್ಷುವೂ ಅಹುದು. ಅನಂತ ಚಕ್ಷುವೂ ಅಹುದು. ಇದಕ್ಕೆ ಸಾಕ್ಷಿ ಯಾಗಿ ನಿಂತಿವೆ ಇವರ ಈ ಕವನರೂಪದ ರತ್ನಪಕ್ಷಿ! ಇದರಲ್ಲಿ ಕವಿಭಾವಗಳು ಚಲ್ಲವರಿದಿವೆ, ಕವಿ ದೃಷ್ಟಿ ಹೊರ ಒಳಗೂ ಆಳವಾಗಿ ಇಳಿದಿದೆ. ರತ್ನಪಕ್ಷಿಯ ರಹಸ್ಯದ ಔನ್ನತ್ಯವನ್ನು ಭಾವಾವೇಶದಲ್ಲಿ ಬಣ್ಣಿಸಲಾಗಿದೆ ಈ ಕವನದಲ್ಲಿ! ಕೊನೆಯ ಈ ನುಡಿಯಲ್ಲಿ ಕಾವ್ಯಕಲೆ ಸೊಗಸಾಗಿ ಮೂಡಿ ಬಂದಿದೆ. ವನ್ಯದೃಶ್ಯ ದೃಷ್ಟಾಂತ ಚೇತೋಹಾರಿಯಾಗಿದೆ. ಈ ಕವನದುದ್ದಕ್ಕೂ ಕವಿಯ ಅಂತರ್ದೃಷ್ಟಿಯನ್ನು ದೃಷ್ಟಿಸುತ್ತೇವೆ, ಭಾವಸೌಂದರ್ಯವನ್ನು ಕಾಣುತ್ತೇವೆ. ರಸಮಾಧುರ್ಯವನ್ನು ರುಚಿಸು ತ್ತೇವೆ. ಚಿತ್ಪಕ್ಷಿಯನ್ನು ಸೃಜಿಸಿದ ಶಿಲ್ಪ 'ಮೂಜಗಂ ಕವಿ! ಕವಿ ಕಲ್ಪನೆ ಉದಾತ್ತ ವಾಗಿದೆ; ಉಪಾದೇಯವಾಗಿದೆ. □

# "ಪಥಿಕ"ದ ನೆನಹು

ಸ. ಸ. ಮಾಳವಾಡ

ಹೊಸಗನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ಕನ್ನಡ ಕವಿಕೋಕಿಲಗಳ ಕುಕಿಲು ಇನಿದಾಗಿ ಕೇಳಿಬಂದಿತು. ಭಾವಗೀತವಾಹಿನಿಗೆ ಆಗ ಮಹಾಪೂರ ಬಂದಂತಾಯಿತು.

ವ್ಯಕ್ತಿನಿಷ್ಠತೆ, ಸೌಂದರ್ಯಾನುಭವ, ಭಾವಪರತೆ, ನೇಮತೆಗಳು ಭಾವಗೀತೆಯ ಪ್ರಮುಖಲಕ್ಷಣಗಳಾಗಿವೆ. ಮನವರಿಕೆಯನ್ನುಂಟುಮಾಡುವ ಕಳಕಳಿಯ ಭಾವ, ಚಿತ್ರಮಯತೆಗಳಿಂದ ಭಾವಗೀತೆಯು ಪರಿಣಾಮಕಾರಿಯಾಗುತ್ತಿದೆ. ವ್ಯಕ್ತಿತ್ವ ನಿರೂಪಣೆಯಲ್ಲಿ ತೊಡಗಿದ ಕವಿಯು ಸಮಷ್ಟಿಯ ಭಾವನೆಗಳನ್ನು ಅಭಿವ್ಯಕ್ತಗೊಳಿಸುತ್ತಾನೆ. ನಿಸರ್ಗದ ಸೊಬಗು, ಮಾನವನ ನಲಿವು–ನೋವುಗಳು ಪ್ರೇಮ ದೇವರು ದೇಶಪ್ರೇಮ–ಇತ್ಯಾದಿ ಭಾವಗಳನ್ನು ಭಾವಗೀತೆಯ ಕವಿಗಳು ಅಂದು ಬಳಸಿಕೊಂಡರು. ಪದ ಸೌಂದರ್ಯ. ಲಯ, ಪ್ರಾಸಗಳ ಬಳಕೆಯಿಂದ ಭಾವಗೀತೆಗೆ ಗೇಯತೆಯುಂಟಾಯಿತು. ಕನ್ನಡ ಭಾಷೆಗೆ ಹೊಸ ತಿರುವನ್ನು ಒದಗಿಸಿದ ಕಾಲವದು. ಬಿ. ಎಮ್. ಶ್ರೀ ರವರ "ಇಂಗ್ಲೀಷ ಗೀತಗಳು" ಎಂಬ ಕೃತಿಯು ಅಂದಿನ ಭಾವಗೀತೆಗಳಿಗೆ ಒಂದು ಮಾದರಿಯನ್ನು ಒದಗಿಸಿತು. ಭಾವಪರವಶತೆಯೊಂದಿಗೆ ಆದರ್ಶ ಪ್ರಿಯತೆಯೂ ಮೂಡಿ ಬಂದಿತು, ಆಗ ಭಾವಗೀತೆಯು ತತ್ತ್ವಪರತೆಯತ್ತಲೂ ಸಾಗಿತು. ಈ ಬಗೆಯಲ್ಲಿ ಕನ್ನಡ ಭಾವಗೀತೆಯು ೧೯೫೦ರ ವರೆಗೂ ಸಾಗಿ ಬಂದಿತು. ಈ ಮಧ್ಯ ಕುವೆಂಪು ಅವರ ಕಲ್ಕಿ 'ಅಂಬಿಕಾತನಯದತ್ತರ' ತುತ್ತಿನ ಬಲದಂತಹ ಉಗ್ರ, ಕ್ರಾಂತಿಕಾರಕ ಕವನಗಳೂ ಸೃಷ್ಟಿಯಾದವು. ಕೋಗಿಲೆಯ ಇಂಚರವು ಕ್ರಾಂತಿಯ ಕಹಳೆಯಾಗಿ ಮಾರ್ಪಟ್ಟ ಸನ್ನಿವೇಶವದು. ಅಂದಿನ ಪ್ರಗತಿಶೀಲ ಸಾಹಿತಿಗಳ ಆಂದೋಲನವು ಕನ್ನಡ ಕವನರಂಗದಲ್ಲಿ ಪ್ರತಿಬಿಂಬಿತವಾದಂತಿಲ್ಲ. ೧೯೫೦ ರ ನಂತರ ನವೋದಯ ಕಾಲದ ಭಾವಗೀತೆಗಳ ಹಾದಿಗಿಂತ ಭಿನ್ನವಾದ ದಿಸೆಯಲ್ಲಿ ಸಾಗುವ ಪ್ರವೃತ್ತಿ ತಲೆದೋರಿದೆ.

'ಪಥಿಕ' ಕವನ ಸಂಕಲನವು ೧೯೫೪ ರಲ್ಲಿ ಪ್ರಕಟವಾಗಿದ್ದರೂ ಅದರಲ್ಲಿಯ ಕವನಗಳ ರಚನೆಯ ಕಾಲ ೧೯೫೦ಕ್ಕೆ ಪೂರ್ವದ್ದೆಂದು ತೋರುತ್ತದೆ. ಅಂತೆಯೆ ಆ

ಕವನಗಳಲ್ಲಿ ನವೋದಯಕಾಲದ ದೃಷ್ಟಿ ಸ್ಪಷ್ಟವಾಗಿದೆ. ಈ ಸಂಕಲನದಲ್ಲಿ ೪೦ ಕವನಗಳಿವೆ. ಅವು ಚಿಂತನಪರವಾಗಿವೆ.

ಬಾಳಿನಲ್ಲಿ ನಲಿವಿನಂತೆ ನೋವು ಇದೆ. ಚಿಂತನಶೀಲನಾದ ಕವಿಗೆ ಬಾಳು ಹಲವಾರು ತೊಡಕುಗಳನ್ನು, ಸಮಸ್ಯೆಗಳನ್ನು ಒಡ್ಡುತ್ತಿದೆ. ಬಾಳಿನ ಸಮಸ್ಯೆಗಳು ಆಗಾಗ ಆತನ ಮನಸ್ಸನ್ನು ಗಾಸಿಗೊಳಿಸುತ್ತಿವೆ. ಆದರೆ ಶ್ರದ್ಧೆಯಿಂದ ಕೂಡಿದ ಕವಿಯು ದೈವೀಕೃಪೆ ಗುರುಕರುಣೆಗಳನ್ನು ಹಾರೈಸುತ್ತ ಬಾಳನ್ನು ಒಂದು ಪಯಣವಾಗಿ ಭಾವಿಸಿ ಧೀರಪಥಿಕನಂತೆ ಮುಂದೆಸಾಗಲು ನಿರ್ಧರಿಸುತ್ತಾನೆ. ಇಂತಹ ನಿಲುವಿನಲ್ಲಿ ಮೂಡಿಬಂದ ಕವನಗಳು ಈ ಸಂಕಲನದಲ್ಲಿವೆ.

ಮಾನವನು ಪರಮಸತ್ಯದ ಯಾತ್ರಿಕನೇ ಆಹುದು. **(A Pilgrim of ever lasting truth —Sri Aurobindo )** ಆದರೆ ಈ ದೃಷ್ಟಿಯು ಬಹು ಜನರಿಗೆ ಇಲ್ಲವೆ ಬೇಗನೆ ಮೂಡಿಬರುವುದಿಲ್ಲ. ಅಂತೆಯೆ ಅವರಿಗೆ ಬಾಳ ಗೋಳಿನ ಸಂತೆಯಾಗುವುದು. 'ಪಥಿಕ' ಸಂಕಲನದ ಕವಿಗೆ ಮಾತ್ರ ಚಿಕ್ಕವಯಸ್ಸಿನಲ್ಲಿಯೇ ಈ ದೃಷ್ಟಿ ಮೂಡಿಬಂದಿದೆ, ಅಂದು ಅದು ಬೆಳೆಯುವ ಚೇತನದ ಗುರುತಾಗಿ ಕಂಡು ಬಂದಿತು. ಆಗ ಕಂಡುಬಂದ ಗುರುತು ಈಗ ಫಲಪ್ರದವಾಗಿ ಕಾಣುತ್ತಿದೆ. ಅಂದಿನ ಪಥಿಕ ಸಂಕಲನದ ಕವಿ ಚಿತ್ತರಗಿ ಮಹಾಂತದೇವರು ಬನಾರಸದಲ್ಲಿ ವಿದ್ಯಾರ್ಥಿ ಕವನಸಂಕಲನದ ನನ್ನ ನುಡಿಯಲ್ಲಿಯ ಮಾತುಗಳನ್ನು ಗಮನಿಸಬೇಕು.

"ಈ ಪಥಿಕನು ಇನ್ನೂ ಅನನುಭವಿ, ವಿದ್ಯಾರ್ಥಿ ಪ್ರತಿಯೊಬ್ಬ ವ್ಯಕ್ತಿಗೆ ಮುಂದೆ ಸಾಗಲು ಹಿರಿಬಯಕೆಯಿದ್ದಂತೆ ಈತನಿಗೂ ಅದೆ. ಪಥಿಕನು ಕಲ್ಲು ಮುಳ್ಳುಗಳನ್ನು ತುಳಿದರೂ ತಾಳಿ ಮುಂದೆ ಹೋಗಲು ಯತ್ನಿಸಬೇಕಂಬುವವನು..."

ಅಂದಿನ "ಪಥಿಕ" ಸಂಕಲನದ ಕವಿಯೇ ಇಂದಿನ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು, ಮೂರುಸಾವಿರ ಮಠ, ಹುಬ್ಬಳ್ಳಿ. "ಪಥಿಕ"ಸಂಕಲನದ ಕವಿತೆಗಳ ರಚನೆಯ ಕಾಲದಿಂದ ಅವರು ಈಗ ಬಹು ಮುಂದೆ ಸಾಗಿದ್ದಾರೆ. ನಮ್ಮ ನಾಡಿನ ' ಮಹಾಪಥಿಕ ' ಆಗಿದ್ದಾರೆ. ಇಡೀ ದೇಶದಲ್ಲಿ, ಪರದೇಶಗಳಲ್ಲಿ ಕೂಡ ಕೀರ್ತಿಶಾಲಿಯಾಗಿದ್ದಾರೆ.

' ಪಥಿಕ 'ಸಂಕಲನದಲ್ಲಿ ವ್ಯಕ್ತಿನಿಷ್ಠ ಕವನಗಳಿವೆ;

ದಾರಿಗಾಣದೆ ಗುರುವೆ ಕುಳಿತಿರುವೆ
ಚಿಂತಿಸುತ್ತಲಿ ನಿನ್ನಯ
ದಾರಿದೋರುತ ಬೆಳಗುನೀಡುತ
ಮನೆಯ ಸೇರಿಸು ಎನ್ನನು

ಎಂಬುದಾಗಿ ಈ ಸಂಕಲನದ ಪ್ರಥಮ ಕವನ ಆರಂಭವಾಗುತ್ತಿದೆ. ಗುರುವು ದಾರಿದೋರಿ ಬೆಳಕ ನೀಡಿದುದೂ ಆಗಿದೆ. ಅಂತಹ ಗುರುವನ್ನು ಕುರಿತೇ ನಾಲ್ಕಾರು ಕವನ

ಗಳು ಇಲ್ಲಿ ಮೂಡಿಬಂದಿವೆ. ಅವು ಕವಿಯ ಗುರುಭಕ್ತಿ ನಿರ್ಭರತೆಯನ್ನು ಸ್ಪಷ್ಟಗೊಳಿಸುವಂತಿವೆ. ಬಾಲ್ಯದ ಪಾಠಶಾಲೆ ಕೂಡ 'ಶಿವಯೋಗ ಮಂದಿರ' ವನ್ನು ಅಲ್ಲಿಯ ಪತ್ರಿಕೆ 'ಸುಕುಮಾರ' ವನ್ನು ಅಲ್ಲದೆ ಬೇರೊಂದು ಪತ್ರಿಕೆಯನ್ನು ಕುರಿತು ಒಂದೊಂದು ಕವನಗಳಿವೆ. 'ಕವಿ' ಯನ್ನು ಕುರಿತ ಕವನದಲ್ಲಿಯ "ಭಾವ ಪುಷ್ಪವರಳಿದಾಗ......ಹಾಡಿಬಿಡುವನು" ಎಂಬ ಉಕ್ತಿಯಂತೆ ಮೂಡಿಬಂದ ಕವನಗಳು ಈ ಸಂಕಲನದಲ್ಲಿವೆ. ೧೫–೮–೪೭ಕ್ಕೆ ದೊರೆತ ಭಾರತ ಸ್ವಾತಂತ್ರ್ಯವನ್ನು ಕುರಿತು ಒಂದೆರಡು, ೩೦–೧–೪೮ಕ್ಕೆ ನಡೆದ ಮಹಾತ್ಮಾ ಗಾಂಧಿಯವರ ಕೊಲೆಯನ್ನು ಕುರಿತು ಒಂದು, "ದೀಪಾವಳಿ" "ಶಮೀ ಸಮರ್ಪಣ" ಗಳನ್ನು ಕುರಿತು ಒಂದೊಂದು "ಬಸವ"ನನ್ನು ಕುರಿತು ಒಂದು ಕವನಗಳಿವೆ. ಕೆಲವು ನೈತಿಕ ಕವನಗಳೂ ಇವೆ. ಉಳಿದ ಕವನಗಳು ವ್ಯಕ್ತಿನಿಷ್ಠವಾಗಿದ್ದು ಪಥಿಕನು ಕೈಕೊಂಡ ಪದಕ್ರಮಣವನ್ನು ಕುರಿತಿವೆ.

ಇಲ್ಲಿಯ ಪ್ರಥಮ ಕವನದ ಹೆಸರೇ **ಪಥಿಕ.** ಜೀವನಪಥದಲ್ಲಿ

ಕಾಳರಾತ್ರಿಯ ಮುಸುಗು ಮುತ್ತಿದೆ
...................................
ಮೇಲೆ ಮೇಘವು ಗುಡುಗುಹಾಕುತ
ಭಯದ ಬೆದರಿಕೆ ಕೊಡುತಿದೆ
...................................
...................................
ಮುಂತೆ ಹೋದಡೆ ತಗ್ಗು ದಿನ್ನೆಯು

ಹೀಗಿದ್ದೂ ಪಥಿಕ ಧೀರತನದಿಂದ ಮುಂದೆ ಸಾಗಬೇಕು.

## ನಡೆ ಮುಂದೆ

ಸೋಲಿನಲಿ ಇರುತಿರಲು ಮುಂದಿನಾ ಹಿರಿಗುರಿಯ
ದಾರಿಯನು ಮರೆಯದಿರೈ
....................................
....................................
ನಡೆ ಮುಂದೆ ದೃಢಮನದಿ

ಪಥಿಕರಿಗೆ ಹಿರಿಯ ಗುರಿಯೊಂದಿರಬೇಕಲ್ಲ ! ಆನಂದ ಭಿಕ್ಷೆಯ ಪಡೆಯಲೆಂದು ಬುದ್ಧ ಪಥಿಕನಾದ. ಜ್ಞಾನಭಿಕ್ಷುವಾಗಿ ಸರ್ವಜ್ಞಕವಿ ಪಥಿಕನಾದ. ಈ ಕವಿಯಾದರೊ **'ಶಿವಶಾಂತಿ ಹೊಂಬೆಳಗು'** ಅರಸಲೆಂದು ಪಥಿಕನಾದ. ದೀಪಾವಳಿಯ ಸೊಡರಿನ ಸಾಲುಗಳು ಒಳಬೆಳಕಿಗೆ ಪ್ರಚೋದನೆಯನ್ನಿತ್ತಿವೆ ;

ಹೃದಯದೀ ಪ್ರಣತೆಯೊಳು ಸದ್ಭಕ್ತಿ ತೈಲವನು
ಸುವಿಚಾರ ಬತ್ತಿಯನು ಹೊಸೆದಿಟ್ಟು ಹಚ್ಚಿದೊಡನೆ
ಗುಡಿಯೊಳಗೆ ಮೆರೆಯುತ್ತ ಕುಳಿತಿರುವ ಈಶ್ವರನು
ಕೊಡುತಿಹನು ದರ್ಶನವ ಪರಂಜ್ಯೋತಿ ಬೆಳಗಿನೊಳು

"ಶಮೀ ಸಮರ್ಪಣ" ಹಬ್ಬವು ಕವಿಗೆ ಆತ್ಮಸಿದ್ಧಿಯ ಸಂಕೇತವಾಗುತ್ತಿದೆ. ಅಲ್ಲಿ,

ವಿಜಯ ಪಡೆಯದ ಮನುಜ
ಒಣಗಿರ್ಪ ಎಲೆಯಂತೆ
ಬತ್ತಿರುವ ಕೆರೆಯಂತೆ
ಒಡೆದ ಕನ್ನಡಿಯಂತೆ

ಎಂಬ ಸುಂದರ ಹೋಲಿಕೆಗಳಿವೆ. "ಶಿವನಪುಟ್ಟಿ"ಯಲ್ಲಿ ಅರ್ಥವತ್ತಾದ ರೂಪಕ ಚಿತ್ರಿತವಾಗಿದೆ:

ಹೃದಯಾಕಾಶದಿ ಇರಿಸು ಪುಟ್ಟಿ
ಅದರೊಳ್ ಸುಜ್ಞಾನ ದೀಪವನಿಟ್ಟು
ಮುತ್ತಿದ ಕತ್ತಲೆ ಮೊತ್ತವನಟ್ಟಿ
ಸುತ್ತುತ ಬರುತಿಹ ಗಾಳಿಯ ಕಟ್ಟಿ
.............................................
ನಭದಲಿ ಬೆಳಗಲಿ ಚಿನ್ಮಯಕಿರಣ
ತುಂಬಲಿ ಪುಟ್ಟಿಯು ದೇವರ ಸ್ಮರಣ
ಆಗಲಿ ಜನನದ ಮರಣದ ಹರಣ
ಇಂತೇರಿಸು ಶಿವಪುಟ್ಟಿಯ ಜಾಣ

ಇಲ್ಲಿಯ ಸಲೀಸಾದ ಪದಗಳ ಹೊಂದಾವಣೆಯನ್ನು ಅರ್ಥಗೌರವವನ್ನು ಗಮನಿಸಬೇಕು.

ಮಟ್ಟಿ ಹೊಡೆಯುವವಗೆ ಎಂಬ ಕವನದಲ್ಲಿಯೂ ಸ್ವಾರಸ್ಯಕರವಾದ ರೂಪಕ ಸೃಷ್ಟಿಯಿದೆ:

ಮಟ್ಟೆ ಹೊಡೆಯೋ ನೀನು ಇಂತು
ಜ್ಞಾನಕರ್ಮ ಎತ್ತುಗಳಿಗೆ
ಧ್ಯಾನವೆಂಬ ನೊಗವಹಾಕಿ
ಮಟ್ಟೆ ಹೊಡೆಯೋ
.................................
.................................
...........ಹೃದಯಭಾವಿ ತೊಳೆದು
ಮುಕ್ತನಾಗುವಿ.

ಜೀವನದ ವೃತ್ತಿಗಳನ್ನು ಅಧ್ಯಾತ್ಮಕ್ಕೆ ತಿರುಗಿಸುವ ಹರಿಹರದೇವನ ರಗಳೆಗಳಲ್ಲಿಯ ರೂಪಕ ಸೃಷ್ಟಿಯು ಸುಪ್ರಸಿದ್ಧವಾಗಿದೆ, ಈ ಸಂಕಲನದ 'ನಾವಿಕನನ್ನು ಕುರಿತು' ಎಂಬ ಕವನದಲ್ಲಿಯೂ ರೂಪಕವಿದೆ.

'ಇದಾವುದು' ಎಂಬ ಕವನದಲ್ಲಿ ಸರ್ವಜನರ ಹೃದಯದೊಳಿರುವ ಹಂಬಲ-ವನ್ನು ಹಕ್ಕಿಯಾಗಿ ಭಾವಿಸಲಾಗಿದೆ, "ರೆಕ್ಕೆ ಬಲಿತು ಹಾರಿಹೋದ ಬಯಕೆ ಮೊಳೆತ" ನಂತರವೂ ಹಕ್ಕಿ "ತಿಂದು ತಿಂದು ತೇಗಿ ಹಾರದಿರಲು" ವ್ಯಥೆಯೆನಿಸುವುದು ಸಹಜವೇ. ಪಥಿಕ ನಿಂತಲ್ಲಿಯೇ ನಿಲ್ಲದಾಗದಲ್ಲ ! ಆತನು ಗತಿಶೀಲನಾಗಲೇಬೇಕು. ಮುಂದೆ ಸಾಗುವುದೇ ಜೀವಂತತನದ ಲಕ್ಷಣ.

'ಮುಕುತಿಯಟ್ಟವನೇರು
ದೇವನಡಿಯೊಳು ಸೇರು'

ಎಂಬುದಾಗಿ ಕವಿ ಹೃದಯದ ಹಕ್ಕಿಯನ್ನು ಎಚ್ಚರಿಸುತ್ತಾನೆ. ಈ ದಿಸೆಯಲ್ಲಿ "ಶಾಂತಿ-ತಪ" "ವಿರತಿಗಂಧ" "ಭಕುತಿ"ಗಳು ನೆರವಾಗುತ್ತಿವೆ.

ಬಾಳಿನ ಪಯಣದಲ್ಲಿ ನಿಶೆಯ ಅನುಭವವೂ ಅನಿವಾರ್ಯ, ಅಂತಯೆ "ಧ್ಯಾನದ ದೀಪವ ಹಚ್ಚುತ" ಎಚ್ಚರಗೊಂಡು "ಸತ್ಯದ ಬೆಳಕಿನ ಹಾದಿಯು" ಕಂಡುಕೊಳ್ಳುವುದು ಅವಶ್ಯಕವಾಗಿದೆಯೆಂದು "**ನಿಶೆಗೆ**" ಎಂಬ ಕವನದಲ್ಲಿ ನಿರೂಪಿಸಲಾಗಿದೆ.

ಗುರುವಿನ ಆಗಮನವನ್ನು ಕುರಿತ ಉತ್ಕಟ ಭಾವವು "ಆಹ್ವಾನ" ಕವನದಲ್ಲಿ ವ್ಯಕ್ತವಾಗಿದೆ :

ಬಾಗಿಲವ ತೆರೆದಿರುವೆ ಬಾ ಬೇಗ ಗುರುವೆ
ದಾರಿಯನು ನೋಡುತ್ತ ಕುಳಿತಿರುವೆ ಬಾ
... ... ... ... ....
.... .... ... .... ....
ಹೃದಯ ಮಂಟಪದೆನ್ನ ಚಿಚ್ಚರಣ ಕಿರಣಗಳ
ಹರಡುತ್ತ ಕತ್ತಲೆಯ ನಶಿಸುತ್ತ ಬಾ ಬಾ

ಸಮರ್ಪಣ ಭಾವದಿಂದ ಮನದ ಶಾಂತಿಯನ್ನು ಪಡಯುವ ಭಾವ "ಸಮರ್ಪಣ" ಕವನದಲ್ಲಿ ಮೂಡಿ ಬಂದಿದೆ

ಬಾಳಿನ ಪಯಣದಲ್ಲಿ ಪ್ರೋತ್ಸಾಹದ ಅವಶ್ಯಕತೆಯಿದೆ. ಅಂತೆಯೆ "ಪ್ರೋತ್ಸಾಹ" ಎಂಬ ಕವನದಲ್ಲಿ

'ಪ್ರೋತ್ಸಾಹವಿಲ್ಲದಲೆ
ವಾಸಿಸುವ ಆ ಬಾಳು
ರಸವಿಕದ ಪಟ್ಟಣಲ್ಲವೇ ?'

ಎಂದು ಹೇಳಲಾಗಿದೆ. ಆದರೆ ಗುರಿ ತಲುಪಬೇಕೆಂಬ ನಿರ್ಧಾರ ದೃಢವಾಗಿರುವಾಗ ಪ್ರೋತ್ಸಾಹ ದೊರೆಯದಿದ್ದರೂ ಮುಂದುವರಿಯಬೇಕೆಂಬ ಹುಮ್ಮಸ್ಸು ಕವಿಗಿದೆ. ಅಂತೆಯೇ " ಬಿಡುವನೇಂ " ಎಂಬ ಕವನದಲ್ಲಿ

ಕಾರ್ಯವನು ಮಾಡುವಗೆ
ಪ್ರೋತ್ಸಾಹ ನೀಡಿದರೆ
ಕಾರ್ಯವನು ಬಿಡುವನೇಂ

ಎಂಬ ಛಲ ವ್ಯಕ್ತವಾಗಿದೆ, ಪಥಿಕನು ಮುನ್ನಡೆಯಲು ಮುಖ್ಯವಾಗಿ ಬೇಕಾದುದು ಪ್ರೇರಣೆ ;

ಪ್ರೇರಣೆಯೆ ! ಧಾರುಣಿಗೆ ಚೇತನವ ಕೊಡುತಿಹುದು
ಪಥಿಕಂಗೆ ದಾರಿಯನು ತೋರಿ ಸುಖನೀಡುವುದು
( —ಪ್ರೇರಣೆಗೆ )

ಪಥಿಕ ಬಾಳಿನ ಬಡತನವನ್ನು ಗಮನಿಸುವದಿಲ್ಲ :

ಹೃದಯಧನವಿರುತಿರಲು
ಆನಂದ ಪಡೆಯಲ್ಕೆ
ಮತ್ತೇಕೆ ಆಶಯದು
ಅಳಿಯುತಿಹ ಹೊರಧನಕೆ
ಭಾವದಾ ಕಿರಣಗಳು
ಬೆಳಗುತ್ತ ಹೋದಂತೆ
ಬಡವನೇ ಚಿರಧನಿಕ
ನಾಗಿ ತಾ ಮೆರೆವವಂ
(—ಬಡವ)

ಹೃದಯ ಸಂಪತ್ತಿರುವಾಗ ಹೊರಗಿನ ಧನದ ಅವಶ್ಯಕತೆಯಿರಬೇಕಾಗಿಲ್ಲ. ಭಾವದಾ ಕಿರಣಗಳು ಬೆಳಗುತ್ತಿದ್ದರೆ ಅಂತಹನೇ ಧನಿಕ ಇಂತಹ ನಿಲುಮೆ ಈ ಕವಿಯ ದಾಗಿದೆ. ಆತ್ಮ ಜಾಗೃತಿಯೇ ಪಥಿಕನಿಗೆ ಮಹತ್ವದ ಆಸರೆ. ಅಂತೆಯೆ ಕವಿ ಹೇಳುತ್ತಾನೆ.

ಸಾಕಿನ್ನು ಎದ್ದೇಳಿ ಮೋಹನಿದ್ರೆಯ ಬಿಟ್ಟು
ಹೊರಬನ್ನಿ ಭರದಿಂದ ಜ್ಞಾನವಸ್ತ್ರವನುಟ್ಟು
ಮನದೊಳಗೆ ತುಂಬಿರುವ ಕಾಮದಾಶೆಯ ಸುಟ್ಟು
ತನುವಿನೊಳಗೆ ಹೊಕ್ಕಿರುವ ಭ್ರಾಂತಿಯನು ಬಿಟ್ಟು

..........................................................

..........................................................

ತೆರೆಯಿರ್ಕೈ ಒಳಗಣ್ಣು ಹರಿಯಿರ್ಕೈ ಹಗ್ಗವನು
ಮುರಿಯಿರ್ಕೈ ಮದವನ್ನು ತರಿಯಿರ್ಕೈ ಶೋಕವನು
ಅರಿಯಿರ್ಕೈ ಮುಂದಿನ ಹಿರಿಗುರಿಯ ದಾರಿಯನು

(—ಉತ್ತಿಷ್ಠತ)

ಅಂತೂ ಪಥಿಕ 'ಹಿರಿಗುರಿಯ ದಾರಿಯನು' ಅರಿತುಕೊಂಡಿದ್ದಾನೆ. ಶ್ರದ್ಧೆಯಿಂದ ಕೂಡಿದ್ದಾನೆ. ಹರ–ಗುರು ಕೃಪೆಗಳ ಆಸರೆಯನ್ನು ಅಪೇಕ್ಷಿಸುತ್ತ ಧೀರತನದಿಂದ ಮುಂದೆ ಸಾಗಲು ನಿರ್ಧರಿಸಿದ್ದಾನೆ. ಕಿರಿಯ ವಯಸ್ಸಿನಲ್ಲಿ ಈ ಬಗೆಯ ನಿಲುಮೆ ಶ್ಲಾಘನೀಯ ವಾಗಿದೆ. ಈ ಬಗೆಯ ನಿಲುಮೆಯನ್ನು ಕವನ ರೂಪದಲ್ಲಿ ಇಲ್ಲಿ ಅಭಿವ್ಯಕ್ತಗೊಳಿಸಲಾಗಿದೆ.

ಈ ಸಂಕಲನದ ಕವನಗಳಲ್ಲಿ ಮುಕ್ತಛಂದಸ್ಸು, ಹಾಡಿನಮಟ್ಟು, ಷಟ್ಪದಿ, ಅನಷ್ಟ ಪ್‌ಗಳನ್ನು ಬಳಸಿಕೊಳ್ಳಲಾಗಿದೆ. ಭಾಷೆ ಸರಳವೂ ಸ್ಪಷ್ಟವೂ ಆಗಿದೆ. ಆದರೆ ಬಂಧು ರತೆಯಿಂದ ಕೂಡಿ ಅದಿನ್ನು ಹದಗೊಳ್ಳಬೇಕಾಗಿದೆ. ಈ ಕವನ ಸಂಕಲನ ಕವಿಯ ಪ್ರಥಮ ಪ್ರಯತ್ನ. ಇಲ್ಲಿಯ ಕವನಗಳನ್ನು ಮೊಗ್ಗುಗಳೆಂದು ಹೇಳಬಹುದು. ಆದರೆ ಈ ಮೊಗ್ಗುಗಳಲ್ಲಿಯೂ ಸೌರಭವನ್ನು ಗುರುತಿಲು ಸಾಧ್ಯವಿದೆ. ಬಾಳಿನ ಪಯಣ ವನ್ನು ಕುರಿತ ಈ ಕವಿಯ ದೃಷ್ಟಿಯು ಉನ್ನತವಾದುದೆಂಬ ಮಾತು ಈ ಸಂಕಲನದಿಂದ ತಿಳಿದು ಬರುವಂತಿದೆ. ಕವಿಯಾಗಿ ಹಾಡಿ ಬಾಳಿನ ಸೊಗಸನ್ನು ಹೆಚ್ಚಿಸಿಕೊಳ್ಳುವ ದೃಷ್ಟಿ ಈ ಪಥಿಕನಿಗಿದೆ. ಆ ಸೊಗಸು ಕವಿಗೆ ಮಾತ್ರವಲ್ಲ. ಓದುಗರಿಗೂ ದೊರೆಯುವಂತಿದೆ.

ಬಾಳನ್ನು ಗಂಭೀರವಾಗಿ ಎದುರಿಸುವ ದೃಷ್ಟಿ, ಉದಾತ್ತ ಭಾವಲಹರಿಗಳು ಇಲ್ಲಿ ಕಂಡು ಬರುತ್ತಿವೆ. □

ಮೂಡಿ ಬಂದಿರುವದರಿಂದ ಶ್ರೀ ವಿಜಯ ಮಹಾಂತೇಶ ಲಾವಣಿ, ಒಂದು ಅತ್ಯುತ್ತಮ ಲಾವಣಿ ಎಂದು ಹೇಳಬಹುದು. ಲಾವಣಿಕಾರರು ತಮ್ಮ ಮುನ್ನುಡಿಯಲ್ಲಿ 'ನಾನಾದರೂ ಲಾವಣಿ ಕಟ್ಟುವವನಲ್ಲವಾದುದರಿಂದ ದೋಷಗಳಿಲ್ಲವೆಂದು ಬರೆಯಲಾರೆ' ಎಂದು ದಯಮಾಡಿಸಿದುದು ಅವರ ಕವಿತ್ವ ಹೃದಯದ ಔದಾರ್ಯವನ್ನು ಎತ್ತಿ ತೋರಿಸಿದೆ. ಲಾವಣಿಯುದ್ದಕ್ಕೂ ಅಂಥ ಯಾವದೇ ತ್ರುಟಿಯು ಕಂಡು ಬರುವದಿಲ್ಲ. ಭಕ್ತಿ ಪುರಸ್ಸರವಾಗಿ ಅವ್ಯಾಹತವಾಗಿ ಮಹಾಮಹಿಮನ ಪವಿತ್ರ ಚರಿತ್ರೆಯನ್ನು ಹೃನ್ಮನಗಳ ಭಾವಭಿತ್ತಿಯಲ್ಲಿ ಒಡಮೂಡಿಸಿಕೊಂಡು ಆತನ ಪವಾಡಗಳಲ್ಲಿ ಮೈಮರೆಯುವ ಭಕ್ತನಿಗೆ ದೋಷಗಳತ್ತ (ಕೇವಲ ಲಾವಣಿಯ ಉಪಕರಣಗಳಲ್ಲಿ ಅಲ್ಪ ಸ್ವಲ್ಪ ಕಂಡು ಬಂದರೂ) ಗಮನವೆಂತು ಹೋಗುವದು!

ಸುಮಾರು ಇನ್ನೂರಾ ಎಂಭತ್ನಾಲ್ಕು ಸಾಲುಗಳಲ್ಲಿ ರಚಿತವಾದ ಈ ಲಾವಣಿಯಲ್ಲಿ ಶ್ರೀ ವಿಜಯ ಮಹಾಂತ-ಶಿವಯೋಗಿಗಳ ಜೀವನ ಚರಿತ್ರೆ, ಮಹಿಮೆ, ಪವಾಡಗಳ ಪ್ರತಿಬಿಂಬವಿದೆ. ಪ್ರತಿಯೊಂದು ಸನ್ನಿವೇಶವನ್ನು ಲಾವಣಿಕಾರರು ಹೃದಯಂಗಮವಾಗಿ ಚಿತ್ರಿಸಿದ್ದಾರೆ.

ಲಾವಣಿಯ ಕಥಾನಾಯಕ 'ಚಿತ್ತರಗೀಶ'. 'ಕಾಲನ ಜಯಸಿದ ಲೀಲೆಯಮಾಡಿದ ಶ್ರೀಗುರುಮೂರ್ತಿ', ಮೈಸೂರು ಸಿರಿಪ್ರಾಂತ, ಸುಪ್ರಾಂತ ಸಸಿವಾಳ. (ಸಿರಿವಾಳ) ವೆಂಬುದು ಅದರೊಳಗಿನ ಒಂದು ಊರು. ವೀರಯ್ಯ ಮತ್ತು ಗೌರಮ್ಮ ಶಿವಭಕ್ತ ದಂಪತಿಗಳು. ಅವರಿಗೆ ಪುತ್ರಾಭಿಲಾಷೆ, "ಇಂತಿರೆ ಸದ್ಗುಣ ಭೂಷಿತ ಪುತ್ರನ ಚಿಂತೆಯು ಅವರೊಳು ಬಲವಾಗೆ! ಚಿಂತೆಯ ಕೇಳುತ ಕರುಣದಿ ತನ್ನಯ ಚಿತ್ಕಳೆ ಕಳುಹಿದ ಶಿವನಾಗ॥"

ಶಿವನ ಚಿತ್ಕಳೆಯೇ ಅವರಿಗೆ ಪುತ್ರರೂಪದಲ್ಲಿ ಪ್ರಾಪ್ತವಾಗಿದೆ. ಅಂತೆಯೇ ಗೌರಮ್ಮ ಆತನನ್ನು 'ಪರಶಿವನ ವಂಶ' ಎಂದು ಹರುಷದಿಂದ ಮುದ್ದಿಸುತ್ತ ಬಾಲ ಲೀಲೆಯಲ್ಲಿ ಮಗ್ನಳಾಗುತ್ತಾಳೆ. ಕೂಡಿದ ಶರಣೆಯರೆಲ್ಲರೂ ಇಂತಹ ಪುತ್ರ ರತ್ನವನ್ನು ಪಡೆದ ಗೌರಮ್ಮನನ್ನು ಅಭಿನಂದಿಸುತ್ತಾರೆ.–

"ಶಿರೆಯೊಳ್ ಮಾನ್ಯಳು ಧನ್ಯಳು ಎನ್ನುತ ಹೆಂಗಳೆರನ್ನೆಯು ನೀ ತಾಯೆ". ಲಾವಣಿಯ ಈ ಪದಗಳು ನಿಜವಾಗಿಯೂ ಶ್ರೋತೃಗಳ ಹೃದಯವನ್ನು ಸೂರೆಗೊಳ್ಳುತ್ತವೆ.

ಇದಾದ ಮೇಲೆ ನಾಮಕರಣ ಪ್ರಸಂಗ– "ಮುದದಿಂದೆಲ್ಲರು ಕೂಡುತ ಕರೆದರು ಮಳಿಯಪನೆಂದು ಆವಾಗ್ಗೆ!!"

ಲಾವಣಿಕಾರರು ಬಾಲಕ ಮಳಿಯಪ್ಪಾರ್ಯನ ಶೈಶವ ಲೀಲೆಯನ್ನು ಮನಂಬುಗುವಂತೆ ಚಿತ್ರಿಸಿ, ಬಾಲ್ಯದಲ್ಲಿಯೇ ಅವರಲ್ಲಿ ಮೂಡಿ ಬರುವ ಆಧ್ಯಾತ್ಮಿಕ ಭಾವವನ್ನು ಎತ್ತಿ ತೋರಿಸಿದ್ದಾರೆ. ಲಾವಣಿಯ ಈ ಪದಗಳು ಆ ಪ್ರಸಂಗವನ್ನು ಸ್ಪಷ್ಟ ಪಡಿಸುತ್ತವೆ.–"ಲಿಂಗದ ಶಿಲೆಯನು ಸಾಹಸದಿಂದಲಿ ತಂದನು ಓಗರದೋಳಿಟ್ಟು ಮಂಗಳ ಹೂಗಳ ಪತ್ರಿಯ ಧರಿಸುವನಾತನು ಭಕುತಿಯ ಅಳವಟ್ಟಿ॥ ಕುಣಿಯುತ ಮಣಿಯುತ

ನುತಿಸುತ ನಮಿಸುವ ಲಿಂಗಕೆ ಬಲುಮುದದಿ। ಅಣುಗರ ತೋಷವು ಪೇಳಲಸಾಧ್ಯವು ಎನ್ನಯ ಮೂಢತೆ ಬುದ್ಧಿಗಿದು॥" ಬಾಲಕ ಮುಳಿಯಪ್ಪನಿಗೆ ಲೌಕಿಕ ಬಾಲಕರಂತೆ ಆಟಪಾಟವಾಡುವದರಲ್ಲಿ ಇಷ್ಟವಿಲ್ಲ. 'ದುರ್ಜನ ಸಂಗವು ಕಜ್ಜೆಯ ಬಗೆಯೊಳ್ ಕಷ್ಟವ ಕೊಡುವವೆಂದು' ಅರಿತ ಆತ 'ಒಬ್ಬನೇ ಇರುವದು ಲೇಸೆಂದು' ಬಗೆಯುತ್ತಿದ್ದ.

ಈ ರೀತಿಯಿರುತ್ತಿರಲಾಗಿ ಬಾಲಕ ಮುಳಿಯಪ್ಪನಿಗೆ ಎಂಟು ವರುಷಗಳು ತುಂಬುತ್ತವೆ. ತಂದೆ ವೀರಯ್ಯನಿಗೆ 'ತನಯಂಗೆ ಶಾಸ್ತ್ರವ ಕಲಿಸುವ ಚಿಂತೆ' ಆತೆಯೇ ಆತ ಲಗುಬಗೆಯಿಂದ ಬಿದರಿಯ ಹಿರಿಮಠದೊಡೆಯರ ಹತ್ತಿರ ಹೋಗಿ ದೀಕ್ಷಾಕಾರ್ಯ ಮಾಡಬೇಕೆಂದು ಬೇಡಿಕೊಳ್ಳುತ್ತಾನೆ. ಎಂಟು ವರ್ಷದ ಬಾಲಕನ ಕಳೆಯನು ನೋಡಿ ಗುರುವಿಗೆ ಆನಂದವಾಗುತ್ತದೆ. ಮುಳಿಯಪ್ಪಾರ್ಯನಿಗೆ ಸದಮಲ ಮಹೇಶ್ವರನ ದೀಕ್ಷೆಯಾಗುತ್ತದೆ. ಮಠದಲ್ಲಿ ಗುರುವಿನ ಸೇವೆ ಮಾಡುತ್ತಿದ್ದಂತೆ ಮುಳಿಯಪ್ಪಾರ್ಯನ ಬುದ್ಧಿ ವಿಶಾಲಗೊಳ್ಳುತ್ತದೆ. ಮನದ ಮಲಿನತೆ ದೂರಾಗುತ್ತದೆ.

"ಮತಿಯೊಳಗಿರುವಾ ಮಲಿನವ ಕಳೆದನು ಭವಕದು
ಮೂಲವು ತಿಳಿಯುತ್ತಾ"

ಹೀಗೆ ಕೆಲದಿನ ಕಳೆಯಲು 'ಮನದೊಳ್ ಮೂಡಿತು ತಪವಂ ಮಾಡುವ ಪಿರಿ ಬಯಕೆ," ಗುರುವಿನ ಚರಣಕ್ಕೆ ನಮಿಸಿ ಮುಳಿಯಪ್ಪಾರ್ಯ ಕಲ್ಬೆಟ್ಟಾದ್ರಿಗೆ ಹೋಗುತ್ತಾನೆ. ಆದರೆ ಭಕ್ತವೃಂದ ಕೇಳಬೇಕಲ್ಲ! ಸಸಿವಾಳದ ಭಕ್ತರೆಲ್ಲರೂ ಬಂದು ನಯದಿಂದ ಆತನ ಚರಣಕ್ಕೆರಗಿ. 'ಮುಳಿಯಪ್ಪಾರ್ಯಾ, ನೀನು ನಮ್ಮ ಊರಿಗೆ ಬರಲೇಬೇಕು. ಅದುವೆ ನಿನಗೆ ಒಳ್ಳೆಯ ತಾಣವೆಂದು' ಬೇಡಿಕೊಳ್ಳುತ್ತಾರೆ. ಆಗ ಮುಳಿಯಪ್ಪಾರ್ಯರು ಭಕ್ತರಿಗೆ ಸಂತವಿಸಿದ ಪ್ರಸಂಗ ಲಾವಣಿಯ ಕೆಳಗಿನ ಸಾಲುಗಳಲ್ಲಿ ಒಳ್ಳೇ ಮಾರ್ಮಿಕವಾಗಿ ಚಿತ್ರಿಸಲ್ಪಟ್ಟಿದೆ.–

"ಕೇಳಿರಿ ಭಕುತರೆ ಪೇಳುವೆನೀಗಳೆ ಎನ್ನಯ ವಚನವನಾದರದಿ
ಭಾಳ ಸುಲೋಚನ ನೆನೆವರು ಊರೊಳಗಿದ್ದರೆ ತಪವೆಂತಾಗ್ವುದು ಮುದದಿ"

ಹೀಗೆ ಹೇಳಿ ಹಿಂದಿನ ಯತಿಕುಲ ತಿಲಕರು ತಪವನ್ನು ಆಚರಿಸಲು ಊರ ಒಳಗಿರಲಿಲ್ಲ. ತಪಕ್ಕೆ ಶ್ರೇಷ್ಠಸ್ಥಾನವೆಂದರೆ ಅಡವಿಯೇ ಸರಿ. ಅಂತಹ ತಪಸ್ವಿಗಳಿಗೆ ತಪವೇ ಧನುಸ್ಸು. ಆ ಧನುಸ್ಸಿನ ಮುಂದೆ ಹುಲಿ ಕರಡಿಗಳು ಸಹ ಮೊಲ ಮಲ್ಲೆಯಂತಾಗುತ್ತವೆ. ಯತಿಕುಲತಿಲಕನ ಮಾತುಗಳಿಗೆ ಮಾರುಹೋದ ಭಕ್ತವೃಂದ ತಮ್ಮ ಊರಿಗೆ ಹಿಂತಿರುಗುತ್ತದೆ.

ಮುಂದೆ ಭವತ್ಯಾಗಿಯಾದ ಆತ ಪಾಪವಿನಾಶವನ್ನು ನೆನೆಯುತ್ತ ಒಂದೇ ಮನಸ್ಸಿನಿಂದ ತಪವನ್ನಾಚರಿಸುತ್ತಾನೆ. ಆದರೆ ಆತನಿಗೆ ತನ್ನಲ್ಲಿರುವ ಜ್ಞಾನ

ಶಿವಾನುಭವಸಂಗ ಪಡೆದುಕೊಳ್ಳಲು ಸಾಲದೆಂದು ತಿಳಿದಾಗ ಬಳ್ಳಾರಿ ನಗರದಲ್ಲಿ ಸಂಸ್ಕೃತ ಪಾಠಶಾಲೆಯಲ್ಲಿ ಕಲಿಯಬೇಕೆಂದು ನಿರ್ಧರಿಸಿ ಅಲ್ಲಿಗೆ ಬಿಜಯಂಗೈಸುತ್ತಾನೆ. ಅಲ್ಲಿ ಭಿಕ್ಷೆ ಬೇಡುತ್ತ ಸಂಸ್ಕೃತ ಪಾಠಾಧ್ಯಯನ ನಡೆಯುತ್ತದೆ. 'ಜಾಣ್ಮೆ-ತಾಣ್ಮೆ'ಗಳ ಪ್ರಭಾವ ಗೆಳೆಯರ ಮೇಲೆಯೂ ಉಂಟಾಗುತ್ತದೆ. 'ಈತನ ರೀತಿಗೆ ನೀತಿಗೆ ಮನ ಮಂಕರಗಿಸಿ' ಕರಡೀಶನು, "ಭಿಕ್ಷೆಯ ಬೇಡುತ ಓದುತಲಿರುವದು ಸರಿಯಲ್ಲ..... ನಿಮ್ಮಯದಾದೀ ದಾಸೋಹಕೆಂದು ಬಾರಯ್ಯ" ಎಂದು ಮನವಲಿಸಿ ದಾಸೋಹಕ್ಕೆ ಕರೆದುಕೊಂಡು ಹೋಗುತ್ತಾನೆ. ಅಲ್ಲಿ ಪ್ರಸಾದ ಮಹಿಮೆಯ ಪ್ರವಚನವಾಗುತ್ತದೆ. 'ಲೇಸೆಂದೆನಿಸುವ ಸಿದ್ಧಾಂತ ಗ್ರಂಥಗಳ'ನ್ನು ಮಳಿಯಪ್ಪಾರ್ಯ ಬರೆದು ಪೂರೈಸುತ್ತಾನೆ. ಈ ಪ್ರಕಾರ 'ಹರನೊಳು ಅರ್ಚನೆಯಾ ಶಕ್ತಿ ನಿಷ್ಠೆಯ ಬಲಿಸುತ ಕಾಲ ಕಂಗೊಳಿಸುತ್ತಿರುವಾಗ ಚಿತ್ತರಗಿಯ ಮಠಕ್ಕೆ ಮರಿಯನ್ನು ಅರಸುತ್ತ ಬರುತ್ತಾನೆ. ರಾಮಪ್ಪ ದೇಸಾಯಿ. ಕರಡೀಶನಿಗೆ ಮಳಿಯಪ್ಪಾರ್ಯನನ್ನೇ ಮರಿಯನ್ನಾಗಿ ಕಳಿಸಿ ಕೊಡ ಬೇಕೆಂಬುದೇ ಹಿರಿಯಾಸೆ. ಕಾರಣ ಮಳಿಯಪ್ಪಾರ್ಯನಲ್ಲಿ ಕಂಡು ಬಂದ ಗುಣಗಳನ್ನು 'ನಿನ್ನಯ ತೆರದೊಳು ಪಟ್ಟಕೆ ಮಾನ್ಯರು ಆರಿಹರೈ ಮಳಿದೇವಯ್ಯ?' ಎಂದು ಅವನ ಮನವಲಿಸುವ ಪ್ರಯತ್ನ ಮಾಡುತ್ತಾನೆ ಕರಡೀಶ.

ವಿರತನಾದ ಮಳಿಯಪ್ಪಾರ್ಯನಿಗೆ ಮರಿಯಾಗಿ ಒಂದು ಮಠಕ್ಕೆ ಹೋಗುವದು ಕೂಡ ಒಂದು ಪ್ರಕಾರದ ಜಂಜಾಟವೇ ಸರಿ. ಆಸೆ, ಹಂಗು, ಅಧಿಕಾರ ಇವು ವಿರತನಿಗೆ ಏಕೆ?—ಎಂಬುದು ಅವರ ವಾದ. ಲಾವಣಿಯಲ್ಲಿ ಈ ಭಾವಗಳು ಚೆನ್ನಾಗಿ ಮೂಡಿ ಬಂದಿವೆ. ಅವುಗಳನ್ನು ಇಲ್ಲಿ ಗಮನಿಸಬಹುದು—

"ಆಸೆಯ ಬಲೆಯೊಳು ಮನುಜನು ಸಿಕ್ಕರೆ ಕಾಲಿಗೆ ಪಾಶವ ನೊಗದಂತೆ
ಹಂಗೇ ಮನುಜನ ಮನ್ನಗೆ ಭಂಗವ ಮಾಡಿಸಿತಾನು ಕಾಡುವದು
ಅಧಿಕಾರವು ತಾ ದುರಹಂಕಾರತೆ ಉಪಕಾರ ಕೊಡುವದು ನೋಡುವದೈ

ಮಳಿಯಪ್ಪಾರ್ಯನು, 'ಹರಮತವರಿಯಲು ನಿನ್ನಯ ಹತ್ತಿರ ಬಂದರೆ ಈ ಕಾಟ', ಎಂದು ಕರಡೀಶನಿಗೆ ತನ್ನ ಮನದ ನಿರಾಕಾರಣೆಯನ್ನು ತಿಳಿಸಿ, ತಾನೂ ಕರಡೀಶನ ಹಂಗಿನೊಳಗೂ ಕೂಡ ಇಲ್ಲವೆಂಬುದನ್ನು ಈ ರೀತಿಯಾಗಿ ಸ್ಪಷ್ಟ ಪಡಿಸುತ್ತಾನೆ—

"ಅನ್ನವನಿತ್ತಿರುವೆಂದೆನಗೆನ್ನುತ ಈ ಪರಿ ನುಡಿದಿಯೋ ನೀನಿಂತು
ಅನ್ನವದಾದರೆ ಇದನೊಂದರಿಯೈ ವಿರತನು ಹಂಗಿನೊಳಿಲ್ಲಿಂತು"

ಮಳಿಯಪ್ಪಾರ್ಯನ ಮೇಲೆ ಕರಡೀಶನಿಗೆ ಅಪಾರ ಪ್ರೇಮ. ತಾನು ಆತನ ಮೇಲಣ ಪ್ರೇಮದಿಂದಲೇ ಮರಿಯಾಗಿ ಕಳಿಸುವ ಹಂಬಲವನ್ನಿಟ್ಟು ಕೊಂಡಿದ್ದ. ಆದರೆ ಮಳಿಯಪ್ಪಾರ್ಯನಿಗೆ ಮನನೋಯಿಸಬಾರದೆಂಬುದೇ ಅವರು ನಿರ್ಧರಿಸಿದ ನಿರ್ಧಾರ. ರಾಮಪ್ಪ ದೇಸಾಯಿಯವರನ್ನು ನಿರಾಶೆಯಿಂದಲೇ ಹಿಂದಿರುಗಿಸಬೇಕಾಗುತ್ತದೆ.

ಕಾಲನ ಮಹಿಮೆ ಅಗಾಧ. ಮುಂದೆ ಕರಡೆಪ್ಪ ಶರಣರು ಲಿಂಗೈಕ್ಯರಾಗುತ್ತಾರೆ. ಆಶ್ರಯ ವಿರಹಿತನಾದ ಮಳೆಯಪ್ಪಾರ್ಯ ಅಲ್ಲಿಂದ ನರೆಗಲ್ಲಿಗೆ ಬಂದು ನೆಲೆಸುತ್ತಾನೆ. ಒಂದು ಗುಡಿಸಲದೊಳಗಿದ್ದು ಭಿಕ್ಷೆಬೇಡುತ್ತಾನೆ. ತನ್ನ ಸಾಧನೆಗಳನ್ನು ಮುಂದುವರಿಸುತ್ತಾನೆ. ಅಲ್ಲಿಯೇ ಒಂದು ಸತ್ವ ಪರೀಕ್ಷೆ ನಡೆಯುತ್ತದೆ. ಎಲ್ಲಿಲ್ಲದ ಶೌಚ ಮಳಿಯಪ್ಪಾರ್ಯನಿಗೆ ಬಂದೊದಗುತ್ತದೆ. ಏನೆಲ್ಲ ಉಪಚರಿಸಿದರೂ ಕಡಿಮೆಯಾಗದು. ಆದರೆ ತನಗೊದಗಿದ ಈ ದುಷ್ಟವಿಧಿ 'ಕರಡೆಪ್ಪನ ಕ್ರಿಯೆ ಮೀರುತಿದೆ' ಎಂದು ಬಗೆದು ಮಹಿಮನಿಗೆ ಎದುರಿಸಿದ ತಪ್ಪಿಗೆ ಈ ಫಲ ತನಗೆ ದೊರಕಿತೆಂದು ಮನವರಿಕೆಯಾಗುತ್ತದೆ. ಕೂಡಲೇ ಚಿತ್ತರಗಿಯ ಮಠಕ್ಕೆ ತಾನು ಮರಿ ಆಗುವೆನೆಂದು ನೆನೆಸುತ್ತಾನೆ. ಅದರ ಫಲ ಆತನ ಅತಿಸಾರ ನಿಲ್ಲುತ್ತದೆ. ಅತ್ತ ಕರಡೆಪ್ಪನು ರಾಮಪ್ಪ ದೇಸಾಯಿಯ ಕನಸಿನಲ್ಲಿ ಕಾಣಿಸಿಕೊಂಡು ಮಳಿಯಪ್ಪಾರ್ಯನು ಚಿತ್ತರಗಿ ಮಠಕ್ಕೆ ಬರುವನೆಂದೂ ಆತನನ್ನು ಸರ್ವವಿಧದಿಂದಲೂ ಸಮ್ಮಾನಿಸಿ ಕರೆದುಕೊಂಡು ಬರಬೇಕೆಂದು ಆದೇಶವೀಯುತ್ತಾನೆ. ಅದರಂತೆ ಒಂದು ಸುಮುಹೂರ್ತದಲ್ಲಿ ಮಳಿಯಪ್ಪಾರ್ಯನಿಗೆ ಚಿತ್ತರಗಿ ಮಠದ ಪೀಠದಲ್ಲಿ ಪಟ್ಟವನ್ನು ಕಟ್ಟಿ ವಿಜಯ ಮಹಾಂತೇಶ್ವರನೆಂದು ಹೆಸರಿಡುತ್ತಾರೆ.

ವಿಜಯ ಮಹಾಂತೇಶ್ವರನಾಗಿ ಪಟ್ಟಕ್ಕೆ ಬಂದ ಮಳಿಯಪ್ಪಾರ್ಯನಲ್ಲಿ ಅಧಿಕಾರ ದುರಭಿಮಾನವೆಂದೂ ಬರಲಿಲ್ಲ. "ಮಧುರಾಜಪ್ಪನ ವಯದೋಳಿದ್ದರು. ವಿಕೃತಿಯ ರೀತಿಗೆ ಬರಲಿಲ್ಲ!" ಆತನ ರೀತಿ ನೀತಿ ನಡಾವಳಿ ಧಾರ್ಮಿಕ ಪ್ರವೃತ್ತಿಗಳನ್ನು ಲಾವಣಿಕಾರರು ಕೆಳಗಿನ ಲಾವಣಿ ಪದ್ಯದಲ್ಲಿ ಸೂರೆಗೊಳಿಸಿದ್ದಾರೆ.

"ಲಿಂಗದ ಸುಖವೇ ಲಿಂಗದ ರತಿಯೇ ಲಿಂಗದ ನುಡಿಯೆ ನುಡಿಯಾಯ್ತು
ಲಿಂಗಯ್ಯನಂಗದ ನೋಡುವ ಲಿಂಗದ ಚಿತ್ಕಳೆ ಹಿರಿಯಾಯ್ತು"

ತಾನು ತನ್ನ ಮನವನ್ನು 'ಲಿಂಗದ ಲೀಲಾನಂದ ಸಮುದ್ರದಲ್ಲಿ' ಮುಳುಗಿಸಿಕೊಳ್ಳುವದಲ್ಲದೇ ಭಕ್ತರಿಗೂ ಕೂಡ ಅದರ ಸುಖವನ್ನು ಅರುಹುತ್ತಾನೆ.

"ಮುಕ್ತಿಯ ಮಂದಿರ ಮುಟ್ಟಲು ಲಿಂಗದ ಸ್ತೋತ್ರವೆ ಹೆದ್ದಾರಿಯದೈಯ್ಯಾ"

## ಪವಾಡಗಳು

ಭಕ್ತರ ಇಷ್ಟಾರ್ಥಗಳನ್ನು ಪೂರೈಸಿದ ವಿಜಯಮಹಾಂತೇಶ ಅವರಿಗೆ ಕಾಮಧೇನು ಕಲ್ಪವೃಕ್ಷ—ಮುಂದೆ ಪವಾಡಗಳು ನಡೆಯುತ್ತವೆ. ಚಿತ್ತರಗಿಯಲ್ಲಿ ಮಳೆಯಾಗದೇ ಬೆಳೆಗಳು ಬಾಡುತ್ತಿರುವ ಸಂದರ್ಭದಲ್ಲಿ ಚಿತ್ತರಗೀಶನು ಮಳೆ ತರಿಸಿದ ಭಾಗ ಲಾವಣಿಯಲ್ಲಿ ಸುಂದರವೂ ಭಾವಪೂರ್ಣವೂ ಆಗಿರುತ್ತದೆ. 'ಜಂಗಮ—ಜಂಗಮ ಶಕ್ತಿ ಸುಳ್ಳು ಎಂದು ಭ್ರಮಾತ್ಮಕತೆಯಲ್ಲಿ ತುಂಬಿಕೊಂಡ ಭಕ್ತರಿಗೆ ಜಂಗಮ ಶಕ್ತಿಯ ಪರಿಚಯ ಮಾಡಿಕೊಡುತ್ತಾನೆ.

ಇನ್ನೊಂದು ಸಲ ವಿಜಯ ಮಹಾಂತೇಶನಿಗೆ ಜ್ವರ ಬಾಧೆಯಾದಾಗ ಸಂಗಮ ನಾಥನಿಗೆ ಬೇಡಿಕೊಂಡು ಜ್ವರ ಕಡಿಮೆಯಾದರೆ ನಿನ್ನ ಸಮಕ್ಷಮ ಗಣರಿಂಗೆ ಆರಾಧನೆ ಯನ್ನು ನಿನ್ನ ಕ್ಷೇತ್ರದಲ್ಲಿ ಮಾಡುವೆನೆಂದು ಒಂದು ರೂಪಾಯಿಯ ಮುಡುಪು ಇಡುತ್ತಾನೆ. ಇಚ್ಛೆ ಇಡೇರಲು ಸುಕ್ಷೇತ್ರ ಸಂಗಮದಲ್ಲಿ ಗಣಾರಾಧನೆಯ ಸಮಾರಂಭ ನಡೆಯುತ್ತದೆ. ಬೇಸಿಗೆಯ ಬಿಸಿಲು. ತಲೆಸಿಡಿದು ಹೋಗುವಂತಹ ಬಿಸಿಲು. ಗಣ ವರರು ಊಟಕ್ಕೆ ಕುಳಿತಿದ್ದಾರೆ. ಆದರೆ–

"ಬೇಸಿಗೆ ಬಿಸಿಲಿದೆ ನೋಡಿರಿ ಮೇಲ್ಬಲ್ಗಿಚ್ಚಿದೆ ಜಂಗಮರೆನ್ನುತ್ತ
ಪಾಸಿದ ಶಿಲೆಯುದು ಕಾಯ್ದುಪರ್ಣಲ್ಲಿ ಒಟಗುಡುತ್ತಿದ್ದರು ತಮ್ಮತ್ತ"

ಮಹಾಂತೇಶನು ಭಕುತರ ಬವಣೆಯನ್ನು ನೋಡಲಾರ. ಅವರಿಗೆ ಭರವಸೆ ನೀಡಿ ತನ್ನ ಭಕ್ತಿ-ಶಕ್ತಿ ಮಹಿಮೆಯನ್ನು ತೋರಿಸುತ್ತಾನೆ. ರಣಗುಡುವ ಆಕಾಶದಲ್ಲಿ ತಂಪುನೆಳಲ ನ್ನೀಯುವ ಮೋಡಗಳು ಹಬ್ಬಿಕೊಳ್ಳುತ್ತವೆ. ಇಷ್ಟೇ ಅಲ್ಲ. ಭಕ್ತರ ಭೋಜನದ ನಂತರ ಎಂಜಲೆಲೆಗಳನ್ನು ಚೆಲ್ಲಲು ಗಾಳಿಯನ್ನೇ ಬೀಸಿಸಿ ನದಿಗೂಡಿಸುತ್ತಾನೆ. ಭಕ್ತರಿಗೆ ಆತನ ಅಗಾಧ ಲೀಲೆ ನೋಡಿ ಎಲ್ಲಿಲ್ಲದ ಆನಂದ.

ಇನ್ನೊಂದು ಪವಾಡ ಗುಳೇದಗುಡ್ಡದ ಒಪ್ಪತ್ತಿನಾರ್ಯನಿಗೆ ಮಲರೋಗ ಬಾಧೆ. ಆ ರೋಗದ ಉಬ್ಬೆಗ ತಡೆಯಲಾರದೇ ಮರಣ ಬಾಧೆಯಿಂದ ಬಳಲುತ್ತಿದ್ದ. ಆತನ ಮನದಳಲನ್ನು ಮಹಾಂತೇಶ ಹೋಗ ಮಾಡಿದುದು ಒಂದು ಪವಾಡವೇ ಸರಿ. ಯಾಕೆಂದರೆ ಮಹಾಂತೇಶನು ಆ ರೋಗಕ್ಕೆ ಯಾವುದೇ ಬಗೆಯ ಔಷಧೋಪಚಾರ ವನ್ನು ಮಾಡದೇ ಕೇವಲ ಚಿತ್ತಶುದ್ಧಿಯ ಉಪದೇಶ ಮಾತ್ರದಿಂದ ಹೋಗಲಾಡಿ ಸುತ್ತಾನೆ.

"ಯೋಗಿಯು ಅದೊಡೆ ಶಶಿಧರ ಧ್ಯಾನವ ಬಿಡದಲೆ ಮಾಡಲು ಬೇಕಯ್ಯಾ...
ಅಂದರೆ ಮುಕ್ತಿಯು ಮಾಳಿಗೆಯನ್ನೇರಿ ಶಾಂತಿಯ ಪಡೆಯುವೆ ನೀನಯ್ಯಾ"

ಎಂದು ಆತನಿಗೆ ಬೋಧಿಸಿ ಬಸವಾಕ್ಷರ ಮಂತ್ರದ ಮಹಿಮೆಯನ್ನು ತಿಳಿಸಿ ಹೇಳಿ ಕಳುಹಿಸುತ್ತಾನೆ.

ಇದೇ ಬಸವನಾಮೃತದ ಮಹಿಮೆಯನ್ನು ಹುನಗುಂದದ ಶ್ರೀಮಂತರಾದ ನಾಗರಾಳ ದೊಡ್ಡಪ್ಪನವರಿಗೂ ಬೋಧಿಸಿ, "ಸದ್ಭಕ್ತ ಮದ್‌ಭಕ್ತ ದೊಡ್ಡಣ್ಣ ಕೇಳಣ್ಣ ಬಸವನ ವಚನಸಾರವನ್ನು ಸದ್ಭಕ್ತಿರಸಮಂ ಕುಡಿಯಲು ನಿನಗಾಂ ವಚನಾಮೃತವ ತಂದಿಹೆನು। ಬಳ್ಳಾರಿ ಸಕ್ಕರಿ ಕರಡೆಪನೆಂಬುವ ಶಿವಮತವ ತಾನು ಉದ್ಧರಿಸಿ। ಒಳ್ಳಿಹ ನಾಗಿಹ ಜಗದೊಳು, ತನ್ನಯ ಕೀರ್ತಿಯ ಕೌಮುದಿ ಹರಿಡಿಸಿ"ದನೋ ಅದೇ ಪ್ರಕಾರ ನೀನೂ ಕೂಡ ಒಂದು ಸಂಸ್ಕೃತ ಶಾಲೆಯನ್ನು ಸ್ಥಾಪಿಸಿ ಅದಕ್ಕೆ ತನುಮನ ಧನದಿಂದ ಸಹಾಯ ಸಲ್ಲಿಸಬೇಕೆಂದು ಉಪದೇಶಿಸುತ್ತಾರೆ:–

"ಹಣದೊಳ್ ಹಿರಿಯರು ಗುಣದೊಳ್ ಹಿರಿಯರು ಇದನಾಲೋಚಿಸಿ ನೋಡೋಣ
ಹಣತಾನಿರ್ಪುದು ಕ್ಷಣದೊಳ್ ಪೋಪುದು ಗುಣವೇ ಸ್ಥಿರವಿದನರಿಯಣ್ಣಾ"

ಮುಂದೆ ಹಾನಗಲ್ಲ ಕುಮಾರಯೋಗಿಗಳ ಸಂದೇಶವೂ ಬರುತ್ತದೆ. ಶಿವಯೋಗ ಮಂದಿರದಲ್ಲಿ ಸಂಸ್ಕೃತ ಪಾಠಶಾಲೆ ಸ್ಥಾಪಿತವಾಗುತ್ತದೆ.

ಈ ಪ್ರಕಾರ ತಮ್ಮ ಅನಂತ ಮಹಿಮೆಯನ್ನು ತೋರಿಸಿ ಇಳಕಲ್ಲ ಮಠಕ್ಕೆ ಬಂದು–'

"ಎಂದಿನ ತೆರದೊಳ್ ಅರ್ಚನೆಗೈಯುತ ಶಿವನೊಳ್ ಕೂಡಿದರೊಂದು ದಿನ"

ಎಂಬಲ್ಲಿಗೆ ಲಾವಣಿಯಲ್ಲಿ ಮಹಾಂತೇಶ ಮಹಿಮಾಗಾನ ಮುಕ್ತಾಯವಾಗುತ್ತದೆ.

ಈ ರೀತಿಯಾಗಿ ಬಾಲ ಲಾವಣಿಕಾರರು "ಕಿರುನುಡಿಯಿಂದಲಿ ಪೇಳಿದೆ ನಾನೀ ನಿನ್ನಯ ಚರಿತೆಯ ಮಾತ್ರ। ಕರುಣೆಯ ನೀಡೈ ಮುದದೊಳ್ ನಿನ್ನಯ ಶ್ರೀ ಮಹಾಂತೇಶನೇ ನುತಿಪಾತ್ರ॥" ಎಂದು ಹಾಡಿ ಲಾವಣಿ ಮುಗಿಸುತ್ತಾರೆ.

ಲಾವಣಿಯುದ್ದಕ್ಕೂ ಬಾಲಲಾವಣಿಕಾರರು ಬಳಸಿದ ಭಾಷೆ ಮಹಾಮಹಿಮನ ಚರಿತ್ರೆಯನ್ನು ಮನಂಬುಗುವಂತೆ ಚಿತ್ರಿಸುವಲ್ಲಿ ಫಲಕಾರಿಯಾಗಿದೆ. ಸರಳ ಶೈಲಿ, ಜನಪದ ಮಾದರಿ ಲಾವಣಿಯ ತಾಳ ಮೇಳ ಮತ್ತು ಇವೆಲ್ಲವೂ ಶ್ರೋತೃಗಳಿಗೆ ಪರಿಣಾಮ ಬೀರದೇ ಇರಲಾರದೆಂದು ಹೇಳಬಹುದು.

ಒಟ್ಟಿನಲ್ಲಿ ಜಗದ್ಗುರುಗಳು ಬರೆದ ಲಾವಣಿ ಸಾಹಿತ್ಯದ ಅಳಿವನ್ನು ಉಳಿವಿನಲ್ಲಿ ಚೇತರಿಸಿದ ಶ್ರೀ ವಿಜಯಮಹಾಂತೇಶ್ವರ ಲಾವಣಿ, ಕನ್ನಡ ಲಾವಣಿ ಸಾಹಿತ್ಯದಲ್ಲಿ ತನ್ನ ವಿಶಿಷ್ಟ ಸ್ಥಾನ ಪಡೆದಿದೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಜಗದ್ಗುರುಗಳು ತಮ್ಮ ಎಳೆಯುವಯುದಲ್ಲಿಯೇ ಲಾವಣಿ ಬರೆದು ಭವಿಷ್ಯದ ಮುನ್ಸೂಚನೆಯನ್ನು ತೋರಿಸಿದ್ದಾರೆ. ಚಿಕ್ಕ ವಯುಸ್ಸಿನಲ್ಲಿಯು ಅವರ ಸಾಹಿತ್ಯಶಕ್ತಿ ಮನಮೋಹಕವಾದುದು. ಜನಪ್ರಿಯವಾದುದು. □

# ಶ್ರೀ ಮರುಳಸಿದ್ಧೇಶ್ವರ ನಾಮಾವಳಿಯ ನೆನಹು

ಪ್ರೊ. ಕೆ. ವಿ. ಬನ್ನಿಟ್ಟಿ

"Worship of a Hero is transcendent admiration of a Great man"
—*Thomas Carlyle*

ಅಂದಿನ ಇಲಕಲ್ಲಿನ ಶ್ರೀಮಹಾಂತದೇವರೇ ಇಂದು ಹುಬ್ಬಳ್ಳಿಯ ಮೂರು ಸಾವಿರ ಮಠಾಧಿಪತಿಗಳಾಗಿರುವ ಶ್ರೀ. ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು. ಶ್ರೀಗಳು ಶಿವಯೋಗ ಮಂದಿರದ ಸಂಸ್ಕೃತ ಪಾಠಶಾಲೆಯಲ್ಲಿ ಅಭ್ಯಾಸ ಮಾಡುವ ಸಮಯದಲ್ಲಿ ಹಲವು ಅಷ್ಟೋತ್ತರ ಶತನಾಮಾವಳಿಗಳನ್ನು ಬರೆದರು. ಅವುಗಳಲ್ಲಿ ಅಥಣಿ ಶ್ರೀ ಮರುಳಸಿದ್ಧೇಶ್ವರ ಅಷ್ಟೋತ್ತರ ಶತ-ನಾಮಾವಳಿಯೂ ಒಂದು. ಶ್ರೀಗಳ ದಿವ್ಯವ್ಯಕ್ತಿತ್ವದ ವ್ಯಾಪ್ತಿ, ಆಳ, ಘನತೆಗಳನ್ನು ಅರಿತು ಅವರ ಈ ಹೊತ್ತಿಗೆಯ ಪರಿಚಯಮಾಡಿಕೊಡುವುದು ನನ್ನಿಂದ ಅಷ್ಟು ಸುಲಭ ಸಾಧ್ಯವಲ್ಲ. ಪೂಜ್ಯರ ಆಶೀರ್ವಾದದ ಬಲದ ಬೆಂಬಲದಿಂದಲೇ ಈ ಕಾರ್ಯದಲ್ಲಿ ತೊಡಗಬಲ್ಲೆ.

ಶ್ರೀ ಮರುಳ ಸಿದ್ಧೇಶ್ವರ ಮಹಾಸ್ವಾಮಿಗಳು ಬೆಳಗಾವಿ ಜಿಲ್ಲೆಯ ಅಥಣಿಗೆ ಸಮೀಪದ ಗ್ರಾಮವಾದ 'ಯಾದವಾಡ' ಗ್ರಾಮದಲ್ಲಿ ಶಕೆ–೧೭೧೪ ಕಾರ್ತಿಕ ಶು.೧. ಗುರುವಾರ ಹಿರೇಮಠವೆಂಬ ಕುಟುಂಬದಲ್ಲಿ ಜನಿಸಿದರು. ಈ ಹಳ್ಳಿಗೆ ಅಥಣಿ ರುದ್ರಮುನಿಗಳು ತಮ್ಮ ಭಕ್ತರಾದ ಹಿರೇಮಠ ದಂಪತಿಗಳ ಮನೆಗೆ ದಯಮಾಡಿಸಿದರು ಆಗ ದೈವ ಪ್ರೇರಣೆಯಿಂದ ಅಲೌಕಿಕ ಲಕ್ಷಣಗಳನ್ನು ಹೊಂದಿದ ತಮ್ಮ ಮಗನಾದ ಮರುಳಯ್ಯನನ್ನು ಶ್ರೀಗಳ ಪಾದಕ್ಕೆ ಸಮರ್ಪಿಸಿದರು.

ಗುರುವಿನೊಡನೆ ಅಥಣಿಗೆ ಬಂದ "ಮರುಳಯ್ಯನಾದರೂ ಮುಗ್ಧ ಸಂಗಯ್ಯನಂತಿದ್ದ". "ಗುಣೋತ್ತುಂಗ ಸುಂದರಾಂಗ ಭವವಿಭಂಗ ಮರುಳಸಿದ್ಧ"ನಾದ ಕಾರಣ; "ಗುರುವಿಗಿಂತ-ಹಿರಿಯರಾರು ? ಇಲ್ಲ" ವೆಂದು ಅರಿತು ಗುರುಸೇವೆ ಲಿಂಗಪೂಜೆಗೈದು "ರುದ್ರಯತಿಗಳಿಂದನುಗ್ರಹವ" ಪಡೆದನು.

ಹುಟ್ಟೂರಲ್ಲಿ ೪–೬ ತರಗತಿಯವರೆಗೆ ಮಾತ್ರ ಓದಿದ ಮರುಳಸಿದ್ಧಗೆ ಅಥಣಿಗೆ ಕರೆತಂದ ಗುರು ಶರಣರ ವಚನ, ಸರ್ಪಣ್ಣಾರ್ಯರ ಪದ, ಶಿವಗುಣಾರ್ಯರ ಪದ, ಷಟ್

ಶಾಸ್ತ್ರ ವಿಚಾರ ಸರ್ವವನ್ನು ಪ್ರತಿದಿನ ಬೋಧಿಸಿದರು. ಶ್ರೀ ಮರುಳ ಸಿದ್ಧನ ಅಪಾರ ಜ್ಞಾನವನ್ನು ಕಂಡು ಮೆಚ್ಚಿ ಶ್ರೀ ರುದ್ರಮುನಿಗಳು ತಮ್ಮ ಉತ್ತರಾಧಿಕಾರಿಯಾದ ಶ್ರೀ ಮರುಳ ಸಿದ್ಧನಿಗೆ "ಶ್ರೀ. ಮ.ನಿ.ಪ್ರ. ಶ್ರೀ ಮರುಳಸಿದ್ಧಸ್ವಾಮಿ"ಯೆಂದು ನಾಮ ಕರಣ ಮಾಡಿ ಪಟ್ಟಾಭಿಷೇಕಮಾಡಿಸಿದರು.

ಶ್ರೀ ರುದ್ರಮುನಿಗಳು ಲಿಂಗೈಕ್ಯರಾದ ಮೇಲೆ, ಅವರ ಆದೇಶದ ಮೇರೆಗೆ, 'ಮೂರು ತಾಪ'ಗಳನ್ನು', ಆರು ವೈರಿಗಳನ್ನು', 'ಕನಕವನ್ನು' ಮತ್ತು "ಪಂಚ ಕ್ಲೇಶ" ಗಳನ್ನು' ತುಳಿದು ಧೀರನಾಗಿ ಶಾಂತಿತಳೆದು "ಪಂಚಮುಖನ" ನೆನೆದು ನೆನೆದು ಸಿದ್ಧರಾದರು ಮರುಳಸಿದ್ಧ.

ಶ್ರೀ ಮರುಳಸಿದ್ಧರು 'ಅಥಣಿ ಮಠದ ಸ್ವಾಮಿಯಾಗಿ', 'ಭಕ್ತವೃಂದ ಹೃದಯ ಮಧ್ಯ ಜ್ಯೋತಿ"ಯಾಗಿ "ಭಕ್ತತತಿಗೆ ಶಕ್ತಿ, ಶಾಂತಿ" ಇತ್ತು; "ಶಿವ ಸುಮಾರ್ಗವನ್ನು ತೋರಿ"ದರು. ಜನ ಕಲ್ಯಾಣಕ್ಕಾಗಿ ಶ್ರೀ ಮರುಳಸಿದ್ಧೇಶ್ವರರು ಗೈದ ಪವಾಡಗಳನ್ನು ಕವಿಗಳು ಸಂಕ್ಷೇಪವಾಗಿ ಸೂಚ್ಯವಾಗಿ ಕರಣಾನಂದವಾಗುವಂತೆ ಹಾಡಿದ್ದಾರೆ.

" ಪುತ್ರರಿರದೆ ಮರಗುವವಗೆ ಪುತ್ರರಿತ್ತೆ ಮರುಳಸಿದ್ಧ "
" ವಿತ್ತವಿರದೆ ಬಳಲುವವಗೆ ವಿತ್ತವಿತ್ತೆ ಮರುಳಸಿದ್ಧ "
" ಮಳೆಯು ತಡೆದು ಬೆಳೆಯು ಒಣಗುವಾಗ ನೀನು ಮರುಳಸಿದ್ಧ
ಮಳೆಯನಿತ್ತು ಜನಕೆ ಕಳೆಯ ಬೆಳಗನಿತ್ತೆ ನೀನು ಮರುಳಸಿದ್ಧ "
ಉರಗ ಕಚ್ಚಿ ಸಾಯುವವನ ಉಳಿಸಿದಯ್ಯ ಮರುಳಸಿದ್ಧ.

ದುರ್ಮಾರ್ಗದಲ್ಲಿ ನಡೆಯುವವರಿಗೆ ಶ್ರೀ ಮರುಳಸಿದ್ಧರು ಸರಿಯಾದ ದಾರಿಗೆ ತರಲು ಮಾಡಿದ ಬೋಧೆಯನ್ನು ನೋಡಬಹುದು.

"ನಿಂದೆ ಮಾಡಿದವನ ಕರೆದು ಬುದ್ಧಿ ಪೇಳ್ದೆ ಮರುಳಸಿದ್ಧ
ನಿಂದೆಯಿಂದ ತನಗೆ ಹಾನಿ ಬರುವುದೆಂದೆ ಮರುಳಸಿದ್ಧ
ಧನದ ಗರ್ವ ತುಂಬಿಕೊಂಡು ತಿರುಗುವವಗೆ ಮರುಳಸಿದ್ಧ
ಗುಣದ ಹಿರಿಮೆ ತೋರಿ ಶುದ್ಧ ಬುದ್ಧಿ ಮರುಳಸಿದ್ಧ"

ಶ್ರೀ ಮರುಳಸಿದ್ಧೇಶ್ವರರು ಸಮಗ್ರ "ವೀರಶೈವ ಧರ್ಮತತ್ವ ಬೆಳೆಸಿ" ವೀರತನ ದಿಂದ ಆಚರಿಸಿ ಪ್ರಚಾರ ಗೈದಿದ್ದಾರೆ. "ಶಿವನ ಪೂಜೆಗಾಗಿ ತನುವ ದಂಡಿಸಿದರು "ಲಿಂಗಸಂಗದಿರವನರಿದು", "ಲಿಂಗನೆನಹಿನಿಂದ ಚಿತ್ಸ್ವರೂಪ"ರಾದರು. "ಲಿಂಗಭೋಗಿ ಯಾಗಿ ಬ್ರಹ್ಮಜ್ಞಾನಿ"ಯಾದರು. "ಲಿಂಗಪತಿ-ಶರಣಸತಿ" ಎಂಬುದನ್ನು ಆಚರಣೆ ಯಲ್ಲಿ ಅನುಸರಿಸಿದರು. ಪೂರ್ಣ "ಜ್ಞಾನಯೋಗ ತತ್ವವರುಹಿ" ಭಕ್ತಜನ ಕೋಟಿ ಯನ್ನು ಪೊರೆದರು. ಈಶನ ಇಷ್ಟದಂತೆ ಶಿವನ ಧ್ಯಾನಿಸುತ್ತ ಲಿಂಗದೊಳಗೆ(ಲಿಂಗೈಕ್ಯ ಶಕೆ ೧೮೧೪ ಭಾದ್ರಪದ ಶು. ೧೪ ಸೋಮವಾರ) ಬೆರೆದು " ಕೊಂಡರು.

ಕೊನೆಯಲ್ಲಿ ಅಭ್ಯರ್ಥಿಯಾಗಿದ್ದ, ಸಾಧಕನಾಗಿದ್ದ ಕವಿವರ್ಯರು, ಬಸವಣ್ಣನವರು ಶ್ರೀ ಸಂಗಮನಾಥನನ್ನು ಕೋರಿಕೊಂಡಂತೆ, ಶ್ರೀಮರುಳಸಿದ್ಧೇಶ್ವರರನ್ನು ಕುರಿತು ತಮ್ಮನ್ನು ಕಾಪಾಡಬೇಕೆಂದು ಪ್ರಾರ್ಥಿಸುತ್ತಾರೆ. ಈ ಪ್ರಾರ್ಥನೆಯಲ್ಲಿ ಕವಿವರ್ಯರು ತಮ್ಮ ಮನಸ್ಸಿನಲ್ಲಿ ನಡೆದ ಲೌಕಿಕ ಹಾಗೂ ಅಲೌಕಿಕ ಮೌಲ್ಯಗಳ ನಡುವಿನ ದ್ವಂದ್ವದಲ್ಲಿ ಸಿಕ್ಕು ದಿಕ್ಕು ತೋಚದಂತಾದಾಗ ಮರುಳಸಿದ್ಧನೇ ತಮ್ಮ ಸರ್ವಸ್ವವೆಂದು ಮೊರೆಯಿಡುತ್ತಾರೆ.

"ತಂದೆ ತಾಯಿ ಬಂಧು ಬಳಗ ನೀನೆ ಎನಗೆ ಮರುಳಸಿದ್ಧ" ಎಂದು ಎಪ್ಪತ್ತೇಳನೆಯ ಸಾಲಿನಿಂದ ಅಂತ್ಯದವರೆಗೂ ಶ್ರೀ ಮರುಳಸಿದ್ಧನನ್ನು ಪ್ರಾರ್ಥಿಸುತ್ತಾರೆ. "ಜ್ಞಾನ ಹೀನನಾಗಿ ದಾರಿ ತಪ್ಪಿದಾಗ", "ವಿಷಯ ಜಲಧಿಯೊಳಗೆ ಮುಳುಗುವಾಗ", "ಹೀನ ವೃತ್ತಿಯಲ್ಲಿ ಬೆಂದು ನೋಯುವಾಗ", 'ಚಿತ್ತಚಲನೆ'ಯಾದಾಗ, "ದ್ವೇಷ-ದೋಷ ಕ್ಲೇಶಗಳು ಏಳುವಾಗ", "ರೋಷದಿಂದ ಕುದಿಯುವಾಗ", "ಬಡವನಾನು ಒಡೆಯ ನೀನು ನೀಡು ಮತಿಯ ಮರುಳಸಿದ್ಧ" ಎಂದು ಹೇಳುವಲ್ಲಿ ಕವಿಯ ಹೃದಯವನ್ನೇ ತೆರೆದು ಶ್ರೀ ಮರುಳಸಿದ್ಧನ ಮುಂದೆ ತೋರಿಸುತ್ತಾರೆ. ದೀನಭಾವದಿಂದ ಭೃತ್ಯ ಭಾವದಿಂದ ಕವಿವರ್ಯರು ಗುರುವಾದ ಮರುಳಸಿದ್ಧನನ್ನು ಕೋರಿಕೊಳ್ಳುತ್ತಾರೆ.

ಗದ್ಯದಲ್ಲಿ ಸಾವಿರ ಪುಟಗಳಲ್ಲಿ ಬರೆದಿಡಬಹುದಾದ್ದನ್ನು ಕವಿಯು ಪದ್ಯದಲ್ಲಿ ಸೂಚ್ಯವಾಗಿ, ಪ್ರತಿಮೆ, ಸಂಕೇತ, ಧ್ವನಿ, ಅಲಂಕಾರಗಳ ಮುಖಾಂತರ ಸಂಕ್ಷೇಪವಾಗಿ ನೂರಾರೇ ಸಾಲುಗಳಲ್ಲಿ ಬರೆಯಲು ಸಾಧ್ಯ. ಈ ಮಾತಿಗೆ ಶ್ರೀಮಹಾಂತದೇವರು ಬರೆದ ಈ ನಾಮಾವಳಿಯೇ ಸಾಕ್ಷಿ.

ಶ್ರೀ ಮರುಳಸಿದ್ಧೇಶ್ವರ ಬಾಲ್ಯ, ಅಥಣಿ ಮಠದಲ್ಲಿ ವಿದ್ಯಾಭ್ಯಾಸ, ಮಠಾಧಿಪತಿಗಳಾಗಿ ಗೈದ ಲೋಕ ಸೇವೆ, ಪವಾಡಗಳು, ಈಶ ಪೂಜೆ, ಧರ್ಮಾಚರಣೆ ಧರ್ಮ ಸಂದೇಶಗಳನ್ನಲ್ಲದೆ ಅವರ ಲಿಂಗೈಕ್ಯದ ವರೆಗಿನ ಚರಿತ್ರೆಯನ್ನು ಉತ್ಸಾಹ ರಗಳೆಯ ಕೇವಲ ಎಪ್ಪತ್ತಾರು ಸಾಲಿನಲ್ಲಿ ಕವಿವರ್ಯರು ಅಭಿವ್ಯಕ್ತಪಡಿಸಿದ್ದು ಸಾಮಾನ್ಯ ವೇನಲ್ಲ. ಕೇವಲ ಪ್ರತಿಭಾವಂತ ಕವಿಗೆ ಮಾತ್ರ ಇದು ಸಾಧ್ಯ. ಉಳಿದ ಮೂವತ್ನಾಲ್ಕು ಸಾಲಿನಲ್ಲಿ ಕವಿವರ್ಯರು ಶ್ರೀಮರುಳ ಸಿದ್ಧೇಶ್ವರರನ್ನು ಪ್ರಾರ್ಥಿಸಿದ್ದಾರೆ.

ಮುನ್ನುಡಿಯಲ್ಲಿ ಪ್ರೊ. ಉಮಾಪತಿ ಶಾಸ್ತ್ರಿಗಳು ಈ ನಾಮಾವಳಿಯ ಉದ್ದೇಶವನ್ನು ಸೂಚಿಸಿದ್ದಾರೆ. "ಇಂತಹ ಮಹಿಮಾನ್ವಿತ ಮಹಾತ್ಮರ ಚರಿತ್ರೆಯನ್ನು ಭಕ್ತಿಯಿಂದ ಶ್ರವಣ ಮತ್ತು ಪಠನ ಮಾಡುವದರಿಂದ ನಮ್ಮ ಮನೋಮಾಲಿನ್ಯವಳಿದು ನಮ್ಮಲ್ಲಿ ಸಾತ್ವಿಕ ಭಾವವು ಮೈದೋರುತ್ತದೆ". ಎಚ್. ಡಬ್ಲ್ಯು ಲಾಂಗಫೆಲೊ ಕವಿಯು ಕೂಡ, "ಮಹಾತ್ಮರ ಚರಿತೆಗಳು ನಮ್ಮ ಜೀವನವನ್ನು ಹೇಗೆ ಪರಿಪೂರ್ಣ ಸಿದ್ಧಗೊಳಿಸಬೇಕೆಂಬುದನ್ನು ಕಲಿಸುತ್ತಿವೆ" ಎಂದು ನುಡಿದಿದ್ದಾನೆ. ಅದರಂತೆ ಥಾಮಸ್ ಕಾರ್ಲಾಯಿಲ್ ತನ್ನ, "On Heroes and Hero worship" ಎಂಬ ಹೊತ್ತಿಗೆಯಲ್ಲಿ "One comfort is that Great Men, taken up in any way, are Profitable Company. We can not look, however imperfectly,

upon a great man, without ganinig some thing by him. He is the Living Light fountain, which it is good and pleasant to be near" ಎಂದಿದ್ದಾನೆ. ಇದಕ್ಕೂ ಹೆಚ್ಚಿಗೆ ಕಾರ್ಲ್ಲಾಯಿಲ್‌ನೇ ಅದೇ ಹೊತ್ತಿಗೆಯಲ್ಲಿ "Worship of a Hero is transcendent admiration of a Great Man" ಎಂದು ಸಾರಿದ್ದಾನೆ.

ಇಂತಹ ಸತ್‌ಸಂಗವನ್ನು ಬಾಲಕರಿದ್ದಾಗಿನಿಂದ ಶ್ರೀ ಮಹಾಂತ ದೇವರು. ಬೆಳೆಸಿಕೊಂಡುಬಂದು, ಮಹಾತ್ಮರ ಸಂಸ್ಕಾರಹೊಂದಿ ಮಹಾತ್ಮರಾಗಿರಲು ಸಾಕು ಎಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಈ ನಾಮಾವಳಿಯ ಭಾಷಾಶೈಲಿಯನ್ನು ಗಮನಿಸಿದಾಗ, ಬಳ್ಳಿಗೆ ಎಲೆ, ಹೂ ಕಾಯಿ ಎಷ್ಟು ಸಹಜವಾಗಿ ಮೂಡಿ ಬರುವವೋ ಹಾಗೆ ಶ್ರೀಗಳಿಗೆ ಕಾವ್ಯ ಪ್ರತಿಭೆಯು ಅಭಿವ್ಯಕ್ತಿ ಉದಯವಾಗಿದೆ ಎಂಬುದಕ್ಕೆ ಕೆಳಗಿನ ಸಾಲುಗಳಲ್ಲಿ ಕಂಡು ಬರುವುದು:

" ಬಡವನಾನು ಒಡೆಯ ನೀನು ನೀಡು ಮತಿಯ ಮರುಳಸಿದ್ಧ "
" ಹೃದಯ ಗೃಹಕೆ ದೀಪವಿರದೆ ಕೊರಗುತಿರುವೆ ಮರುಳಸಿದ್ಧ "
" ಕಾಡಿ ಕಾಡಿ ದೂಡುತಿಹುದು ಮಾಯೆಯೆನ್ನ ಮರುಳಸಿದ್ಧ "
" ಹುಟ್ಟಿ ಹುಟ್ಟಿ ಸಾವುದನ್ನು ತಪ್ಪಿಸೆನಗೆ ಮರುಳಸಿದ "

ಅಲ್ಲದೆ, ಹರಿಹರನ ಪರಂಪರೆಯಲ್ಲಿ ನಡೆದ ಇವರ ಉತ್ಸಾಹ ರಗಳೆಯ ಮೂರು ಮಾತ್ರೆಗಳ ಎಂಟು ಗಣಗಳು ಪ್ರತಿಯೊಂದು ಚರಣದಲ್ಲಿಯೂ ಕಂಡುಬರುವವು. ಉತ್ಸಾಹ ರಗಳೆಯಲ್ಲಿ ಶ್ರೀಗಳು ಸಿದ್ಧಹಸ್ತರೆಂಬುದು ಈ ನಾಮವಳಿಯನ್ನು ಓದುವಾಗ ಮನದಟ್ಟಾಗುವುದು. ಮಧುರ ನಾದ, ತಾಳ, ಲಯಗಳನ್ನು ಪ್ರತಿಯೊಂದು ಸಾಲಿನಲ್ಲಿ ಹೊಂದಿರುವುದರಿಂದ ಶ್ರವಣಕ್ಕೆ ಪೂಜೆಯ ಕಾಲದಲ್ಲಿ ಪಠನಮಾಡಿದರೆ ಈ ಎಲ್ಲ ಸಾಲುಗಳು ಕರಣಾನಂದ ನೀಡುವದಲ್ಲದೆ, ಪಠಣಮಾಡುವವನ ಮನಸ್ಸಿನಲ್ಲಿ ಭಕ್ತಿ, ಚೈತನ್ಯ, ಏಕಾಗ್ರತೆ ಮೂಡಿ, ಉತ್ಸಾಹ ಚಿಮ್ಮಿ ಮೈಮನಗಳು ಪುಳಕಿತಗೊಂಡು ಆನಂದಹೊಂದಿ ಪೂಜಾನಂತರ ದೀರ್ಘಕಾಲ ಮನಸ್ಸಿನಲ್ಲಿ ಶಾಂತಿನೆಲೆಸುವುದು.

ಆಧುನಿಕ ಕಾಲದಲ್ಲಿ ಕನ್ನಡ ಸಾಹಿತ್ಯರಂಗದಲ್ಲಿ ಸಣ್ಣಕತೆ, ಭಾವಗೀತೆ, ಏಕಾಂಕ ನಾಟಕ, ನಿಬಂಧ ಸಾಹಿತ್ಯದ ಉಪಪ್ರಕಾರಗಳಾದ ಇವು ಸಾಕಷ್ಟು ಹುಲುಸಾಗಿ ಕೃಷಿಹೊಂದಿವೆ. ಇದಕ್ಕೆ ಮುಖ್ಯಕಾರಣ ಬಹು ಸಂಖ್ಯ ಓದುಗರಿಗೆ ವೇಳೆಯ ಅಭಾವವಿರುತ್ತದೆ. ಇಂಥ ಪ್ರಸಂಗದಲ್ಲಿ ಇಂತಹ ಅಷ್ಟೋತ್ತರ ನಾಮಾವಳಿಯು ಸಾಹಿತ್ಯದ ಒಂದು ಪ್ರಸಿದ್ಧ ಉಪಕಾರವಾಗಬಹುದು. ಆದರೆ ಇವುಗಳ ಸಂಖ್ಯೆ ಬಹಳ ಕಡಿಮೆ ಇದೆ. ಪ್ರಕಟವಾದ ಎಲ್ಲ ಕವಿಗಳ ಎಲ್ಲ ನಾಮಾವಳಿಗಳು ಸಾಹಿತ್ಯ ಮೌಲ್ಯಗಳನ್ನು ಹೊಂದಿವೆಯೆಂದು ಹೇಳಲು ಬರುವುದಿಲ್ಲ. ಪೂಜ್ಯ ಜಗದ್ಗುರುಗಳಂತಹ ನಾಲ್ಕೈದು ಜನ ಪ್ರತಿಭಾವಂತ ಕವಿಗಳು ಇದರಲ್ಲಿ ಕೃಷಿಗೈದರೆ ನಾಮಾವಳಿ ಪ್ರಕಾರವು ಒಂದು ಶ್ರೇಷ್ಠ ಉಪಪ್ರಕಾರವಾಗಿ ಸಾಹಿತ್ಯ ಸಾಮ್ರಾಜ್ಯದಲ್ಲಿ ಮೆರೆಯಬಹುದು. □

# ಅಪ್ಪಯ್ಯಸ್ವಾಮಿ

ಪ್ರೊ.

ಸದ್ಯದ ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಗಂಗಾ
ಗೀಂದ್ರ ಮಹಾಸ್ವಾಮಿಗಳವರು. ಮೂರುಸಾವಿರಮಠ, ಹುಬ್ಬಳ್ಳಿ. ತ
ಮಹಾಂತದೇವರು ಆದಾಗ್ಗೆ ಬರೆದ ಅವರ ಗದ್ಯದ ಪ್ರಥಮ ಕೃತಿಯಿದ
ಯಲ್ಲಿಯೇ ಅವರ ಸಾಹಿತ್ಯ ಪ್ರಭುತ್ವ ಮಿಂಚನ್ನು ಕಾಣಬಹುದು.
ವೈಶಿಷ್ಟ್ಯವೆಂದರೆ ಇದರಲ್ಲಿ ಒಬ್ಬ ಸ್ವಾಮಿಯವರು ಮತ್ತೊಬ್ಬ
ಜೀವನ ಚರಿತೆ ಬರೆದುದು. ಪೂಜ್ಯವನ್ನು ಕಲ್ಪಿಸುವುದು ಪೂ
ಮಹಿಮೆಯನ್ನು ಕಾಣುವುದು ಮಹಾತ್ಮರಿಗೆ ಶಕ್ಯವು. ವಿಜಾಪುರ ಜಿ
ಮೂಲೆಯಲ್ಲಿರುವ ಇಲಕಲ್ಲ ಮಠದ ಆಗಿನ ಶ್ರೀ ಮಹಾಂತದೇವರು ಬ
ಆಗ್ನೇಯ ಮೂಲೆಯಲ್ಲಿಯ ಸವದತ್ತಿ ಕಲ್ಮಠದ ಲಿಂ. ಶ್ರೀ.ಮ.ನಿ
ಸ್ವಾಮಿಗಳ ಬಗೆಗೆ ಬರೆದ ಜೀವನ ಚರಿತೆಯಿದು.

ಚರಿತ್ರ ಚಿತ್ರಣದ ಕೃತಿ ಭಾರತದ ಸಾಹಿತ್ಯದಲ್ಲಿಯೇ ಕಡಿಮ
ಕನ್ನಡ ಸಾಹಿತ್ಯದಲ್ಲಿ ಇನ್ನೂ ಕಡಿಮೆ. ಇದಕ್ಕೆ ಹಲವಾರು ಕಾರಣಗ
ಭಾರತೀಯ ಸಂಸ್ಕೃತಿಯೇ ಮೂಲಕಾರಣ. ಭಾರತದ ಸಾಹಿತ್ಯದಲ್ಲಿ
ಗಳಂತೂ ತೀರ ವಿರಳ.. ಆತ್ಮ ಚರಿತ್ರೆಯಲ್ಲಿ ಲೇಖಕನು ಸ್ವತಃ ತನ
ಚಿತ್ರಿಸಿದರೆ, ಚರಿತ್ರೆಯಲ್ಲಿ ಒಬ್ಬ ಲೇಖಕನು ಮತ್ತೊಬ್ಬನ ಚರಿತ್ರೆ
ವನು. ಇವೆರಡೂ ಪ್ರಕಾರಗಳು ಭಾರತ ಸಾಹಿತ್ಯದಲ್ಲಿ ಕಡಿಮೆ
ವೆಂದರೆ-ಭಾರತೀಯರು ಸ್ವಪ್ರತಿಷ್ಠಾಪ್ರಿಯರಲ್ಲ. ಮಾನವನು ಮಾನವ
ಭಾರತ ಸಂಸ್ಕೃತಿಯಲ್ಲಿ ಅಷ್ಟೊಂದು ಸ್ಥಾನವಿಲ್ಲ. ದೇವರ ಲೀಲೆಯನ್ನು
ಮಾನವನ ಶ್ರೇಷ್ಠತೆ ಅಡಗಿದೆ ಎಂಬುದು ನಮ್ಮ ಮತ. ಆ ಕಾರಣ
ದಲ್ಲಿ ಸಾಕಷ್ಟು ಪ್ರಕೃತಿ ವರ್ಣನೆ ಹಾಗೂ ಸೃಷ್ಟಿಕರ್ತನ ವರ್ಣನೆಯ

ಪಾಶ್ಚಿಮಾತ್ಯರು ನಮ್ಮ ತತ್ವಕ್ಕೆ ಸ್ವಲ್ಪ ವಿರುದ್ಧ. ವಿಜ್ಞಾ
ಹೊರಟ ಅವರು ಮಾನವನಿಗೆ ಹಾಗೂ ಆತನ ಕೃತಿಗಳಿಗೆ ಹೆಚ್ಚು

# ಅಪ್ಪಯ್ಯಸ್ವಾಮಿಗಳ ಚರಿತೆ

ಪ್ರೊ. ವಸಂತ ಪಾಟೀಲ

ಸದ್ಯದ ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು, ಮೂರುಸಾವಿರಮಠ, ಹುಬ್ಬಳ್ಳಿ. ತಾವು ಇಲಕಲ್ಲದ ಮಹಾಂತದೇವರು ಆದಾಗ್ಗೆ ಬರೆದ ಅವರ ಗದ್ಯದ ಪ್ರಥಮ ಕೃತಿಯಿದು. ಈ ಹೊಳಿಕೆಯಲ್ಲಿಯೇ ಅವರ ಸಾಹಿತ್ಯ ಪ್ರಭುತ್ವ ಮಿಂಚನ್ನು ಕಾಣಬಹುದು. ಈ ಪುಸ್ತಕದ ವೈಶಿಷ್ಟ್ಯವೆಂದರೆ ಇದರಲ್ಲಿ ಒಬ್ಬ ಸ್ವಾಮಿಯವರು ಮತ್ತೊಬ್ಬ ಸ್ವಾಮಿಯವರ ಜೀವನ ಚರಿತೆ ಬರೆದುದು. ಪೂಜ್ಯವನ್ನು ಕಲ್ಪಿಸುವುದು ಪೂಜ್ಯರಿಗೆ ಸಾಧ್ಯವು. ಮಹಿಮೆಯನ್ನು ಕಾಣುವುದು ಮಹಾತ್ಮರಿಗೆ ಶಕ್ಯವು. ವಿಜಾಪುರ ಜಿಲ್ಲೆಯ ಆಗ್ನೇಯ ಮೂಲೆಯಲ್ಲಿರುವ ಇಲಕಲ್ಲ ಮಠದ ಆಗಿನ ಶ್ರೀ ಮಹಾಂತದೇವರು ಬೆಳಗಾವಿ ಜಿಲ್ಲೆಯ ಆಗ್ನೇಯ ಮೂಲೆಯಲ್ಲಿಯ ಸವದತ್ತಿ ಕಲ್ಮಠದ ಲಿಂ. ಶ್ರೀ.ಮ.ನಿ.ಪ್ರ. ಅಪ್ಪಯ್ಯಸ್ವಾಮಿಗಳ ಬಗೆಗೆ ಬರೆದ ಜೀವನ ಚರಿತೆಯಿದು.

ಚರಿತ್ರ ಚಿತ್ರಣದ ಕೃಷಿ ಭಾರತದ ಸಾಹಿತ್ಯದಲ್ಲಿಯೇ ಕಡಿಮೆ. ಅದರಲ್ಲಿಯೂ ಕನ್ನಡ ಸಾಹಿತ್ಯದಲ್ಲಿ ಇನ್ನೂ ಕಡಿಮೆ. ಇದಕ್ಕೆ ಹಲವಾರು ಕಾರಣಗಳಿವೆ. ಅವುಗಳಲ್ಲಿ ಭಾರತೀಯ ಸಂಸ್ಕೃತಿಯೇ ಮೂಲಕಾರಣ. ಭಾರತದ ಸಾಹಿತ್ಯದಲ್ಲಿ ಆತ್ಮ ಚರಿತ್ರಗಳಂತೂ ತೀರ ವಿರಳ.. ಆತ್ಮ ಚರಿತ್ರೆಯಲ್ಲಿ ಲೇಖಕನು ಸ್ವತಃ ತನ್ನ ಚರಿತ್ರೆಯನ್ನು ಚಿತ್ರಿಸಿದರೆ, ಚರಿತ್ರೆಯಲ್ಲಿ ಒಬ್ಬ ಲೇಖಕನು ಮತ್ತೊಬ್ಬನ ಚರಿತ್ರೆಯನ್ನು ತೋರಿಸುವನು. ಇವೆರಡೂ ಪ್ರಕಾರಗಳು ಭಾರತ ಸಾಹಿತ್ಯದಲ್ಲಿ ಕಡಿಮೆ ಇರಲು ಕಾರಣವೆಂದರೆ-ಭಾರತೀಯರು ಸ್ವಪ್ರತಿಷ್ಠಾಪ್ರಿಯರಲ್ಲ. ಮಾನವನು ಮಾನವನನ್ನು ಹೊಗಳಲು ಭಾರತ ಸಂಸ್ಕೃತಿಯಲ್ಲಿ ಅಷ್ಟೊಂದು ಸ್ಥಾನವಿಲ್ಲ. ದೇವರ ಲೀಲೆಯನ್ನು ಕೊಂಡಾಡುವಲ್ಲಿ ಮಾನವನ ಶ್ರೇಷ್ಠತೆ ಅಡಗಿದೆ ಎಂಬುದು ನಮ್ಮ ಮತ. ಆ ಕಾರಣ ಭಾರತ ಸಾಹಿತ್ಯದಲ್ಲಿ ಸಾಕಷ್ಟು ಪ್ರಕೃತಿ ವರ್ಣನೆ ಹಾಗೂ ಸೃಷ್ಟಿಕರ್ತನ ವರ್ಣನೆಯನ್ನು ಕಾಣುವೆವು.

ಪಾಶ್ಚಿಮಾತ್ಯರು ನಮ್ಮ ತತ್ವಕ್ಕೆ ಸ್ವಲ್ಪ ವಿರುದ್ಧ. ವಿಜ್ಞಾನದ ಬೆನ್ನು ಏರಿ ಹೊರಟ ಅವರು ಮಾನವನಿಗೆ ಹಾಗೂ ಆತನ ಕೃತಿಗಳಿಗೆ ಹೆಚ್ಚು ಮಹತ್ವಕೊಡು

ವರು. ಆ ಕಾರಣ ಪಾಶ್ಚಿಮಾತ್ಯ ಸಾಹಿತ್ಯದಲ್ಲಿ ಆತ್ಮಚರಿತ್ರೆ ಮತ್ತು ಚರಿತ್ರೆಗಳು ಸಾಕಷ್ಟು ಬೆಳವಣಿಗೆ ಹೊಂದಿವೆ. ಈ ದಿಶೆಯತ್ತ ಭಾರತೀಯರು ಕೃಪೆಮಾಡಬೇಕಾಗಿದೆ. ಇಲಕಲ್ಲಿನ ಮಹಾಂತ ದೇವರು ಕನ್ನಡ ಸಾಹಿತ್ಯದಲ್ಲಿಯೇ ಒಂದು ಹೊಸ ಪರಂಪರೆಯನ್ನು ಈ ಚರಿತೆಯ ಮುಖಾಂತರ ಹಾಕಿರುವರೆನ್ನಲಡ್ಡಿಯಿಲ್ಲ. ಒಂದೇ ವೃತ್ತಿಯವರು ಒಬ್ಬರನ್ನೊಬ್ಬರು ಹೊಗಳುವುದಕ್ಕಿಂತ ತೆಗಳುವುದೇ ಹೆಚ್ಚು, ಆದರೆ ಇಲ್ಲಿ ಮಹಾಂತದೇವರು ತಮ್ಮ ಮಹಾನ್ ವ್ಯಕ್ತಿತ್ವವನ್ನು ತಮ್ಮ ಸಾಹಿತ್ಯದ ಪ್ರಥಮ ಕೃತಿಯಲ್ಲಿಯೇ ಮೆರೆದಿದ್ದಾರೆ.

ಈ ಗ್ರಂಥ ಪುಷ್ಪವನ್ನು ಲಿಂ.ಶ್ರೀ.ಮ.ನಿ.ಪ್ರ. ಕುಮಾರ ಶಿವಯೋಗಿಗಳು, ಬಿದರಿ ವಿರಕ್ತಮಠ, ಅವರ ಅಡಿದಾವರೆಗಳಲ್ಲಿ ಭಕ್ತಿಕಾಣಿಕೆಯಾಗಿ ಅರ್ಪಿಸಲಾಗಿದೆ. ಈ ಕಾಣಿಕೆಯನ್ನು ಸಂತೋಷದಿಂದ ಸ್ವೀಕರಿಸುತ್ತಿರುವಂತೆ ಈ ಪುಟದ ಮೇಲೆ ಚಿತ್ರಿಸಿದ ಲಿಂಗೈಕ್ಯ ಸ್ವಾಮಿಯವರ ಚಿತ್ರವು.

ಎರಡನೆಯ ಅಧ್ಯಾಯದಲ್ಲಿ ಶ್ರೀ ಅಪ್ಪಯ್ಯಸ್ವಾಮಿಯವರ "ಜನನ-ಬಾಲ್ಯ"ದ ವರ್ಣನೆಯಿದೆ. ಮುಧೋಳದ ಸ್ವತಂತ್ರ ಮಠದ ಬಸವಲಿಂಗಯ್ಯ ಮತ್ತು ಶಾಂತಲಿಂಗಮ್ಮ ದಂಪತಿಗಳು ತಮಗೆ ಮಕ್ಕಳಿಲ್ಲದ್ದಕ್ಕೆ ಚಿಂತಾಕ್ರಾಂತರಾಗಿದ್ದರು. ಗಂಡು ಮಗುವಾದರೆ ಬಿದರಿ ಮಠಕ್ಕೆ ಮರಿಯಾಗಿ ಅರ್ಪಿಸುವೆನೆಂದು ಅನನ್ಯಭಾವದಿಂದ ದಂಪತಿಗಳು ಬಿದರಿ ಕುಮಾರ ಶಿವಯೋಗಿಗಳನ್ನು ಬೇಡಿಕೊಂಡರು. ಮುಂದೆ ಬಿದರಿ ಕುಮಾರ ಶಿವಯೋಗಿಗಳ ಆಶೀರ್ವಾದದಿಂದ ಶಾಂತಲಿಂಗಮ್ಮನವರು ಗರ್ಭಧರಿಸಿ ತಮ್ಮ ತಾಯಿಯ ತವರು ಮನೆಯಾದ ನೇಸರಗಿಯ ಕಳ್ಳಿಮಠದಲ್ಲಿ ಶಕೆ-೧೮೧೫ ಕಾರ್ತಿಕ ಶುದ್ಧ ೧ ರವಿವಾರ ಮಹಾಲಿಂಗರಿಗೆ ಜನ್ಮವಿತ್ತರು. ಬಹಳ ದಿನಗಳ ಮೇಲೆ ಅಪರೂಪವಾಗಿ ಪಡೆದ ಒಬ್ಬನೇ ಮಗನನ್ನು ಮಠಕ್ಕೆ ಮರಿಯಾಗಿ ಬಿಡುವ ತಮ್ಮ ಹರಕೆ ಮನದಲ್ಲಿಯೇ ಕೊರೆಯುತ್ತಿತ್ತು. ಆದರೆ ಬಿದರಿ ಕುಮಾರ ಶಿವಯೋಗಿಗಳು ತಮ್ಮ ಮರಿಯನ್ನು ಬಿಟ್ಟು ಇರಬಹುದೇ? ಹಾನಗಲ್ಲ ಕುಮಾರ ಶಿವಯೋಗಿಗಳನ್ನು ಸ್ವತಃ ಕಳಿಸಿ ಮುಧೋಳದ ಸ್ವತಂತ್ರ ಮಠದಿಂದ ೭-೮ ವರ್ಷದವನಿದ್ದ ಮಹಾಲಿಂಗನನ್ನು ಬಿದರಿ-ಸವದತ್ತಿ ಕಲ್ಮಠಕ್ಕೆ ಕರೆತರಿಸಿ-ಮಹಾಲಿಂಗನಿಗೆ "ಅಪ್ಪಯ್ಯ"ನೆಂದು ಹೆಸರಿಟ್ಟರು. ಅಂದು ಆ ಬಾಲಕನು ಸಂಸಾರ ಬಂಧನವನ್ನು ಹರಿದೊಗೆದು ಪಾರಮಾರ್ಥಿಕ ಅಂಗಳದಲ್ಲಿ ಕಾಲಿಟ್ಟನು. ಆತನಿಗೆ ಸವದತ್ತಿಯಲ್ಲಿಯೇ ವೀರ ಮಹೇಶ್ವರನ ದೀಕ್ಷೆಕೊಡಲಾಯಿತು. ದೀಕ್ಷಾನಂತರ ಅವರ ಪಾರಮಾರ್ಥಿಕ ಶಿಕ್ಷಣ ಪ್ರಾರಂಭವಾಯಿತು. ಬಿದರಿ ಕುಮಾರ ಶಿವಯೋಗಿಗಳು ಅವರನ್ನು ಹಾನಗಲ್ಲದ ಕುಮಾರ ಸ್ವಾಮಿಗಳಿಗೆ ಒಪ್ಪಿಸಿದರು. ೧೯೦೩ರಲ್ಲಿ ಹಾನಗಲ್ಲ ಕುಮಾರಸ್ವಾಮಿಗಳು ಶಿವಬಸವ ಸ್ವಾಮಿಗಳನ್ನು ಹಾವೇರಿ ಹುಕ್ಕೇರಿಮಠಕ್ಕೆ ಅಧಿಕಾರಿಗಳನ್ನಾಗಿ ಮಾಡಿ ಅವರ ಮಾರ್ಗದರ್ಶನದಲ್ಲಿ ಅದೇ ಮಠದ ಪಾಠಶಾಲೆಗೆ ಅಪ್ಪಯ್ಯ ಸ್ವಾಮಿಯವರನ್ನು ಹಚ್ಚಿದರು.

ಮೂರನೆಯ ಅಧ್ಯಾಯದಲ್ಲಿ ಅಪ್ಪಯ್ಯನವರ "ಆತ್ಮ ಸಂಶೋಧನೆ" ಪ್ರಾರಂಭವಾಗುತ್ತದೆ. ಆತ್ಮ ಸಂಶೋಧನೆಯ ಅಭ್ಯಾಸವಿದ್ದವರೇ ಈ ಪ್ರಸಂಗವನ್ನು ಚೆನ್ನಾಗಿ

ವಿವರಿಸಿ ಹೇಳಬಲ್ಲರು. ಲೇಖಕರ ಶೈಲಿ-ಭಕ್ತಭಾವದಿಂದೊಡಗೂಡಿ ಅಪ್ಪಯ್ಯ ಸ್ವಾಮಿಯವರ ಆತ್ಮ ಸಂಶೋಧನೆಯ ಪರಿಚಯ ಮಾಡಿಕೊಡುತ್ತದೆ. "ಅಪ್ಪಯ್ಯ ದೇವರು ಅಪ್ಪಯ್ಯದೇಶಿಕರಾಗುವಾಗಿನ ಅವರ ಸಾಧನೆಯ ಸ್ಥಿತಿಯಲ್ಲಿಯ ಆತ್ಮ ಸಂಶೋಧನೆಯ ಒಳನೋಟವನ್ನು ಲೇಖಕರು ಅತ್ಯಂತ ಭಕ್ತಿಯಿಂದ, ಜಾಣ್ಮೆಯಿಂದ ಚಿತ್ರಿಸಿದ್ದಾರೆ. ಅಲ್ಲಿ ಅವರ ಅನುಭವ ಜನ್ಯವಾದ ಪ್ರತಿಭೆ ಪ್ರಭಾವಶಾಲಿಯಾಗಿ ಬೆಳಗುತ್ತದೆ. ಸಾಧನೆಯ ಮಾರ್ಗವನ್ನು ಸುಲಲಿತವಾಗಿ ವಿವರಿಸಲಾಗಿದೆ. ಆಗ ಲೇಖಕರ ಲೇಖನಿಯು ಸತ್ವಯುತವಾಗಿ ಮುಂದರಿಯುತ್ತದೆ. ಶೈಲಿ ಸರಳವಾಗಿದೆ. ವಿಚಾರ ವೈವಿಧ್ಯಪೂರ್ಣವಾಗಿ ಪ್ರವಹಿಸುತ್ತದೆ..." ಎಂಬ ಮುನ್ನುಡಿಯಲ್ಲಿಯ ಮಾತುಗಳಲ್ಲಿ ಅತಿಶಯೋಕ್ತಿಯೇನಿಲ್ಲ.

ಬಾಗಲಕೋಟ ವೀರಶೈವ ಮಹಾಸಭೆಯಲ್ಲಿ-ಶಿವಯೋಗ ಮಂದಿರ ಸ್ಥಾಪಿಸಲು ನಿರ್ಧಾರವಾಗಿ ಅದಕ್ಕೆ ತಕ್ಕ ಸ್ಥಳ ಸೂಚಿಸಲು ಪವಾಡ ಪುರುಷನಾದ ಚಿತ್ತರಗಿ ಇಲಕಲ್ಲದ ಸ್ವಾಮಿಯವರಾದ ವಿಜಯ ಮಹಾಂತ ಶಿವಯೋಗಿಗಳನ್ನು ಕೇಳಿಕೊಳ್ಳ ಲಾಯಿತು. ಸದ್ಯದ ಸ್ಥಳವನ್ನು ಇಲಕಲ್ಲದ ವಿಜಯ ಮಹಾಂತರೇ ಹುಡುಕಿಕೊಟ್ಟರು. ಮೊದಲು ಆ ಸ್ಥಳದಲ್ಲಿ ಭಯಾನಕವಾದ ಡಬಗಳ್ಳಿ ಹಬ್ಬಿತ್ತಂತೆ. ವಿಜಯ ಮಹಾಂತೇ–ಶರ ಆಕಳು ಆ ಡಬಗಳ್ಳಿಯ ಮಧ್ಯದಲ್ಲಿ ಹೊಕ್ಕು ಅಲ್ಲಿ ಮಲಗಿತಂತೆ. ಅದೇ ಸ್ಥಳವೇ ಶಿವಯೋಗಮಂದಿರಕ್ಕೆ ಯೋಗ್ಯವೆಂದು ಶ್ರೀ ವಿಜಯಮಹಾಂತೇಶರು ಅಪ್ಪಣೆ ಕೊಡಿಸಿದರಂತೆ. ಅದೇ ಸ್ಥಳದಲ್ಲಿ ೧೯೦೯ರಲ್ಲಿ ಹಾನಗಲ್ಲ ಕುಮಾರಸ್ವಾಮಿಗಳು ಶಿವಯೋಗಮಂದಿರ ಸ್ಥಾಪಿಸಿದರು. ಇಂಥ ಸ್ಥಳದಲ್ಲಿ ಅದೂ ಹಾನಗಲ ಕುಮಾರೇ ಶ್ವರರ ಮಾರ್ಗದರ್ಶನದಲ್ಲಿ ಅಪ್ಪಯ್ಯಸ್ವಾಮಿಯವರು ಆತ್ಮ ಸಂಶೋಧನೆ ಮಾಡಿ ಸಾಕ್ಷಾತ್ಕಾರ ಪಡೆದರು.

ಅಪ್ಪಯ್ಯ ಸ್ವಾಮಿಯವರ ಗುರು ಬಿದರಿ ಕುಮಾರ ಶಿವಯೋಗಿಗಳು ಅಸ್ವಸ್ಥರಾಗಿ ಮಲಗಿದ ವಾರ್ತೆ ಅಪ್ಪಯ್ಯಸ್ವಾಮಿಯವರಿಗೆ ಶಿವಯೋಗಮಂದಿರದಲ್ಲಿ ಭಸ್ಮ ಘಟ್ಟಿಯು ಒಡೆದುದರ ಮುಖಾಂತರ ಗೊತ್ತಾಯಿತು. ಹಾನಗಲ್ಲ ಕುಮಾರಸ್ವಾಮಿಗಳ ಜೊತೆಗೆ ಅಪ್ಪಯ್ಯಸ್ವಾಮಿಗಳು ಸವದತ್ತಿಗೆ ಧಾವಿಸುವರು. ಮುಂದಿನ ಗುರುತರ ಕಾರ್ಯದ ಅರಿವನ್ನುಮಾಡಿ ಅಥಣಿ ಶಿವಯೋಗಿಗಳ ಪಾದಪದ್ಮದಲ್ಲಿ ಅರ್ಪಿಸಲು ೨೫ರೂ. ಕೊಟ್ಟು ೧೯೧೧ರಲ್ಲಿ ಬಿದರಿ ಕುಮಾರ ಶಿವಯೋಗಿಗಳು ಲಿಂಗೈಕ್ಯರಾದರು. ಇಲ್ಲಿ ಅಪ್ಪಯ್ಯಸ್ವಾಮಿಯವರ ಮೇಲೆ ಬಂದ ಹೊರೆ-ಹೃದಯಕ್ಕೆ ಅಪ್ಪಳಿಸಿದ ಆಘಾತ ಗಳನ್ನು ಲೇಖಕರು ಅತಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

ನಾಲ್ಕನೆಯ ಅಧ್ಯಾಯದಲ್ಲಿ ಅಪ್ಪಯ್ಯಸ್ವಾಮಿಗಳವರು ಮಾಡಿದ ಎಡೆಯೂರು ಸಿದ್ಧಲಿಂಗೇಶ್ವರ "ತೀರ್ಥಯಾತ್ರೆ"ಯ ವರ್ಣನೆಯಿದೆ. ಹಾನಗಲ್ಲ ಕುಮಾರ ಸ್ವಾಮಿಗಳ ಅಪ್ಪಣೆ ಪಡೆದು, ಪಾದಚಾರಿಯಾಗಿ ಹೆಗಲಮೇಲೆ ಶಿವಪೂಜೆಗಂಟನ್ನಿಟ್ಟುಕೊಂಡು ಆ ಎಡೆಯೂರಿಗೆ ಹೋಗಿ ಸಿದ್ಧಲಿಂಗೇಶ್ವರನ ತಾಣದಲ್ಲಿ ಅನುಷ್ಠಾನಮಾಡಿ ಅಪ್ಪಯ್ಯ

ದೇವರು ಅಪ್ಪಯ್ಯದೇಶಿಕರಾದುದನ್ನು ಲೇಖಕರು ಹೃದಯಂಗಮವಾಗುವಂತೆ ವರ್ಣಿಸಿದ್ದಾರೆ. ಕರ್ತವ್ಯ. ಶಿವಪೂಜೆಗಳ ಮಹಿಮೆಯನ್ನು ಇಲ್ಲಿ ಎತ್ತಿತೋರಿಸಿದ್ದಾರೆ.

ಹಾವೇರಿಯಿಂದ ಶಿವಯೋಗಮಂದಿರಕ್ಕೆ—ನಂತರ ಅಲ್ಲಿಂದ ಅಥಣಿಗೆ ಹೋಗಿ ಗುರುವಿನ ಆದೇಶದಂತೆ ಅಥಣಿ ಶಿವಯೋಗಿಗಳ ಪಾದದಲ್ಲಿ ೨೫ ರೂ. ಕಾಣಿಕೆ ಸಲ್ಲಿಸಿ ಆಶೀರ್ವಾದ ಪಡೆಯುವರು. ಅಥಣಿಯಿಂದ ಮರಳಿ ಶಿವಯೋಗಮಂದಿರಕ್ಕೆ ಬಂದು ಅಲ್ಲಿಂದ ಇಲಕಲ್ಲದ ದಕ್ಷಿಣಕ್ಕೆ ೩ ಮೈಲು ಅಂತರದಲ್ಲಿರುವ ಕೊಡಗಲಿ ಗವಿಗೆ ಬಂದು ಅಲ್ಲಿ ಅನುಷ್ಠಾನಗೈಯುವರು. ಭಾರತದ ಪ್ರತಿ ಅಂಗುಲ ನೆಲವೂ-ಪುಣ್ಯಮಯವಾಗಿದೆ, ದೈವಿಕಮಯವಾಗಿದೆ. ಕೊಡಗಲಿಯ ಗವಿಗಳು ಆ ದಿಶೆಯತ್ತ ಉತ್ತಮ ಉದಾಹರಣೆಗಳು. ನಿಸರ್ಗ ನಿರ್ಮಿತ ಕಲ್ಲಿನ ಗುಡ್ಡಗಳು ಗವಿ ನಿರ್ಮಿಸಿ ಸೃಷ್ಟಿ ಸೌಂದರ್ಯೋಪಾಸಕನನ್ನು, ಆತ್ಮಸಂಶೋಧಕರನನ್ನು ತನ್ನತ್ತ ಆಕರ್ಷಿಸಿ ತೃಪ್ತಿ ನೀಡುತ್ತವೆ. ಪೂರ್ವಿಕದಲ್ಲಿ ಪರಮ ಪೂಜ್ಯ ಮಹಾಲಿಂಗೇಶ್ವರನು ಈ ಬಂಡೆಗಲ್ಲುಗಳ ಮಧ್ಯ ಡಬಗಳ್ಳಿಯ ಬಳಗ ಕುರಿತು ಅನುಷ್ಠಾನಗೈದರು. ಕೊಡಗಲಿಯ ಆಧ್ಯಾತ್ಮಿಕ ಜೀವಿಗಳು ಬಹುಬೇಗ ಅವರ ಪ್ರಭಾವಕ್ಕೆ ಬೆರಗಾಗಿ ಅವರ ಅನುಷ್ಠಾನಕ್ಕೆ ಅನುಕೂಲವಾಗುವಂತೆ ಡಬಗಳ್ಳಿಯನ್ನು ಸವರಿ ಸದ್ಯದ ಮೂಲ ಮರದ ಗವಿಯನ್ನು ಕಟ್ಟಿಕೊಟ್ಟರು. ಈಗ ಇಲಕಲ್ಲದ ಭಕ್ತರಾದ ಮುದಗಲ್ಲರು ಹಾಗೂ ಇನ್ನಿತರ ಎಷ್ಟೋ ಭಕ್ತ ಜನರ ಉದಾರದೇಣಿಗೆಗಳಿಂದ ಭವ್ಯ ಮಂಟಪಗಳು ಗುಡ್ಡದ ಮಧ್ಯದಲ್ಲಿ ತಲೆ ಎತ್ತಿ ನಿಂತಿವೆ. ಈ ಗುಡ್ಡದ ಪಕ್ಕದಲ್ಲಿಯೇ ಒಂದು ಹಳ್ಳವು ಝುಳು ಝುಳು ನಿನಾದ ಮಾಡುತ್ತ ಹರಿಯುತ್ತದೆ. ಮೂಲ ಗವಿಯ ಮುಂದೆ ಒಂದು ಮಂಟಪವನ್ನೂ, ಮಂಟಪದ ಮುಂದೆ-ಮಹಾಲಿಂಗೇಶ್ವರನ ಗವಿಯನ್ನೂ ಕಟ್ಟಲಾಗಿದೆ.

ಕೊಡಗಲಿಯ ಮಹಾಲಿಂಗೇಶ್ವರನು ಅಪ್ಪಯ್ಯಸ್ವಾಮಿಯವರನ್ನು ಅಲುಗಾಡಿಸಿ ನೋಡುವರು. ಮಹಾಲಿಂಗೇಶ್ವರನೇನು ಸಣ್ಣ ವ್ಯಕ್ತಿಯೆ? ಆತನೂ ಪವಾಡ ಪುರುಷನು. ವಿಜಯ ಮಹಾಂತೇಶನ ಸಮಕಾಲೀನನು. ಅನುಷ್ಠಾನಕ್ಕೆ ಕುಳಿತ ಅಪ್ಪಯ್ಯ ದೇಶಿಕರಿಗೆ ಅತಿಸಾರಬಾಧೆಯಾಯಿತು. ಇದರ ಮರ್ಮವರಿತ ಬಸವಲಿಂಗ ದೇಶಿಕರು ಮಹಾಲಿಂಗೇಶ್ವರನ ಗದ್ದುಗೆಗೆ ಮಹಾಸಂಕಲ್ಪಮಾಡಿ ಗುಣವಾದರೆ ೧೧ ಮಂಟಪ ಪೂಜೆ ಮಾಡುವನೆಂದು ಬೇಡಿಕೊಂಡರು. ಅಪ್ಪಯ್ಯದೇಶಿಕರು ಗುಣವಾದರು. ಮಹಾಲಿಂಗೇಶ್ವರನ ಪರೀಕ್ಷೆಯಲ್ಲಿಯೂ ಅವರು ಉತ್ತೀರ್ಣರಾದರೆಂಬುದು ಇದರ ತಾತ್ಪರ್ಯ.

ಐಯ್ದನೆಯ ಅಧ್ಯಾಯದಲ್ಲಿ ಅಪ್ಪಯ್ಯ ದೇಶಿಕರು "ಅಧಿಕಾರ" ಗದ್ದುಗೆಯೇರಿ ಅಪ್ಪಯ್ಯಸ್ವಾಮಿಗಳಾದುದನ್ನು ಲೇಖಕರು ಚಿತ್ರಿಸಿದ್ದಾರೆ. ಹಾನಗಲ್ಲ ಹಾಗೂ ಹಾವೇರಿಯ ಶ್ರೀಗಳು ಸವದತ್ತಿಗೆ ಬಂದು ೧೯೨೨ನೇ ಇಸ್ವಿ ಮಾಘಶುಕ್ಲ ಪಂಚಮಿ ಗುರುವಾರ ಅಪ್ಪಯ್ಯನವರಿಗೆ ಬಿದರಿ ಸವದತ್ತಿ ಕಲ್ಮಠದ ಅಧಿಕಾರಪಟ್ಟಗಟ್ಟಿದರು.

ಅಪ್ಪಯ್ಯದೇಶಿಕರು ಅಪ್ಪಯ್ಯಸ್ವಾಮಿಗಳಾದರು. ಮಠದ ಪದ್ಧತಿಗನುಸರಿಸಿ ಶ್ರೀ ಶಿವಲಿಂಗ ಸ್ವಾಮಿಗಳಾದರು. ಹಿಂದಿನ ಸಂಕಲ್ಪವನ್ನು ನೆನಿಸಿಕೊಂಡು ಕೊಡಗಲಿಯ ಮಹಾಲಿಂಗೇಶ್ವರನಿಗೆ ೧೧ ಮಂಟಪಪೂಜೆಗಳನ್ನು ಸಲ್ಲಿಸಿರುವರು.

ಆರನೆಯ ಅಧ್ಯಾಯದಲ್ಲಿ ಅಪ್ಪಯ್ಯಸ್ವಾಮಿಯವರು "ಸತ್ಯ ಶಿವಯೋಗಿ"ಯಾಗಿ, ಗುರುಲಿಂಗ. ಜಂಗಮ, ವಿಭೂತಿ,ಅಷ್ಟಾವರಣ, ಷಟ್‌ಸ್ಥಳ, ಪಂಚಾಚಾರ ಮುಂತಾದವುಗಳ ಮಹಿಮೆಯನ್ನು ಭಕ್ತರಿಗೆ ತಿಳಿಸುವರು. ಇಲ್ಲಿ ಲೇಖಕರ ಶೈಲಿ ಕಾವ್ಯಮಯವಾಗಿ ಹೊರಚಿಮ್ಮಿದೆ. "ಅವರ ಜೀವನವೇ ಅಂತಹದು. ಸತತವೂ ಸಾತ್ವಿಕ ಭಾವನೆಯಲ್ಲಿ ತುಂಬಿದ ಸತ್ಯಮೂರ್ತಿ. ಆತ್ಮಸಾಧನೆಯ ಬಲದಿಂದ ಬ್ರಹ್ಮವನ ವಿಹಾರಿಗಳಾಗಿ ರಾರಾಜಿಸುವ ತೇಜೋಮೂರ್ತಿ. ಭಕ್ತರ ಹೃತ್ಕಮಲದಲ್ಲಿ ವಾಸುವ ಪ್ರಸನ್ನಮೂರ್ತಿ. ಅಂತಃಶಕ್ತಿಯ ಪ್ರಭೆಯನ್ನೂ ಬೀರುವ ಚಿನ್ಮೂರ್ತಿ." (ಪುಟ-೩೩; ಪ್ಯಾರಾ–೩).

ಅಪ್ಪಯ್ಯಸ್ವಾಮಿಯವರು ಸವದತ್ತಿಯ ಮಠಬಿಟ್ಟು ಮಲಪ್ರಭೆಯ ಒಡಕು ಹೊಳೆಯ ದಡದಲ್ಲಿ ಅನುಷ್ಠಾನಕ್ಕೆ ಕೂಡ್ರುವರು. ಸ್ವಾಮಿಯವರ ಜೀವನದ ಅತ್ಯುಚ್ಚ ಗಟ್ಟವಿದು. ಇಲ್ಲಿ ಲೇಖಕರು ಸಂಶೋಧನಾತ್ಮಕವಾಗಿ ವಿವರಣೆಗಳನ್ನು ನೀಡಿದ್ದಾರೆ. "ಒಡಕು ಹೊಳೆಯು ಸವದತ್ತಿಯಿಂದ ೪ ಮೈಲಿನ ಮೇಲೆ ಅದೆ. ಆ ಹೊಳೆಯ ಸ್ಥಾನದಲ್ಲಿ ಹರಪುರ ಪಟ್ಟಣವೆಂಬುದು ಪೂರ್ವಕಾಲದಲ್ಲಿದ್ದುದು ಪ್ರತೀತಿ. ಅಲ್ಲದೆ... ಪೂರ್ವಕ್ಕೆ ಹನುಮಂತ ದೇವರ ಮೂರ್ತಿಯು. ಉತ್ತರಕ್ಕೆ ರಾಮೇಶ್ವರ ಪುರಾತನ ಗುಡಿಯೂ. ಪಶ್ಚಿಮಕ್ಕೆ ಯಕ್ಷಿಣೀ ದೇವತೆಯೂ, ದಕ್ಷಿಣಕ್ಕೆ ಬಾಣತೆವ್ವ ದೇವತೆಯೂ, ಈ ಪ್ರಕಾರ ಅಧಿಷ್ಠಾತೃ ದೇವತೆಗಳಿದ್ದು ಈಗಲಾದರೂ ಆ ಸ್ಥಾನದಲ್ಲಿ ಅಪವಿತ್ರ ಕಾರ್ಯಗಳು ಆಗುವುದಿಲ್ಲ." ಅದೇ ಸ್ಥಾನದಲ್ಲಿ ಈ ಮೊದಲು ಬಿದರಿಕುಮಾರೇಶ್ವರರೂ ಅನುಷ್ಠಾನಗೈದಿದ್ದರೆಂದು ಲೇಖಕರು ಸಂಶೋಧಿಸಿದ್ದಾರೆ.

ಇಲ್ಲಿ ಲೇಖಕರು ಅಪ್ಪಯ್ಯ ಸ್ವಾಮಿಯವರ ಪವಾಡವನ್ನು ಮರೆದಿದ್ದಾರೆ. ಸ್ವಾಮಿಯವರು ಪೂಜೆಗೆ ಕುಳಿತೊಡನೆ ಪ್ರತಿನಿತ್ಯ ಹುಲಿ ಬಂದು ಅವರೆದುರಿನಲ್ಲಿ ಮಲಗುತ್ತಿತ್ತಂತೆ. ಸ್ವಾಮಿಗಳು ಹೋಗು ಎಂದಾಕ್ಷಣ ಹೋಗುತ್ತಿತ್ತಂತೆ. ಈ ಸ್ಥಳ ಇಂದಿಗೂ ಪೂಜ್ಯವಾಗಿದೆ. ಇಲ್ಲಿ ಪ್ರತಿವರ್ಷ ಸಂಕ್ರಮಣದಲ್ಲಿ ಜಾತ್ರೆಯಾಗುವುದನ್ನು ಜ್ಞಾಪಿಸಿಕೊಳ್ಳಬಹುದು.

ಕೊನೆಯ ಅಧ್ಯಾಯ "ಸೂರ್ಯಾಸ್ತ"ವು. "ಉದಯವಾದ ಸೂರ್ಯನು ಅಸ್ತಂಗತನಾಗದೇ ಇರುವನೇ?" "ಜಾತಸ್ಯ ಮರಣಂ ಧ್ರುವಂ". ವೈಜ್ಞಾನಿಕವಾಗಿ ವಿಚಾರಿಸಿದರೆ ಸೂರ್ಯನು ಉದಯವಾಗುವುದೇ ಇಲ್ಲ. ಅಂದ ಬಳಿಕ ಮುಳುಗುವ ಮಾತಂತೂ ದೂರ ಉಳಿಯಿತು. ಸೂರ್ಯನು ಸ್ಥಿರ; ಗ್ರಹಗಳು ಮಾತ್ರ ತಮ್ಮನ್ನು ತಾವು ಸುತ್ತುತ್ತ ಸೂರ್ಯನ ಪ್ರದಕ್ಷಿಣೆಮಾಡುವವು. ಪ್ರಕಾರ ಈ ಪೃಥ್ವಿಯು ಸ್ವಯಂ ಸುತ್ತುವುದರಿಂದ ಸೂರ್ಯನು ಉದಯವಾದಂತೆ, ಚಲಿಸಿದಂತೆ ಕೊನೆಗೆ

ಮುಳುಗಿದಂತೆ ಭಾಸವಾಗುವುದು. ಇದೆಲ್ಲ ಸತ್ಯಕ್ಕೆ ದೂರ. ಅದೇ ತೆರನಾಗಿ ಮಹಾತ್ಮರಿಗೆ ಜನನವೂ ಇಲ್ಲ, ಮರಣವೂ ಇಲ್ಲ. ಇದೆಲ್ಲ ನಮ್ಮ ಕಣ್ಣಮುಂದಿನ ಮಾಯೆ. ಪರಮಾತ್ಮನ ಲೀಲೆ. ಈ ಮಾಯೆ, ಲೀಲೆಗನುಗುಣವಾಗಿ ಅಪ್ಪಯ್ಯ ಸೂರ್ಯನು ಅಸ್ತನಾಗುವನು. ಸೂರ್ಯಾಸ್ತದ ಮುನ್ಸೂಚನೆ ಹಾವೇರಿ ಸ್ವಾಮಿಯವರಿಗೆ ಆಗಿರಲೇಬೇಕು. ಅದಕ್ಕೇ ವಾತಬಾಧೆಯ ನಿಮಿತ್ತ ಅವರು ಸವದತ್ತಿಗೆ ಧಾವಿಸುವರು. ಸ್ವಾಮಿಯವರು ಬಂದುದನ್ನು ಕೇಳಿ ಅಪ್ಪಯ್ಯಸ್ವಾಮಿಯವರು ಅನುಷ್ಠಾನ ಬಿಟ್ಟು ಸವದತ್ತಿಗೆ ಬರುವರು. "ಅನುಷ್ಠಾನಬಿಟ್ಟು ಏಕೆ ಬಂದೆ ಹೋಗು" ಎಂದು ಸ್ವಾಮಿಯವರು ಗುಡುಗಿದುದಕ್ಕೆ ಅಪ್ಪಯ್ಯಸ್ವಾಮಿಯವರು ತಮ್ಮ ಕರ್ತವ್ಯದ ಅರಿವುಮಾಡಿಕೊಂಡು ಮಿಂಚಿನಂತೆ ಕತ್ತಲೆಯಲ್ಲಿಯೇ ಮಾಯವಾಗುವರು.

ಸ್ವತಃ ಅಪ್ಪಯ್ಯಸ್ವಾಮಿಯವರಿಗೆ ತಮ್ಮ ಅಂತ್ಯದ ಅರಿವಾಯಿತು. ಪೂಜೆಗೆ ಕುಳಿತಾಗ ಅವರ ಕ್ರಿಯಾಘಟ್ಟಿ ಒಡೆಯಿತು. ಈ ಸ್ಥಳದಲ್ಲಿ "ತೆಪ್ಪದ ತೇರು ಮಾಡಿಸು" ಎಂದು ಸ್ವಾಮಿಯವರು ಶರಣ ಬಾಕಪ್ಪನಿಗೆ ಆದೇಶನೀಡಿ ಮಾರ್ಗಶಿರ ಶುದ್ಧ ೭ ಶಕೆ ೧೮೪೭(೧೯೨೫ನೇ ಇಸ್ವಿ)ರಂದು ಶಿವೈಕ್ಯರಾದರು.

ಲೇಖಕರ ಶೈಲಿ ತನ್ನದೇ ಆದ ಮೆರುಗನ್ನು ಪಡೆದಿದೆ. ವೇದಾಗಮಗಳಲ್ಲಿಯ ಸಂಸ್ಕೃತದ ಒಳ್ಳೆಯ ಉಕ್ತಿಗಳನ್ನು ಶಿವಶರಣರ ಅಮೃತಮಯ ವಚನಗಳನ್ನು ತಮ್ಮ ಶೈಲಿಯಲ್ಲಿ ಚೆನ್ನಾಗಿ ಕೆತ್ತಿದ್ದಾರೆ. ಪುಣ್ಯಜೀವನದ ಚರಿತೆಯನ್ನು ಒಬ್ಬ ಪುಣ್ಯಜೀವಿಯು ಬರೆದುದೆಂದರೆ, ಸ್ವಾಭಾವಿಕವಾಗಿ-ಪುಣ್ಯ ಮೆರುಗನ್ನೆ ಅದು ಪಡೆದಿರಲು ಸಾಕು. □

ಜಗದ್ಗುರುಗಳವರ ಧ್ಯೇಯಸಾಧನೆಗೆ
ಕಾರಣರಾಗಿರುವ
ಮಹಾವಿಭೂತಿಗಳು




ವಿಶ್ವವಿಭೂತಿ ಮಹಾತ್ಮಾ ಬಸವೇಶ್ವರ



ಹುಬ್ಬಳ್ಳಿ ಜಗದ್ಗುರು ಮೂರುಸಾವಿರ ಮಠದ ಕತೃಗದ್ದುಗೆ



ಪರಮಪೂಜ್ಯ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ತೋಂಟದ
ಸಿದ್ಧಲಿಂಗ ಶಿವಯೋಗಿಗಳು; ಎಡೆಯೂರು.



ಪರಮಪೂಜ್ಯ ಲಿಂ, ಶ್ರೀಮನ್ಮಹಾರಾಜನಿರಂಜನ ಜಗದ್ಗುರು
ಶ್ರೀ ಗಂಗಾಧರಮಹಾಸ್ವಾಮಿಗಳು; ಮೂರುಸಾವಿರ ಮಠ, ಹುಬ್ಬಳ್ಳಿ



ಪರಮಪೂಜ್ಯ ಲಿಂ, ಶ್ರೀಮನ್ಮಹಾರಾಜನಿರಂಜನ ಜಗದ್ಗುರು ಶ್ರೀ ಗುರುಸಿದ್ಧರಾಜಯೋಗೀಂದ್ರ
ಮಹಾಸ್ವಾಮಿಗಳು ಮೂರುಸಾವಿರಮಠ ಹುಬ್ಬಳ್ಳಿ



ಪರಮಪೂಜ್ಯ ಲಿಂ, ಶ್ರೀ. ನಿ. ಪ್ರ. ಕುಮಾರ ಶಿವಯೋಗಿ
ವರೇಣ್ಯರು, ಬಿದರಿ



ಶ್ರೀಮದ್ವೀರಶೈವ ಶಿವಯೋಗಮಂದಿರದ ಸ್ಥಲ ನಿರ್ದೇಶಕರು
ಪರಮ ತಪಸ್ವಿಗಳು ಆದ
ಲಿಂ, ಚಿತ್ತರಗಿ ವಿಜಯ ಮಹಾಂತಶಿವಯೋಗಿಗಳು
ಸಂಸ್ಥಾನಮಠ ಇಲಕಲ್ಲ



ಅಖಿಲಭಾರತ ವೀರಶೈವ ಮಹಾಸಭೆ ಹಾಗು ಶ್ರೀಮದ್ವೀರಶೈವ
ಶಿವಯೋಗಮಂದಿರ ಸಂಸ್ಥಾಪಕರು ಆದ
ಲಿಂ, ಹಾನಗಲ್ಲ ಕುಮಾರ ಮಹಾಶಿವಯೋಗಿಗಳವರು
ಶಿವಯೋಗಮಂದಿರ



ಪರಮತಪಸ್ವಿ ಪರಮಪೂಜ್ಯ ಲಿಂ, ಶ್ರೀ ನಿ. ಪ್ರ.
ಶಿವಬಸವ ಮಹಾಸ್ವಾಮಿಗಳು ಹುಕ್ಕೇರಿಮಠ ಹಾವೇರಿ



ಲಿಂ, ಶ್ರೀ. ನಿ. ಪ್ರ. ಕೊಪ್ಪದ ಮಹಾಂತಸ್ವಾಮಿಗಳು ಚಿತ್ತರಗಿ. ಇಲಕಲ್ಲ

# ನಾ ಜಂಗಮದೇವಸ್ಥಾನ !

ಕುವೆಂಪು

ನಾ ಜಂಗಮ ದೇವಸ್ಥಾನ !
ಶತವರ್ಣದೊಳಿರೆ ಉದ್ಯಾನ
ಆತ್ಮದೊಳಿರೆ ಅನುಸಂಧಾನ
ಚಿತ್ತದೊಳಿರೆ ಶ್ರೀಮದ್‌ಧ್ಯಾನ
ನಾ ಜಂಗಮ ದೇವಸ್ಥಾನ !
ನಾಟ್ಯಮಾನ ಭಾವೋಜ್ವಲ ರಕ್ತದಿ
ಬಿಂದು ಬಿಂದುವೊಳೂ ನಂದನ ನರ್ತಿಸೆ
ನರ್ತಿಸುವವು ಮಂತ್ರಾಪ್ಸರವೃಂದಾ !
ಭಗವಚ್ಚಿಂತಾ ಜಟಾಪ್ರಪಾತದಿ
ಧುಮುಕುವ ಸಾವಿರ ಜಿಹ್ವಾಸ್ರೋತದಿ
ಧಮನಿಧಮನಿಯಲಿ ಹರಿವುವು ಗಂಗಾ !
ಕೋಟಿಕಣ್ಗಳಲಿ ನೋಟವೆ ಆಗಿ
ಕೋಟಿ ಕಿವಿಗಳಲಿ ಝೋಂಕೃತಿಯಾಗಿ
ಕೋಟಿ ರಸನೆಯಲಿ ಹೊಸ ಜೇನಾಗಿ
ಕೋಟಿ ದೇವರಿಗೆ ದೇಗುಲವಾಗಿ:
ಎಲ್ಲ ದೇವರೂ ನನ್ನೊಳಗಾಗಿ
ನನ್ನ ಎಲ್ಲವೂ ಅನ್ಯವೆ ಆಗಿ
ರಸಯೋಗದೊಳಿರೆ ಎಲ್ಲವೆ ಆಗಿ.
ನಾ ಜಂಗಮ ದೇವಸ್ಥಾನ !

# ಲಿಂಗಲೀಲಾವಿಲಾಸಕ್ಕೆ ಒಂದೇ ಮಾಟ

ಅಂಬಿಕಾತನಯದತ್ತ

ಒಲ್ಲದವನಿಗೆ ಇಲ್ಲ, ಅಂಗವಿದ್ಯಾವರ್ಗ
ಒಲಿದವನಿಗುಂಟು ಅದು ಸಮದಂಡಿ ಆದಾಗ
ಅತ್ತ ಯಾವುದೊ ನರಕವಿತ್ತ ಏನೊ ಸ್ವರ್ಗ
ಭಗವಂತನೊಡನೆ ತಾನವಿಭಕ್ತವಾದಾಗ

ಎಲ್ಲಿ ಆ ನಕ್ಷತ್ರ ! ಎತ್ತ ಈ ಪರ್ಜನ್ಯ !
ಸಿಂಪಿ ತೆರೆಯದೆ ಬಾಯಿ ಮುತ್ತಿಗಿಲ್ಲವು ಮುಕ್ತಿ
ಅರ್ಧಾರ್ಧ ಎಂದರೂ ಶಿವಶಕ್ತಿಯನ್ಯೋನ್ಯ
ಆ ವಿವೇಕಾನಂದ ಸಹಜ ಯುಕ್ತಿಯ ಭಕ್ತಿ.

ಓಂಕಾರ ರೂಪವೇ, ಅಂಬಿಕೆಯು ಮೈಮಣ್ಣು
ನಿದ್ದೆ ಎಚ್ಚರಗಳಲಿ ಸತತ ಏಕಾಕಾರ
ಶರಣ ಪ್ರಪನ್ನತೆಗೆ ವಿಟ್ ಸ್ಥಲ ಸ್ವೀಕಾರ
ಶಿವನಿತ್ತ ತಲೆಯಲ್ಲಿ ಆನೆಯಾಗಿರೆ ಕಣ್ಣು

ಲಿಂಗಲೀಲಾವಿಲಾಸಕ್ಕೆ ಒಂದೇ ಮಾಟ
ಬಿನ್ನಾಣ ಸೌಂಜ್ಞಿಸಲು ಆತನಾಟವೆ ಆಟ.

# ಓಂ.

ಆರ್. ಸಿ. ಹಿರೇಮಠ

ಓಂ – ಎನ್ನ ಅಂಗವೇ,
ಆಗು ನೀ ಲಿಂಗವೇ.
ಮಾಟವಾಗು : ಕೂಟವಾಗು ; ಬೇಟೆವನ್ನೆ ನೀಗು !

ನಾಂ – ಎಂಬ ಶ್ವಾನವೇ,
ಆಗು ನೀ ಮೌನವೇ.
ತನುವೆ ಕುಗ್ಗು ; ಮನವೆ ಹಿಗ್ಗು ; ಘನದ ಸುಗ್ಗಿಯಾಗು !

ಓಂ — ಎನ್ನ ಭಕ್ತಿಯೇ
ಆಗು ನೀ ಶಕ್ತಿಯೇ.
ಕರಣ ಹಿಗ್ಗು ; ಶರಣ ನುಗ್ಗು ; ಸಾಮರಸ್ಯನಾಗು !

ಓಂ – ಎನ್ನ ಪ್ರಾಣ.
ನೀ ಲಿಂಗ ಪೂರಣ.
ಆಗು ; ಶಿವನ ಹೆಸರು ಕೂಗು ; ಜೀವ ಜನ್ಮಧಾರಣ !

ಓಂ – ಭಾವ ಬತ್ತಲೇ,
ನೀ ಲಿಂಗದತ್ತಲೇ.
ಬೆರಿಸಿ ಬೇರೆ ಇರಿಸದಾಗು ಸಚ್ಚಿದಾನಂದವೇ !

# ಆನಂದದ ತೀರ

ಡಿ. ಎಸ್. ಕರ್ಕಿ

ಒಳಿತು ನೆನೆವ ಮನಕೆ ಹಗುರ
ಹಗುರ ಜಗದ ಭಾರ
ಆಚೆ ದೂರ ಈಚೆ ಸನಿಹ
ಆನಂದದ ತೀರ

ಒಲವಿನೊಂದು ಹೊನಲು ಹರಿಯೆ
ಸುತ್ತಲೂ ನೆರೆಹೊರೆಯಲಿ
ಹಸಿರು ಹರಡಿ ಹೊಳೆವುದಾಗ
ಶಿವನ ಚೆಲುವು ಜಗದಲಿ

ಬಂದುದೆ ಬಂಗಾರವೆನಲು
ದುಡಿದು ತಣಿವ ಜೀವ
ಅಂತರಂಗದಲ್ಲಿ ತೀವಿ
ಬಹನು ದೇವ ದೇವ

೩

ಸೂಸಿ ಬರಲು ಸದಾ ಹೃದಯದಿ
ವಿಶ್ವದ ರಸರಾಗ
ದಿನದ ಬೆಳಕು ಮನದೊಳಿಳಿದು
ನಿಲಲದೆ ಶಿವಯೋಗ

೪

ಕಲ್ಯಾಣವ ಬಗೆವ ಮನದಿ
ಆರಳಿದೆ ಮಂದಾರ
ಕಂಪ ತಳೆದು ಕಂಗೊಳಿಸಿತು
ಶಿವ ಗಂಗಾ ತೀರ

೫

ವನದೊಳಿಹುದೆ–? ಮನದೊಳಿಹುದು
ಜೀವನ ಸೌಗಂಧ
ಪರಿಮಳದಲಿ ತೆರೆಗೊಳ್ಳುವ
ಸಂಗಮ ಸ್ವಚ್ಛಂದ

೬

ಶಿವಚಿತ್ತವ ಸೋಂಕಿ ಬರುವ
ಅನುಭವ ಮೃದು ಮಧುರ
ಒಳಿತು ನೆನೆವನುಭಾವವೆ
ಆನಂದದ ತೀರ

## ರಸಗಂಗೆ

---

ಶ್ರೀ ಜ. ಚ. ನಿ.

ಹರಿದು ಬಾ ರಸಗಂಗೆ
  ಹರಿದು ಬಾ
ಶಿಖಾ ಶಿಖರದಿಂದ
  ಸಹಸ್ರಾರ ಸುಷಿರದಿಂದ
ಇಳಿದು ಬಾ ರಸಗಂಗೆ
  ಇಳಿದು ಬಾ
ಭಾವ ಭೂಮಿಗೆ
  ಹೃದಯ ಸೀಮೆಗೆ
ಹರಿದು ಬಂದು ಹದವ ತಂದು
  ಹುಲಸಾಗಿ–ಹುರುಳಾಗಿ
ಬೆಳೆಸ ಬಾ ಭಾಷಾಸಸಿಯ
  ಉಲಿಸ ಬಾ ಭಾವಪ್ರಸಾದವ !
ಇಳಿದು ಬಾ ರಸಗಂಗೆ
  ಇಳಿದು ಬಾ
ಚಿತ್ತ ಪಾತ್ರಕೆ;
ಬುದ್ಧಿಕ್ಷೇತ್ರಕೆ
  ಇಳಿದು ಬಂದು–ತೊಳೆದು ನಿಂದು
ಕಳೆಯೇರಿಸಿ–ಕಲೆಯಾಗಿಸಿ
  ಬೆಳುವಾಗಿಸ ಬಾ ಚಿತ್ತ ವೃತ್ತಿಯ
ನಿಲಿಸಿ ನಲಿಸ ಬಾ ತತ್ತ್ವ ಸತ್ವವ !
  ನೀನೆನ್ನ ನಾದ ನಿರ್ಝರಿಣಿ
ನೀ ಜೀವ ಸಂಜೀವಿನಿ

ಸುಧಾ ಸ್ರಾವಿಣಿ, ಶಿವಾಭವಾನಿ
ನೀನೆನ್ನ ಕಳಾಕಾರಿಣಿ, ಪರಾವಾಣಿ
ಪರಮಾನಂದ ಧಾರಿಣಿ
ಷಟ್ ಶಕ್ತಿಶ್ರೇಣಿ !
ಮಿಡಿದು ನುಡಿಸ ಬಾ
ಎನ್ನೆದೆಯ ವೀಣೆಯನು,
ತುಂಬ ಬಾ ರಸನಾದವನು;
ತುಳುಕಿಸ ಬಾ
ಹೃದಯದಾಗಸವನು;
ತುಂಬು ಬಾ
ಕಾವ್ಯ ಸ್ಫೂರ್ತಿಯನು
ದಿವ್ಯ ಮೂರ್ತಿಯನು !
ಓ ರಸಗಂಗೆ ನಿನ್ನದು
ಮಂಗಳ ಮಾಟ ಕಂಗಳ ನೋಟ
ಸಂಗಸಮರದ ಹೂಟ;
ಮನದೊಳಗೆ ಮಾತಾಡುವ
ತನಿನುಡಿಗಳ ಸವಿಯೂಟ !
ಬರಿಸುತ ಜೇನು ಮಳೆಗಳ
ಸುರಿಸುತ ಅಮೃತ ಕಳೆಗಳ
ಬೆರಸುತ ರಸಸಾಗರದೊಳು
ಆ ಭಾವಾ ವೇಶದೊಳು
ಹರಿದು ಬಾ ರಸಗಂಗೆ
ಹರಿದು ಬಾ !

# ಎಲೆ ಮನವೆ !

ಈಶ್ವರ ಸಣಕಲ್ಲ

೧

ಹೊರಗಲೆದು ಎಲೆ ಮನವೆ, ಹೊರಗನೇಯೊಲಿದೆ !
ಹೊರಜಗದ ಹುರುಳಿರದ ಹೊಗಳಿಕೆಯ ಮೇಲಿದೆ !

೨

ಕಟ್ಟಡವ ಕಟ್ಟಡವ ಕಟ್ಟಿ ಕಟ್ಟೈಲಸಿ
ಮೆಟ್ಟು ಮೆಟ್ಟಿಲುಗಳಲಿ ಮೋಹವೊಟ್ಟೈಲಸೆ !

೩

ವಸ್ತುಕಲೆ-ಶಿಲ್ಪಕಲೆಗಳಲಿ ನಯಗೊಳಿಸಿ
ಶಶಿಸೂರ್ಯನಕ್ಷತ್ರಗಳಲಿ ಸಿಂಗರಿಸಿ

೪

ಕೆತ್ತಿರಲು ಇಂದ್ರಚಾಪದ ರಮ್ಯ-ಕವನ !
ಚಲುವಾಯ್ತು ! ಗೆಲುವಾಯ್ತು ನಿನ್ನಿಂದ್ರಭವನ !

೫

ಕಂಡ ಜನ ಹೊಗಳಿತ್ತು ಎಂಥ ಸಾಹಸವು !
ಹರಿದಿಹುದು ವಿಲ್ಲೆಡೆಗೂ ಸೌಂದರ್ಯರಸವು !

೬

ಆದೊಡಯ್ಯೋ ! ಒಳಗ ಆಶೆಯಾಮಿಷವು !
ಕಣ್ಣಾಚೆ ಹರಿಯುತಿದ ವಿಷವು ! ಕಿಲ್ಮಿಷವು !

೭

ಹೊರಬೆಡಗು, ಬರಿಗುಡುಗು ನಿನ್ನ ಮೈಯುಡಗೆ ?
ಜಗಕೆ ನೇ ನೀಡುತಿಹುದೇನೆಂಥ ಕೊಡುಗೆ ?

*    *    *    *    *

೮

ಪುಲ್ಲೆದೊವಲೋ, ನಾರೋ, ಕಾವಿ–ರೇಶಿಮೆಯೊ !
"ಟೆರಿಕಾಟೊ" "ಟೆರ್ಲಿನ್ನೊ"–ವಸ್ತ್ರಗಳ ಭ್ರಮೆಯೊ !

೯

ವಿವಿಧ ವೇಷದಿ ಜಗವ ನೀ ಮರುಳಗೊಳಿಸಿ
ಪದಪದವಿ ಸ್ಥಾನಮಾನವ, ಹೆಸರ, ಗಳಿಸಿ

೧೦

ಸ್ವಾರ್ಥವಂಚನೆಗಳು ಪರಧರ್ಮ ಸೆಳೆದೆ !
ಪರನಾರಿಯರ –ವರಸತೀತ್ವವನೆ ಕಳೆದೆ !

೧೧

ಶಿಕ್ಷಣವೊ, ಭಕ್ಷಣವೊ, ಅದು ನಿನಗೆ ಗೊತ್ತು !
ನಿಃಸ್ವಾರ್ಥ–ನೆಪದಿ ನುಂಗಿವೆಯೆಲ್ಲ ಸೊತ್ತು !

೧೨

ಆ ಮಟವು ಈ ಮಟವು ಕೊನೆಗೆ ಅಟಮಟವು
ಎಲ್ಲಿಹುದು ? ಎಲ್ಲಿಹುದು ದಿಟದ ಸಂಪುಟವು !

೧೩

ಹೊರ ಹೊರಗು ಬರಿಬುರುಗು ಮಾಯಾ–ಪ್ರಪಂಚ !
ನೋಡೊಳಗೆ ಬೆಳಬೆಳಗೆಯಂತಃ ಪ್ರಪಂಚ !

೧೪

ಅವಿರಳಜ್ಞಾನವೇ ಗುಡಿಗಟ್ಟಿ ನಿಂದಿಹುದು !
ದ್ವಂದ್ವಬಂಧನರಹಿತ ಸತ್ಪ್ರಭೆಯು ಸಂದಿಹುದು !

೧೫

ಹೊರಜಗದ ಹಂಬಲಿಕೆ ಪಾಸಟಿಯೆ ಇದಕೆ ?
ಮೀಯು ! ಮುಳುಮುಳುಗಿಲ್ಲಿ ಸಲ್ವೆ ಸಮ್ಮುದಕೆ !

೧೬

ನಡೆಯನ್ನು ಊರ್ಧ್ವ ಯಾತ್ರಿಕನಾಗಿಯೊಳಗೆ !
ನಿಜದ ನೆಲೆ ಸಾರುವದು ಮುಕ್ತಿಪ್ರಭೆ ಬೆಳಗೆ !

೧೭

ಲೀನವಾಗಲಿ ಮನವು ಲಯವಾಗಲಿಲ್ಲಿ !
ಕಡಲಾಲಿ ಬೆರೆತಂತೆ ಕಪ್ಪುರುರಿಯಲ್ಲಿ !

೧೮

ಶಿವ ನಿನೇ ! ನೀನೇ ಶಿವ ! ಸ್ವಯವು ಅದ್ವಯವು !
ಬಯು ಬಯಲು ! ಶೂನ್ಯನಿಶ್ಶೂನ್ಯವೋ ! ಲಯವು !

೧೬

ನಡೆಯನ್ನು ಊರ್ಧ್ವ ಯಾತ್ರಿಕನಾಗಿಯೊಳಗೆ !
ನಿಜದ ನೆಲೆ ಸಾರುವದು ಮುಕ್ತಿಪ್ರಭೆ ಬೆಳಗೆ !

೧೭

ಲೀನವಾಗಲಿ ಮನವು ಲಯವಾಗಲಿಲ್ಲಿ !
ಕಡಲಾಲಿ ಬೆರೆತಂತೆ ಕಪ್ಪುರುರಿಯಲ್ಲಿ !

೧೮

ಶಿವ ನೀನೇ ! ನೀನೇ ಶಿವ ! ಸ್ವಯವು ಅದ್ವಯವು !
ಬಯ ಬಯಲು ! ಶೂನ್ಯನಿಶ್ಶೂನ್ಯವೋ ! ಲಯವು !

# ಕರುಣೆಯು ಕಂದೆರವು

ಚನ್ನವೀರ ಕಣವಿ

ಮುಗಿಲ ಬಸಿರ ಬಯಲಿನಿಂದ
ಹಗಲಿರುಳಿನ ಕೊಯಿಲಿನಿಂದ
ಹೊಸಗಾಳಿಯು ಸುಯ್ಲಿನಿಂದ
ದಶದಿಶೆಗಳು ಮೊರೆದಿವೆ

ಎಲೆ ಎಲೆಗಳ ನಲುಗಿನಲ್ಲಿ
ಬದುಕಿನ ಕೊರಲಗಿನಲ್ಲಿ
ಹೊಂಗಿರಣದ ಗಲಗಿನಲ್ಲಿ
ಸುಖ–ದುಃಖವ ಬರೆದಿವೆ

ಒಳ ಬಾಳಿನ ತೆರೆಗಳಲ್ಲಿ
ಎದೆಯಾಳದ ಕರೆಗಳಲ್ಲಿ
ದುಡಿಮೆಯು ಹಿರಿ ಹೊರೆಗಳಲ್ಲಿ
ಸಂಕಲ್ಪದ ಹದವಿದೆ.

ಮನ ಮನಗಳ ಆರುಹಿನಲ್ಲಿ
ಮಾಂಗಲ್ಯದ ಕುರುಹಿನಲ್ಲಿ
ಕರುಣೆಯು ಕಂದೆರವಿನಲ್ಲಿ
ಜೀವನ ಸಂಮುಂದವಿದೆ.

# ಬಾಳು ಭೇರುಂಡ

ಇಟಗಿ ರಾಘವೇಂದ್ರ

ಬಾಳೊಂದು ಭೇರುಂಡ
ತಾಳವಿಲ್ಲದ ತಂಡ
ದಂತೆಯೆ ಮುಖಗಳೆರಡದಕೆ
ಒಂದು ಹೆಸರಿಗೆ ದಂಡ
ಇನ್ನೊಂದು ಪ್ರಚಂಡ
ದಲಿತ–ದರ್ಪದ ವಿಷಮ ಬೆರಿಕೆ

ಮುಗ್ಧ ಶಿಶುವಿನ ಹಾಸ
ದಗ್ಧ ವಿಕಟಾಟ್ಟಹಾಸ
ಒಂದೆ ನಾಭಿಯ ಎರಡು ನಾಳ
ಉಚ್ಚ ನೀಚೋತ್ಪನ್ನ
ಹಾವ ಭಾವಗಳ ಅನ್ನ
ಉಂಡು ಬೆಳದಿರೆ ಅಂತರಾಳ —

ಒಂದು ದೈನ್ಯದ ಅಕ್ಷಿ
ಇನ್ನೊಂದು ರಕ್ತಾಕ್ಷಿ
ಸಮದೃಷ್ಟಿ ರಹಿತವೀ ಸೃಷ್ಟಿ
ಒಂದಕ್ಕೊಂದರ ಭೀತಿ
ನಿರ್ಭಂಧವೀ, ರೀತಿ ಪ್ರಳಯ ಸ್ಫೋಟವು–ಮಾತ್ರಗಟ್ಟಿ!

ಒಂದು ಕ್ರೌರ್ಯದ ದಂಡ
ಝಳಪಿಸುತ ದೋರ್ದಂಡ
ಬಲವ ಮೆರೆಯುವ ಸ್ವೈರವೃತಿ

ಇನ್ನೊಂದು ತಲೆದಂಡ
ನೀಡುವುದೆ ವಿಧಿಯೆಂದ
ಕನಿಕರದ ಅವಲಂಬವೃತ್ತಿ

ಇಲ್ಲ ಎನ್ನುವ ಚಿಂತೆ
ಇರುವ ಭೀತಿಯ ಚಿಂತೆ
ಉಭಯ ಪಕ್ಷವು ಹೋಳಾಗಲು
ಒಂದನೊಂದನು ಅರಿತು
ಹೊಂದಿಕೊಳ್ಳದ ಹೊರತು
ಪ್ರಾಣಪಕ್ಷಿಯು ಉಸಿರಾಡದು

## ತೂರ್ಯಾವಸ್ಥೆ

" ಸತ್ಯಾನಂದ "

ಓಂಕಾರ ನಾದ, ಝೇಂಕಾರ ನಾದ,
ತನ್ಮಯತೆ ಮೂಡಬೇಕು!—
ಚಿತ್ಸೂರ್ಯ ಮುಳುಗೆ, ನಸುಮುಸುಕು ತೋರೆ,
ಏನೇನೋ ಕಾಣಬೇಕು—

ಬಯಲಾಟ ಬೇಡ, ಜಿಗಿದಾಟ ಬೇಡ,
ಗಿಡ ಗಿಡಕೆ ಜೀಕಬೇಕು |
ತಲೆ ಕೆಳಗೆ ಮಾಡಿ, ಕಾಲ್ ಮೇಲೆಮಾಡಿ,
ಭುವಿಗೊದೆದು ತೂಗಬೇಕು ॥ ೧ ॥

ಆ ನಸುಕಿನಾಚೆ ಈ ಮನಸಿನೀಚೆ,
ನಸುನಗುತ ಈಜಬೇಕು,
ಈ ಜಗದ ಕಡಲು, ಆ ಜಗದ ಒಡಲು,
ನಿರ್ಭಯದಿ ಧುಮುಕಬೇಕು ॥ ೨ ॥

ಎಲ್ಲೆಲ್ಲೊ ಇರುತ, ಎಲ್ಲರಲಿ ಬೆರೆತು,
ಏನೇನೋ ನುಡಿಯಬೇಕು.
ನೀ ತೋರ್ದ ಆಟ, ನಾ ಪಡೆದ ಮಾಟ,
ದರುಶನದಿ ಕೂಡಬೇಕು.— ॥ ೩ ॥

ಜಗವೆಲ್ಲ ಸುತ್ತಿ, ಮನವೆಲ್ಲ ಮರೆತು,
ಏನೇನೋ ನೋಡಬೇಕು.
ಎಲ್ಲವನು ಕೇಳಿ, ಎಲ್ಲರಿಗೂ ಹೇಳಿ,
ತಾ ಇಲ್ಲವಾಗಬೇಕು— ॥ ೪ ॥

ಬೆಳ್ದಿಂಗಳಲ್ಲಿ, ಧ್ರುವತಾರೆಯಂತೆ,
ಕಾಣದಲೆ ಹೊಳೆಯಬೇಕು।
ಕಾರಿರುಳು ಕರಗೆ ನಸುಗೆಂಪು ಮೂಡಿ,
ಅರೆಮರಹು ಮರೆಯಬೇಕು ॥ ೬ ॥

ಕಣ್ತೆರೆದು ಮುಚ್ಚಿ ಮುಚ್ಚಾಟವಾಡಿ,
ಕಣ್ತೆರೆದು ಮರೆಯಬೇಕು।
ಕಣ್ತುಂಬ ನೋಡಿ. ಮನದಣಿಯೆ ಹಾಡಿ,
ಮರೆಮಾಡಿ ನಾಚಬೇಕು – ॥ ೭ ॥

ಮುಂಬರುವ ಕಿರಣ, ಹಿಂದಾದ ಸ್ವಪ್ನ
ಒಂದಾಗಿ ಹರಿಯಬೇಕು – ।
ಸವಿಜೇನು ಸವಿದು, ಹಿರಿ ಜೇನ ನೆನೆದು,
ರಸದೂಟ ತಣಿಸಬೇಕು ॥ ೮ ॥

ಮೇಲ್ಕಿಳಗೆ ಅಲ್ಲಿ, ಎಲ್ಲೆಲ್ಲೆ ನೋಡೆ,
ಧ್ವನಿಯೊಂದೆ ಕೇಳಬೇಕು,
ಮಾತೆಲ್ಲ ಹೆಪ್ಪಿ ಮನವೆಲ್ಲ ಕರಗಿ,
ಸ್ಮೃತಿಯೆಲ್ಲ ಅಡಗಬೇಕು – ॥ ೯ ॥

ಏನೇನೋ ಕೇಳಿ, ಏನೇನೋ ನೋಡಿ,
ಏನೊಂದು ನುಡಿಯಬೇಕು।
ಏನೊಂದು ಹಾಡಿ. ಏನೊಂದು ಮಾಡಿ,
ಕುಣಿದಂತೆ ಕುಣಿಯಬೇಕು ॥ ೧೦ ॥

ನಸುಗೆಂಪು ಸಂಜೆ, ಮುಂಜಾವ ಜಾವ,
ಅಲ್ಲಲ್ಲಿ ಇರುಳು ಬೆಳಕು।
ಕಣ್ತುಂಬ ನೋಡಿ, ಮನದುಂಬಿ ಹಾಡಿ,
ಎಲ್ಲವನು ಮರೆಯಬೇಕು ॥ ೧೧ ॥

ಒಳದನಿಯ ಹಕ್ಕಿ, ಹೊರಗಿರುವ ಜಾವ,
ಈ ದ್ವಂದ್ವವಾಚೆ ನೋಡು।
ಈ ಪ್ರಜ್ಞೆ ಬೇಡ, ಆ ಪ್ರಜ್ಞೆ ಬೇಡ,
ಬೇಡೆಂಬ ಸೊಬಗು ಬೇಕು ॥ ೧೨ ॥

ನೀ ನೀನೆ ನೀನು, ಎಲ್ಲವನು ನೀನು,
"ನಾ" ನೆಂಬ ವಸ್ತುವಿಲ್ಲ |
ಮನತುಂಬಿ ಬಂತು, ಕಣ್ತುಂಬಿ ಬಂತು,
ಎಲ್ಲೆಡೆಯು ಚೆನ್ನು ಬಂತು— ||೧೩||

ಸಾಕಿನ್ನು ನೋಟ, ಬೇಕಿನ್ನು ಕೂಟ,
ಸಮರಸವು ಸವಿಯದಾಚೆ |
ತನು ತಣೆದು ಕುರಗಿ, ಮನದಣೆದು ನಾಚಿ,
ಭಾವೈಕ್ಯ ತಿಳಿಯಬೇಕು ||೧೪||

# ದಯಪಾಲಿಸೈ ಮತಿಯು

---

ದ. ಲ. ಕೆರೂರ

ಯಾವಾಗಲೂ ಚಿಂತೆ ಈ ದೇಹಕೊಂದರೂ
ಕಾವ ತಾನೊಬ್ಬನಿಹನವನ ನೆನೆಯೆಂಬರು

ಮಲಗಿರಲಿ ನಿಂತಿರಲಿ ಕುಳಿತಿರಲಿ ಸತಿಸುತರ
ನಲುಮೆಯಲಿ ಮುದ್ದಾಡಿ ಸುಖಿಸುತಿರಲಿ

ಒಲವಿನಲಿ ಕೈಕೊಂಡ ಕಾಯಕದೊಳಿರುತಿರಲಿ
ಒಲುಮೆ ನಿನಗಾತನಲಿ ಹೆಚ್ಚುತಿರಲಿ

ಎಂದೆನುವ ಮಾನವರನಿಂದಿಗೂ ಕಾಣುವೆನು
ಒಂದೆ ಮನದಲಿ ನಾನು ಭಜಿಸಲೇನು ?

ದಂದುಗವ ನಾ ಮರೆತು ಹಿಂದು – ಮುಂದಿನ್ನೇನು
ಎಂದೆಂಬ ಬಲು ಚಿಂತೆ ನಾ ತೊರೆಯಲೇನು ?

ಬಿಟ್ಟರೂ ಬಿಡದೆನ್ನನೊಟ್ಟಯಿಸಿದೀ ಮಾಯೆ
ಕಟ್ಟಿ ಬಲುಪರಿಯಿಂದ ಕುಟ್ಟುತಿಹುದು

ಒಟ್ಟಿನಲಿ ಸತಿಸುತರು, ಅಟ್ಟಹಾಸದ ಸಖರು
ಗುಟ್ಟಿನಲಿ ಮುತ್ತಿಹರು ಮೆಟ್ಟಿ ನಿಜದರಿವ

ಎಲ್ಲ ಹೊರಗಣ್ಣಾಗಿ ಬಲ್ಲ ತೆರನಾಡುತಿರೆ
ಭಾಳಲೋಚನನಲ್ಲಿ ನಿಲ್ಲದಿದೆ ಮನವು

ಎಲ್ಲರೊಲು ನಾನಾಗದೆಲ್ಲರಿಗೆ ಗುರಿಯಾಗಿ
ನಿಲ್ಲುವೊಡೆ ನೀನೆ ದಯಪಾಲಿಸೈ ಮತಿಯು

# ಅನಂತ ತಾಯಿಗೆ

ಜಿ. ಎಚ್. ಹನ್ನೆರಡುಮಠ

ನೋವಿನ ದಾಹದ ಕಣ್ಣೀರ್‌ಕಾಳದ
ಅಳಲಿಕೆ ಬಳಲಿಕೆ ಯಾತನೆ ಮೇಳದ
ಪ್ರಾರ್ಥನೆ ಸಲ್ಲಲಿ ಸಲ್ಲಲಿ ತಾಯೆ
ನಿನ್ನಯ ಪದತಲದಿ

ದಳದಳ ಅರಳಿದೆ ಗೋಳಿನ ಮಲ್ಲಿಗೆ
ಆತ್ಮದ ಲೀಲಾವೃಂದದ ತೋಟದಿ
ಬೀಸಿದೆ ಈಸಿದೆ ಬಿಸಿಯುಸಿರಿನ ಥಗೆ-
ಮಲ್ಲಿಗೆ ಹೂವಿನಲಿ

ಕಾಹಿನ ಸೀಮೆಯ ಕುಲಪತಿ ತಾಯೇ
ರಕ್ಷಣ ರಕ್ಷೆಯ ಹರಕೆಯ ಮಾಯೇ
ಲೀಲೆಗೆ ಮಾಡಿದೆ ಲೀಲೆಗೆ ನೋಡಿದೆ–
ಲೀಲೆಗೆ ನಕ್ಕಿರುವೆ

ಏನಿದು ಲೀಲೆಯು ಕಣ್ಣೀರ್ಕಾಳೆಯು
ಕರುಳಿನ ಇರಿತದ ಕೊರೆತದ ಥಾಳಿಯು
ಥಂ ಥಂ ಥಣರುಗ ಎದೆಗುಣಿಮಾಲೆಯು
ನೆತ್ತರ ನಕ್ಕಿಹುದು

ಕಲ್ಪನೆ ಕೆಣಕಿದೆ ಮಾನಸ ಮಿಡಿದಿದೆ
ನಿನ್ನಯ ನೂಪುರ ತಾಳಕೆ ಕುಣಿದಿದೆ
ಗೆಜ್ಜೆಯ ಹೆಜ್ಜೆಗೆ ಝುಲಝುಲ ನುಡಿದಿದೆ–
ಮಸಣದ ರಾಗವನು

ಓಹೋ ತಾಯೇ ಆತ್ಮದ ಮಾಯೆ
ಬಾರಾ ಬಾರಾ ಮುದ್ದಿನ ರೂಹೆ
ಹಸಿದಿಹ ಹೊಟ್ಟೆಗೆ ಮೊಲೆಯನು ಊಡಾ
ನಲ್ಮೊಲೆ ಬೆಲ್ಲವನು

ನಿನ್ನಯ ಹೊಟ್ಟೆಯ ಕಂದನ ರೋದನ
ಕೇಳುತ ಕರುಣಿಸಿ ಚುಂಬನ ನೀಡಾ
ಅಳಲಿನ ನೋವಿನ ಯಾತನೆ ಯಾತವ–
ಹೂಡಾ ಬೆಡಗಿನಲಿ

ನಂಬಿದೆ ನಿನ್ನಯ ಮಂದರ ಪಾದವ
ಚಂದಿರಲೋಕದ ಅಮೃತ ಪಾದವ
ಕೊಲೆಯಾಗಲಿ ಮೇಣ್ ನೆಲೆಯಾಗಲಿ ತಾನ್
ನೀನಿಹೆ ರಸಬಾಳಿ

ಮುಗ್ಧಮದೊತ್ತಮ ಕೈಮರಿ ಕುರಿಮರಿ
ಮಣ್ಣಿಗೆ ಬೆಣ್ಣೆಯ ಬೆರಸಿದ ಈ ಪರಿ
ಗಲ್ಲಕೆ ಹಾಲ್ಗೆನೆ ಸಕ್ಕರೆ ಬೆರಸಿದ–
ಹಸುಳೆಯು ನಾನಿಹೆನು

ಸೀರೆಯ ಚುಂಗನು ಚಕ್ಕನೆ ಎಳೆಯುತ
ನಿರಿಗೆಯ ಪರಿಯನು ಛರ್ರನೆ ಬಿಡಿಸುತ
ಬಾಳೆಯ ದಿಂಡಿನ ತೊಡೆಯನು ಏರುವೆ–
ನಾನಿದೊ ಎಲೆ ತಾಯೆ

ದೂಡದೆ ಕಾಡದೆ ಮುನಿಸನು ನೀಡದೆ
ಬರಸೆಳೆದಪ್ಪಾ ಅಪ್ಪಾ ಅಪ್ಪಾ
ಸುಂದರ ಚಂದಿರ ಎದೆಮೊಲೆಗಪ್ಪಾ–
ಪಚ್ಚನೆ ಮುದ್ದಿಟ್ಟು

ಗಲ್ಲದ ಕೆಸಕೆಸೆ ಜೇನನು ಕಡಿಯಾ
ಮುಗ್ಧನ ಬಾಲನ ರೋದನ ಕೇಳಾ
ಸಾಕಾ ತಾಯಿಯೆ ಸಿಟ್ಟನು ನೂಕಾ
ಬಂದಿಹೆ ಒಲವಿಟ್ಟು

# ನನ್ನ ನಿನ್ನ ನಡುವೆ

ಗಿರಡ್ಡಿ ಗೋವಿಂದರಾಜ

ನಾನೊಂದು ಸುಳ್ಳು,
ನೀನೊಂದು ದೊಡ್ಡ ಸುಳ್ಳು.
ನನ್ನ ಹಾಗೂ ನಿನ್ನ
ನಡುವೆ
ಸುಳ್ಳು ಎನ್ನುವದೊಂದೇ ಸತ್ಯ ;
ನೂರು ವಿವರಗಳಲ್ಲಿ ಉಸಿರಾಡುವ
ಜೀವಂತ ಅಸ್ತಿತ್ವ ;
ಅಷ್ಟಪೈಲಿನ ಲೋಲಕದಂತೆ
ಕಣ್ಣು ತೆರೆದಾಗ ಮುಚ್ಚಿದಾಗ
ಮರುಳುಗೊಳಿಸುವ ವರ್ಣವೈವಿಧ್ಯ.
ಸತ್ಯ
ತತ್ವಜ್ಞಾನಿಗಳು
ಹುಡುಕಿ ಹುಡುಕಿ ಸಾಯುವವಕ್ಕೇ
ತಕ್ಕದ್ದು.
ನನ್ನ ಹಾಗೂ ನಿನ್ನ
ನಡುವೆ
ಸಾವಿರ ನಿರ್ಜೀವ ಸತ್ಯಗಳಿಗಿಂತ
ಗಟ್ಟಿಮುಟ್ಟಾದ ಒಂದು ಸುಳ್ಳು
ಬೇಕಾದದ್ದು.

## ಅಭ್ಯರ್ಥನೆ

" ಶಿವಶ್ರೀ "

ಮಾಯೆ ತಾಯೆ ಸರಿಸು ಛಾಯೆ
ನೀಡು ನಿಜದ ದರ್ಶನ !
ಏನದ್ಭುತ ? ಏನು ಭಯದ ?
ರಮ್ಯ ನಿನ್ನ ಕಲ್ಪನಾ !
ಒಂದೆಡೆಯಲಿ ಹಳ್ಳ ಕೊಳ್ಳ
ಮತ್ತೊಂದೆಡೆ ಗುಡಿಗೋಪುರ
ಮಗುದೊಂದೆಡೆ ಚಿತ್ರ ಮೌನ !
ಏನೆಂದರು ಬಿಡದು ನನ್ನ ;
ಶೃಂಗಾರವೋ, ವೈರಾಗ್ಯವೋ
ಏನಿದು ಈ ನಗ್ನತೆ ?
ಹಂಡ ಬಂಡವೆಲ್ಲ ಕಂಡು
ನನ್ನ ಮನವೆ ಚಲಿಸಿತೆ ?
ರಮ್ಯವೇನೆ ನಿನ್ನ ಜಾಲ,
ಏಕೆ ಇಂತು ಬೀಸುವೆ ?
ನುಸುಳಿ ಬರಲು ಅದರಿಂದ
ನಾನಾಗುವ ಸಾಸುವೆ
ಒಮ್ಮೆ ಮೃಗಿ, ಒಮ್ಮೆ ಅಗಿ
ಭದ್ರಕಾಳಿಯಾಗಿ
ಹೃದಯದಲ್ಲಿಹೊತ್ತಿಸುವೆ
ವಿರಹವಾಗಿ ಧಗಧಗಿ
ಏನಾದರು ಆಗ ಬಲ್ಲೆ
ಓ ! ಮಹಾ ಮಾತೆ

ಕರುಣೆಯಿರಲಿ ಕಂದನಲ್ಲಿ
ಓ ! ಶಿವಸಂಜಾತೆ :
ಸಿಂಗಾರವೋ, ಬಂಗಾರವೋ
ಕಣ್ಣ ಮುಂದೆ ಹರಡುವೆ
ಮನವೆಂಬುದ ಹಿಡಿದೆಳೆದು
ಮೃಗದ ಪಾಡು ಮಾಡುವೆ
ನನ್ನ ಕೋಪ, ನನ್ನ ತಾಪ
ಎಲ್ಲಕೆಲ್ಲ ನಿನ್ನದು
ನೀನಾಡಿಸೆ ನಾನಾಡುವೆ
ಚುಚ್ಚು ನುಡಿಯು ಸಲ್ಲದು ;
ಒಮ್ಮೆ ಬೀಳು, ಒಮ್ಮೆ ಏಳು
ಈ ಜೀವಕೆ ಬಂದಿದೆ
ಚಿಂತೆ ಮಾತ್ರ ಏಕೋ ಏನೋ ?
ಅದುವೆ ತಿಳಿಯದಾಗಿದೆ.
ಅಂತರಂಗ ಬಹಿರಂಗವ
ಶೋಧ ಮಾಡಿ ನೋಡು
ಎಲ್ಲೆಡೆಗು ತುಂಬಿಹುದು
ಬರಿ ನಿನ್ನಯ ಹಾಡು
ನಿಜ ರೂಪವ ತೋರೆನಗೆಲೆ
ತಾಯೇ ನೀ ನೋಡೆ !
ಏನೇನೋ ಮುಂದೊಡ್ಡಿ
ಭ್ರಮೆಯಲದ್ದ ಬೇಡ.
ಮಾಯೆ ತಾಯೆ ಸರಿಸು ಛಾಯೆ
ನೀಡು ನಿಜದ ದರ್ಶನ
ಏನದ್ಭುತ ? ಏನು ಭಯದ ?
ರಮ್ಯ ನಿನ್ನ ಕಲ್ಪನಾ !

ಜಗದ್ಗುರು ಮೂರುಸಾವಿರ ಮಠದ
ಆವರಣದಲ್ಲಿರುವ
ಸಾಂಸ್ಕೃತಿಕ ಕಟ್ಟಡಗಳು



ಏಕೋತ್ತರ ಶತಸ್ಥಲದ ನೆನಹಿಗಾಗಿ ನಿರ್ಮಾಣವಾದ ಆರಂತಸ್ತಿನ
ಮೂರುಸಾವಿರಮಠದ ಮಹಾದ್ವಾರ

ಮೂರುಸಾವಿರಮಠದ ಒಳಗಿರುವ ಶಿವಾನುಭವ ಮಂಟಪ





ಕರ್ತೃ ಗದ್ದುಗೆಯ ಹೊರನೋಟ




ಪರಂಜ್ಯೋತಿ ಪಾವರ ಪ್ರಿಂಟಿಂಗ ಪ್ರೆಸ್



ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ



ಅಕ್ಕಿ ಉಳವಪ್ಪ ವಿದ್ಯಾರ್ಥಿನಿಲಯ



ಜಗದ್ಗುರು ಮೂರುಸಾವಿರ ಮಠದ ರೇಖಾಚಿತ್ರ



ನೂರುಸಾವಿರಮಠದ
ಹೆಣ್ಣು ಮಕ್ಕಳ ಮಾಧ್ಯಮಿಕ ಶಾಲೆ



ಜಗದ್ಗುರು ಗಂಗಾಧರ ಹೈಯರ್ ಸೆಕೆಂಡರಿ
ಸ್ಕೂಲ



ಮೂರುಸಾವಿರಮಠದ ಕೇಂದ್ರ ಕಚೇರಿ

ಮೂರುಸಾವಿರಮಠದ ಜೆ. ಜಿ. ಪ್ರಾಥಮಿಕ ಶಾಲೆ



ಜಗದ್ಗುರು ಗುರುಸಿದ್ದೇಶ್ವರ ಸಾರ್ವಜನಿಕ ವಿದ್ಯಾರ್ಥಿನಿಲಯದ ಮುಂಭಾಗ



ಜಗದ್ಗುರು ಗುರುಸಿದ್ದೇಶ್ವರ ಸಾರ್ವಜನಿಕ ವಿದ್ಯಾರ್ಥಿನಿಲಯದ ಒಳಭಾಗ.



ಅಸುಂಡಿ ಚನ್ನಮಲ್ಲಪ್ಪ ಕಲ್ಯಾಣಮಂಟಪ



ಮೂರುಸಾವಿರಮಠದ
ಶ್ರೀ ಜಗದ್ಗುರುಗಳ ಸಿಂಹಾಸನ

## ಮೂರುಸಾವಿರಮಠದ ಗಜದ್ವಯಗಳು



ಮೂರುಸಾವಿರಮಠದ "ಗಣೇಶ"



ಮೂರುಸಾವಿರಮಠದ " ಶಂಕರ "

# ಷಟ್‌ಸ್ಥಲ ಸಾರ್ಥಕತೆ-ಸಮರ್ಪಕತೆ !

ಸೂರ್ಯಸಿಂಹಾಸನಧೀಶ್ವರ ಶ್ರೀ ಜ. ಚ. ನಿ.

ಮಾನವನ ಬಾಳು ಬದುಕು ಸಾರ್ಥಕವಾಗಬೇಕು ಸಮರ್ಪಕವಾಗಬೇಕು ಎಂಬುದೆ ಎಲ್ಲರ ನಿರೀಕ್ಷಣೆ. ಎಲ್ಲರಲ್ಲಿಯೂ ಇರುತ್ತದೆ ಅದಕ್ಕೆ ಬೇಕಾದ ಅನ್ವೇಷಣೆ ಆದರೆ ಹೆಚ್ಚು ಜನರ ಅನ್ವೇಷಣೆ ನಿರರ್ಥಕ, ನಿಷ್ಪ್ರಯೋಜಕ. ಕಾರಣ ಏಕಮುಖ ಅನ್ವೇಷಣೆ. ಬಾಳಿನ ಅಗತ್ಯಗಳ ಪ್ರಾಪ್ತಿಗೆ ಪೂರೈಕೆಗೆ ಜಾಗತಿಕ ಸಂಪನ್ಮೂಲಗಳನ್ನೆ ಹುಡುಕುವವರು ಹೆಚ್ಚು. ಇವು ಅಕ್ಷಯವಲ್ಲ; ಅಸ್ಥಿರಗಳು, ಅಳಿಸೊಗವನ್ನು ಕೊಡುವವುಗಳು, ಜೀವನ ನಿರ್ವಹಣ ಕಾರಣಗಳು.

ಬಾಳಿನ ಆಂತರಿಕ ಅನ್ವೇಷಣೆಯೂ ಅಗತ್ಯ. ಶುದ್ಧೀಕರಣ – ಅಭಿವೃದ್ಧಿಗಳೂ ಅಗತ್ಯ. ಅವು ಶಾಶ್ವತ ಸಂಪನ್ಮೂಲಗಳು, ಸ್ಥಿರ ಸುಖಸಾಧನಗಳು, ಉಜ್ಜೀವನ ಉಪಕಾರಕಗಳು, ಸಚ್ಚಿನ್ಮಯ ಚೇತನ ನಿಕೇತನಗಳು.

ಬಾಹ್ಯಾಭ್ಯಂತರ ಉಭಯ ಅನ್ವೇಷಣಕ್ಕೆ ಆವಿಷ್ಕಾರಕ್ಕೆ ಸಾಧನ ಷಟ್‌ಸ್ಥಲ. ಅದರಲ್ಲಿ ಜೀವನದ ಸಮರ್ಪಕ ಮೀಮಾಂಸೆಯಿದೆ. ಸಮಂಜಸ ವಿಶ್ಲೇಷಣೆಯಿದೆ. ಸಾರ್ಥಕ ಸಮನ್ವಯವಿದೆ. ಸಕ್ರಿಯ ಜೀವನ ಚಿತ್ರಣವಿದೆ. ಸಮ್ಯಕ್ ಪ್ರಜ್ಞೆಯ ಪ್ರತಿಭೆಯಿದೆ. ಸತ್ಯ ಶಿವ ಸೌಂದರ್ಯ ದರ್ಶನವಿದೆ. ಅವಧಾನ ಅನುಭವ ರೂಪ ಚಿರಂತನ ಮೌಲ್ಯಗಳ ನಿರೂಪಣೆಯಿದೆ. ಆತ್ಯಂತಿಕ ಆನಂದ ರಸಾಭಿವ್ಯಕ್ತಿಯಿದೆ. ಪರಿಶುದ್ಧ ಸ್ಪರ್ಶಾಭಿರುಚಿಯಿದೆ. ಸಮಭಾವ – ಸಮರಸಗಳ ಆದರ್ಶ ಸಂದೇಶವಿದೆ. ಪ್ರಗತಿ ಜೀವನದಲ್ಲಿ ಮುನ್ನಡೆಯಲು ಹೆದ್ದಾರಿಯಿದೆ. ಸಾಂಸ್ಕೃತಿಕ ಜೀವನದಲ್ಲಿ ಮೇಲೇರಲು ಹಂತಗಳಿವೆ. ಸಾರ್ಥಕ ಜೀವನವನ್ನು ಜರುಗಿಸಲು ಸತ್ವಪೂರ್ಣವಾದ ಕ್ಷೇತ್ರವಿದೆ. ನಿರ್ದಿಷ್ಟವೂ ನಿರ್ದುಷ್ಟವೂ ಆದ ಶಕ್ತಿಸಂಪನ್ನ ಪಾವನ ಪ್ರಣಾಳಿಕೆಯಿದೆ. ಜೀವನ ನಿರ್ವಹಣದ ಜತೆಗೆ ಜೀವ ವಿಕಾಸವಾಗುವ ಸಕ್ರಿಯ ಸಾಧನ ಸಂಪತ್ತಿಯಿದೆ. ಸ್ವಾನುಭವ ನಿಷ್ಪತ್ತಿಯಿದೆ.

ಷಟ್‌ಸ್ಥಲ ಸಿದ್ಧಾಂತದ ಸಕ್ರಮತೆ ಸಾರ್ಥಕತೆಗಳನ್ನು ಸಮೀಕ್ಷಿಸುವುದೆ ಈ ಬರೆಹದ ಬಗೆ.

ಪ್ರಕೃತಿಜನ್ಯ ಮಾನವ ಬೆಳೆಯುತ್ತ ಪ್ರಕೃತಿನಿಷ್ಠನಾಗಿಯೇ ಉಳಿಯುವುದಿಲ್ಲ. ವಿಕೃತಿಗೀಡಾಗುತ್ತಾನೆ, ಪೂರ್ವ ವಾಸನಾಬಲದಿಂದ ರಕ್ತನಾಗುತ್ತಾನೆ. ರಕ್ತತೆ ವಿಕೃತಿಗೆ ಮೂಲ, ರಕ್ತತೆಯನ್ನು ನೀಗಲು ವಿರಕ್ತತೆಯ ಕೈಹಿಡಿಯಲು ಬೋಧಿಸುವುದುಂಟು, ಸಾಧಿಸುವುದುಂಟು, ಇವೆರಡೂ ಏಕದೇಶೀಯಗಳು. ಎಂದಿಗೂ ಅಸಮರ್ಪಕಗಳು. ಷಟ್‌ಸ್ಥಲ ದರ್ಶನ ಹೇಳುತ್ತದೆ ಇವೆರಡನ್ನೂ ಬೇರೊಂದು ಅರ್ಥದಲ್ಲಿ ಸಮರ್ಥಿಸುವ–ಸಂಯೋಜಿಸುವ ಭಕ್ತತ್ವವನ್ನು ಕೈಹಿಡಿದು ಮುನ್ನಡೆಯೆಂದು. ಭಕ್ತಿಯಲ್ಲಿ ರಕ್ತಿಯಿದೆ; ಆದರೆ ಅದು ವಿಕೃತಿ ಹೇತುವಲ್ಲ, ಭಕ್ತಿಯಲ್ಲಿ ವಿರಕ್ತಿಯಿದೆ, ಅದು ಶುಷ್ಕವಲ್ಲ; ಪೂರ್ಣ ತಿರಸ್ಕರಿಸಿ ತ್ಯಜಿಸುವ ಅರ್ಥರಹಿತ ತ್ಯಾಗವಲ್ಲ. ಸುರಕ್ತಿ ಸಹಜ ವಿರಕ್ತಿ (ತ್ಯಾಗ) ಉಳ್ಳುದೆ ಭಕ್ತಿ. ಅದುಳ್ಳವನೆ ಭಕ್ತ.

ರಕ್ತಿಯ ಮೂಲ ಅಪವಿತ್ರ ರಾಗ, ಭಕ್ತಿಯ ಮೂಲ ಪವಿತ್ರ ರಾಗ, ಶಿವದ ಒಲವು ಭಕ್ತಿ; ಶಿವದ (ಮಂಗಳದ) ಮಾಳ್ಕೆ ಶಿವಾಚಾರ, ಈ ಭಕ್ತಿ ಈ ಆಚಾರಗಳಿಂದ ಚಿತ್ತಶುದ್ಧಿ, ಚಿತ್ತಶುದ್ಧಿಯಿಂದ ಕ್ರಿಯಾಶಕ್ತಿ ನಿವೃತ್ತಿ ಕಲೆಗಳು ವೃದ್ಧಿಗೊಳ್ಳುತ್ತವೆ. ಶಿವಾಚಾರ ಪ್ರೇಮವೆ ಶ್ರದ್ಧೆಯೆನಿಸುತ್ತದೆ, ಶ್ರದ್ಧೆಗೆ ಚೇತನ ಆಚಾರ, ಆಚಾರೋಪಾಸನೆಗೆ ಸೌರಭಾರ್ಪಣ ಸಾಧನ, ಸೌರಭಶುದ್ಧಿಯೆ ಸದ್ವಾಸನೆಗೆ ಆಧಾರ.

ಸೌರಭ ಇಬ್ಬಗೆ, ಬಾಹ್ಯಸೌರಭ; ಆಂತರಿಕ ಸೌರಭ. ಬಾಹ್ಯ ಸೌರಭ ಪತ್ರ ಪುಷ್ಪ ಧೂಪ ದೀಪ ಪಡಿಪದಾರ್ಥನಿಷ್ಠ. ಆಂತರಿಕ ಸೌರಭ ಸದಾಚಾರ ಸದ್ವಿಚಾರ ಸುಭಾಷಿತ ನಿಷ್ಠ. ಘ್ರಾಣಗತ ಚೈತನ್ಯಕ್ಕೆ ಉಭಯನಿಷ್ಠ ಸೌರಭಾರ್ಪಣ ಅಗತ್ಯ.

ವಾಸನೆ ಶುಭ ಅಶುಭ ರೂಪದಲ್ಲಿ ಹರಿವ ಪ್ರವಾಹ, ಅಶುಭ ವಾಸನೆಗಳನ್ನು ತ್ಯಜಿಸಿ ಶುಭ ವಾಸನೆಗಳನ್ನು ಮೈಗೂಡಿಸಿಕೊಳ್ಳುವುದೇ ಭಕ್ತನ ಮುಖ್ಯ ಕಾಯಕ. ಈ ನಿಟ್ಟಿನಲ್ಲಿ ಆತನ ಆಚಾರಲಿಂಗೋಪಾಸನೆ ಶ್ರದ್ಧೆಯಿಂದ ಸಾಗುತ್ತದೆ. ಆಚಾರವೆ ಆತನ ಶಿವ, ಆತನ ಧರ್ಮ; ಆತನ ಜೀವನ. ಆಚಾರಕ್ಕೆಆಧಾರ ಸುವಾಸನೆ–ಶುಭವಾಸನೆ. ಸುವಾಸನೆಯಿಂದ ಬಹಿರಂಗ ಪುಷ್ಟಿ; ಶುಭವಾಸನೆಯಿಂದ ಅಂತರಂಗ ಪುಷ್ಟಿ. ಭಕ್ತನು ತನ್ನ ಈ ಉಭಯ ವಾಸನೆಗಳಿಂದ ಪ್ರೇಮವನ್ನು ಶ್ರದ್ಧೆಯನ್ನಾಗಿಸಿ ಕೊಳ್ಳುತ್ತಾನೆ. ಶ್ವಾಸ–ನಿಃಶ್ವಾಸಗಳಲ್ಲಿ ಸದಾಚಾರವನ್ನು ಸಂಮಿಳಿತಗೊಳಿಸುತ್ತಾನೆ. ಆಧಾರದಲ್ಲಿ ನಿವೃತ್ತಿಕಳೆಯನ್ನು ಬೆಳಗಿಸುತ್ತಾನೆ.

ಮಾನವನಿಗೆ ಗಂಟು ಬಿದ್ದ ವಾಸನೆಗಳು ಅನಂತ. ಅವನ್ನೆಲ್ಲ ಒಟ್ಟುಳಿ ಮಾಡಿ ಶಾಸ್ತ್ರವಾಸನೆ, ಸಂಸಾರ (ಲೋಕ) ವಾಸನೆ, ದೇಹವಾಸನೆ–ಎಂದು ಮೂರು ತೆರನಾಗಿ ದಾರ್ಶನಿಕರು ವಿಂಗಡಿಸಿದ್ದಾರೆ. ಶಾಸ್ತ್ರವಾಸನೆ ಶಸ್ತ್ರವಾಸನೆಯಾಗಿ ಸಾರ್ಥಕ ಬಾಳಿಗೆ ನೆರವಾಗದು. ಶಾಸ್ತ್ರವೇತ್ತನು ಹೆಚ್ಚಾಗಿ ಅವಿನಯ ಅಹಂಕಾರಗಳಿಗೆ ಒಳಗಾಗುತ್ತಾನೆ. ಶಾಸ್ತ್ರ ಶಾಸನಕ್ಕೆ ತಲೆಬಾಗುತ್ತಾನೆ ಸ್ವಪ್ರಜ್ಞೆ ಸ್ವಾನುಭವಗಳಿಗೆ ವಂಚಿತನಾಗುತ್ತಾನೆ. ಯಾಂತ್ರಿಕಾಚಾರ ನಿರತನಾಗುತ್ತಾನೆ. ಕಾರಣ ಸದ್ಭಕ್ತನು ಶಾಸ್ತ್ರವಾಸನೆಗೆ ಸಿಕ್ಕು ಬೀಳನು. ಸಿಕ್ಕುಬಿದ್ದು ಹೊಲಬುದಪ್ಪನು. ಪೂರ್ವಾರ್ಜಿತ ಪುಣ್ಯವಶದಿಂದ ಪ್ರಾಪ್ನ

ಪ್ರಭೆಯಿಂದ ಪ್ರಕಾಶಿಸುವ ಪರಮ ಕರುಣಾಳು ಶ್ರೀ ಗುರುದೇವನ ಕೃಪೆಗೆ ಪಾತ್ರನಾಗುತ್ತಾನೆ. ಆತನ ಬೋಧೆಯಿಂದ ಸದಾಚಾರ ಸದ್ವಾಸನೆಯುಳ್ಳವನಾಗುತ್ತಾನೆ. ಶ್ರದ್ಧಾಳುವಾಗುತ್ತಾನೆ. ಭವಬಂಧನದಿಂದ ಬಿಡುಗಡೆಯನ್ನು ಪಡೆದು ಭವಹರನ ಭಜನಾಸಕ್ತನಾಗಿ ಭಕ್ತನೆನಿಸುತ್ತಾನೆ.

ಎರಡನೆಯದು ಸಂಸಾರ (ಲೋಕ) ವಾಸನೆ. ಇದು ಎಲ್ಲರನ್ನೂ ಕಾಡುತ್ತದೆ. ಲೌಕಿಕ ವಾಸನೆಗಳ ಸೆಳತಕ್ಕೆ ಸಿಕ್ಕವನು ಮೇಲೇಳಲು ಸಾಧ್ಯವಾಗದು. ಲೋಕದಲ್ಲಿದ್ದು ಇಲ್ಲದಂತಿರಬೇಕು. ಲೋಕದ ಆಗು–ಹೋಗುಗಳಿಗೆ, ಲೋಕದ ಹೊಗಳಿಕೆ–ತೆಗಳಿಕೆಗಳಿಗೆ ಮನ–ಕಿವಿಗಳನ್ನು ಕೊಡಬಾರದು. ಅಂತೆಯೇ ಸಂಸಾರ ಕೆಸರಲ್ಲಿ ಬಿದ್ದು ಒದ್ದಾಡಬಾರದು. ಸಂಸಾರದಲ್ಲಿದ್ದು ಅದಕ್ಕೆ ಸೋಲಬಾರದು; ಅದರಲ್ಲಿ ಮುಳುಗಬಾರದು. ಗೆಲುವಿನಿಂದ ಈಜಿ ಸಂಸಾರ ಸಾಗರವನ್ನು ದಾಟಬೇಕು. ಈ ಸಂಸಾರದ ಈ ಲೋಕದ ವಾಸನೆಯನ್ನು ಜಯಿಸದೆ ಗುರುಕೃಪೆ ಲಭಿಸದು; ಲಭಿಸಿದರೂ ಸಾರ್ಥಕವಾಗದು. ಸಂಸಾರ ಹೇಯವಾಗಿಯೆ ಗುರುಕಾರುಣ್ಯಕ್ಕೆ ಭಕ್ತನು ಪಾತ್ರನಾಗುತ್ತಾನೆ. ಲೌಕಿಕವನ್ನು ಲೀಲಾಜಾಲವಾಗಿ ಪರಮಾರ್ಥವನ್ನಾಗಿಸಿಕೊಂಡಿರುತ್ತಾನೆ.

ಇವೆರಡಕ್ಕಿಂತ ಹೆಚ್ಚು ಹತ್ತಿರದ್ದು ಹೆಚ್ಚು ಹೊಲಬುಗೆಡಿಸುವಂತಹದು ದೈಹಿಕ ವಾಸನೆ. ಶಾಸ್ತ್ರ, ಲೋಕ ಹೊರಗಿನವು. ದೇಹ ತನ್ನದು, ಸ್ವಾಯತವಾದುದು. ದೈಹಿಕ ವಾಸನೆಯಿಂದ ದುಃಖ ತಪ್ಪದು. ಪವಿತ್ರಪ್ರೇಮ ಅಪವಿತ್ರವಾಗದಿರದು. ದುರ್ವಾಸನೆಗಳು ದೂರಾಗವು. ಇದರಿಂದಾಗಿ ಮೊದಲು ದೈಹಿಕವಾಸನೆಯನ್ನು ದೂರಮಾಡಬೇಕು. ಮಾಡುವ ಉಪಾಯವೇನು ? ಷಟ್‌ಸ್ಥಲದರ್ಶನದಲ್ಲಿ ಇದಕ್ಕೆ ಸಮರ್ಪಕವಾದ ಉಪಾಯ ನಿರ್ದಿಷ್ಟವಾಗಿದೆ.

ದೈಹಿಕವಾಸನೆಗೆ ದೈಹಿಕಭಾವ ಮೂಲ, ಶಿವಾದ್ವೈತ ಶ್ರೀ ಗುರುದೇವನು ಮುಪ್ಪೊದಲು ತನ್ನ ಕೃಪಾದೃಷ್ಟಿಯಿಂದ ಕ್ರಿಯಾಚಾರ ಬೋಧೆಯಿಂದ ಕಾಯದ ಕಾರ್ಮಿಕ ಮಲವನ್ನು ಕಳೆದು ದೇಹಭಾವವನ್ನು ದೇಹವಾಸನೆಯನ್ನು ಬೇರು ಸಹಿತ ಬಗೆದುಹಾಕುತ್ತಾನೆ. ಅಂಗತ್ವವನ್ನು ಬರಿಸುತ್ತಾನೆ. ಗಂಧ ಘ್ರಾಣಕ್ಕೆಂದು ಭಾವಿಸದೆ, ಘ್ರಾಣಾವಚ್ಛಿನ್ನ ಆಚಾರಲಿಂಗಕ್ಕೆಂದು ಭಾವಿಸಲು ಹಚ್ಚುತ್ತಾನೆ. ಆಚಾರಕ್ಕೆ ಶಿವತ್ವವನ್ನು ತುಂಬಿ ಶಿವಾಚಾರವನ್ನಾಗಿಸುತ್ತಾನೆ. ಆಗ ಗಂಧ ಪದಾರ್ಥ ಪ್ರಸಾದವಾಗುತ್ತದೆ. ಆ ಪ್ರಸಾದಾರ್ಪಣ ಪಾವನಾಚಾರವಾಗುತ್ತದೆ. ಆಗ ಸಹಜವಾಗಿ ದೈವೀವಾಸನೆ ತನ್ನಿಂದ ತಾನೇ ಬೆಳೆದು–ಉಳಿದು ಬರುತ್ತದೆ. ದೇಹವಾಸನೆ ಸಹಜವಾಗಿ ನಿರಸನವಾಗುತ್ತದೆ.

ವಾಸನೆಯನ್ನು ಕ್ಷಯ ಮಾಡಲು ಸಾಧ್ಯವಿಲ್ಲ. ಹೂವಿನಿಂದ ಕಂಪನ್ನು ಬೇರ್ಪಡಿಸಲು ಸಾಧ್ಯವೆ ? ವಾಸನೆಯನ್ನು ಶುಭವಾಗಿಸುವುದೇ ಸಹಜಮಾರ್ಗ ; ಸಾರ್ಥಕ ಮಾರ್ಗ. ಇದುವೇ ಷಟ್‌ಸ್ಥಲದ ಸಮರ್ಪಕಮಾರ್ಗ.

ವಿಷಯ ವಿರಕ್ತಿ ಸಂಸಾರ ತ್ಯಜಿಸುವಿಕೆ ಸತ್ಕರ್ಮ ತ್ಯಾಗ ಇವು ನಿಜಕ್ಕೂ ಸಹಜವಲ್ಲ. ವಿಷಯ ವಿಸರ್ಜನೆ ಯಾರಿಂದಲೂ ವಾಸ್ತವವಾಗಿ ಆಗದು. ವಿಷಯ

ವಾಸನೆಯಲ್ಲಿ ಮಾರ್ಪಾಟಾಗಬೇಕು. ವಿಷಯಗಳ ಪೂರ್ವಾಶ್ರಯ ಪರಿಹಾರವಾಗಿ ಪದಾರ್ಥ ಪ್ರಸಾದವಾಗಬೇಕು. 'ಸತಿ ಪತಿಯೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂಬುದು ಭಕ್ತಿ ಪಂಥದ ವಾದ. ಸಂಸಾರದಲ್ಲಿರುವ ಮಮಕಾರ ಮೋಹಗಳು ಶಿವನಲ್ಲಿ ಶಿವಪೂಜೆಯಲ್ಲಿ ನೆರೆದು ನೆಲಸಬೇಕು. ಅಂತೆಯೇ ಸಕಾಮ ಕರ್ಮ. ನಿಷ್ಕಾಮ ಕರ್ಮಗಳನ್ನು ಮೀರಿ ಸಹಜ ಕರ್ಮ (ಮಾಟ)ದಲ್ಲಿ ಭಕ್ತನು ನಿರತನಾಗಬೇಕು.

ಚಿತ್ತಶುದ್ಧಿ, ಚಿತ್ತಸಿದ್ಧಿ ಭಕ್ತಸ್ಥಲದ ಮುಖ್ಯ ಧ್ಯೇಯ. ಘ್ರಾಣ ಗ್ರಹಿಸಿದ ಗಂಧ ಆಚಾರಲಿಂಗಾರ್ಪಣವಾಗುವಂತೆ ಚಿತ್ತಗತವಾಸನೆ ಶಿವಾಚಾರದಲ್ಲಿ ನೆರೆದು ನೆಲೆಗೊಳ್ಳಬೇಕು. ಲಿಂಗಾಚಾರದಲ್ಲಿ ನೆಲೆಗೊಂಡ ಚಿತ್ತ ಏಕಾಗ್ರವಾಗಬಲ್ಲುದು. ನಿಶ್ಚಲವಾಗಬಲ್ಲದು. ಆಗ ಕ್ಷಿಪ್ತವೃತ್ತಿ ನಿಷ್ಪತ್ತಿಗೊಳ್ಳಬಲ್ಲದು. ಅಂದರೆ ಆ ಚಿತ್ತದಲ್ಲಿ ಆಚಾರಪ್ರೇಮ ಬೆಳೆದು ಆಚರಣೆಯಲ್ಲಿ ಪ್ರೇಮ ಉಳಿದು ಬರುತ್ತದೆ. ಸಂಸ್ಕೃತಿ ಮೈಗೂಡಿ ವಿಕೃತಿ ಮಣ್ಣುಗೂಡಿ ಹೋಗುತ್ತದೆ. ಆಗ ಆತನ ಪ್ರವೃತ್ತಿಯೆಲ್ಲ ನಿವೃತ್ತಿಯಾಗಿ ಆಚಾರಲಿಂಗಕಳೆ ಆಧಾರವಾಗಿ ತೊಳಗಿ ಬೆಳಗುತ್ತದೆ.

ಭಕ್ತನದು ಸಹಜಾಚರಣೆ. ಬೇಕೆನ್ನನು; ಬೇಡೆನ್ನನು. " ಬೇಕು ಬೇಡೆಂಬ ಎರಡು ಭವಬೀಜಗಳ ಹುರಿದು ಲೋಕದೊಳಗಿದ್ದು ಇಲ್ಲದ ಮಹಿಮ." ಭಕ್ತನು ಬಳಸಿ ಬ್ರಹ್ಮಚಾರಿ, ಉಂಡು ಉಪವಾಸಿ; ಸಂಸಾರಿಯಾಗಿದ್ದರೂ ಸಂನ್ಯಾಸಿ. ಇದರಿಂದಾಗಿ ಈತನಿಗೆ ಕಲ್ಪಿತ ಆಶ್ರಮ ವಿಭಾಗವಿಲ್ಲ; ಆಶ್ರಮ ಕ್ರಮವಿಲ್ಲ.

ಭಕ್ತನದು ಪ್ರೇಮಯೋಗ, ಆತನ ಈ ಯೋಗ ತ್ಯಾಗ–ಭೋಗಗಳಿಂದ ಒಡಗೂಡಿದುದು. ಆ ತ್ಯಾಗ–ಭೋಗಗಳು ಅಸಹಜವಲ್ಲ. ಸಹಜ ಭಾವಭರಿತವಾದವು. ಸ್ವ-ಭಾವ ನಿಷ್ಠಾಗರಿಷ್ಠವಾದವು. ಇಲ್ಲಿ ಸಹಜವೆಂದರೆ ಆಚಾರ ಚೇತನ, ಸ್ವಭಾವವೆಂದರೆ ಸತ್ಕ್ರಿಯಾಶಕ್ತಿ. ಇವೆರನ್ನೂ ಅಳವಡಿಸಿಕೊಳ್ಳುವುದೆ ಸಹಜ ಮಾಟ. ಆತನೇ ಸದ್ಭಕ್ತ. ಆತನ ಆ ಸದ್ವಾಸನೆ ಸಾರ್ಥಕ; ಸಮರ್ಪಕ.

ಪ್ರೇಮಯೋಗದಲ್ಲಿ ನೇತಿವಾದಕ್ಕೆ ಉದಾಸೀನಕ್ಕೆ ಇಂಬಿಲ್ಲ, ಅಂತೆಯೆ ರಕ್ತಿ–ವಿರಕ್ತಿಗಳಿಗೆ ಇಂಬಿಲ್ಲ. ಸಕಾಮ-ನಿಷ್ಕಾಮಗಳಿಗೆ, ಭಿನ್ನಭಾವಕ್ಕೆ, ಸ್ವಾರ್ಥ–ಸಂಕೋಚಗಳಿಗೆ, ವಿಷಯ ವಿಕೃತಿಗೆ, ಪ್ರಕೃತಿ ಗತಿಗೆ ಅವಕಾಶವಿರುವುದಿಲ್ಲ. ಆ ಪ್ರೇಮ ಕುರುಡವಲ್ಲ. ಅದು ವಿಶ್ವತಶ್ಚಕ್ಷುವುಳ್ಳ ಪ್ರೇಮ. ಅದು ವಿಶ್ವತೋ ಬಾಹುವುಳ್ಳ ಪ್ರೇಮ. ಅದು ವಿಶ್ವದ ವಸ್ತುಗಳನ್ನೆಲ್ಲ ವಿಶ್ವನಾಥನನ್ನಾಗಿ ಕಾಣುತ್ತದೆ, ಎಲ್ಲವನ್ನೂ ವಿಶ್ವೇಶ ಸ್ವರೂಪವೆಂದೆ ತಿಳಿದು ತಬ್ಬುತ್ತದೆ. ಅಂದರೆ ಅಂಗೀಕರಿಸುತ್ತದೆ. ಅದು ಯಾವುದನ್ನೂ "ಅಲ್ಲ" ಎಂದು ಅಲ್ಲಗಳೆಯುವುದಲ್ಲ. ಆ ಪ್ರೇಮಯೋಗಿ ಸದಾಕಾಲಿಕವಾಗಿ ಸಂಸ್ಕೃತಿಯಲ್ಲಿ ಗತಿ–ಪುರೋಗತಿಯುಳ್ಳವನಾದುದರಿಂದ ಆತನಿಗೆ ವಿಕೃತಿಯಾಗಲಿ–ಜಡವಾದ ಸಂಪ್ರದಾಯದಿಂದ ಕುರುಡಾದ ಪ್ರಾಕೃತಿಕ ಗತಿಯಾಗಲಿ ಇರುವುದಿಲ್ಲ. ಆತನದು ಸಹಜದಾನದ ಶ್ರೇಷ್ಠಗತಿ. ಅದರಲ್ಲಿ ಇಡಿ ವಿಶ್ವಕಲ್ಯಾಣದ ಗುರಿಯನ್ನು ಗುರುತಿಸಿ ನಡೆವ ಗತಿ. ಆ ಚರಮ ಗುರಿಗೆ ನಿಲುಕಿದ ಪ್ರಗತಿ. ಅದುವೆ ಸಾರ್ಥಕವಾದ ಸಮರ್ಪಕವಾದ

ಭಕ್ತ ಜೀವನದ ಪರಮೋದ್ದೇಶ. ಆದ್ದರಿಂದ ಭಕ್ತನದು ಪ್ರಕೃಷ್ಟಕೃತಿ. ಪ್ರಬುದ್ಧಗತಿ. ಆ ಶಾಂತರಸದೊಡನೆ ಆ ಕಾಂತ ರಸದೊಡನೆ ಸಮರಸವಾಗುವ ಸಂಗತಿ. ಆ ನಿಟ್ಟಿನ ಪ್ರಕೃತಿಯ ಪರಿಸರದಲ್ಲಿ ಪವಿತ್ರ ಸನ್ನಿಹಿತದಲ್ಲಿ ಜೀವನ ಸಾಧನೆ, ದೇವ ರಸೋತ್ಪಾದನೆ: ಮಾನವೀಯ ಸವಾಚರಣೆ.

ಈ ಸಮಷ್ಟಿ ಮಣ್ಣಿನಲ್ಲಿ ಗಂಧವಿದೆ. ಅಂತೆಯೇ ಇದರದು ಗಂಧಗುಣ. ಈ ಗುಣವಿಲ್ಲದೆ ಆಗದು ಪ್ರಾಣಿಗಳ ಬಾಳು ಚಂದ; ಆಗದು ಆನಂದ. ಕೃತಕವಾಗಿ ಹುಟ್ಟುವ ದುರ್ಗಂಧ ಆರೋಗ್ಯಕ್ಕೆ ಭಂಗ. ಈ ಮಣ್ಣಿನಿಂದಾಗಿದೆ ಮಾನವ ಮೈ. ಮಾನವನ ಚಿತ್ತ. ಅಂತೆಯೆ ಮಾನವನು ತನ್ನ ನಿಸರ್ಗವಾದ ವಾಸನೆಯನ್ನು ಸದ್ಗುಣ ಕುಸುಮಗಳಿಂದ ಸುವಾಸಿತಗೊಳಿಸಿಕೊಳ್ಳಬೇಕು. ಒಳ್ಳೆಡೆಗಳಿಂದ ಮರುಗ–ಮಲ್ಲಿಗೆಗಳ–ಸುರಗಿ ಸುರಹೊನ್ನೆಗಳ ಕಂಪನ್ನು ಬೀರಬೇಕು, ಸದ್ಭಕ್ತ ಸದ್ವೃತ್ತಿ ಸೌರಭ ನಿರ್ಮಾಪಕ ನಿವೇದಕ. ಆತನದು ವಸಂತ ಋತು ಜೀವನ, ಭಾವನ, ಭಾಷಣ, ನಿಜಭಕ್ತನ ಎಲ ಬಾಳು ಪರಮ ಪರಿಮಳ ಪ್ರತೀಕ. ಫಲಪುಷ್ಪ ಭರಿತ ಕ್ಷಿತಿಜ ಸಂಕೇತ. ಆತನ ಆ ವ್ಯಕ್ತಿತ್ವದಲ್ಲಿ ವಕ್ತೃತ್ವದಲ್ಲಿ ಸ್ವರ್ಗೀಯ ಸೌರಭ ಸೂಸುತ್ತಿರುತ್ತದೆ. ಸತ್‌ಸಾರದಿಂದ ಆತನ ಚಿತ್ತಭೂಮಿಭರಿತವಾಗಿ ಸಾರ್ಥಕಗೊಂಡಿರುತ್ತದೆ. ಶಾಂತಿ ಸಮಾಧಾನಗಳಿಂದ ಸರ್ವಂಸಹೆಯಾಗಿರುತ್ತದೆ.

ಮಾನವೀಯ ಪ್ರಕೃತಿಯಲ್ಲಿ ಪಾರ್ಥಿವಾಂಶ ಪ್ರಥಮದ್ದು — ನಿವೃತ್ತಿಯಲ್ಲಿ! ಪಾರ್ಥಿವ ಪೂರ್ವಾಶ್ರಯವನ್ನು ಕಳೆಯುವುದೆಂದರೆ ದುರ್ವಾಸನೆ ದುರ್ವ್ಯಸನಗಳನು ದೂರಮಾಡುವುದು. ಸದ್ವಾಸನೆ ಸದಾಚಾರಗಳನ್ನು ಮೈಗೂಡಿಸಿಕೊಳ್ಳುವುದು. ಇದುವೆ ಉಜ್ಜೀವನದ ಮೂಲಮೌಲ್ಯ. ಇದುವೆ ಸತ್ಸಂಪಾದನೆ.

ಸಾರ್ಥಕತೆಯ ಮೊದಲ ಹಂತ ಭಕ್ತಸ್ಥಲ; ಮೊದಲ ಸಾಧನೆ ಸದ್ವಾಸನೆ; ಸದಾಚಾರ ನಿರ್ವಹಣೆ. ಚಿತ್ತಶುದ್ಧಿ ಕ್ರಿಯಾ ಸಿದ್ಧಿ. ಭವದ ಕತ್ತಲೆಯನ್ನು ಕಳೆಯುವವನೆ, ಭವದ ಕೊಳೆಯನ್ನು ತೊಳೆಯುವವನೆ, ಭವದ ವಾಸನೆಯನ್ನು ನೀಗುವವನೆ, ಭವದ ಬಂಧನವನ್ನು ಬಿಡಿಸಿಕೊಂಡವನೆ–ಭಕ್ತ. ಭವಹರನಲ್ಲಿ ಆಸಕ್ತನಾದವನೆ ಭಕ್ತ, ಸತ್ ಶೀಲ ಭಕ್ತ. ಉಪಾಧಿದಾನ ನಿರುಪಾಧಿದಾನ ಸ್ಥಲಗಳನ್ನು ಮೀರಿ ಸಹಜದಾನ ಸ್ಥಲವನ್ನು ಸೇರಿ ನಿಂತವನು ನಿಜಭಕ್ತ. ಸಹಜ ಶ್ರದ್ಧೆಯೇ ಭಕ್ತನ ಸಿದ್ಧಿ. ಆತ ಆಚಾರಸುಖಿ, ಆಚಾರಾನುಭಾವಿ; ಆಚಾರಾವಧಾನಿ.

ಆಚಾರ ಸಿದ್ಧಿಯಿಂದ ಅಂಗಭಾವವಳಿಯುತ್ತವೆ. ಅಂಗಭಾವವಿಲ್ಲದಲ್ಲಿ ತನುವಿಕಾರವಿರದು. ಷಡ್ಭಾವವಿಕಾರಗಳಿರವು. ಶಾರೀರಿಕ ಸ್ವಭಾವಗಳಿರವು. ಅಭಿಮಾನ ಅನುರಾಗಗಳಿರವು. ಶಾರೀರಿಕ ಗುಣಧರ್ಮಗಳು ನೆಲೆಸಿರವು. ಧರ್ಮಗಳಿರವು. ಭಕ್ತನು ಕರ್ಮಭೋಗಿಯಾಗಿರನು; ಕರ್ಮಭಾಗಿಯಾಗಿರನು. ಭಕ್ತನ ಕ್ರಿಯಾಚರಣೆಗಳಿಗೆ ಯಾವ ಬಗೆಯ ಫಲಗಳಿಲ್ಲ. ಕರ್ಮ ಸಂಚಯ ಮೊದಲೆ ಇಲ್ಲ. ಕರ್ಮಸಂಚಯವಿಲ್ಲದಲ್ಲಿ ಪ್ರಾರಬ್ಧಕ್ಕೆ ಎಡೆಯೆಲ್ಲಿ? ಭೌತಿಕಭೋಗ ದೈಹಿಕಭೋಗಗಳು ಭಕ್ತನಿಗೆ ಸಂಭವಿಸುವುದಾದರೂ ಹೇಗೆ?

ತ್ರಿವಿಧ ಸಂಸ್ಕಾರಗಳಿಂದ ತ್ರಿವಿಧ ತನುಭಾವಗಳು ತೊಲಗಿರುತ್ತವೆ. ಭೂತ ಭಾವ ನಿರಸನವಾಗಿರುತ್ತದೆ. ಇದರಿಂದಾಗಿ ಭೂತಾಕಾರದ ಗುಣಗಳಾದ ಶೋಕ ಮೋಹ ಕಾಮ ಕ್ರೋಧ ಭಯಗಳು ಬಯಲಾಗಿರುತ್ತವೆ. ವಾಯುಗುಣಗಳಾದ ಚಲನವಲನ ಆಕುಂಚನಾದಿಗಳು ಅಳಿದಿರುತ್ತವೆ. ಅಗ್ನಿತತ್ವದ ಗುಣಗಳಾದ ಹಸಿವು ನೀರಡಿಕೆ ನಿದ್ದೆ ಆಲಸ್ಯಾದಿಗಳು ಅಳವಡವು. ಜಲ ತತ್ವದ ಗುಣಗಳಾದ ರಸರಕ್ತ ಶುಕ್ಲಾದಿಗಳು ಮಂತ್ರಮಯವಾಗಿರುತ್ತವೆ. ಅಂತೆಯೆ ಪಾರ್ಥಿವ ತತ್ವದ ಗುಣಗಳಾದ ರೋಮತ್ವಕ್ಕು ನಾಡಿ ಮಾಂಸ ಮೂಳೆಗಳು ಸಹ ಮಂತ್ರಮಯವಾಗಿರುತ್ತವೆ. ಹೀಗಾಗಿ ದುರ್ವ್ಯಸನ ದುರಾಚಾರಗಳಿಗಿಂಬಿರುವುದಿಲ್ಲ. ಸದ್ಗುಣಗಂಧ ತನುಗಳಲ್ಲಿ ತುಂಬಿರುತ್ತದೆ. ಪರಮಾರ್ಥಪರಿಮಳ ಪಸರಿಸುತ್ತದೆ.

೨

ಸಾರ್ಥಕತೆಯಲ್ಲಿ ಮಾಹೇಶ್ವರನೊಬ್ಬ ರಸಋುಷಿ. ರಸೋಪಾಸನೆಯಲ್ಲಿ ಆತನದೇ ಆದ ರಸಪೂರ್ಣ ರೀತಿ. ಶ್ರದ್ಧಾಭಕ್ತ ರಸವನ್ನು ಮುಂದುವರಿಸಿ ನವೀಕರಿಸುತ್ತಾನೆ. ನಿಷ್ಠೆಯನ್ನಾಗಿಸುತ್ತಾನೆ. ನಿಷ್ಠೆಯಿಂದ ರಸವನ್ನು ಪ್ರಸಾದವನ್ನಾಗಿಸುತ್ತಾನೆ. ಪ್ರಸಾದದಿಂದ ಜಿಹ್ವೆಯ ಲಂಪಟವನ್ನು ಜಯಿಸುತ್ತಾನೆ, ರಸನೆಯನ್ನು ಗೆದ್ದು ರಸಸಿದ್ಧಿಯನ್ನು ಪಡೆದು ರಸಋುಷಿಯಾಗುತ್ತಾನೆ. ರಸಾತಳದ ರಸದ ಹಂಗನ್ನು ಹಳಚುತ್ತಾನೆ, ಚಿದ್ರಸೋಪಾಸಕನಾಗುತ್ತಾನೆ.

ಜ್ಞಾನ ಶಕ್ತಿಯುಳ್ಳ ಗುರುಲಿಂಗವೆ ಆ ಚಿದ್ರಸಾಧಿಷ್ಠಾನ ಚೇತನ. ರಸರುಚಿಗಳ ಪ್ರಜ್ಞೆಯುಳ್ಳದು ಈ ಚೇತನ, ಇದರಿಂದಾಗಿ ಇದರ ಹೆಸರು ಗುರುಲಿಂಗ. ಗುರುಪದ ಪ್ರಜ್ಞಾಪ್ರತೀಕ, ಲಿಂಗ ಪದ ಚೇತನ ಸಂಕೇತ. ರಸ-ರಸನಗಳ ಮೂಲ ಚೇತನ ಗುರುಲಿಂಗ, ಜಿಹ್ವಾವಚ್ಛಿನ್ನ ಚೈತನ್ಯ ಗುರುಲಿಂಗ.

ಗಂಧ ( ವಾಸನೆ ) ಚಿತ್ತಶುದ್ಧಿಗೆ ಕಾರಣವಾದರೆ, ರಸ ಬುದ್ಧಿವೃದ್ಧಿಗೆ ಸ್ಥಿರತೆಗೆ ಕಾರಣ, ರಸ ಪ್ರಸಾದವಾದರೆ ಮಾತ್ರ ಅದು ಸಾಧ್ಯ, ರಸಪ್ರಸಾದತೆಗೆ. ಗುರುಲಿಂಗ ಕಾರಣ, ಗುರುಲಿಂಗ ಕಾರುಣ್ಯಕ್ಕೆ ಮಾಹೇಶಾಂಗನ ಮಹಾನಿಷ್ಠೆ ಕಾರಣ.

ಸದ್ವಾಸನೆಗಳ ಸರ್ವಾಧಿಕಾರದಿಂದ ಭಕ್ತನೆ ಮಾಹೇಶ್ವರನೆನಿಸುತ್ತಾನೆ, ಅಂತೆಯೆ ರಸರುಚಿಗಳ ಚಿತ್ತಬುದ್ಧಿಗಳ ಸ್ವಾಮ್ಯವೂ ಆತನದಾಗಿರುತ್ತದೆ, ಘ್ರಾಣ ಜಿಹ್ವೆಗಳ ಗುದ ಗುಹ್ಯಗಳ ನಿಯಂತ್ರಣ ಮಾಹೇಶ್ವರನದು, ಹೆಚ್ಚೇನು ತ್ಯಾಗಾಂಗ ಅಂದರೆ ಸ್ಥೂಲಾಂಗದ ಸರ್ವಸ್ವಾಮ್ಯ ಆತನದು, ಆಚಾರ–ವಿಚಾರಗಳ ಸಾಕ್ಷಾತ್ಕಾರ ಆತನದು, ಆಚಾರದಿಂದ ಚಿತ್‌ಶುದ್ಧಿ; ವಿಚಾರ ಸಾಕ್ಷಾತ್ಕಾರದಿಂದ ಬುದ್ಧಿವೃದ್ಧಿ ಮತ್ತು ಸ್ಥಿರತೆ.

ಪೃಥ್ವಿ ತತ್ವದಿಂದ ಉಂಟಾಗುವದು ಅನ್ನ, ಅನ್ನವನ್ನು ಉಣ್ಣುವುದರಿಂದ ಉಂಟಾಗುವುದು ಪ್ರಾಕೃತಿಕ ರಸ, ಇದರ ಪರಿಣಾಮವೆ ಮಾನವೀಯ ಶುಕ್ಲ. ಇದರಲ್ಲಿರುತ್ತದೆ ಭಾವೋದ್ರೇಕ ಗುಣ ; ಶೃಂಗಾರ ಗುಣ. ಸಾಮಾನ್ಯ ಸೃಜನ ಗುಣ, ಅದೇ

ರಸಾರಾಧಕನಾದ ಮಾಹೇಶ್ವರನಿಂದ ಶುದ್ಧ ಪ್ರಾಸಾದಿಕ ಶುಕ್ಲೋದಯುವಾಗುತ್ತದೆ. ಇದರಿಂದ ಭಾವೋದ್ರೇಕವಾಗದು, ಬುದ್ಧಿ ಭ್ರಮಣವುಂಟಾಗದು ; ಕರುಣರಸ, ಶಾಂತಿ ರಸಗಳುಂಟಾಗುತ್ತವೆ. ಶೈವೀವೀರತನವೊದಗುತ್ತದೆ, ವಿಶೇಷ ಸೃಜನಗುಣ ಸಂಭವಿಸು ತ್ತವೆ. ಗುಣ ಸಾಮ್ಯತೆ ಸಮನಿಸುತ್ತದೆ, ರಸಾಭಾಸವಾಗದು, ಚಿದಾನಂದ ಕಾರಣ ವಾದ ರಸಚೇತನ ರೂಪಿತವಾಗುತ್ತದೆ,

ರಸಶುದ್ಧಿಯಿಂದ ಮಾಂಸಮಯದಿಂದ ಮಂತ್ರಮಯಪಿಂಡವಾಗುತ್ತದೆ, ರಕ್ತದ ರಜೋಗುಣ ತಮೋಗುಣಗಳು ಕಡಿಮೆಯಾಗುತ್ತವೆ. ಅಸ್ಥಿಗಳಲ್ಲಿ ನರಗಳಲ್ಲಿ ಸಾತ್ವಿಕತೆ ಸಂಚರಿಸುತ್ತದೆ. ಸ್ಥೌಲ್ಯಭಾವ ಸಡಿಲಾಗುತ್ತದೆ. ಕೋಪ ಕಡಿಮೆಯಾಗುತ್ತದೆ. ಕುಹಕತೆ ಕಣ್ಮರೆಯಾಗುತ್ತದೆ. ನಾಲಗೆ ನಿರ್ಮಲವಾಗುತ್ತದೆ. ನಡೆ-ನುಡಿ ಚನ್ನಾಗುತ್ತವೆ ಕ್ಷೇತ್ರಜ್ಞತೆ ಅಂದರೆ ಪಿಂಡ ಜ್ಞಾನೋದಯವಾಗುತ್ತದೆ, ಸಂಸಾರದಲ್ಲಿ ಹೇಯಭಾವ ವುಂಟಾಗುತ್ತದೆ. ದೃಕ್ರಿಯೆ, ದೀಪಿಸುತ್ತದೆ, ಶ್ರದ್ಧೆ, ಗಟ್ಟಿಗೊಳ್ಳುತ್ತದೆ, ಪ್ರವೃದ ವಾಗುತ್ತದೆ, ನಿಷ್ಠೆಗೆ ಜೀವಾಳ ಸದ್ವಿಚಾರ, ವಿಚಾರ ಚೇತನ ಗುರುಲಿಂಗ, ಗುರು ಲಿಂಗೋಪಾಸನೆಗೆ ರಸಾರ್ಪಣ ಸಾಧನ, ರಸ ಪ್ರಸಾದ ಪರಿಣಾಮವೆ ಸುಜ್ಞಾನಶಕ್ತಿ.

ರಸ ಇತ್ತೆರ, ಒಂದು ಜಡರಸ; ಇನ್ನೊಂದು ಚಿದ್ರಸ, ಚಿದ್ರಸಕ್ಕೆ ಚೇತನರಸ ವೆಂದು ಮತ್ತೊಂದು ಹೆಸರು. ಜಡರಸ ಅಯ್ದು ಬಗೆ ; ಪಾರ್ಥಿವ, ಸಾಲಿಲ, ತೈಜಸ (ಆಗ್ನೇಯ), ವಾಯವೀಯ, ಶಾಬ್ದ ಎಂಬುದಾಗಿ ! ಚಿದ್ರಸ ಒಂದೆ ಒಂದು ! ಈ ಎಲ್ಲ ರಸಗಳು ಗುರುಲಿಂಗಾರ್ಪಣವಾಗಿ ಪ್ರಸಾದಗಳಾಗುತ್ತವೆ. ಗುರುಲಿಂಗಕ್ಕೆ ಚಿಲ್ಲಿಂಗವೆಂದು ಚಿಚ್ಚೇತನವೆಂದು ಸಂವಿದಾತ್ಮನೆಂದು ಬೃಹಲ್ಲಿಂಗವೆಂದು ಅಥವಾ ಘನಲಿಂಗವೆಂದು ಪರ್ಯಾಯ ನಾಮಗಳಿವೆ.

ರಸ ರುಚಿನಿಷ್ಠ, ರುಚಿ ರಸನಿಷ್ಠೆ ಪರಸ್ಪರ ಪೂರಕಗಳಾಗಿವೆ. ಎರಡಕ್ಕೂ 'ಸವಿ' ಎಂಬ ಅರ್ಥ ಸಮಾನವಾಗಿದ್ದರೂ ರುಚ್ ಅಥವಾ ರುಕ್ ಧಾತು ಜನ್ಯ ರುಚಿ ಪದಕ್ಕೆ ಕಾಂತಿ ಕಿರಣ ಶೋಭೆ ಅಭಿಲಾಷೆ ಎಂಬ ಅದರದೇ ಆದ ಅರ್ಥಗಳಿವೆ. ಅದೇ ರುಚಿಕರವೆಂದಾಗ ಮಧುರ ಮನೋಹರವೆಂದು ಅರ್ಥಗಳಾಗುತ್ತವೆ. ಅಭಿರುಚಿ ಎಂತಲೂ ಆಗುತ್ತದೆ. ಇವೆಲ್ಲಕ್ಕೂ ರಸ ಆಧಾರ. ಇವೆಲ್ಲವೂ ರಸನಿಷ್ಠ. ವಿಚಾ ರದ ವಿವೇಕದ ಬೆಳಕನ್ನು ಬೀರುವ ಶಕ್ತಿ ರಸರುಚಿಗಿದೆ. ಪ್ರಾಣ ಪೋಷಕ ಸತ್ವ ವಿದೆ. ಅಂತೆಯೆ ರುಚಿ ಪ್ರಾಣಲಿಂಗಾರ್ಪಣವಾಗುತ್ತದೆ. ಪ್ರಾಣಚೇತನ ವಿಕಾಸ ವಾಗುತ್ತದೆ ವಿಶೇಷವಾಗುತ್ತದೆ. ರಸಪ್ರಜ್ಞೆಯಿಂದ ಚಿತ್‌ಶೋಭೆಯುಂಟಾಗುತ್ತದೆ; ಚಿತ್ಕಾಂತಿಯುಂಟಾಗುತ್ತದೆ. ರಸಪ್ರಸಾದ ಮಹಿಮೆ ಮಾತಿಗೆ ಮೀರಿದುದು. ರುಚಿ ಅಭಿರುಚಿಗಳು ರುಚಿರತೆಯೂ ಎಲ್ಲೆಲ್ಲಿದೆಯೊ ಅಲ್ಲಲ್ಲಿ (ಅದೆಲ್ಲ) ರಸದ ಪರಿಣಾಮ ವಲ್ಲದೆ ಬೇರಿಲ್ಲ.

ರಸ ಶುದ್ಧಾಶುದ್ಧವೆಂದು ಇಬ್ಬಗೆ. ಅನ್ನದಿಂದುಂಟಾಗುವುದು ಅಶುದ್ಧರಸ, ಅಶುದ್ಧರಸದಿಂದ ಜೀವಸತ್ವ. ಪ್ರಸಾದದಿಂದಾಗುವುದು ಶುದ್ಧರಸ, ಇದರಿಂದ ದೇವ

ಸತ್ವ. ಅನ್ನರಸ ರುಚಿಗೆಳಸುವುದು ನಾಲಗೆ ! ನಾಲಗೆ ಜಿಹ್ವಾಂಗ, ಪ್ರಸಾದದ ರಸರುಚಿಗಳ ಅರ್ಪಣ ಲಿಂಗಕ್ಕೆ ! ಆ ಲಿಂಗವೆ ಜಿಹ್ವಾವಚ್ಛಿನ್ನ ಚೈತನ್ಯ; ಅದುವೆ ಗುರುಲಿಂಗ, ಆಹಾರ ದಿಂದ ರಜೋಗುಣ. ರಜೋಗುಣದಿಂದ ಮನಶ್ಚಂಚಲ. ಪ್ರಸಾದಾರೋಗಣೆಯಿಂದ ಸತ್ವ ಗುಣ, ಸತ್ವಗುಣದಿಂದ ಮನಸ್ಸು ನಿಶ್ಚಂಚಲ. ತಾಳ್ಮೆಯಿಂದಿರಬಲ್ಲುದು; ಇರುತ್ತದೆ. ರುಚಿ ಗಳಿಗೆ ಮನ ನಾಲಗೆಗಳು ಎಳಸವು. ರಸಪ್ರಸಾದದಿಂದ ಕರಣವೃತ್ತಿಗಳು ಅಡಗುವವು.

ಶುಭವಿಚಾರವೆ ಮಾಹೇಶಾಂಗನ ಮೂಲ ಚೇತನ. ಜ್ಞಾನಕ್ರಿಯೆಯೆ ಆತನ ಸದ್ಧರ್ಮ; ಆತನ ಜೀವಾಳ, ಗುರುತ್ವಕ್ಕೆ ಉಸುರಿನ ಉಸಿರು ವ್ಯಕ್ತಿಕ್ರಿಯೆ. ಮಾಹೇಶಾಂಗನು ಇವುಗಳ ಅನುಷ್ಠಾನದಲ್ಲಿ ನಿಷ್ಠೆಯುಳ್ಳವನಾಗುತ್ತಾನೆ. ಘ್ರಾಣಾಂಗ–ಜಿಹ್ವಾಂಗಗಳಲ್ಲಿ ವ್ಯಕ್ತಿಕ್ರಿಯಾನಿರತನಾಗಿ ಸ್ವಾಧಿಷ್ಠಾನದಲ್ಲಿ ಪ್ರತಿಷ್ಠಾಕ ಕಳೆಯನ್ನು ಪ್ರಕಾಶಿಸುತ್ತಾನೆ.

ಮಾನವನಲ್ಲಿರುವ ರುಚಿ ಅಭಿರುಚಿಗಳಿಗೆ ಲೆಕ್ಕವಿಲ್ಲ, ಅಂಗುರುಚಿ–ಅಂಗಾಭಿರುಚಿ ಗಳನ್ನು ಲಿಂಗರುಚಿ–ಲಿಂಗಾಭಿರುಚಿಗಳನ್ನಾಗಿ ಮಾರ್ಪಡಿಸಿಕೊಳ್ಳುತ್ತಾನೆ ಮಾಹೇಶ್ವ-ರಾಂಗನು, ಪ್ರಾಕೃತಿಕ ಜಡಭಾವದಿಂದ ದೂರಾಗುತ್ತಾನೆ. ರುಚಿಯನ್ನು ಗೆದ್ದು ಋಷಿ ಯಾಗಿರುತ್ತಾನೆ. ರುಚಿ–ಅಭಿರುಚಿಗಳಿಗೀಡಾಗುವುದು ಸಂಯಮ ಜೀವನದ ಹಿರಿಯ ಜೀವನದ ಲಕ್ಷಣವಲ್ಲ. ಇಂದ್ರಿಯ–ಇಂದ್ರಿಯ ಗುಣ ಧರ್ಮಗಳ ಸಂಯಮನವಿಲ್ಲದೆ ಮಾಹೇಶತ್ವ ಮೈಗೂಡಿಬಾರದು. ಐಂದ್ರಿಕ ವ್ಯವಹಾರ ಅದೊಂದು ದೊಡ್ಡ ಸಂಸಾರ; ದಾಟಬಾರದ ದಂದುಗ. ಅವುಗಳ ಚಾಪಲ್ಯಕ್ಕೆ ಆಶೋತ್ತರಕ್ಕೆ ಒಳಗಾಗಬಾರದು. ಎಲ್ಲಕ್ಕೂ ಮೊದಲು ಐಂದ್ರಿಕ ಭಾವನೆಯಿರಬಾರದು. ಐಂದ್ರಿಕ ಭಾವನೆಗೆ ಆಡಿಯಾಳು ತನಕ್ಕೆ ಮಾಯೀಯ ಮಲವೆ ಮೂಲ ಕಾರಣ. ಮಾಹೇಶ್ವರಾಂಗನು ಮಾಯಾಮಲ ವನ್ನು ತೊಳೆದು ಹಾಕಿರುತ್ತಾನೆ. ಪರಮ ಪ್ರಜ್ಞೆಯ ಪ್ರಕಾಶದಲ್ಲಿರುತ್ತಾನೆ.

ಪೂರ್ವಾಶ್ರಯ ನಿರಸನವಾಗದೆ ಮಹೇಶ್ವರತ್ವ ಬಾರದು. ಪೂರ್ವಾಶ್ರಯವು ವ್ಯಷ್ಟಿ–ಸಮಷ್ಟಿ ಎಂದು ಇಬ್ಬಗೆ ! ವೈಯಕ್ತಿಕ ಮತ್ತು ಕೌಟುಂಬಿಕ ಇವೆರಡು ವ್ಯಷ್ಟಿ ಗತಗಳು, ಲೌಕಿಕ ದೈವಿಕಗಳೆರಡು ಸಮಷ್ಟಿಗತಗಳು. ನಿರಸನಕ್ಕೆ ಎರಡು ಮುಖಗಳಿವೆ. ಒಂದು ಪರಿತ್ಯಜಿಸುವಿಕೆ; ಇನ್ನೊಂದು ಪರಿವರ್ತಿಸಿಕೊಳ್ಳುವಿಕೆ. ಬಿಡಲು ತಕ್ಕವುಗಳಾದ ದುರ್ಗುಣ ದುರಾಚಾರಾದಿಗಳನ್ನು ಪೂರ್ತಿ ಪರಿತ್ಯಜಿಸುವುದು. ಪರಿತ್ಯಜಿಸಲು ಬಾರ ದವುಗಳನ್ನು ನಿವೃತ್ತಿಗೆ ಪರಿವರ್ತಿಸಿಕೊಳ್ಳುವುದು.

ಬುದ್ಧಿಶುದ್ಧಿ, ಬುದ್ಧಿವೃದ್ಧಿ ಮಾಹೇಶ್ವರ ಸ್ಥಲದ ಮುಖ್ಯ ಕಾರ್ಯ. ಜಿಹ್ವೆ ಗ್ರಹಿ ಸಿದ ರುಚಿಯು ಗುರುಲಿಂಗಾರ್ಪಣವಾಗುವಂತೆ ಬುದ್ಧಿಯ ಅಭಿರುಚಿಯು ಗುರುಲಿಂಗಾ ರ್ಪಣವಾಗಬೇಕು; ಗುರು ಚೇತನ ನಿಷ್ಠವಾಗಬೇಕು. ಶಿವಜ್ಞಾನನಿಷ್ಠ ಬುದ್ಧಿ ಸ್ಥಿರ ಗೊಂಡು ವೃದ್ಧಿಯಾಗಬಲ್ಲುದು; ಆಗುತ್ತದೆ. ಆಗ ಮೂಢವೃತ್ತಿ ಮಾಯವಾಗು ತ್ತದೆ. ಸುಜ್ಞಾನ–ಸುವಿಚಾರಗಳು ಸುಪ್ರತಿಷ್ಠಿತವಾಗುತ್ತವೆ.

ಮಾಹೇಶ್ವರನು ಸಹಜ ವೀರನು. ಆತನ ವೀರತನ ಹೊಲ್ಲದುದಲ್ಲ; ಹೊರಗಿನ ದಲ್ಲ. ಶಮ–ದಮಾದಿಗಳಲ್ಲಿ ಆತ ವೀರ. ಇಹ–ಪರಗಳೆರಡನ್ನು ಗೆಲಿದ ವೀರ.

ಇಲ್ಲಿಯೂ ಅಲ್ಲಿಯೂ ಸಲ್ಲುವ ಸಹಜವೀರ. ಒಂದನ್ನು ತಿರಸ್ಕರಿಸುವವನಲ್ಲ; ಇನ್ನೊಂದನ್ನು ಪುರಸ್ಕರಿಸುವವಲ್ಲ. ಸುಳ್ಳೆಂಬ ಮಾತು ಅವನಲ್ಲಿಲ್ಲ.

ಸಮಷ್ಟಿ ಸಲಿಲದಲ್ಲಿ ರಸೋತ್ಪಾದನ ಶಕ್ತಿಯಿದೆ. ಅಂತೆಯೆ ಇದಕ್ಕೆ ರಸಗುಣ ನಿರ್ದಿಷ್ಟವಾಗಿದೆ. ಇದಿಲ್ಲದೆ ಜೀವನವಿಲ್ಲ. ರಸದಿಂದಲೆ ಜೀವನದ ವಿಕೃತಿ; ಜೀವನದ ಪ್ರಗತಿ, ಭೌತಿಕರಸ ವೈಹಿಕರಸವಾದಾಗ ವಿಕೃತಿ; ಭೌತಿಕರಸ ದೈವಿಕರಸವಾದಾಗ ಪ್ರಗತಿ, ಆ ದೈವಿಕರಸದಿಂದ ಬುದ್ಧಿ ಸ್ಥಿರತೆ; ಬುದ್ಧಿ ವೈಶಾಲ್ಯತೆ ಅಂತಾಗಬೇಕಾದರೆ ಜಲರಸದ ಪರಿವರ್ತನೆ ಅಗತ್ಯ. ಅದು ಪಾದೋದರಸವಾಗಿ ಪರಿಣಮಿಸಬೇಕು. ಪಾದೋದರಸದಿಂದ ಪರಮಪ್ರಜ್ಞೆ ಸಮನಿಸುತ್ತದೆ. ಅದುಳ್ಳವನೆ ಮಾಹೇಶ್ವರ.

ಶಿವಕ್ರಿಯೆ ಶಿವಜ್ಞಾನವುಳ್ಳವನೆ ಮಹೇಶ್ವರಾಂಗ. ಆತನ ವಶವಾಗಿರುತ್ತದೆ—ಗುರುಲಿಂಗ: ಗುರುಲಿಂಗ ಕರುಣೆಯಿಂದ ಜಿಹ್ವಾಂಗದ ಮತ್ತು ಬುದ್ಧ್ಯಂಗದ ವಿಕಾರವಳಿಯುತ್ತದೆ. ದಿವ್ಯರಸಾಸಕ್ತಿ ಹೆಚ್ಚುತ್ತದೆ. 'ರಸೋ ವೈ ಸಃ' ಸ್ವರೂಪನಾಗುತ್ತಾನೆ :

೩

ರೂಪ ಸಾರ್ಥಕತೆಯನ್ನು ಸಾಧಿಸಿದವನೆ ಪ್ರಸಾದಿ. ರೂಪವನ್ನು ಸ್ವರೂಪದ ಸಮರ್ಪಕತೆಗೆ ನಿಲುಕಿಸಿದವನೆ ಸಹಜ ಪ್ರಸಾದಿ. ಸದಿಚ್ಛಾ ಶಕ್ತಿಯಿಂದ ಸಾವಧಾನ ಭಕ್ತಿಯಿಂದ ಸಕೃದ್ದರ್ಶನದಿಂದ ರೂಪನ್ನು ಸತ್ಯ ಶಿವ ಸುಂದರವನ್ನಾಗಿಸುವವನೆ ಪರಮ ಪ್ರಸಾದಿ. ಆತನದು ಶೈವೀದರ್ಶನ. ದೃಶ್ಯವನ್ನು ದಿವ್ಯಸ್ವರೂಪವನ್ನಾಗಿಸುವ ದೃಕ್ ದರ್ಶನ. ನಿಷ್ಠಾತ್ಮಕ ನೇಹ ಸಾವಧಾನ ಸ್ವರೂಪವಾಗುತ್ತದೆ. ಸಾವಧಾನ ಸದ್ಭಕ್ತಿಯಿಂದ ರೂಪ ಪ್ರಸಾದವಾಗುತ್ತದೆ. ರೂಪಪ್ರಸಾದದಿಂದ ಕಣ್ಣಿನ ವಿಕಾರವಳಿಯುತ್ತದೆ. ಚಾಂಚಲ್ಯವಳಿಯುತ್ತದೆ, ಮೋಹ ಮುರಿಯುತ್ತದೆ. ಮಂಗಳತೆ ಮೂಡುತ್ತದೆ.

ಇಚ್ಛಾಶಕ್ತಿ ವಿದ್ಯಾಕಲೆಗಳುಳ್ಳ ಶಿವಲಿಂಗವೆ ಸ್ವರೂಪಾಧಿಷ್ಠಾನ ಚೇತನ: ಸಹಜಾನಂದ ಚೇತನ. ರೂಪು–ಸ್ವರೂಪುಗಳ ಅಧಿಷ್ಠಾನ. ಅದೇ ಸತ್ಯಸ್ವರೂಪು: ಅದೇ ಶಿವಸ್ವರೂಪು. ಅದರಿಂದಾಗಿ ಅದರ ಹೆಸರು ಶಿವಲಿಂಗ. ದೃಕ್ ದೃಶ್ಯಗಳ ಮೂಲ ಚೇತನ ಶಿವಲಿಂಗ. ನೇತ್ರಾವಚ್ಛಿನ್ನ ಚೈತನ್ಯ ಶಿವಲಿಂಗ.

ರೂಪು ಅಹಂಕಾರಕ್ಕೆ ಕಾರಣ. ಸ್ವರೂಪು ನಿರಹಂಕಾರಕ್ಕೆ ನಿಕೇತನ. ರೂಪು ಪ್ರಸಾದವಾದರೆ ಸ್ವರೂಪವಾಗುತ್ತದೆ. ರೂಪ ಪ್ರಸಾದತ್ವಕ್ಕೆ ಶಿವಲಿಂಗ ಕಾರಣ. ಶಿವಲಿಂಗ ಸಾಕ್ಷಾತ್ಕಾರಕ್ಕೆ ಪ್ರಸಾದ್ಯಂಗನ ಅವಧಾನ ಸಾಧನ.

ಕ್ರಿಯೆ–ಜ್ಞಾನಗಳ ಸಿದ್ಧಿಯಿಂದ ಮಾಹೇಶ್ವರನೇ ಪ್ರಸಾದ್ಯಂಗನಾಗುತ್ತಾನೆ. ರೂಪು ರುಚಿ ತೃಪ್ತಿಗಳ ಚಿತ್ತ ಬುದ್ಧಿ ಅಹಂಕಾರಗಳ ಸ್ವಾಮ್ಯ ಆತನದಾಗಿರುತ್ತದೆ. ನಯನ ಚರಣಗಳ ನಿಯಂತ್ರಣ ಪ್ರಸಾದಿಯದು. ಪೃಥ್ವಿ ಅಪ್‌ಗಳೊಡನೆ ತೇಜಾಂಗದ ಸ್ವಾಮ್ಯವೂ ಆತನದೇ ಆಗಿರುತ್ತದೆ, ಆಚಾರ–ವಿಚಾರಗಳಲ್ಲಿ ಅವಧಾನ ಅಳವಟ್ಟಿರುತ್ತದೆ. ಅವಧಾನದಿಂದ ಅಹಂಕಾರ ನಿವೃತ್ತಿ: ನಿರಹಂಕಾರ ನಿಷ್ಪತ್ತಿ.

ತೇಜ ತತ್ತ್ವದಿಂದ ರೂಪೋತ್ಪತ್ತಿ. ರೂಪು ನೇತ್ರ ವಿಷಯು. ರೂಪೋಪಾಸನೆಯಿಂದ ಮಾನಸಿಕ ವಿಕಾರ; ದೃಶ್ಯಾದೃಶ್ಯ ವಿಭೇದಭಾವ, ಮತ್ತು ಅಗ್ನಿ ತತ್ತ್ವದಿಂದ ಹಸಿವು ನೀರಡಿಕೆಗಳು ನಿದ್ರಾಲಸ್ಯಗಳು ಉದಯುವಾಗುತ್ತವೆ, ರೂಪು ರುಚಿ ತೃಪ್ತಿಗಳು ಪ್ರಸಾದವಾಗುವುದರಿಂದ ಇವೆಲ್ಲವೂ ತೊಲಗುತ್ತವೆ. ಪ್ರಾಸಾದಿಕತೆ ಪ್ರಾಪ್ತವಾಗುತ್ತದೆ. ವಿನಯುಗುಣವುಂಟಾಗುತ್ತದೆ.

ಸ್ವರೂಪದ ಮಾತಿರಲಿ; ರೂಪವಳಿಸುವ ಅಗ್ನಿತತ್ವಗಳು ಒಡಲಲ್ಲಿ ಅನೇಕ ಇವೆ. ಕಾಮಾಗ್ನಿ ಕ್ರೋಧಾಗ್ನಿ ಚಿಂತಾಗ್ನಿ ಮೊದಲಾದ ಕುದಿಗಳಿವೆ. ಇವನ್ನೆಲ್ಲ ಪ್ರಶಾಂತಗೊಳಿಸಬೇಕಾದರೆ ಪ್ರಸನ್ನಭಾವದಿಂದ ಮಾತ್ರ ಸಾಧ್ಯ. ಪ್ರಸಾದಿಗೆ ಮಾತ್ರ ಸಾಧ್ಯ. ಚಿಂತಾಗ್ನಿ ಕೇಡಿನದು; ಆದರೆ ಜಠರಾಗ್ನಿ ಕೇಡಿನದಲ್ಲ; ಒಲೆಯು ಉರಿಯಂತೆ ಇದು ಜೀವನಕ್ಕೆ ಅನಿವಾರ್ಯ. ತೇಜದ ಉಪಕಾರ ಹೇಳತೀರದು. ತೇಜಸ್ತತ್ವವನ್ನು ಪ್ರಸಾದ್ಯಂಗ ಅಳವಡಿಸಿಕೊಂಡಿರುತ್ತಾನೆ. ತೇಜಕ್ಕೆ ತೇಜನಾದ ಶಿವಲಿಂಗ ಸಾಕ್ಷಾತ್ಕಾರವನ್ನು ಸಂಪಾದಿಸಿರುತ್ತಾನೆ.

ಕಣ್ಣಿನ ಬೆಳಕಿಗೆ ಉಪಕೃತರಾಗದವರಿಲ್ಲ. ಆದರೆ ಆ ಬೆಳಕನ್ನು ಅರಿತು ಅಭಿವರ್ಧಿಸಿಕೊಂಡು ಅಳವಡಿಸಿಕೊಂಡವರು ವಿರಳ. ಅದು ಕಳಾಸ್ವರೂಪವಾಗಿದೆ. ಅದನ್ನುಳಿದು ಬಾಳಿಲ್ಲ. ರವಿ ಸಮಷ್ಟಿ ಕಣ್ಣು; ಕಣ್ಣು ವ್ಯಷ್ಟಿಕಣ್ಣು. ಇವೆರಡರ ಬೆಳಕಿನಲ್ಲಿ ಬಾಳು, ಬದುಕು. ಇನ್ನು ಕಣ್ಣಿಗೆ ಕಣ್ಣಾದ ನೇತ್ರಾವಚ್ಛಿನ್ನ ಚೈತನ್ಯವಾದ ಶಿವಲಿಂಗದ ಮಹತ್ವವನ್ನು ಮಾತಿನಲ್ಲಿ ಹೇಳಬೇಕೆ ?

ನೇತ್ರ ಪ್ರಸಾದ್ಯಂಗ; ನೇತ್ರಪ್ರಕಾಶ ಶಿವಲಿಂಗ. ಇವೆರಡಕ್ಕೂ ಘನಿಷ್ಠವಾದ ಸಂಬಂಧವಿದೆ. ಈ ಪ್ರಕಾಶದಿಂದ ಮಾನವ ವಿಕಾಸ. ರೂಪ–ಸ್ವರೂಪಗಳು ಇವುಗಳ ಪರಿಣಾಮ ಫಲ. ರೂಪನ್ನು ಕಾಣುವುದು ಕಣ್ಣು. ಸ್ವರೂಪವನ್ನು ಕಾಣುವುದು ಕಣ್ಣಿನ ಕಣ್ಣಾದ ಶಿವಲಿಂಗ.

ಪ್ರಸಾದಿಗೆ ನೇತ್ರಪ್ರಕಾಶವೊಂದು ಮಹಾವಿದ್ಯೆ. ಸ್ವಯಾರಾಧನ ದೇವತೆ. ನೇತ್ರಪ್ರಕಾಶವಾದ ಶಿವಲಿಂಗಕ್ಕೆ ವಿದ್ಯೆಯೇ ಕಲೆಯಾಗಿದೆ; ಕಳೆಯಾಗಿದೆ. ಪ್ರಸಾದಿ ಶೈವೀ ವಿದ್ಯಾಸಂಪನ್ನ. ಸ್ವರೂಪಕಳಾಪ್ರಸನ್ನ. ಅಚ್ಚತನವೇ ಆತನ ನಿಚ್ಚಬಾಳು. ಎಚ್ಚರಿಕೆಯೇ ಆತನ ಅಚ್ಚತನದ ಕುರುಹು. ಇದರಿಂದಾಗಿ ಆತನು ಮಾರ್ಗ ಕ್ರಿಯೆಯನ್ನು ಸಾರ್ಥಕವಾಗಿ ಪೂರೈಸುತ್ತಾನೆ. ಮೀರಿದ ಕ್ರಿಯೆಗೆ ಮುಂದುವರಿವ ಶಕ್ತಿಯನ್ನು ಸಂಪಾದಿಸಿರುತ್ತಾನೆ. ಷಟ್‌ಸ್ಥಲ ಜೀವನದಲ್ಲಿ ಪ್ರಸಾದಿಯುದು ಪ್ರಶಾಂತವೂ ಪ್ರಕಾಶಮಯವೂ ಆದ ಮಹತ್ವಪೂರ್ಣ ಘಟಕ. ಕಂಡುದನ್ನೆಲ್ಲ ಶಿವವಾಗಿ ಸತ್ಯಸುಂದರವಾಗಿ ಭಾವಿಸುವ ಸಾಧನೆ ಸಣ್ಣದೇನಲ್ಲ. ಕಣ್ಣರಿಕೆಯನ್ನು ಕೈಗೂಡಿಸಿಕೊಳ್ಳುವುದು ಮಾತಿನಷ್ಟು ಸುಲಭವೇನಲ್ಲ. ನೇತ್ರ ಅದೊಂದು ಜೀವನದ ರತ್ನಾಕರ. ನೇತ್ರ ವಿದ್ಯೆಯೂ ಅಪಾರ ಅಗ್ನಿ ತತ್ವಕ್ಕಿಂತ ಅತ್ಯಂತ ಸೂಕ್ಷ್ಮವಾದುದು ದೃಕ್ ದೃಶ್ಯಗಳೆರಡನ್ನೂ ಒಳಗೊಂಡುದು. ಲಿಂಗದೊಡನೆ ನೇರವಾದ ನಿತಾಂತವಾದ ಸಂಬಂಧವುಳ್ಳದ್ದು. ನೀಲ ನೇತ್ರಾಂಗ, ಮಹಾನೀಲ ಶಿವಲಿಂಗ.

ನೋಟದಲ್ಲಿ ಎಚ್ಚರಿಕೆ ಎಷ್ಟಾದರೂ ಅಗತ್ಯ. ನೋಟ ಪರುಷದ ಮುಟ್ಟಕ್ಕೀರ ಬೇಕಾದರೆ ಎಚ್ಚರಿಕೆ ಇದ್ದಾಗಬೇಕು. ಶೈವೀದರ್ಶನ ಸಂಭವಿಸಿರಬೇಕು. ನೋಟದ ಪರಿಣಾಮ ಅಷ್ಟಿಷ್ಟಲ್ಲ. ನೋಟ ನಿರ್ಮಲವಾದರೆ ನಡೆ ನಿರ್ಮಲವಾಗುತ್ತದೆ; ನುಡಿ ನಿರ್ಮಲವಾಗುತ್ತದೆ. ನೋಟದ ಪರಿಣಾಮ ಮಾತಿಗಿಂತಲೂ ಮಿಗಿಲು. ನಿಚ್ಚಟ ನೋಟದಿಂದ ಆಸೆ ಆಕಾಂಕ್ಷೆಗಳನ್ನು ಸಂಯಮಿಸಲು ಸಾಧ್ಯ. ನೇತ್ರ ಪರುಷವಾಗದೆ ಪಾದ ಪರುಷವಾಗದು, ಪಾದಗಳಲ್ಲಿ ಪಾವಿತ್ರ್ಯ ಪರಿಣಮಿಸದು. ನೇತ್ರಾವಧಾನಕ್ಕೆ ಜೀವಾಳ ಶಿವಭಾವ: ಶಿವಚೇತನ. ಶಿವಚೇತನೋಪಾಸನೆ ರೂಪಾರ್ಪಣ ಸಾಧನ. ರೂಪಪ್ರಸಾದ ಪರಿಣಾಮವೇ ಸದಿಚ್ಛಾಶಕ್ತಿ; ಸದ್ವಿದ್ಯಾಕಳೆ.

ಕಣ್ಣು ಬಾಳಿನ ಕಾಮಧೇನು. ಇಲ್ಲಿ ಕಾಮಧೇನು ಪದಕ್ಕೆ ಬರೀ ರೂಢಿಯರ್ಥವಲ್ಲ: ಯೌಗಿಕಾರ್ಥವೂ ಉಂಟು; ಲಕ್ಷ್ಯಾರ್ಥವೂ ಉಂಟು. ಕಾಮ ಕ್ಷೀರಾಗಬಲ್ಲುದು; ನೀರಾಗಬಲ್ಲುದು. ಇವೆರಡಕ್ಕೂ ಕಾರಣವಾಗುತ್ತದೆ ಕಣ್ಣು. ಕಣ್ಣಿಗೂ ಕಾಂಕ್ಷೆಗೂ ನಂಟು. ಕಣ್ಣಿಂಜಲವಾಗಬಾರದು. ಕಣ್ಣಿನಲ್ಲಿ ಹಸಾದತೆ ಹುರಿಗೊಳ್ಳಬೇಕು. ಆ ಹಸಾದತೆಯೇ ಶೈವೀಚೇತನ.

ಚಲುವು ಇಬ್ಬಗೆ: ಒಂದು ರೂಹುಳ್ಳ ಚಲುವು; ಇನ್ನೊಂದು ರೂಹಿಲ್ಲದ ರೂಹು. ರೂಹುಳ್ಳ ರೂಹು ಸಕಲ; ರೂಹಿಲ್ಲದ ರೂಪು ನಿಃಕಲ ಸಕಲ, ಸುರಾಳ. ನಿಃಕಲ ನಿರಾಳ. ಒಂದು ತೋರಿ ಅಡಗುತ್ತದೆ, ಕೆಡುತ್ತದೆ. ಇನ್ನೊಂದು ತೋರದು ಅಡಗದು ಕೆಡದು. ಅದಕ್ಕೆ ರೂಹಿಲ್ಲದಿದ್ದರೂ ಅದು ಎಲ್ಲ ರೂಹುಗಳ ಭಂಡಾರ ಸತ್ಯಸೌಂದರ್ಯ ಅದೆ ಶಿವಲಿಂಗ.

ರಸ ಜಲನಿಷ್ಠವಾಗಿ ರೂಪ ಅಗ್ನಿನಿಷ್ಠವಾಗಿದ್ದರೂ ಪರಸ್ಪರ ಪೂರಕವಾಗಿವೆ. ರುಚಿರಪದ ಇವೆರಡನ್ನೂ ಒಳಗೊಂಡಿದೆ. ರುಚಿರವೆಂದರೆ ರಸವೂ ಅಹುದು, ರೂಪವೂ ಅಹುದು. ಅಂತೆಯೆ ಗುರುಲಿಂಗಕ್ಕೂ ಶಿವಲಿಂಗಕ್ಕೂ ಸನ್ನಿಹಿತ ಸಂಬಂಧ. ಒಂದೇ ಪದಾರ್ಥದಲ್ಲಿ ರುಚಿರೂಹುಗಳೆರಡೂ ಇರುತ್ತವೆ. ರುಚಿ ಗುರುಲಿಂಗಕ್ಕೆಂದು ರೂಪು ಶಿವಲಿಂಗಕ್ಕೆಂದು ನಿತಾಂತವಾಗಿ ನಿರ್ದಿಷ್ಟವಾಗಿದ್ದರೂ ನಿಚಿತವಾಗಿ ಭಿನ್ನಮಾತ್ರವಲ್ಲ. ರುಚಿ ಪ್ರಾಣಲಿಂಗಾರ್ಪಣವಾದಾಗ ಶಿವಲಿಂಗಕ್ಕೆ ಸೇರ ಬಲ್ಲದು; ರೂಪು ಇಷ್ಟಲಿಂಗಾರ್ಪಣವಾದಾಗ ಗುರುಲಿಂಗಕ್ಕೂ ಸೇರಬಲ್ಲದು. ಜಲನಿಷ್ಠವಾಗಿದೆ ಅಗ್ನಿ, ಅಗ್ನಿನಿಷ್ಠವಾಗಿದೆ ಜಲವೆಂಬುದನ್ನು ಯಾರು ಅರಿಯರು?

ರೂಪಾರ್ಪಣದಿಂದ ಹಮ್ಮು ಹಳಚುತ್ತದೆ. ಸ್ವಸ್ವರೂಪ ಪ್ರಜ್ಞೆ ಬುದ್ಧಿಗಳ ಪಡುತ್ತದೆ. ಬೆಳಕಿಲ್ಲದೆ ಕಸಕ್ಕೆ ರುಚಿಬಾರದು ರೂಪುಬಾರದು. ಅಂತೆಯು ರಸವಿಲ್ಲದೆ ಅಥವಾ ರುಚಿಯಿಲ್ಲದೆ ರೂಹು ರೂಪಿತವಾಗದು, ಮನೋಹಾರಿಯಾಗದು.

ರೂಪು ಎರಡು ತೆರ, ವಿಕಾರ ರೂಪು. ಅವಿಕಾರ ರೂಪು. ಅವಿಕಾರ ರೂಪು ಶಿವರೂಪು, ವಿಕಾರರೂಪು ವಿಷಯು. ಅವಿಕಾರ ರೂಪು ಪ್ರಸಾದ: ಅದು ಶಿವಲಿಂಗಾರ್ಪಣವಾಗುತ್ತದೆ. ಆಗ ನೇತ್ರ ಪ್ರಸಾದ್ಯಂಗವಾಗುತ್ತದೆ. ವಿರೂಪ–ಸುರೂಪ

ಭಾವವಳಿಯುತ್ತದೆ, ರೂಪಿಲ್ಲದ ಚಲುವಿನೊಲುಮೆಯುಂಟಾಗುತ್ತದೆ. ರೂಪಿಲ್ಲದ ಚಲುವೆ ಶಿವಲಿಂಗ. ಶಿವಲಿಂಗ ಪ್ರಸಾದವನ್ನು ಪಡೆದ ಪ್ರಸಾದಿ ಊರ್ಧ್ವ ತೇಜಸ್ಕನಾಗುತ್ತಾನೆ. ತಿಳಿಗಣ್ಣನ್ನು ತಳೆಯುತ್ತಾನೆ. ಸ್ವಯಾವಧಾನಿಯಾಗುತ್ತಾನೆ ಪ್ರಸಾದಿಗೆ ನಿರಹಂಭಾವದ ಮನದ ಶುದ್ಧತೆಯು ಅಚ್ಚಪ್ರಸಾದ, ದೈವೀದೃಷ್ಟಿಯ ದೀಪ್ತಿಯೆ ದಿವ್ಯ ಪ್ರಸಾದ. ಅದುವೆ ಆತನ ವಿದ್ಯಾಕಲೆ. ಅದುವೆ ಸೂಕ್ಷ್ಮ ಶಿವಕಳೆ. ಅದು ಕಣ್ತುಂಬಿ ನಿಲ್ಲುತ್ತದೆ. ಆಗ ಬೇರೊಂದು ನೋಟಕ್ಕಿಂಬಿರದು. ತಮದ ತಾಕಲಾಟವಿರದು. ತುದಿಯಿಲ್ಲದ ಸೊಗ ಸಮನಿಸುತ್ತದೆ. ಮಣಿಪೂರ ಮಂಚದ ಮೇಲೆ ಸತ್ಯ ಶಿವ ಸೌಂದರ್ಯ ಸ್ಥಾಪಿತವಾಗುತ್ತದೆ, ಅನಾಹತ (ಹೃದಯ)ಕ್ಕೆ ತನ್ನ ಅಮೃತದ ಕಳೆಯನ್ನು ಕಳಿಸುತ್ತದೆ. ಜೇನು ಮಳೆಯನ್ನು ಕರೆಯುತ್ತದೆ.

ನಾಲಗೆ ಗುರುಲಿಂಗಕ್ಕೆ ಮೀಸಲಾದಂತೆ ನಯನ ಶಿವಲಿಂಗಕ್ಕೆ ಮೀಸಲಾಗುತ್ತದೆ. ಪ್ರಸಾದಿಯ ಮೀಸಲು ಬೇಸರಾಗದು. ಶಿವಲಿಂಗ ಭಾಜನನಾಗುತ್ತಾನೆ ಪ್ರಸಾದಿ. ಶಿವನು ಪ್ರಸಾದಿಗೆ ಪರಮ ಚಿನ್ನೇತ್ರವನ್ನು ಅನುಗ್ರಹಿಸುತ್ತಾನೆ. ಚಿತ್ಕಳೆಯನ್ನು ಅನುಗ್ರಹಿಸುತ್ತಾನೆ. ಆಗ ಆತನ ಕಣ್ಮನಗಳು ಕೆಡುವ ರೂಹುಗಳಿಗೆ ಎಳಸವು. ತೃಪ್ತಿಸ್ವರೂಪ ಪ್ರಸಿದ್ಧ ಪ್ರಸಾದದಲ್ಲಿ ಪರಿಣಾಮಗೊಳ್ಳುತ್ತವೆ.

ಇಚ್ಛಾಶಕ್ತಿಗೆ ಸಂಕಲ್ಪ ವಿಕಲ್ಪಗಳೆಂಬ ಎರಡು ಮುಖಗಳಿವೆ. ಜೀವನದಲ್ಲಿ ಇವುಗಳ ಎಡೆಯಾಟ ಕೆಡೆಯಾಟ ಹೆಚ್ಚು. ಇಂದ್ರಿಯಗಳೆಲ್ಲ ಇಚ್ಛಾನುವರ್ತಿಗಳು. ಬಯಕೆಯ ಬಾಗಿಲು ಕಣ್ಣು, ಕಣ್ಣು ಕಂಡುದನ್ನು ಮನ ಬಯಸುತ್ತದೆ. ಕಣ್ಣು ಒಪ್ಪದ್ದನ್ನು ಮನ ಬೇಡವೆನ್ನುತ್ತದೆ. ಬೇಕೆಂಬುದು ತನ್ನದಾಗಬೇಕೆಂದು ಬಗೆದು ಮಮಕಾರಕ್ಕೆ ಒಳಗಾಗುತ್ತದೆ. ಮಮಕಾರವಿರುವಲ್ಲಿ ಅಹಂಕಾರವಿದ್ದೇ ಇರುತ್ತದೆ. ಅಹಂಕಾರವಿರುವಲ್ಲಿ ಶಿವಲಿಂಗಾನುಗ್ರಹವಿರದು. ಅನುಗ್ರಹವೆ ಪ್ರಸಾದ. ಅದಿಲ್ಲದ ಬಳಿಕ ಪ್ರಸಾದಿಯೆನಿಸದು. ನಿಷ್ಕಲ ನೇತ್ರ ಪಾವಿತ್ರತೆಯೆ ಪ್ರಸಾದ ರೂಪಕ್ಕೆಳಸುವ ಅಕ್ಷಿಗಳಾಗಬಾರದು; ರುದ್ರ (ಶಿವತೇಜ)ನಿಗೆಳಸುವ ರುದ್ರಾಕ್ಷಿಗಳಾಗಬೇಕು.

ರುದ್ರನ ಅಕ್ಷಿಗಳಾಗಿ ಸಮ್ಯಕ್‌ದರ್ಶನ ದೀಪ್ತಿಯನ್ನು ದಿವ್ಯಶಕ್ತಿಯನ್ನು ಪಡೆದ ಪ್ರಸಾದಿಯ ಇಂದ್ರಿಯಗಳು ಇಚ್ಛಾನುವರ್ತಿಗಳಾಗವು; ಅಚ್ಚಪ್ರಸಾದಾನುವರ್ತಿಗಳಾಗುತ್ತವೆ, ವಿಶ್ವವನ್ನು ವ್ಯಕ್ತಿಗಳನ್ನು ಶಿವಸ್ವರೂಪರನ್ನಾಗಿಯೆ ಕಾಣುತ್ತಾನೆ, ಚರಾಚರಗಳಲ್ಲಿ ಶಿವ ಚೈತನ್ಯವನ್ನೆ ಸಂದರ್ಶಿಸುತ್ತಾನೆ. ವ್ಯಕ್ತಿನಿಷ್ಠ ವಾಸ್ತವಶಕ್ತಿಯನ್ನರಿಯುತ್ತಾನೆ. ಭಕ್ತನಾಗಿ ಆಚಾರಸೌರಭವನ್ನು, ಮಾಹೇಶನಾಗಿ ವಿಚಾರಾಮೃತ ರಸವನ್ನು, ಪ್ರಸಾದಿಯಾಗಿ ಶೈವೀ ಸುಂದರ ಸ್ವರೂಪವನ್ನು ಗುರುತಿಸಬಲ್ಲನು: ಆಸ್ವಾದಿಸಬಲ್ಲನು; ಆಘ್ರಾಣಿಸಬಲ್ಲನು.

ಪ್ರಸಾದದ ಪ್ರಸನ್ನಾತ್ಮದ ಮಹಾತ್ಮ್ಯವನ್ನು ಮನವರಿಕೆ ಮಾಡಿಕೊಳ್ಳುತ್ತಾನೆ. ಪ್ರಸಾದಿ, ಮನ್ನಿಸುತ್ತಾನೆ ಪ್ರಸಾದಿ. ಅದರಿಂದಾಗಿ ಆತನ ದೃಷ್ಟಿ ಸಮ್ಯಕ್ ಆಗಿ, ಹಮ್ಮುನೀಗಿ ಹದುಳತೆಯಿಂದ ಬಾಳುತ್ತಾನೆ. ಹಸನಾಗಿ ಬೆಳಗುತ್ತಾನೆ.

ಪ್ರಸಾದಿ ನೋಡುವ ರೂಪ ಕೇವಲ ವರ್ಣರಂಜಿತವಲ್ಲ. ರೀತಿ ನೀತಿಗಳೂ ಸ್ವಭಾವ–ಪ್ರಭಾವಗಳೂ ರೂಪ ಪದಾರ್ಥಗಳಾಗಿವೆ. ಇವನ್ನೂ ನಿರೀಕ್ಷಿಸುತ್ತಾನೆ. ಬಾಹ್ಯರೂಪನ್ನೂ ಶಿವಲಿಂಗಕ್ಕರ್ಪಿಸುವಂತೆ ರೀತಿ-ನೀತಿ ಸ್ವಭಾವ ಪ್ರಭಾವಗಳನ್ನೂ ಶಿವಲಿಂಗಕ್ಕೆ ಸಮರ್ಪಿಸಿ ನಿರಹಂಕಾರಿಯಾಗಿರುತ್ತಾನೆ. ನಿರ್ಭೀದಭಾವವುಳ್ಳವನಾಗು–ತ್ತಾನೆ. ನಿಜಜ್ಞಾನನಿಷ್ಠನಾಗುತ್ತಾನೆ.

ಸಂತೃಪ್ತನಾದ ಪ್ರಸಾದಿಯಲ್ಲಿ ಸ್ಥಲ ಲೋಭಕ್ಕೆ ಇಂಬಿರವುದಿಲ್ಲ. ಪ್ರಸಾದ ಸೂಸುತ್ತಿರುವಲ್ಲಿ ವ್ಯರ್ಥವಾಗುತ್ತಿರುವಲ್ಲಿ ಮಾತ್ರ ಲೋಭಗುಣವನ್ನು ತೋರುತ್ತಾನೆ. ಉಂಡು ಉಳಿಸನು; ಕೊಂಡು ಮರುಳಸು. ಕೊಟ್ಟು ಮರುಗನು. ತುಂತುರ ಹಾರಿಸನು ದ್ರವಗುಂದಿಸನು. ಲಿಂಗ ನಿರೀಕ್ಷಣೆಯಲ್ಲಿ ತಪ್ಪನು. ಮಂತ್ರಧ್ಯಾನ ಮರೆಯನು. ಪ್ರಸಾದ ವಾಗಲಿ ಪಾದೋದಕವಾಗಲಿ ಯಾವ ಬಗೆಯಲ್ಲಿಯೂ ಹೊರಗೆ ಸೂಸದಂತೆ ಎಚ್ಚರ ವಹಿಸುವನು.

ಅಗ್ನಿಯಲ್ಲಿ ರೂಪೋತ್ಪಾದನ ಶಕ್ತಿಯಿದೆ. ಅಂತೆಯೆ ರೂಪಗುಣ ಅದಕ್ಕೆ ನಿರ್ದೇ ಶಿತವಾಗಿದೆ. ರೂಪದಿಂದ ಸರ್ವಸಾಕಾರಗಳು, ಸಾಕಾರ ರೂಪಗಳನ್ನು ಕಂಡು ವಿಕಾರ ವಾಗದಿರುವುದೆ ಪ್ರಸಾದಿಯ ಪ್ರಮುಖ ಗುಣಸಂಪತ್ತು. ಆತನ ಭೋಗವೆಲ್ಲವೂ ಲಿಂಗ ಭೋಗೋಪಭೋಗ ಪ್ರಸಾದ ಭೋಗದಿಂದ ಪ್ರಸನ್ನಭಾವಿಯಾಗಿರುತ್ತಾನೆ.

ಶಿವಕ್ರಿಯೆ ಶಿವಜ್ಞಾನ ಶಿವೇಚ್ಛೆಯುಳ್ಳವನೆ ಪ್ರಸಾದ್ಯಂಗ. ಆತನಿಗೊಲಿದಿರುತ್ತದೆ ಶಿವಲಿಂಗ. ಶಿವಲಿಂಗಾನುಗ್ರಹದಿಂದ ನೇತ್ರಾಂಗದ ಅಹಂಕಾರಕರಣದ ವಿಕಾರಗಳು ವಿನಷ್ಟವಾಗಿರುತ್ತವೆ, ದಿವ್ಯರೂಪದ ಸರ್ವ ಶಿವರೂಪದ ದಾರ್ಶನಿಕತೆ ಸಂಭವಿಸು ತ್ತದೆ. ಪ್ರಸಾದ ಪರಮ ಸ್ವರೂಪವೆಂಬ ಅವಧಾನ ಅಳವಟ್ಟಿರುತ್ತದೆ. ದಾಸೋ ಹಂಭಾವಿಯಾಗಿರುತ್ತಾನೆ.

೪

ಅನಾಹುತ ಸ್ಪರ್ಶಾನುಭೂತಿಯನ್ನು ಅಳವಡಿಸಿಕೊಂಡವನೆ ಪ್ರಾಣಲಿಂಗಿ. ಪ್ರಣವ ಸ್ಪರ್ಶವೆ ಅನಾಹತಸ್ಪರ್ಶ. ಪ್ರಣವ ಅಭಿನ್ನ ಚೇತನ. ಅದೇ ಅಂತರಾತ್ಮ. ಆ ಅಂತರಾತ್ಮ ಸ್ಪರ್ಶವೆ ಸಮರ್ಪಕವಾದ ಸಾರ್ಥಕವಾದ ಅನಾಹತ ಸ್ಪರ್ಶ. ಅದ ರಿಂದ ಯಾವ ವಾಯು ವಿಕಾರವಿರದು. ಅದು ಪ್ರಾಣಕ್ಕೆ ಪ್ರಾಣವಾಗಿ ಪಂಚವಾಯು ದಶವಾಯುಗಳ ಮೂಲಚೇತನವಾಗಿದೆ. "ಹಂಸ" ಭಾವ 'ಸೋಽಹಂ' ಭಾವಗಳನ್ನು ಪಾಳಿಸಿ 'ಓಂ' ಭಾಗವನ್ನು ಬಲಿಸಿ ಪ್ರಾಣವನ್ನು ಪ್ರಣವಮಯವಾಗಿಸುತ್ತಾನೆ ಪ್ರಾಣ ಲಿಂಗಿ. ಅದರ ಬಲದಿಂದ ವಾಯುಸ್ಪರ್ಶ. ವಾಯುವಿಕಾರಗಳನ್ನು ಮಾರ್ಪಡಿಸಿ ಕೊಂಡಿರುತ್ತಾನೆ, ಆಹತಸ್ಪರ್ಶಗಳಲ್ಲಿ ವಾಯುಸ್ಪರ್ಶವೆ ಸೂಕ್ಷ್ಮವಾದುದು; ಚರಮ ವಾದುದು. ಆಹತವನ್ನೂ ಅನಾಹತವನ್ನಾಗಿಸಿಕೊಂಡಿರುತ್ತಾನೆ. ಅನಾಹತಸ್ಪರ್ಶ ಹೃದಯ ಪ್ರಧಾನವಾದುದು. ಅನುಭಾವ ಗಮ್ಯವಾದುದು. ಪ್ರಣವಸ್ಪರ್ಶವೆ

ಪ್ರಾಣಲಿಂಗಸ್ಪರ್ಶ. ಅದುಳ್ಳವನೆ ಪ್ರಾಣಲಿಂಗಿ. ಶ್ವಾಸದಲ್ಲಿ ಪ್ರಣವರೂಪ ಪರಮಹಂಸ ನಿಃಶ್ವಾಸದಲ್ಲಿ ಪಂಚಾಕ್ಷರ ಮಂತ್ರ ಆಡುತ್ತವೆ. ಇದರಿಂದ ತ್ವಕ್ಕಿನ ವಿಕಾರವಳಿಯುತ್ತದೆ. ಮನದ ಮೋಹವಿಲ್ಲದಾಗುತ್ತದೆ.

ಆದಿಶಕ್ತಿ ಶಾಂತಿ ಕಲೆಯುಳ್ಳ ಚರಲಿಂಗವೆ ಸ್ಪರ್ಶಾಧಿಷ್ಠಾನ ಚೇತನ; ಪ್ರಾಣಾಧಿಷ್ಠಾನ ಚೇತನ. ಪ್ರಣವಾತ್ಮಕ ನಿತ್ಯಚೇತನ, ಅದು ತ್ವಕ್ಕಿನಲ್ಲೆಲ್ಲ ಸುಳಿಯುತ್ತದೆ. ಪ್ರಾಣವನ್ನು ಸುಳಿಯು ಹೆಚ್ಚುತ್ತದೆ. ಸುಳಿವ ಶಕ್ತಿಯನ್ನು ಅನುಗ್ರಹಿಸುತ್ತದೆ. ಆದರಿಂದ ಅದು ಚರಲಿಂಗ.

ಪ್ರಾಣಲಿಂಗಿ ಪವನ ತತ್ವ ಪ್ರವೀಣ. ಪವನ ತತ್ವಾತೀತನೂ ಆಹುದು. ವಾಯು ಗುಣಕ್ಕೆ ಒಳಗಾಗುವವನಲ್ಲ. ವಾಯು ಆತನ ಅಧೀನ. ತನ್ನ ಮನಃಪಟವನ್ನು ವಾಯು ಮಂಡಲದ ಮೇಲೆ ಹಾರಿಸಿ ನಿಲ್ಲಿಸಬಲ್ಲ. ಮನಃಪಟಕ್ಕೆ ಕಟ್ಟಿದ ದಾರ ನಿಷ್ಠೆ, ನಿಷ್ಠೆಯ ಗಟ್ಟಿತನದಿಂದ ಹಾರಿಸುವ ಎಚ್ಚರಿಕೆಯಿಂದ ಮನಃಪಟವನ್ನು ಮೇಲು ಮೇಲಕ್ಕೆ ಹಾರಿಸುತ್ತಾನೆ. ಪ್ರಾಣಪವನಕ್ಕೆ ಪ್ರಾಣವಾದ ಚೇತನಾನುಭವವನ್ನು ಪಡೆಯುತ್ತಾನೆ. ಪ್ರಾಣದ ಒತ್ತಡ ಪ್ರಾಣದ ಆದರಾಭಿಮಾನ ಪ್ರಾಣಗುಣಗಳಿಗೆ ಮನಸ್ಸು ಒಳಗಾಗುವದಿಲ್ಲ. ಆತನ ಆ ಮನಃಪಟ ನಿರ್ವಾತ ಪ್ರದೇಶದಲ್ಲಿರುವದರಿಂದ ನಿಶ್ಚಂಚಲವಾಗಿರುತ್ತದೆ. ಆತನ ಆ ಅನುಭಾವ ಜ್ಯೋತಿ ಆರದಂತಿರುತ್ತದೆ. ನಿಷ್ಠೆ ಅವಧಾನ ರೂಪ ಬಾಲಂಗೋಚಿಯು ಮನಃಪಟಕ್ಕೆ ಇರುವದರಿಂದ ಅದು ಅಡ್ಡತಿಡ್ಡಾಗಿ ಹರಿವಾಡದು. ಪ್ರಾಣಲಿಂಗಾನುಭವದಿಂದ ಪ್ರಾಣಲಿಂಗಾನುಸಂಧಾನದಿಂದ ಮೇಲಕ್ಕೇರುವ ಶಕ್ತಿ ಸಂಭವಿಸುತ್ತದೆ. ಅಲುಗದೆ ಅತ್ತಿತ್ತ ಚಲಿಸದೆ ಮನ ಮೇಲೇರಿ ಘನಮನವಾಗುತ್ತದೆ. ಚರಲಿಂಗ ಸಂಗಸುಖದಲ್ಲಿರುತ್ತದೆ. ಪ್ರಾಣದ ಜಡತೆಯನ್ನು ಕಳೆದುಕೊಂಡು ಮನ ಚೇತನ ಸ್ವರೂಪಕ್ಕೆ ಸಲ್ಲುವಂತಾಗುತ್ತದೆ. ಆ ವಾಯುಮಂಡಲದ ಮೇಲೆ ಹಾರಿನಿಂತ ಮನಃಪಟದೊಳಗಿನ ಅನುಭಾವ ಜ್ಯೋತಿ ಕುಂದದೆ ನಂದದೆ ಉಜ್ವಲವಾಗುತ್ತದೆ.

ಆರೋಗ್ಯಕ್ಕೆ ಬೆಳಕು ಬೇಕಾದಂತೆ ಗಾಳಿಯು ಬೇಕು. ಶುದ್ಧ ವಾಯು ತೀರ ಅಗತ್ಯ. ಅಂತೆಯೆ ಅಂತರಂಗದಲ್ಲಿ ಪವಿತ್ರ ಪ್ರಾಣವಾಯು ಇದ್ದಾಗಬೇಕು. ಇದರಿಂದ ಮನ ಶುದ್ಧಿಯಾಗುತ್ತದೆ. ಪ್ರಾಣಕ್ಕೂ ಮನಕ್ಕೂ ಸ್ವಾಯತ್ತ ಸಂಬಂಧ. ವಾಯು ತತ್ವದಿಂದ ಸ್ಪರ್ಶೋತ್ಪತ್ತಿ. ಸ್ಪರ್ಶ ತ್ವಕ್ ವಿಷಯ. ಸ್ಪರ್ಶದಿಂದ ಮನಸ್ಸಿನ ಮೇಲೆ ಪರಿಣಾಮವಾಗುತ್ತದೆ. ಅಶುದ್ಧಸ್ಪರ್ಶದಿಂದ ಮನಕ್ಕೆ ಕಾಳಿಕೆಯುಂಟಾಗುತ್ತದೆ. ಸ್ಪರ್ಶ ಪ್ರಸಾದವಾದರೆ ಮನ ಘನವಾಗುತ್ತದೆ, ಸ್ಪರ್ಶ ಪ್ರಸಾದಕ್ಕೆ ಚರಲಿಂಗ ಕಾರಣ, ಚರಲಿಂಗ ಸಾಕ್ಷಾತ್ಕಾರಕ್ಕೆ ಪ್ರಾಣಲಿಂಗ್ಯಂಗನ ಅನುಭವ ಕಾರಣ. ಅವಧಾನ ಅನುಭವಗಳಿಂದ ಪ್ರಸಾದಿಯೆ ಪ್ರಾಣಲಿಂಗಿಯಾಗುತ್ತಾನೆ. ತ್ವಕ್ಕು ಹಸ್ತಗಳ ಸಂಯಮನ ಪ್ರಾಣಲಿಂಗಿಯದು. ರೂಪು–ರುಚಿ–ತೃಪ್ತಿಗಳಲ್ಲಿ ಅನುಭವ ಅಳವಟ್ಟಿರುತ್ತದೆ. ಶಿವನ ಅನುಭವದಿಂದ ಮನದ ಘನತೆ ಹೆಚ್ಚುತ್ತದೆ. ಆಹತ ಅನಾಹತ ಭೇದವಳಿಯುತ್ತದೆ. ಆಹತ ಸ್ಪರ್ಶವಾದರೂ ಮನದ ವಿಕಾರವುಂಟಾಗದು.

ಮನಸಿನ ಚಾಂಚಲ್ಯ ಶೈವೀ ಅನುಭವದಿಂದ ತೊಲಗುತ್ತದೆ. ಸಂಕಲ್ಪ ವಿಕಲ್ಪ ತೊಲಗುತ್ತವೆ. ಅನುಭಾವ ಸ್ಪರ್ಶ ಅದೊಂದು ಮಹಾಪುರುಷಸ್ಪರ್ಶ. ಸ್ಪರ್ಶದ ಪರಿಣಾಮ ಅಷ್ಟಿಷ್ಟಲ್ಲ. ಶ್ರೀಗುರುದೇವನ ಸ್ಪರ್ಶದಿಂದ ತ್ರಿವಿಧ ತನುಭಾವ ನಷ್ಟವಾಗಿ ಲಿಂಗತ್ವ ಪ್ರಾಪ್ತಿಯಾಗುತ್ತದೆ. ಹಸ್ತ ಮಸ್ತಕ ಸಂಯೋಗದಿಂದ ಶಿಷ್ಯನಲ್ಲಿ ಒಂದು ಬಗೆಯ ವಿದ್ಯುಲ್ಲತೆಯ ಸಂಚಾರವಾಗುತ್ತದೆ. ಚಿತ್ಕಳೆ ಜಾಗ್ರತವಾಗುತ್ತದೆ. ಬರೀ ಹಸ್ತಸ್ಪರ್ಶವೆ ಸ್ಪರ್ಶವಲ್ಲ. ನೋಟಸ್ಪರ್ಶ ವಾಕ್‌ಸ್ಪರ್ಶ ಹಾರ್ದಿಕ ಸ್ಪರ್ಶಗಳಿವೆ ಹಾರ್ದಿಕ ಸ್ಪರ್ಶ ಅನಾಹತ ಸ್ಪರ್ಶ. ದರ್ಶನ ಪರಿಣಾಮಕ್ಕಿಂತ ಸ್ಪರ್ಶನ ಪರಿಣಾಮ ತೀವ್ರವಾದುದು. ಸ್ಪರ್ಶ ಪ್ರಸಾದದಿಂದ ಶಾಂತಿಕಳೆ ಸಮನಿಸುತ್ತದೆ. ಶಾಂತಿಕಳೆ ಸಮನಿಸಿದಲ್ಲಿ ಹಸ್ತಗುಣ ಹೆಚ್ಚುತ್ತದೆ: ಪರುಷವಾಗಿ ಪರಿಣಮಿಸುತ್ತದೆ. ಸಚ್ಚಿದಾನಂದ ಸ್ವರೂಪನಾದ ಶ್ರೀ ಗುರುವಿನ ಪಾದಸ್ಪರ್ಶದಿಂದ ಹೃದಯ ಶ್ರೀಮಂತಿಕೆಯುಂಟಾಗುತ್ತದೆ. ಮನ ಮೋಹಜಾಲದಿಂದ ಹೊರಬರುತ್ತದೆ; ಅಂತರ್ಮುಖಿಯಾಗುತ್ತದೆ. ಚರಲಿಂಗದ ಅನಾಹತ ಸ್ಪರ್ಶಸುಖವನ್ನು ಅನುಭವಿಸುತ್ತದೆ. ಮೀರಿದ ಕ್ರಿಯೆಯಲ್ಲಿ ಮುಂದುವರಿಯುತ್ತದೆ. ಅನುಭವಾಚರಣೆ ಮೀರಿದ ಕ್ರಿಯೆ. ಪ್ರಾಣ ಲಿಂಗಾರ್ಚನೆ ಮೀರಿದ ಕ್ರಿಯೆ. ಇದರಿಂದ ಪ್ರಾಣಲಿಂಗದ ಪ್ರತಿಭಾನ್ವಿತ ಚೇತನತೆಯುಂಟಾಗುತ್ತದೆ. ಪ್ರಾಣವು ತನ್ನ ಪೂರ್ವಾಶ್ರಯ ಪವನ ಜಡತೆಯನ್ನು ನೀಗುತ್ತದೆ. ಲಿಂಗ ಚೇತನವನ್ನು ತಳೆಯುತ್ತದೆ. ಉನ್ನತಿಕೆಯನ್ನು ಪಡೆಯುತ್ತದೆ.

ಕರಸ್ಥಲದಲ್ಲಿ ಕ್ರಿಯಾಲಿಂಗ ಪೂಜೆ, ಉರಸ್ಥಲದಲ್ಲಿ ಪ್ರಾಣಲಿಂಗ ಪೂಜೆ. ಇದರ ಪರಿಕರ ಬೇರೆ. ಅವು ಆಂತರಿಕವಾದವು. ಮನದ ಹಸ್ತದಿಂದ ಮನನ ಕ್ರಿಯೆಯಿಂದ ನಿರುಪಾಧಿಕ ವಿಭೂತಿಯಿಂದ ಭಾವ ಪುಷ್ಪದಿಂದ ಅರ್ಚನೆ ಸಿಗುತ್ತದೆ. ವಿರತಿಗಂಧವನ್ನು ಪೂಸಿ, ಅನುಭೂತಿ ಆರತಿಯನ್ನು ಬೆಳಗಲಾಗುತ್ತದೆ. ಸದ್ಗುಣಾಕ್ಷತಿಯ ನೀಡಲಾಗುತ್ತದೆ. ಇದರಿಂದ ಭೋಗಾಂಗ ಪೂರ್ಣ ಜಾಗ್ರತವಾಗುತ್ತದೆ, ಸಂಯಮನ ಸಂಪನ್ನವಾಗುತ್ತದೆ.

ಭಕ್ತ ತ್ಯಾಗ ಪ್ರಧಾನನು, ಮಾಹೇಶ ತ್ಯಾಗ – ಭೋಗ ಸಮನ್ವಯನು, ಪ್ರಸಾದಿ ಭೋಗ ಪ್ರಧಾನನು. ಪ್ರಾಣಲಿಂಗಿ ಯೋಗ ಪ್ರಧಾನವುಳ್ಳವನು, ಮನಃಕುಂಡಲಿನಿಯನ್ನು ಉನ್ಮನಿಯನ್ನಾಗಿ ಶಕ್ತಿಶಾಲಿನಿಯನ್ನಾಗಿಸುತ್ತಾನೆ. ಪ್ರಸಾದಿ ನಿರಹಂಕಾರಿಯಾದರೆ ಪ್ರಾಣಲಿಂಗಿ ನಿಃಸ್ವಾರ್ಥಿ ನಿಃಸ್ಪೃಹಿಯಾಗಿರುವನಲ್ಲದೆ ಮಿಗಿಲಾಗಿ ನಿಸ್ಸಂಗಿಯಾಗಿರುತ್ತಾನೆ. ಚಿತ್ತವೃತ್ತಿಗಳನ್ನು ನಿರೋಧಿಸಿ ನಿಷ್ಪತ್ತಿಗೊಳಿಸಿರುತ್ತಾನೆ. ಮನದ ಪೂರ್ವಾಶ್ರಯವಾದ ವಾಯು ತತ್ವವನ್ನು ಶುದ್ಧವಿಸಿ ನಿಶ್ಚಂಚಲಗೊಳಿಸಿಕೊಂಡಿರುತ್ತಾನೆ. ಕೆಳಕ್ಕೆ ಹೊರಕ್ಕೆ ಹರಿಯದಂತೆ ಸ್ತಂಭನ ಮಾಡಿ ಊರ್ಧ್ವಕ್ಕೇರಿಸಿ ವಿಶುದ್ಧಿಗೆ ಸೇರಿಸುತ್ತಾನೆ. ಮನಸ್ಸಿನ ಮೇಲೆ ಮಾಸಿ ಹೋಗದಂತಹ ಮಂಗಳಕರ ಮಹಾ ದೈವೀ ಸಂಸ್ಕಾರವನ್ನುಂಟು ಮಾಡುತ್ತಾನೆ. ಸ್ಥಿರ ಮನಸ್ಕನಾಗಿ ನಿತ್ಯತೆಗೇರುತ್ತಾನೆ. ನಿರಂತರಾನುಭೂತಿಯುಳ್ಳವನಾಗುತ್ತಾನೆ. ಆದ್ಯಂತ ರಹಿತನೆನಿಸುತ್ತಾನೆ.

ವಾಯು ಜೀವನದಲ್ಲಿ ಆದ್ಯಂತಗಳಿವೆ. ಅಂದರೆ ಹುಟ್ಟು ಸಾವುಗಳಿವೆ. ವಾಯುವಿಗೆ ವಾಯುವಾದ ಪ್ರಾಣಲಿಂಗ ಜೀವನದಲ್ಲಿ ಆದ್ಯಂತಗಳಿಲ್ಲ, ಲಿಂಗವೆ ಪ್ರಾಣವಾದ ಪ್ರಾಣ ಲಿಂಗಿಗೆ ಕಾಲಾವಚ್ಛಿನ್ನತೆ ದೇಶಾವಚ್ಛಿನ್ನತೆಗಳಿಲ್ಲ.

ಪ್ರಾಣಲಿಂಗಿಯ ಸ್ಪರ್ಶ ದೈಹಿಕವಲ್ಲ. ಐಂದ್ರಿಕವಲ್ಲ. ಪ್ರಾಣಭಾವ ಮುನ್ನಿಲ್ಲ. ಜೀವಾತ್ಮ ಭಾವವಿಲ್ಲ, ಕಾಯ ಜೀವರ ಬೆಸುಗೆಯನ್ನು ಬಿಚ್ಚಿ ಅಂಗಲಿಂಗರ ಬೆಸುಗೆಯನ್ನು ಬೆಳಸಿ ಸ್ವಾಯತ್ತಗೊಳಿಸಿರುತ್ತಾನೆ. ಲಿಂಗದ ನಿತ್ಯತೆಯನ್ನು ಅರಿತು ನಿರ್ವಾಣಿಯಾಗಿರು ತ್ತಾನೆ, ನಿರ್ಲೇಪನಾಗಿರುತ್ತಾನೆ.

ಸ್ವಯಾನುಭವದ ಪರಿಣಾಮ ಪ್ರಸಾದದಲ್ಲಿ ಪರವಶನಾದ ಪ್ರಾಣಲಿಂಗಿಯಲ್ಲಿ ಸ್ಥೂಲಸ್ಪರ್ಶ ಮೋಹವಿರದು. ಮನ ಸೂಸದಂತೆ ಮಾಸದಂತೆ ನೋಡಿಕೊಳ್ಳುವನು. ಹೊರಗಿನ ವಾತಾವರಣದಲ್ಲಿರುವ ಪ್ರಾಣ ವಾಯುವನ್ನು ಪ್ರಣವಮಯಿಯನ್ನಾಗಿ ಸ್ವೀಕರಿಸುತ್ತಾನೆ ಮತ್ತು ಪ್ರಣವಾತ್ಮಕ ಪ್ರಾಣ ಲಿಂಗದಲ್ಲಿಯೆ ಪೂರ್ಣ ಸತ್ವವನ್ನು ಪಡೆಯುತ್ತಾನೆ, ಸ್ವಯಾನುಭಾವಿಯಾಗಿರುತ್ತಾನೆ. ಆ ಪ್ರಣವನಾದಾನುಸಂಧಾನಿಯಾ ಗಿರುತ್ತಾನೆ. ಆತನ ಆ ಹೃದಯವೀಣೆ ಪ್ರಣವದ ಅನಾಹತನಾದದಿಂದ ಮಧುರವಾಗಿ ರುತ್ತದೆ. ಅದಕ್ಕೆ ಆತನ ನರಗಳೇ ತಂತಿಗಳಾಗಿರುತ್ತವೆ. ಅವನ್ನು ಮಿಡಿದು ನುಡಿಸುವ ಚೇತನ ಚರಲಿಂಗವಾಗಿದೆ. ಆ ಪರಮ ಪ್ರಣವದ ಇಂಚರದಲ್ಲಿ ಪ್ರಾಣಲಿಂಗಿ 'ಕೀಟ ಭ್ರಮರ ಯೋಗ'ವನ್ನು ಪಡೆದಿರುತ್ತಾನೆ.

೫

ಆಕಾಶಕಾಯ ಶರಣ. ಅಂತೆಯೆ ಆತನು ಆಕಾಶದಂತೆ ಎತ್ತರವಾಗಿ ಬಿತ್ತರವಾಗಿ ಬಾಳಬಲ್ಲನು; ಬಾಳುತ್ತಾನೆ. ಅಲ್ಲದೆ ಆತನದು ಆಗಸ ಶುದ್ಧಿ. ಮೋಡ ಮುಸುಗಿದರೂ ಕೆಡದ ಹಸನತೆ! ಆತನದು ಕೊರತೆಯಿಲ್ಲದ ಬದುಕು. ವಿಶುದ್ಧ ವಿಶ್ವಪ್ರೇಮಿ, ವಿಶಾಲ ಜೀವಿ, ಸಕಲಜೀವ ಸಮಭಾವಿ. ವಿಶುದ್ಧಿಚಕ್ರನಿವಾಸಿ. ಶಬ್ದಪ್ರಸಾದ ಮೋಹಿ. ಪೂರ್ಣ ಪ್ರಸಾದ ಚೇತನ. ವ್ಯೋಮಾಂಗನಾದರೂ ವ್ಯೋಮಾಂಗದ ಹಂಗಿಗನಲ್ಲ. ಓಂಕಾರದ ವಾಚ್ಯತ್ವವನ್ನು ನಿಷ್ಪತ್ತಿಗೊಳಿಸಿದಾತನು ಪಶ್ಯಂತಿ ಮಧ್ಯಮೆ ವೈಖರಿಗಳಿಗೆ ಮೂಲವಾದ ಪರಾವಾಣಿಯ ಸಾಕ್ಷಾತ್ಕಾರದಿಂದ ಪರಿಣಾಮಗೊಂಡವನು. ಎಲ್ಲದರೊಳಗಿದ್ದು ಇಲ್ಲ ದಂತೆ ಇರುವವನು. ವ್ಯೋಮ ತತ್ತ್ವ ವಿಜ್ಞಾನಿ, ಶ್ರವಣ ಸೂಕ್ಷ್ಮತೆಯುಳ್ಳವನು. ಪ್ರಸಾದ ಚೇತನ ಚಿತ್ಪ್ರಕಾಶವುಳ್ಳವನು. ಮಾತನ್ನು ಮಂತ್ರಮಯವಾಗಿಸಿಕೊಂಡಿರು ವನು.

ಪರಾಶಕ್ತಿ ಶಾಂತ್ಯತೀತ ಕಲೆಯುಳ್ಳ ಪ್ರಸಾದಲಿಂಗವೆ ಶಬ್ದ ಮತ್ತು ಶ್ರವಣಾಧಿ ಷ್ಠಿತ ಚೇತನ, ಜ್ಞಾನಾಧಿಷ್ಠಿತ ಚೇತನ. ಅವಾಚ್ಯ ಪ್ರಣವಪೂರ್ಣ ಚೇತನ. ಅದು ವಿಶುದ್ಧಿಯಲ್ಲಿ ನೆಲಸಿ ನಳನಳಿಸುತ್ತದೆ. ಜ್ಞಾನ ಜ್ಞಾತೃಗಳನ್ನು ಸಂದಿಲ್ಲದಂತಾಗಿಸುತ್ತದೆ. ಆನಂದಿಸುತ್ತದೆ. ಅಂತೆಯೆ ಅದು ಪ್ರಸಾದಾತ್ಮಕವಾದುದು. ಪ್ರಸನ್ನ ಸ್ವರೂಪವಾದುದು.

ಶರಣನು ವ್ಯೋಮತತ್ತ್ವದಂತೆ ವಿಭು. ಅಂದರೆ ಅವನ ಆ ನಡೆನುಡಿಗಳಿಗೆ ತೆರಹಿಲ್ಲ. ಅನುಭವ ಆನಂದಗಳಿಗೆ ತೆರಹಿಲ್ಲ. ಆಚಾರ ವಿಚಾರಗಳಿಗೆ ಸೀಮೆಯಿಲ್ಲ. ಬಾಳು ಬದುಕಿಗೆ ಸೀಮೆಯಿಲ್ಲ. ಸುಶಬ್ದ ಪ್ರಸಾದ ಪರಿಣಾಮದಿಂದ ಶಾಂತ್ಯತೀತಕಳಾತ್ಮಕ ಪ್ರಸನ್ನಚೇತನನಾಗಿರುತ್ತಾನೆ. ಆದರಲ್ಲಿಯೆ ಆತನು ಅವಿರಳಶರಣಾಗತಿಯನ್ನು ಸನ್ನಿಹಿತ ಗತಿಯನ್ನು ಪಡೆದಿರುತ್ತಾನೆ. ಆತನ ಶ್ರವಣೇಂದ್ರಿಯ ಮಾತ್ರ ಪ್ರಸಾದ ಲಿಂಗದಲ್ಲಿ ಪರವಶತೆಯನ್ನು ಪಡೆಯದೆ ಜತೆಗೆ ಆತನ ತ್ವಕ್ಕು ಪ್ರಸಾದಲಿಂಗ ಅಂದರೆ ಸುಶಬ್ದ ಪ್ರಸಾದದ ಅನಾಹತ ಸ್ಪರ್ಶಾನಂದದಲ್ಲಿ, ಆತನ ನೇತ್ರ ಅದರ ರೂಹಿಲ್ಲದ ರೂಹಿನಲ್ಲಿ, ಆತನ ಜಿಹ್ವೆ ಆ ಸುಶಬ್ದ ಪ್ರಸಾದ ಚೇತನ ರಸಾನಂದದಲ್ಲಿ, ಆತನ ಘ್ರಾಣ ಆ ಸುಶಬ್ದ ಪ್ರಸಾದ ಪರಿಮಳದಲ್ಲಿ ತಲ್ಲೀನವಾಗಿರುತ್ತವೆ. ತಮ್ಮ ತನವಾದ ಅಂಗತ್ವದಿಂದ ಲಿಂಗತ್ವಕ್ಕೆ ಸನ್ನಿಹಿತವಾಗಿರುತ್ತವೆ. ಆತನ ಆ ಚಿತ್ತ ಬುದ್ಧಿ ಅಹಂಕಾರ ಮನ ಜ್ಞಾನಗಳು ಪ್ರಸಾದಾ ಚಾರದಿಂದ ಪ್ರಸಾದ ವಿಚಾರದಿಂದ ಪ್ರಸಾದಾವಧಾನದಿಂದ ಪ್ರಸಾದಾನುಭಾವದಿಂದ ಪ್ರಸಾದಾನಂದದಿಂದ ತೆರಹಿಲ್ಲದಂತಾಗಿರುತ್ತವೆ. ಆ ಸಾತಿಶಯಶೈವೀ ಸುಖದ ಸುಗ್ಗಿಯಲ್ಲಿ ಹಿಗ್ಗಿ ತೆರಹಿಲ್ಲದಂತಾಗುತ್ತವೆ. ಬಿಂದು ಸಿಂಧುವಿನಲ್ಲಿ ಸೇರಿ ಸಿಂಧುವಾದಂತಾಗುತ್ತವೆ. ಅದುವೆ ತುರಿಯಾತೀತ ಶಾಂತ್ಯತೀತ ಸ್ಥಿತಿ.

ಹಮುಳತೆಗೆ ಬೆಳಕು ಗಾಳಿಗಳಂತೆ ಶುದ್ಧ ಶಬ್ದವೂ ಅವಸರ. ಮಂತ್ರನಾದ ಅದೊಂದು ಅಲೌಕಿಕ ಶಕ್ತಿ. ಹೃದಯದ ಅಂತರಾಳದಿಂದ ಅದು ಚಿನ್ನಾದವಾಗಿ ಹೊಮ್ಮಿ ದಲ್ಲಿ ಅಪೂರ್ವ ಪರಿಣಾಮವುಂಟಾಗುತ್ತದೆ. ಅಮೃತತ್ವವೊದಗುತ್ತದೆ. ಮಧುರ ಸ್ವರವನ್ನು ಕೇಳಿ ಹಸುಗಳು ಹೆಚ್ಚು ಹಾಲನ್ನು ಕರೆಯುತ್ತವೆ, ಪಚ್ಚೆ ಪೈರುಗಳು ಹೆಚ್ಚು ಬೆಳೆಯುತ್ತವೆ, ಹೆಚ್ಚು ಫಲಿಸುತ್ತವೆ. ನಾದಸ್ಪಂದನ ಅಂತರಂಗ ವಿಕಾಸಕ್ಕೆ ಹೆಚ್ಚು ಸಹಾಯಕ. ಆದರಿಂದ ಶರಣನ ವೈಜ್ಞಾನಿಕ ಅನುಭಾವಿಕ ಸಾಮರ್ಥ್ಯ ಬೆಳೆದು ಬರುತ್ತದೆ. ನಾದ ಜೀವನಕ್ಕೆ ಸನ್ನಿಹಿತ ಸಂಬಂಧವುಳ್ಳುದು.

ಆಗಸ ತತ್ತ್ವದಿಂದ ಶಬ್ದೋತ್ಪತ್ತಿ, ಶಬ್ದ ಶ್ರವಣವಿಷಯ, ಶ್ರವಣದಿಂದ ಜ್ಞಾನೋದಯುವಾಗುತ್ತದೆ. ಅಂತಃಕರಣ ಜಾಗ್ರತವಾಗುತ್ತದೆ. ಶಬ್ದಪ್ರಸಾದಕ್ಕೆ ಪ್ರಸಾದಲಿಂಗ ಮೂಲಕಾರಣ. ಪ್ರಸಾದಲಿಂಗವು ಅಳವಡಲು ಶರಣಾಂಗನ ಆನಂದ ಭಕ್ತಿ ಕಾರಣ. ಅನುಭವಾನಂದದಿಂದ ಪ್ರಾಣಲಿಂಗಿಯೆ ಶರಣನಾಗುತ್ತಾನೆ. ಶ್ರವಣ ವಚನ(ವಾಕ್ಕು)ಗಳ ಸಂಯಮನ ಶರಣನದು. ಆದರಿಂದ ಆತನ ಅರಿವು ಕ್ರಿಯೆಗಳು ಘನವಾಗುತ್ತವೆ. ಸರ್ವಶೀಲ ಸಂಪನ್ನತೆಯುಂಟಾಗುತ್ತದೆ. ಪ್ರಸಾದಾನಂದ ಪ್ರಾಪ್ತವಾ ಗುತ್ತದೆ. ಪರಾಶಕ್ತಿ ಪ್ರವೃದ್ಧಿಸುತ್ತದೆ. ಭಕ್ತನ ಹೃದಯ ಹಾಲಾಗಿದ್ದರೆ, ಶರಣನ ಹೃದಯ ಕಂಪು ತುಪ್ಪಾಗಿರುತ್ತದೆ.

ಅರಿವಿನ ನೆಲೆ ಪ್ರಸಾದ ಲಿಂಗ. ಪ್ರಾಸಾದಿಕ ಕಲೆಯುಳ್ಳುದ್ದೂ ಆಗಿದೆ. ಅಂತಃಕರಣ ವನ್ನು ಬೆಳಗುವ, ಬೆಳಗಿ ನಲಿಸುವ ಶಕ್ತಿ ಅದಕ್ಕಿದೆ, ನಿರ್ಲಿಪ್ತನನ್ನಾಗಿಸುತ್ತದೆ. ನಿಶ್ಚಿಂತನ ನ್ನಾಗಿಸುತ್ತವೆ. ಪರತತ್ತ್ವಸ್ವರೂಪ ಪ್ರಸಾದಲಿಂಗ. ಪ್ರಸಾದಲಿಂಗಾರಾಧನೆ ಅಂತಃ

ಕರಣಕ್ಕೆ ಉತ್ತಮ ಚಿಕಿತ್ಸೆ. ಶಾಂತಿ ಅಶಾಂತಿಗಳ ಎಲ್ಲೆಯನ್ನು ಮೀರಿ ಪರವಶವಾಗಿರಲು ಬೇಕಾದ ಮದ್ದು. ಮಾನಸಿಕ ಎಲ್ಲ ರೋಗಗಳನ್ನು ನಿವಾರಿಸುತ್ತದೆ. ಮಾನಸಿಕ ಅಪರಾಪ್ರಕೃತಿಯಿಂದ ವಿಶ್ಲೇಷಿಸುತ್ತದೆ. ಪೂರ್ವಾಪರ ದಿವ್ಯದೃಷ್ಟಿಯನ್ನು ಬರಿಸುತ್ತದೆ. ಶರಣನು ವಿಶುದ್ಧಿಗೇರಿ ಅಲ್ಲಿರುವ ಆ ಪ್ರಾಸಾದಿಕಚೇತನವನ್ನು ಮೈಗೂಡಿಸಿಕೊಳ್ಳುತ್ತಾನೆ. ಅದರ ಆ ಅಚ್ಚ ಅರಿವಿನ ಸದ್ವಾಸನೆಯನ್ನು ಮೂಸುತ್ತಾನೆ; ಅದರ ಮಧುರ ದಿವ್ಯರಸಾಸ್ವಾದನವನ್ನು ಮಾಡುತ್ತಾನೆ. ಅದರ ಆ ಸತ್ಯಸೌಂದರ್ಯವನ್ನು ಕಾಣುತ್ತಾನೆ. ಅದರ ಆ ಅನಾಹತ ದಿವ್ಯಸ್ಪರ್ಶಾನುಭೂತಿಯನ್ನು ಪಡೆಯುತ್ತಾನೆ. ಅದರ ಆ ದಿವ್ಯನಾದಾನುಸಂಧಾನದಲ್ಲಿದ್ದು ಆನಂದಿಸುತ್ತಾನೆ. ಅಲ್ಲಿ ಎಲ್ಲವೂ ಇರುತ್ತದೆ. ಆದರೆ ಅವು ಶರಣನಾಗದವರಲ್ಲಿ ಅಡಕ [ಅವ್ಯಕ್ತ] ವಾಗಿರುತ್ತವೆ. ಅವೆಲ್ಲವನ್ನು ಅಭಿವ್ಯಕ್ತಿಗೊಳಿಸುತ್ತದೆ ಎಚ್ಚೆತ್ತ ಪ್ರಸಾದ ಚೇತನ. ಅಂತಾದಾಗ ಶಬ್ದ ಸೂತಕವಿರದು. ಅತ್ಯಂತ ಅದ್ಭುತವಾದ ಮಾರ್ಪಾಟಾಗುತ್ತದೆ. ಅರಿವು ಅರಳಿ ಮಾತು ಜ್ಯೋತಿರ್ಲಿಂಗವಾಗುತ್ತದೆ. ಅಂತಃಸತ್ವ ಆತ್ಯಧಿಕವಾಗುತ್ತದೆ. ಅಂತಿಂತಹ ಮಾತಿಗಿಂಬಿರುವುದಿಲ್ಲ. ವಿಸಂವಾದಿ ಭ್ರಮೆಯುಂಟಾಗದು. ಪ್ರಪಂಚ ವಿಪರೀತವಾಗಿ ಕಾಣದು. ಮತ್ತೊಂದನ್ನು ಕೇಳದಂತಾಗುತ್ತದೆ.

ಶರಣಾಂಗನಿಗೂ ಪ್ರಸಾದಲಿಂಗಕ್ಕೂ ಮಾಧ್ಯಮಿಕ ರಸ ಆನಂದ. ಅದು ಅವರಿಬ್ಬರನ್ನು ಬೆಸೆಯುತ್ತದೆ. ಅದೊಂದು ಅತೀಂದ್ರಿಯ ಪರಾಶಕ್ತಿ; ಸೀಮಿತವಲ್ಲದ ಕೊರತೆಯಿಲ್ಲದ ಸಹಜಾನಂದ, ಅದು ಅರಿವನ್ನು ಮೀರಿ ನಿಲ್ಲುತ್ತದೆ.

೬

ಅದೆ ಐಕ್ಯನ ನೆಲೆ; ಅಖಂಡ ನೆಲೆ; ಅಲ್ಲಿರುವಾಗ ಐಕ್ಯನು ಆತ್ಮಾಂಗನಾಗಿರುತ್ತಾನೆ. ಮಹಾಚೇತನಸ್ವರೂಪನಾಗುತ್ತಾನೆ. ನಿತ್ಯ ತೃಪ್ತನಾಗುತ್ತಾನೆ. ನಿತ್ಯ ತೃಪ್ತನಾದ ಐಕ್ಯಾಂಗನು ಆಜ್ಞಾಚಕ್ರಕ್ಕೇರಿರುತ್ತಾನೆ. ಆತ್ಮಗತ ಭೂ-ತತ್ವವನ್ನು ನಿರಶನ ಮಾಡಿ ಅನುಭಾವದಿಂದ ಮಹತೋಮಹೀಯ ಭಾವಕ್ಕೇರಿ ನಿರ್ಭಾವಿಯಾಗುತ್ತಾನೆ. ಅವಿರಳ ಚಿಚ್ಛಕ್ತಿಯ ಶಾಂತ್ಯತೀತೋತ್ತರ ಕಲೆ–ಕಳೆಗಳ ಸ್ವರೂಪ ತಾನಾಗಿರುತ್ತಾನೆ.

ಐಕ್ಯಾಂಗನು ಆತ್ಮ ತತ್ವದಂತೆ ಅಖಂಡನು. ಅಂದರೆ ಅಚ್ಚಳಿಯದ ಮಹಾತೃಪ್ತಿಯುಳ್ಳವನು. ಭಾಜನತತ್ವವನ್ನು ಮೀರಿದವನು. ನಿಖಿಲ ನಿಷ್ಪತ್ತಿಯಲ್ಲಿರುವವನು. ಜ್ಞಾನೇಂದ್ರಿಯವಾಗಲಿ ಜ್ಞಾನಕ್ರಿಯೆಯಾಗಲಿ ಅಲ್ಲಿ ತೋರುವುದಿಲ್ಲ.

ಆತ್ಮತತ್ವದಿಂದ ತೃಪ್ತಿ. ತೃಪ್ತಿ ಹೃದಯ ವಿಷಯ. ತೃಪ್ತಿಯಲ್ಲಿ ಯಾವುದರ ಅರಿವಿರದು; ಆಚರಣೆಯಿರದು. ಮಾಗಿ ನಿಂತಿರುತ್ತವೆ. ಆಗ ಭಾವ ನಿರ್ಭಾವವಾಗಿರುತ್ತದೆ. ನಿರ್ಭಾವತ್ವದಲ್ಲಿ ಮಹತ್ವತೆ ಮೈಗೂಡಿರುತ್ತದೆ. ಆ ಮಹತ್ವತೆಗೆ ಐಕ್ಯಾಂಗನ ಸಮರಸಭಕ್ತಿ ಸಂಪೂರ್ಣಕಾರಣ. ಸಮರಸದಿಂದ ಅಂಗನು ಲಿಂಗದಲ್ಲಿ ಅಖಂಡನಾಗುತ್ತಾನೆ,

ಅಖಂಡ ಸ್ವರೂಪವೆ ಮಹಾಲಿಂಗ. ಚಿಚ್ಛಕ್ತಿಯ ಶಾಂತ್ಯತೀತೋತ್ತರ ಕಲೆಯುಳ್ಳುದೆ ಮಹಾಲಿಂಗ. ಅದರಲ್ಲಿ ಐಕ್ಯಾಂಗನು 'ಉರಿಕಪ್ಪುರ ಯೋಗ,'ವನ್ನು ಪಡೆಯುತ್ತಾನೆ. □

# ಶಿವಯೋಗ

ತಪಸ್ವಿ ಶ್ರೀ ಕುಮಾರ ಸ್ವಾಮಿಗಳು
ತಪೋವನ, ಧಾರವಾಡ

ಭಾರತ ದೇಶದಲ್ಲಿ ಯೋಗಶಾಸ್ತ್ರವು ಬಹಳ ಪ್ರಾಚೀನ ಕಾಲದಿಂದಲೂ ಪ್ರಚಾರದಲ್ಲಿದೆ. ಈ ಯೋಗ ವಿದ್ಯೆಯನ್ನೂ ಅದರ ಅನುಷ್ಠಾನ ವಿಧಿಯನ್ನೂ ನಚಿಕೇತನು ಯಮನಿಂದ ಪಡೆದುಕೊಂಡು ಅಪಾಪವಿದ್ಧನೂ ಅಮರನೂ ಆದನೆಂದು ಕಠೋಪನಿಷತ್ತು ಹೇಳುತ್ತದೆ. ಈ ಯೋಗಶಾಸ್ತ್ರವು ಯಾರಿಂದ ಯಾವಾಗ ಬಳಕೆಯಲ್ಲಿ ಬಂದಿತೆಂದು ನಿರ್ದಿಷ್ಟವಾಗಿ ಹೇಳಲಿಕ್ಕೆ ಐತಿಹಾಸಿಕ ಸಾಮುಗ್ರಿಗಳಿಲ್ಲ. ಹಿರಣ್ಯಗರ್ಭನಿಂದ ಯೋಗಶಾಸ್ತ್ರವು ಉಪದೇಶಿಸಲ್ಪಟ್ಟಿತೆಂದು ಹೇಳುವ ವಾಡಿಕೆ ಇದೆ. ಹಾಗೆಯೆ ರುದ್ರನಿಂದಲು ಮತ್ತೊಂದು ಯೋಗಶಾಸ್ತ್ರವು ಉಪದೇಶಿಸಲಾಗಿದೆಯೆಂದು ಇನ್ನೊಂದು ಐತಿಹ್ಯವಿದೆ. ಇವೆರಡು ಐತಿಹ್ಯಗಳನ್ನು ಒಪ್ಪಿಕೊಂಡರೆ ಯೋಗಶಾಸ್ತ್ರಕ್ಕೆ ಎರಡು ಸ್ವರೂಪಗಳನ್ನು ಒಪ್ಪಿಕೊಂಡಂತಾಗುವದು. ಆದ್ಯೆದು ನೋಡಿದರೆ ಹಿರಣ್ಯಗರ್ಭನಾಗಲಿ ರುದ್ರನಾಗಲಿ ಐತಿಹಾಸಿಕ ವ್ಯಕ್ತಿಗಳೇ ಅಲ್ಲ; ಆದರೂ ಆಧ್ಯಾತ್ಮಿಕ ದೃಷ್ಟಿಯಿಂದ ಅವೆರಡು ಹೆಸರುಗಳಲ್ಲಿ ಔಚಿತ್ಯವಿಲ್ಲದೆ ಇಲ್ಲ. ಹಿರಣ್ಯಗರ್ಭನೆಂದರೆ ಮಹತ್ ಅಥವಾ ಬುದ್ಧಿ ಎಂದೂ ರುದ್ರನೆಂದರೆ ಸಂಕಲ್ಪ ಅಥವಾ ಶಕ್ತಿ ಎಂದೂ ಸಾಂಕೇತಿಕ ಅರ್ಥಗಳಿವೆ. ಹಿರಣ್ಯಗರ್ಭನ ಯೋಗವೆಂದರೆ ಬುದ್ಧಿಪ್ರಧಾನವಾದ ಯೋಗವೆಂದೂ ರುದ್ರನ ಯೋಗವೆಂದರೆ ಶಕ್ತಿಪ್ರಧಾನವಾದ ಯೋಗವೆಂದೂ ಪರ್ಯಾಯವಾಗಿ ಹೇಳಿದಂತಾಯಿತು. ಹಿರಣ್ಯಗರ್ಭನ ಯೋಗಪರಂಪರೆಯು ಪಾತಂಜಲ ಯೋಗಸೂತ್ರದಲ್ಲಿ ಪ್ರತಿಬಿಂಬಿತವಾಗಿದ್ದರೆ ರುದ್ರನ ಯೋಗ ಪರಂಪರೆಯು ಆಗಮಗಳಲ್ಲಿ ಅವುಗಳಲ್ಲಿಯೂ ಮುಖ್ಯವಾಗಿ ಶಿವಾಗಮಗಳಲ್ಲಿ ಪ್ರಾದುರ್ಭವಿಸಿದೆ. ಹಿರಣ್ಯಗರ್ಭನ ಯೋಗವು ಎಲ್ಲಿ ಮುಗಿಯುವುದೋ ಅಲ್ಲಿಂದಲೇ ರುದ್ರನ ಯೋಗವು ಆರಂಭವಾಗುವದು "ಪುರುಷಾರ್ಥ ಶೂನ್ಯಾನಾಂ ಗುಣಾನಾಂ ಪ್ರತಿಪ್ರಸವಃ ಕೈವಲ್ಯಮ್ ಸ್ವಪ್ರತಿಷ್ಠಾನಾ ಚಿತಿಶಕ್ತಿರಿತಿ" ಈ ಸೂತ್ರದಿಂದ ಯೋಗದರ್ಶನವು ಕೊನೆಗೊಳ್ಳುತ್ತದೆ. ಚಿತಿಶಕ್ತಿಯಿಂದ ಇಲ್ಲವೆ ಚಿತ್‌ಶಕ್ತಿಯಿಂದ ರುದ್ರನ ಯೋಗವು ಆರಂಭವಾಗುತ್ತದೆ. ಪಾತಂಜಲ ಯೋಗದರ್ಶನಕ್ಕೆ ಸಾಂಖ್ಯ ತತ್ವದರ್ಶನವೇ ತಳಹದಿಯಾಗಿದೆ. ಪುರುಷ ಪ್ರಕೃತಿ

ಎಂಬ ಎರಡೇ ತತ್ವಗಳನ್ನು ಸಾಂಖ್ಯದರ್ಶನವು ಒಪ್ಪಿಕೊಳ್ಳುತ್ತದೆ. ಪ್ರಕೃತಿಯು ಜಡ, ಪುರುಷ ಚೇತನ; ಪ್ರಕೃತಿಯು ಒಂದು, ಪುರುಷರು ಹಲವು; ಪ್ರಕೃತಿಯು ಜ್ಞೇಯ, ಪುರುಷನು ಜ್ಞಾತಾ. ಆದರೆ ರುದ್ರನ ಯೋಗದಲ್ಲಿ ಜ್ಞಾತಾ. ಜ್ಞಾನ. ಜ್ಞೇಯವೆಂಬ ತ್ರಿಪುಟಿ ಇದೆ. ಪುರುಷನು ಜ್ಞಾತಾ, ಪ್ರಕೃತಿಯು ಜ್ಞಾನ ಪರಬ್ರಹ್ಮನು ಜ್ಞೇಯ. ಚಿತ್‌ಶಕ್ತಿಯು ಈ ಪರಬ್ರಹ್ಮನ, ಈ ಪರಶಿವನ ಕೂಡ ಅವಿನಾಭಾವ ಸಾಮರಸ್ಯದಿಂದಿರುವ ವಿಮರ್ಶೆಯು. ಈ ವಿಮರ್ಶಶಕ್ತಿಯ ವಿಲಾಸವೇ ಒಂದೆಡೆಗೆ ಸೃಷ್ಟಿಯಾಗಿಯೂ ಇನ್ನೊಂದೆಡೆಗೆ ಜೀವಸಮುದಾಯವಾಗಿಯೂ ಕಂಗೊಳಿಸುವದು. ವಿಮರ್ಶಶಕ್ತಿಯ ವಿಕಾಸದಿಂದ ಜೀವನು ತನ್ನ ಕರ್ತೃತ್ವಶಕ್ತಿಯನ್ನು ಕಲ್ಪಕ ವೃತ್ತಿಯನ್ನು ಬೆಳಗಿಸಿಕೊಂಡು, ಸ್ವರೂಪಜ್ಞಾನವನ್ನು ಪಡೆದು ಪರಶಿವನೊಡನೆ ಸಾಮರಸ್ಯವನ್ನು ಹೊಂದುವದೇ ಶಕ್ತಿವಿಶಿಷ್ಟಾದ್ವೈತಪರವಾದ ವೀರಶೈವ ದರ್ಶನದಲ್ಲಿ ಯೋಗವೆನ್ನಿಸಿಕೊಳ್ಳುವದು.

ಋಷಿಗಳಲ್ಲಿ ಕೆಲವರು ಪಶುಧರ್ಮಪರಾಯಣರೆಂದೂ ಹಲವರು ಪತಿಧರ್ಮಪರಾಯಣರೆಂದೂ ಹೇಳಲಾಗುತ್ತದೆ. ಶೈವಧರ್ಮದಲ್ಲಿ ಪ್ರಕೃತಿಗೆ ಇಲ್ಲವೆ ಜೀವನಿಗೆ ಪಶುವೆಂದೂ ಸಾಂಕೇತಿಕ ಅರ್ಥವಿದೆ. ಪಶುಧರ್ಮ ಪರಾಯಣರೆಂದರೆ ಪ್ರಾಕೃತ ಧರ್ಮಾವಲಂಬಿಗಳೆಂದೂ ಪತಿಧರ್ಮಪರಾಯಣರೆಂದು ಅಪ್ರಾಕೃತ ಧರ್ಮಾವಲಂಬಿಗಳೆಂದೂ ಅರ್ಥವಾಗುವದು ಇದಕ್ಕನುಗುಣವಾಗಿ ಯೋಗವಾದರೂ ಪ್ರಾಕೃತ ಅಪ್ರಾಕೃತವೆಂದು ಎರಡು ವಿಧವಾಗಿದೆ. ಹಿರಣ್ಯಗರ್ಭನ ಯೋಗವು ಪ್ರಾಕೃತವಾದರೆ ರುದ್ರನ ಯೋಗವು ಅಪ್ರಾಕೃತವಾಗಿದೆ. ಹಿರಣ್ಯಗರ್ಭನ ಯೋಗದ ಆರಂಭವು ಬುದ್ಧಿಯಿಂದ; ಮಹತ್ ಅಥವಾ ಬುದ್ಧಿಯು ಪ್ರಕೃತಿಯ ಮೊದಲನೆಯ ವಿಕೃತಿಯಾದುದರಿಂದ ಹಿರಣ್ಯಗರ್ಭನ ಯೋಗವು ಪ್ರಾಕೃತವೆಂದು ಹೇಳಿದರೆ ತಪ್ಪೇನು ? ರುದ್ರನ ಯೋಗವು ಸ್ವಯಂಪ್ರಕಾಶವಾದ ಪರವಸ್ತುವಿನಲ್ಲಿ ಅವಿನಾಭಾವ ಸಾಮರಸ್ಯದಿಂದಿರುವ ಸ್ವವಿಮರ್ಶೆಯಿಂದ ಕೊನರೊಡೆಯುವದು. ಪ್ರಕೃತಿ ಮಹತ್ ಅಹಂಕಾರ, ಮನ, ತನ್ಮಾತ್ರಾ, ಹಾಗೂ ಭೂತಗಳು ಈ ವಿಮರ್ಶೆ ಶಕ್ತಿಯ ಒಡಲೊಳಗಿನಿಂದ ಒಡಮೂಡಿದ ಒಡವೆಗಳು. ಹೀಗೆ ಚಿತ್ ಶಕ್ತಿಯ ಒಡಲೊಳಗಿಂತ ಒಡಮೂಡಿದ ಈ ಒಡವೆಗಳು ಮಾತೃಸ್ಥಾನದಿಂದ ದೂರ ಸರಿಯುತ್ತ ಹೋದಂತೆ ಅವುಗಳ ಪಾರದರ್ಶಕತೆಯು ಕಡಿಮೆಯಾಗುತ್ತ ಹೋಗುವದು. ಆದರೂ ಪರವಸ್ತುವಿನಲ್ಲಿದ್ದ ಪ್ರಕಾಶವು ಅದೆಷ್ಟೇ ಅಲ್ಪವಾದರೂ ಅದೆಷ್ಟೇ ಮಂದವಾದರೂ ಪರವಸ್ತುವಿನಿಂದ ಪ್ರಕಟವಾದ ಈ ಸೃಷ್ಟಿಯ ವಿವಿಧ ಪದಾರ್ಥಗಳಲ್ಲಿ ಪ್ರತಿಫಲಿಸುವದು. ಈ ಪ್ರತಿಫಲದ ಪರಿಣಾಮದಿಂದಾಗಿ ಪರಿವರ್ತನೆಯು ಸಾಧ್ಯವಾಗುವದು. ವೀರಶೈವರ ಯೋಗಪದ್ಧತಿಯಲ್ಲಿ ಈ ಪರಿವರ್ತನೆಯು ಪ್ರಮುಖ ಸ್ಥಾನ ಪಡೆದಿದೆ. ಜೀವಭಾವವು ಶಿವಭಾವದಲ್ಲಿ ಪರಿವರ್ತನೆ ಹೊಂದಿ ಜೀವಪ್ರಪಂಚವೆಲ್ಲ ಶಿವಪ್ರಪಂಚವಾಗಿ ಮಾರ್ಪಡುವುದೇ ಶಿವಯೋಗದ ಗುರಿ. ಚಿತ್ ಶಕ್ತಿಯಿಂದ ಆರಂಭವಾಗುವ ಯೋಗವು ದೇಹ, ಪ್ರಾಣ, ಮನ. ಬುದ್ಧಿಗಳನ್ನು ಅಲ್ಲಗಳೆಯದೆ

ಅವುಗಳನ್ನು ಪರಿಶುದ್ಧಗೊಳಿಸುವದು. ಚಿತ್‌ಶಕ್ತಿಯ ಸೋಂಕಿನಿಂದ ಅವೆಲ್ಲ ಪಾರದರ್ಶಕವಾಗುವವು. ಹೀಗೆ ಪಾರದರ್ಶಕವಾದ ಅಂತಃಕರಣದಲ್ಲಿ ಆತ್ಮನ ಶಕ್ತಿಗಳೆಲ್ಲ ಪ್ರತಿಫಲಿಸುವವು. ಹಿರಣ್ಯಗರ್ಭನ ಯೋಗದಲ್ಲಿ ಪ್ರತಿಪ್ರಸವವಿದ್ದರೆ ರುದ್ರನ ಯೋಗದಲ್ಲಿ ಪ್ರತಿಫಲನವಿದೆ. ರುದ್ರನ ಈ ಯೋಗವು ಆಗಮಗಳಲ್ಲಿ ಅಲ್ಲಿಷ್ಟು ಇಲ್ಲಿಷ್ಟು ಪ್ರತಿಪಾದಿಸಲ್ಪಟ್ಟಿದೆ, ಆದರೆ ಶ್ರೀ ಬಸವಾದಿ ಶರಣರು ಅದಕ್ಕೊಂದು ಸುವ್ಯವಸ್ಥಿತವಾದ ರೂಪವನ್ನು ಕೊಟ್ಟರು.

ಶ್ರೀ ಅರವಿಂದ ಯೋಗಿಗಳು ರುದ್ರನ ಈ ಯೋಗವನ್ನೇ ಎತ್ತಿ ಹಿಡಿದಿರುವರು. ಯೌಗಿಕ ಸಾಧನೆಯೆಂಬ ತಮ್ಮ ಗ್ರಂಥದಲ್ಲಿ ಅವರು ಮೊಟ್ಟಮೊದಲಿಗೆ ಹೀಗೆ ಹೇಳಿರುವರು. "ಉಚಿತ ಸಾಧನ ಪದ್ಧತಿಯು ತೀರ ಭಿನ್ನವಾಗಿದೆ. ಇದೀಗ ಬಹುಜನರು ಆಚರಿಸುವ ಹಾಗೂ ನೀವು ಸಹ ಮಾಡುತ್ತಿರುವ ಸಾಧನಪದ್ಧತಿಗೆ ಇದು ತುಂಬಾ ವಿಪರೀತವಾಗಿದೆ. ಸಾಧಕರು ದೇಹ ಇಲ್ಲವೆ ಪ್ರಾಣದಿಂದ ಆರಂಭಿಸಿ, ಚಿತ್ತ ಮನಸ್ಸುಗಳ ಮುಖಾಂತರ ಸಾಗಿ ಬುದ್ಧಿ ಮತ್ತು ಶಕ್ತಿಗೆ ಮುಗಿತಾಯಗೊಳಿಸುತ್ತದೆ. ಆದರೆ ನಿಜವಾದ ಸಾಧನಕ್ರಮವೂ ಶಕ್ತಿಯಿಂದ ಆರಂಭಿಸಿ ದೇಹಕ್ಕೆ ಮುಗಿಸುವದಾಗಿದೆ, ಆಸನ, ಪ್ರಾಣಾಯಾಮ, ಕುಂಭಕ ಚಿತ್ತ, ಶುದ್ಧಿ ಅಥವಾ ಇನ್ನಾವ ಪ್ರಾರಂಭಿಕ ಪಾಠ— ಇವು ಯಾವವು ಶಕ್ತಿಯನ್ನು ಮೊದಲುಮಾಡಿಕೊಂಡು ಹೊರಡುವವರಿಗೆ ಅಗತ್ಯವಿಲ್ಲ .........ಯೋಗಿಗೆ ಅವಶ್ಯವಾಗಿ ಬೇಕಾದುದು ಸಂಕಲ್ಪ ಶಕ್ತಿಯೆ; ಆ ಸಂಕಲ್ಪ ಶಕ್ತಿಯನ್ನು ನೀವು ಮೊದಲಿಗೆ ಜಾಗ್ರತಗೊಳಿಸಿರಿ, ಆ ಶಕ್ತಿಯು ಮುಖಾಂತರವಾಗಿ ಜ್ಞಾನವನ್ನು ಸಂಪಾದಿಸಿರಿ, ಬಳಿಕ ಜ್ಞಾನದ ಸಹಾಯದಿಂದ ಚಿತ್ತವನ್ನು ಹಸನುಗೊಳಿಸಿರಿ. ಆಮೇಲೆ ಪ್ರಾಣವನ್ನು ಅಂಕಿತದಲ್ಲಿಟ್ಟುಕೊಂಡು ಮನವನ್ನು ಶಾಂತಗೊಳಿಸಿರಿ. ಕೊನೆಗೆ ಇವೆಲ್ಲವುಗಳ ನೆರವಿನಿಂದ ದೇಹವನ್ನು ಅಮರಗೊಳಿಸಿರಿ. ಇದುವೆ ವಾಸ್ತವಿಕವಾದ ಯೋಗವು. ಮಹಾಪಥವು, ಇದುವೆ ನಿಜವಾದ ಏಕಮಾತ್ರ ತಂತ್ರವು. ವೇದಾಂತವು ಬುದ್ಧಿಯನ್ನು ಮೊದಲುಮಾಡಿಕೊಂಡು ಹೊರಡುತ್ತದೆ: ಆಗಮಾಂತವು ಅಥವಾ ತಂತ್ರವು ಶಕ್ತಿಯಿಂದ ಆರಂಭಿಸಲ್ಪಡುತ್ತದೆ".

ಪಾತಂಜಲಿಯು ತನ್ನ ಯೋಗ ಸೂತ್ರದ ಕೊನೆಗೆ ಪುರುಷಾರ್ಥ ಶೂನ್ಯ ಗುಣಗಳ ಪ್ರತಿಪ್ರಸವನೆ ಕೈವಲ್ಯವೆಂದು ಹೇಳಿದ್ದಾನೆ. ಒಂದರಿಂದ ಎರಡು, ಎರಡರಿಂದ ಮೂರು, ಮೂರರಿದ ನಾಲ್ಕು ಹೀಗೆ ಬಳಿವಿಡಿದು ಬೆಳೆದುಬಂದರೆ ಅದಕ್ಕೆ ಪ್ರಸವವೆನ್ನುವರು. ತದ್ವಿರುದ್ಧವಾಗಿ ನಾಲ್ಕನೇಯದು ಮೂರನೆಯದರಲ್ಲಿ, ಮೂರನೆಯದು ಎರಡನೆಯದರಲ್ಲಿ, ಎರಡನೆಯದು ಒಂದನೆಯದರಲ್ಲಿ ವಿಲೀನವಾಗುವುದಕ್ಕೆ ಪ್ರತಿಪ್ರಸವವೆನ್ನುವರು, ಕಡೆಗೆ ತ್ರಿಗುಣಗಳ ಪರಿಣಾಮ ಪ್ರವಾಹಕ್ಕೆ ಯಾವ ಪ್ರೇರಕ ಹೇತುಗಳು ಉಳಿಯದಿದ್ದರಿಂದ ಅವು ಪುರುಷಾರ್ಥ ಶೂನ್ಯವಾಗುತ್ತವೆ, ಸಾಂಖ್ಯದರ್ಶನಕ್ಕನುಗುಣವಾಗಿ ಮಹತ್ ಅಥವಾ ಬುದ್ಧಿಯು ಪ್ರಕೃತಿಯ ಮೊದಲನೆಯ ವಿಕೃತಿ. ಮಹತ್ತತ್ವವು ತ್ರಿಗುಣಗಳ ಸ್ವರೂಪವಿರುವದರಿಂದ ಸಾತ್ವಿಕ, ರಾಜಸ ತಾಮಸವೆಂಬ ಅಹಂಕಾರತ್ರಯವು

ಉದಿಸಲನುವಾಯಿತು. ಸಾತ್ವಿಕ ಅಹಂಕಾರದಿಂದ ಅಂತಃಕರಣ, ಜ್ಞಾನೇಂದ್ರಿಯ ಪಂಚಕ; ರಾಜಸ ಅಹಂಕಾರದಿಂದ ಕರ್ಮೇಂದ್ರಿಯ ಪಂಚಕ; ತಾಮಸ ಅಹಂಕಾರದಿಂದ ಪಂಚತನ್ಮಾತ್ರಾ ಹಾಗೂ ಸ್ಥೂಲಪಂಚಕ ನಿರ್ಮಿತವಾಗಿವೆ. ನಿರೋಧ ಸಂಸ್ಕಾರಗಳ ಪರಿಣಾಮ ಪ್ರವಾಹವು ಮುಗಿದೊಡನೆಯೆ ಇವೆಲ್ಲವು ತಮ್ಮ ಉಪಾದಾನಕಾರಣವಾದ ತ್ರಿಗುಣಗಳಲ್ಲಿ ವಿಲೀನವಾಗುತ್ತವೆ. ತ್ರಿಗುಣಗಳ ಸಾಮ್ಯಾವಸ್ಥೆಯು ಸಮನಿಸಿತೆಂದರೆ ದೃಶ್ಯಾದೃಶ್ಯಗಳ ಸಂಯೋಗದ ಅಭಾವವು ಲಭಿಸಿ ಚಿತ್ ಶಕ್ತಿರೂಪ ಚೇತನ ಪುರುಷನು ತನ್ನ ಸ್ವರೂಪದಲ್ಲಿ ಪ್ರತಿಷ್ಠಿತನಾಗುತ್ತಾನೆ. ಇಲ್ಲಿಗೆ ಹಿರಣ್ಯಗರ್ಭನ ಯೋಗವು ಮುಗಿಯುತ್ತದೆ. ಆದರೆ ಚಿತ್‌ಶಕ್ತಿರೂಪ ಚೈತನ್ಯ ಪುರುಷನ ಸಂಕಲ್ಪಶಕ್ತಿಯಿಂದಲೇ ರುದ್ರನ ಯೋಗವು ಅಥವಾ ಶಿವಯೋಗವು ಆರಂಭವಾಗುತ್ತದೆ.

ಯೋಗವೆಂದರೇನು ? ಸಮಾಧಿ, ಸಂಯೋಗ, ಧ್ಯಾನ, ಕರ್ಮಕೌಶಲ್ಯವೆಂದು ಹಲವು ಬಗೆಯಾಗಿ ಯೋಗವನ್ನು ವ್ಯಾಖ್ಯಾನಿಸುವದುಂಟು. ಆದರೆ ಯೋಗದ ಸರಳವಾದ, ಸುಂದರವಾದ, ಸುಲಲಿತವಾದ ಅರ್ಥವೆಂದರೆ ಸಾಧನೆ; ಭಿನ್ನಭಿನ್ನ ಸಾಂಪ್ರದಾಯಗಳಿಗನುಗುಣವಾದ ಭಿನ್ನಬಿನ್ನವಾದ ಸಾಧನೆಗಳಿರುವದು ಸಹಜವಷ್ಟೇ ! ಇದರಿಂದಾಗಿ ಯೋಗಪರಂಪರೆಯಲ್ಲಿ ಹಲವಾರು ಯೋಗಗಳ ಉಲ್ಲೇಖವು ಕಂಡುಬರುತ್ತದೆ. ಹಲವಾರು ಯೋಗಗಳ ಉಲ್ಲೇಖವಿದ್ದರೂ ಹಠಯೋಗ ಹಾಗೂ ರಾಜಯೋಗಗಳು ಮಹತ್ವದವುಗಳೆಂದು ಪರಿಗಣಿಸಲಾಗಿದೆ. ಹಠಯೋಗ ಪ್ರದೀಪಿಕೆಯು ಹಠಯೋಗದ ಸಕೀಲವನ್ನು ತಿಳಿಸಿದರೆ ಪಾತಂಜಲ ಯೋಗಸೂತ್ರವು ರಾಜಯೋಗದ ರಹಸ್ಯವನ್ನು ಬೋಧಿಸುತ್ತದೆ. ವೃತ್ತಿಗಿಂತ ಪ್ರಾಣವು ಅಧಿಕವೆಂದೂ ವೃತ್ತಿಯು ಪ್ರಾಣವನ್ನು ಹಿಂಬಾಲಿಸುವದೆಂದೂ ಹಠಯೋಗವು ಹೇಳಿದರೆ, ಪ್ರಾಣಕ್ಕಿಂತ ವೃತ್ತಿ ಅಧಿಕವೆಂದೂ ಪ್ರಾಣವು ವೃತ್ತಿಯನ್ನು ಹಿಂಬಾಲಿಸುವದೆಂದೂ ರಾಜಯೋಗವು ತಿಳಿಸುವದು. ಪ್ರಾಣನಿರೋಧವು ಹಠಹೋಗದ ತಿರುಳಾದರೆ ವೃತ್ತಿನಿರೋಧವು ರಾಜಯೋಗದ ರಹಸ್ಯವಾಗಿದೆ. ಆದರೆ ಶಿವಯೋಗವು ಇವೆರಡರಕ್ಕಿಂತಲೂ ಭಿನ್ನವಾಗಿದೆ. ಅದು ನೇರವಾಗಿ ಚಿತ್‌ಶಕ್ತಿ ಇಲ್ಲವೆ ಶುದ್ಧ ಸಂಕಲ್ಪ ಶಕ್ತಿಯಿಂದ ಆರಂಭವಾಗುತ್ತದೆ. ಈ ಚಿತ್‌ಶಕ್ತಿಯು ಪ್ರಾಣ ಹಾಗೂ ವೃತ್ತಿಗಳಿಗಿಂತ ಭಿನ್ನವಾಗಿ ಅವೆರಡರಕ್ಕಿಂತ ವಿಶೇಷವಾಗಿರುತ್ತದೆ. ಈ ಸೃಷ್ಟಿಯಾಗಲಿ ಇದರಲ್ಲಿ ಕಂಡುಬರುವ ವಿವಿಧ ತತ್ವಗಳಾಗಲಿ ಈ ಚಿತ್‌ಶಕ್ತಿಯ ಆವಿರ್ಭಾವವೇ ಹೊರತು ಆಭಾಸವಲ್ಲ. ಕ್ರಮಿಕ ತರಗತಿಯಿಂದ ಈ ಸೃಷ್ಟಿಯಲ್ಲಿ ಏಳು ಮುಖ್ಯವಾದ ತತ್ವಗಳು ಕಂಗೊಳಿಸುತ್ತವೆ. ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ, ಆತ್ಮ, ಪರಮಾತ್ಮ ಇವೇ ಆ ಏಳು ತತ್ವಗಳು. ಪೃಥ್ವಿಯಲ್ಲಿ ಧಾರಣ ಶಕ್ತಿಯಿದೆ. ಅಪ್ಪುವಿನಲ್ಲಿ ಅಪ್ಯಾಯನ ಶಕ್ತಿಯಿದೆ. ಅಗ್ನಿಯಲ್ಲಿ ಜ್ವಲನ ಶಕ್ತಿಯಿದೆ. ವಾಯುವಿನಲ್ಲಿ ಸಂಚಲನ ಶಕ್ತಿಯಿದೆ. ಆಕಾಶದಲ್ಲಿ ವ್ಯಾಪನ ಶಕ್ತಿಯಿದೆ. ಆತ್ಮನಲ್ಲಿ ಬುದ್ಧಿಶಕ್ತಿಯಿದೆ. (ಸಾಂಖ್ಯರು ಹೇಳುವಂತೆ ಪ್ರಕೃತಿಯಲ್ಲಿ ಅಲ್ಲ) ಪರಮಾತ್ಮನಲ್ಲಿ ಚಿತ್‌ಶಕ್ತಿಯಿದೆ. ಶಿವಯೋಗವು ಈ ಚಿತ್‌ಶಕ್ತಿಯಿಂದ ಆರಂಭವಾಗಿ ಕ್ರಮೇಣ

ವಾಗಿ ಎಲ್ಲಿಂದವದ ಶಕ್ತಿಗಳನ್ನು ಉನ್ನತಗೊಳಿಸುತ್ತ ಸೃಷ್ಟಿಯ ಸೊಬಗನ್ನು ಸೌಂದರ್ಯ ವನ್ನು ಸವಿಯಕಲಿಸುವದು. ಆಗ ಸೃಷ್ಟಿಯು ಮೂರುದಿನದ ಸಂತೆಯಾಗದೆ ಪೂರ್ವಲಲಿತ ಶಾಂತಿಯ ಪ್ರತೀಕವಾಗಿ ಪರಿಣಮಿಸುವದು. ಆಗ ಅದು ಬರಿಯ ಕಲೆ ಯಾಗದೆ ಚಿತ್‌ಕಲೆಯಾಗಿ ಕಂಗೊಳಿಸುವದು. ಇಂತಹ ಚಿತ್‌ಕಳೆಯನ್ನು ಅಂಗಕ್ಕೆ ಅಳವ ಡಿಸಿಕೊಳ್ಳುವ ವಿಧಾನವನ್ನು ತಿಳಿಸಿಹೇಳುವದು ಶಿವಯೋಗವು,

ಮೊಹೆಂಜೋದಾರೊ–ಹರಪ್ಪಾದ ಅಗೆತಗಳಲ್ಲಿ ದೊರೆತ ಅವಶೇಷಗಳನ್ನು ನಾನು ಅಭ್ಯಾಸ ಮಾಡತೊಡಗಿದೆನು. ಸಂಶೋಧನ ದೃಷ್ಟಿಯಿಂದ ಅವುಗಳ ಅಭ್ಯಾಸವನ್ನು ಮುಂದುವರಿಸಿದಂತೆ ಮೊಹೆಂಜೊದಾರೋ–ಹರಪ್ಪಾ ಕ್ಷೇತ್ರವು ದ್ರವಿಡ, ಕೋಲ, ಮುಂಡ, ಸಮೇರಿಯಾ. ಚಾಲ್ಡಿಯಾ ಇತ್ಯಾದಿ ಸಂಸ್ಕೃತಿಗಳ ರಂಗಸ್ಥಲವಾಗಿದ್ದಿತೆಂದು ಕಂಡುಬಂದಿತು. ವೇದಗಳಲ್ಲಿ ಶಿಶ್ನದೇವಾ ಎಂಬ ಪದವು ಎರಡುಸಲ ಬಂದಿದೆ. ಪಲವಾರು ಪಂಡಿತರು ಅದಕ್ಕೆ ಅಪಾರ್ಥವನ್ನು ಕಲ್ಪಿಸಿದ್ದಾರೆ, ಇನ್ನೂ ಕಲ್ಪಿಸುತ್ತಲೇ ಇದ್ದಾರೆ. ಆದರೆ ಸಮೇರು ಭಾಷೆಯಲ್ಲಿ ಶಿಶ್ನವೆಂದರೆ ಏಳು ಎಂಬ ಅರ್ಥವಿದೆ ಎಂದು ನನ್ನ ಸಂಶೋಧನೆಯ ಫಲವಾಗಿ ನನಗೆ ಹೊಳೆದಾಗ ನನ್ನ ಮೈಮನಗಳೆರಡು ತೂಗಿ ತೊನೆದಾಡಿದವು. ಶಿಶ್ನದೇವಾ ಎಂದರೆ ಏಳು ದೇವರುಗಳು. ಹೀಗಂದರೇನು ? ಒಂದೊಂದು ತತ್ವಕ್ಕೆ ಒಂದೊಂದು ಅಧಿದೇವತೆಯನ್ನೂ ಒಂದೊಂದು ಶಕ್ತಿಯನ್ನೂ ಕಲ್ಪಿಸುವದು ಯೋಗಶಾಸ್ತ್ರದಲ್ಲಿ ಬಹಳ ಪ್ರಾಚೀನ ಕಾಲದಿಂದಲೂ ನಡೆದುಬಂದ ಸಾಂಪ್ರದಾಯ. ಯೋಗ ವಿದ್ಯೆಯಲ್ಲಿ ಅಪಾರವಾದ ಸಾಮರ್ಥ್ಯವಿರುವದರಿಂದ ಅಂತಹ ಸಾಮರ್ಥ್ಯವು ಅನಧಿಕಾರಿಗಳ ಸೊತ್ತಾಗಬಾರದೆಂದು ಬಗೆದು ಯೋಗಶಾಸ್ತ್ರವನ್ನು ಬಹಳ ರಹಸ್ಯವಾಗಿಟ್ಟು ಅದರ ವಿಧಿವಿಧಾನಗಳನ್ನು ಸಾಂಕೇತಿಕ ಪದಗಳಿಂದ ಪ್ರಯೋಗಿ ಸತೊಡಗಿದರು ಪುರಾತನರು. ಶಿಶ್ನದೇವಾ ಎಂಬ ಪದವು ಅಂತಹ ಪದಗಳಲ್ಲಿ ಒಂದು, ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ, ಆತ್ಮ, ಪರಮಾತ್ಮ ಎಂಬ ಏಳು ತತ್ವಗಳಲ್ಲಿ ಏಳು ಬಗೆಯ ಶಕ್ತಿಗಳನ್ನು ಆತ್ಮಸಾತ್ ಮಾಡಿಕೊಂಡರು ಯೋಗಿಗಳು. ಕೊನೆಯ ಶಕ್ತಿಯಾದ ಚಿತ್‌ಶಕ್ತಿಯ ವಲ್ಲಭನೆ ಶಿವನು. ಶಿಶ್ನದೇವಾ ಎಂದರೆ ಸಪ್ತತತ್ವಗಳ ಸಪ್ತಲೋಕಗಳ ಸಪ್ತ ಪ್ರಜ್ಞಾಭೂಮಿಕೆಗಳ ಅಧಿಪತಿಯಾದ ಶಿವನೆಂದೇ ಅರ್ಥ ವಾಗುವದು. ಶಿವಾಗಮಗಳು ಈ ಮಾತಿನ ಸತ್ಯತೆಯನ್ನು ಎತ್ತಿಹಿಡಿಯುತ್ತವೆ. ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ, ಆತ್ಮ ಪರಮಾತ್ಮ ಎಂಬ ಏಳು ತತ್ವ ಗಳಾಗಲಿ ; ಭೂಲೋಕ, ಭುವರಲೋಕ, ಸ್ವರ್ಲೋಕ ಮಹರ್ಲೋಕ, ಜ್ಞಾನಲೋಕ, ತಪೋಲೋಕ, ಸತ್ಯಲೋಕವೆಂಬ ಏಳು ಲೋಕಗಳಾಗಲಿ ; ಸ್ಥೂಲ, ಸೂಕ್ಷ್ಮ, ಕಾರಣ, ಮಹಾಕಾರಣ, ಆನಂದ, ಚಿತ್, ಸತ್ ಎಂಬ ಏಳು ಅರುಹಿನ ಅವಸ್ಥೆಗಳಾಗಲಿ ಶಬ್ದಗಳಿಂದ ಬೇರೆಯೆ ವಿನಾ ಅರ್ಥತಃ ಒಂದೇಯಾಗಿವೆ. ಯೋಗವೆಂದರೆ ಸಾಧನೆ; ಸಾಧನಾಕ್ರಮವು ತನ್ನಿಂದಲೇ ತನ್ನ ದೇಹದಿಂದಲೇ ಆರಂಭವಾಗಬೇಕಾಗುವದರಿಂದ ಎಲ್ಲ ತತ್ವಗಳು, ಎಲ್ಲ ದೇವತೆಗಳು, ಎಲ್ಲ ಅರುಹಿನ ಅವಸ್ಥೆಗಳು ತನ್ನಲ್ಲಿಯೆ, ತನ್ನ

ದೇಹದಲ್ಲಿಯೆ, ತನ್ನ ಪಿಂಡದಲ್ಲಿಯೆ ಪ್ರತಿಷ್ಠಿತವಾಗಿವೆಯೆಂದು ಯೋಗಶಾಸ್ತ್ರವು ಹೇಳುವದು. ತನ್ನ ಬಿಟ್ಟು ದೇವರಿಲ್ಲ, ಮಣ್ಣು ಬಿಟ್ಟು ಮಡಕೆಯಿಲ್ಲ ಎಂಬ ಸಾಮಾನ್ಯವಾದ ನಾಣ್ಣುಡಿಯಲ್ಲಿ ಈ ಮಾತಿನ ಸತ್ಯತೆಯನ್ನು ನಾವು ಕಾಣಬಹುದು. ದೇಹದಲ್ಲಿಯೆ ದೇವನಿರುವನೆಂದೂ ಮನದ ಕೊನೆಯ ಮೊನೆಯ ಮೇಲೆ ಮಹಾದೇವನು ಮನೆಯ ಮಾಡಿಕೊಂಡಿರುವನೆಂದೂ ಶ್ರೀ ಬಸವಣ್ಣ, ಪ್ರಭುದೇವರು ಮುಂತಾದ ಶರಣರು ತಮ್ಮ ವಚನಗಳಲ್ಲಿ ಹಾಡಿಕೊಂಡಿಲ್ಲವೆ? ಯೋಗಶಾಸ್ತ್ರವು ದೇಹದಲ್ಲಿ ಬಗೆಬಗೆಯ ಚಕ್ರಗಳಿವೆಯೆಂದು ಹೇಳುವದು. ವಿಶುದ್ಧಿಚಕ್ರದಲ್ಲಿ ಮನವಿದೆ; ವಿಶುದ್ಧಿಚಕ್ರದ ಕೊನೆಯ ಆಜ್ಞಾಚಕ್ರ, ಆದರ ಮೊನೆಯು ಸಹಸ್ರಾರ. ಮನದ ಕೊನೆಯ ಮೊನೆಯೆಂದರೆ ಸಹಸ್ರಾರವೆಂದರ್ಥ. ಈ ಸಹಸ್ರಾರದಲ್ಲಿ ಶಿವನು ಅಥವಾ ಪರವಸ್ತುವು ನೆಲಸಿರುವದು; ಅರ್ಥಾತ್ ಪರಶಿವನು ಸಾಸಿರದಳ ಪದ್ಮಾಸನನಾಗಿಹನು. ಮಾನವನ ದೇಹದಲ್ಲಿರುವ ಈ ಪರಾತ್ಪರನಿಗೆ ದೃಷ್ಟಾ,ಅನುಮಂತಾ, ಭರ್ತಾ, ಭೋಕ್ತಾ, ಮಹೇಶ್ವರ, ಪರಮಾತ್ಮ ಪರಶಿವ ಎಂಬ ವಿವಿಧ ಶಬ್ದಗಳನ್ನು ಪ್ರಯೋಗಿಸಲಾಗಿದೆಯಷ್ಟೇ. ದೇಹಸ್ಥ ಪುರುಷನಿಗೆ ಮಹೇಶ್ವರನೆಂದೂ ಪರಮಾತ್ಮನೆಂದೂ ಪರಶಿವನೆಂದೂ ಹೇಳುವದಾದರೆ ಆತನ ಶಕ್ತಿಯಾದ ಚಿತ್‌ಶಕ್ತಿಗೆ ದೇಹಸ್ಥ ಪರಮೇಶ್ವರಿ ಎಂದು ಹೇಳಲಿಕ್ಕೆ ಆತಂಕವೇನು ? ಅವಳು ಪರಶಿವನೊಡನೆ ಸಾಮರಸ್ಯದಿಂದಿದ್ದು ಸಹಸ್ರದಳ ಪದ್ಮದಲ್ಲಿ ಜಾಗ್ರತಳಾಗಿಯೂ ಕೆಳಗಿನ ಉಳಿದೆಲ್ಲ ಚಕ್ರಗಳಲ್ಲಿ ಸುಪ್ತಳಾಗಿಯೂ ಇರುತ್ತಾಳೆಂದು ತಾಂತ್ರಿಕ ಗ್ರಂಥಗಳು ಹೇಳುತ್ತವೆ. ಆದರೆ ವೀರಶೈವರು ಮಾತ್ರ ಉಳಿದ ಯಾವ ಚಕ್ರಗಳ ಗೋಜಿಗೆ ಹೋಗದೆ ಆಜ್ಞಾಚಕ್ರ ಅಥವಾ ಭ್ರೂಮಧ್ಯ ಒಂದರ ಮೇಲೆಯೇ ಲಕ್ಷ್ಯವನ್ನು ಕೇಂದ್ರೀಕರಿಸಿ ಭ್ರೂಮಧ್ಯದಲ್ಲಿದ್ದ ಆತ್ಮತತ್ವವನ್ನು ಚಿತ್‌ಕಳೆಯಿಂದ ಜಾಗೃತಗೊಳಿಸಿ ಆ ಚಿತ್‌ಪ್ರಕಾಶವು ಪಂಚೇಂದ್ರಿಯಂಗಳ ಮುಖಾಂತರ ಪ್ರಜ್ವಲಿಸುವಂತೆ ಮಾಡುವರು. ವೀರಶೈವರ ಶಿವಯೋಗಕ್ಕೂ ತಾಂತ್ರಿಕರ ಶಕ್ತಿಯೋಗಕ್ಕೂ ಇರುವ ಅಂತರವು ಇಲ್ಲಿ ಒಡೆದು ಕಾಣುವದು.

ಕಾಮಿಕ ಮೊದಲಾಗಿ ವಾತುಲಕಡೆಯಾದ ಇಪ್ಪತ್ತೆಂಟು ಶಿವಾಗಮಗಳಲ್ಲಿ ಜ್ಞಾನ ಜ್ಞೇಯ, ಅನುಷ್ಠೇಯ,ಅಧಿಕಾರಿ, ಸಾಧನ, ಸಾಧ್ಯಗಳೆಂಬ ಷಟ್‌ಪದಾರ್ಥಗಳ ಬೋಧವೆ ಮುಖ್ಯವಾಗಿರುವದು. ಇಲ್ಲಿ ಜ್ಞಾನವೆಂದರೆ ಪ್ರಕೃತಿ ಜ್ಞಾನವಲ್ಲ, ಅವಬೋಧ ರೂಪ ಜ್ಞಾನವು. ಜ್ಞಾನವು ಅವಬೋಧರೂಪವೆಂದು ಶಬ್ದರೂಪವೆಂದು ಎರಡು ಬಗೆಯಾಗಿದೆ. ಅವಬೋಧರೂಪ ಜ್ಞಾನವು ಸ್ಫುರಣಾತ್ಮಕವಾದರೆ ಶಬ್ದರೂಪ ಜ್ಞಾನವು ತರ್ಕಾತ್ಮಕವಾಗಿದೆ. ಅವಬೋಧರೂಪವಾದ ವಿಮಲ ಜ್ಞಾನವು ನಾದರೂಪದಿಂದ ಹೊರಹೊಮ್ಮಿ ಶಬ್ದರೂಪವನ್ನು ತಾಳುವದು. ಅತ್ಯಂತ ಸೂಕ್ಷ್ಮವಾದ ನಾದವು ಅವಬೋಧರೂಪ ಜ್ಞಾನದಲ್ಲಿ ಅವ್ಯಕ್ತವಾಗಿರುವದು. ಹೀಗೆ ಅವ್ಯಕ್ತವಾದ ನಾದಕ್ಕೆ ಪರ ಎಂದು ಸಂಜ್ಞೆಯುಂಟು, ಈ ಪರನಾದದ ವ್ಯಕ್ತತೆ ಸ್ಫೋಟವು. ಸ್ಫೋಟವೆಂದರೆ ಶಬ್ದ ಆದರೆ ಬರಿಯ ಶಬ್ದವಲ್ಲ ಮೂಲ ಪ್ರಣವಾತ್ಮಕ ಶಬ್ದ. ಈ ಪ್ರಣ

ವವು ಮಾನವದೇಹದ ಭ್ರೂಮಧ್ಯದಲ್ಲಿ ಪ್ರತಿಷ್ಠಿತವಾಗಿರುವದು. ಈ ಪ್ರವಣಕ್ಕೆ ವೀರ ಶೈವ ಪ್ರಕ್ರಿಯೆಯಲ್ಲಿ ಮಹಾಲಿಂಗವೆಂಬ ಹೆಸರಿದೆ. "ಅನೇನಾವಗಮ್ಯತೆ ಸರ್ವಂ ಇತ್ಯಾಗಮಂ" ಎಂದು ಮನು ಆಗಮದ ವ್ಯಾಖ್ಯೆಯನ್ನು ಹೇಳಿರುವನು. ಎಲ್ಲವನ್ನು ಬೆಳಗುವ ಪರವಸ್ತುವಿನಲ್ಲಿ ಸ್ವತಃ ಸಿದ್ಧವಾದ ಅವಬೋಧರೂಪ ಜ್ಞಾನವೇ ಆಗಮ. ಸಹಸ್ರಾರದಲ್ಲಿ ಅತ್ಯಂತ ಸೂಕ್ಷ್ಮರೂಪದಿಂದ ನೆಲೆಸಿದ ಅವಬೋಧರೂಪವಾದ ವಿಮಲ ಜ್ಞಾನವು ಭ್ರೂಮಧ್ಯಕ್ಕೆ ಇಳಿದುಬಂದು ಪಂಚಸ್ರೋತರೂಪದಿಂದ ಪಂಚಜ್ಞಾನೇಂದ್ರಿಯಗಳ ಮುಖಾಂತರ ಆಗಮಿಸುವದರಿಂದ ಆಗಮ ಎಂದು ಇನ್ನೊಂದು ವ್ಯಾಖ್ಯೆ "ಶಿವವಕ್ತ್ರೇಭ್ಯ ಆಗತ ಇತ್ಯಾಗಮಃ" ಲಿಂಗವೆಂದರೆ ಅವಬೋಧರೂಪವಾದ ವಿಮಲ ಜ್ಞಾನವು; ಈ ಜ್ಞಾನವು ಪಂಚಸ್ರೋತರೂಪದಿಂದ ಪಂಚೇಂದ್ರಿಯಗಳ ಮುಖಾಂತರ ಪಸರಿಸುವದರಿಂದ ಒಂದೊಂದು ಇಂದ್ರಿಯದಲ್ಲಿ ಒಂದೊಂದು ಅಂಗವಿದೆ ಎಂದು ವೀರಶೈವ ದರ್ಶನವು ಹೇಳುವದು. ಲಿಂಗದ ತೆರಹಿಲ್ಲದ ನಿರ್ನಿಮೇಷ ಧ್ಯಾನದಿಂದ ಎಂದರೆ ಅವಬೋಧ ರೂಪವಾದ ವಿಮಲ ಜ್ಞಾನ ಯೋಗದಿಂದ ಇಂದ್ರಿಯಂಗಳಿಗೆ ಆವರಿಸಿದ ತಮಸ್ಸು ಹರಿದು ತೇಜಸ್ಸು ಬೆಳಗಲನುವಾದರೆ ಆಗ ಅಂಗಕರಣಗಳು ಲಿಂಗಕರಣಗಳಾಗಿ ಮಾರ್ಪಡುವವು. ಈ ಮಾರ್ಪಾಟವು ಈ ಪಲ್ಲಟ, ಈ ಪರಿವರ್ತನೆಯ ಶಿವಯೋಗದ ರಹಸ್ಯವಾಗಿದೆ.

ಶಿವಾಗಮಗಳು "ಲಿಂಗಂ ಶೈವಮಿದಂ ಸಾಕ್ಷಾತ್ ಶಿವಶಕ್ತಿ ಉಭಯಾತ್ಮಕಂ" ಎಂದು ಲಿಂಗದ ವ್ಯಾಖ್ಯೆಯನ್ನು ಹೇಳುವವು. ಅವೆ ಆಗಮಗಳು. ಶಿವನು ನಾದ ಸ್ವರೂಪನೆಂದೂ ಶಕ್ತಿಯು ಬಿಂದು ಸ್ವರೂಪವೆಂದೂ ವಿವರಿಸುವವು. ಬಿಂದು ಎಂದರೆ ಚಿತ್‌ಕಲೆಯೆಂದೂ ಕೇಂದ್ರ ಸ್ಥಾನವೆಂದೂ ಅರ್ಥ ವಿವರಣೆಯುಂಟು. ಗಣಿತ ಶಾಸ್ತ್ರದಲ್ಲಿ ವರ್ತುಲದ ಇಲ್ಲವೆ ತ್ರಿಕೋನದ ಮಧ್ಯಕ್ಕೆ ಬಿಂದು ಎಂದು ಹೆಸರಿರುವಂತೆ ಭೌತಿಕ ಶರೀರದ ಕೇಂದ್ರ ಸ್ಥಾನಕ್ಕೆ ಬಿಂದು ಎಂದು ಹೆಸರಿರುವದು. ಪೀನಿಯಲ್ ಗ್ಲ್ಯಾಂಡವೆ ಈ ಬಿಂದುವಾಗಿದೆ. ಪೀನಿಯಲ್ ಗ್ಲ್ಯಾಂಡವೆಂದರೆ ಪೀಯೂಷಗ್ರಂಥಿ, ಈ ಪೀಯೂಷಗ್ರಂಥಿಯು ಚಿತ್‌ಕಲೆಯೆಂದು ಕರೆಯಲ್ಪಡುವ ಪ್ರಜ್ಞಾನದ ಸ್ಥಾನವಾಗಿದೆ. ಈ ಚಿತ್‌ಕಲೆಯನ್ನು ಪ್ರತಿನಿಧಿಸುವ ಅರುಹಿನ ಪ್ರಭೆಗೆ ಪರಶಿವ ಇಲ್ಲವೆ ಪರವಸ್ತು ಎಂದು ಹೆಸರು. ಕಣ್ಣು ಒಂದು ರೂಪವನ್ನು ಕಂಡಾಗ ಇಲ್ಲವೆ ಕಿವಿಯು ಒಂದು ಶಬ್ದವನ್ನು ಕೇಳಿದಾಗ ಹಾಗೆಯೇ ಇನ್ನುಳಿದ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳನ್ನು ಗ್ರಹಿಸಿದಾಗ ಮಿದುಳಿನ ಮಧ್ಯ ಭಾಗದಲ್ಲಿರುವ ಈ ಬಿಂದುವಿನಿಂದ ಶಕ್ತಿಯು ಹೊರಚಿಮ್ಮುತ್ತಿದೆ; ಮತ್ತು ಅದು ಮನನ ಸಾಮರ್ಥ್ಯದಿಂದ ವಿವಿಧ ವಸ್ತುಗಳ ರೂಪವನ್ನು ಗ್ರಹಿಸುತ್ತಿದೆ. ಈ ಬಿಂದುವಿನಿಂದ ಶಕ್ತಿಯು ಹೊರ ಚಿಮ್ಮದಿದ್ದರೆ ಮನಸ್ಸಿಗೆ ಯಾವ ವಸ್ತುವನ್ನು ಗ್ರಹಿಸಲು ಸಾಧ್ಯವಿಲ್ಲ. ಇಂದ್ರಿಯಗಳ ಮುಖಾಂತರವಾಗಿ ವಿಷಯಗ್ರಹಣವಾಗುತ್ತಿರುವ ವರೆಗೆ ಮನಸ್ಸಿಗೆ ಚಾಂಚಲ್ಯವು ತಪ್ಪಿದ್ದಲ್ಲ. ಮನಸ್ಸಿನ ಚಾಂಚಲ್ಯವು ಅಡಗಿ ಅರುಹಿನ ಶಾಂತಿಯ ಸಾಕ್ಷಾತ್ಕಾರವಾಯಿತೆಂದರೆ ಸಾಧಕನು ಪರವಸ್ತುವಿನಲ್ಲಿ ನಿಲುಕಡೆಯನ್ನು

ಹೊಂದುವನೆಂದು ಯೋಗಶಾಸ್ತ್ರವು ಹೇಳುವದು. ಇಂದ್ರಿಯಗಳ ವಿಷಯಗಳ ಸನ್ನಿಕರ್ಷದಲ್ಲಿ ಬಂದಾಗಲೇ ಮನದಲ್ಲಿ ತಿಳಿವಳಿಕೆ ಮೂಡುತ್ತದೆಯೆಂದರೆ ಸ್ಪರ್ಶಜ್ಞಾನವಿಲ್ಲದೆ ಮನಸ್ಸಿಗೆ ಯಾವ ಸಂವೇದನೆ ತಿಳಿವಳಿಕೆಗಳು ಉಂಟಾಗುವದಿಲ್ಲ. ಏಕೆಂದರೆ ಜ್ಞಾನೇಂದ್ರಿಯ ಹಾಗು ಕರ್ಮೇಂದ್ರಿಯಗಳ ನರಗಳಿಗೆ ಚಲನೆಯುಂಟಾಗಬೇಕಾದರೆ ಸ್ಪರ್ಶವು ಅವಶ್ಯವಾಗಬೇಕು. ಆದರೆ ಇಂದ್ರಿಯ ವ್ಯಾಪಾರವೆಲ್ಲ ಸ್ತಬ್ಧವಾಗಿ ಮನಸ್ಸು ಶಾಂತವಾಗಿ ಅದರಲ್ಲಿ ಯಾವ ತರಹದ ಹರಿದಾಟವು ಕಾಣಿಸಿಕೊಳ್ಳದಿದ್ದಾಗ ಇಂದ್ರಿಯ ಮತ್ತು ವಿಷಯಗಳೊಡನೆ ಸಂಪರ್ಕವಿಲ್ಲದಿರುವ ಅವಸ್ಥೆಯೊಂದು ಒದಗುತ್ತದೆ. ಇದೆಲ್ಲದರ ಮತಿತಾರ್ಥವೇನೆಂದರೆ ಇಂದ್ರಿಯಜನ್ಯ ಜ್ಞಾನವೆಲ್ಲವು ಕುರುಹಿನ ಸೋಂಕಿನಿಂದಲೇ ಕುದುರುವದಾದರೂ ಕುರುಹಿನ ಸೋಂಕಿಲ್ಲದೆ ಅಚ್ಚ ಅರುವಾಗುವ ಅವಸ್ಥೆಯು ಉಂಟೆಂದು ಹೇಳಿದ ಹಾಗಾಯಿತು. ದೇಹಸ್ಥ ಪುರುಷನು ಪೀಯೂಷ ಗ್ರಂಥಿಯಲ್ಲಿ ನೆಲೆನಿಂತಾಗಲೇ ಈ ಅರುಹಿನ ಅವಸ್ಥೆಯು ಅಳವಡುವದೆಂದು ಯೋಗಶಾಸ್ತ್ರವು ಸಾರುವದು.

ಶಿವಯೋಗದ ಇಡಿಯ ಸಾಧನೆಯು ಈ ಪಿಯೂಷ ಗ್ರಂಥಿಯಲ್ಲಿ ಸುಪ್ತವಾದ ಸಾಮರ್ಥ್ಯವನ್ನು ಜಾಗೃತಗೊಳಿಸುವದರ ಕಡೆಗೆ ಗಮನವೀಯುತ್ತದೆ. ಅನೇಕರಲ್ಲಿ ಈ ಗ್ರಂಥಿಯು ವಿಕಾಸವಾಗದ ಒಂದು ಅಪ್ರಬುದ್ಧ ಸ್ಥಿತಿಯಲ್ಲಿಯೇ ಇರುತ್ತದೆ. ಆದರೆ ಸಾವಕಾಶವಾಗಿಯಾದರೂ ಇದು ಪ್ರಗತಿಯನ್ನು ಹೊಂದುತ್ತಲಿರುವದೆಂಬ ಸಂಗತಿ ಸಮಾಧಾನಕಾರಕವಾಗಿದೆ. ಈ ಪ್ರಗತಿಯನ್ನು ತ್ವರಿತಗೊಳಿಸಿ ಅದನ್ನು ಒಂದು ಉಚ್ಚ ಮಟ್ಟಕ್ಕೆ ತಂದು ನಿಲ್ಲಿಸುವದು ಸಾಧ್ಯವಿದೆ. ಆ ಮಟ್ಟದಲ್ಲಿ ವಸ್ತುಗ್ರಹಣವು ಕುರುಹಿನ ಸೋಂಕಿನಿಂದಾಗದೆ ನೇರವಾಗಿ ಅರುಹಿನ ಸಂಪರ್ಕದಿಂದಾಗುವದು. ಅದರಿಂದಾಗಿ ಯೋಗಿಗೆ ಪದಾರ್ಥಗಳ ಜ್ಞಾನವು ಬಿಡಿಬಿಡಿಯಾಗಿ ಆಗದೆ ಇಡಿಯಾಗಿ ಆತ್ಮಸಾತ್ ಆಗುವದು. ಕಣ್ಣು ನೋಡುವದಕ್ಕೆ ಇಂದ್ರಿಯವಾಗಿರುವಂತೆ ಕಿವಿಯು ಕೇಳುವದಕ್ಕೆ ಕರಣವಾಗಿರುವಂತೆ ಈ ಪೀಯೂಷ ಗ್ರಂಥಿಯು ಅಖಂಡ ಜ್ಞಾನಾರ್ಜನೆಗೆ ಸಾಧನವಾಗಿರುತ್ತದೆ. ಈ ಗ್ರಂಥಿಯನ್ನು ಸಂಪೂರ್ಣವಾಗಿ ವಿಕಾಸಗೊಳಿಸಿಕೊಂಡ ಯೋಗಿಯು ಗಣಿತಶಾಸ್ತ್ರಕ್ಕೆ ನಿಲುಕುವ ಕಾಲವನ್ನು ಮೀರುವನು. ಆಗ ಅವನಿಗೆ ಹಿಂದು–ಇಂದು–ಮುಂದು ಎಂಬ ದಂದುಗವೆ ಉಳಿಯುವದಿಲ್ಲ. ಪರಿಶುದ್ಧವಾಗಿ ಅರಳಿದ ಅವನ ಅರುಹಿನ ದೃಷ್ಟಿಗೆ ಯಾವಾಗಲೂ ನಿತ್ಯ ನವೀನವಾದ ವರ್ತಮಾನವೇ ತೋರುವದು. ಅದರ ಮಾನದಲ್ಲಿ ಹಿಂದು–ಮುಂದುಗಳ ಆ ಕಲ್ಪನೆಯು ಸಹಜವಾಗಿ ಸಮನಿಸುವದು. ಪೀಯೂಷ ಗ್ರಂಥಿಯು ಜಾಗ್ರುತವಾದಲ್ಲಿ ಯೋಗಿಗೆ ಇಂತಹದೊಂದು ಅದ್ಭುತವಾದ ಸಾಮರ್ಥ್ಯವು ಕೈಸೇರುವದು. ಅದಕ್ಕಾಗಿ ಯೋಗಶಾಸ್ತ್ರದಲ್ಲಿ ಈ ಪೀಯೂಷಗ್ರಂಥಿಗೆ ತೃತೀಯ ನೇತ್ರವೆಂದು ಸಂಬೋಧಿಸುವದುಂಟು. ಈ ಮೂರನೆಯ ಕಣ್ಣಿನ ಕಾರ್ಯಕಲಾಪಗಳು ಹಣೆಯ ನಡುವಿನ ಸ್ಥಾನದಿಂದ ಭ್ರೂಮಧ್ಯಮಾರ್ಗವಾಗಿ ಸಾಗುತ್ತಿರುವವು. ಈ ಕಣ್ಣನ್ನು ಗುರುತಿಸುವದಕ್ಕಾಗಿ ಹಿಂದುಗಳು ಹಣೆಯ ಮೇಲೆ ಒಂದು

ತಿಲಕವನ್ನು ಇಟ್ಟುಕೊಳ್ಳುವದುಂಟು. ಶಿವನನ್ನು ಚಿತ್ರರೂಪವಾಗಿ ಬರೆದು ತೋರಿಸುವಾಗ ಹಣೆಯಲ್ಲಿ ಒಂದು ಕಣ್ಣನ್ನು ಮೂಡಿಸಿ ಅದರಿಂದ ಕೆಂಪು ಜ್ವಾಲೆಗಳು ಹೊರಬೀಳುತ್ತಿರುವದನ್ನು ಕಾಣಿಸುವರು. ಇದರ ರಹಸ್ಯವೇನು ? ಇದು ತೃತಿಯ ನೇತ್ರವಾದ ಪೀಯೂಷಗ್ರಂಥಿಯ ಸೂಚಕವಲ್ಲವೆ ? ಶಿವನು ಒಬ್ಬ ಮಹಾಯೋಗಿಯೆಂದು ಹೇಳುತ್ತಿರುವದಿಲ್ಲವೆ ? ಐದುಸಾವಿರ ವರುಷಗಳಿಗಿಂತ ಪೂರ್ವದ ಸಂಸ್ಕೃತಿಯನ್ನು ವ್ಯಕ್ತಗೊಳಿಸುವ ಮೋಹೆಂಜೋದಾರೋ ಹರಪ್ಪಾದ ಅಗೆತಗಳಲ್ಲಿ ಸಿಕ್ಕಿರುವ ಅವಶೇಷಗಳಲ್ಲಿ ಶಿವನನ್ನು ಅನಿಮಿಷ ದೃಷ್ಟಿಯ ಒಬ್ಬ ಮಹಾಯೋಗಿಯೆಂದು ರೂಪಿಸಲಾಗಿದೆ. ಮೋಹೆಂಜೋದಾರೋಹರಪ್ಪಾದ ಚಿತ್ರಲಿಪಿಗಳಲ್ಲಿ ದೊರೆತ ಮೀನ್‌ಕಣ್, ಮುಂಕಣ್ ಬಿಡುಗಣ್ ಈ ಮುಂತಾದ ಪದಗಳು ಆ ಶಿವಯೋಗದ ನೆಲೆ–ಕಲೆಗಳನ್ನು ನಿರ್ಧರಿಸಲು ಸಹಾಯ ಮಾಡಿರುತ್ತವೆ. ಮನುಷ್ಯನ ಪ್ರವೃತ್ತಿಗಳು ಕೀಳು ದೆಶೆಗೆ ಇಳಿಯುತ್ತ ಹೋದಂತೆ ಅವನು ವಿಷಯ ಸುಖಗಳಲ್ಲಿಯೇ ಮಗ್ನನಾಗುವನು; ಅದರಿಂದಾಗಿ ಈ ಮೂರನೆಯ ಕಣ್ಣಿನ ವಿಕಾಸವು, ಈ ಪೀಯೂಷ ಗ್ರಂಥಿಯ ಪ್ರಗತಿಯು ಕುಂಠಿತವಾಯಿತು,ಅರುಹಿನದೃಷ್ಟಿ ಎನ್ನಿಸಿಕೊಳ್ಳುವ ಈ ಕಣ್ಣು ಮತ್ತು ಕಾಮಾಂಗ ಇವು ತಕ್ಕಡಿಯ ಎರಡು ಪರಡಿಗಳಿದ್ದಂತೆ. ಒಂದು ಭಾರವಾದಾಗ ಇನ್ನೊಂದು ಹಗುರಾಗಿ ಮೇಲೆ ಏರುವದು. ಕಾಮವಾಸನೆ, ಲಾಲಸೆ ಇತ್ಯಾದಿಗಳನ್ನು ಮೀರಿ ನಿಂತಾಗ ಈ ಮೂರನೆಯ ಕಣ್ಣು ತೆರೆಯುವದು ಎಂದರೆ ಪೀಯೂಷ ಗ್ರಂಥಿಯು ಜಾಗೃತವಾಗಿ ಪ್ರಜ್ಞಾಪುಂಜವಾಗಿ ಅರಳಿಕೊಳ್ಳುವದು.

ಈ ಪೀಯೂಷ ಗ್ರಂಥಿಯನ್ನು ಜಾಗೃತಗೊಳಿಸುವದಕ್ಕಾಗಿ ವೀರಶೈವ ಧರ್ಮವು ಸರಳವಾದ. ಸುಂದರವಾದ ಸುಲಲಿತವಾದ ವಿಧಾನವೊಂದನ್ನು ಹೇಳಿಕೊಟ್ಟಿದೆ—ಅದೆ ಇಷ್ಟಲಿಂಗ ಪೂಜಾಕ್ರಮವು. ಇಷ್ಟಲಿಂಗದ ಕಂತೆಯು ಕಳಾಭರಿತವಾಗಿರಬೇಕು. ಅಲ್ಲದೆ ಅದು ಸಶಾಸ್ತ್ರೀಯವಾಗಿ ಸಿದ್ಧಮಾಡಲ್ಪಟ್ಟಿರಬೇಕು. ಪೂಜೆಯ ನಂತರ ಅನುಸಂಧಾನದ ಕಾಲಕ್ಕೆ ಇಷ್ಟಲಿಂಗವನ್ನು ಅಂಗೈಯಲಿಟ್ಟು ಮೈಯನ್ನು ಸಡಿಲಾಗಿರಿಸಿ ಅಂಗೈಯನ್ನು ಭ್ರೂಮಧ್ಯದಿಂದ ಸುಮಾರು ಹನ್ನೆರಡು ಅಂಗುಲ ಪ್ರಮಾಣದಲ್ಲಿರಿಸಿ ಲಿಂಗವನ್ನು ನೆಟ್ಟನೋಟದಿಂದ ಧ್ಯಾನಿಸಬೇಕು. ಇದಕ್ಕೆ ಶಾಂಭವಿ ಮುದ್ರೆಯೆಂದು ಹೆಸರು. ಯೋಗಶಾಸ್ತ್ರದಲ್ಲಿ ಮೂರು ಮುಖ್ಯವಾದ ಮುದ್ರೆಗಳಿವೆ. ಖೇಚರಿ, ಷಣ್ಮುಖಿ, ಶಾಂಭವಿ ಎಂದು. ಇವುಗಳಲ್ಲಿ ಶಾಂಭವಿ ಮುದ್ರೆಯು ಸುಲಭವಾಗಿರುವದರಿಂದ ಸಣ್ಣ ಮಕ್ಕಳು, ಹೆಣ್ಣುಮಕ್ಕಳು ಅದನ್ನು ಆಯಾಸವಿಲ್ಲದೆ ಸಾಧಿಸಬಹುದು. ಅನುಸಂಧಾನದ ಕಾಲಕ್ಕೆ ಇಷ್ಟಲಿಂಗದಲ್ಲಿರಿಸಿದ ತನ್ಮಯವಾದ ನೋಟವು ದೇಹದಲ್ಲಿ ತಪಸ್ಸನ್ನು ಎಂದರೆ ಒಂದು ಬಗೆಯ ಕಾವನ್ನು ಹುಟ್ಟಿಸುವದು. ಅದರಿಂದಾಗಿ ಸುಪ್ತಸ್ಥಿತಿಯಲ್ಲಿದ್ದ ಪೀಯೂಷ ಗ್ರಂಥಿಯಲ್ಲಿ ಒಂದಿಷ್ಟು ನಡುಕು ಹುಟ್ಟಿ ಅದು ಜಾಗೃತವಾಗುವದು. ಆಗ ಸಾಧಕನಿಗೆ ಅಲ್ಲಿ ಏನೋ ಒಂದು ಹರಿದಾಡುತ್ತಿದೆ ಎಂಬ ತಿಳಿವಳಿಕೆಯು ಮೂಡುವದು ; ಈ ನಡುಕವು ತಲೆದೋರಿದಾಗ

ಪೀಯೂಷ ಗ್ರಂಥಿಯನ್ನು ಸುತ್ತುವರೆದ ಮಿದುಳಿ ನಪೊಳ್ಳು ಭಾಗದಲ್ಲಿ ವಿದ್ಯುತ್ ಸಂಚಾರವಾದಂತಾಗುತ್ತದೆ. ಇದರ ಪರಿಣಾಮವಾಗಿ ಈ ಗ್ರಂಥಿಯ ಸಾಂದ್ರವಾದ ಪರಮಾಣುಗಳಲ್ಲಿ ಗುಳುಗಳು ಹರಿದಾಟ ಒಂದರ ಅರಿವಾಗುತ್ತದೆ. ಆ ಕಾಲಕ್ಕೆ ಧ್ಯಾನವು ವಿದ್ಯುತ್ ಪ್ರವಾಹವನ್ನುಂಟು ಮಾಡುವಷ್ಟು ಪ್ರಬಲವಾಗಿದ್ದರೆ ತಪಸ್ಸು ಅಥವಾ ಕಾವು ಇನ್ನಷ್ಟು ತೀವ್ರವಾಗುವದು. ಆದರಿಂದಾಗಿ ಸೂಕ್ಷ್ಮ ಶರೀರದ ವಿವಿಧ ಶಕ್ತಿಯ ಕೇಂದ್ರಗಳಲ್ಲಿ ಅವಿತುಕೊಂಡಿದ್ದ ಕಾವಳವೆಲ್ಲ ಅಡಗಿ ತೇಜವು ಒಡಮೂಡುವದು. ಹೀಗೆ ತಪಸ್ಸು ತೇಜಸ್ಸಾಗಿ ಮಾರ್ಪಟ್ಟಿತೆಂದರೆ ಇಡಿಯ ದೇಹವೆ ವಿದ್ಯುತ್ತೀಕರಣವನ್ನು ಪಡೆಯುವದು. ಆಗ ಪೀಯೂಷ ಗ್ರಂಥಿಯಲ್ಲಿದ್ದ ವಿಮರ್ಶ ಶಕ್ತಿಯು ಹೆಚ್ಚು ಪರಿಸ್ಫುಟವಾಗಿ ಜಾಗ್ರತಗೊಂಡು ಸಂತತ ಧಾರೆಯಾಗಿ ಹರಿಯತೊಡಗುವದು. ತತ್‌ಪರಿಣಾಮವಾಗಿ ವಿಚಾರ ಸಾಮರ್ಥ್ಯವು ಅತ್ಯುಚ್ಚಾಗ್ರಯ ಸ್ಥಿತಿಯನ್ನು ಪಡೆಯುವದು. ಕೊನೆಗೆ ತಪಸ್ಸು ತೇಜಸ್ಸುಗಳು ಅವಿರಳವಾಗಿ ಅನ್ಯೋನ್ಯವಾಗಿ ಬೆರೆಗು ಓಜಸ್ಸಾಗಿ ಹೊರಹೊಮ್ಮುವದು. ಈ ಓಜಸ್ಸು ಏಕಕಾಲಕ್ಕೆ ಆತ್ಮನ ಕರ್ತೃತ್ವ ಶಕ್ತಿಯಾಗಿ ಕಲ್ಪಕವೃತ್ತಿಯಾಗಿ ತಳತಳಿಸುವದು. ಎಲ್ಲಿ, ಯಾವ ಅರುಹಿನ ಅವಸ್ಥೆಯಲ್ಲಿ ಸಂಕಲ್ಪವೇ ಸೃಷ್ಟಿಯಾಗಿ ಪರಿಣಮಿಸುವದೋ, ಎಲ್ಲಿ ಹರಿತವಾದ ಕ್ರಿಯೆ ಮತ್ತು ಸ್ಫುರಿತವಾದ ಜ್ಞಾನ ಇವು ಗಾಢವಾಗಿ ವ್ಯಾಪಕವಾಗಿ ಅಳವಟ್ಟು ಅವಿರಳವಾದ ಆನಂದವು ಚಿಮ್ಮುತ್ತಿರುವದೊ ಅಲ್ಲಿ ಆ ಪ್ರಜ್ಞೆಯ ಪೂರ್ಣಾವಸ್ಥೆಯಲ್ಲಿ ಶಿವಯೋಗವು ಸಾಧಕನನ್ನು ಒಯ್ದು ನಿಲ್ಲಿಸುವದು. ಪಿಯೂಷ ಗ್ರಂಥಿಯನ್ನೇ ಜಾಗ್ರತಗೊಳಿಸುವದಕ್ಕಾಗಿ ಮೀಸಲಾದ ಶಿವಯೋಗದಲ್ಲಿ ಇಂತಹದೊಂದು ಗಹನವಾದ, ಗಂಭೀರವಾದ ಆದರೂ ಸುಂದರವಾದ ಸುಲಲಿತವಾದ ಸಾಮರ್ಥ್ಯ ವಡಗಿದೆ, ಇದುವೆ ಶಿವಯೋಗದ ಸಾರಸರ್ವಸ್ವ. □

# ಶರಣರ ಶೂನ್ಯ ತತ್ವ

ಡಾ. ಎಚ್. ತಿಪ್ಪೇರುದ್ರ ಸ್ವಾಮಿ

'ಶೂನ್ಯ' ಎಂಬ ಮಾತು ಭಾರತೀಯ ತತ್ವಶಾಸ್ತ್ರದಲ್ಲಿ ಬಹಳ ಮಹತ್ವಪೂರ್ಣವಾದ ಅರ್ಥಸಮನ್ವಿತವಾಗಿ ಬೆಳೆದು ಬಂದಿದೆ. ಅದರಲ್ಲೂ ಮುಖ್ಯವಾಗಿ ಬೌದ್ಧ ತತ್ವದರ್ಶನದಲ್ಲಿ ಈ ಮಾತು ಬಹು ಸೂಕ್ಷ್ಮವಾದ ತಾತ್ವಿಕ ವಿಶ್ಲೇಷಣೆಗೆ ಒಳಗಾಯಿತು. ೧೨ನೇ ಶತಮಾನದಲ್ಲಿ ಶರಣರು ಕಂಡ ಶೂನ್ಯತತ್ವದ ಸ್ವರೂಪವನ್ನು ನೋಡುವುದಕ್ಕೆ ಮೊದಲು ಇದನ್ನು ಹಿನ್ನೆಲೆಯಾಗಿ ಒಂದೆರಡು ಮಾತುಗಳಲ್ಲಿ ಗಮನಿಸಬಹುದು.

ಬೌದ್ಧಧರ್ಮದಲ್ಲಿ ಮಾಧ್ಯಮಿಕ ಮತ ಪ್ರಧಾನವಾಗಿ ಶೂನ್ಯ ತತ್ವವನ್ನು ಪ್ರತಿಪಾದಿಸಿತು. ನಾಗಾರ್ಜುನ ಆರ್ಯದೇವ ಮೊದಲಾದವರು ಸಮರ್ಥವಾಗಿ ಇದನ್ನೇ ಪ್ರತಿಪಾದಿಸಿ ಬೌದ್ಧಧರ್ಮಕ್ಕೆ ಸುಪುಷ್ಟವಾದ ಮಧ್ಯಮಮಾರ್ಗವನ್ನು ಹಾಕಿಕೊಟ್ಟರು. ಬೌದ್ಧಧರ್ಮದ ಇತರ ಶಾಖೆಗಳಂತೆ ಇದೂ ಸಹ "ಅನಾತ್ಮ" ವಾದವನ್ನೇ ಅವಲಂಬಿಸಿದರೂ 'ಶೂನ್ಯತತ್ವ'ದ ಪ್ರತಿಪಾದನೆಯಲ್ಲಿ ತನ್ನ ವೈಶಿಷ್ಟ್ಯವನ್ನು ಉಳಿಸಿಕೊಂಡಿದೆ. ಅಲ್ಲದೆ ಬಹುಶಃ ಹಿಂದೂ ಧರ್ಮದ ಮೇಲೂ ಅದರಲ್ಲಿಯೂ ಮುಖ್ಯವಾಗಿ ಅದ್ವೈತ ಸಿದ್ಧಾಂತದ ಮೇಲೆ ತನ್ನ ಪ್ರಭಾವವನ್ನು ಬೀರಿದೆ ಎನ್ನಬಹುದು.

ಶೂನ್ಯವಾದಿಗಳ ಪ್ರಕಾರ ಈ ಸೃಷ್ಟಿಯಲ್ಲಿ ಸತ್ಯವಾದುದು ಯಾವುದೂ ಇಲ್ಲ ಏಕೆಂದರೆ ಯಾವ ವಸ್ತುಗಳೂ ತಮ್ಮಲ್ಲಿ ಸಹಜವಾಗಿ ಅಂತರ್ಗತವಾದ ಮತ್ತು ಸ್ವತಂತ್ರವಾದ ಸ್ವಭಾವಗಳನ್ನು ಪಡೆದಿಲ್ಲ. ನಮಗೆ ಗೋಚರವಾಗುವ ಪ್ರತಿಯೊಂದು ವಸ್ತುವೂ ತನ್ನ ಆ ರೀತಿಯ ಅಸ್ತಿತ್ವಕ್ಕೆ ಇನ್ನೊಂದು ಕಾರಣವನ್ನು ನಿಯಮವನ್ನೂ ಅವಲಂಬಿಸಿರುತ್ತದೆ. ಆದುದರಿಂದ ಯಾವ ವಸ್ತುವೇ ಆಗಲಿ ತನ್ನ ಸಹಜ ಸ್ವರೂಪದಿಂದ ಅಸ್ತಿತ್ವದಲ್ಲಿದೆ ಎಂದು ಹೇಳುವುದಕ್ಕಾಗುವುದಿಲ್ಲ. ನಾವು ಒಂದು ವಸ್ತುವನ್ನು ನೋಡುವಾಗ ಆ ವಸ್ತುವಿನ 'ಆರೋಪಿತ' ರೂಪವನ್ನು ನೋಡುತ್ತೇವೆಯೇ ಹೊರತು ಅದರ 'ಸ್ವರೂಪ'ವನ್ನು ನೋಡುವುದಿಲ್ಲ.

ಹಾಗಾದರೆ ಸತ್ಯದ 'ಸ್ವ'ರೂಪವೇನು? 'ಸ್ವ'ಭಾವವೇನು ? ಒಂದು ವಸ್ತುವಿನ ಸಹಜ ಸ್ವಭಾವವೆಂದರೆ ಅದು ಇನ್ನೊಂದರ ಅಪೇಕ್ಷೆ ಇಲ್ಲದೆ ತನ್ನಲ್ಲಿಯೇ ಅಂತರ್ಗತ

ವಾಗಿರುವ ಗುಣಗಳಿಂದ ಸ್ವತಂತ್ರವಾಗಿರುವುದು. ಇದನ್ನೇ " ಪರನಿರಪೇಕ್ಷ " ಎಂದು ಕರೆದಿದ್ದಾರೆ. ಈ ದೃಷ್ಟಿಯಿಂದ ನೋಡಿ ಶೂನ್ಯವಾದದ ಪ್ರತಿಪಾದಕರು ಈ ಜಗತ್ತಿನ ಅಸ್ತಿತ್ವವನ್ನೇ ನಿರಾಕರಿಸಿದ್ದಾರೆ. ಈ ಸೃಷ್ಟಿ ' ಆರೋಪಿತ ' ಗುಣಗಳಿಂದ ಕೂಡಿದುದ ರಿಂದ ಮಿಥ್ಯವಾದುದು. ' ನಾನು ' ' ನನ್ನದು ' ಎಂಬ ಭಾವನೆಗಳೂ ಸುಳ್ಳು. ಈ ಭಾವನೆಯಲ್ಲಿ ಆಳವಾಗಿ ಬೇರುಬಿಟ್ಟಿರುವ ಸಂಸಾರದ ಬಂಧನಗಳು ಇದನ್ನರಿತೊಡನೆ ನಾಶವಾಗುತ್ತವೆ. ಹೀಗೆ ಶೂನ್ಯವಾದದ ಮೂಲವಾದ ಅಂಶ ಈ ಜಗತ್ತನ್ನು ಮತ್ತು ' ನಾನು ' ಎಂಬುದನ್ನೂ ಅಳಿಸಿ ಹಾಕುವುದು. ಅಂದರೆ ಆತ್ಮ ಮತ್ತು ಅದಕ್ಕೆ ಸಂಬಂಧಿಸಿದ ತತ್ವಗಳನ್ನು ಇಲ್ಲಗೈಯ್ಯುವುದು.

ಮಾಧ್ಯಮಿಕರು ತಾವು ಕಂಡ ಪೂರ್ಣ ವಸ್ತುವಿನ (Absolute) ಸ್ವರೂಪವನ್ನು ' ಶೂನ್ಯ ' ಎಂದು ಅರ್ಥವತ್ತಾಗಿ ನಿರ್ದೇಶಿಸಿದ್ದಾರೆ. ಅದನ್ನು ಹೀಗೆ ಸಂಗ್ರಹಿಸ ಬಹುದು. ಅನೇಕ ಅಭಿಪ್ರಾಯಗಳೂ ಆಲೋಚನೆಗಳೂ ಸಿದ್ಧಾಂತಗಳೂ ನಮ್ಮ ಮನಸ್ಸನ್ನು ಆಕ್ರಮಿಸಿವೆ. ಆ ವಿವಿಧ ಅಭಿಪ್ರಾಯಗಳ ಒತ್ತಡವನ್ನು ಮನಸ್ಸಿನಿಂದ ತೆಗೆದು ಹಾಕಿದಾಗ ಶೂನ್ಯತೆಯ ಅರಿವು ಉಂಟಾಗುತ್ತದೆ. ನಮ್ಮ ಆಲೋಚನೆಗಳ ಮಿತಿಗೆ ನಾವು ಒಳಗಾಗಿ ಒಂದು ಪೂರ್ವಕಲ್ಪಿತ ಭಾವನೆಯಿಂದ ಸತ್ಯದ ಸ್ವರೂಪವನ್ನು ಕಾಣಲು ಪ್ರಯತ್ನಿಸುತ್ತೇವೆ. ಆಗ ಸತ್ಯದ ಸಹಜ ಸ್ವರೂಪ ತಿಳಿಯುವುದಿಲ್ಲ. ಆದರೆ ಈ ಎಲ್ಲ ಆವರಣಗಳನ್ನು ತೆಗೆದುಹಾಕಿ ಎಲ್ಲ ಆರೋಪಿತ ಗುಣಗಳನ್ನೂ ತಿರಸ್ಕರಿಸಿ ನೋಡಿದಾಗ ಶೂನ್ಯತೆಯು ಅನುಭವವಾಗುತ್ತದೆ—ಎನ್ನುತ್ತದೆ ಶೂನ್ಯವಾದ. ಅಂದರೆ ಇದು ನಿಷೇಧಾತ್ಮಕ ಮಾರ್ಗದಿಂದ ಸತ್ಯವನ್ನು ಕಾಣುವ ಪ್ರಯತ್ನವೆಂಬಂತೆ ತೋರು ತ್ತದೆ. ಆದರೆ ಇದರ ಪ್ರತಿಪಾದಕರಲ್ಲಿ ಪ್ರಮುಖನಾದ ನಾಗಾರ್ಜುನ ಇದು ಸಂಪೂ ರ್ಣವಾಗಿ ನಿಷೇಧಾತ್ಮಕವಾದ (Nihilism)ವಲ್ಲವೆಂದು ತೋರಿಸಲು ಪ್ರಯತ್ನಪಡು ತ್ತಾನೆ. ಈ ಕೆಳಗಿನ ಮಾತುಗಳನ್ನು ಇಲ್ಲಿ ಗಮನಿಸಬಹುದು.

" Correctly understood Sunya is not annihilation, but the negation of negation; it is the conscious correction of an initial unconscious falsification of the real." (The central philosophy of Buddhism. —by T. R. V. Murthy). ಅಂದರೆ ಶೂನ್ಯತೆಯು ನಿಷೇಧ ವನ್ನೂ ನಿಷೇಧಿಸುತ್ತದೆ. ಆರೋಪಿತ ರೂಪದಲ್ಲಿ ಕಂಡ ಸತ್ಯವನ್ನು ಪ್ರಜ್ಞಾಪೂರ್ವಕ ವಾಗಿ ತಿಳಿದು ತಿದ್ದಿಕೊಳ್ಳುವುದೇ ಶೂನ್ಯತೆ. ಎಲ್ಲ ತತ್ವಗಳನ್ನು ನಿಷೇಧಿಸಿ ಆ ನಿಷೇಧ ವನ್ನೂ ಮೀರಿ ನಿಂತ ಸತ್ಯ ಎಂಬ ಅರ್ಥ ಇದಕ್ಕೆ ಬರುತ್ತದೆ.

ಮಾಧ್ಯಮಿಕರ ಈ ಶೂನ್ಯವಾದದ ಪ್ರಭಾವ ವೇದಾಂತದ ಮೇಲೆ, ಅದರಲ್ಲೂ ಮುಖ್ಯವಾಗಿ ಶಂಕರಾಚಾರ್ಯರ ಅದ್ವೈತ ಸಿದ್ಧಾಂತದ ಮೇಲೆ ವಿಶೇಷವಾಗಿ ಆಗಿದೆ ಎಂದು ಹೇಳುವುದುಂಟು. ಇದರಲ್ಲಿ ಸತ್ಯಾಂಶವಿರಬಹುದಾದರೂ ಶಂಕರರ ಅದ್ವೈತ ಸಿದ್ಧಾಂತ ಬೌದ್ಧಧರ್ಮಕ್ಕೆ ದೊಡ್ಡ ಏಟನ್ನೇ ಕೊಟ್ಟಿತು. ಅವರ ಪ್ರಚಂಡ ತರ್ಕ ಶಕ್ತಿ

ಬೌದ್ಧ ಮತದ ಬೇರನ್ನು ಹಿಡಿದು ಅಲುಗಾಡಿಸಿತು. ಆತ್ಮವನ್ನು ತಿರಸ್ಕರಿಸಿ 'ಶೂನ್ಯ' ವನ್ನು ಪ್ರತಿಪಾದಿಸಿದ ಮಾಧ್ಯಮಿಕರ ವಾದಕ್ಕೆ ಸಾಕಷ್ಟು ತಾತ್ವಿಕ ತಳಹದಿ ಇರಲಿಲ್ಲ. ವಿಧಾಯಕವಾದ ಯಾವ ಕಲ್ಪನೆಯನ್ನು ಮಾಧ್ಯಮಿಕರು ಶೂನ್ಯ ತತ್ವಕ್ಕೆ ಕೊಡಲಿಲ್ಲ. ಸೃಷ್ಟಿ ಸುಳ್ಳು, ದೇಹ ಮಿಥ್ಯ, ಈ ತೋರಿಕೆಯ ವಸ್ತುಗಳೆಲ್ಲ ಈ ರೂಪದಲ್ಲಿಲ್ಲ ಎಂದು ಮುಂತಾಗಿ "ಇದಲ್ಲ" "ಇದಲ್ಲ" ಎನ್ನುತ್ತ ಹೊರಟು ಅಷ್ಟಕ್ಕೇ ನಿಂತು ಬಿಟ್ಟರು. ವೇದಾಂತದಲ್ಲಿಯೂ "ನೇತಿ" "ನೇತಿ" ಎಂಬ ನಿಷೇಧ ಮಾರ್ಗವನ್ನು ಕಾಣುತ್ತೇವೆ ಆದರೆ ಅದು ಅಷ್ಟಕ್ಕೇ ನಿಲ್ಲದೇ "ಇದು" ಎಂದು ವಿಧಾಯಕ ಸ್ವರೂಪದ ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಡುತ್ತದೆ.

ಶರಣರ ಶೂನ್ಯತತ್ವ ಪ್ರತಿಪಾದನೆ ವೇದಾಂತದ ದೃಷ್ಟಿಗೆ ಸಂವಾದಿಯಾದದ್ದು. ಶರಣರ ಮಾತಿನಲ್ಲಿ "ಶೂನ್ಯ "ವೆಂದರೆ ಏನೂ ಇಲ್ಲದುದು ಎಂದಲ್ಲ; ಇದೆಲ್ಲವನ್ನೂ ಒಳಗೊಂಡುದು; ಮತ್ತು ಇದೆಲ್ಲದರ ಅಸ್ತಿತ್ವಕ್ಕೆ ಕಾರಣವಾದುದು. ಶರಣರದು ಬೌದ್ಧ ಧರ್ಮದ "ಅನಾತ್ಮವಾದ"ವಲ್ಲ. ಆತ್ಮವಾದದ ಪೂರ್ಣಮಾರ್ಗ. ವಿಶ್ವಾತ್ಮನ ಶಕ್ತಿಸಮನ್ವಿತವಾದ ಅಂಶಮಾತ್ರಗಳು ಈ ಆತ್ಮಗಳು. ಈ ವಿಶ್ವಾತ್ಮನೇ ಬಹು ರೂಪದಿಂದ ಕೂಡಿದ ಸೃಷ್ಟಿಯಾಗಿ, ಈ ಸೃಷ್ಟಿಯಲ್ಲಿರುವ ಜೀವರುಗಳಾಗಿ ಪರಿಣಮಿಸಿ ಮತ್ತೆ ಅದಕ್ಕೆ ಅತೀತನಾಗಿ ನಿಲ್ಲುತ್ತಾನೆ.

ಸೃಷ್ಟಿ ವಿಕಾಸ ಕ್ರಮದಲ್ಲಿ ಮೊಟ್ಟಮೊದಲನೆಯ ಹಂತವನ್ನು "ಶೂನ್ಯಲಿಂಗ" ಎಂದು ಶರಣರು ಕರೆದಿದ್ದಾರೆ. ಇವರು ಸೃಷ್ಟಿಯನ್ನು ಬೌದ್ಧರಂತೆ ತೋರಿಕೆಯ ಗಂಧರ್ವನಗರಿ ಎಂದಾಗಲೀ: ಶಂಕರಾಚಾರ್ಯರಂತೆ ಮಾಯೆಯ ಆವರಣದಿಂದ ಕಲ್ಪಿತವಾದ ಮಿಥ್ಯೆಯೆಂದಾಗಲೀ ಭಾವಿಸಲಿಲ್ಲ. ಜಗತ್ತು ಸತ್ಯವಾದುದು ಎಂದು ಹೇಳಿ ಈ ಪರಿಮಿತ ಸತ್ಯದ ಹಿಂದಿರುವ ಅಪರಿಮಿತ ಶಕ್ತಿಯ ಸ್ವರೂಪವನ್ನರಿಯುವ ಮಾರ್ಗವನ್ನು ಶೋಧಿಸಿದ್ದಾರೆ.

ನಿರಾಕಾರ ಸ್ವರೂಪವಾದ ಅನಾದಿಪರವಸ್ತು ಸೃಷ್ಟಿಮುಖವಾಗಿ ಈ ಜಗತ್ತಿನ ನಿರ್ಮಾಣದಲ್ಲಿ ತೊಡಗುತ್ತದೆ. ಆಗ ಬಹುಮುಖವಾದ ಈ ಸೃಷ್ಟಿ ಹಲವು ಹಂತಗಳಲ್ಲಿ ರೂಪುಗೊಳ್ಳುತ್ತದೆ. ಅದಕ್ಕೆ ಪೂರ್ವದಲ್ಲಿ ಮೊಟ್ಟಮೊದಲನೆಯದೇ ಶೂನ್ಯಲಿಂಗ ಸ್ಥಿತಿ. ಇದರ ಸ್ವರೂಪವನ್ನು ಅಲ್ಲಮಪ್ರಭು ಹೀಗೆ ಹೇಳಿದ್ದಾನೆ :

" ಅಯ್ಯಾ ನಿರವಯ ಶೂನ್ಯಲಿಂಗ ಮೂರ್ತಿಯ ನಿಲುಕಡೆ ಎಂತೆಂದೊಡೆ;
ಸಾಕಾರ ನಿರಾಕಾರನಲ್ಲ ನೋಡಾ, ನಿರವಯ ಶೂನ್ಯಲಿಂಗಮೂರ್ತಿ;
ಆದಿಯಲ್ಲ ಅನಾದಿಯಲ್ಲ; ಇಹದವನಲ್ಲ ಪರದವನಲ್ಲ;
ಸುಖದವನಲ್ಲ ದುಃಖದವನಲ್ಲ; ನಿರವಯ ಶೂನ್ಯಲಿಂಗಮೂರ್ತಿ
ಪುಣ್ಯ ಪಾಪದವನಲ್ಲ; ಕರ್ತೃಭೃತ್ಯನಲ್ಲ; ಕಾರಣಕಾರ್ಯನಲ್ಲ;
ಧರ್ಮ ಕರ್ಮಿಯಲ್ಲ, ಪೂಜ್ಯ ಪೂಜಕನಲ್ಲ;— ಇಂತು ಉಭಯುವಳಿದು
ಬೆಳಗುವಾ ನೋಡಾ ನಮ್ಮ ಗುಹೇಶ್ವರ ಲಿಂಗವು."

ಇದು ಶೂನ್ಯಲಿಂಗಮೂರ್ತಿಯ ಸ್ವರೂಪ. ಇಲ್ಲಿಯೂ ನಿಷೇಧದ ಮಾತು ಬಂದರೂ ಅದು ಬೌದ್ಧರಂತೆ ಅಭಾವದಲ್ಲಿ ನಿಲ್ಲದೆ, ಎಲ್ಲ ಇರುವಿಕೆಗಳನ್ನು ಸಂಕಲ್ಪಶಕ್ತಿ ರೂಪದಲ್ಲಿ ಒಳಗೊಂಡ ಪೂರ್ಣಭಾವದಲ್ಲಿ ನಿಲ್ಲುತ್ತದೆ. ಅಂತೆಯೇ ಇತರ ಶರಣರ ಅನೇಕ ಮಾತುಗಳಲ್ಲಿ ಈ ಶೂನ್ಯಲಿಂಗದ ಸ್ವರೂಪ ಸ್ಪಷ್ಟವಾಗಿ ಮೂಡಿ ನಿಂತಿರುವುದನ್ನು ಕಾಣಬಹುದು.

ಈ ತೋರಿಕೆಯ ಸೃಷ್ಟಿಯೆಲ್ಲವೂ ಸರ್ವಶೂನ್ಯ ನಿರಾಲಂಬ ಸ್ಥಿತಿಯಲ್ಲಿದ್ದ ಪರಶಿವನಿಂದ ಹೊರಹೊಮ್ಮುತ್ತದೆ. ಈ ಸೃಷ್ಟಿಕ್ರಮವನ್ನು ಹೀಗೆ ಸಂಗ್ರಹಿಸ ಬಹುದು; ಸರ್ವಶೂನ್ಯ ನಿರಾಲಂಬ ಶಿವ, ಮೊದಲು ನಿರಂಜನ ಬ್ರಹ್ಮನಾಗಿ ಪರಿ ಣಮಿಸಿದ. ಈ ನಿರಂಜನ ಬ್ರಹ್ಮನಲ್ಲಿ ಉಂಟಾದ ನೆನಹೇ ನಿರಂಜನ ಓಂಕಾರ ಶಕ್ತಿ. ಈ ಶಕ್ತಿಯಿಂದ ಶೂನ್ಯಲಿಂಗವಾಯಿತು. ಇದಕ್ಕೆ ಮಹಾಜ್ಞಾನ ಚಿತ್ತು ಅಂಗವಾಗಿ ಪರಿಣಮಿಸಿತು. ಈ ಶೂನ್ಯಲಿಂಗದಿಂದ ಜ್ಞಾನ ಚಿತ್ತನ್ನು ಅಂಗವಾಗಿವುಳ್ಳ ನಿಷ್ಕಲ ಬ್ರಹ್ಮ ಉದ್ಭವಿಸಿತು. ಈ ನಿಷ್ಕಲ ಬ್ರಹ್ಮದಿಂದ ಚಿನ್ನಾದ ಚಿದ್ಬಿಂದು ಚಿತ್ಕಲೆಗಳು ಹುಟ್ಟಿದವು. ಇವು ತಮ್ಮ ಮೂಲಶಕ್ತಿಯಾದ ಜ್ಞಾನ ಚಿತ್ತುವಿನೊಡನೆ ಸೇರಿ ಈ ನಾಲ್ಕೂ ಒಟ್ಟುಗೂಡಿ ಓಂಕಾರವೇ ಪೀಠವಾದ ಮಹಾಲಿಂಗವಾಗಿ ಪರಿಣಮಿಸಿತು. ಮಹಾಲಿಂಗದಿಂದ ಪಂಚ ಸಾದಾಖ್ಯಗಳೂ ಇವುಗಳಿಂದ ಸದಾಶಿವನ ಪಂಚಮುಖಗಳೂ ಉಂಟಾದುವು. ಆದರಿಂದ ಪಂಚಭೂತಗಳು ಹುಟ್ಟಿದುವು. ಆ ಮೂರ್ತಿಯ ಕಣ್ಣು ಮತ್ತು ಮನಸ್ಸಿನಿಂದ ಸೂರ್ಯ ಚಂದ್ರರು ಹುಟ್ಟಿದರು; ಗೋಪ್ಯಮುಖದಿಂದ ಆತ್ಮ ಆ ವಿರ್ಭವಿಸಿತು. ಪಂಚಭೂತಗಳು, ಸೂರ್ಯ ಚಂದ್ರ ಆತ್ಮ ಇವು ಆ ಸದಾ ಶಿವಮೂರ್ತಿಯ ಅಷ್ಟತನುಗಳಾದುವು. ಹೀಗೆ ಸೃಷ್ಟಿ ಬಹುಮುಖವಾಗಿ ವಿಕಾಸ–ಗೊಳ್ಳುವುದು; ಮತ್ತೆ ಆತನಲ್ಲಿಯೇ ಲೀನವಾಗುವುದು. ಇದು ಸರ್ವಶೂನ್ಯ ನಿರಾ ಲಂಬ ಶಿವನ ಲೀಲೆ. ಆತ ಲೀಲೆಯಾದೊಡೆ ಉಮಾಪತಿ; ಲೀಲೆ ತಪ್ಪಿದೊಡೆ ಸ್ವಯಂಭು".

ಇಲ್ಲಿ ಶರಣರ ದೈವತ್ವದ ಕಲ್ಪನೆಯ ವ್ಯಾಪಕ ಸ್ವರೂಪವನ್ನು ಕಾಣುತ್ತೇವೆ. ಬ್ರಹ್ಮ ವಿಷ್ಣು ರುದ್ರ–ಈ ತ್ರಿಮೂರ್ತಿಗಳನ್ನು ಮೀರಿನಿಂತ ನಿರ್ಲೇಪ ನಿರಂಜನನ ನಿಲವನ್ನು ಅವರು "ಶೂನ್ಯ" ಎಂದು ಕಳೆದರು, ಅದನ್ನು ಕೆಲವು ವೇಳೆ "ಬಯಲು" ಎಂಬ ಮಾತಿನಿಂದಲೂ ನಿರ್ದೇಶಿಸಿದ್ದಾರೆ. ಸಿದ್ಧರಾಮ ಹೇಳುತ್ತಾನೆ:

"ಬೀಜವೃಕ್ಷದಂತೆ ನೀಸಿಪ್ಪೆಯಯ್ಯಾ,
ನಿರಾಕಾರವೇ ಮೂರ್ತಿಯಾಗಿ, ಮೂರ್ತಿಯೇ ನಿರಾಕಾರವಾಗಿ,
ಇವೆಲ್ಲವನುಳಿದು ಬಯಲಾಗಿಪ್ಪೆ
ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನದೇವಾ"

ಮೂರ್ತಿ ಮತ್ತು ನಿರಾಕಾರಗಳು ಬೀಜ ವೃಕ್ಷನ್ಯಾಯವಿದ್ದಂತೆ, ಯಾವುದು ಮೊದ

ಲೆಂದು ಹೇಳುವಂತಿಲ್ಲ. ಈ ಸೃಷ್ಟಿ ಅನಾದಿ ಇದರೊಡನೆಯೇ ರೂಪ ಅಪರೂಪ ಗಳು ಉಂಟಾದುವು. ಆದರೆ ಅದಕ್ಕೆ ಕಾರಣವಾದ ಪರಸ್ಪರ ವಸ್ತುವಿನ ಸಹಜ ಸ್ವರೂಪ ಇವೆರಡನ್ನೂ ದಾಟಿದ ಆಚೆಯ ನಿಲುವು. ಅದೇ ಬಯಲು,

"ಬಯಲು ಮೂರ್ತಿಯಾಗಿ ನಿಂತನೊಬ್ಬ ಶರಣ
ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ
ಆತನ ಶಾಂತಿ ಸೈರಣೆಯಿಂದ ಹುಟ್ಟಿದಾತ ವಿಷ್ಣು,
ಆತನ ಕೋಪದಿಂದ ಹುಟ್ಟಿದಾತ ರುದ್ರ,

ಈ ಮೂರು ಪೀಠವಂತಿರಲಿ,

ಈ ತತ್ವತ್ರಯಂಗಳಿಗೆ ತಾನೆ ಕಾರಣವಾಗಿಪ್ಪ
ಶರಣನ ನಿಲುವನರಿದು ಶರಣೆನುತಿರ್ದೆನು
ಕೂಡಲ ಚೆನ್ನ ಸಂಗಮದೇವಾ

ಎಂಬ ಚನ್ನಬಸವಣ್ಣನ ಮಾತನ್ನು ಇಲ್ಲಿ ಗಮನಿಸಬೇಕು. ತ್ರಿಮೂರ್ತಿಗಳ ಉತ್ಪತ್ತಿಗೆ ಕಾರಣವಾದ ಶಕ್ತಿಯನ್ನು 'ಶರಣ' ಎಂದು ನಿರ್ದೇಶಿಸಿದ್ದಾನೆ ಚನ್ನಬಸವಣ್ಣ. ಆ 'ನಿರಾಕಾರ ಶರಣ'ನನ್ನು ಸೃಷ್ಟಿ ಕ್ರಮದಲ್ಲಿ ಮಹಾಲಿಂಗ ಎಂದು ಕರೆಯಲಾಗಿದೆ. ಆ ಮಹಾಲಿಂಗದ ಉತ್ಪತ್ತಿಗೆ ಕಾರಣವಾದ ತತ್ವವೇ 'ಶೂನ್ಯಲಿಂಗ' ಅಥವಾ 'ಬಯಲು'. ಆದ್ದರಿಂದಲೇ ಚನ್ನಬಸವಣ್ಣ "ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ" ಎನ್ನುತ್ತಾನೆ.

ಇದನ್ನು ಇನ್ನೂ ಸ್ಪಷ್ಟವಾಗಿ ಅಲ್ಲಮಪ್ರಭುವಿನ ಈ ವಚನದಲ್ಲಿ ಕಂಡುಕೊಳ್ಳ ಬಹುದು.

"ವಾರಿ ಬಲಿದು ಕಲ್ಲಾದಂತೆ, ಶೂನ್ಯವೇ ಸ್ವಯಂಭುವಾಯಿತ್ತು
ಆ ಸ್ವಯಂಭುಲಿಂಗದಿಂದಾಯಿತ್ತು ಮೂರ್ತಿವಸ್ತು
ಆ ಮೂರ್ತಿಯಿಂದಾಯಿತ್ತು ವಿಶ್ವೋತ್ಪತ್ತಿ
ಆ ವಿಶ್ವೋತ್ಪತ್ತಿಯಿಂದಾಯಿತ್ತು ಸಂಸಾರ
ಆ ಸಂಸಾರದಿಂದಾಯಿತ್ತು ಮರವೆ
ಆ ಮರವೆಯೆಂಬ ಮಹಾಮಾಯೆ ವಿಶ್ವವ ಮುಸುಕಿದಲ್ಲಿ
ನಾ ಬಲ್ಲೆ ಬಲ್ಲಿದರೆಂಬ ಅರುಹಿರಿಯರೆಲ್ಲ
ತಾಮುಸಕ್ಕೊಳಗಾಗಿ ಮೀನಕೇತನನ ಬಲೆಗೆ ಸಿಲುಕಿ
ಮಾಯೆಯ ಬಾಯ ತುತ್ತಾದರಲ್ಲಾ ಗುಹೇಶ್ವರಾ

ಶೂನ್ಯವೇ ಸ್ವಯಂಭುವಾಯಿತು. ಅದೇ ಮೂರ್ತಿಯಾಗಿ, ಆ ಮೂರ್ತಿಯಿಂದ ವಿಶ್ವೋತ್ಪತ್ತಿ, ಸಂಸಾರ, ಮರವೆಗಳು ಉಂಟಾದುದನ್ನು ಪ್ರಭುದೇವ ಇಲ್ಲಿ ಹೇಳಿದ್ದಾನೆ.

ಹೀಗೆ ಶಿವನ ಮೂಲರೂಪವಾದ ಪೂರ್ಣತೆಯನ್ನು ಶರಣರು 'ಶೂನ್ಯ' ಮತ್ತು 'ಬಯಲು' ಎಂಬ ಪದಗಳಿಂದ ನಿರ್ದೇಶಿಸಿದ್ದಾರೆ. ಈ ಎರಡು ಪದಗಳಿಗೆ ವಿಶಿಷ್ಟ ಅರ್ಥವನ್ನು ತುಂಬಿದ್ದಾರೆ. ಬೌದ್ಧರಲ್ಲಿ 'ಶೂನ್ಯ' ಮತ್ತು 'ನಿರ್ವಾಣ' ಎಂಬ ಶಬ್ದಗಳನ್ನು ಕಾಣುವಂತೆ ಶರಣರಲ್ಲಿ ಶೂನ್ಯ, ಬಯಲು ಶಬ್ದಗಳನ್ನು ಕಾಣುತ್ತೇವೆ. ಈ ಎರಡೂ ಕಡೆಗಳಲ್ಲಿ ಶೂನ್ಯ ಎಂಬ ಮಾತು ಒಂದೇ ಆದರೂ ಅವುಗಳ ಅರ್ಥದಲ್ಲಿ ಅಂತರವಿದೆ. ಹಾಗೇ ಬಯಲು, ನಿರ್ವಾಣಗಳಲ್ಲಿಯೂ ಅದೇ ಅಂತರ ಕಂಡುಬರುತ್ತದೆ.

'ನಿರ್ವಾಣ' ಎಂಬ ಮಾತನ್ನು ಬೌದ್ಧರು ಬಳಸಿದುದು ಅವರ ಶೂನ್ಯದ ಕಲ್ಪನೆಗೆ ಅನುಗುಣವಾಗಿದೆ. ಅಂದರೆ ಅಭಾವವೆಂದು ಸ್ಪಷ್ಟವಾಗಿ ಹೇಳದಿದ್ದರೂ ಯಾವ ಭಾವವೂ ಇಲ್ಲದ ಒಂದು ಸ್ಥಿತಿ ಅದು. 'ನಿರ್ವಾಣ' ಎಂಬ ಮಾತು ಭಗವದ್ಗೀತೆಯಲ್ಲೂ ಒಂದೆರಡು ಕಡೆ ಬರುತ್ತದೆ. "ಲಭಂತೇ ಬ್ರಹ್ಮ ನಿರ್ವಾಣಂ" ಮತ್ತು "ಅಭಿತೋ ಬ್ರಹ್ಮ ನಿರ್ವಾಣಂ ವರ್ತತೇ ವಿದಿತಾತ್ಮನಾ" ಇಲ್ಲಿ ನಿರ್ವಾಣ ಎಂಬುದಕ್ಕೆ ಆನಂದಮಯವಾದ ಸ್ಥಿತಿಯೆಂದೇ ಹೇಳಬೇಕಾಗುತ್ತದೆ. ಇಲ್ಲಿ ಅಭಾವದ ಸೋಂಕೇ ಇಲ್ಲ. ಬರಬರುತ್ತಾ ಬೌದ್ಧರಲ್ಲಿಯೂ ಇದು ಕೆಲವು ವೇಳೆ ನಿಷೇಧಾರ್ಥವನ್ನು ಕಳೆದುಕೊಂಡು ಆನಂದವೆಂಬ ಅರ್ಥದಲ್ಲಿ ಬಳಕೆಯಾಗಿರುವುದುಂಟು. ಆದರೆ ಪ್ರಾರಂಭದಲ್ಲಿ ಅದಕ್ಕೆ ಎಲ್ಲವನ್ನೂ ಇಲ್ಲಗೈದಾಗ ಉಳಿಯುವ ನಿಷೇಧಾರ್ಥವನ್ನೇ ಬೌದ್ಧರು ಇಟ್ಟುಕೊಂಡಿದ್ದರು. ಶರಣರು ಶೂನ್ಯ ಎಂಬುದಕ್ಕೆ ಪೂರ್ಣವೆಂಬ ಅರ್ಥವನ್ನು ಕೊಟ್ಟಂತೆ, ಅದರಲ್ಲಿ ಲೀನವಾದ ಜೀವಾತ್ಮನ ನಿಲವನ್ನು 'ಬಯಲು' ಎಂದು ನಿರ್ದೇಶಿಸಿದರು. ಬಯಲು ಬಯಲಾಗುವುದನ್ನು 'ನಿರ್ವಯಲು' ಎಂದೂ ಆಗಾಗ ಅವರು ಹೇಳುವುದುಂಟು.

ವ್ಯಕ್ತಿ ತನ್ನನ್ನು ಪರಿಮಿತಗೊಳಿಸುವ ಆಸೆ, ದ್ವೇಷ, ಮೋಹಗಳನ್ನೆಲ್ಲಾ ನಾಶಗೊಳಿಸಿ ತನ್ನ ವ್ಯಕ್ತಿತ್ವವನ್ನು ಆ ಪೂರ್ಣಶೂನ್ಯದಲ್ಲಿ ಲೀನಗೊಳಿಸಿ ಅದರೊಡನೆ ಸಮರಸವಾಗುವುದು ಎಂಬ ಅರ್ಥವನ್ನು 'ಬಯಲು' ಎಂಬ ಮಾತಿನಲ್ಲಿ ಕಾಣುತ್ತೇವೆ. ನಿರ್ವಾಣಕ್ಕೂ ಬಯಲಿಗೂ ಇರುವ ವ್ಯತ್ಯಾಸವನ್ನು ಈಗ ಸ್ಪಷ್ಟವಾಗಿ ಕಂಡುಕೊಳ್ಳಬಹುದು. 'ನಿರ್ವಾಣ'ವು ಆಶೆ ದ್ವೇಷ ಮೋಹಗಳನ್ನೆಲ್ಲ ನಿರಸನಗೊಳಿಸಿದ ನಂತರ ಉಳಿಯುವ ಅಭಾವ ಸ್ಥಿತಿ. ಆದರೆ 'ಬಯಲು' ಎಂದರೆ ಅವನ್ನೆಲ್ಲಾ ವಿರಸನಗೊಳಿಸಿದ ನಂತರ ವಿಕಾಸಗೊಂಡ ಆತ್ಮವು ವಿಶ್ವಾತ್ಮನೊಡನೆ ಸಮರಸಗೊಳ್ಳುವ ಪರಿಪೂರ್ಣ ಸ್ಥಿತಿ. 'ನಿರ್ವಾಣ'ದಲ್ಲಿ ವ್ಯಕ್ತಿ ಏನೂ ಇಲ್ಲದವನಾಗುತ್ತಾನೆ. ಆದರೆ 'ಬಯಲು' ಎಲ್ಲವೂ ತಾನೇ ಆಗಿ ಪರಿಣಮಿಸುವ ನಿಲುವು.

> ''ಏನೆಂಬೆನೇನೆಂಬೆ, ಏನೆಂಬೆನೇನೆಂಬೆ ಎರಡೊಂದಾದುದ ?
> ಎನೆಂಬೆನೇನೆಂಬೆನವಿರಳ ಘನವ ?
> ಮಹಾದಾನಿ ಕೂಡಲ ಸಂಗಮದೇವ ತಾನೇ ಬಲ್ಲ''

ಎಂಬ ಬಸವಣ್ಣನವರ ಮಾತನ್ನು ನೋಡಬಹುದು, ಎರಡು ಒಂದಾಗುವ ಅವಿರಳ ಘನ, ಅದೇ 'ಬಯಲು'— ಈ 'ಘನ' ಎಂಬ ಶಬ್ದವನ್ನೂ ಶರಣರು 'ಶೂನ್ಯ'

ಬಯಲು' ಗಳಂತೆಯೇ ವಿಶಿಷ್ಟವಾದ ಅರ್ಥದಲ್ಲಿ ಬಳಸಿ ಅರ್ಥಗರ್ಭಿತವಾದುದನ್ನಾಗಿ ಮಾಡಿದ್ದಾರೆ.

"ಘನಗಂಭೀರ ಮಹಾಘನದೊಳಗೆ ಘನಕ್ಕೆ ಘನವಾಗಿರ್ದೆನಯ್ಯಾ;
ಕೂಡಲ ಸಂಗಮದೇವನೆಂಬ ಮಹಾ ಬೆಳಗಿನೊಳಗಿರ್ದು
ಶಬ್ದ ಮುಗ್ಧವಾದುದನೆಂಬೆನಯ್ಯಾ ?"

ಎಂಬ ವಚನವನ್ನೂ ಇಲ್ಲಿ ನೋಡಬಹುದು. ಬಯಲಿನ ಅರ್ಥವ್ಯಾಪ್ತಿಯನ್ನು ಬಸವಣ್ಣನವರ ಇನ್ನೊಂದು ವಚನ ಹೀಗೆ ಹೇಳುತ್ತಿದೆ:

"ಬಯಲು ರೂಪ ಮಾಡಬಲ್ಲಾತನೇ ಶರಣ.
ಆ ರೂಪ, ಬಯಲು ಮಾಡಬಲ್ಲಾತನೇ ಲಿಂಗಾನುಭಾವಿ,
ಆ ಬಯಲು ರೂಪ ಮಾಡಲರಿಯದಿರ್ದಡೆ ಎಂತು ಶರಣನೆಂಬೆ?
ಆ ರೂಪ, ಬಯಲ ಮಾಡಲರಿಯದಿರ್ದಡೆ ಎಂತು ಲಿಂಗಾನುಭಾವಿಯೆಂಬೆ?
ಈ ಉಭಯವನೊಂದಾಗಿಯರಿಯದಿರ್ದಡೆ
ನಿಮ್ಮಲ್ಲಿ ತೆರಪುಂಟೇ ಕೂಡಲ ಸಂಗಮದೇವಾ."

ಬಯಲು ಮತ್ತು ರೂಪಗಳ ಮೂಲಕ ಶಿವ ಮತ್ತು ಜೀವರ ಸಂಬಂಧ ಮತ್ತು ಸ್ವರೂಪಗಳನ್ನು ಬಸವಣ್ಣನವರು ಇಲ್ಲಿ ಮಾಡಿಕೊಟ್ಟಿದ್ದಾರೆ.

ಅಲ್ಲಮಪ್ರಭು ಹೇಳುವ ಈ ಮಾತಂತೂ ಬಯಲಿನ ಅನೇಕ ಹಂತಗಳನ್ನು ಸೂಕ್ಷ್ಮವಾಗಿ ನಿರ್ದೇಶಿಸುತ್ತಿದೆ:

"ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು,
ಬಯಲು ಬಯಲಾಗಿ ಬಯಲಾಯಿತ್ತಯ್ಯಾ.
ಬಯಲು ಜೀವನ ಬಯಲ ಭಾವನೆ
ಬಯಲು ಬಯಲಾಗಿ ಬಯಲಾಯಿತ್ತಯ್ಯ.
ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು;
ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ"

ಚನ್ನಬಸವಣ್ಣ ತನ್ನೊಂದು ವಚನದಲ್ಲಿ ಈ ಅರ್ಥವನ್ನು ಇನ್ನೊಂದು ರೀತಿಯಲ್ಲಿ ವ್ಯಕ್ತಪಡಿಸಿದ್ದಾನೆ.

"ತನು ಬಯಲು ನಿರವಯದೊಳಗಡಗಿತ್ತು;
ಮನ ಬಯಲು ನಿರವಯದೊಳಗಡಗಿತ್ತು;
ಭಾವ ಬಯಲು ನಿರವಯದೊಳಗಡಗಿತ್ತು;
ಬಯಲು ಬಯಲು ಬೆರಸಿ ಬಯಲೇಯಾಯಿತ್ತು,
ಕೂಡಲ ಚನ್ನ ಸಂಗಯ್ಯನೆಂಬ ನುಡಿಯಡಗಿತ್ತು."

ಬಯಲು ಬಯಲನ್ನು ಸೇರಿ ಬಯಲೇ ಆಗಿ ಉಳಿಯುತ್ತದೆ. ಅಲ್ಲಿ ಕೂಡಲ ಚೆನ್ನ ಸಂಗಯ್ಯನೆಂಬ ನಾಮವೂ ಅಡಗುತ್ತದೆ.

ಶರಣರ ಉಪಾಸನೆಯಲ್ಲಿಯೂ ಈ ಬಯಲಿನ ಪರಿಭಾವನೆಯ ಜ್ಞಾನಮಾರ್ಗವೇ ಪ್ರಧಾನವಾಗಿ ಕಾಣುತ್ತದೆ. ಪರಶಿವನನ್ನು ಬಯಲಿನ ಸಂಕೇತದಿಂದಲೇ ಅನುಸಂಧಾನ ಮಾಡುವುದು ಅವರಿಗೆ ಹೆಚ್ಚು ಪ್ರಿಯವಾಗಿ ತೋರಿತು. ಅಪಾರವಾದ ಬಯಲಿನ ವ್ಯಾಪಕತೆಯನ್ನೆಲ್ಲಾ ಇಷ್ಟಲಿಂಗದಲ್ಲಿ ಅಡಗಿಸಿ ಅದನ್ನು ಕರಸ್ಥಲದಲ್ಲಿಟ್ಟು ಪೂಜಿಸುತ್ತಾರೆ.

> " ಕಾಣಬಾರದ ಲಿಂಗವು ಕರಸ್ಥಲಕ್ಕೆ ಬಂದಡೆ
> ಎನಗಿದು ಸೋಜಿಗ, ಎನಗಿದು ಸೋಜಿಗ,
> ಅಹುದೆನಲಮ್ಮೆನು, ಅಲ್ಲೆನಲಮ್ಮೆನು;
> ಗುಹೇಶ್ವರಲಿಂಗ ನಿರಾಕಾರ ಬಯಲು ಆಕಾರವಾದಡೆ."

ನಿರಾಳ ನಿರಾಕಾರವಾದ ಬಯಲು ಸಾಕಾರವಾಗಿ ಕರಸ್ಥಲಕ್ಕೆ ಬಂದು ಉಪಾಸನೆಗೊಳ್ಳುತ್ತಿರುವುದೇ ಒಂದು ಸೋಜಿಗ ಎನ್ನುತ್ತಾನೆ ಪ್ರಭು. ಅಕ್ಕಮಹಾದೇವಿ ಒಂದು ವಚನದಲ್ಲಿ ಈ ಅಭಿಪ್ರಾಯವನ್ನು ಬಹಳ ಸುಂದರವಾಗಿ ಹೇಳಿದ್ದಾಳೆ:

> " ಪಾತಾಳವಿತ್ತಿತ್ತ, ಪಾದಂಗಳತ್ತತ್ತ;
> ದಶದಿಕ್ಕು ಇತ್ತಿತ್ತ, ದಶಭುಜಗಳತ್ತತ್ತ ;
> ಬ್ರಹ್ಮಾಂಡವಿತ್ತಿತ್ತ, ಮಣಿಮುಕುಟವತ್ತತ್ತ ;
> ಚೆನ್ನಮಲ್ಲಿಕಾರ್ಜುನಯ್ಯಾ ನೀವೆನ್ನ ಕರಸ್ಥಲಕ್ಕೆ ಬಂದು
> ಚುಳುಕಾದಿರಲ್ಲಾ ಲಿಂಗವೇ."

ವಿಶ್ವವನ್ನೆಲ್ಲಾ ವ್ಯಾಪಿಸಿ, ಮೀರಿನಿಂತಿರುವ ಪರಿಪೂರ್ಣ ಶೂನ್ಯ ಸ್ವರೂಪವಾದ ಶಿವತತ್ವ ಮಹಾದೇವಿಯ ಕರಸ್ಥಲಕ್ಕೆ ಬಂದು ಚುಳುಕಾಗಿದೆ.

ಹೀಗೆ ಶೂನ್ಯವೇ ಮೂರ್ತಿಗೊಂಡು ಬಯಲಿನ ಕುರುಹಾಗಿ ಬಂದ ಇಷ್ಟಲಿಂಗದ ಅನುಸಂಧಾನ ಶರಣರನ್ನು ಕೊನೆಯಲ್ಲಿ ಆ ಬಯಲಿನ ನಿಲವಿಗೇ ತರುತ್ತದೆ. ಅದನ್ನು ಅಲ್ಲಮಪ್ರಭು ಬಹಳ ಅರ್ಥವತ್ತಾಗಿ ಹೇಳಿದ್ದಾನೆ:

> " ಮನದ ಕೊನೆಯ ಮೇಲೆ ನೆನೆದ ನೆನಹು
> ಜನನ ಮರಣವ ನಿಲಿಸಿ, ಜ್ಞಾನಜ್ಯೋತಿಯ ಉದಯ
> ಭಾನುಕೋಟಿಯ ಮೀರಿ
> ಸ್ವಾನುಭಾವದ ಉದಯ ಜ್ಞಾನ ಶೂನ್ಯದಲಡಗಿದ
> ಘನವನೇನೆಂಬೆನು ಗುಹೇಶ್ವರಾ."

ಸ್ವಾನುಭಾವದ ಉದಯ, ಜ್ಞಾನ ಶೂನ್ಯದಲ್ಲಡಗಿತು – ಎಂಬ ಮಾತು ಮನನೀಯ ವಾದುದು. "ಬಯಲ ಶರಣರಿಗೆ ಬಯಲ ಪಾಶ ಬಂದು ಕಟ್ಟಿರಲು, ಬಯಲ ಲಿಂಗ ಬಂದು ಬಿಡಿಸಲು ಬಯಲು ಬಯಲಲೋಕವಾಯಿತ್ತು" ಎನ್ನುತ್ತಾನೆ ಒಂದು ಕಡೆ ಹಾವಿನ ಹಾಳ ಕಲ್ಲಯ್ಯ.

ಒಟ್ಟಿನಲ್ಲಿ ಹೇಳುವುದಾದರೆ ಶರಣರ ಶೂನ್ಯತತ್ವದ ವಿಮರ್ಶೆ ಅಗಾಧವಾದ ಅರ್ಥವನ್ನು ಒಳಗೊಂಡು ಅನುಭಾವದ ಮಟ್ಟಕ್ಕೇರುತ್ತದೆ. ಬೌದ್ಧರಂತೆ ಅವರು ಅನಾತ್ಮವಾದದ ಅಭಾವ ಮಾರ್ಗ ಹಿಡಿಯದೆ ಆತ್ಮವಾದದ ಮಾರ್ಗ ಅವಲಂಬಿಸಿದರು. ಮಾತಿಗೆ ನಿಲುಕದ ಪರಿಪೂರ್ಣ ಶೂನ್ಯವನ್ನು ಮಾತುಗಳಲ್ಲಿ ಹಿಡಿದಿಡುವ ಸಾಹಸವನ್ನು ಯಶಸ್ವಿಯಾಗಿ ನಿರ್ವಹಿಸಿದರು. □

# ವಚನ ವಾಙ್ಮಯದಲ್ಲಿ ನಿರೂಪಿತವಾದ ಶೈವ-ವೀರಶೈವಗಳ ಸಂಬಂಧ

ಪ್ರೊ. ಬಿ. ಸಿ. ಜವಳಿ

[ ೧ ]

ಕನ್ನಡ ನಾಡಿನಲ್ಲಿ, ಹೇರಳವಾಗಿ ಶಾಸನಗಳು ದೊರೆಯುತ್ತಿರುವಂತೆಯೇ ಶಿವಶರಣರ ವಚನಗಳೂ ಹರೀಶ್ವರಾದಿ ಕವಿಗಳ ಕಾವ್ಯಗಳೂ ದೊರೆಯುತ್ತಿದ್ದು, ಅವು ಅಂದಿನ ಕಾಲದ ಸಾಮಾಜಿಕ ಚಿತ್ರಣವನ್ನು ಅತಿಸೊಗಸಾಗಿ ಒದಗಿಸುತ್ತಿರುವದರಿಂದ, ಅವುಗಳ ಆಧಾರದಿಂದ ಇಲ್ಲಿ ಶಿವಶರಣರ ಕಾಲದ ಶೈವಪಂಥಗಳು, ಅಂದಿನ ಹಾಗೂ ಅದಕ್ಕೂ ಪೂರ್ವದ ಶೈವ-ವೀರಶೈವದ ಸಂಬಂಧ, ರೀತಿ ನೀತಿಗಳನ್ನು ವಿವೇಚಿಸುವುದು ಈ ಲೇಖನದ ಉದ್ದೇಶವಾಗಿದೆ. ಶಿವಶರಣರು ತಾವು ಹೊಸ ಹೊಸವಿಚಾರಗಳನ್ನು ಹೊಂದಿದವರಾಗಿದ್ದುದರಿಂದ ತಮ್ಮ ತಮ್ಮ ವಚನಗಳಲ್ಲಿ ಅಂದಿನ ಕಾಲದ ಬೇರೆ ಬೇರೆ ಪಂಥ, ಧರ್ಮ, ಯೋಗ ಹಾಗೂ ದರ್ಶನಗಳ ಕುಂದುಕೊರತೆಗಳನ್ನು ಎತ್ತಿತೋರಿಸುತ್ತ, ತಾವು ಪ್ರಚಾರ ಮಾಡುತ್ತಿದ್ದ ಧರ್ಮದ ಮೇಲ್ಮೆಯನ್ನು ಎತ್ತಿತೋರಿಸಿದ್ದಾರೆ. ಅಂದಿನ ಕಾಲದಲ್ಲಿ ಪ್ರಚಲಿತವಿದ್ದ ಅನ್ಯಧರ್ಮದವರನ್ನು ಕಂಡು ಮಾತಾಡಿ ಅವರನ್ನು ವಾದದಲ್ಲಿ ಸೋಲಿಸಿದ್ದಾರೆ. ಹಾಗೆ ಪರಮತದವರೊಡನೆ ವಾದಮಾಡುವಾಗ ಸಾಮಾನ್ಯವಾಗಿ ವಚನ ಸಾಹಿತ್ಯದಲ್ಲಿ, ಹರೀಶ್ವರಾದಿಗಳ ಕಾವ್ಯದಲ್ಲಿ ಅವರು :

ಜೈನ, ವೈಷ್ಣವ, ತಮ್ಮ ಕಾಲದ ಶೈವಪಂಥಗಳಾದ-ಶುದ್ಧಶೈವ, ಪಾಶುಪತಶೈವ ಕಾಪಾಲಿಕಶೈವ, ಕಾಳಾಮುಖ, ಮೊದಲಾದವುಗಳ ಪ್ರಮುಖರೊಡನೆ ಹೋರಾಟ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಶೈವಪ್ರಭೇದಗಳನ್ನು ಹೆಸರಿಸುವಲ್ಲಿ ಎಷ್ಟೋ ವಚನಕಾರರು ಶೈವಶಾಖೆಯ ಹೆಸರನ್ನು ಹೇಳದೆ ಕೇವಲ ' ಶೈವ ' ಎಂದು ಹೇಳಿಬಿಡುತ್ತಾರೆ; ಇನ್ನು ಕೆಲವರು ಕಾಳಾಮುಖ, ಪಾಶುಪತಾದಿಗಳ ಹೆಸರನ್ನೇ ಎತ್ತದೆ ಬೇರೆ ಹೆಸರುಗಳನ್ನೇ ಹೇಳುತ್ತಾರೆ; ಹೀಗಾಗಿ ಅವುಗಳಲ್ಲಿಯ ಸಂಬಂಧಗಳನ್ನು ಆಯಾ ಶೈವಶಾಖೆಗಳಿಗೆ ಪ್ರಚಲಿತವಿದ್ದ ಪರ್ಯಾಯನಾಮಗಳನ್ನು ತಿಳಿದುಕೊಳ್ಳುವುದು ದುಸ್ತರವೇ ಸರಿ. ಶಾಸನಗಳಲ್ಲಿ ಉಕ್ತವಾಗಿರುವ ವಿಷಯುಗಳಿಗೂ ವಚನ ಸಾಹಿತ್ಯ ಹಾಗೂ ಸಮಕಾಲೀನ ಸಾಹಿತ್ಯಗಳಲ್ಲಿ ಉಕ್ತವಾಗಿರುವ ಶೈವ-ವೀರಶೈವಗಳಿಗೂ ಇರುವ

ಸಂಬಂಧ ಹಾಗೂ ಪ್ರಾಚೀನತೆಗಳನ್ನು ತಿಳಿಯಲು ಉಪಯುಕ್ತವಾಗಬಲ್ಲ ವಿಷಯವಾದುದರಿಂದ ಆ ವಿಷಯಗಳನ್ನಿಲ್ಲಿ ಚರ್ಚಿಸಲಾಗಿದೆ. ಎಷ್ಟೋ ಬಾರಿ ಕಾವ್ಯಗಳಿಂದ ಭಿನ್ನವಾದ ಅಂಶಗಳು ಶಾಸನಗಳ ಅಧ್ಯಯನದಿಂದ, ಶಾಸನಗಳಿಂದ ಭಿನ್ನವಾದ ಅಂಶಗಳು ವಚನಗಳ ಅಧ್ಯಯನದಿಂದ ಗೋಚರಿಸುತ್ತವೆ. ಉದಾಹರಣೆಗೆ ವೀರಶೈವರ ಕಾವ್ಯಗಳಲ್ಲಿ—ಪುರಾಣಗಳಲ್ಲಿ ಕಥಾನಾಯಕನ ಜನನಕ್ಕೆ ಕಾರಣಗಳನ್ನು ಹೇಳುವಾಗ ಕವಿಗಳು.

೧) ಶಿವಭಕ್ತಿ ಶಿವಧರ್ಮಗಳು ಖಿಲವಾಗಿ ಜೈನ—ಇಲ್ಲವೆ ವೈಷ್ಣವರು ಹೆಚ್ಚಿದ್ದರೆಂದು ೨) ಜನರಲ್ಲಿ ಅಸತ್ಯ, ಅನ್ಯಾಯ, ಅರಿಷಡ್ವರ್ಗ ಹೆಚ್ಚಿದ್ದವೆಂದೂ[೧] ಹೇಳುತ್ತಾರೆ. ಆದರೆ ಈ ವಿಷಯವು ಸಮಂಜಸವೆಂದು ಕಂಡುಬರುವುದಿಲ್ಲ. ಯಾಕೆಂದರೆ ಹನ್ನೆರಡನೆಯ ಶತಮಾನ ಪೂರ್ವಾರ್ಧದಲ್ಲಿ ಶೈವರ ಪ್ರಾಬಲ್ಯವೇ ಹೆಚ್ಚಾಗಿದ್ದಿತೆಂದೂ ಅಲ್ಲದೇ ಶೈವ-ಧರ್ಮದ ಗುರುಗಳು ಪ್ರಭಾವ ಶಾಲಿಗಳೂ ರಾಜಪೂಜಿತರೂ ಆಗಿದ್ದರೆಂದೂ ಶಾಸ-ನಾಧಾರಗಳಿಂದ ಕಂಡುಬರುತ್ತದೆ.[೨] ಶೈವಧರ್ಮವು ಖಿಲವಾಗಿತ್ತೆನ್ನುವುದಕ್ಕೆ ಸ್ಥೂಲವಾಗಿ ಈ ಕಾರಣವನ್ನು ಹೇಳುತ್ತಾರೆ :

೧. ವೈಷ್ಣವರ ಪ್ರಾಬಲ್ಯಕ್ಕೆ ಶ್ರೀರಾಮಾನುಜಾಚಾರ್ಯರ ಆಗಮನ;
೨. ಗುಜರಾಥದ ಶೈವರ ಸುಪ್ರಸಿದ್ಧ ಶೈವ ಕೇಂದ್ರವಾದ ಸೋಮನಾಥ ದೇವಾಲಯವು ಘಜನೀ ಮಹಮ್ಮದನ ದಾಳಿಗೆ ತುತ್ತಾದುದು;
೩. ಶೈವರ ಕೇಂದ್ರವಾಗಿದ್ದ ಕಾಶ್ಮೀರದಲ್ಲಿ ರಾಜಕೀಯ ಅರಾಜಕತೆಯುಂಟಾಗಿ ಶೈವಧರ್ಮಕ್ಕೆ ತೊಂದರೆ ಉಂಟಾದುದು;
೪; ಕರ್ನಾಟಕದಲ್ಲಿ ಕಲ್ಯಾಣದ ಚಾಲುಕ್ಯರ ಶೈವರರಾಜ್ಯವು ಪತನವಾದುದು:—

ಈ ಕಾರಣಗಳಿಂದ ಪರಸಮಯಗಳ ಉಪಟಳದಿಂದ ಶೈವಧರ್ಮಪ್ರಸಾರಕ್ಕೆ ಅಡ್ಡಿ-ಯಾಯಿತೆನ್ನುವುದರಲ್ಲಿ ಯಾವ ಆಭ್ಯಂತರವೂ ಇಲ್ಲ.[೩] ಈ ಮಾತುಗಳಿಂದ ತಿಳಿದು ಬರುವುದೇನಂದರೆ ಕರ್ನಾಟಕದಲ್ಲಿ ಮತ್ತು ಇತರ ಭಾಗಗಳಲ್ಲಿ ಶೈವಧರ್ಮವು ಪ್ರಬಲವಾಗಿದ್ದರೂ ಆಘಾತಕ್ಕೊಳಗಾಗಿತೆಂಬುದು, ಈ ಆಘಾತದ ಕಾಲದಲ್ಲಿ ಹನ್ನೆರಡನೆಯ ಶತಮಾನದ ಶಿವಶರಣರು ಶೈವ ಶಾಖೆಗಳ ಪರಿಶೀಲನೆ ಮಾಡುವದು ಅವಶ್ಯವಿತ್ತೆಂದು ತಿಳಿದು ಆ ಕಾರ್ಯವನ್ನು ಕೈಗೆತ್ತಿಕೊಂಡು ಸುಸಂಬದ್ಧವಾಗಿ ನೆರವೇರಿಸಿದರೆಂದು ಹೇಳಬಹುದು. ಶಿವಶರಣರು ಕೇವಲ ಪರಸಮಯಗಳನ್ನು ಮಾತ್ರ ತರಾಟೆಗೆ ತೆಗೆದುಕೊಳ್ಳದೇ ಶೈವಶಾಖೆಗಳಲ್ಲಿದ್ದ ಹಲವು ಅಗ್ರಾಹ್ಯ ವಿಷಯಗಳನ್ನು ಆಚರಿಸುತ್ತಿದ್ದವರನ್ನೂ ತರಾಟೆಗೆ ತೆಗೆದುಕೊಂಡಿದ್ದಾರೆ; ಮತ್ತು ಶೈವಶಾಖೆಯೊಳಗಿನ ಉಪಯುಕ್ತ ಅಂಶ-ಗಳನ್ನೂ ಮೆಚ್ಚಿ ವೀರಶೈವದಲ್ಲಿ ಅಳವಡಿಸಿಕೊಂಡಿರುತ್ತಾರೆ,

---

೧. ಬ. ರಾ. ದೇ ರ. ೧ನೆಯಸ್ಥಲ, ಪುಟ ೪' ಸೋ. ಚಾ. ೧ನೆಯಸ್ಥಲ ಒಟ ೧೬-೧೭
೨. ಕ. ಶಾ. ಸಾ. ಅ. ಪುಟ ೧೫೫.
೩. ಬ. ಸ್ವಾ. ಸಂ. ಪುಟ ೪೬೦.

[ ೨ ]

ವೀರಶೈವವು ಶೈವಧರ್ಮದ ಒಂದು ಶಾಖೆಯೆಂದೂ, ಶೈವಧರ್ಮವು ವೀರಶೈವದ ಬೇರುಯೆಂದೂ ಪರಿಗಣಿಸಲ್ಪಡುತ್ತದೆ. ನಿಜವಾಗಿ ನೋಡಿದರೆ ವೀರಶೈವವು ಶೈವವೆಂಬ ಮಹಾವೃಕ್ಷದ ಪುಷ್ಪ ಹಾಗೂ ಫಲದಂತಿದೆ. ವೀರಶೈವದ ಎಷ್ಟೋ ಲಕ್ಷಣಗಳು ಬಿಡಿ ಬಿಡಿಯಾಗಿ ಪುರಾತನ ಶೈವದ ನಾನಾಪಂಥಗಳಲ್ಲಿ ಪ್ರಕಾಶಿಸುತ್ತಿವೆಯಾದುದರಿಂದ ವೀರಶೈವವು ಆ ಶೈವಪಂಥಗಳಿಗೆ ಋಣಿಯಾಗಿರಲೇಬೇಕು. ಈ ಕಾರಣದಿಂದಲೇ ವೀರಶೈವರ ಅತಿ ಮಹತ್ವದ ಕೃತಿಗಳಾದ ಬಸವಪುರಾಣ, ಸಿಂಗಿರಾಜಪುರಾಣ, ಶಿವತತ್ವ–ಚಿಂತಾಮಣಿ, ವೀರಶೈವಾಮೃತ–ಮಹಾಪುರಾಣ ಮೊದಲಾದವುಗಳಲ್ಲಿ ಬಸವೇಶ್ವರಾದಿ ಶಿವಶರಣರ ಚರಿತ್ರೆಗಳೊಂದಿಗೆ ಪುರಾತನ ಶಿವಶರಣರ ಚರಿತ್ರೆಗಳೂ ಅಡಕವಾಗಿವೆ. ಪುರಾತನ ಶರಣರ ಚರಿತ್ರೆಗಳು ವೀರಶೈವರಿಗೆ ಮಾನ್ಯವೂ, ಪೂಜ್ಯವೂ ಆಗಿವೆ. ವೀರಶೈವದ ಇತಿಹಾಸ, ಸಂಸ್ಕೃತಿಗಳನ್ನು ಅರಿತುಕೊಳ್ಳಲು ಆ ಪುರಾತನ ಶಿವಶರಣರ ಕಥೆಗಳೇ ಸಹಕಾರಿ. ಬಸವಣ್ಣನವರು ಒಂದು ವಚನದಲ್ಲಿ ತಮ್ಮ ಪುರಾತನ ಪರಂ–ಪರೆಯನ್ನು ಇಂತು ಹೇಳಿದ್ದಾರೆ ;

"ಹರನು ಮೂಲಿಗನಾಗಿ ಪುರಾತನರೊಳಗಾಗಿ,
ಬಳಿಬಳಿಯಲು ಬಂದ ಮಾದಾರನ ಮಗ ನಾನಯ್ಯಾ"—ಎಂದು[೪]

ಇಲ್ಲಿ ಬಸವಣ್ಣನವರು ವೀರಶೈವದ ಪ್ರಾಚೀನತೆಯ (ಮೂಲ) ಬಗೆಗೆ ಸ್ಪಷ್ಟವಾಗಿ ಹೇಳಿದ್ದಾರೆ. ವೀರಶೈವಕ್ಕೆ ಮೂಲನಾದವನು ಶಿವ; ಶಿವನಿಂದ ಪುರಾತನರು: ಅಲ್ಲಿಂದ (ನಂತರ ಬಂದವರು) ನೂತನರು; ಅವರ ತರುವಾಯ ಹಲವು ಶಿವಶರಣರು. ಇಂತು ಇಲ್ಲಿ ವೀರ ಶೈವದ ಪ್ರಾಚೀನತೆ, ಪರಂಪರೆಗಳ ಸುಳುವು ನಮಗೆ ಸ್ಪಷ್ಟವಾಗಿ ಗೋಚರಿಸುತ್ತದೆ.

## ಬಸವೇಶ್ವರರಿಗಿಂತ ಪೂರ್ವದ ಶೈವ-ವೀರಶೈವ

ವೀರಶೈವದ ಇತಿಹಾಸ ಹಾಗೂ ಸಂಸ್ಕೃತಿಗಳ ಪ್ರಾಚೀನತೆಯನ್ನು ತಿಳಿಸುವುದೆಂದರೆ ಶೈವ ಧರ್ಮದ ವಿವಿಧ ಶಾಖೆಗಳ ಇತಿಹಾಸ, ಸಂಸ್ಕೃತಿಗಳ ಅಧ್ಯಯನವೆಂದೇ ಹೇಳಬಹುದು. ವೀರಶೈವವು ಬಸವೇಶ್ವರರಿಂದ ಅವರ ಸಮಕಾಲೀನರ ಸಂಘಟನೆ ಪ್ರಚಾರಗಳ ಮೂಲಕ ಉದಯವಾಗಿ ಬೆಳೆದುಬಂದಿತೆಂದು ಕೆಲವರು ವಾದಿಸುತ್ತಿದ್ದರೆ ಇನ್ನು ಕೆಲವರು ಅದು ವೇದಾಗಮಗಳ 'ಅನಾದಿಕಾಲ'ದಿಂದಲೂ ಬೆಳೆದುಬಂದಿದೆಯೆಂದು ವಾದಿಸುತ್ತಾರೆ; 'ಇದಮಿತ್ಥಂ' ಎಂದು ಹೇಳುವುದು ದುಸ್ತರವಾಗಿದೆ. ಕನ್ನಡ ನಾಡಿನ ಶಿವಶರಣರ ಪ್ರಸಾರದಿಂದ ಇಂದು ಸಹ ವೀರಶೈವವು ಬಹುಸಂಖ್ಯಾತರಿಂದೊಡಗೂಡಿರುವುದು ಕನ್ನಡನಾಡಿನಲ್ಲಿಯೇ ಎಂದು ಹೇಳಬಹುದಾದರೂ ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರಗಳಲ್ಲಿಯೂ ಸಾಕಷ್ಟು

೪. ಬ. ವ. ೩೪೭.
೫. ೪೬

ಜನರಿದ್ದು, ಭಾರತದ ಇತರ ಪ್ರದೇಶಗಳಲ್ಲಿಯೂ ಅಲ್ಪ ಪ್ರಮಾಣದಲ್ಲಿ ಅನು ಯಾಯಿಗಳನ್ನು ಪಡೆದು, ಪ್ರಾಂತೀಯ ಪ್ರಭಾವಗಳಿಗನುಣವಾಗಿ ಆಚರಣೆಗಳಲ್ಲಿ ಭಿನ್ನತೆಯನ್ನೂ ಪಡೆದಿದೆ; ಹಿಂದೆಯೂ ಹೀಗೆಯೇ ನಡೆದುಬಂದಿದೆಯಾದುದರಿಂದ ವೀರಶೈವರಲ್ಲಿ ವಿವಿಧ ಆಚರಣೆಯ, ವಿವಿಧ ದೃಷ್ಟಿಕೋನಗಳ ಕವಿಗಳೂ, ಅನು ಯಾಯಿಗಳೂ ಇದ್ದುದು ನಿದರ್ಶನವಾಗಿದೆ. ಆದುದರಿಂದಲೇ ವೀರಶೈವ ಧರ್ಮದ ಉಗಮದ ಬಗೆಗೆ ಭಿನ್ನಾಭಿಪ್ರಾಯಗಳಾಗಿವೆ. ವೀರಶೈವ ಧರ್ಮದ ಉದಯಕ್ಕೆ ಮುನ್ನ ಕನ್ನಡನಾಡಿನಲ್ಲಿ ಜೈನರನ್ನು ಬಿಟ್ಟರೆ ಶೈವರೇ ಅತ್ಯಂತ ಪ್ರಬಲವಾಗಿದ್ದವರು; ಇವರು ಅನೇಕ ರಾಜರಿಂದ ಪೂಜಿತರಾಗಿದ್ದರು; ಅತ್ಯಂತ ಪ್ರಭಾವಶಾಲಿಗಳೂ ಆಗಿದ್ದರು.[೫] ಶೈವದ ಶಾಖೆಗಳಾದ "ಲಕುಲೀಶ," "ಪಾಶುಪತ," ಕಾಳಾಮುಖ" ಗಳನ್ನು ಕೆಲವೆಡೆ ಒಂದೇಯೆಂದೂ ಪರಿಗಣಿಸಲಾಗಿದೆ.[೬] ಈ ಶೈವ ಪಂಥಗಳಲ್ಲಿ ಬಹಳಷ್ಟು ಸಾಮ್ಯಗಳು ತಲೆದೋರುತ್ತಿವೆಯಾದುದರಿಂದ ಈ ತಿಳುವಳಿಕೆ ಬರುವುದು ಸ್ವಾಭಾವಿಕ. ಅಲ್ಲಲ್ಲಿ ಶೈವಪಂಗಡಗಳನ್ನು ಹಲವಾರು ರೀತಿಯಲ್ಲಿ ಹೆಸರಿಸಿದುದು ಕಂಡು :ಬಂದರೂ ಇವುಗಳ ಸಮನ್ವಯ ಮಾಡಿ ಒಟ್ಟಾರೆ ೧) ಶೈವ (ಮಾಹೇಶ್ವರ ಪಂಥ), ಪಾಶುಪತ–ಲಕುಲೀಶ, ೩) ಕಾಳಾಮುಖ, ೪) ಕಾಪಾಲಿಕ ಎಂದು ನಾಲ್ಕು ಪಂಗಡಗಳಿವೆಯೆಂಬ ತೀರ್ಮಾನಗಳೂ ಬಂದಿವೆ.[೭]

ಬಸವಣ್ಣನವರು ಉದಿಸುವ ಮುನ್ನ ಕರ್ನಾಟಕದಲ್ಲಿ ಲಕುಲೀಶ–ಪಾಶುಪತವೂ ಕಾಳಾಮುಖವೂ ಪ್ರಕಾಶಗೊಂಡಿದ್ದವೆನ್ನಲು ಹಲವು ಶಾಸನಾಧಾರಗಳೂ ದೊರೆಯು ತ್ತವೆ.[೮] ವೀರಶೈವಯುಗದ ಪೂರ್ವದಲ್ಲಿ ಪರಮತ ವಿಡಂಬನೆಯನ್ನೇ ಗುರಿಯಾಗಿ ಟ್ಟುಕೊಂಡು ವಿರಚಿತವಾದ ನಯಸೇನನ 'ಧರ್ಮಾಮೃತ' ಬ್ರಹ್ಮಶಿವನ 'ಸಮಯ ಪರೀಕ್ಷೆ' ಇವು ವೀರಶೈವದ ಅಸ್ತಿತ್ವವನ್ನೇ ಸೂಚಿಸುವುದಿಲ್ಲ. ಬ್ರಹ್ಮಶಿವನು ತಾನು ಮೊದಲು 'ಮಾಹೇಶ್ವರಧರ್ಮ' ವನ್ನಪ್ಪಿ, ಅದರಲ್ಲಿ ತಿರುಳನ್ನು ಕಾಣದೆ ಮತ್ತೆ ಜೈನ ಧರ್ಮವನ್ನು ಸೇರಿದಂತೆ ಹೇಳಿಕೊಂಡಿದ್ದಾನೆ. ಈ 'ಮಾಹೇಶ್ವರ' ಧರ್ಮವು ಬಹುಶಃ ಲಕುಲೀಶ ಪಾಶುಪತವನ್ನು ಸೂಚಿಸುತ್ತದೆ, ವೀರಶೈವವನ್ನಲ್ಲ. ಬ್ರಹ್ಮಶಿವನು ಲಕುಲೀಶ ವನ್ನು ಹಾಸ್ಯಮಾಡಿದ್ದಾನೆ; ಎಲ್ಲಿಯೂ ವೀರಶೈವವನ್ನಾಗಲೀ ಅದರ ವಿಧಿಗಳನ್ನಾಗಲೀ ನಿಂದಿಸಿಲ್ಲ.[೯] ಅವನು ಕಾಳಾಮುಖ, ಕಾಪಾಲಿ, ಪಾಶುಪತ, ಶೈವ ಇವು ಶೈವದ ನಾಲ್ಕು ಶಾಖೆಗಳೆಂದು ಹೇಳುತ್ತಾನೆ. ವೀರಶೈವದ ಪ್ರಸ್ತಾಪವನ್ನೇ ಮಾಡಿಲ್ಲ.[೧೦]

---

೫. ಕ. ಶಾ. ಸಾ. ಅ. ಪುಟ ೧೨೫.
೬. ಕ. ಶಾ. ಸಾ. ಅ. ಪುಟ ೧೩೨.
೭. ಬ. ಸ್ಮಾ. ಸಂ. ಪುಟ ೪೬೧.
೮. ಬ. ಸ್ಮಾ. ಸಂ. ಪುಟ ೪೬೫.
೯. ಕ. ಶಾ. ಸಾ. ಅ. ಪುಟ ೧೩೬.
೧೦. ಸ. ಪ. ೧೦ನೆಯ ಅಧ್ಯಾಯ ೧೩ನೆಯ ಪದ್ಯ ಮತ್ತು ೧೪ ನೆಯ ಅಧ್ಯಾಯ ೫೦ ನೆಯ ಪದ್ಯ.

ಈ ಶೈವವು ಮೂಲತಃ ಅವೈದಿಕವಾಗಿದ್ದರೂ ತದನಂತರ ವೈದಿಕರ ಸಂಪರ್ಕದಿಂದ ವೈದಿಕರ ಪದ್ಧತಿಯನ್ನು ತನ್ನಲ್ಲಿ ಅಳವಡಿಸಿಕೊಂಡಿರುವುದಲ್ಲದೆ ವೈದಿಕದ ಮೇಲೂ ಪ್ರಭಾವ ಬೀರಿರುತ್ತದೆ. ಈ ಕಾರಣದಿಂದಲೇ ಹಲವು ಶೈವಗುರುಗಳು ಶೈವಾಗಮ ಪಂಡಿತರಿದ್ದರಲ್ಲದೆ ವೇದಾದಿಗಳಲ್ಲೂ ಪಂಡಿತರಿದ್ದುದು ತಿಳಿದುಬರುತ್ತದೆ. ಈ ಶೈವಪಂಥಗಳಲ್ಲಿ ಪಾಶುಪತ–ಲಕುಲೀಶರಿಗೆ, ಕಾಳಾಮುಖರಿಗೆ ಅವರವೇ ಆದ ಧರ್ಮಗ್ರಂಥಗಳಿದ್ದುದಲ್ಲದೆ ಶಿವಪೂಜೆ, ಧ್ಯಾನಾದಿ ಪದ್ಧತಿಗಳೂ ಇದ್ದುದು ತಿಳಿದುಬರುತ್ತದೆ. ಇವರಲ್ಲಿ ಗೃಹಸ್ಥರೂ ಬ್ರಹ್ಮಚಾರಿಗಳೂ ಇದ್ದರು. ಗೃಹಸ್ಥರಾಗಿಯೂ ತಪಸ್ವಿಗಳಾಗಿರಲು ಅವಕಾಶವಿತ್ತು. ಶೈವಗುರುಗಳು ಕೆಲವರು ಗೃಹಸ್ಥರಾಗಿದ್ದರೆ ಇನ್ನು ಕೆಲವರು ಬ್ರಹ್ಮಚಾರಿಗಳೂ ತಪಸ್ವಿಗಳೂ ಆಗಿರುತ್ತಿದ್ದರು; ಕೆಲವು ಪಂಥಗಳು ತಾತ್ವಿಕವಾಗಿದ್ದರೆ ಇನ್ನು ಕೆಲವು ಪಂಥಗಳು ಧಾರ್ಮಿಕ ವಿಧಿವಿಧಾನ, ಆಚರಣೆ, ನೀತಿ ಇವುಗಳ ಕಡೆಗೆ ಗಮನವಿತ್ತಿದ್ದವು. ಬಸವೇಶ್ವರರ ಪೂರ್ವದಲ್ಲಿ ಶೈವಪಂಥಗಳು ಶುದ್ಧ ಸಾತ್ವಿಕವಾಗಿದ್ದೂ ಕೆಲವು ವಿಚಾರಗಳಲ್ಲಿ ಅಸಹ್ಯವಾದ ವರ್ತನೆಯನ್ನು ತಾಳಿದ್ದುವೆಂಬುದಕ್ಕೆ ಅವರ:

"ಮೈಲಾರನ ಪೂಜಿಸಿ ನಾಯಾಗಿ ಬಗಳುವುದ ಕಂಡೆ" ೧೧ ಎಂಬ ವಚನವೇ ಸಾಕ್ಷಿ. ಮೈಲಾರನ ಭಕ್ತರಾದ ಈ "ಗೊರವರು" ಕಾಳಾಮುಖದ ಶೈವಪಂಥದವರೋ ಇಲ್ಲವೇ ಪ್ರತ್ಯೇಕ ಪಂಥದವರೋ ಇರಬೇಕು. ಲಕುಲೀಶ–ಪಾಶುಪತರೂ ಕೆಲವರಾದರೂ ಮಸಣದ ಬೂದಿಯನ್ನು ಬಳಿದುಕೊಳ್ಳುವುದು, ಕಾಮುಕರಂತೆ, ಹುಚ್ಚರಂತೆ ನಟಿಸುವುದು ಮೊದಲಾದ ಅನುಚಿತ ವರ್ತನೆಗಳನ್ನು ಮಾಡುತ್ತಿದ್ದಂತೆ ಕಂಡು ಬಂದುದರಿಂದಲೇ ಶಿವಶರಣರು ಅವುಗಳ ವಾಮಾಚಾರಗಳನ್ನು ಖಂಡಿಸುವುದು ಅನಿವಾರ್ಯವಾಯ್ತು. ಇದರಿಂದಾಗಿ ಶಿವಶರಣರು ಜೈನ, ಬೌದ್ಧ, ಶಾಕ್ತ, ಸೌರ, ಗಾಣಪತ್ಯ ಚಾರ್ವಾಕರೊಡನೆ ಹೋರಾಡಿದಂತೆ ಶೈವಶಾಖೆಗಳವರೊಡನೆಯೂ ಹೋರಾಟಮಾಡಬೇಕಾಯ್ತು. ಶೈವಶಾಖೆಯವರೂ ಆಚರಿಸುತ್ತಿದ್ದ ಯಜ್ಞಯಾಗ, ಸ್ಥಾವರಲಿಂಗಪೂಜೆ. ದೇವಾಲಯ ರಚನೆ. ಮತ್ತು ಇತರ ಅನುಚಿತ ಆಚರಣೆಗಳನ್ನು ಶರಣರು ಖಂಡಿಸಿದ್ದಾರೆ. ಹೀಗೆ ಮಾಡುವಲ್ಲಿ ಈ ಕನ್ನಡನಾಡಿನಲ್ಲಿಯೇ ಪ್ರಾಯಶಃ ಉದಯಿಸಿರಬಹುದಾದ ವೀರಶೈವವು ಈ ನಾಡಿನಲ್ಲಿಯೇ ವಾಸಿಸುತ್ತಿದ್ದ ಪಾಶುಪತ ಲಕುಲೀಶ, ಕಾಳಾಮುಖ ಮೊದಲಾದವುಗಳಿಂದ ಶಿವಭಕ್ತಿಯ ಕೆಲವು ವಿಷಯಗಳನ್ನು ಅಂಗೀಕರಿಸವುದರಿಂದ ವೀರಶೈವಕ್ಕೂ ಶೈವದ ಶಾಖೆಗಳಿಗೂ ಹೋಲಿಕೆಗಳೂ ಉಂಟಾಗುವುದು ತೀರ ಸ್ವಾಭಾವಿಕ. ಉದಾಹರಣೆಗೆ ಶೈವರಲ್ಲಿದ್ದ ಶಿವಾಧಿಕ್ಯ, ಶಿವಭಕ್ತಿ, ಭಕ್ತಾಧಿಕ್ಯ, ಲಿಂಗಮಹತಿ ಮೊದಲಾದ ವಿಷಯಗಳಲ್ಲಿ ಶೈವಶಾಖೆಗಳವರಿಗೂ ವೀರಶೈವಕ್ಕೂ ವ್ಯತ್ಯಾಸಗಳೇ ಕಾಣವು. ಈ ಕಾರಣದಿಂದಲೇ ಶ್ರೀ ಬಸವೇಶ್ವರರು ಬೋಧಿಸುತ್ತಿದ್ದ ಹೊಸಧರ್ಮಕ್ಕೆ

---

೧೧. ಬ. ವ. ೫೭೦; ಮೈಲಾರನ ಭಕ್ತರಾದ ಗೊರವಪ್ಪಗಳು "ಏಳು ಕೋಟಿ ಏಳುಕೋಟಿ" ಎಂದು ವಿಕಾರಧ್ವನಿಯಲ್ಲಿ ಕರೆವುದನ್ನೇ ಬಸವಣ್ಣನವರು ನಾಯಿಯಂತೆ ಬಗಳುವುದು ಎಂದು ತಿಳಿದಿರಬೇಕು.

ಪೂರ್ವದ ಅನೇಕ ಶೈವಪಂಥಗಳವರು ವಿಲೀನವಾದಂತೆ ತೋರುತ್ತದೆ. ಹೀಗೆ ವಿಲೀನವಾದವರಲ್ಲಿ ಅಲ್ಲಮಪ್ರಭು, ಸಿದ್ಧರಾಮ, ಮೋಳಿಗೆಯಮಾರಯ್ಯ, ಶಂಕರದಾಸಿಮಯ್ಯ ಆದಯ್ಯ ಹರಿಹರದೇವ ಮೊದಲಾದವರೇ ಪ್ರಮುಖರೆನ್ನಬಹುದು; ಈ ಧರ್ಮಾಂತರವು ಹಾಗೆಯೇ ಹದಿನೈದನೆಯ ಶತಮಾನಕ್ಕೂ ಮುಂದವರಿದು ಚಾಮರಸಾದಿ ಕವಿಗಳನ್ನು ಒಳಗೊಳ್ಳುತ್ತದೆ.

ಶ್ರೀ ಬಸವೇಶ್ವರರು ತಮ್ಮ ವಚನಗಳಲ್ಲಿದ್ದ ಶೈವಶಾಖೆಗಳನ್ನು ಹೆಸರಿಸಿದಂತೆ ಕಂಡುಬರುವುದಿಲ್ಲ. ಆದರೆ ಅವರು ಬೇರೆಬೇರೆ ಪಂಥದವರನ್ನು ಉಲ್ಲೇಖಿಸಿದ್ದಾರೆ;

ಅ) "ಭಕ್ತರ ಕಂಡರೆ ಬೋಳರಪ್ಪಿರಯ್ಯಾ.
ಸವಣರ ಕಂಡರೆ ಬತ್ತಲೆಯಪ್ಪಿರಯ್ಯಾ.
ಹಾರುವರ ಕಂಡರೆ ಹರಿನಾಮವೆಂಬಿರಯ್ಯಾ"

ಆ) "ಆಚಾರ ಶಿವಾಚಾರವೆಂದರಿಯದ ಕಾರಣ
ಷಡ್ದರ್ಶನಂಗಳೆಲ್ಲಾ ತಮತಮಗೆ ಶರಣೆನ್ನುತ್ತಿದ್ದುವು;
ಮಹತ್ವದಶೈವಾದಿಸಮಯಂಗಳೆಂಬುವೆಲ್ಲಾ ಶರಣೆನ್ನುತ್ತಿದ್ದುವು;"[೧೨]

ಈ ವಚನಗಳಲ್ಲಿ 'ಶೈವಸಮಯಾದಿ' ಎಂಬದರೊಡನೆ 'ಭಕ್ತ'ರೆಂಬುದನ್ನು ಪರ್ಯಾಯವಾಗಿ "ಶೈವ"ದ ಯಾವುದೋ ಶಾಖೆಗೆ ಅನ್ವಯಿಸಿ ಹೇಳಿದ್ದಾರೆ. ಈ "ಭಕ್ತ"ಪದವು ಸೂಚಿಸುವ ಶೈವಶಾಖೆಯಾಗುವುದು ? ಗೊತ್ತಾಗುವುದಿಲ್ಲ. ಭಕ್ತನು ಬೋಳಾಗುವುದೆಂದರೆ "ವೈರಾಗ್ಯಶಾಲಿ"ಯಾಗುವುದು ಎಂದು ಮಾತ್ರ ತಿಳಿದುಬರುತ್ತದೆ. ಆ ಭಕ್ತವರ್ಗವು "ಅನುಕರಣಶೀಲ"ವಾಗಿದ್ದು ಬಸವಣ್ಣನವರು ಹಾಗೆ ಮಾಡಲಾಗದೆಂದು ತಿಳಿಸಿ ಏಕದೈವನಿಷ್ಠೆ ಭಕ್ತನಿಗೆ ಅತ್ಯಾವಶ್ಯಕವೆಂದಿದ್ದಾರೆ. 'ಭಕ್ತ'ನಾಗುವುದು ಷಟ್ಸ್ಥಲದಲ್ಲಿ ಮೊದಲನೆಯ ಸ್ಥಲವೂ ಅಹುದು. ಆದರೆ "ಭಕ್ತ" ಎಂಬುದು ಇಲ್ಲಿ ಆ ಅರ್ಥದಲ್ಲಿ ಉಪಯೋಗವಾದಂತಿಲ್ಲ. ಹರೀಶ್ವರ ಕವಿಯ ನಂಬಿಯಣ್ಣನ ರಗಳೆಯಲ್ಲಿ ಈ "ಭಕ್ತ" ಪದವು ನರಸಿಂಗಮೊನೆಯರನ್ನು ಕುರಿತು ಹೇಳಿದ್ದಾಗಿದೆ. ನರಸಿಂಗಮೊನೆಯವರು 'ಭಕ್ತ'ರೆಂದು ಅವರನ್ನು ಪರೀಕ್ಷಿಸಬಂದ ಜಗಳದ ಮಾಹೇಶ್ವರರು 'ಮಾಹೇಶ್ವರ ಸಮಯ'ದವರೆಂದೂ ಅಲ್ಲಿ ಉಕ್ತವಾಗಿದೆ.[೧೩] ಬಸವಣ್ಣನವರ ಪೂರ್ವದಲ್ಲಿ ಈ 'ಭಕ್ತ' 'ಮಾಹೇಶ್ವರ' ಪದಗಳು ಶೈವ ವರ್ಗಗಳಿಗೆ ಅನ್ವಯಿಸುತ್ತಿದ್ದು ಅವುಗಳನ್ನೇ ಅವರು ಷಟ್ಸ್ಥಲಗಳಲ್ಲಿ ಬಳಸಿಕೊಂಡಂತೆ ಗೋಚರಿಸುತ್ತದೆ. ಬಸವೇಶ್ವರರು ಬೋಧಿಸಿದ ಅನೇಕ ತತ್ವಗಳು ಪುರಾತನ ಶಿವಶರಣರ ಜೀವನದಲ್ಲಿಯೇ ಕಂಡುಬರುತ್ತವೆ. ಹರಿಹರನ ರಗಳೆಗಳನ್ನು ಅಭ್ಯಾಸಮಾಡುವವರಿಗೆ ಈ ಅಂಶಗಳು ಗಮನಕ್ಕೆ ಬರದೇ ಇರವು[೧೪] ಪುರಾತನ ಶರಣರ ಜೀವನದಲ್ಲಿಯ ಅನೇಕ ಅಂಶಗಳು

---

೧೨. ಬ. ವ. ೧೦೩, ೮೧೭.
೧೩. ನಂ. ರ ಪುಟ ೪೪-೪೫.
೧೪. ತಿರುನೀಲಕಂಠಪಾಣರು, ಪೂಸಲೆಯಾಂಡಿ ಇತ್ಯಾದಿ ಶರಣರ ಕಥೆ ನೋಡಬಹುದು.

ವೀರಶೈವರಲ್ಲಿ ಅಡಕವಾಗಿರುವುದರಿಂದಲೇ ವೀರಶೈವ ಕವಿಗಳು ಅವರನ್ನು ಅತ್ಯಂತ ಗೌರವದಿಂದ ಕಂಡಿದ್ದಾರೆ. ಶಿವಶರಣರಿಗೆ ಪ್ರಮುಖವಾಗಿ :

೧. ಪುರಾತನರ ಉಗ್ರವಾದ ಹಾಗೂ ಉಜ್ವಲವಾದ ಶಿವಭಕ್ತಿ,
೨. ಶಿವನಿಗೋಸುಗ ಮಾಡಿದ ಅನುಪಮ ತ್ಯಾಗ,
೩. ಅವರ ಸ್ವಾತಂತ್ರ್ಯ ಮನೋಭಾವ, ಶೀಲ, ನೀತಿ, ಮತ್ತು ಭಕ್ತಿಯ ವಿವಿಧಮುಖ.
೪. ಶರಣರಿಗಿಂತಲೂ ಪೂರ್ವದವರಾದುದು;—

ಇವೇ ಮೊದಲಾದ ಕಾರಣಗಳು ಗೌರವಕ್ಕೆ ಪ್ರೇರಣೆಯನ್ನೊದಗಿಸಿವೆ. ಈ ಅರವತ್ತು ಮೂರು ( ತಮಿಳು ನಾಡಿನವರು ) ಇತರ ನಾಡಿನವರಿಗಿಂತ ಹೆಚ್ಚು ಪ್ರಾಸಸ್ತ್ಯವನ್ನೆ ಪಡೆದಂತೆ ಕಾಣುತ್ತದೆ. ಈ ಅರವತ್ತು ಮೂವರು "ಶುದ್ಧಶೈವ" ಕ್ಕೆ ಸೇರಿದ್ದರೆಂಬುದು ಆದಯ್ಯನ ವಚನದಿಂದ ತಿಳಿದು ಬರುತ್ತದೆ. ಮುನ್ನ 'ಅರವತ್ತ್ರಮೂವರು' ಮೊದಲಾದ ಅಸಂಖ್ಯಾತರೆನಿಪ ಭಕ್ತರುಗಳು ಶುದ್ಧಶೈವದ ಆಚರಣೆಮಾಡಿದರೆಂದು ಉಕ್ತವಾಗಿದೆ,[೧೫] ಇಲ್ಲಿಯೇ ಅವರನ್ನು " ಶುದ್ಧಶೈವ ಸಂಪನ್ನರಪ್ಪ ಅರವತ್ತು ಮೂವರು " ಎಂದೂ ಸಂಬೋಧಿಸಲಾಗಿದೆ.

[ ೩ ]

## ವೀರಶೈವ ಹಾಗೂ ಶುದ್ಧಶೈವ

ಶಿವನಿಷ್ಠೆಯಲ್ಲಿ ಎರಡೂ ಪಂಥಗಳು ಏಕದೇವನಿಷ್ಠೆಯನ್ನೇ ಒಪ್ಪುತ್ತಿದ್ದರೂ ಶುದ್ಧ ಶೈವರು ಅದನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿರಲಿಲ್ಲವೆಂದು ಆದಯ್ಯನವರು ತಿಳಿಸಿದ್ದಾರೆ. ಅವನು ಶಿವನನ್ನು ಪೂಜಿಸುವ ಸ್ಥಾನದಲ್ಲಿ ಶಿವನ ಪರಿವಾರದೇವತೆಗಳಾದ ದುರ್ಗಿ, ವಿನಾಯಕ, ಭೈರವರನ್ನು ಪೂಜಿಸುವವರು ಶುದ್ಧ ಶೈವರಲ್ಲದೆ ವೀರಶೈವರಲ್ಲವೆಂದಿದ್ದಾನೆ. ಶುದ್ಧ ಶೈವರು ಚತುರ್ವಿಧ ಪದವಿ ಪಡೆಯುವ ಗುರಿಯುಳ್ಳವರಾಗಿದ್ದರೆ ವೀರಶೈವರು "ಲಿಂಗದಲ್ಲಿ ಸಮರಸ" ಹೊಂದುವ ಗುರಿಯುಳ್ಳವರಾಗಿದ್ದಾರೆ. ಶಿವನ ಪರಿವಾರದೇವತೆಗಳ ಬದಲು ಲಿಂಗ–ಜಂಗಮರನ್ನು ಪೂಜಿಸಬೇಕೆಂದು ವಿಧಿಸಿದ್ದಾನೆ. ಹನ್ನೆರಡನೆಯ ಶತಮಾನದಲ್ಲಿ ವೀರಶೈವರೂ ಆಚರಿಸುತ್ತಿದ್ದುದನ್ನೂ ಖಂಡಿಸಿದ್ದಾರೆ. ವೀರಶೈವ ಶರಣರು ಶುದ್ಧ ಶೈವರ ಹಾಗೆ ನಂದಿ, ವೀರಭದ್ರ ಕಂಥೆ, ಕಮಂಡಲು, ಪಾವುಗೆ, ಮತ್ತು ಲಿಂಗಗಳನ್ನು ಪರದೈವವೆಂದು ಇದಿರಿಟ್ಟು ಪೂಜಿಸುವುದು ಪಾಪಕರವೆಂದು ಮಡಿವಾಳ ಮಾಚಿದೇವರೂ ಹೇಳಿದ್ದಾರೆ;[೧೬] ಅವರೂ ಶುದ್ಧ ಶೈವದ ಅನುಕರಣಮಾಡುವುದನ್ನು ನಿಂದಿಸಿದ್ದಾರೆ.

---

೧೫. ಆ. ವ. ೭೮.

೧೬. ಮ. ಮಾ. ವ: ೩೨.

ಅಲ್ಲದೆ ಶುದ್ಧಶೈವದ ಮನೆತನಗಳು ವೀರಶೈವಕ್ಕೆ ಪರಿವರ್ತನೆ ಹೊಂದಿದವೇಲೂ ತಮ್ಮ ಮನೆತನದ ಮೂಲ ಪದ್ಧತಿಗಳಿನ್ನು ಬಿಟ್ಟಂತಿಲ್ಲ. ಅರುವಿನ ಮಾರಿ ತಂದೆಗಳು ತಮ್ಮ ಒಂದು ವಚನದಲ್ಲಿ ಇಂತು ಹೇಳಿದ್ದಾರೆ:

> " ಸ್ಥಾವರ ಲಿಂಗಪೂಜೆ ' ಶುದ್ಧ ಶೈವ ' ಪೂಜೆ ;
> ವೀರಶೈವ ಲಿಂಗಪೂಜೆ – ಅಂಗದ ಮೇಲೆ ಲಿಂಗವ ಧರಿಸುವುದು "[೧೭]

ಇಷ್ಟಲಿಂಗಪೂಜೆ ' ವೀರಶೈವ ' ರದೆಂದೂ ಸ್ಥಾವರ ಲಿಂಗಪೂಜೆ ಶುದ್ಧ ಶೈವರದೆಂದೂ ಈ ಶರಣನು ಹೇಳಿದ್ದಾನೆ. ' ಗ್ರಾಮಲಿಂಗ ' ಪೂಜೆ, ' ಸ್ಥಾವರಲಿಂಗ ' ಪೂಜೆಗಳು ವೀರಶೈವರಿಗೆ ಬೇಡವೆಂದು ಬಸವ, ಪ್ರಭುದೇವ, ಅಕ್ಕಮಾದೇವಿ, ಮೊದಲಾದ ಶರಣರು ಸಾರಿದ್ದರೂ ವೀರಶೈವರಲ್ಲಿ ಅನೇಕರು ಆ ಪದ್ಧತಿಯನ್ನೂ ಅನುಕರಿಸಿದ್ದಾರೆ. ಹರೀಶ್ವರ – ರಾಘವಾಂಕರು ಚಿತ್ರಿಸಿದ ಕೆಲವು ಕಥಾನಾಯಕರು ಶಿವದೇವಾಲಯ ನಿರ್ಮಿಸುತ್ತಿದ್ದುದೇ ಈ ಸಂಪ್ರದಾಯದ ಪ್ರಾಚೀನತೆಗೆ ಸಾಕ್ಷಿ. ಶರಣರು, ಸ್ಥಾವರ ಲಿಂಗ ಪೂಜಿಸಿದವರು 'ನೂರುಬಾರಿ ಶ್ವಾನಯೋನಿಯಲ್ಲಿ ಹುಟ್ಟುತ್ತಾರೆಂದು' ಹೇಳಿದ್ದಾರೆ.[೧೮]

ಸ್ಥಾವರ ಲಿಂಗಪೂಜೆಯಿಂದ ವೀರಶೈವರು ಇಷ್ಟಲಿಂಗಪೂಜೆಗೆ ಪರಿವರ್ತಿತ ವಾದುದು ವೀರಶೈವರ ದೃಷ್ಟಿಯಿಂದ ಚಿಕ್ಕ ಬದಲಾವಣೆಯೇನೂ ಅಲ್ಲ. ಇಷ್ಟಲಿಂಗವು ಅಂಗದಮೇಲೆ ಹಿಂಗದೆ ಇರುವುದರಿಂದಲೇ ವೀರಶೈವ ವಚನಕಾರರು ದೇವಾಲಯವನ್ನು ರಚಿಸದೆ 'ದೇಹವೇ ದೇಗುಲ' 'ಪ್ರಾಣವೇ ಲಿಂಗ' ಎಂಬ ತತ್ವಗಳನ್ನು ಪ್ರಸಾರ ಮಾಡಿದರು. ದೇವಾಲಯ ನಿರ್ಮಾಣಕ್ಕಾಗಿ ವ್ಯಯವಾಗುತ್ತಿದ್ದ ಹಣದ ವಿನಿಯೋಗವು ನಿಂತು ಹೋದುದಲ್ಲದೆ ವ್ಯಕ್ತಿಗೆ ಪೂಜೆಯ ಸ್ವಾತಂತ್ರ್ಯವೂ ದೊರೆಯಿತು, ಈ ಸ್ವಾತಂತ್ರ್ಯ ಸಂಪಾದನೆಯೂ ಶರಣರ ಗುರಿಗಳಲ್ಲೊಂದಾಗಿದ್ದಿತೆಂಬುದನ್ನು ನಾವು ಮರೆಯುವಂತಿಲ್ಲ. ವೀರಶೈವರಿಗೆ ಇಷ್ಟಲಿಂಗಧಾರಣೆಯಂತೆಯೇ ಇಷ್ಟಲಿಂಗದ ನಡೆನುಡಿಗಳನ್ನು ತಪ್ಪದೇ ಆಚರಿಸುವುದೂ ಮುಖ್ಯ. ಹಾಗೆ ಆಚರಿಸದೇ ಆಡಂಬರದ ಆಚರಣೆಗಳನ್ನು ನಡೆ ಸಿದರೆ ಅದೇ ' ಭವಿತನ ' . ' ಶುದ್ಧ ಶೈವದ ಲಕ್ಷಣ ' ಎಂದು ಮಡಿವಾಳ ಮಾಚಿದೇವರು ಒಂದು ವಚನದಲ್ಲಿ ತಿಳಿಸಿದ್ದಾರೆ.[೧೯] ತನ್ನರಿವು, ಅಂಗ, ಪ್ರಾಣ. ಇಂದ್ರಿಯಗಳಲ್ಲಿ ಮುಸುಕಿರುವ ಅಜ್ಞಾನವನ್ನು ದೂರೀಕರಿಸುವುದೇ ಇಷ್ಟಲಿಂಗಾರಾಧನೆಯ ಫಲ ಎಂದು ವಚನಕಾರರು ಅಭಿಪ್ರಾಯಪಡುತ್ತಾರೆ. ಬಹಿರಂಗದ ಆಚರಣೆಗೆ ಶುದ್ಧ ಶೈವವು ಮಹತ್ವಕೊಟ್ಟರೆ ವೀರಶೈವವು ಆಚರಣೆಯ ತಿರುಳಿಗೆ ಗಮನಕೊಡಬೇಕು, ವೇಷಭೂಷ ಗಳಿಗಿಂತ ಮಥಿತಾರ್ಥಕ್ಕೆ ಗಮನವೀಯಬೇಕೆಂದು ವಚನಕಾರರು ಆಚರಣೆಗೆ ಆದ್ಯಗಮನ

---

೧೭. ಅ. ಮಾ. ತಂ. ವ. ೧೦೩.

೧೮. ಬ. ಹೆ. ವ. ೭೪.

೧೯. ಮ. ಮಾ. ವ. ೫೪.

ಮಹತ್ವವಿತ್ತರು. ಆಚಾರ-ವಿಚಾರ, ಶುದ್ಧ ಶೀಲವಿಲ್ಲದೆ ಕೇವಲ ಗಡ್ಡ, ಜಡೆ, ಕಂಥೆ, ಲಾಂಛನವ ತೊಟ್ಟು "ಭೈರವ"ನಂತೆ ಸಂಚರಿಸುವವರು. ತುರುಬು ಚಿಮ್ಮುರಿಗಳ ಕಟ್ಟಿ, ಹಗರಣದ ನಿರಿಗುರುಳ ಬಾಲೆಯರ ಮುಂದೆ ಸುಳಿವುತಿಪ್ಪವರು **'ಬದ್ಧಭವಿ' 'ಅವಶೈವ'**ರಲ್ಲದೆ **'ಶುದ್ಧ ಸುಶೀಲ ನಿರಾಭಾರಿ ವೀರಶೈವ'** ರಲ್ಲವೆಂದು ಶರಣರಾದ ಮಡಿವಾಳ ಮಾಚಿದೇವರು ಮತ್ತು ಮೋಳಿಗೆಯ ಮಾರಯ್ಯನವರು ಅಭಿಪ್ರಾಯಪಡುತ್ತಾರೆ.[೨೦] ವೀರಶೈವ ನಿರಾಭಾರಿ ಇಲ್ಲವೆ ಜಂಗಮನ ವೇಷಭೂಷಣಗಳಾದ ತುರುಬು, ಚಿಮ್ಮುರಿ, ಚಿಂದಿ, ಕಾಸೆ, ಇತ್ಯಾದಿಗಳು[೨೧] **'ಭೈರವ'** ಪಂಥದಿಂದ ವೀರಶೈವಕ್ಕೆ ಬಂದುವೆಂಬಂತೆ ಗೋಚರಿಸುತ್ತದೆ. ಏಕದೇವನಿಷ್ಠೆಯ ವಿಷಯವನ್ನು ಶುದ್ಧ ಶೈವರು ಹೇಳುತ್ತಿದ್ದರೂ ಅದರಂತೆ ಆಚರಿಸುತ್ತಿದ್ದಿಲ್ಲ. ಆದುದರಿಂದಲೇ ಬಸವಣ್ಣನವರು ಆ ವಿಷಯದಲ್ಲಿ ಪರಿವಾರ ದೇವತೆಗಳನ್ನು ಚಕ್ರವರ್ತಿಯನ್ನಿಡುವ ಸ್ಥಳದಲ್ಲಿರಿಸಿ ಪೂಜಿಸಲಾಗದೆಂದು ಕಟ್ಟಪ್ಪಣೆ ವಿಧಿಸಿದರು; ಅನ್ಯದೈವ ಪೂಜೆ ಬೇಡವೆಂದರು "ಅನ್ಯ ದೈವದ ಸಂಗ ಹೊಲ್ಲ; ನಂಬಿದ ಹೆಂಡತಿಗೆ ಗಂಡನೊಬ್ಬ" ಎಂದು ತಿಳಿಸಿದರು.

ಈ ಶುದ್ಧ ಶೈವರು ತಮಿಳುನಾಡಿನಲ್ಲಿ ಮಾತ್ರವಲ್ಲ ಕನ್ನಡನಾಡಿನಲ್ಲಿಯೂ ಹನ್ನೆರಡನೆಯ ಶತಮಾನದಲ್ಲಿ ಉಪಲಬ್ಧವಿದ್ದರು. ಶ್ರೀ ಬಸವೇಶ್ವರರು ವಿದ್ಯಾಭ್ಯಾಸ, ಭಕ್ತಿಯ ಸಾಧನೆಗಾಗಿ ಮತ್ತು ತಮ್ಮ ಐಕ್ಯಕ್ಕಾಗಿ ಹೋದ ಕೂಡಲಸಂಗಮವು ಈ ಶುದ್ಧ ಶೈವರಿಗೇ ಸಂಬಂಧಿಸಿತ್ತೆಂದು ಮೋಳಿಗೆಯ ಮಾರಯ್ಯನವರ ಒಂದು ವಚನವು ತಿಳಿಸುತ್ತದೆ. ಈ ವಚನದಲ್ಲಿ ಬಸವಣ್ಣನು

'ಶುದ್ಧಶೈವ ಕಪ್ಪಡಿ ಸಂಗಮನಾಥನಲ್ಲಿ ಐಕ್ಯವಾದನು'

ಎಂದು ಉಕ್ತವಾಗಿದೆ.[೨೨] ಇದೇ ವಚನದಲ್ಲಿ ಮೋಳಿಗೆಯ ಮಾರಯ್ಯನವರು ಶೈವ ಶಾಖೆಗಳನ್ನು ಈ ರೀತಿ ಹೆಸರಿನಿಂದ ಕರೆದಿದ್ದಾರೆ: ೧) ಶುದ್ಧ ಶೈವ ೨) ಪೂರ್ವಶೈವ ೩) ಮಾರ್ಗಶೈವ ೪) ಆದಿಶೈವ ಮತ್ತು ೫) ವೀರಶೈವ ಎಂದು. ಶ್ರೀ ಬಸವೇಶ್ವರರೂ "ಶುದ್ಧ ಶೈವ ಸರೋನಿಧಿ"ಯಾಗಿದ್ದರೆಂದು ಹರೀಶ್ವರನು ಕರೆದಿದ್ದಾನೆ.[೨೩] ಈ ಕಾರಣದಿಂದಲೇ ಬಸವೇಶ್ವರರು ತಮ್ಮ ಕುಲಗುರುವಿನ ಸ್ಥಾನವಾದ ಕೂಡಲ ಸಂಗಮಕ್ಕೆ ಹೋದರೆನ್ನಬಹುದು. ಶ್ರೀ ಚೆನ್ನಬಸವಣ್ಣನವರು ಒಂದು ವಚನದಲ್ಲಿ, ವೀರಶೈವರಿಗೆ ಏಕದೈವನಿಷ್ಠೆಯನ್ನನುಸರಿಸುವನೇ ಗುರುವಾಗಬಲ್ಲನೆಂದೂ ಶುದ್ಧ ಶೈವರಂತೆ "ಹಲವು ದೈವದ ಎಂಜಲು ತಿಂಬ" "ಗೊರವ"ನನ್ನು ಗುರುದೇವನೆಂದು ಕರೆಯಿಸಿಕೊಳ್ಳುವವನು ಗುರುವಾಗಲಾರನೆಂದೂ ತಿಳಿಸಿದ್ದಾರೆ. ಶುದ್ಧ ಶೈವರ ಗುರುವನ್ನು "ಗೊರವ"ನೆಂದೂ

---

೨೦. ಮೋ. ಮಾ. ವ. ೨೦೯

೨೧. ಪ್ರ. ಲಿಂ. ಲೀ. ಸಂ. ಪುಟ ೧೭

೨೨. ಮೋ. ಮಾ. ವ. ೪೯೧

೨೩. ಬ. ರಾ. ದೇ. ರ. ಪುಟ ೮೨

ಕರೆಯುತ್ತಿದ್ದರೆಂಬ ಧ್ವನಿಯೂ ಈ ವಚನದಲ್ಲಿದೆ.[೨೪] ಆದಯ್ಯನ ರಗಳೆಯಲ್ಲಿ, ಹರಿಹರ ಕವಿಯು, ಉದ್ಯಾನದಲ್ಲಿ ಆದಯ್ಯನನ್ನು ಸಂದರ್ಶಿಸಿದ ಶಿವಭಕ್ತನು **'ಗೊರವ'**ನೇ ಆಗಿದ್ದನೆಂದು, "ಪದ್ಮಾವತಿಯ ಗಂಡಂ ಗೊರವರ್ಗೆ ಮಾಡಿಸಿದ ಬೋನ ಮಿರ್ಪುದು" – ಎಂಬ ಮಾತುಗಳಲ್ಲಿ ತಿಳಿಸಿದ್ದಾನೆ. ಅಲ್ಲದೆ ಏಕಾಂತದ ರಾಮಯ್ಯ ನನ್ನೂ **'ಗೊರವ'** ನೆಂದು ಕರೆದಿದ್ದಾನೆ.[೨೫] ಷಡಕ್ಷರದೇವನು, ಅರ್ಜುನನ್ನು ಶಿವನು ಶಬರನಾಗಿ ಇಂತು ಸಂಬೋಧಿಸಿದುದನ್ನು ವರ್ಣಿಸಿದ್ದಾನೆ;

"ಎಲೆ ಗೊರವ, ಚಾಪಬಾಣಾವಲಿಯಂ ಖಡ್ಗಮಂ ನೀಗಿದೆ.–" ಎಂದು[೨೬] ಸಾಮಾನ್ಯವಾಗಿ ಗೊರವ ಎಂಬುದನ್ನು ' ಶೈವಮುನಿ 'ಗೆ ಸಂಬೋಧಿಸುತ್ತಿದ್ದರಾದರೂ ಭಕ್ತರಿಗೂ ಬೋಧಿಸುತ್ತಿದ್ದುದನ್ನೂ ನಾವು ಗಮನಿಸಬಹುದು; ಇದು ಇನ್ನೂ ಪರಿ ಷ್ಕಾರ ಮಾಡಿಕೊಳ್ಳಬೇಕಾದ ವಿಷಯವೇ. ಗೊರವರು ಶುದ್ಧಶೈವರೇ ಅಥವಾ ಭಿನ್ನರೇ ಎಂಬುದನ್ನು ಇನ್ನೂ ಖಚಿತವಾಗಿ ಹೇಳಲು ಬರುವಂತಿಲ್ಲ.

ಅನೇಕ ಆಚರಣೆಗಳಲ್ಲಿ ವೀರಶೈವರ ಆಚರಣೆಗಳು ಶುದ್ಧ ಶೈವರ ಆಚರಣೆಗೆ ಸಮೀಪವಿರುವುದರಿಂದ ಕೆಲವೆಡೆ ಭಿನ್ನತೆಗಳೇ ಎನಿಸುವದಿಲ್ಲ; ಅಂತಹ ಆಚರಣೆಗಳು ವೀರ ಶೈವರಿಗೆ ಶುದ್ಧಶೈವದಿಂದಲೂ ಬಂದಿವೆ. ಉದಾಹರಣೆಗೆ ಈ ವಚನವನು ನೋಡಿರಿ.

'' ಪಾದಪೂಜೆಯಮಾಡಿ, ಅಂಗುಷ್ಠವೆರಡು, ಅಂಗುಲವೆಂಟು,
ಉಭಯಹಸ್ತದಲ್ಲಿ ಮಾಡಿಕೊಂಬುದೇ, ' ಶಿಕ್ಷಾಪಾದೋದಕ ' ;
ಆ ಶಿಕ್ಷಾಪಾದೋದಕವನೆ ವಿಭೂತಿಯಲ್ಲಿ ಸಮ್ಮಿಶ್ರವಮಾಡಿ
ಲಲಾಟಮೊದಲಾದ ನಾಲ್ವತ್ತೆಂಟು ಸ್ಥಾನಗಳಲ್ಲಿ ಧಾರಣವ ಮಾಡುವುದು;
ಇದು ' ವೀರಶೈವ 'ರಿಗೆ ಸಲ್ಲುವ ನಡತೆ.
' ಶುದ್ಧ ಶೈವ'ರು ಗಿಂಡಿಯಲ್ಲಿ ತುಂಬುವ ನಡತೆ;
' ವಿಶೇಷ ವೀರಶೈವ 'ರು ಗಿಂಡಿಯ ಮಾಡಲಾಗದು....''[೨೭]

ಈ ವಚನದಲ್ಲಿ ಗುರುಪಾದೋದಕ ಸ್ವೀಕಾರದ, ತಯಾರಿಕೆಯ ರೀತಿಯನ್ನು ಬಣ್ಣಿಸ ಲಾಗಿದೆ. ಪಾದೋದಕವನ್ನು ಗಿಂಡಿಯಲ್ಲಿ ತುಂಬುವ ನಡತೆ ಶುದ್ಧಶೈವರ ಆಚರಣೆ ಅದನ್ನು ವೀರಶೈವರು ಆಚರಿಸಲಾಗದೆಂದು ಹೇಳಲಾಗಿದೆ. ಆದಯ್ಯನವರು ತಮ್ಮ ಒಂದು ವಚನದಲ್ಲಿ ಲಿಂಗಧಾರಣೆಯ ವಿಷಯದಲ್ಲಿದ್ದ ಭಿನ್ನಾಭಿಪ್ರಾಯಗಳನ್ನು ಸೂಚಿ ಸಿದ್ದಾರೆ. ಅವರ ಹೇಳಿಕೆಯಂತೆ :

೧. ಶೈವ–ವೀರಶೈವ ಎರಡರಲ್ಲಿಯೂ ಗುರು ಶಿಷ್ಯನಿಗೆ ಆರಾಧನೆಗೆ ಲಿಂಗವನ್ನು ಕೊಡುತ್ತಾನೆ. ಹೀಗೆ ಲಿಂಗವನ್ನು ಕೊಟ್ಟ ಗುರು, ಶುದ್ಧ ಶೈವದಲ್ಲಿ, ಆ ಲಿಂಗವನ್ನು

೨೪. ಚ. ಬ. ವ. ೪೦೫
೨೫. ಹರಿಹರನ ರಗಳೆಗಳು ಪುಟ ೪೭೫, ಮತ್ತು ಪುಟ ೨೮೪
೨೬. ಶ. ಶಂ. ವಿ. ಪುಟ ೭೨
೨೭. ಚೆ. ಬ. ವ. ೬೨೩

ಸ್ಥಾವರದಂತೆ ಇದಿರಿಟ್ಟು ಪೂಜಿಸಲು ತಿಳಿಸುತ್ತಾನೆ; ಆದರೆ ವೀರಶೈವದಲ್ಲಿ ಗುರು ಕೊಟ್ಟಲಿಂಗವನ್ನು ಅನವರತ ಅಂಗಪೀಠದಲ್ಲಿ ಧರಿಸಲು ತಿಳಿಸುತ್ತಾನೆ. ಆ ಲಿಂಗವೇ ಪತಿಯೆಂದು ತಿಳಿಸುತ್ತಾನೆ. ಶುದ್ಧಶೈವದಲ್ಲಿ ಗುರುಕೊಟ್ಟ ಲಿಂಗವು ಯಾವುದೋ ಸ್ಥಾವರಲಿಂಗದ ಪ್ರತಿನಿಧಿಯಾಗಿದೆ. ಲಿಂಗವನ್ನು ಗುರುವಿನಿಂದ ಪಡೆದರೂ ಅದು ಪೂಜಾಪದ್ಧತಿಯಲ್ಲಿ, ದೀಕ್ಷಾಕ್ರಮದಲ್ಲಿ ವೀರಶೈವರಿಗಿಂತ ಭಿನ್ನವಾಗಿದೆ. ಸ್ಥಾವರದಿಂದ ಭಿನ್ನವಾದ ಹಾಗೂ ವ್ಯಕ್ತಿಗತವಾದ ಲಿಂಗಪೂಜೆಯು ಶುದ್ಧಶೈವದಲ್ಲಿ ತೋರುವುದು ಇಲ್ಲಿ ಸ್ಪಷ್ಟವಿದೆ. ಎದುರಿಗಿಟ್ಟು ಪೂಜಿಸುವ ಪದ್ಧತಿಯನ್ನು ನಿವಾರಿಸಿ ಶಿವಶರಣರು ಇಷ್ಟಲಿಂಗವನ್ನು ಅನವರತ ಧರಿಸಿ ಪೂಜಿಸಬೇಕೆಂದು ಕಟ್ಟಪ್ಪಣೆ ಮಾಡಿದರು. ದೇಹದ ಮೇಲೆ ಲಿಂಗವನ್ನು ಧಾರಣಮಾಡುವುದರಿಂದಲೇ ವೀರಶೈವರಿಗೆ ಶುದ್ಧಶೈವರ ಚತುರ್ವಿಧ ಪದವಿಗಳಿಗಿಂತಲೂ ಹಿರಿದಾದ ಪದವಿ (ಲಿಂಗಾಂಗ ಸಾಮರಸ್ಯ) ದೊರಕುತ್ತದೆ;* ಅಲ್ಲದೆ ಪಂಚಾಕ್ಷರೀ ಮಂತ್ರವನ್ನು ಲಿಂಗಾಧಾರಣೆಯ ಕಾಲದಲ್ಲಿ ಗುರು, ಶಿಷ್ಯನಿಗೆ ಕರ್ಣದಲ್ಲಿ ಉಪದೇಶಮಾಡುವುದೂ ಶುದ್ಧಶೈವ ವೀರಶೈವ ಎರಡರಲ್ಲಿಯೂ ಪ್ರಚಲಿತವಿದೆ.[೨೮] ಕೆಲವು ಶೈವ ಪಂಥಗಳಲ್ಲಿ ಶಿವನನ್ನು ಸ್ಥಾವರಲಿಂಗದ ರೂಪದಲ್ಲಿ ದೇವಾಲಯದಲ್ಲಿ ಸಾಮುದಾಯಿಕವಾಗಿ ಪೂಜೆ ಮಾಡುವ ಸಾಂಪ್ರದಾಯವಿದ್ದರೆ ಶುದ್ಧಶೈವದಲ್ಲಿ ವ್ಯಕ್ತಿಶಃ ಪೂಜೆ ಲಿಂಗಪೂಜೆ ಮಾಡುವ ಪದ್ಧತಿಯಿದೆ. ಇನ್ನು ಕೆಲವರು ಈ ಶುದ್ಧ ಶೈವದಲ್ಲಿಯೇ ವೀರಶೈವರಂತೆ ದೇಹದ ಮೇಲೆ ಲಿಂಗವನ್ನು ಧರಿಸುತ್ತಿದ್ದರು. ಬೇಕಾದಾಗ ಧರಿಸಿ ಬೇಡವಾದಾಗ ತೆಗೆದಿರಿಸುವ ಪದ್ಧತಿಯು ಶುದ್ಧ ಶೈವರಲ್ಲಿದ್ದುದನ್ನು ಆದಯ್ಯನು ಚನ್ನಾಗಿ ಖಂಡನೆ ಮಾಡಿದ್ದಾನೆ.

> "ಒನ್ಮೆ ಧರಿಸಿ, ಒಮ್ಮೆ ಇರಿಸಿ ಶುಚಿಯಾದೆನೆಂದು ಅಶುಚಿಯಾದೆನೆಂದು
> ಭವಿಯಾಗುತ್ತೊಮ್ಮೆ, ಭಕ್ತನಾಗುತ್ತೊಮ್ಮೆ, ಒಪ್ಪಚಿ ಹೊಲೆ, ಒಪ್ಪಚ್ಚಿ ಕುಲವೆಂದು
> ತಿಳಿನಱಿಯದಿಪ್ಪ ಶುದ್ಧಶೈವನಂ ಬಿಟ್ಟು.... —"[೨೯]

ಎಂದು ವಚನವಿದೆ. ಈ ವಚನವು ಸುದೀರ್ಘವಾಗಿದ್ದು ಅದರಲ್ಲಿ ಆದಯ್ಯನು ವೀರಶೈವವನ್ನು ಇತರ ಶೈವಶಾಖೆಗಳೊಡನೆ ಹೋಲಿಸಿ ಮಾತನಾಡಿದ್ದಾನೆ, ಅಲ್ಲಿ ಉಕ್ತವಾಗಿರುವ ಶೈವ ಶಾಖೆಗಳೆಂದರೆ :

---

* ಹೋಲಿಸಿರಿ: '' ಭೋಗ ಭೂಮಿಯು ಭೋಗತನುವಿನಲಾಗದನುಪಮಸಿದ್ಧಿ;
ಕರ್ಮೋದ್ಯೋಗಭೂಮಿಯು ಕರ್ಮತನುವಿನಲಲ್ಲದು;
ಆದುದಱಿಂದ ಯೋಗಯೋಗ್ಯರು, ಯೋಚಿಸುತ, ಭೂಭಾಗದೊಳು
ಮಾನವ ಶರೀರಗಳಾಗಿ ಸಾಧಿಸಿ ನಿಜವನುಱಿವರ ಗಿರಿಜೆ ಕೇಳೆಂದ.
ಪ್ರ. ಲಿಂ. ಲೀ ಸಂ-ಪುಟ ೫.

೨೮ ಆ. ವ. ೪೪.

೨೯ ಆ. ವ. ೭೭

೧) ಶುದ್ಧಶೈವ ೨) ಮಿಶ್ರಶೈವ, ೩) ಸಂಕೀರ್ಣಶೈವ ೪) ಪೂರ್ವಶೈವ ೫) ಮಾರ್ಗಶೈವ ೬) ಮತ್ತು ವೀರಶೈವ

ಮೇಲಿನ ಶೈವಭಕ್ತಿಗಳಲ್ಲಿ ಅವು 'ಕರ್ಮಭಕ್ತಿ' ಯನ್ನು ಪಾಲಿಸಿದರೆ ವೀರಶೈವವು 'ನಿರ್ಮಳ ಸದ್ಭಕ್ತಿ' ಯನ್ನು ಪಾಲಿಸುತ್ತದೆಯೆಂದಿದ್ದಾನೆ. ಮಿಶ್ರಶೈವವು ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರರು ಒಂದೆಂದು ನುಡಿಯುತ್ತದೆ. ಸಂಕೀರ್ಣ ಶೈವದವರು ಕಂಡ ಕಂಡವರಿಗೆ ದೇವರೆಂದೂ, ಹಿರಿಯ ದೇವರೆಂದೂ ಅಡ್ಡಬೀಳುತ್ತಾರಂತೆ; ದೂರ ದಿಂದಲೇ ನಮಿಸುವವನು ದೂರಸ್ಥನಹ ಪೂರ್ವ ಶೈವದವನಂತೆ ಎಂದು ಮೊದಲಾಗಿ ತಿಳಿಸಿದ್ದಾನೆ. ಕರ್ಮಭಕ್ತಿಯನ್ನು ಮಾಡುವ ಶುದ್ಧಶೈವ ಭಕ್ತಿಯು ವೀರಶೈವರಿಗೆ ಮಾನ್ಯವಲ್ಲ; ಯಾಕಂದರೆ ಕರ್ಮವು ಹಿಂಸೆಗೆ ಕಾರಣವಾಗುತ್ತದೆಯೆಂದು ಶಿವಶರಣರು ಕರ್ಮಕಾಂಡವನ್ನು ಅಲ್ಲಗಳೆದು ಭಕ್ತಿಯನ್ನು ಮಾತ್ರ ಒಪ್ಪಿದರು. ಅದಕ್ಕಾಗಿಯೇ ಬಸವಣ್ಣನವರು :

"ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸುತ್ತಿದೆ"[೩೦] ಎಂದು ಆಡಿದ್ದಾರೆ. ಹರಿಹರ ಕವಿಯು ಬಸವಣ್ಣನ ಚರಿತ್ರೆಯಲ್ಲಿ :

"ಶಿವಭಕ್ತಿಯುಂ ಕರ್ಮಮುಂ ಎಂದುವೊಂದಾಗಿರದು"[೩೧] ಎಂದು ಬಸವಣ್ಣನು ಯಜ್ಞೋಪವೀತವನ್ನು ಬಿಟ್ಟನೆಂದು ಹೇಳಿದ್ದಾನೆ. ಶುದ್ಧ ಶೈವರಲ್ಲಿ ಈ ರೀತಿ ಹಿಂಸಾ ಚಾರಕ್ಕೆ ಒಳಗಾದ ಭಕ್ತಿ, ತೆಗೆದಿರಿಸುವ, ಕಟ್ಟಿಕೊಳ್ಳುವ ಲಿಂಗಧಾರಣ ಪದ್ಧತಿ ಇದ್ದು, ಅವನು ಲಿಂಗವಿದ್ದ ಕಾಲದಲ್ಲಿ ಭಕ್ತ, ತೆಗೆದಿರಿಸಿ ಭವಿಯಾಗಿರುತ್ತಿದ್ದುದನ್ನು ಶರಣರು ಖಂಡಿಸಿ, "ಅಂಗದಲನವರತ ಲಿಂಗವ ಧರಿಸುವುದನ್ನು" ಕಡ್ಡಾಯಗೊಳಿಸಿದರು. ಅಲ್ಲದೆ ಗುರುವಿನಲ್ಲಿಯೂ ಬಹಳಷ್ಟು ವ್ಯತ್ಯಾಸವಿದೆಯೆಂದು ಶರಣರ ಮತ. ಒಬ್ಬ ವಚನ ಕಾರನು : "ವೀರಶೈವ ಗುರುವಾಗಿ ಶುದ್ಧಶೈವಕ್ಕೆ ಹೊರಗಾಗಬೇಕು" [೩೨] ಹೇಳಿದ್ದಾನೆ. ವೀರಶೈವನಾದವನು ಶುದ್ಧ ಶೈವಾಚಾರಗಳನ್ನು ತೊರೆಯಬೇಕೆಂಬುದೇ ಮೂಲ ಭಾವ ವವಾಗಿದೆ, ನಿರ್ಮಲ ಭಕ್ತಿ, ಲಿಂಗಾಂಗ ಸಾಮರಸ್ಯ ಇವು ವೀರಶೈವರ ಭಕ್ತಿಯ ಗುರಿಯಾಗಿವೆ. ಈ ಮಾತುಗಳನ್ನು ಅವಲೋಕಿಸಿದರೆ ವೀರಶೈವರು ತಮ್ಮ ಪೂರ್ವದ ಶೈವ ಪ್ರಭೇದಗಳೊಳಗಿನ ವಾಮಾಚಾರಗಳನ್ನು ಖಂಡಿಸಿ ನಿರ್ಮಲಗೊಳಿಸಿದುದು ಕಂಡು ಬರುತ್ತದೆ. ಇದುವೇ ವೀರಶೈವಕ್ಕೂ ಶೈವ ಪ್ರಭೇದಗಳಿಗೂ ಕಂಡು ಬರುವ ಮಹದಂತರವೆನ್ನಬಹುದು. ಸಕಳೇಶ ಮಾದರಸರು ತಮ್ಮ ಒಂದು ವಚನದಲ್ಲಿ ಲಿಂಗವಂತರನ್ನು ಇತರರೊಡನೆ ಹೋಲಿಸುತ್ತ ಆಡಿದ ನುಡಿಗಳಿವು :

"ಕಾಮದ ಕಳವಳದಲ್ಲಿ ಹುಟ್ಟಿ, ಸಂಸಾರವ ತೊಟ್ಟು, ಲಿಂಗಮುಖ
ಭವವನರಿಯದವರೆಲ್ಲರೂ ಅಂತಿರಲಂತಿರಲಿ;

---

೩೦. ಬ. ವ. ೨೦೮

೩೧. ಬ. ರಾ. ದೇ. ರ. ಪುಟ ೧೦

೩೨. ಅ. ಮಾ. ತಂ. ವ. ೯೪

ಬ್ರಹ್ಮಪಾಶವ ಕೊರಳಲ್ಲಿ ಹಿಡಿಸಿಕೊಂಡು ವಿಷಯಾದಿಗಳ ಕೊಂಡವರಂತಿರಲಿ;
ಚತುರ್ವೇದಶಾಸ್ತ್ರವನೋದಿ ಲಿಂಗವುಂಟು ಇಲ್ಲವೆಂಬ ಶ್ವಾನಜ್ಞಾನರಂತಿರಲಿ;
ತನುವ ಹೊತ್ತು ಬಳಲುವ ಕಾಲವಂಚಕಯೋಗಿಗಳೆಲ್ಲ ಅಂತಿರಲಂತಿರಲಿ;
ಪಂಚಮುಹಾಶೈವರು ಭ್ರಷ್ಟರಾಗಿ ಹೋದರು;
ಅದ್ವೈತಿಗಳೆಲ್ಲ "ಲಿಂಗಾರಾಧನೆ ಹುಸಿ" ಎಂದು ಬುದ್ಧಿ ತಪ್ಪಿ ನುಡಿದು ಗಮನ ಕೆಟ್ಟು ಹೋದರು;
ಇವರನೆಂತು ಸರಿಯೆಂಬೆನಯ್ಯಾ ಲಿಂಗವಂತಂಗೆ?.........
ಅಹಮಿಲ್ಲದ ಕಾರಣ ಸಕಳೇಶ್ವರಾ, ನಿಮ್ಮ ಶರಣರು ಜಗದ್ವಂದ್ಯರಾದರು"[೩೩]

ಈ ವಚನದಲ್ಲಿ ಕಾಮಿಗಳಾಗಿ ಸಂಸಾರದಲ್ಲಿ ಬೀಳುವವರಿಗೆ, ಬ್ರಹ್ಮಪಾಶವ ಕೊರಳಲ್ಲಿ ಧರಿಸಿ ವಿಷಯಾದಿಗಳಿಗೆ ಸಿಲುಕುವವರಿಗೆ, ಚತುರ್ವೇದವನ್ನೋದಿ ಶ್ವಾನಜ್ಞಾನಿಗಳಾದವರಿಗೆ, ಕಾಲವಂಚಕರಿಗೆ, ಬುದ್ಧಿಗೆಟ್ಟು ಭ್ರಷ್ಟರಾದ ಪಂಚ ಮಹಾಶೈವರಿಗೆ, ಬುದ್ಧಿ ತಪ್ಪಿ ಅಹಂಕಾರದಿಂದ 'ಲಿಂಗಾರಾಧನೆ ಹುಸಿ' ಎಂದು ನುಡಿವ ಅದ್ವೈತಿಗಳಿಗೆ ವೀರಶೈವವು ಸರಿಯಲ್ಲವೆಂದಿದೆ. ಹೀಗೆ ಒಂದೊಂದು ಪಂಥದಲ್ಲಿ ಕಂಡುಬರುವ ನ್ಯೂನತೆಗಳನ್ನು ಹೇಳಿ, ಆ ನ್ಯೂನತೆಗಳಿಂದ ವೀರ ಶೈವವು ದೂರವಿದೆಯೆಂಬುವದನ್ನು ಸಕಳೇಶ ಮಾದರಸರು ಎತ್ತಿತೋರಿಸಿದ್ದಾರೆ. ಅಲ್ಲದೆ ಶೈವದ ಭೇದಗಳು-ಐದು (ಪಂಚ ಮಹಾಶೈವ) ಎಂದು ಹೇಳಲಾಗಿದೆ; ಅದೇ ಮೋಳಿಗೆ ಮಾರಯ್ಯನವರ ವಚನವೊಂದರಲ್ಲಿ "ಆರುಶೈವವ ಹೊದ್ದದ ವೀರಶೈವ" ಎಂದು ನುಡಿದುದರಿಂದ ಶೈವ ಪ್ರಭೇದಗಳು ಆರು ಎಂಬುದು ಉಕ್ತವಾಗಿದೆ[೩೪]. ಲಿಂಗವಿಲ್ಲದವರೆಷ್ಟೇ ಸುಜಾತಿಯವರಾದರೂ ಅವರ ಬೆರೆಸಲಾಗದು ಎಂದು ಅವರು ನುಡಿದಿದ್ದಾರೆ. "ಭೂತೇಶನೆಂಬ ಲಿಂಗವನರ್ಚಿಸಿದ ಬಳಿಕ ನಂದಿವುಂಗುರ, ಅನ್ಯಮಣಿ ಮಾಲೆ, ನಾಗಕುಂಡಲ ಮೊದಲಾದ ಭವಿಶೈವದ ಮುದ್ರೆಗಳ ಧರಿಸಲಾಗದು; ಲಿಂಗವೊಂದನ್ನೇ ಧಾರಣ ಮಾಡಬೇಕೆಂದೂ, ಅದೇ ಅವನಿಗೆ ಪರಮ ಆಭರಣವೆಂದೂ ಕಟ್ಟಪ್ಪಣೆ ಮಾಡಿದ್ದಾನೆ ಚೆನ್ನಬಸವಣ್ಣ.[೩೫] ಭಸಿತ ರುದ್ರಾಕ್ಷಿಗಳೇ ಅಂಗದ ಮೇಲೆ ಲಿಂಗ ಸಾಹಿತ್ಯವಾದ ಅಲಂಕಾರಗಳೆಂದು ಬಸವಣ್ಣನವರೂ ತಿಳಿಸಿದ್ದಾರೆ.[೩೬] ವೀರ ಶೈವನಿಗೆ ಅನ್ಯದೈವ ಸಂಕೇತಗಳು ದೇಹದ ಮೇಲಿರುವುದು ನಿಷಿದ್ಧವೆಂದು ಶರಣರು ಕಟ್ಟಪ್ಪಣೆ ಮಾಡಿದ್ದರೂ ಕೆಲವರು ಇಂದು ಸಹ ಈ ಮಾತುಗಳನ್ನು ಪಾಲಿಸದಿರು ವುದಕ್ಕೆ ಆ ವ್ಯಕ್ತಿಗಳ ವ್ಯಕ್ತಿಶಃ ತಿಳುವಳಿಕೆ, ಮತ್ತು ಸಾಮಾಜಿಕ ಪರಿಸರ ಇವುಗಳ ಪ್ರಭಾವವೇ ಮುಖ್ಯ ಕಾರಣಗಳೇ ವಿನಾ ಅವರ ಆಚರಣೆಗಳು ಶರಣರ ಶಾಸ್ತ್ರಕ್ಕೆ-ಧರ್ಮಕ್ಕೆ ಒಪ್ಪಿತಲ್ಲವೆಂಬುದನ್ನು ನೆನಪಿಡಬೇಕು.

---

೩೩. ಸ. ಮಾ. ವ. ೧೬
೩೪. ಮೋ. ಮಾ. ವ. ೬೨೨.
೩೫. ಚೆ. ಬ. ವ ೨೫೩.
೩೬. ಬ. ವ. ೨೬೯.

ವೀರಶ್ಶೈವರು ಅತ್ಯುನ್ನತ ನೀತಿ – ಪಾಲನೆಗೆ ಬಿನ್ನೈಸಿಕೊಂಡರು. ಪರಧನ ಪರ ಸತಿಯುರ ಲೇಪ, ಪರಹಿಂಸೆ, ಒಡಲಳಿದಡೆಯೂ ಆಚಾರಹೀನತ್ವ ಇಲ್ಲದಂತಿದ್ದರೆ ಮಾತ್ರ ಅವನು ವೀರಶೈವನೇ ವಿನಾ " ವೀರಶೈವದಲ್ಲಿ ಹುಟ್ಟಿದ ಮಾತ್ರಕ್ಕೆ ವೀರಶೈವ ನೆಂತಪ್ಪನಯ್ಯಾ ?" – ಎಂದೂ ಕೇಳಿದ್ದಾರೆ ಶರಣರು.[೩೭] ಬಸವಣ್ಣನವರು " ಛಲಬೇಕು ಶರಣಂಗೆ ಪರಧನವ ಪರಸತಿಯನೊಲ್ಲೆನೆಂದು " ಎಂದು ಆಡಿದುದನ್ನಿಲ್ಲಿ ಸ್ಮರಿಸಿ ಕೊಳ್ಳಬೇಕು.[೩೮] ಶರಣರ ಪೂರ್ವದಲ್ಲಿ, ಜನರಲ್ಲಿಯ ನೀತಿ ಹಾರಿ ಹೋಗಿದ್ದಿ ತೆಂದೂ ಅದಕ್ಕೆ ಶರಣರು ಆಗಮಿಸಬೇಕಾಯಿತೆಂದೂ ಶಿವಕವಿಗಳ ತಿಳುವಳಿಕೆಯಾಗಿದೆ; ರಾಘವಾಂಕ ಕವಿಯು ' ಸೋಮನಾಥ ಚಾರಿತ್ರ್ಯ ' ದಲ್ಲಿ ಆದಯ್ಯನ ಜನನಕ್ಕೆ ಕಾರಣ ಗಳನ್ನು ವಿವರಿಸುವಾಗ ನಾರದನಿಗೆ ಶಿವನು ಇಂತು ತಿಳಿಸಿದ್ದಾನೆ : ಭೂಲೋಕದಲ್ಲಿ " ಜ್ಞಾನವಿಲ್ಲ, ಅಱಿವುಹುಗದು ; ಆಚಾರವಡಿಯಿಡದು ; ದಾನಧರ್ಮಂ ದೂರ, ನೀತಿಯತ್ತತ್ತ " ಎಂದು ತಿಳಿಸಿದ್ದಾನೆ.[೩೯] ಹೀಗೆ ಪೂರ್ವದ ಶೈವಪಂಥಗಳು ವರ್ತಿಸುತ್ತಿ ದ್ದುವೆಂದುದರಿಂದಲೇ ಶಿವಶರಣರು ಧರ್ಮಸಂಸ್ಥಾಪನೆ, ಧರ್ಮ ಸುಧಾರಣೆಗೆ ಕೈಹಾಕ ಬೇಕಾಯ್ತು.ಅವರ ಖಂಡನೆಗೆ ಅನ್ಯಧರ್ಮ, ಶೈವಧರ್ಮಗಳು ಮಾತ್ರ ಗುರಿಯಾಗಲಿಲ್ಲ, ಅನಾಚಾರಕ್ಕೊಳಗಾಗುತ್ತಿದ್ದ ವೀರಶೈವರೂ ಒಳಗಾದರು. ಅದರಿಂದಲೇ,

"ವೀರಶೈವದಲ್ಲಿ ಹುಟ್ಟಿದ ಮಾತ್ರಕ್ಕೆ ವೀರಶೈವನೆಂತಪ್ಪನಯ್ಯ"

ಎಂದು ಘೋಷಿಸಿದರು.

ಶಿವಶರಣರು ವೀರಶೈವ ಮಾರ್ಗವನ್ನು 'ಶರಣಮಾರ್ಗ' 'ಶರಣನಾಚರಣೆ' ಎಂದು ಕರೆ ದಿದ್ದಾರೆ. ಉದಾಹರಣೆಗೆ ಅಲ್ಲಮಪ್ರಭುದೇವರು ಹೇಳುವ ಈ ಮಾತನ್ನು ಗಮನಿಸೋಣ.

" ಅಲ್ಪ ಜ್ಞಾನಿ ಪ್ರಕೃತಿ-ಸ್ವಭಾವಿ; ಮಧ್ಯಮಜ್ಞಾನಿ ವೇಷಧಾರಿ; ಅತೀತಜ್ಞಾನಿ ಆಱೂಢ;
ಜ್ಞಾನವನಱಿಯದಾತ ಅಜ್ಞಾನಿ-ನಾಮನಷ್ಟ; ಈ ಚತುರ್ವಿಧದೊಳಗಾವಂಗವೂ ಅಲ್ಲ ಗುಹೇಶ್ವರ ನಿಮ್ಮ ಶರಣ"[೪೦]

ಎಂದು ಶರಣನು ಪ್ರಕೃತಿಸ್ವಭಾವಿ, ವೇಷಧಾರಿ, ಅತೀತಜ್ಞಾನಿ, ಅಜ್ಞಾನಿ, ಇವರು

೩೭. ಚೆ. ಬ. ವ ೨೪೯.

೩೮. ಬ. ವ. ೪೪೬, ೬೭೬.

೩೯. ಸೋ. ಚಾ. ಪುಟ ೧೬. ಪದ,) ೪೨.

೪೦ ಅ. ವ. ಡಂ ವಚನ ೨೬೫
"ನಾಥಪಂಥದ ಗುರುಗಳನ್ನು ಜೋಗಿ ಎಂಬುದಾಗಿ ಕರೆಯುವ ವಾಡಿಕೆಯಿದೆ; ಅವರು ಹೆಚ್ಚಾಗಿ ಹಟಯೋಗ ಸಾಧಕರೆಂಬುದರಿಂದ ಜೋಗಿ ಎಂಬ ಬಿರುದು ಬಂದಿರ ಬಹುದು''. ಡಾ. ಕೆ. ಶಿವರಾಮಕಾರಂತರ 'ಜಾನಪದ ಗೀತೆಗಳು' - ಪುಟ ೬೯-೭೦ ನೋಡಿರಿ (೧೯೬೬) [ಈ ವಚನದಲ್ಲಿ ಬಂದಿರುವ 'ಯೋಗಿ' ಎಂಬುದು ಬೌದ್ಧರನ್ನು ಸೂಚಿಸಬಹುದಾಗಿರುವಂತೆ ಕಂಡುಬರುತ್ತದೆ ?]

ಗಳಿಗಿಂತಲೂ ಶ್ರೇಷ್ಠನೆಂದಿದ್ದಾರೆ. ಶರಣರ ಮಾರ್ಗದ ರೀತಿಯೇ ವಿಶಿಷ್ಟತರವಾದು ದೆಂದು ಅವರ ಮತ. ಶರಣಾಚರಣೆಯು ಹೇಗೆ ಇದೆ ತಿಳಿಸುವ ತೋಂಟದ ಸಿದ್ಧ-ಲಿಂಗಯತಿಗಳ ವಚನವಿದು.

> " ಯೋಗಿಯಲ್ಲ, ಜೋಗಿಯಲ್ಲ, ಶ್ರವಣನಲ್ಲ, ಸನ್ಯಾಸಿಯಲ್ಲ;
> ಕಾಳಾಮುಖಿಯಲ್ಲ, ಪಶುಪತಿಯಲ್ಲ;
> ಈ ಷಡುದರುಶನಂಗಳಾಚರಣೆಯಲ್ಲ, ಶರಣಾಚರಣೆ ಬೇರೆ,
> ಆದಿಶೈವ, ಮಹಾಶೈವ, ಅನುಶೈವ,
> ಅಂತರಶೈವ, ಅಂತ್ಯಶೈವ ಪ್ರವರಶೈವವೆಂಬ ಈ ಆಱುಶೈವದ
> ನೀತಿಯಲ್ಲ, ಇಂತಿವೆಲ್ಲವೂ
> ಉತ್ಪತ್ತಿ, ಸ್ಥಿತಿ, ಲಯಂಗಳಿಗೆ ಕರ್ತ. ಶುದ್ಧ, ವಿಶೇಷ, ನಿರ್ವಾಣ
> ವೆಂದು ವೀರಶೈವ ಮೂರು
> ತೆಱನಾಗಿರ್ಪುದು......................''

ಎಂದು ತಿಳಿಸಿದ್ದಾರೆ ಇಲ್ಲಿ ಶೈವಪ್ರಭೇದಗಳು ಆರು ಎಂದು ತಿಳಿಸಲಾಗಿದೆ; ಅಲ್ಲದೆ 'ಕಾಳಾಮುಖಿ' ಮತ್ತು 'ಪಾಶುಪತ' ಇವು ಷಡ್ದರ್ಶನಗಳನ್ನವಲಂಬಿಸಿವೆಯೆಂದೂ ಹೇಳಲಾಗಿದೆ. ಈ ಆರುಶೈವದ ಪ್ರಭೇದಗಳಿಗೆ 'ಅನಾದಿಶೈವ' ವೊಂದನ್ನು ಸೇರಿ ಶೈವಪ್ರಭೇದಗಳು ಏಳು ಎಂದು ನಿಜಗುಣಶಿವಯೋಗಿಗಳು ವಿವೇಕ ಚಿಂತಾಮಣಿಯಲ್ಲಿ ತಿಳಿಸಿದ್ದಾರೆ.೪೧ 'ಶುದ್ಧ'ವು ಶೈವದ ಪ್ರಭೇದವೂ ಆಗಿರುವಂತೆ ವೀರಶೈವಕ್ಕೂ ಅನ್ವಯಿಸಿ 'ಶುದ್ಧ ವೀರಶೈವ' ರೆಂದಿರುವುದೂ ಇವೆರಡರ ಸಂಬಂಧವನ್ನೇ ಸೂಚಿಸುವಂತಿದೆ. ವಚನಕಾರರಲ್ಲಿಯೂ ಒಮ್ಮೆ 'ಪಂಚ' ಶೈವಗಳೆಂದೂ ಇನ್ನೊಮ್ಮೆ 'ಆರು' ಶೈವಗಳೆಂದೂ ಬಂದಿದೆ. ಈ ಒಟ್ಟು ಏಳು ಶೈವಪ್ರಭೇದಗಳನ್ನು ಪಾಶುಪತ, ಲಕುಲೀಶ, ಕಾಳಾಮುಖ, ಕಾಪಾಲಿಕ, ಶೈವ (ಮಾಹೇಶ್ವರ) ಇವುಗಳೊಡನೆ ಹೊಂದಿಸುವುದು ಸುಲಭವಲ್ಲ.

ಇಲ್ಲಿಯುವರೆಗಿನ ವಿವೇಚನೆಯಿಂದ ತಿಳಿದುಬರುವದೇನಂದರೆ ಈ ಕನ್ನಡನಾಡಿನ ವಚನಕಾರರಿಗೆ 'ಶುದ್ಧಶೈವವು' ಪರಿಚಿತವಿದ್ದು. ಅದಕ್ಕೂ ವೀರಶೈವಕ್ಕೂ ಅತಿಸಮೀಪದ ಹೋಲಿಕೆಗಳಿರುತ್ತವೆಂಬುದು 'ಶುದ್ಧಶೈವ' ಸುಪ್ರಸಿದ್ಧ ಶೈವಪ್ರಭೇದಗಳಲ್ಲಿ ಯಾವುದಕ್ಕೆ ಸೇರುತ್ತಿದೆಯೋ ಹೇಳುವದು.

## [೪]

## ಪಾಶುಪತ ವೀರಶೈವ

ಶುದ್ಧಶೈವದಂತೆಯೇ ಶರಣರು ಪಾಶುಪತದ ಅನುಯಾಯಿಗಳನ್ನು ಕಂಡಿದ್ದಾರೆ ಅವರೊಡನೆ ವಾದಮಾಡಿದ್ದಾರೆ. ಪಾಶುಪತಕ್ಕೂ-ವೀರಶೈವಕ್ಕೂ ಸಂಬಂಧ, ವ್ಯತ್ಯಾಸ ಗಳೇನೆಂಬುದನ್ನು ತಿಳಿಸಿದ್ದಾರೆ. ಶ್ರೀ ಚೆನ್ನಬಸವಣ್ಣನವರು ಒಂದು ವಚನದಲ್ಲಿ:

---

೪೧ ವಿ. ಚಿಂ. ಮ. ದ್ವಿತೀಯ ಪರಿಚ್ಛೇದ; ಪುಟ ೬೭.

"ಗುರುಲಿಂಗಜಂಗಮವೇಕವಾದುದೆ ಗುರುವಲ್ಲದೆ
ಪಿತ, ಮಾತೆ, ಸತಿ, ಸುತ, ಅತ್ತೆ, ಮಾವ, ಇದಲ್ಲದೆ
ಯೋಗಿ, ಜೋಗಿ, ಶ್ರವಣ, ಸನ್ಯಾಸಿ, ಕಾಳಾಮುಖ, ಪಾಶುಪತಿ, ಎಂಬ
ಷಡುದರ್ಶನ ಶೈವ ಕರ್ಮಿಗಳ 'ಗುರುವು ಗುರುವು' ಎಂಬುದಕ್ಕೆ ನಾಚದವರ
ನೇನೆಂಬೆನಯ್ಯಾ ?
ಆ ಮಹಾಘನಗುರುವಿಂಗೆ ಇಂತಿವರನೆಲ್ಲ ಸರಿಗಂಡಡೆ, ಒಂದೆ ಎಂದು ನುಡಿದಡೆ,
ಅಘೋರನರಕ ತಪ್ಪದಯ್ಯಾ, ಕೂಡಲ ಸಂಗಮದೇವಾ"೪೨

ಎಂದು ನುಡಿದಿದ್ದಾರೆ. ಶೈವಶಾಖೆಗಳಲ್ಲಿ, ಯಾರನ್ನಾದರೂ ಗುರುವೆಂದು ಸ್ವೀಕರಿಸುವ ಕ್ರಮವು ಇದ್ದುದು ತಿಳಿದುಬರುತ್ತದೆ. ಅವನು ಕೇವಲ ಗುರುಮಾತ್ರ; ಷಡ್ದರ್ಶನಂಗಳಲ್ಲಿ ಯಾವುದಾದರೊಂದನ್ನು ಸ್ವೀಕರಿಸಿರುತ್ತಾನೆ. ಇಂತಹ ಶೈವಗುರುವನ್ನು '**ಗುರುಲಿಂಗಜಂಗಮವೇಕವಾದ** ವೀರಶೈವ ಗುರುವಿಗೆ' ಸಮಾನನೆಂದು ಭಾವಿಸುವುದು ಪಾಪಕರವೆಂದು ಮೇಲಿನ ವಚನವು ತಿಳಿಸುತ್ತದೆ. ಆ ಗುರು ಒಮ್ಮೆ ಗುರುವಾಗಿ, ಒಮ್ಮೆ ಲಿಂಗಸ್ವರೂಪನಾಗಿ, ಮತ್ತೊಮ್ಮೆ ಜಂಗಮಸ್ವರೂಪನಾಗಿ ಬೇರೆ ಬೇರೆ ಕಾರ್ಯ ನಿರ್ವಹಿಸುತ್ತಾನೆ; ಬೇರೆಬೇರೆ ಹೆಸರುಗಳಿಂದ ಕರೆಯಲ್ಪಡುತ್ತಾನೆ; ಮೂಲತಃ ಭೇದವಿಲ್ಲ. ವೀರಶೈವರು ಷಡ್ದರ್ಶನಗಳಲ್ಲಿ ಯಾವುದೋ ಒಂದು ದರ್ಶನಕ್ಕೆ ಅಂಟಿಕೊಳ್ಳದೇ ತಮ್ಮದೇ ಆದ ದರ್ಶನ [ಮೃಡದರ್ಶನ ? ] ವನ್ನು ಹೊಂದಿದ್ದಾರೆ. ಹರಿಹರ ಕವಿಯು ಬಸವರಾಜದೇವರ ರಗಳೆಯಲ್ಲಿ ವಿರೋಧಿಗಳು ಬಿಜ್ಜಳನಿಗೆ ದೂರು ಹೇಳುವಾಗ ಆಡಿದ ನುಡಿಗಳನ್ನು ಇಂತು ತಿಳಿಸುತ್ತಾನೆ :

"ಷಡ್ದರ್ಶನಂ ಕೀಳಾದುವು; ಮೃಡದರ್ಶನಂ ಮೇಲಾದುದು"–

ಎಂದು.೪೩ ಬಸವಣ್ಣನು 'ವೈಷ್ಣವರು' 'ಬ್ರಾಹ್ಮಣರು' 'ಜೈನರು' ಮತ್ತು 'ಸ್ವಾಮಿಗಳು' ಇವರನ್ನು ಕಡಿಮೆಮಾಡಿ ಭಕ್ತರು ಮತ್ತು ಅವರ 'ದರ್ಶನ'ವನ್ನು ಅಧಿಕಮಾಡಿ ಮಾತಾಡುತ್ತಿದ್ದನೆಂದು ಪರಸಮಯಿಗಳು ದೂರಿಕೊಂಡ ಪ್ರಸ್ತಾಪದ ಮಾತಿದು. ಇಲ್ಲಿ ವೀರಶೈವರಿಗೆ "ಏಳನೆಯ ದರ್ಶನವೊಂದರ ಪ್ರಸ್ತಾಪ ಬಂದಿದೆ. ಶೈವಪಂಥದ ಯಾವುದೋ ಗುರುವಿನಿಂದ ದೀಕ್ಷೆಪಡೆದು ಲಿಂಗಧಾರಣ ಮಾಡುವ ಪದ್ಧತಿಯು ಶೈವಪ್ರಭೇಧಗಳಲ್ಲಿದ್ದುದನ್ನು ಗಮನಿಸಲಾಗಿದೆ. ಆ ರೀತಿ ಲಿಂಗಧಾರಣಮಾಡಿಕೊಂಡವರನ್ನೇ–ಬೇಕಾದರೆ 'ವೀರಶೈವ'ರೆಂದು ಕರೆದುಕೊಳ್ಳಬಹುದು; ಹಾಗೆ ಕೆಲವರು ತಿಳಿದಂತೆಯೂ ಕಾಣುತ್ತದೆ. ಶೈವಗುರುವಿನ ಕೈಯಲ್ಲಿ 'ವೀರಶೈವ'ರೆನಿಸಿಕೊಂಡವರು ದೀಕ್ಷೆಯ ಪಡೆಯಲಾಗದೆಂದು ಶಿವಶರಣರ ಅಭಿಮತವಾಗಿದೆ.

"ಶೈವ ಗುರುವಿನ ಕೈಯ ಲಿಂಗ ಸಾಹಿತ್ಯವಾದಡೇನಯ್ಯಾ?
ವೀರಶೈವ ಶರಣರು ಮೆಚ್ಚರು;

೪೨ ಚೆ. ಬ. ವ. ೪೬೩.
೪೩ ಬ. ರಾ. ದೇ. ರ, ಪುಟ ೫೩,

ಶೈವ ಗುರುವಿನ ಕೈಯಲಿ ಸಾಹಿತ್ಯವಪ್ಪುದರಿಂದ
ಸಾವುದೇ ಲೇಸಯ್ಯಾ!"

ಎಂದು ಶ್ರೀ ಚನ್ನಬಸವಣ್ಣನವರೇ ನುಡಿದಿದ್ದಾರೆ.[೪೪] ಶುದ್ಧಶೈವರು 'ಗೊರವ'ರಿಂದಲೂ ಲಿಂಗಧಾರಣೆ ಮಾಡಿಸಿಕೊಳ್ಳುತ್ತಿದ್ದರಲ್ಲದೆ, ಲಿಂಗವನ್ನು ಬೇಕಾದಾಗ ಧರಿಸಿ, ಬೇಡವಾದಾಗ ತೆಗೆದಿರಿಸುವುದು ಒಂದು ವ್ಯಾಪಾರದಂತೆ ನಡೆಯುತ್ತಿದ್ದು, ಅದು ದೀಕ್ಷೆ ಮಾಡಿದ ಗುರುವಿಗೂ ಲಿಂಗವನ್ನು ಸ್ವೀಕರಿಸಿದ ಶಿಷ್ಯನಿಗೂ ಯಾವ ರೀತಿಯಿಂದಲೂ ಶ್ರೇಯಸ್ಸನ್ನು ತರುವುದಾಗಿರಲಿಲ್ಲವೆಂದೇ ಶಿವಶರಣರು ಖಂಡಿಸಿದ್ದಾರೆ. ಒಂದು ಶೈವ ಪಂಥದವನು ಇನ್ನೊಂದು ಪಂಥದ ಶೈವನನ್ನು, ಅವರವರ ಆಚರಣೆ, ತತ್ವಗಳಲ್ಲಿ ಭಿನ್ನತೆ ಇದ್ದಾಗಲೂ, ಗುರುವೆಂದು ಸ್ವೀಕರಿಸುವ ಪದ್ಧತಿಯು 'ಪಾಶುಪತ'ದಲ್ಲಿಯೂ ಕಾಳಾಮುಖದಲ್ಲಿಯೂ ಇದ್ದು ಅದನ್ನು ಶರಣರು ಖಂಡಿಸಿದ್ದಾರೆ. ಶ್ರೀ ಚೆನ್ನಬಸವಣ್ಣನವರು ಬೇರೊಂದು ವಚನದಲ್ಲಿ ಶೈವ-ವೀರಶೈವಗಳ ಬಗೆಗೆ ದೀರ್ಘವಾಗಿ ವಿವರಿಸಿದ್ದಾರೆ. ಅಲ್ಲಿ ಅವರು :

"ಶೈವ ಸ್ವೈರೆರಗಾದ; ಪಾಶುಪತಿ ಪಥವಳಿಯಿತು; ಕಾಳಾಮುಖಿ ಕಂಗೆಟ್ಟ;
ಮಹಾವ್ರತಿ ಮದವೇರಿದ; ಸನ್ಯಾಸಿ ಪಾಷಂಡಿಯಾದ; ಕಾಪಾಲಿ ಮರುಳಾಗಿ ತಿರುಗಿದ
ಈ ಆರು ಭಕ್ತಿ ಪಥಕ್ಕೆ ಸಲ್ಲವು" [೪೫]

ಎಂದಿದ್ದಾರೆ. ಯಾಕೆಂದರೆ ಅವರು 'ಭಕ್ತಿಸೂಕ್ಷ್ಮ', 'ಭಕ್ತಿ ಕಟ್ಟಳೆ', 'ಭಕ್ತಿ ಕ್ರಮ', 'ಶರಣಸತಿ-ಲಿಂಗಪತಿ' ಸಂಬಂಧ, 'ಪಾದೋದಕ' 'ಪ್ರಸಾದ' 'ಗುರುಕರುಣ' ಮೊದಲಾದವುಗಳ ರೀತಿ, ಕ್ರಮ, ಆಚರಣೆಗಳ ಬಗೆಗೆ ವೀರಶೈವದ ಅಂದಿನ ನಿರ್ಣಿತ ಅಭಿಪ್ರಾಯವನ್ನೇ ತಿಳಿಸಿದರೆಂದು ಅವರು ಹೇಳಿದ್ದಾರೆ.[೪೬] ಅವರ ಅಭಿಪ್ರಾಯಗಳನ್ನು ಇಲ್ಲಿ ಈ ರೀತಿ ಸಂಗ್ರಹಿಸಬಹುದು : ೧) ವೀರಶೈವವು ಭಕ್ತಿ ಮಾರ್ಗದಲ್ಲಿ ಆರು ಶೈವ ಪಂಥಗಳಿಗೂ ಭಿನ್ನವಾಗಿದೆ; ೨) ಗುರುಕರುಣೆಯ ಫಲವಾಗಿ ಪ್ರಾಣಕ್ಕೆ ಲಿಂಗಪ್ರತಿಷ್ಠೆಯಾದ ಬಳಿಕ ಭವಿಯಂತೆ ತನ್ನ ಪೂರ್ವಕುಲವ ಬೆರಸಲಾಗದು; ೩) ಗುರುಲಿಂಗಜಂಗಮ, ಪಾದೋದಕ ಪ್ರಸಾದಗಳಲ್ಲಿ ಏಕನಿಷ್ಠೆಯನ್ನು ತಾಳಬೇಕು; ಶೈವನು ಲಿಂಗ ದೀಕ್ಷೆ ಪಡೆದ ಮೇಲೆ ಭವಿಗಳ ಸಂಪರ್ಕವನ್ನು ತ್ಯಾಗ ಮಾಡಬೇಕು; ಇವೇ ಮೊದಲಾದ ನಿಯಮಗಳ ಪಾಲನೆ, ಕಡ್ಡಾಯವಾಗಿ, ಶೈವ ಪ್ರಭೇದಗಳಿಗಿಲ್ಲ. ಲಿಂಗಧಾರಣ, ಗುರುಕರುಣ× ಪ್ರಸಾದ ಪಾದೋದಕಗಳು ಪುರಾತನ ಶೈವದಲ್ಲಿಯುವೇ

೪೪. ಚೆ. ಬ. ವ. ೪೬೮.
೪೫. ,, ೫೪೫.
೪೬. ಅದೇ ವಚನ.

× ನಿನ್ನಂತೆ ಗುರುಕರುಣವಾರ್ಗುಂಟೆ ಮಹಾದೇವಿ ?
ನಿನ್ನಂತೆ ಭಯ ಭಕ್ತಿ ಇನ್ನುಂಟೆ ಮಹಾದೇವಿ ?
ಮಲ್ಲಿನಾಥನ ಪರಮ ಕೀರ್ತಿಲತೆ ನೀನವ್ವ !

ಆಗಿದ್ದರೂ ಶಿವಶರಣರು ಉಪಯೋಗಿಸಿದ ರೀತಿ, ಹಚ್ಚಿದ ಅರ್ಥ, ಇವು ಕೆಲಮಟ್ಟಿಗೆ ಭಿನ್ನವಾಗಿಯೇ ಇವೆ. ಈ ವಚನದಲ್ಲಿ ಆರು ಶೈವ ಪಂಗಡಗಳನ್ನು ಬೇರೊಂದು ರೀತಿಯಲ್ಲಿ ಹೇಳಿರುವುದರಿಂದ, ಮೊದಲು ಹೇಳಿದ ಆರುಶೈವ ಶಾಖೆಗಳಿಗೂ ಇಲ್ಲಿಯ ಆರುಶೈವ ಶಾಖೆಗಳಿಗೂ ಹೊಂದಾಣಿಕೆ ಮಾಡುವುದು ಕೆಲಮಟ್ಟಿಗೆ ಸಾಧ್ಯವಾಗುತ್ತದೆ. ಚೆನ್ನಬಸವಣ್ಣನವರು ಹೇಳಿದ, "ಈ ಆಱು ಭಕ್ತಿ ಪಥಕ್ಕೆ ಸಲ್ಲವು ಕೇಳಿರಣ್ಣಾ" ಎಂಬುದು ಮಾತ್ರ ವಿಚಿತ್ರವೆನಿಸುತ್ತದೆ; ಪ್ರಾಯಶಃ ಅವು ವೀರಶೈವದ ಗುರುಲಿಂಗಜಂಗಮಭಕ್ತಿ, ಏಕದೈವನಿಷ್ಠೆಗೆ ಸಮಾನವಲ್ಲವೆಂದೇ ಭಾವಿಸಿ, ವೀರಶೈವರ ಈ ಭಕ್ತಿಮಾರ್ಗದ ಕಟ್ಟಳೆ, ಪಾಲನೆಗಳನ್ನು ಅರಿತೇ 'ಶೈವ ಸೈವರಗಾದ', 'ಪಾಶುಪತಿ ಪಥವನಱಿಯ' ಎಂದು ಮೊದಲಾಗಿ ಆಡಿದ್ದಾರೆ. 'ಮಹಾವ್ರತಿ' 'ಸನ್ಯಾಸಿ' ಇವು ಶೈವ ಶಾಖೆಗಳಿಗೆ ಸಂಬಂಧಿಸಿದವೋ ಅನ್ಯ ಪಂಥಗಳಿಗೆ ಸಂಬಂಧಿಸಿದವೋ ಸ್ಪಷ್ಟವಾಗಿ ತಿಳಿಯದು. ಶೈವರಲ್ಲಿ – ಬೌದ್ಧರಲ್ಲಿಯೂ ಸನ್ಯಾಸಿಗಳು ಇರುತ್ತಾರೆ. ಇನ್ನು 'ಮಹಾವ್ರತಿ' ಗಳೆಂದರೆ ಯಾರು ? – ತಿಳಿಯಬೇಕಾದುದು* ಶೈವರಲ್ಲಿ ಗುರು ಕಾರುಣ್ಯವಾದ ಮಾತ್ರಕ್ಕೆ ಅವರನ್ನು ಭಕ್ತರೆನ್ನಲಾಗದು ಎಂದು ಶರಣರು ಇಂತು ಹೇಳಿದ್ದಾರೆ :

> "ಗುರು ಕಾರುಣ್ಯವುಂಟು, ಭಕ್ತರೆಂದೆಂಬರು ಶೈವದೀಕ್ಷೆಯೆಂದಱಿಯದೆ;
> ಶೈವ ಗುರುಕಾರುಣ್ಯವುಳ್ಳಡೆ ಭಕ್ತರೆಂತಪ್ಪರಯ್ಯಾ
> ಅಂಗದ ಮೇಲೆ ಲಿಂಗವಿಲ್ಲದನ್ನಕ್ಕ ?
> ಪ್ರಸಾದಕಾಯವಾಗದನ್ನಕ್ಕ ?..........". ಎಂದು,[೪೭]

ಭಕ್ತನಾದರೆ ಲಿಂಗಧಾರಣ ಪಡೆಯುವುದು; ಗುರುಲಿಂಗಜಂಗಮರ ಕಿಂಕರನಾಗುವುದು–ಅತ್ಯಾವಶ್ಯಕ; ಶೈವರಲ್ಲಿ "ಗುರುಕಾರುಣ್ಯ" "ಶಿವದೀಕ್ಷೆ" ಪೊದಗುತ್ತಿದ್ದುವಲ್ಲದೆ ಅಂತಹ ಭಕ್ತನ ಕಾಯವು 'ಭವಿ'ಯ ಕಾಯವಾಗುತ್ತಿದ್ದುದಲ್ಲದೆ 'ಪ್ರಸಾದಕಾಯ' ವಾಗುತ್ತಿದ್ದಿಲ್ಲವೆಂದಿದ್ದಾರೆ. ಇನ್ನು ಗುರುಲಿಂಗಜಂಗಮಗಳಲ್ಲಿ ಜಂಗಮದ ಪಾದೋದಕ ಪ್ರಸಾದಗಳನ್ನೇ ಲಿಂಗಕ್ಕೆ ಅರ್ಪಿಸಬೇಕೆಂದು ಶಿವಶರಣರು ಹೇಳುತ್ತಿದ್ದರೆ ಇದು ಸರಿಯಾದ ಆಚರಣೆಯಲ್ಲವೆಂದು ಶೈವರು ವಿರೋಧಿಸಿದ್ದಕ್ಕೆ ಬಸವಣ್ಣನು ಪ್ರತಿಭಟಿಸಿ, ವೀರಶೈವರ ಕ್ರಮವೇ ಸರಿಯಾದುದೆಂದು ತಿಳಿಸಿದನೆಂದು ಚೆನ್ನಬಸವೇಶ್ವರರ ಒಂದು ವಚನವು ತಿಳಿಸುತ್ತದೆ.

ಉದಾ : ..."ಜಂಗಮದ ಪಾದತೀರ್ಥವ ಲಿಂಗಕ್ಕೆ ಮಜ್ಜನಕ್ಕೆಱೆದು, ಪ್ರಸಾದವ ಲಿಂಗಕ್ಕೆ ನೈವೇದ್ಯವ ಸಮರ್ಪಿಸಿ, ಭೋಗಿಸುವಾತನೇ ಸದ್ಭಕ್ತ ; ಆತನೇ ಮಹೇಶ್ವರ; ಆತನೇ ಪ್ರಸಾದಿ; ಆತನೇ ಪ್ರಾಣಲಿಂಗಿ; ಆತನೇ ಶರಣ; ಆತನೇ ಐಕ್ಯ;

---

* [ಸಂನ್ಯಾಸಿ = ಬೌದ್ಧ ?], [ಯೋಗಿ = ಬೌದ್ಧ], [ಮಹಾವ್ರತಿ = ಕಾಪಾಲಿಕ].

೪೭. ಚೆ. ಬ. ವ. ೫೯೫.

ಇಂತಲ್ಲದೆ ಜಂಗಮದ ಪಾದತೀರ್ಥ ಪ್ರಸಾದರಹಿತನಾಗಿ,
ಆವನಾನೊಬ್ಬನು ತನ್ನ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ
ಷೋಡಶೋಪಚಾರಕ್ರಿಯೆಯಿಂದ ಪೂಜೆಯ ಮಾಡುವಲ್ಲಿ,
ಅವನು 'ಶುದ್ಧ ಶೈವನು'; ಅವನಿಗೆ ಮುಕ್ತಿಯಿಲ್ಲ ಕಾಣಾ,
ಕೂಡಲಚೆನ್ನ ಸಂಗಮದೇವಾ."೪೮

ಇಲ್ಲಿ ಸ್ಪಷ್ಟವಾಗಿ 'ಷಟ್‌ಸ್ಥಲಕ್ಕೂ' 'ಶುದ್ಧಶೈವಾಚಾರಕ್ಕೂ ಇರುವ ವ್ಯತ್ಯಾಸಗಳು ಗೋಚರಿಸುತ್ತವೆ. ಅಲ್ಲದೆ ಶರಣರು ಎರಡು ವಿಚಾರಗಳಲ್ಲಿ ವೀರಶೈವಕ್ಕೂ ಶುದ್ಧ ಶೈವದ ಆಚರಣೆಗೂ ಭಿನ್ನತೆಯಿರುವುದನ್ನು ನಿರೂಪಿಸಿದ್ದಾರೆ.

೧. ಶುದ್ಧಶೈವದವರಿಗೂ ಇಷ್ಟಲಿಂಗ, ಜಂಗಮಾರಾಧನೆ, ಪಾದೋದಕ ಪ್ರಸಾದಗಳಿದ್ದರೂ ಅವುಗಳ ತಯಾರಿಕೆ, ರೀತಿ-ನೀತಿಗಳಲ್ಲಿ ವೀರಶೈವರ ಆಚರಣೆ ಭಿನ್ನವಾಗಿದೆ.

೨. ವೀರಶೈವರು ಷಟ್ಸ್ಥಲಬ್ರಹ್ಮ, ಜಂಗಮಪ್ರೇಮಿ; ಶುದ್ಧಶೈವಿಯು ಲಿಂಗ ಜಂಗಮಗಳಲ್ಲಿ ಲಿಂಗವೇ ಶ್ರೇಷ್ಠವೆನ್ನುವರು.

ದೀಕ್ಷೆಯ ವಿಚಾರದಲ್ಲಿಯೂ ವೀರಶೈವರು ಶೈವರಿಂದ ಭಿನ್ನವಾಗಿದ್ದಾರೆ, ದೀಕ್ಷೆಗೆ ಅರ್ಹರಾಗದಿದ್ದವರನ್ನು ತೆಗೆದುಕೊಂಡು ದೀಕ್ಷೆ ಕೊಡುತ್ತಿದ್ದುದನ್ನು ಬಸವೇಶ್ವರರು ಮೆಚ್ಚಲಿಲ್ಲವೆಂದೇ ಚೆನ್ನಬಸವೇಶ್ವರರು ;

" ಎಲ್ಲರ ದೀಕ್ಷೆಯಂತಲ್ಲ ಎಮ್ಮಯ್ಯನದೀಕ್ಷೆ;
ನಡೆ-ನುಡಿಶುದ್ಧವಾದವರಿಗಲ್ಲದೆ ಅನುಗ್ರಹಿಸ ನೋಡಾ;
ಪರಮಾರ್ಥಕಲ್ಲದ ಜಡರನೊಲ್ಲ; ದೀಕ್ಷೆಯ ಕೊಡ......"೪೯

ಎಂದು ಹೇಳಿರುವ ಮಾತಿನಲ್ಲಿ ದೀಕ್ಷೆಕೊಡುವುದಕ್ಕೆ ಮುಖ್ಯವಾಗಿ :

೧. ನಡೆ ನುಡಿಯಲ್ಲಿ ಶುದ್ಧಿ:

೨. ಪರಮಾರ್ಥದ ಆಸೆ ಇರಬೇಕೆಂದು ತಿಳಿಸಿದ್ದಾರೆ. ಬಸವಣ್ಣನವರು ;

" ಅಳಿಮನದವಂಗೆ ಶಿವದೀಕ್ಷೆಯ
ಕೊಟ್ಟರೆ ಕೆಟ್ಟವನೇಕೆ ಸದ್ಭಕ್ತನಹನು ? "೪೯

ಎಂದು ತಿಳಿಸಿದ್ದಾರೆ. ದೀಕ್ಷೆಯು ಮೋಕ್ಷಪ್ರದ ವಿಷಯವಾಗಿರದೆ ಅದೊಂದು ವ್ಯಾಪಾರದ ವೃತ್ತಿಯಾದುದನ್ನು ಶರಣರು ಖಂಡಿಸಿದ್ದಾರೆ.

---

೪೮. ಚೆ. ಬ. ವ. ೬೨೬
೪೯. ಬ. ವ. ೯೨, ೯೩.
ಚಿ. ೪೮

ಜಗದ್ರಚನೆಯ ವಿಚಾರದಲ್ಲಿಯೂ ವೀರಶೈವವು ಶೈವಶಾಖೆಗಳ ವಿಚಾರದಿಂದ ಭಿನ್ನವಾಗಿದೆ. ತೋಂಟದ ಸಿದ್ಧಲಿಂಗಯತಿಗಳು ಪಾಶುಪತಶೈವಕ್ಕೂ, ವೀರಶೈವಕ್ಕೂ ಈ ವಿಷಯದಲ್ಲಿರುವ ಭಿನ್ನತೆಯನ್ನು ಇಂತು ತಿಳಿಸುತ್ತಾರೆ; "ಶಿವನಿಗೆ ಸೃಷ್ಟಿ, ಸ್ಥಿತಿ, ಸಂಹಾರಾರ್ಥವುಂಟಾದರೆ, ಈ ಜಗತ್ತೆಲ್ಲವೂ ಶಿವನ ನೆನಹುಮಾತ್ರದಿಂದ ಹುಟ್ಟಿ-ತಲ್ಲದೆ, ಎಂದೆಂದೂ ಉಂಟೆಂಬುದು 'ಶೈವಪಶುಮತ' ವಲ್ಲದೆ 'ವೀರಶೈವರ' ಮತವಲ್ಲ, ವೀರಶೈವರ ಮತವೆಂತೆಂದೊಡೆ :

"ಘನಗಂಭೀರವಾರಿಧಿಯೊಳಗೆ ಫೇನತರಂಗಬುದ್ಬುದ ಶೀಕರಾದಿಗಳು ತೋಱಿದೊಡೆ
ಆ ಸಾಗರಹೊರಗಾಗಿ ತೋಱಬಲ್ಲವೇ ?

ಆ ಪರಶಿವಸಾಗರದಲ್ಲಿ ತೃಣಾದಿಬ್ರಹ್ಮಾಂತವಾದ ದೇಹಿಗಳು ಉತ್ಪತ್ತಿಯಾಗಿ
ಮತ್ತಲ್ಲಿಯೇ ಅಡಗುತಿಪ್ಪರು ನೋಡಾ"[೫೦]

ಎಂದು ಜಗದ್ರಚನೆಯ ವಿಚಾರದಲ್ಲಿ ಪಾಶುಪತವು ಪಶು, ಪಾಶ, ಮಲ ಮತ್ತು ಜಗತ್ತು ಅನಾದಿಯಾಗಿ ಇದ್ದಿತೆಂದರೆ ವೀರಶೈವರು ಅನಾದಿಯಾಗಿ ಜಗತ್ತು ಇದ್ದಿತೆಂಬುದನ್ನು ಒಪ್ಪದೆ ಶಿವನ ನೆನಹು ಮಾತ್ರದಿಂದ ತಲೆದೋರಿತ್ತೆಂದು ತಿಳಿಯುವುದೇ ಸರಿಯಾದ ಮಾರ್ಗವೆಂದೂ "ಪಶುಪಾಶಮಾಯಾಮಲಕರ್ಮಂಗಳು" ನಿತ್ಯವಲ್ಲ; ಅವು "ಗುರೂಪದೇಶ ಮತ್ತು ಶಿವಪ್ರಸಾದದಿಂದಲೂ ಕೆಡುತ್ತವೆ "ಯೆಂದೂ. "ಶಿವತತ್ವವೊಂದೇ ನಿತ್ಯ ಉಳಿದುದೆಲ್ಲವೂ ಹುಸಿ ಕಾಣಾ " ಎಂದು ತಿಳಿಸಿದ್ದಾರೆ. ವೀರಶೈವರ ಗುರು ಪಾಶಚ್ಛೇದನೆ ಮಾಡಿ, ಮಲ, ಕರ್ಮ. ಮಾಯಾದಿಗಳನ್ನು ಪರಿಹರಿಸುತ್ತಾನೆ.

ಪ್ರಮಥರನ್ನು ವೀರಶೈವರು "ನಿತ್ಯಮುಕ್ತರು " ಎಂದು ತಿಳಿದರೆ ಪಾಶುಪತದವರು ಅವರನ್ನು "ಅವಾಂತರಮುಕ್ತರು " ಎಂದು ತಿಳಿಯುತ್ತಾರೆ. ಲಿಂಗದೊಳು ಬೆರೆತು ಬೇರಾಗದಂತಿರ್ಪುದು ವೀರಶೈವರ ಕೊನೆಯ ಗುರಿಯಾಗಿರುವುದರಿಂದ ಅವರಿಗೆ "ಗಣಪದವಿ ". "ರುದ್ರಪದವಿ " ದೊರೆಯಿತೆಂದು ಹೇಳುವುದು ಸರಿಯಲ್ಲವೆಂಬುದು ತೋಂಟದಸಿದ್ಧಲಿಂಗಯತಿಗಳ ಅಭಿಪ್ರಾಯವಾಗಿದೆ.[೫೧] ಭೈರವೇಶ್ವರ ಕಥಾಮಣಿ ಸೂತ್ರ–ರತ್ನಾಕರದಲ್ಲಿಯೂ ವೀರಶೈವ ಶರಣರ ವಿಷಯದಲ್ಲಿ ನಿಂತಹದೇ ಅಭಿಪ್ರಾಯ ಬಂದಿದೆ," ಮನುಮುನಿ ಯಕ್ಷರಾಕ್ಷಸರು ಅರವತ್ತುಮೂವರು ಪುರಾತನರುಂ ಶೈವದಲ್ಲಿ ಮುಕ್ತಿಯ ಪಡೆದರು; ವೀರಶೈವದಲ್ಲಿ ದಶಗಣ, ತೇರಸಗಣ ಷೋಡಶಗಣ. ಪ್ರಥಮಗಣ, ರುದ್ರಗಣ, ಅಮರಗಣ ಭಕ್ತಮಹಾಗಣ ಮೊದಲಾದ ಏಳುನೂರೆಪ್ಪತ್ತೇಳು ಪುರಾತನರುಂ. ನೂತನಪುರಾತನರುಂ. ನೂರೊಂದು ವಿರಕ್ತರುಂ ಮೊದಲಾದ

---

೫೦. ತೊ. ಸಿ. ಶಿ. ವ. ೭೨

೫೧. ತೋ. ಸಿ. ಶಿ. ವ. ೫೫

ವರು ಶ್ರೀ ವೀರಶೈವದಲ್ಲಿ ಶಿವನ ಕೃಪಾಪ್ರಸನ್ನತ್ವಮಂ ಪಡೆದು, ನಿತ್ಯಾನಂದ ನಿಜಸುಖಿಗಳಾದರು,"[೫೨] ಎಂದು ತಿಳಿಸಲಾಗಿದೆ. ವೀರಶೈವರ ಅಂತಿಮಗುರಿ ಚತುರ್ವಿಧ ಪದವಿಗಳಿಗಿಂತ ಹಿರಿದಾದ ಸ್ಥಿತಿಯನ್ನು ಪಡೆಯುವುದೇ ಎಂಬುದು ಈ ಮಾತುಗಳ ತಾತ್ಪರ್ಯವಾಗಿದೆ.

ವೀರಶೈವರ ಗುರು "ಕ್ರಿಯಾದೀಕ್ಷೆ"ಯಿಂದ ತನುವಿನ ಜಡತ್ವವನ್ನು, "ಮಂತ್ರ-ದೀಕ್ಷೆ"ಯಿಂದ ಮನದ ಮಾಲಿನ್ಯವನ್ನು. "ಜ್ಞಾನದೀಕ್ಷೆ"ಯಿಂದ ಪ್ರಾಣನ ಪಶುಭಾವವನ್ನು ನಿವಾರಣೆ ಮಾಡುವ ರೀತಿಯು ಪಾಶುಪತ ಶೈವರಿಗಿಲ್ಲೆಂದು ತೋಂಟದ ಸಿದ್ಧಲಿಂಗೇಶ್ವರರ ಇನ್ನೊಂದು ವಚನವು ತಿಳಿಸುತ್ತದೆ.[೫೩] ಘನಲಿಂಗದೇವನು ಒಂದು ವಚನದಲ್ಲಿ ಪಾಶುಪತಶೈವರಿಗೂ ಲಿಂಗಧಾರಣವಿದ್ದುದನ್ನು ತಿಳಿಸುತ್ತಾನೆ. ಹೀಗೆ ಲಿಂಗಧಾರಣೆಯಾದ ಮೇಲೂ ಆತ್ಮನ ಮಲವು ಅನಾದಿಯಾಗಿ ಹಾಗೆಯೇ ಉಳಿಯುತ್ತದೆಯೆಂದು ಹೇಳುವ ಪಾಶಪತರ ವಾದವು ಅಸಂಬದ್ಧವೆಂದೂ "ಪರಶಿವತತ್ವದಲ್ಲಿ ಉದಯವಾದ ಚಿದಂಶಿಕನಾದ ಪರಮಾತ್ಮಂಗೆ ಅನಾದಿಮಲವನುಂಟುಮಾಡುವ ಸಿದ್ಧಾಂತಿಯ ವಸ್ತ್ರದಲ್ಲಿಪ್ಪುದು ಬಡಗಲ್ಲಮರುಕಲ್ಲದೆ ಲಿಂಗವಲ್ಲ"ಎಂದು ಕರೆದು"ಸಿದ್ಧಾಂತಿಗಳು"ಪಾಶುಪತರೆಂಬುದನ್ನು ಸೂಚಿಸುತ್ತಾನೆ.[೫೪] ಅಲ್ಲದೆ "ಶೈವಸಿದ್ಧಾಂತಿ"ಗಳಪ್ಪ ಕರ್ಮಕಾಂಡಿಗಳು, ಲಿಂಗಧಾರಣಮಾಡಿಕೊಂಡಮೇಲೂ ಸ್ಥಾವಲಿಂಗದೆಡೆಯಲ್ಲಿ ಹವನಹೋಮಾದಿ ಕಾರ್ಯಗಳನ್ನು ಆಚರಿಸುತ್ತಿದ್ದುದನ್ನು ಶಿವಶರಣರು ಕಣ್ಣಾರೆ ಕಂಡು,[೫೫] ದೇಹದ ಮೇಲೆ ಲಿಂಗಧಾರಣೆಯಾದಮೇಲೆ ಮತ್ತೆ ಹೊಲೆ, ಸೂತಕ ಉಂಟೇ ಎಂದು ಕೇಳಿದ್ದಾರೆ. "ಹೊಲೆಯುಂಟೇ ಲಿಂಗವಿದ್ದೆಡೆಯಲ್ಲಿಗೆ"– ಎಂದು ಕೇಳಿದ ಬಸವಣ್ಣನವರ ವಚನವನ್ನು ನಾವು ಈ ಸಂದರ್ಭದಲ್ಲಿ ನೆನೆಯಬೇಕು. ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ ಎಂದು ತಿಳಿದು ಗುರುಲಿಂಗಜಂಗಮದಲ್ಲಿ ಜಂಗಮವೇ ಹಿರಿದೆಂದ ಶಿವಶರಣರು. ಇಷ್ಟಲಿಂಗ ಧರಿಸಿ ಮತ್ತೆ ಸ್ಥಾವರನಿಷ್ಠೆ, ಹವನಹೋಮಾಚರಣೆಗೆ ಒಳಗಾಗಿ, ವೈದಿಕರಂತೆಯೇ ಆಚರಿಸುತ್ತಿದ್ದುದರಿಂದ ಭಿನ್ನವಾದ ಆಚರಣೆಗಳನ್ನು ಒತ್ತಿಹೇಳಿದರು. ಲಿಂಗವಿದ್ದಲ್ಲಿ ಸೂತಕ-ಪಾತಕಗಳಿಲ್ಲವೆಂದರು; ಮಹಾಕವಿ ಹರೀಶ್ವರನ ಗುರುಗಳ ಪರಂಪರೆಯಲ್ಲಿ "ಶೈವಾಗಮಸಿದ್ಧರಪ್ಪ ಶ್ರೀ ಶಂಕರಾಚಾಚಾರ್ಯರು" "ಮಾದಿರಾಜರ ಪಾಶಚ್ಛೇದ" ಮಾಡಿದರೆಂದು ಉಕ್ತವಾಗಿದೆ.[೫೬] ಹರೀಶ್ವರ ಕವಿಯು "ಶುದ್ಧ ಶೈವಕ್ಕೆ" ಸೇರಿದವನೆಂದು ತಿಳಿದುಬರುತ್ತದೆ.[೫೭] ಪಾಶುಪತರೇ ಶೈವಸಿದ್ಧಾಂತಿಗಳೇ

---

೫೨. ಭೈ. ಕಾ ಕ. ಸೂ. ರ. ಪುಟ ೪.

೫೩. ತೋ. ಸಿ. ಶಿ. ವ. ೧೭೨.

೫೪. ಘ. ಲಿಂ. ವ. ೧೫

೫೫. ಚ. ಬ. ವ. ೨೧೭.

೫೬. ಗಿ. ಕ. ಪದ್ಯ ೩೬–೪೦, ಪುಟ ೧೨-೧೩-

೫೭. ಭೈ. ಕಾ. ಕ. ಸೂ. ರ. ಪುಟ ೫೪

ಹೇಗೆ ಎಂಬುದನ್ನು ಇನ್ನೂ ಖಚಿತ-ಪಡಿಸಿಕೊಳ್ಳಬೇಕು, ಶೈವಶಾಖೆಗಳಲ್ಲಿಯವರು ತಮ್ಮ ಶಾಖೆಗೆ ಸಂಬಂಧಿಸದ ಬೇರೆ ಶೈವಶಾಖೆಯವರನ್ನು ಗುರುಗಳೆಂದು ಸ್ವೀಕರಿಸುವ ಪದ್ಧತಿಯಿದ್ದುದು ಈಗಾಗಲೇ ಗೊತ್ತಾಗಿದೆ. ಅಲ್ಲಮಪ್ರಭುದೇವರ ವಚನಗಳಲ್ಲಿ "ಮುಂಡೆಬೋಳಾದವರು" "ಭಸ್ಮವಪೂಸಿ ತನುಬತ್ತಲೆಯಿದ್ದವರು" "ಬ್ರಹ್ಮಚಾರಿಗಳು" ಇವರ ವಿಡಂಬನೆ ಬಂದಿದೆ; ಭಸ್ಮವಪೂಸಿಕೊಂಡು ತಿರುಗುತ್ತಿದ್ದವರು ಪಾಶುಪತರೇ ಇರಬೇಕು. "ಶೈವ" ಎಂದು ಕರೆದಿರುವುದೂ ಗಮನಾರ್ಹ. 'ಪಾಶುಪತ'ಕ್ಕೆ ಲಕುಲೀಶ' ಪಂಥವೆಂಬ ಹೆಸರೂ ಉಂಟು. ಹರಿಹರಕವಿಯು ವರ್ಣಿಸಿದ ರೇವಣಸಿದ್ಧನು "ಲಾಕುಳದ ಲಾಕ್ಷಣಿಕ"[೫೮]ನಾಗಿರುವುದರಿಂದ ಅವನು ಲಕುಲೀಶಪಂಥದವನಿರಬೇಕು.

[ ೪ ]

## ಕಾಪಾಲಿಕರು–ವೀರಶೈವರು

ಕನ್ನಡ ನಾಡಿನ ಶಿವಶರಣರು " ಕಾಪುಲಿಕ–ಶೈವ "ರನ್ನು ಸಂದರ್ಶಿಸಿ, ಅವರನ್ನು ವಾದದಲ್ಲಿ ಸೋಲಿಸಿ, ತಮ್ಮ ವೀರಶೈವ ಮಾರ್ಗದ ಮಹತಿಯನ್ನು ಸ್ಥಿರಗೊಳಿಸಿದಂತೆ ಕಂಡುಬರುತ್ತದೆ. ಕಾಪಾಲಿಕ ಶೈವರು " ನವನಾಥಸಿದ್ಧರ ಮತೋಕ್ತವೆಂದು ಹಠಯೋಗ, ಲಂಬಿಕೆಯೆಂದು, ಆಕುಂಚನವೆಂದು, ವಜ್ರಿ, ಅಮರಿಯ ಕಲ್ಪವೆಂದು, ಮಲ–ಮೂತ್ರಂಗಳ ಸೇವಿಸುತ್ತಿದ್ದರೆಂದೂ ವಾತ, ಪಿತ್ಥ, ಶ್ಲೇಷ್ಮಗಳನ್ನು ದೇಹದಿಂದ ತೆಗೆದು ಅಮೃತವೆಂದು ಭಕ್ಷಿಸುತ್ತ, ಅನ್ನ ನೀರುಗಳನ್ನು ಬಿಟ್ಟೆವೆಂದು ಹೇಳುತ್ತಿದ್ದುದನ್ನೂ ಖಂಡಿಸಿ ಅವರು ಹಾಗೆ ಅನ್ನ ನೀರು ಬಿಟ್ಟೆವೆಂದು ಹೇಳಿ, " ಫಲರಸಕ್ಷೀರ "ಗಳನ್ನು ಯಥಾವತ್ತಾಗಿ ಭಕ್ಷಿಸುತ್ತಿದ್ದರೆಂದೂ ಅಲ್ಲಮನು ವಿಡಂಬಿಸಿದ್ದಾನೆ;[೫೯] ಅಲ್ಲಮನು ಕಾಪಾಲಿಕರ ಬಿನುಗುತನವನ್ನು, ವಾಮಾಚಾರಗಳನ್ನು, ಅವರು ಜನರಿಗೆ ಮಾಡುತ್ತಿದ್ದ ಮೋಸಗಳನ್ನು ಬಯಲಿಗೆಳೆದಿದ್ದಾನೆ. ಪ್ರಭುಲಿಂಗ ಲೀಲೆಯಲ್ಲಿ ಗೋರಕ್ಷನೆಂಬ ಯೋಗಿಯು '**ಕಾಪಾಲಮಾರ್ಗ**'ದವನೆಂದೂ ಅವನು ತನ್ನ ದೇಹವನ್ನು ವಜ್ರದೇಹವನ್ನಾಗಿಸಿಕೊಂಡಿದ್ದನೆಂದೂ, ಪ್ರಭುದೇವನು ಅವನನ್ನು ವಾಗ್ವಾದದಲ್ಲಿ ಸೋಲಿಸಿ, ಅವನಿಗೆ ಶಿವಯೋಗ–ಬಯಲುದೇಹದ ಸಾಧನೆಯನ್ನು ತಿಳಿಸಿದನೆಂದೂ ಹೇಳಲಾಗಿದೆ.[೬೦] ಕಾಪಾಲಿಕ ಮಾರ್ಗದ ಯೋಗಿಗಳು " ಒಡಲೇ ತಾನು " ಎಂದು ನಂಬಿ, ಆ ಒಡಲ ರಕ್ಷಣೆಗೆ ಯೋಗವನ್ನವಲಂಬಿಸುತ್ತಿದ್ದರು. ಆದ್ದರಿಂದ ಅವರಿಗೆ ಕೋಪವೂ ಅಧಿಕವಾಗುತ್ತಿತ್ತು. ವೀರಶೈವ ಶರಣರು ಅದನ್ನು ಒಪ್ಪಲಿಲ್ಲ. ಶಂಕರದಾಸಿಮಯ್ಯನು ಶರಣಮಾರ್ಗಕ್ಕೆ ಬರುವ ಮುನ್ನ ಗೋವಿಂದನೆಂಬ ವಿಪ್ರನಾಗಿದ್ದನು ; ಅವನು ಆಗ

---

೫೮. ರಾ. ಪಿ. ರ. ಪುಟ ೮.

೫೯, ಅ, ವ,ಚಂ, ವ. ೭೨೪ ಪುಟ ೧೫೮

೬೦. ಪ್ರ. ಲಿಂ. ಲೀ. ಗೋರಕ್ಷನಗತಿ, ಪದ್ಯ ೨೨.

ಕಾಪಾಲಿಕ ಶೈವನಿರಬೇಕು. ಆದುದರಿಂದಲೇ ಹರಿಹರ ಕವಿಯು ಶಂಕರದಾಸಿಮಯ್ಯ ನನ್ನು "ಕೋಪದ ಕಾಪಾಲಿ" ಎಂದು ಕರೆದಿದ್ದಾನೆ.[೬೧]

ಜಗದ್ರಚನೆಯ ವಿಚಾರದಲ್ಲಿ ಕಾಪಾಲಿಕ ಶೈವರು, ಗಾಣಪತ್ಯ, ಸೌರ, ಶಾಕ್ತೇಯ, ವೈಷ್ಣವ, ಮತ್ತು ಶೈವ ಇವರಂತೆ ವೀರಶೈವರಿಂದ ಭಿನ್ನವಾದ ವಿಚಾರವನ್ನು ತಳೆದಿದ್ದಾರೆಂದು ಚೆನ್ನಬಸವಣ್ಣನವರ ಒಂದು ವಚನವು ತಿಳಿಸುತ್ತದೆ. ಕಾಪಾಲಿಕನ ಯುಕ್ತಿ ಎಂತೆಂದಡೆ :

"ಜೋಗೈಸುವ ವಿಶ್ವಂ ಮಹಾಜೋಗಿ ಜೋಗೈವ ಈಶಂ" ಎಂಬ ಇದು ಕ್ರಮವಲ್ಲ; ಯಾಕೆಂದರೆ "ನಿರಂಜನಂ, ನಿರಾಕಾರಂ, ನಿರ್ಮಾಯಂ ಪರಮಾಶ್ರಯಂ ಎಂದುದಾಗಿ, ಪರಾಪರವಸ್ತು ಪರಮಾರ್ಥ ವಿಲಾಸಿಯಾಗಿ, ಪರಶಕ್ತಿಲೋಲನಾಗಿ ಪರಮಾಶ್ರಯ ಪರಿಪೂರ್ಣನಾಗಿ, ಅಂತರಾತ್ಮ ಜೀವಾತ್ಮನಾಗಿ, ನಿರಂಜರ ನಿರುಪಮ, ನಿರ್ವಿಕಾರ, ನಿತ್ಯಾನಂದ, ನಿಶ್ಚಲ. ನಿಶ್ಚಿಂತ, ನಿರಾಳ, ನಿಜಾತ್ಮಸುಖಿ, ನೀನೆ ಕೂಡಲ ಚೆನ್ನ ಸಂಗಮ ದೇವಾ ಎಂದು ಅವರು ತಿಳಿಸಿದ್ದಾರೆ.[೬೨] ಶ್ರೀಗುರುಸ್ವಾಮಿಯು ಆತ್ಮನನು ಪರಮಾತ್ಮನನು ಒಂದೇ ಮಾಡಿ, ಇದೇ ನಿನ್ನ ನಿಜತತ್ವವೆಂದು ತೋರಿದ ಬಳಿಕ, ಗುರು ವಾಜ್ಞೆಯ ಮೀರಿ ಲಿಂಗವನರಿಯದೆ ಲಿಂಗ ಬಾಹಿರರಾದ ದ್ವಿಜನನು, ಯೋಗಿಯನು, ಸನ್ಯಾಸಿಯನು ಗುರುವೆಂದು ಭಾವಿಸುವುದು, ಮತ್ತು ಶಿವದರ್ಶನದ ಮಹಿಮೆಯನ್ನರಿತು ಅದನ್ನು ಮರೆತು ನಡೆಯುವುದು ಕಾಪಾಲಿಕರ ಆಚರಣೆಯೆಂದು ಉರಿಲಿಂಗ ಪೆದ್ದಿಯ ವಚನವು ತಿಳಿಸುತ್ತದೆ.[೬೩] ಶಿವಶರಣರು ತಮ್ಮೆದುರು ಹಲವಪಂಥದವರನ್ನಿರಿಸಿಕೊಂಡಿದ್ದಾರೆ. ಕೇವಲ ವೈದಿಕಧರ್ಮವೇ ಖಂಡನೆಗೆ ಅವರೆದುರು ಇರಲಿಲ್ಲ. ಬೇರೆ ಬೇರೆ ಮತದವರನ್ನು ಶರಣರು ಪರ್ಯಾಯವಾಗಿಯೂ ಟೀಕಿಸಿದ್ದಾರೆ. ಉದಾಹರಣೆಗೆ ಅಕ್ಕನ ಒಂದು ವಚನವನ್ನು ನೋಡಿರಿ:

"ಯೋಗಿಗೆ ಯೋಗಿಣಿಯಾದಳು ಮಾಯೆ;
ಜೋಗಿಗೆ ಜೋಗಿಣಿಯಾಗಿಹಳು ಮಾಯೆ;
ಶ್ರವಣಗೆ ಕಂತಿಯಾದಳು ಮಾಯೆ;
ಯತಿಗೆ ಪರಾರ್ಥವಾದಳು ಮಾಯೆ;[೬೪]

ಇಲ್ಲಿ ಬೌದ್ಧಮುನಿ, ನಾಥಪಂಥದಮುನಿ, ಜೈನಮುನಿ, ಮತ್ತು ವೈದಿಕ ಮುನಿಗಳಿಗೆ ಮಹಾದೇವಿಯಕ್ಕನವರು ಪರ್ಯಾಯವಾಗಿ ಯೋಗಿ, ಜೋಗಿ, ಶ್ರವಣ, ಮತ್ತು

---

೬೧. ಶಂ. ದಾ. ರ. ಪುಟ ೧೧.
೬೨. ಚೆ. ಬ. ವ. ೪೮೦
೬೩. ಉ. ಪೆ. ವ. ೪೮.
೬೪. ಅ. ವ. ೨೨೭.

ಯತಿಯೆಂಬ ಪದಗಳನ್ನು ಬಳಸಿ, ಈ ಮುನಿಗಳಿಗೆ ಒಂದಿಲ್ಲೊಂದು ರೀತಿಯಿಂದ ಮಾಯೆ ಉಪಟಳಕೊಡುತ್ತಿದೆಯೆಂದು ತಿಳಿಸಿದ್ದಾರೆ. "ವಿಷ್ಣುವ ಪೂಜಿಸಿ ಮುಡುಹ ನುಡಿಸಿಕೊಳ್ಳುವುದು, ಜಿನನ ಪೂಜಿಸಿ ಬತ್ತಲೆಯಿಪ್ಪುದು, ಮೈಲಾರನ ಪೂಜಿಸಿ ನಾಯಾಗಿ ಬಗಳುವುದು" ಇವುಗಳನ್ನು ಕಂಡ ಬಸವಣ್ಣನವರು ಸುಸಂಸ್ಕೃತವೂ ಸುಲಭವೂ ಆದ ಆಚರಣೆಯುಳ್ಳ ಧರ್ಮವನ್ನು ಕಟ್ಟಬೇಕೆಂದರು; ಅನ್ಯಧರ್ಮದ ಅಸಮರ್ಪಕ ಆಚರಣೆಗಳನ್ನು ಕಂಡು ಅವುಗಳಿಂದ ಜನರನ್ನು ಮುಕ್ತಗೊಳಿಸಬೇಕೆಂದೇ ವೀರಶೈವದ ಹಿರಿಮೆಯನ್ನು ಜನತೆಗೆ ಸಾರಿದರು. ಉರಿಲಿಂಗಪೆದ್ದಿಯು ತನ್ನ ಕಾಲದ ಅನೇಕ ಪಂಥಗಳನ್ನು ಹೆಸರಿಸುತ್ತ ಶರಣರ ಧರ್ಮದೊಡನೆ ಹೋಲಿಸಿ ನುಡಿದ ವಚನಗಳು :

**ಅರ್ಹತ, ಚಾರ್ವಾಕ, ಬೌದ್ಧ, ಮೀಮಾಂಸಕ, ನೀಲಪಟಲರೆಂಬವರು,** ಕಾಯುದ ದರ್ಶನಂಗಳಲ್ಲಿ ದೀಕ್ಷಿತರಾಗಿ, **ಸೌರ, ಶಾಕ್ತೇಯ, ವೈಷ್ಣವ, ಗಾಣಪತ್ಯ, ಕಾಪಾಲಿಕ** ದರ್ಶನಂಗಳಂ ಪೊಕ್ಕು, ಒಡಲು ಮುಡುಹಂ ಸುಟ್ಟು, ಮಟ್ಟೆಯನಿಟ್ಟು, ಉಭಯಗೆಟ್ಟು, ಶಿವಧ್ಯಾನವಿಲ್ಲದೆ, ನರಕಕ್ಕಿಳಿದು ಅಧಮರಾಗಿ ಹೋಗಿ ಎಂದು ಹೇಳಿತ್ತೇ ವೇದ ? "ಶಿವಾರ್ಚನ ವಿಹೀನೋಪಿ ಜನ್ಮಮೃತ್ಯುರ್ನ ಉಚ್ಯತೇ" ಎಂದುದಾಗಿ ಮರಳಿಮರಳಿ ಜನ್ಮಕ್ಕೆ ಬಂದು ಮಗ್ನರಾಗಹೇಳಿತ್ತೇ ವೇದ ? "ಓಂ ಅಪ್ರಶಿಖಾಯಾಂ ತ್ವಮಯಾ ಜೀವಾಗಮಾತ್" ಇತೆಂಬ ಶ್ರುತಿಯರ್ಥವು ಹೋತನಕೊಂದು ಹೋಮವ ಬೇಳಿ, ಚಾಂಡಾಲರಾಗಹೇಳಿತ್ತೇ ವೇದ ? ಸಾಕ್ಷಿ ;

'ಶಿವಾರ್ಚಕ ಪದದ್ವಂದ್ವಮರ್ಚನೋದ್ಧಾರಣಾದಪಿ
ಶಿವನಾಮ ಸದಾಕಾಲಂ ಜಪೇದ್ವಿಪ್ರಸ್ಯ ಲಕ್ಷಣಂ'

ಎಂಬರ್ಥವರಿಯದೆ ನರಕಕಿಳಿಯ ಹೇಳಿತ್ತೇ ವೇದ? "ಏವಂ ರುದ್ರಾಣಾಂ ವಿಶ್ವ ದೇವತಾನಾಂ ರುದ್ರಪಾದೇ ದತ್ತಮಸ್ತು "ಎಂದುದಲ್ಲದೆ "ವಿಷ್ಣುಪಾದೇ ದತ್ತಮಸ್ತು" ಎಂದುಳ್ಳೊಡೆ ಹೇಳಿರೇ ? ಕಾಶೀಖಂಡದಲ್ಲಿ ಹೇಳಿದ ಪುರಾಣದರ್ಥದ ಹಾಗೆ ವ್ಯಾಧನ ಕೈಯಿಂದ ವಿಷ್ಣು ಅಳಿದನೆಂದರೆ ಅದು ಮಿಥ್ಯವೆಂಬರು; ಮಹಾಭಾರತದಲ್ಲಿ ವಿಷ್ಣು ಈಶ್ವರಂಗೆ ಬಿನ್ನಹವಂ ಮಾಡಿದುದು ಕೇಳಿರೇ;

' ಮನ್ನಾಥಂ ಲೋಕನಾಥಂಚ ಅಧ್ಯಕ್ಷರ ಸಮಾಯುತಂ
ಏಕಮೇವ ಮಹಾದೇವಂ ಮಹೇಶಾನಾಂ ಪರಂ ಸ್ಥಿತಿಂ'
ಈಶ್ವರಸ್ಯ ಸಮೋ ನಾಸ್ತಿ ಬ್ರಹ್ಮವಿಷ್ಣ್ವಸ್ಯ ಕಿಂಕರ:
ಶಿವವಾಕ್ಯ ಸಮೋ ನಾಸ್ತಿ ವೇದಶಾಸ್ತ್ರಾಗಮೇಷುಚ'

ಇಂತೆಂಬ ಮಹಾವಿಷ್ಣುವಿನ ಮಹಾಭಾರತವ ಕೇಳಿಯರಿಯಿರೆ ? ಓದಿದ ಮಾತು ತಥ್ಯವೇ ? ಅಲ್ಲ. ತಮ್ಮ ಅಧಿದೇವತೆಯಾದ ವಿಷ್ಣುವಿನ ಮಾತು ಮಿಥ್ಯವೆಂಬ ಚಾಂಡಾಲರ ಮುಖವ ನೋಡಲಾಗದು ; ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ."[೬೫]

ಈ ವಚನದಲ್ಲಿ ಅನೇಕ ಪಂಥಗಳ ಹೆಸರುಗಳು ಬಂದಿರುವುದಲ್ಲದೆ ಕಾಪಾಲಿಕ ದರ್ಶನದ ಹೆಸರೂ ಬಂದಿದೆ. ಕಾಪಾಲಿಕರು ಕಾಯದ ದರ್ಶನದಲ್ಲಿ ಮುಳುಗಿ, ಯಜ್ಞ ಯಾಗವ ಮಾಡಿ, ಹೋಮವ ಮಾಡಿ, ಹೋತನ ತಿನ್ನುವ ಹಿಂಸೆಯ ಕಾರ್ಯವನ್ನು ಮಾಡುತ್ತಿದ್ದುದನ್ನು ಖಂಡಿಸಲಾಗಿದೆಯಲ್ಲದೆ ಶರಣಮಾರ್ಗಕ್ಕೆ ಶಿವಾಧಿಕ್ಯ, ಅಹಿಂಸಾ ಮಾರ್ಗಗಳೇ ಶ್ರೇಯಸ್ಕರವೆಂಬುದನ್ನು ಪ್ರಸ್ತಾಪಿಸಲಾಗಿದೆ.

[೫]

## ಶೈವ-ವೀರಶೈವ

ಇಲ್ಲಿಯ ವರೆಗೆ ಶೈವಶಾಖೆಗಳನ್ನು ಹೆಸರಿಸಿ ವ್ಯತ್ಯಾಸಗಳನ್ನು ಹೇಳಿದ್ದರೆ ಎಷ್ಟೋ ವಚನಗಳಲ್ಲಿ ಬರೀ 'ಶೈವ'ವೆಂದು ಉಲ್ಲೇಖಿಸಿ ವೀರಶೈವದೊಡನೆ ಹೋಲಿಸಲಾಗಿದೆ. ಅಂತಹವು ಯಾವುದೇ ಶೈವಶಾಖೆಗೆ ಸಂಬಂಧಿಸಬಹುದಾದರೂ ಪ್ರಸ್ತುತ ಉದ್ದೇಶಕ್ಕೆ ಅವು ಸಹಾಯಕಾರಿಯಿರುವುದರಿಂದ ಆ ವ್ಯತ್ಯಾಸಗಳನ್ನೂ ಇಲ್ಲಿ ನಿರೂಪಿಸಲಾಗುವುದು. ಯೋಗದ ವಿಷಯದಲ್ಲಿಯೂ ವೀರಶೈವರು ಶೈವಶಾಖೆಗಳಿಂದ ಭಿನ್ನವೆಂದು ಕೆಲವರು ವಚನಕಾರರು ತಿಳಿಸುತ್ತಾರೆ ಮಡಿವಾಳ ಮಾಚಿದೇವರು ;

" ಶೈವ ಮಾರ್ಗದ ಅಷ್ಟಾಂಗಯೋಗವನುಳಿದು, ವೀರಶೈವ
ಶಿವಯೋಗ ಸಂಪನ್ನರಾಗಿ
ಭಕ್ತಿಜ್ಞಾನ ವೈರಾಗ್ಯದಲ್ಲಾಚರಿಸಿ........ಬದುಕಿದೆ ಕಣಾ ಎಂದೂ[೬೫]

ತೋಂಟದ ಸಿದ್ಧೇಶ್ವರರು ;

" ಅಂಬಿಕಾಯೋಗಿಗಳ ಡೊಂಬರಿಗೆ ಸರಿಯೆಂಬೆ;
ಹಟಯೋಗಿಗಳ ಆಟಮಟಗಾಜಿರೆಂದೆಂಬೆ;
ಅಷ್ಟಾಂಗಯೋಗಿಗಳ ಕಷ್ಟಕರ್ಮಿಗಳೆಂದೆಂಬೆ;
ಲಯಯೋಗಿಗಳ ನಾಯಿಗಿಂದ ಕಡೆ ಎಂಬೆ;
ಅದೇನು ಕಾರಣವೆಂದರೆ;
ಲಯಯೋಗವೆಂಬುದು ನಾನಾ ದರುಶನದಲ್ಲಿ ವರ್ತಿಸುವದಾಗಿ
ಆದ ಶಿವಯೋಗಿಗಳು ಬಲ್ಲರು.
ಮಂತ್ರಯೋಗವೆಂಬುದು ಸಂದೇಹಕ್ಕಿಕ್ಕಿಕೊಲುತಿಪ್ಪುದು;
ಅದೇನು ಕಾರಣವೇನಂದರೆ:
ಮಂತ್ರವೇ ಲಿಂಗ, ಲಿಂಗವೇ ಮಂತ್ರವೆಂದರಿಯದು, ಲಿಂಗನೆನಹ
ಸಂಬಂಧಿಸಿಕೊಳ್ಳಲರಿಯದೆ

---

೬೫. ಉ. ಲಿಂ. ಪೆ. ವ. ೧೪.
೬೬. ಮ. ಮಾ. ವ. ೪೯.

ಲಿಂಗವಿರಹಿತವಾಗಿ ಮಾಡುತಿಪ್ಪರಾಗಿ; ಅದ ಲಿಂಗಸಂಬಂಧಿಗಳು
ಮೆಚ್ಚರು ನೋಡಾ;
ಅದೇನು ಕಾರಣವೆಂದರೆ : ಕೆಲವು ಶೈವರುಗಳು ಮಾಡುವರಾಗಿ;
ರಾಜಯೋಗವೆಂಬುದು
ಗಾಜುಗೋಜುನೋಡಾ ; ಅದನು ಲಿಂಗವಿರಹಿತವಾಗಿ ಜ್ಞಾತೃ
ಜ್ಞಾನ, ಜ್ಞೇಯ; ಒಂದಾದಲ್ಲಿಯೇ
ಯೋಗವೆನುತಿಪ್ಪರಾಗಿ ಇವು ಒಂದು ಲಿಂಗಾಂಗಯೋಗದ
ಹಜ್ಜೆಯಲ್ಲನೋಡಾ.........."[೬೭]

ವೀರಶೈವರಿಗೆ ಲಿಂಗಾಂಗಯೋಗ ಇಲ್ಲವೆ **'ಶಿವಯೋಗವೇ'** ಸರ್ವಸ್ವವೆಂದು ಇತರ ಯೋಗಗಳಿಗಿಂತಲೂ ಶ್ರೇಷ್ಠವೆಂಬುದನ್ನು ವಿವರಿಸಲಾಗಿದೆ. ಇತರ ಎಲ್ಲ ಯೋಗಗಳಲ್ಲಿ ಕಾಯಸಿದ್ಧಿ ಇದೆ; ಕೆಲವು ಶೈವರು ಅದನ್ನು ಸಾಧಿಸುತ್ತಾರೆ. ಶಿವಯೋಗ ದಿಂದ ಲಿಂಗವೇ ಪ್ರಾಣ. ಪ್ರಾಣವೇ ಲಿಂಗವಾಗುತ್ತಿದೆ; ಪ್ರಾಣಕ್ಕೂ ಲಿಂಗಕ್ಕೂ ಭೇದ ವಿಲ್ಲವೆಂಬುದು ಈ ಮೇಲಿನ ವಚನದಲ್ಲಿ ಹೇಳಲಾಗಿದೆ. ಲಿಂಗವಂತನಾದವನು ಶಿವ-ಪೂಜೆ, ಶಿವಮಂತ್ರ, ಶಿವಾರ್ಪಣ, ಶಿವಶಾಸ್ತ್ರ, ಶಿವಯೋಗದಲ್ಲಿಯೇ ನಿರತನಾದ ವನು. ಭವಿಗಳಾದ ಜಡಶೈವರಂತೆ ಇತರತ್ರ ಮನವೆಳಸನು; ಕರಸ್ಥಲದಲ್ಲಿ ಲಿಂಗವ ಧರಿಸಿ, ಅನ್ಯದೈವ, ಅನ್ಯಬೋಧೆ, ಭವಿಮಿಶ್ರಕ್ಕೆ ಹೋದನಾದರೆ ಅವನು ಜಡಶೈವನೇ ಎಂದು ತಿಳಿಸುತ್ತದೆ ಚೆನ್ನಬಸವಣ್ಣನವರ ಒಂದು ವಚನ.[೬೮] ಗುರು–ದೀಕ್ಷಾಕ್ರಮ ಇವುಗಳಲ್ಲಿರುವ ವ್ಯತ್ಯಾಸಗಳನ್ನು ಚೆನ್ನಬಸವಣ್ಣನವರು ಎರಡು ವಚನಗಳಲ್ಲಿ ನಿರೂಪಿ ಸಿರುತ್ತಾರೆ. ಶೈವರಲ್ಲಿ ಲಿಂಗಧಾರಣವು ಒಂದು ಜಡಕ್ರಿಯೆಯಾಗಿ ನಡೆದರೆ "ಶೈವಗುರು ವಿನ ಕೈಯಲ್ಲಿ ಮಂತ್ರೋಪದಿಷ್ಟನಾದ ಶಿಷ್ಯಂಗೆ ವೀರಶೈವಗುರು ಮಂತ್ರೋಪದೇಶ ದಿಂದ ಆತನ ಕಾಯಶುದ್ಧವಮಾಡಿ, ಆತನ ಲಿಂಗಕ್ಕೆ ಪ್ರಾಣಪ್ರತಿಷ್ಠೆಯನ್ನು ಮಾಡು ತ್ತಾನೆ. ಶೈವಗುರುವಿನಲ್ಲಿ ಲಿಂಗಸಾಹಿತ್ಯವಾದ ವಿಧಿಯ ನೋಡಿರೇ ! ಗುರುವಿಂಗೆ ದೂರಾರ್ಚನೆ, ಶಿಷ್ಯಂಗೆ ಇಷ್ಟಲಿಂಗಾರ್ಚನೆ ; ಗುರುವಾಯುಪ್ರಾಣಿ, ಶಿಷ್ಯ ಲಿಂಗಪ್ರಾಣಿ ; ಗುರು ಭೂತದೇಹಿ, ಶಿಷ್ಯ ಲಿಂಗದೇಹಿ; ಗುರು ಅನರ್ಪಿತಭುಂಜಕ, ಶಿಷ್ಯ ಲಿಂಗಾರ್ಪಿತ ಭುಂಜಕ; ಗುರು ಅಗ್ನಿದಹನ ಸಂಪತ್ತು, ಶಿಷ್ಯಸಮಾಧಿ ಸಂಪತ್ತು;...ಇವರಿಬ್ಬರ ಗುರು ಶಿಷ್ಯ ಸಂಬಂಧಕ್ಕೆ ನರಕು ತಪ್ಪದು! "[೬೯] ಎಂದು ಬಹು ಮನೋಜ್ಞವಾಗಿ ಶೈವ-ವೀರ ಶೈವರ ವ್ಯತ್ಯಾಸಗಳನ್ನು ಹೇಳಿದ್ದಾರೆ. ವೀರಶೈವರಲ್ಲಿ ಕೆಂಡವ ಮುಟ್ಟಿದ ಕಾಷ್ಠವು ಕೆಂಡವೇ ಆಗುವಂತೆ ಗುರುವಿನಿಂದ ಲಿಂಗದೀಕ್ಷೆ ಪಡೆದ ಶಿಷ್ಯನು ಗುರುಸಮಾನನೇ

೬೭. ತೋ. ಸಿ. ಶಿ. ೯ ೩೫೮

೬೮. ಚೆ. ಬ. ವ ೨೧೮

೬೯. " ೬೮

ಆಗುತ್ತಾನೆ. ವೀರಶೈವರಲ್ಲಿ ಗುರುವಾದವನು "ಶಿವಕಳಾತ್ಮಂಗೆ ಪೂರ್ವದ ಜಡಶೈವ ಮಾರ್ಗವ ಬಿಡಿಸಿ, ನಿಜವೀರಶೈವದೀಕ್ಷೆಯನೆಯಿತ್ತು, ಹಸ್ತಮಸ್ತಕ ಸಂಯೋಗವಮಾಡಿ ಅಂತರಂಗದಲ್ಲಿರುವ ಪ್ರಾಣಲಿಂಗವ ಬಹಿಷ್ಕರಿಸಿ, ಕರಸ್ಥಲಕೆ ತಂದುಕೊಡುತ್ತಾನೆ. ಲಿಂಗವ ಸರ್ವಾಂಗದಲ್ಲಿ ಪರಿಪೂರ್ಣವಮಾಡಿ, ಲಿಂಗಾಂಗ ಷಟಸ್ಥಾನವತೋಱಿ. ಚಿದ್ವಿಭೂತಿ, ರುದ್ರಾಕ್ಷಿ. ಪಂಚಾಕ್ಷರಿ, ಷಡಕ್ಷರಿ, ಮೊದಲಾದ ಸಪ್ತಕೋಟಿ ಮಹಾಮಂತ್ರವನಱುಹಿ, ಷಟ್ಸ್ಥಲ ಮಾರ್ಗ, ಷಡ್ವಿಧಶೀಲ ವ್ರತನೇಮಂಗಳನಱುಹಿ, ವೀರಶೈವ ಕ್ರಮಾಚಾರ ಣೆಯು ತೋಱು" ಶಿಷ್ಯನನ್ನು ಸದ್ಭಕ್ತನನ್ನಾಗಿಸುತ್ತಾನೆ.[೨೦] "ಶಿವಕುಲದಲ್ಲಿ ಹುಟ್ಟಿ. ಶಿವ ಸಂಸ್ಕಾರಹೊಂದಿ, ಸದ್ಗುರುವಿನಿಂದ ಲಿಂಗಸಾಮರಸ್ಯವ ಪಡೆದು, ಅಷ್ಟಾವರಣವೇ ಲಿಂಗ ಪಂಚಾಚಾರವೇ ಪ್ರಾಣವಾಗಿ, ಕಡೆಗೆ ಚಿರಸುಖಿಯಾಗುತಿರ್ಪನೇ[೨೧] ವೀರಶೈವನೆಂದು ಶರಣರ ಅಭಿಮತ. ಶೈವ ಪಂಥಗಳಲ್ಲಿ ಕೆಲವೆಡೆ ಭಕ್ತಿ, ಕೆಲವಡೆ ಜ್ಞಾನ, ವೈರಾಗ್ಯಗಳು ಕಂಡುಬರುತ್ತಿದ್ದರೆ ವೀರಶೈವರಲ್ಲಿ ಭಕ್ತಿ. ಜ್ಞಾನ, ವೈರಾಗ್ಯಗಳೂ ಸಮನ್ವಯವಾಗಿವೆ ಯೆಂದು ತೋಂಟದ ಸಿದ್ಧಲಿಂಗಯತಿಗಳು ಅಭಿಪ್ರಾಯಪಡುತ್ತಾರೆ. ಇವು ವೀರ ಶೈವಾಚಾರ ಸಂಪತ್ತೆಂದೂ ಅವರ ಅಭಿಪ್ರಾಯವಾಗಿದೆ.[೨೨] ತನುಶುದ್ಧವಿಲ್ಲದೆ ಅಂಗದ ಮೇಲೆ ಲಿಂಗವ ಧರಿಸಲಾಗದು. ಮನಶುದ್ಧವಿಲ್ಲದೆ ಲಿಂಗವ ಹಿಡಿದು ಪೂಜೆಯ ಮಾಡಲಾಗದು ; ಪ್ರಾಣ ಮಲಿನವೆಂಬ ಪಶುಗಳಿಗೆ ಪ್ರಾಣಲಿಂಗವೆಲ್ಲಿಯದು ? ಇದು ಕಾರಣ ಆಱುಶೈವದಲ್ಲಿ ನಡೆವುತಿಪ್ಪವರೆಲ್ಲಾ ಬಾರದ ಭವದಲ್ಲಿ ಬಪ್ಪುದು ತಪ್ಪದು ಎಂದಿದ್ದಾರೆ ತೋಂಟದ ಸಿದ್ಧೇಶ್ವರರು. ಇಷ್ಟಲಿಂಗವ ಬಿಟ್ಟು ಸ್ಥಾವರವ ಪೂಜಿಸಿದರೆ ತನ್ನ ಗುರುಕೊಟ್ಟ ಲಿಂಗ ಫಲವ ಕೊಡಲರಿಯದು ಎಂದೇ ಭಾವ; ನೆಟ್ಟಿದ್ದ ಲಿಂಗ ಫಲಿವೀಯುತ್ತದೆಂಬುದಕ್ಕೆ ಸಾಕ್ಷಿಯಾವುದು ಎಂದು ಕೇಳಿದ್ದಾರೆ. ಅಂತಹರನ್ನು ಕಂಡರೆ ಅವರಿಗೆ ಹೊಟ್ಟೆಹುಣ್ಣಾಗುವಂತೆ ನಗುಬರುತ್ತಿದೆಯಂತೆ! ಅಷ್ಟವಿಧಾರ್ಚನೆಯಿಂದ ಮಾಡುವುದು ಇಷ್ಟಲಿಂಗ ಪೂಜೆ; ಆ ಲಿಂಗವ ಮನಸ್ಸಿನಲ್ಲಿ ಧ್ಯಾನಿಸಿ, ಆ ಮನೋಮಧ್ಯದಲ್ಲಿಪ್ಪ ನಿಃಕಲಬ್ರಹ್ಮವನು ಧ್ಯಾನವೆಂಬ ಹಸ್ತದಲ್ಲಿ ಹಿಡಿದು, ಕರಸ್ಥಲದಲ್ಲಿಪ್ಪ ಲಿಂಗದ ಗೊತ್ತಿನಲ್ಲಿ ಕಟ್ಟಿ ನೆರವುದೀಗ ಪ್ರಾಣಲಿಂಗದ ಪೂಜೆ; ಮನಸ್ಸು ಲಿಂಗದಲ್ಲಿ ತಲ್ಲೀನವಾಗಿ, ನಚ್ಚಿ ಮೆಚ್ಚಿ ಅಚ್ಚೊತ್ತಿ ಅಗಲ ದಿಪ್ಪುದೇ ಭಾವಲಿಂಗದ ಪೂಜೆ; ಇದು ವೀರಶೈವರುಗಳು ಲಿಂಗಾರ್ಚನೆಯ ಮಾಡುವ ಕ್ರಮ"[೨೩] ಎಂದೂ ಇಂತಹ ಕ್ರಮವು ಶೈವನಿಗಿಲ್ಲವೆಂದು ತಿಳಿಸಿದ್ದಾರೆ. ಶೈವನಿಗೆ ಚಾತುರ್ವರ್ಣ್ಯತ್ವವಿದ್ದರೆ ವೀರಶೈವನು "ಚತುರ್ವರ್ಣಾತೀತ"ನೆಂದು ಸಿದ್ಧರಾಮ ಶಿವಯೋಗಿಯು ಅಭಿಪ್ರಾಯಪಡುತ್ತಾನೆ. ಸಿದ್ಧಾಂತಿಗಳಾದ ಶೈವರು ಸುಖಕ್ಕೆದೈವ

೨೦. ಚೆ. ಬ. ವ. ೭೩೮.
೨೧. " ೧೨೪, ೧೨೮.
೨೨. ತೋ. ಸಿ. ವ. ೮.
೨೩. " " ೧೮೩, ೨೬೭ ೫೭೧.
ಚಿ. ೪೯

ವೆಂದೂ, ವಿಧಿಲಿಪಿಯೆಂದೂ, ಪುಣ್ಯವೆಂದೂ ಕರೆದರೆ, ದೈವವೆಂದರೆ ಪರಶಿವನಲ್ಲಿ ಕೂಡುವ ಕೂಟವೇ ಎಂದಿದ್ದಾನೆ ಸಿದ್ಧರಾಮ. ಅಲ್ಲದೆ ಸಿದ್ಧಾಂತಿಯ ಜ್ಞಾನವು ಸಾಧನೆಯಲ್ಲಿ, ವೇದಾಂತಿಯ ಜ್ಞಾನವು ವಾದದಲ್ಲಿ, ಕ್ರಿಯಾಮತನ ಜ್ಞಾನ ನುಡಿಯಲ್ಲಿ ವ್ಯಾವಹಾರಿಕನ ಜ್ಞಾನ ದ್ರವ್ಯಾರ್ಜನೆಯಲ್ಲಿ ಹೋಗಿ, ಅವೆಲ್ಲ ಭವಕ್ಕೆ ಕಾರಣವಾದರೆ ಲಿಂಗವಂತನ ಜ್ಞಾನ ಲಿಂಗಾಂಗಿಯಾಗುವುದರಲ್ಲಿ ಕಳೆದು ಭವದಿಂದ ಮುಕ್ತನನ್ನಾಗಿ ಮಾಡುತ್ತದೆಯೆಂದಿದ್ದಾನೆ.[೭೪] ಗುರುಮುಖದಿಂದಾಗಲಿ, ಶಾಸ್ತ್ರದಿಂದಾಗಲಿ ಮತ್ತಾವ ಮುಖದಿಂದಾಗಲೀ ತಿಳಿದನುಭಾವಿಯೇ ಸಂಸ್ಕಾರಿ; ಆತನೆ "ಪರಮವೀರಶೈವ" ಎಂದು ಹೇಳಿ. ವೀರಶೈವದ ಹಿರಿಮೆ ಅಡಗಿರುವುದು. ಶಾಸ್ತ್ರಜ್ಞಾನ. ವೇದಾಂತಜ್ಞಾನ. ವ್ಯವಹಾರಜ್ಞಾನದಲ್ಲಲ್ಲ; ಅನುಭಾವದಲ್ಲಿ ಎಂದು ಸ್ಪಷ್ಟಪಡಿಸಿರುತ್ತಾನೆ. ಅನುಭಾವಿಗಳು ಜೀವನದಲ್ಲಿ ಶಾಸ್ತ್ರೋಪದೇಶಕ್ಕಿಂತ ನಡೆ-ನುಡಿಗಳ ಶುದ್ಧಿಗೆ ಆದ್ಯಗಮನವಿತ್ತಿದ್ದಾರೆ. ಅನುಭಾವಿಗಳು ಸಾಮಾನ್ಯರಿಂಡ ಭಿನ್ನರು. "The mystics are exceptional men" ಎನ್ನುತ್ತಾರೆ ಸಿ. ಇ. ಎಂ. ಜೋಡ ಅವರು,[೭೬] ಅನುಭಾವಕ್ಕೆ ಪ್ರಾಶಸ್ತ್ಯ ವಿತ್ತವರು ವೀರಶೈವರು, ಶೈವರಲ್ಲವೆಂಬುದು ಶಿವಶರಣರ ವಾದವಾಗಿದೆ. "ಜೈನ, ಚಾರ್ವಾಕ, ಕಾಳಾಮುಖ ಎನಿಸುವ ಷಡ್ದರ್ಶನಾದಿಗಳು ಹೆಚ್ಚಿ ವಿಭೂತಿ, ರುದ್ರಾಕ್ಷಿ, ಪಂಚಾಕ್ಷರವನಱಿಯದೆ ನರಕಕ್ಕೆ ಭಾಜನರಾಗಿ ಪೋಗುತಿರ್ದರೆಂದು" ಬಸವಣ್ಣ ಜನಿಸಿದನೆಂದೂ ಸಿದ್ಧರಾಮನು ಹೇಳುವಲ್ಲಿ ಶೈವರೂ ಶೈವಮಾರ್ಗವನ್ನು ಬಿಟ್ಟಿದ್ದ ರೆಂದು ಕಂಡು ಬರುತ್ತದೆ.[೭೭] ಅತಿ ಪುಸ್ತಕ ಜ್ಞಾನದಿಂದ ಆಚರಣೆ ತಪ್ಪಿದ್ದಿತಂತೆ, ಅದಕ್ಕಾಗಿ ಅಮುಗೆ ರಾಯಮ್ಮನು ಇಂತು ನುಡಿಯುತ್ತಾಳೆ ;

> " ಸರ್ವಾಗಮ, ಶ್ರುತಿ, ಸ್ಮೃತಿ, ಪುರಾಣ, ಪಾಠಕನಾದಡೇನು ?
> ಸರ್ವಮಂತ್ರ ತಂತ್ರಸಿದ್ಧಿ ಮರ್ಮವಱಿತಡೇನು ?
> ನಿತ್ಯ ಶಿವಾರ್ಚನೆ ತ್ರಿಕಾಲವಿಲ್ಲ ; ನಿತ್ಯ ಪಾದೋದಕ ಪ್ರಸಾದ ಸೇವನೆಯಿಲ್ಲ ;
> ಇದೇತರ ' ವೀರಶೈವರ ವ್ರತ, ' ಇದೇತರ ಜನ್ಮ ಸಾಫಲ್ಯ,
> ಅಮುಗೇಶ್ವರಲಿಂಗವೇ ?"[೭೮]

ಶ್ರೀ ಸಂಗನ ಬಸವೇಶ್ವರನ ವಚನಗಳಲ್ಲಿ ಅವರು : "ಅಂಗದ ಮೇಲೆ ಲಿಂಗವ ಧರಿಸಿ, ಶಿವಭಕ್ತರೆಂದು ಹೇಳಿ, ಶಿವಾಚಾರದ ಮಾರ್ಗವ ಬಿಟ್ಟು, ಭವಿಶೈವದೈವಗಳಿಗೆ ಲಿಂಗವಡಿಯಾಗಿ ಅಡ್ಡಬಿದ್ದು, ಶರಣೆಂಬ 'ಹೊಲೆಯರಿಗೆ' ಚಂದ್ರಸೂರ್ಯರುಳ್ಳನಕ್ಕ್ನೂ

೭೪. ಸಿ. ರಾ, ವ. ೭೫೯ ೪೯೧, ೪೫೦.
೭೫. ಸಿ. ರಾ. ವ. ೨೭೫.
೭೬ 'God and Evil' — Page No. 8 (Faber and Faber Limited. London).
೭೭ ಸಿ. ರಾ. ವ. ೮೭೪.
೭೮ ಅ. ರಾ. ವ. ೩.

ಇಪ್ಪತ್ತೆಂಟು ಕೋಟಿ ನರಕ ತಪ್ಪದು ; ಕಾಳಿಕಾ, ಚಾಮುಂಡಿ, ಗಂಗೆ, ಗೌರಿ, ಬನಶಂಕರಿ ಎಲ್ಲಿ, ಎಕ್ಕ, ಎಕ್ಕನಾದಿ, ಹುಲಿಗಿ, ಹುಸೂರಿ, ಸತ್ತವರು, ಹೆತ್ತವರು, ಇಂತೀ ಹಲವು ಪಿಶಾಚಿಗಳ ಹೆಸರಿನಿಂದ ಇದಿರಿಟ್ಟು ಆರಾಧಿಸಿ, ಅದರ ನೈವೇದ್ಯವೆಂದು ಶ್ರೀ ಗುರುವಿತ್ತ ಲಿಂಗಕ್ಕೆ ತೋರಿಸಿ, ಭುಂಜಿಸುವ ಶಿವದ್ರೋಹಿಗಳಿಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮ ವಿಲ್ಲ, ಪಾದೋದಕವಿಲ್ಲ, ಪ್ರಸಾದವಿಲ್ಲ ; ಸದ್ಗುರು – ಕರಜಾತರು ಪಂಚಪಾತಕ ಪಂಚಸೂತಕವ ಹೊದ್ದಲಾಗದು ; ಶೈವಮಾರ್ಗವ ಮೆಟ್ಟಲಾಗದು ; ಪ್ರಮಥ ರಾಚರಿಸಿದ ಸನ್ಮಾರ್ಗವನುಳಿದು, ಶೈವ ಜಡಜೀವಿಗಳ ಮಾರ್ಗದ ಸೋಂಕಿನಲ್ಲಿ ಅರ್ಚನಾರ್ಪಣ ಕ್ರಿಯೆಗಳನ್ನಾಚರಿಸಲಾಗದು, ದಾಕ್ಷಿಣ್ಯದಿಂದ ಅನಾಚಾರ ದುರ್ಜೀವಿಗಳ ಸಮಪಂಕ್ತಿಯಲ್ಲಿ ಅರ್ಪಿತವ ಮಾಡಲಾಗದು ; ಷಡ್ವಿಧಶೀಲವ್ರತಾಚಾರಹೀನರಲ್ಲಿ ಪಾದೋದಕ ಪ್ರಸಾದವ ಕೊಳಲಾಗದು ;" ಎಂದು ತಿಳಿಸಿ ಮುಂದುವರಿದು ವೀರಶೈವ ನಿಜಾಚಾರ ಸಂಪತ್ತಿನ ರೀತಿಯನ್ನು ಇಂತು ವಿವರಿಸುತ್ತಾರೆ; "ಅಷ್ಟಾಷಷ್ಠಿಕೋಟಿ ತೀರ್ಥ ಮಿಂದರಿಲ್ಲ, ಲಕ್ಷಕೋಟಿ ಜಪವ ಮಾಡಿದರಿಲ್ಲ. ಧ್ಯಾನ, ಮೌನ, ಹೋಮ, ನೇಮ, ಅನುಷ್ಠಾನವ ಮಾಡಿದರಿಲ್ಲ, ಅನಂತವೇಳೆ ಸೂರ್ಯ, ಚಂದ್ರ, ಭೂಪ್ರದಕ್ಷಿಣೆ ಮಾಡಿದರಿಲ್ಲ ; ಕಾಶಿ, ಕೇದಾರ, ಹಂಪೆ, ಗಯಾ, ಪ್ರಯಾಗ, ರಾಮೇಶ್ವರ, ಶ್ರೀಶೈಲ, ಹೇಮಾದ್ರಿ, ರಜತಾದ್ರಿ, ಮಹಾಮೇರು, ಹಿಮವತ್ಕೇದಾರ ವೀರಣ್ಣ, ಶಿವಗಂಗೆ, ಅಮರಗುಂಡ, ಗೋಕರ್ಣ ಹೋದರಿಲ್ಲ. ಇವೆಲ್ಲ ಕುಚಿತ್ತ, ಕುಬುದ್ಧಿ, ಅಹಂಕಾರ, ಕುಮನ, ಅಜ್ಞಾನ, ದುರ್ಭಾವ, ಮೊದಲಾದ ಕರಣೇಂದ್ರಿಯಂಗಳು ತನ್ನ ತನುತುಂಬಿ, ಬರಿಯ ಭ್ರಾಂತು, ಇನ್ನು ನಿಜವಸ್ತು ಪರಶಿವಲಿಂಗವಿಪ್ಪ ಠಾವಹೇಳಿಹೆ : ಶ್ರೀ ಗುರು ಕರುಣಾಕಟಾಕ್ಷೆಯಿಂ ಕರುಣಿಸಿಕೊಟ್ಟ "ಪರಶಿವಲಿಂಗವ" ಮನತುಂಬಿ. ಭಾವತುಂಬಿ, ಕರತುಂಬಿ, ಕಂಗಳು ತುಂಬಿ, ಹೃದಯ ತುಂಬಿ, ಸರ್ವಾಂಗ ತುಂಬಿ, ಹಲವು ಕಡೆಗೆ ಹಲ ದಾಡುವ ಹಂಸನಾತ್ಮ ಜೀವಧ್ಯಾನ, ಮೌನ, ನೇಮ, ನಿತ್ಯ. ಸತ್ಯ, ಸದ್ಭಾವವೆಂಬ ಹಸ್ತ ದಲ್ಲಿ ಪಿಡಿದು, ಆ ಮಹಾಲಿಂಗವೆಂಬ ಸ್ತಂಭದಲ್ಲಿ ಕಟ್ಟಿ, ಆ ಹಸ್ತದಲ್ಲಿಟ್ಟ ಘನಮಹಾ ಪರಶಿವಲಿಂಗವ ಕೂಡಿ ನೆರೆಯಬಲ್ಲರೆ ಇದೇ ನಿಶ್ಚಯ ಕಾಣಾ. ಶ್ರೀ ಗುರುಲಿಂಗಜಂಗ ಮದ ಕರುಣಾಕಟಾಕ್ಷೆಯಿಂದ, ಅಂಗದ ಮೇಲೆ ಪರಶಿವಲಿಂಗವ ಧರಿಸಿದ ಶಿವಭಕ್ತ, ಶಿವ ಭಕ್ತೆ, ಶಿವಪುತ್ರರಿಗೆ ಶ್ರೀ ಗುರುದೈವನೇ ಕುಲದೈವವಯ್ಯಾ; ಇಂತೀ ಕುಲದೈವ, ಮನೆದೈವವ ಕಂಡು, ಅರ್ಥಪ್ರಾಣಾಭಿಮಾನಂಗಳ ಸಮರ್ಪಿಸಿ, ಕಾಯದ ಮಧ್ಯದಲ್ಲಿ ನೆಲೆಸಿರ್ಪ ಇಷ್ಟಲಿಂಗದೇವಂಗೆ ಕಾಯುವನರ್ಪಿಸಿ, ಮನದ ಮಧ್ಯದಲ್ಲಿ ನೆಲೆಸಿರ್ಪ ಪ್ರಾಣಲಿಂಗದೇವಂಗೆ ಮನವನರ್ಪಿಸಿ, ಭಾವಮಧ್ಯದಲ್ಲಿ ನೆಲೆಸಿರ್ಪ ಭಾವಲಿಂಗದೇವಂಗೆ ಭಾವವನರ್ಪಿಸಿ, ಪ್ರಾಣದಲ್ಲಿ ನೆಲೆಸಿರ್ಪ ಆಚಾರಲಿಂಗದೇವಂಗೆ ಸುಗಂಧವರ್ಪಿಸಿ. ಜಿಹ್ವೆಯ ಮಧ್ಯದಲ್ಲಿ ನೆಲೆಸಿರ್ಪ ಗುರುಲಿಂಗದೇವಂಗೆ ಸುರಸವನರ್ಪಿಸಿ, ನೇತ್ರಮಧ್ಯದಲ್ಲಿ ನೆಲೆಸಿರ್ಪ ಮಹಾಲಿಂಗದೇವಂಗೆ ಸುತೃಪ್ತಿಯನರ್ಪಿಸಿ, ಅರುಹಿನಮಧ್ಯದಲ್ಲಿ ನೆಲಿಸಿರ್ಪ ನಿಃಕಲಲಿಂಗದೇವಂಗೆ ತನ್ನ ನಿತ್ಯ ನಿಜಸುಖವನರ್ಪಿಸಿ, ಸುಜ್ಞಾನದ ಮಧ್ಯದಲ್ಲಿ ನೆಲೆಸಿರ್ಪ

ಶೂನ್ಯಲಿಂಗದೇವಂಗೆ ಮಹಾಸಂತೃಪ್ತಿಯ ಪರಿಣಾಮವನರ್ಪಿಸಿ, ಇಂತೀ ಏಕಾದಶ ಸ್ಥಾನದಲ್ಲಿ ನೆಲೆಸಿರ್ಪ ಜ್ಯೋತಿರ್ಮಯ ಪರತತ್ವಲಿಂಗಕ್ಕೆ ಏಕಾದಶಭಕ್ತಿವಿಡಿದು, ಏಕಾದಶ ಸುಪದಾರ್ಥವನರ್ಪಿಸಿ, ನಿಜಸದ್ಭಕ್ತಿನೈಷ್ಠ ಕರಿಗೊಂಡು, ಆವರ ಒಕ್ಕುಮಿಕ್ಕ ಪರಿಣಾಮ ಪ್ರಸಾದದಲ್ಲಿ ನಿಮ್ಮ ಶರಣರು ಲೋಲುಪ್ತರಲ್ಲದೆ, ಉಳಿದ ಜಡಜೀವಿ ಕರ್ಮಭೂಭಾರಿ, ಕಣ್ಗೆಟ್ಟಣ್ಣಗಳೆತ್ತ ಬಲ್ಲರಯ್ಯಾ ನಿಮ್ಮ ನಿಜಾಚರಣೆಯ ನಿಲುಕಡೆಯ ಪ್ರಸಾದವ ? ಇಂತು ಮಹಾಪ್ರಮಥಗಣಂಗಳೆಲ್ಲ ಆಚಾರದನುವರಿದು ಸನ್ಮಾರ್ಗದಿಂದಾಚರಿಸಿ. ನುಡಿದಂತೆ ನಡೆದು, ಎರಡೆಂಬತ್ತುಕೋಟಿ ವಚನವ ನುಡಿದು. ಜ್ಞಾನೋದಯವಾಗಿ. ಬಂದ ಸದ್ಭಕ್ತಶಿಷ್ಯೋತ್ತಮಂಗೆ ಪಂಚಮಹಾಪಾತಕ ಸೂತಕಂಗಳ ಬಿಡಿಸಿ, ಇಷ್ಟಲಿಂಗಬಾಹ್ಯವಾದ ಶಿವಮಾರ್ಗವ ಹರಿದು, ತ್ರಿವಿಧದೀಕ್ಷಾಕರ್ತುವಾದ ಇಷ್ಟಲಿಂಗವ ಸರ್ವಾಂಗದಲ್ಲಿ ಸಂಬಂಧಿಸಿ, ನಿಜವೀರಶೈವ ಸನ್ಮಾರ್ಗವ ಬೋಧಿಸಿ, **ಸದ್ಭಕ್ತಿ, ಸತ್ಕ್ರಿಯೆ, ಸತ್ಕಾಯಕ, ಸಮ್ಯಗ್‌ಜ್ಞಾನ, ಸದ್ಭಾವ, ಸದಾಚಾರವೆಂಬ, ಷಟ್ಸ್ಥಲ ಸಂಪದವನಿತ್ತರು ನೋಡಾ, ಸಂಗನಬಸವೇಶ್ವರಾ,"** ಎಂದು ಬಹು ಶಾಸ್ತ್ರೀಯವಾಗಿ ವೀರಶೈವರ ಸಮಗ್ರ ಆಚರಣೆಯ ಕ್ರಮವನ್ನು ಬಹು ಸಂಕ್ಷಿಪ್ತವಾಗಿ ನಿರೂಪಿಸಿದ್ದಾರೆ.[೭೯]

[೭]

## ಕೊನೆಯ ಮಾತು

ಇಲ್ಲಿಯ ವರೆಗಿನ ವಿವೇಚನೆಯಿಂದ ತಿಳಿದು ಬರುವ ಅಂಶಗಳನ್ನು ಈ ರೀತಿ ನಿವೇದಿಸಬಹುದು ೧) ಶುದ್ಧಶೈವವು ಕರ್ನಾಟಕದಲ್ಲಿ ಅತಿಪ್ರಚಾರದಲ್ಲಿದ್ದು ಶಾಸನಗಳಲ್ಲಿ ಅಷ್ಟೊಂದು ಮಹತ್ವದ್ದಾಗಿ ಉಕ್ತವಾಗಿಲ್ಲ ; ಶುದ್ಧಶೈವ ಮತ್ತು ಪಾಶುಪತ ಶೈವ ಎರಡಲ್ಲಿಯೂ ಇಷ್ಟಲಿಂಗಧಾರಣವಿದ್ದು ಅದು ವೀರಶೈವರ ಇಷ್ಟಲಿಂಗಧಾರಣದಿಂದ ಭಿನ್ನವಾಗಿದೆ ; ೨) ಮೂಲತಃ ಶೈವಶಾಖೆಗಳು ಅವೈದಿಕವಾಗಿದ್ದರೂ ವಚನಕಾರರ ಕಾಲಕ್ಕೆ ಅವು ವೈದಿಕವಾಗಿ ಏಕದೇವೋಪಾಸನೆ, ಶಿವಾಧಿಕ್ಯವನ್ನು ಮರೆತು, ಇತರ ದೇವತೆಗಳನ್ನು ಶಿವನ ಪರಿವಾರದೇವತೆಗಳನ್ನು ಶಿವನ ಸ್ಥಾನದಲ್ಲಿರಿಸಿ ಪೂಜಿಸುತ್ತಿದ್ದವು ; ಶರಣರು ಇಷ್ಟಲಿಂಗವೊಂದನ್ನೇ ಅನವರತ ದೇಹದ ಮೇಲೆ ಧರಿಸಿ ತ್ರಿಕಾಲ ಪೂಜೆ ಮಾಡಬೇಕೆಂದರಲ್ಲದೆ ದೇಹದ ಮೇಲೆ ಭೂತೇಶನನ್ನು ಧರಿಸಿದ ಮೇಲೆ, ಯಾವ ಭವಿಶೈವ ಮುದ್ರೆಗಳನ್ನು ಧಾರಣಮಾಡಬಾರದೆಂದು ಕಟ್ಟಪ್ಪಣೆ ವಿಧಿಸಿದರು; ೩) ಶೈವರು ಇಷ್ಟಲಿಂಗವನ್ನು ತೆಗೆದಿರಿಸಬಹುದು; ಎದುರಿಟ್ಟು ಪೂಜಿಸಬೇಕು: ವೀರ–ಶೈವರು ದೇಹದ ಮೇಲೆ ಸದಾ ಧರಿಸಿ, ಕರಸ್ಥಲದಲ್ಲಿಟ್ಟು ಪೂಜಿಸಬೇಕು; ೪) ಶೈವವು ಚಾತುರ್ವರ್ಣ್ಯಕ್ಕೆ ಒಳಪಟ್ಟುದುದಾದರೆ ಶಿವಶರಣರ ಧರ್ಮವು ಚಾತುರ್ವರ್ಣ್ಯಾತೀತ

---

೭೯. ಸಂಗನಬಸವೇಶ್ವರನ ವಚನಗಳು, ೧–೨ ಮತ್ತು ೪–೫.

ವಾಗಿದೆ; ೫) ಶೈವಶಾಖೆಯವರು ಷಡ್ದರ್ಶನಗಳನ್ನು ಒಪ್ಪಿದರೆ ವೀರಶೈವವು ಪ್ರಾಢ ದರ್ಶನವನ್ನು ಪ್ರತ್ಯೇಕ ಪಡೆದಿದೆ. ಎಂಬುದು ವಚನಕಾರರ ಅಭಿಮತ; ೬) ಶೈವರು ದೇವಾಲಯ, ಯಜ್ಞ, ಯಾಗ, ಹೋಮ, ಕರ್ಮ, ಸೂತಕ, ಪಾತಕಗಳನ್ನು ಆಚರಿಸಿದರೆ ಮತ್ತು ಹೆಣವನ್ನು ಸುಟ್ಟರೆ ವೀರಶೈವರು ಹಿಂಸೆಯ ಯಾವ ಕರ್ಮವನ್ನು, ಸೂತಕ ವನ್ನು ಮಾಡಲಾಗದು; ಅಲ್ಲದೆ ಶವವನ್ನು ಹುಗಿಯಬೇಕು. ೭) ಶೈವವು ಆಚ ರಣೆಯ ಕಡೆಗೆ ನೀತಿಯ ಕಡೆಗೆ ಗಮನವಿರಿಸದಿದ್ದಾಗ ವೀರಶೈವರು ಅದಕ್ಕೆ ಆದ್ಯಗಮನ ವಿತ್ತರು. ಶೈವರಲ್ಲಿ ಒಂದೇ ಪಂಥದವರನ್ನು ಗುರುವೆಂದು ಭಾವಿಸದೆ ಬೇರೊಂದು ಪಂಥ ದವನಿಂದ ದೀಕ್ಷೆಪಡೆಯುವ ಪದ್ಧತಿ ವೀರಶೈವರಿಗೆ ತ್ಯಾಜ್ಯವಾಗಿದೆ ; ಲಿಂಗಧಾರಿಯಾದ ಮೇಲೆ ವಿಪ್ರನೇ ಹಿರಿಯನೆಂದು ಅವನ ಪಾದೋದಕ ಸ್ವೀಕಾರ ಪದ್ಧತಿಯಿದ್ದುದನ್ನು ಬಸವಣ್ಣನವರೇ ಮೊದಲಾಗಿ ಖಂಡಿಸಿದ್ದಾರೆ. ಯಾಕಂದರೆ ಶಿವಭಕ್ತನೇ ಶ್ರೇಷ್ಠವೆಂದು ಅವರ ಭಾವನೆ ಉದಾಹರಣೆಗೆ :

"ನಾನು, ಭಕ್ತ, ನಾನು ಪ್ರಸಾದಿ, ಎಂದು ವಿಪ್ರಕರ್ಮವ ಮಾಡುವ ಕರ್ಮಿೀ;
ಲಿಂಗದೇವನ ಮುಟ್ಟಿ ಮಜ್ಜನಕೆರೆವ ಕೈಯಲು ವಿಪ್ರನ ಕಾಲತೊಳೆವರೆ?
ಲಿಂಗೋದಕ ಹೃದಯಲ್ಲಿ ! ವಿಪ್ರನಕಾಲ ತೊಳೆದನೀರು ಮುಂಡೆಯಮೇಲೆ!..........."

ಎಂಬ ಮಾತೇ ಸಾಕ್ಷಿ: ೮) ವಾಮಾಚಾರ, ದುರಾಚಾರ, ವೇದದ ಡಾಂಭಿಕತನಗಳನ್ನು ಶರಣರು ಒಪ್ಪುವುದಿಲ್ಲ. ಕಿರುಕುಳ ದೈವದಲ್ಲಿ ಶ್ರದ್ಧೆ ಇಡುವುದಿಲ್ಲ : ಭಕ್ತಿಯಿಲ್ಲದ ಯೋಗವನ್ನು ಒಪ್ಪುವದಿಲ್ಲ ೯) ಶೈವರು ಕೊನೆಯಲ್ಲಿ ಚತುರ್ವಿಧಪದವಿಗಳನ್ನು ಪಡೆದರೆ ವೀರಶೈವಶರಣರು ಲಿಂಗಾಂಗಯೋಗ (ಸಮರಸ)ವೆನ್ನುತ್ತಾರೆ, ೧೦) ಜಗದ್ರಚನೆ· ಮಲ, ಮಾಯೆಗಳ ವಿಚಾರದಲ್ಲಿ, ದೀಕ್ಷಾ ಕ್ರಮದಲ್ಲಿ, ಗುರುಕರುಣದಲ್ಲಿ, ಪಾದೋದಕ ಪ್ರಸಾದ ನಿರ್ವಾಣದಲ್ಲಿ, ಯೋಗದಲ್ಲಿ, ಜೀವನದ ದೃಷ್ಟಿಯಲ್ಲಿ, ಆಚಾರದಲ್ಲಿ, ಭಕ್ತಿಯಲ್ಲಿ. ದರ್ಶನದಲ್ಲಿ ಹೀಗೆ ಹಲವಂದಲ್ಲಿ ವಿಚಾರಿಸಿದಾಗಲೂ ಶೈವರು ವೀರ ಶೈವರು ಭಿನ್ನಭಿನ್ನರಾಗಿರುವುದಲ್ಲದೆ ಅತಿ ಒಂದೇ ತೆರನಾಗಿ ಕಾಣುವಂತಹ ವಿಷಯಗಳೂ ಹೆಚ್ಚಾಗಿರುವುದರಿಂದ, ವೀರಶೈವರಂತೆಯೆ ಅನೇಕ ಆಚರಣೆಗಳು ಶೈವರಲ್ಲಿ ಇವೆ ಯೆಂಬುದು ಹೊರಗಿನಿಂದ ನೋಡುವವರಿಗೂ ಕಾಣುವುದರಿಂದ ಅಂತಹ ಶೈವರನ್ನೇ ವೀರಶೈವವೆಂದು ಭಾವಿಸುವಂತಾಗಿದೆ. ಸೂಕ್ಷ್ಮವಾಗಿ ಅವಲೋಕಿಸಿದಾಗ ಈ ವ್ಯತ್ಯಾಸ ಗಳು ಗೋಚರಿಸಿ ಶರಣರು ಮಾಡಿದ ಕಾರ್ಯವಾವುದೆಂಬುದು ರನ್ನಗನ್ನಡಿಯಂತೆ ನಿಚ್ಚಳವಾಗಿ ಗೋಚರಿಸುತ್ತದೆ.

ಇಲ್ಲಿಯವರೆಗಿನ ವಿವೇಚನೆಯಿಂದ ತಿಳಿದುಬರುವ ಇನ್ನೊಂದು ಪ್ರಮುಖ ಅಂಶ ವೆಂದರೆ ಶೈವಶಾಖೆಯ ಪ್ರಮುಖ ಹೆಸರುಗಳು; ಅವು ಎರಡು ವಿಧವಾಗಿವೆ :

---

೮೦. ಬ. ವ. ೫೯೯.

I. ಅ) ಶೈವ, ಶುದ್ಧಶೈವ, ಪಾಶುಪತ (ಲಕುಲೀಶ) ಕಾಳಾಮುಖ, ಮತ್ತು ಕಾಪಾಲಿಕ
ಆ) ಭೈರವ, ಗೊರವ, ಸಿದ್ಧಾಂತ. ಭಕ್ತ, ಮಾಹೇಶ;

II. ಈ) ಪಂಚಮಹಾಶೈವ. ಆರು ಮಹಾಶೈವ ಅಲ್ಲದೆ ಕೆಲವೆಡೆ ನಾಲ್ಕು ಶೈವ ಎಂದೂ ಬಂದಿವೆ ಉದಾಹರಣೆಗೆ ನಾಲ್ಕು ಶೈವವೆನ್ನುವವರು :

೧) ಶುದ್ಧಶೈವ ೨) ಪೂರ್ವ ಶೈವ, ೩) ಮಾರ್ಗ ಶೈವ, ೪) ಆದಿಶೈವವೆಂದಿದ್ದಾರೆ :. ಶೈವಶಾಖೆಗಳು ಐದು ಎನ್ನುವರು ಅವುಗಳನ್ನು

೧) ಶುದ್ಧಶೈವ ೨) ಪೂರ್ವಶೈವ ೩) ಮಾರ್ಗಶೈವ ೪) ಮಿಶ್ರಶೈವ ೫) ಸಂಕೀರ್ಣಶೈವ ಎಂದು ಕರೆದಿದ್ದಾರೆ :

ಆರು ಶೈವವೆನ್ನುವವರು ಅವುಗಳನ್ನು :

೧) ಆದಿಶೈವ, ೨) ಅನುಶೈವ, ೩) ಅಂತರಶೈವ ೪) ಅಂತ್ಯಶೈವ ೫)ಪ್ರವರಶೈವ ೬) ಮಹಾಶೈವ ಎಂದು ಕರೆದಿದ್ದಾರೆ ;

ಚೆನ್ನಬಸವಣ್ಣನವರು ಮಾತ್ರ : ೧) ಶೈವ. ೨) ಪಾಶುಪತಿ ೩) ಕಾಳಾಮುಖ, ೪) ಕಾಪಾಲಿ ೫) ಮಹಾವ್ರತಿ ೬) ಸನ್ಯಾಸಿ ಇವು ಆರು ಶೈವಶಾಖೆಗಳೆಂದಿದ್ದಾರೆ. ಇವುಗಳಲ್ಲಿ ಶಾಸನಗಳಲ್ಲಿ ಪ್ರಮುಖವಾಗಿ ಕಂಡುಬರುವ ನ (ಲ) ಕುಲೀಶ ಪಂಥದ ಹೆಸರೇ ಅಷ್ಟೊಂದು ಕಂಡುಬರುವುದಿಲ್ಲ; ಇದು ಆಶ್ಚರ್ಯಕರವಾದುದು. ವೀರಶೈವವು ಏಳನೆಯ ಶಾಖೆಯೆಂದೂ ಅದು "ಶುದ್ಧ" "ವಿಶೇಷ" "ನಿರ್ವಾಣ"ವೆಂದು ಮೂರು ವಿಧವೆಂದು ವಚನಗಳಲ್ಲಿ ಉಕ್ತವಾಗಿದೆ. ಹೀಗಾಗಿ ಶೈವಶಾಖೆಗಳನ್ನು ಯಾವ ಹೆಸರುಗಳಿಂದ ಕರೆಯುವುದು ಸೂಕ್ತವೆಂಬುದು ವಿಚಾರಾರ್ಹವಾಗಿದೆ. □

## ಪ್ರಮುಖ ಆಧಾರ ಗ್ರಂಥಗಳು ಮತ್ತು ಇಲ್ಲಿ ಬಳಸಿರುವ ಸಂಕೇತಗಳು

| | | | | |
|---|---|---|---|---|
| ೧. | ಬ.ರಾ.ದೇ.ರ. | — | ಬಸವರಾಜದೇವರ ರಗಳೆ | ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ (೧೯೩೮) |
| ೨. | ಸೋ. ಚಾ. | — | ಸೋಮನಾಥ ಚಾರಿತ್ರ | ,, : ಡಾ. ಆರ್. ಸಿ. ಹಿರೇಮಠ ಮತ್ತು<br>,, ಡಾ. ಎಂ. ಎಸ್. ಸುಂಕಾಪುರ (೧೯೬೧) |
| ೩. | ಕ.ಶಾ.ಅ. | — | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ | ಲೇಖಕರು : ಡಾ. ಎಂ. ಚಿದಾನಂದಮೂರ್ತಿ (೧೯೬೬) |
| ೪. | ಬ.ಸ್ಮಾ.ಸಂ. | — | ಬಸವನಾಳ ಸ್ಮಾರಕ ಸಂಪುಟ | ಪ್ರಶಸ್ತಿ ಗ್ರಂಥ (೧೯೫೬) |
| ೫. | ಬ.ವ. | — | ಬಸವಣ್ಣನವರ ವಚನಗಳು | ಸಂಪಾದಕರು : ಪ್ರೊ.ಶಿ.ಶಿ.ಬಸವನಾಳ(೧೯೬೨ ಲೈಬ್ರಿ ಪ್ರತಿ) |
| ೬. | ಸ.ಪ. | — | ಸಮಯ ಪರೀಕ್ಷೆ | ,, ಪ್ರೊ. ಬಿ. ಎಸ್. ಕುಲಕರ್ಣಿ |
| ೭. | ನಂ. ರ. | — | ನಂಬಿಯಣ್ಣನ ರಗಳೆ | ,, : ತೀ. ನಂ. ಶ್ರೀಕಂಠಯ್ಯ (೧೯೪೬) |
| ೮. | ಆ. ವ. | — | ಆದಯ್ಯನ ವಚನಗಳು | ,, : ಚೆನ್ನಪ್ಪ ಉತ್ತಂಗಿ (೧೯೫೭) |
| ೯. | ಮ.ಮಾ.ವ. | — | ಮಡಿವಾಳ ಮಾಚಿದೇವರ ವಚನಗಳು | ,, : ಫ. ಗು. ಹಳಕಟ್ಟಿ (೧೯೩೯) |
| ೧೦. | ಅ.ಮಾ.ತಂ.ವ. | — | ಅರುವಿನ ಮಾರಿ ತಂದೆಯ ವಚನಗಳು | ,, : ,, (೧೯೩೮) |
| ೧೧. | ಬ.ಹೆ.ವ. | — | ಬಸವಣ್ಣನವರ ಹೆಚ್ಚಿನ ವಚನಗಳು | ಪ್ರೊ. ಶಿ. ಶಿ. ಬಸವನಾಳ (೧೯೬೨) |
| ೧೨. | ಮೋ.ಮಾ.ವ. | — | ಮೋಳಿಗೆಯ ಮಾರಯ್ಯನ ವಚನಗಳು | ಪ್ರೊ. ಸಂ. ಶಿ. ಭೂಸನೂರಮಠ (೧೯೫೦) |
| ೧೩. | ಪ್ರ.ಲಿಂ.ಲೀ.ಸಂ- | — | ಪ್ರಭುಲಿಂಗಲೀಲೆಯ ಸಂಗ್ರಹ | ,, : ಎಂ.ಎಸ್.ಬಸವಲಿಂಗಯ್ಯ (೧೯೩೪) |
| ೧೪. | ಚ.ಬ.ವ. | — | ಚನ್ನಬಸವಣ್ಣನವರ ವಚನ | ,, : ಡಾ. ಆರ್. ಸಿ. ಹಿರೇಮಠ (೧೯೬೫) |
| ೧೫. | ಶ.ಶಂ.ವಿ. | — | ಶಬರಶಂಕರ ವಿಳಾಸ | ,, ಪ್ರೊ. ಶಿ. ಶಿ. ಬಸವನಾಳ (೧೯೩೯) |
| ೧೬. | ಸ.ಮಾ.ವ. | — | ಸಕಳೇಶ ಮಾದರಸರ ವಚನಗಳು | ,, : ಫ. ಗು. ಹಳಕಟ್ಟಿ (?) |

| | | | | | |
|---|---|---|---|---|---|
| ೧೭. | ಅ.ವ.ಚಂ. | — ಅಲ್ಲಮನ ವಚನ ಚಂದ್ರಿಕೆ | ,, | : ಡಾ. ಎಲ್. ಬಸವರಾಜು | (೧೯೬೦) |
| ೧೮. | ವಿ.ಚಿಂ.ಮ. | — ವಿವೇಕ ಚಿಂತಾಮಣಿ | ,, | ಪ್ರೊ. ಜಿ.ಎಂ. ಉಮಾಪತಿಶಾಸ್ತ್ರಿ | (೧೯೬೯) |
| ೧೯. | ತೋ.ಸಿ.ಶಿ.ವ. | — ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನಗಳು | ,, | ಡಾ. ಆರ್. ಸಿ. ಹಿರೇಮಠ | (೧೯೬೪) |
| ೨೦. | ಭೈ.ಕಾ.ಕ.ಸೂ-ರ | — ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ | , | ,, | (೧೯೬೪) |
| ೨೧. | ಘ.ಲಿಂ.ವ. | — ಘನಲಿಂಗದೇವನ ವಚನಗಳು | ,, | ಶ್ರೀ ಶಿವರಾತ್ರಿ ಮಹಾರಾಜೇಂದ್ರ ಸ್ವಾಮಿಗಳವರು | (೧೯೬೪) |
| ೨೨. | ಗಿ.ಕ. | — ಗಿರಿಜಾ ಕಲ್ಯಾಣ | , | ಡಾ. ಎಸ್.ಸಿ. ನಂದೀಮಠ | (೧೯೪೩) |
| ೨೩. | ಪ್ರ.ಲಿಂ.ಲೀ. | — ಪ್ರಭುಲಿಂಗ ಲೀಲೆ | , | ಶಿ. ಶಿ. ಬಸವನಾಳ | (೧೯೬೩) |
| ೨೪. | ಶಂ.ದಾ:ರ. | — ಶಂಕರದಾಸಿಮಯ್ಯನರಗಳೆ | ,, | ಪ್ರೊ. ಸ. ಸ. ಮಾಳವಾಡ | (೧೯೪೭) |
| ೨೫. | ಉ.ಪೆ.ವ. | — ಉರಿಲಿಂಗ ಪೆದ್ದಿಯ ವಚನಗಳು | , | ಫ. ಗು. ಹಳಕಟ್ಟಿ | (೧೯೩೬) |
| ೨೬. | ಅ.ವ. | — ಅಕ್ಕಮಹಾದೇವಿಯ ವಚನಗಳು | , | ಡಾ. ಎಲ್. ಬಸವರಾಜು | (೧೯೬೬) |
| ೨೭. | ಸಿ.ರಾ.ವ. | — ಸಿದ್ಧರಾಮೇಶ್ವರನ ವಚನಗಳು | ,, | ಡಾ. ಆರ್. ಸಿ. ಹಿರೇಮಠ | (೧೯೬೮) |
| ೨೮. | ಸಂಗನಬಸವೇಶ್ವರನ ವಚನಗಳು | | ,, | ಫ. ಗು. ಹಳಕಟ್ಟಿ | (೧೯೨೭) |
| ೨೯. | ಹರಿಹರನ ರಗಳೆಗಳು (ವಿವಿಧ ಸಂಪುಟಗಳು) | | | ,, | |
| ೩೦. | ಹರಿಹರನ ರಗಳೆಗಳು ಭಾಗ ೨ | | , | ಪ್ರೊ. ಬಿ. ಸಿ. ಜವಳಿ ಮತ್ತು ವೀ. ಎಂ. ಮಲ್ಲಾಬಾದಿ | (೧೯೬೯) |

# ಶಿವಯೋಗದ ವಿಕಾಸ-ಒಂದು ನೋಟ

ವ್ಹಿ. ಎಸ್. ಕಂಬಿ

ಶಿವಯೋಗವು ಚರಿತ್ರ ದೃಷ್ಟಿಯಿಂದ ಬಹು ಪುರಾತನವಾದುದು. ಯಾಕಂದರೆ ಮೊಹೆಂಜೋದಾರೋ ಉತ್ಖನನದಲ್ಲಿ ದೊರೆತ ಲಿಂಗ ಮೂರ್ತಿಗಳು ಐತಿಹಾಸಿಕ ಶೈವವನ್ನು ಪ್ರತಿನಿಧಿಸುತ್ತವೆ. ಮೊಹೆಂಜೊದಾರೋದ ಖ್ಯಾತ ಪಾತ್ರೆಗಳ (Seals) ಮುದ್ರೆಗಳಲ್ಲಿ ಪಶುಪತಿ ಹಾಗೂ ಮಹಾಯೋಗಿಗಳು ಮುಂಗುರುತಿಸಲ್ಪಟ್ಟಿದ್ದಾರೆ.[೧] ಯೋಗಕ್ಕೂ ಶೈವಧರ್ಮಕ್ಕೂ ನಿಕಟವಾದ ಸಂಬಂಧವಿರುತ್ತದೆ.[೨] ಆದುದರಿಂದಲೇ ಶೈವಧರ್ಮವು ಅನುಷ್ಠೇಯವಾಗಿರುವ ಕಾರಣ ಪರಮಧರ್ಮವೆಂದು ಸಂಬೋಧಿಸಲ್ಪಟ್ಟಿರುತ್ತದೆ.[೩] ಶಿವಯೋಗವು ಮೊಹಂಜೊದಾರೋದಷ್ಟು ಪುರಾತನವೆಂದು ನಿರ್ವಿವಾದವಾಗಿ ಹೇಳಬಹುದು.[೪] ರುದ್ರ ಇಲ್ಲವೆ ರುದ್ರ–ಶಿವ ಸಂಪ್ರದಾಯಕ್ಕೂ ಯೋಗಪದ್ಧತಿಗೂ ನಿಕಟವಾದ ಸಂಬಂಧವು ಗ್ರಂಥಸ್ಥವಾಗಿರುವುದನ್ನು ವಿಶ್ವದ ಪ್ರಪ್ರಥಮ ಸಾಹಿತ್ಯವೆಂದು ಪರಿಗಣಿಸಲ್ಪಟ್ಟ ಋಗ್ವೇದದಲ್ಲಿ ಕಾಣುತ್ತೇವೆ. ಋಗ್ವೇದದ x 136 ದಲ್ಲಿಯಂ ಮಂತ್ರವು ಯೋಗವನ್ನು ಕುರಿತಿರುವ ಪ್ರಥಮ ಪತ್ರ ಗ್ರಂಥವೆಂಬ ಅಭಿಪ್ರಾಯ ನಿರ್ಮಿತಿಗೆ ಕಾರಣವಾಗಿರುತ್ತದೆ.[೫] ವೇದದ ಈ ಮಂಡಲದ ಅಂದರೆ ಹತ್ತನೆಯ ಮಂಡಲದ ನೂರಾಮೂವತ್ತಾರನೆಯ ವಲ್ಲಿಯ ಮಂತ್ರದಲ್ಲಿ ಉಲ್ಲೇಖಿಸಲ್ಪಟ್ಟ ರುದ್ರ ಹಾಗೂ ಮುನಿಗಳು ಯೋಗಿಗಳಾಗಿರುತ್ತಾರೆ. ಯಜು

---

೧. Development of Religion In South India, P. 18 Nilakanth Shastri Oriental Longmans 1963.

೨. Religion of India p. 63. Berth

೩. ವಾಯುವೀಯ ಸಂಹಿತಾ ಪೂ. ಭಾ. ಪು ೩೫೧ ಅ. ೩೨ ಶ್ಲೋ. ೨. ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾ ಮೈಸೂರು. ೧೯೬೬.

೪. The Comparison of Religions, p. 38. R. C. Zachner Beacon Press 1962.

೫. History of Indian Philosophy, Vol. 2. P. 406 Dr. R. D. Ranade & Belvalkar, Bilvakunja Poona 1927.

ರ್ವೇದ, ಅರ್ಥರ್ವವೇದಗಳಲ್ಲಿ ಬರುವ ವ್ರಾತ್ಯನೇ ರುದ್ರನು. ಅವನೇ ಮಹಾಯೋಗಿ ಯಾಗಿರುತ್ತಾನೆ. ವ್ರಾತ್ಯ (ಶಿವ) ಯೋಗಿಗಳು ದೇಶದಾದ್ಯಂತ ಸಂಚರಿಸುತ್ತಿದ್ದರು.

They were yogis in the main and worshipped God in his aspect of Rudra. They seem to have adopted the dress of the nomads and even God was invested, by a sort of psychical transfer based on the concept of the atonement of the worshipper and the worshipped, with some of those trappings.[೧]

ಶಿವಯೋಗವು ಸುದೀರ್ಘ ಪಥಕ್ರಮಣಮಾಡುವಲ್ಲಿ ನಾಡಿನ ಅನೇಕ ಸಾಂಸ್ಕೃತಿಕ ಕ್ರಾಂತಿಯನ್ನು ಕಂಡಿದೆ ಹಾಗೂ ತನ್ನ ಸತ್ಪ್ರಭಾವವನ್ನು ಬೀರಿದೆ. ಬೌದ್ಧಯೋಗದ ಮೇಲೆ ವ್ರಾತ್ಯರೆಂದು ಹೆಸರಾದ ಶಿವಯೋಗಿಗಳ ಯೋಗದ ಪ್ರಭಾವವು ನಿಚ್ಚಳವಾಗಿ ಆಗಿರುತ್ತದೆ.

Such passages in the early literature afford an interesting exemplification of the growth of supernatural and mystical ideas. which led to the ultimate association of the Buddhistic System with Śaivism, writes Monier Williams in his book on Buddhism on page 239. ಈ ಮಾತನ್ನು ಬುದ್ಧಚರಿತವನ್ನು ಬರೆದ ಅಶ್ವಘೋಷನು ಉಲ್ಲೇಖಿಸುತ್ತಾನೆ. ಈ ಚರಿತ್ರೆಯಂ ಪ್ರಕಾರ ಶಿವಯೋಗಾಚಾರ್ಯರಲ್ಲಿ ಏಳನೇಯವನಾದ ಜೈಗೀಷವ್ಯನು ಬರೆದ ಧಾರಣಶಾಸ್ತ್ರವನ್ನು ಸ್ವತಃ ಬುದ್ಧನು ಅದರಲ್ಲಿ ಬರುವ ಕಠೋರವಾದ ಸನ್ಯಾಸ. ತಪಸ್ಸುಗಳಿಂದ ಅದನ್ನು ಬಿಟ್ಟು ಕೊಟ್ಟರೂ ಅವನ ನಂತರದ ಹೀನ-ಯಾನವು ಸ್ವೀಕರಿಸಿದ್ದೇ ಇದಕ್ಕೆ ಸಾಕ್ಷಿಯಾಗಿರುತ್ತದೆ. ಶಿವಯೋಗದ ಚರಿತ್ರೆಯಲ್ಲಿ ಸಂಸ್ಮರಣೀಯವಾದ ಚಾರಿತ್ರಿಕ ಘಟನೆಯಾಗಿರುವದು. ಸ್ವತಃ ಬುದ್ಧನೇ ಒಬ್ಬ ವ್ರಾತ್ಯನಾಗಿದ್ದನು.[೨] ಬುದ್ಧನು ಪ್ರತಿಪಾದಿಸಿರುವ ಕ್ಷಣಿಕವಾದಕ್ಕೆ ವ್ರಾತ್ಯರು ಪೂಜಿಸುತ್ತಿದ್ದ ರುದ್ರದೈವದ ಒಂದು ಸ್ವರೂಪ ( aspect ) ವೇ ಮೂಲಸ್ಫೂರ್ತಿಯಾಗಿತ್ತೆಂದು ತೋರುತ್ತದೆ. Śiva, The Rudra of the Vedas ( p. 9 ), ' represents.. the earliest and universal impression of Nature upon men— The impression of endless and pitiless change ".[೩] ಹೀಗೆ ಬುದ್ಧನ ಮೂಲ ತತ್ವಗಳಲ್ಲಿ ಒಂದಾದ ಕ್ಷಣಿಕತ್ವವು ಇಲ್ಲಿ ಇದೆ. ಇತ್ತ ಬ್ರಾಹ್ಮಣಗಳಲ್ಲಿ ಶಿವನು ಪ್ರಖ್ಯಾತ

೧. The Atharva-veda Vratyakanda, intro P. 12 Dr. Sampurnananda Ganesha Co. Private Ltd. Madras 1956.

೨. The family in which Buddha was born was really a Vratya family which was erroneously called Kastriya family in old literature. Buddhist Esoterism, p. 10. B. Bhattacharyya.

೩. Sir. A. Lyall, Asiatic Studies, Second Series, p. 306, as quoted by Dr. L. D. Barnet in Hinduism. p. 23.

ವಾಗಿ ಪೂಜಿಸಲ್ಪಟ್ಟಿರುವುದನ್ನು ಕಾಣುತ್ತೇವೆ. ಅವನು ಆರ್ಯಪೂರ್ವದ ದೇವತೆಯೆಂದು ಪಂಡಿತರ ಅಭಿಪ್ರಾಯ. ಬ್ರಾಹ್ಮಣಗಳ ಕಾಲದಲ್ಲಿ ಶೈವಧರ್ಮವು ರಾಷ್ಟ್ರೀಯ ಧರ್ಮವಾಗಿದೆ; ಶಿವನು ರಾಷ್ಟ್ರದೇವತೆ.[೯] ಹೀಗೆ ಶೈವಧರ್ಮದ ಗುರಿಯಾದ ಶಿವ–ಯೋಗವು ವೇದ, ಬ್ರಾಹ್ಮಣಗಳಲ್ಲಿ ವ್ಯಕ್ತವಾಗಿ ಉಪನಿಷತ್ತುಗಳಲ್ಲಿ ಬಹುಸ್ಫುಟವಾಗಿ ಶಾಸ್ತ್ರೀಯ ರೀತಿಯಿಂದ ಭೋದಿಸಲ್ಪಟ್ಟಿದೆ. ಉಪನಿಷದ್ವಿದ್ಯೆಯೇ ಈ ಪರಮ ಯೋಗ.

ಪರಮೋ ಯೋಗ ಪರ್ಯಂತೋ ಧರ್ಮಃ ಶ್ರುತಿ ಶಿರೋಗತಃ[೧೦]

ಪರಮಯೋಗವೆಂಬುದು ಉಪನಿಷತ್ತು ಕರೆಯುವ ಆಧ್ಯಾತ್ಮಯೋಗವಾಗಿರುವುದು. ಕಠ ಉಪನಿಷತ್ತು. . ಆಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷ ಶೋಕೌ ಜಹಾತಿ / i. 2. 12. ಇದರಂತೆಯೇ ಶ್ವೇತಾಶ್ವತರೋಪನಿಷತ್ತು ಕೂಡ ಸಂಬೋಧಿಸುತ್ತದೆ. ಯೋಗವನ್ನು ಈ ರೀತಿ

ಯದಾತ್ಮ ತತ್ವೇನ ತುಬ್ರಹ್ಮತತ್ವಂ
ದೀಪೋಪಮೇನೇಹ ಯುಕ್ತಃ ಪ್ರಪಶ್ಯೇತ್ ।
ಅಜಂ ಧ್ರುವಂ ಸರ್ವ ತತ್ತ್ವೈರ್ವಿಶುದ್ಧಂ
ಜ್ಞಾತ್ವಾದೇವಂ ಮುಚ್ಯತೇ ಸರ್ವಪಾಶೈಃ। I.15.

ಬೌದ್ಧಧರ್ಮದ ಪೂರ್ವದ ಉಪನಿಷತ್ತಾದ ಶ್ವೇತ್ವಾಶ್ವತರೋಪನಿಷತ್ತು ಶಿವಯೋಗ ಸಾಧನೆಯ ಅಂಗಗಳನ್ನು ಉಲ್ಲೇಖಿಸುವುದರ ಜೊತೆಗೆ ಅದರ ಸಿದ್ಧಿಗಳನ್ನೂ ಹೇಳಿಕೊಡುವುದು[೧೧] ಹೀಗೆ ಯೋಗಸಿದ್ಧಿಗಳನ್ನೂ ಅದರ ಪರಮಧ್ಯೇಯವಾದ ಶಿವಸಾಮ-ರಸ್ಯವನ್ನೂ ಅದು ತಿಳಿಸಿ ಪೂರ್ಣಯೋಗದ ಪರಿಪಕ್ವ ವಿಕಾಸ ಸ್ಥಿತಿಯನ್ನು ಬೋಧಿಸುವಂಥದಾಗಿದೆ.

ವೇದ ಹಾಗೂ ಉಪನಿಷತ್ತುಗಳಲ್ಲಿ ಯೋಗವು ಎರಡು ಹಂತಗಳಲ್ಲಿ ಬೆಳೆದಿರುವದು ಕಂಡುಬರುತ್ತದೆ. ಋಗ್ವೇದದ ಹತ್ತನೆಯ ಮಂಡಲದಿಂದ ಬ್ರಾಹ್ಮಣ ಮತ್ತು ಅರಣ್ಯಕಗಳಲ್ಲಿ ಯೋಗವು ಸಿದ್ಧಿಪರವಾಗಿರುತ್ತದೆ. ಮುಂದೆ ಉಪನಿಷತ್ತುಗಳಲ್ಲಿ ಯೋಗದ ದ್ವಿತೀಯ ಹಂತದಲ್ಲಿ ಸಿದ್ಧಿಗಳು ಗೌಣವಾಗಿರುತ್ತವೆ. ಶಿವ ಜೀವೈಕ್ಯವು ಯೋಗದ ಪರಮಗುರಿಯಾಗಿರುತ್ತದೆ ಆದ್ದರಿಂದ ಇದು 'ಆತ್ಮನಿಂದ ಬ್ರಹ್ಮವನ್ನು

---

೯. Thus as early as the age of Brahmanas The worship of Siva, whom some Scholars assume to be Pre–Aryan deity, makes its appearance and becomes part and parcel of the faith of the nation. Hinduism, Through Ages, p. 6. D. S. Sharma Bhavans Publications 1956.

೧೦. ವಾಯವೀಯ ಸಂಹಿತಾ, ಪೂರ್ವಭಾಗ. ಅಧ್ಯಾಯ ೩೨ ಶ್ಲೋಕ ೬ ಶ್ರೀಜಯಚಾಮರಾಜೇಂದ್ರ ಗ್ರಂಥಮಾಲಾ, ಮೈಸೂರ ೧೯೪೬

೧೧. ಶ್ವೇತಾಶ್ವತರೋಪನಿಷತ್ತು. ೨. ೧–೧೫.

ಕಾಣುವ ಯೋಗ 'ವಾಗಿರುತ್ತದೆ, ಇದನ್ನು ನಾವು ಯೋಗ ಚರಿತ್ರೆಯಲ್ಲಿ ಕಾಣುವ ವಿಕಾಸವೆಂದು ಸಂಬೋಧಿಸುತ್ತೇವೆ. ವೇದಯೋಗವು ರುದ್ರರೂಪದ ಒಂದಂ ಮುಖ ವಾದ ಅನಂತ ಚಲನೆಯನ್ನು ತೋರಿಸಿದರೆ ಉಪನಿಷತ್ ಯೋಗವು ಅವನ ಇನ್ನೊಂದು ಮುಖವನ್ನು ತೋರಿಸಿ ರುದ್ರಶಿವವೆಂದು ಸಂಬೋಧಿಸುತ್ತದೆ.

ಅಣು ವಿಭುವಾಗುವ ಸಾಮರ್ಥ್ಯಹೊಂದುವದು ಸಾಧ್ಯವೆಂದು ವೇದದ ಮುನಿ (ಶಿವಯೋಗಿ)ಗಳು ಕಂಡುಕೊಂಡರು. ಉಪನಿಷತ್ತಿನ ಮುನಿಗಳು ಅಣುವು ವಿಭುವೂ ಆಗುವದು ಮತ್ತು ಪ್ರಭುವೂ ಆಗುವದು ಎಂದು ಅರಿತುಕೊಂಡರು. ಪ್ರಪಂಚತ್ವ, ಪರಬ್ರಹ್ಮತ್ವಗಳ ಸಮರಸೀಕರಣವನ್ನು ಮತ್ತು ಭಕ್ತಿಯಿಂದ ಸಾಕ್ಷಾತ್ಕಾರವೆಂಬ ಉಪಾಯವನ್ನು ಉಪನಿಷತ್ತು ಸಾಧಿಸಿ ಬೋಧಿಸಿತು. ಆಶ್ರಮವ ನಿರಾಕರಿಸಿ ಅತ್ಯಾ ಶ್ರಮವ ಸ್ವೀಕರಿಸಿತು.[೧೨] ಇಂಥ ವಿದ್ಯೆಗೆ ಮೂಲವಾದುದು ಶ್ವೇತಾಶ್ವತರೋಪನಿಷತ್ತು. ಇದು ಸರ್ವೋನ್ನತವಾದ ಯೋಗದರ್ಶನವಾಗಿರುತ್ತದೆ. ಶ್ವೇತಾಶ್ವತರೋಪನಿಷತ್ತು ಅತ್ಯಾಶ್ರಮವೆಂಬ ಪವಿತ್ರಸ್ಥಿತಿಯನ್ನು ಹೊಂದಿದ ಶ್ವೇತಾಶ್ವತರ ಮುನಿಯು ತನ್ನಂಥ ಮುನಿಗಳು ಇದ್ದರೆಂದು ಹೇಳಿರುವುದನ್ನು ಉಲ್ಲೇಖಿಸುತ್ತದೆ. ಶೈವಶಾಸ್ತ್ರವು ನಿಗಮ ಹಾಗೂ ಆಗಮಗಳೆಂಬ ಇತ್ತೆರನಾದ ಶಾಖೆಗಳಲ್ಲಿ ಬೆಳೆದು ಬಂದಿತು. ಶೈವೋಪನಿಷ ತ್ತುಗಳು ಪಾಶುಪತಯೋಗವನ್ನು ಬೋಧಿಸಿದವು. ಶೈವವೇ ಪಾಶುಪತವಾಯಿತು. ಶಿವಯೋಗವು ಪಾಶುಪತ ಯೋಗವೆಂದು ಪರ್ಯಾಯ ಪದವಾಯಿತು. ಅತ್ಯಾಶ್ರಮ ವೆಂಬ ಶಿವಪಥಕ್ಕೆ ಶ್ವೇತಾಶ್ವತರವು ಆಕರಗ್ರಂಥವಾದಂತೆ ಪಾಶುಪತ ಯೋಗ ಬೋಧೆಗೆ ಅಥರ್ವಶಿರೋಪನಿಷತ್ತು ಆಕರಗ್ರಂಥವಾಯಿತು. ಇವೆರಡೂ ಅಂತರ್ಲ ಕ್ಷ್ಯಾನುಸಂಧಾನ ಬೋಧಪರವಾಗಿವೆ. ಇದೇ ಜ್ಞಾನಯೋಗ. ಇದು ಪರಾಯೋಗ. ಸಿದ್ಧಿಪರವಾದುದೇ ಅಪರಾಯೋಗ. ಹೀಗೆ ಅಪರಾ, ಪರಾಯೋಗಗಳು ಅನುಕ್ರಮ ವಾಗಿ ವೇದೋಪನಿಷತ್ತುಗಳಲ್ಲಿ ಕಂಡು ಬರುತ್ತವೆ.[೧೩] ಆಗಮಗಳಲ್ಲಿ ಈ ಯೋಗವು ಸಾಂಗೋಪಾಂಗವಾಗಿ ವಿವರಿಸಲ್ಪಟ್ಟಿರುವುದೆಂದು ತಿಳಿದು ಬರುತ್ತದೆ.[೧೪]

ಶೈವಾಗಮೈಸ್ತು ಸಂಪನ್ನಃ ಸಹಾಂಗೋಪಾಂಗ ವಿಸ್ತರಃ
ತತ್ಸಂಸ್ಕಾರಾಧಿಕಾರ್ಯೈಶ್ಚ ಸಮ್ಯಗೋವೋಪ ಬೃಂಹಿತಃ

ಇದರಿಂದ ವಿಶೇಷಸಂಗತಿಗಳ ವೈಶಿಷ್ಟ್ಯವು ತಿಳಿವುದು. ಆದುದರಿಂದಲೇ ವೇದೋಪ ನಿಷತ್ತುಗಳು ಬೋಧಿಸುವ ಅಪರಾ, ಪರಾಯೋಗಗಳಿಂದ ವಿಶಿಷ್ಟರೀತಿಯಲ್ಲಿ ಭಿನ್ನವಾ ಗಿರುವದು ಆಗಮ ಯೋಗವು. ಇದಕ್ಕೆ ಕಾರಣವಿಲ್ಲದಿರಲು ಸಾಕು. ಸಾಧಕನ ಶಕ್ತಿ

---

೧೨. ಅದೇ ೬. ೧೮.
೧೩. ವಾಯುವೀಯ ಸಂಹಿತಾ, ಪೂ. ಭಾ. ಅಧ್ಯಾಯ. ೩೨. ಶ್ಲೋ. ೬.
ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾ ಮೈಸೂರು ೧೯೪೬.
೧೪. ಅದೇ, ಶ್ಲೋಕ ೧೦.

ಯನ್ನು ಮುಂದಿಟ್ಟುಕೊಂಡು ಸಾಧನಮಾರ್ಗಗಳ ಬೋಧೆಯಿರುತ್ತದೆ. ಅಪರ ಯೋಗವು ಸಿದ್ಧಿಗಳನ್ನುಂಟುಮಾಡುವದರಿಂದ ಬಹುಪುರಾತನ ಕಾಲದಿಂದ ಅಂದರೆ ಋಗ್ವೇದದ ರುದ್ರ ಮತ್ತು ಮುನಿಗಳಿಂದ ಮತ್ತು ಯಜುರ್ವೇದದ, ಅಥರ್ವ ವೇದದ ವ್ರಾತ್ಯರಿಂದ ಜನಪ್ರಿಯಗೊಳಿಸಲ್ಪಟ್ಟಿತು. ಋಗ್ವೇದದ ಯೋಗಸಾಧಕರ ಪರಮ ಮೂರ್ತಿಯಾದ ರುದ್ರನು ಇಲ್ಲಿ ಪರಬ್ರಹ್ಮನಾಗಿರುವುದು ಯೋಗಪರಂಪರೆ ಯಲ್ಲಿ ಒಂದು ಹೊಸ ವಿಚಾರದ ಅಸ್ತಿತ್ವಕ್ಕೆ ಅವಕಾಶವನ್ನು ಕೊಟ್ಟಿತು. ಅದೇ ನಂದರೆ ಮುಂದಾಳುವೇ ಮಹಾದೇವನೆಂಬುದು. ಅಪರಾಯೋಗ ಸಾಧಕರನ್ನು ಆಕರ್ಷಿಸಿತು. ಪರಾಯೋಥವು ಕೆಲವೇ ಮಹಾತ್ಮರಿಗೆ ಪ್ರಿಯರಾಗಿ ರಹಸ್ಯವಿದ್ಯೆ ಯಾಯಿತು. ಇವೆರಡೂ ಯೋಗಗಳನ್ನು ಸೇರಿಸಿಕೊಂಡು ಶಿವಯೋಗವು ಬೆಳೆ ಯಿತು. ಇವೆರಡು ಶಿವಯೋಗದ ಅಂಗಗಳಾಗಿರುವುದು ಯೋಗಪಾದದಲ್ಲಿಯ ವಿವರಣೆಯಿಂದ ತಿಳಿಯುವುದು :[೧೫]

ಸತುಪಂಚವಿಧೋ ಜ್ಞೇಯ : ಪಂಚಭಿಃಕ್ರಮಾತ್ ।
ಕ್ರಿಯಾತಪೋ ಜಪ ಧ್ಯಾನಾತ್ಮಭಿರನುತ್ತರೈ : ॥

ಯೋಗದ ಈ ಪಂಚ ಅಂಗಗಳ ಗುರಿಯೇನೆಂಬುದನ್ನು ವಿವರಿಸುವಲ್ಲಿ ಪೂರ್ವದ ಯೋಗಾಚಾರ್ಯರಾದ ಜೈಗೀಷವ್ಯ ಮೊದಲಾದವರಿಂದ ಬೋಧಿಸಲ್ಪಟ್ಟ ಧಾರಣಶಾಸ್ತ್ರ ಮೊದಲಾದವುಗಳನ್ನರಿತಂಥ ಪಾತಂಜಲಿಯೆಂಬ ಶಿವಯೋಗಿಯು ಹೀಗೆ ಸೂತ್ರರೂಪ ದಲ್ಲಿ ಹೇಳುತ್ತಾನೆ ; ಯೋಗಶ್ಚಿತ್ತವೃತ್ತಿ ನಿರೋಧಃ ೧-೨ ಇದನ್ನೇ ಆಗಮಶಾಸ್ತ್ರ ವನ್ನಾಧರಿಸಿ ಬರೆಯಲ್ಪಟ್ಟ ವಾಯುವೀಯ ಸಂಹಿತೆಯು ಹೇಳುವುದು ಹೀಗೆ:[೧೬]

ನಿರುದ್ಧ ವೃತ್ಯಂತರಸ್ಯ ಶಿವೇ ಚಿತ್ತಸ್ಯ ನಿಶ್ಚಲಾ ।
ಯಾವೃತ್ತಿ : ಸಾ ಸಮಾಸೇನಯೋಗಃ...॥

ಈ ಚಿತ್ತವೃತ್ತಿಯನ್ನು ಸಾಧಿಸುವಲ್ಲಿ ಪಂಚವಿಧಗಳಿರುವದು ಕಂಡುಬರುತ್ತದೆ. ಅವು ಗಳು ಚಿತ್ತವೃತ್ತಿಯನ್ನು ನಿರೋಧಿಸುವದರ ಜೊತೆಗೆ ಅವುಗಳಿಂದುಂಟಾಗುವ ಅತಿ ನೈಸರ್ಗಿಕ, ನೈಸರ್ಗಿಕ ಪರಿಣಾಮಗಳೂ ಇನ್ನೊಂದು ಫಲವೆಂಬುದು ಗಮನಾರ್ಹ ವಾದ ವಿಷಯವಾಗಿರುವದು. ಇದು ಅಪರಾಯೋಗದ ಪ್ರಯೋಜನ. ಇದನ್ನು ಹೀಗೆ ಕರೆದಿದ್ದಾರೆ ;[೧೭]

ಮಂತ್ರಯೋಗಃ ಸ್ಪರ್ಶಯೋಗೋ ಭಾವಯೋಗಸ್ತಥಾಪರಃ ।
ಅಭಾವಯೋಗಃ ಸರ್ವೇಭ್ಯೋ ಮಹಾಯೋಗಃ

---

೧೫. ವಾಯುವೀಯ ಸಂಹಿತಾ, ಪೂ. ಭಾ. ಅಧ್ಯಾಯ. ೩೨. ಶ್ಲೋ. ೬.
೧೬. ವಾಯುವೀಯ ಸಂಹೀತಾ, ಉ. ಭಾ., ಅಧ್ಯಾಯ ೩೭. ಶ್ಲೋ. ೨
ಶ್ರೀಜಯಚಾಮರಾಜಗ್ರಂಥಮಾಲೆ, ಮೈಸೂರ. ೧೯೪೬.
೧೭. ಅದೇ; ಅಧ್ಯಾಯ ೩೭. ಶ್ಲೋಕ. ೭.

ಇದೇ ಮಾತನ್ನು ಷಟ್‌ಶಾಸ್ತ್ರಕರ್ತೃವೆಂದು ಪ್ರಸಿದ್ಧ ಆಗಮಾಚಾರ್ಯರಾದ ನಿಜಗುಣ ಶಿವಯೋಗಿಗಳು ಕೈವಲ್ಯ ಪದ್ಧತಿಯಲ್ಲಿ ಹೇಳಿ ಇವೇ ಯೋಗಾಂಗಗಳೈದನ್ನು ಶಬ್ದಶಃ ಪುನರುಚ್ಚರಿಸುತ್ತಾರೆ. ಶಿವಯೋಗದ ಐದಂಗಗಳಿವು ಎಂಬುದನ್ನು ಲಕ್ಷದಲ್ಲಿಟ್ಟುಕೊಳ್ಳದವರು ಒಂದೊಂದನ್ನು ಅನುಷ್ಠಾನ ಮಾಡುವುದರಿಂದ ಹೊಂದುವ ಸಿದ್ಧಿಗಳಲ್ಲಿ ತೃಪ್ತಿ ಹೊಂದಿ ಪರಮಗುರಿಯನ್ನು ಸಾಧಿಸದೇ ಹೋಗಿರುವುದನ್ನು ವಚನಕಾರರು ಕಟುವಾಗಿ ಟೀಕಿಸಿರುವುದನ್ನು ನಾವು ನೋಡುತ್ತೇವೆ.

ಕರ್ಮಕಾಂಡ ಯೋಗಂಗಳೆಲ್ಲ ಭವದ ತಕ್ಕಗೆ ಒಳಗು೧೮
ಕಾಯಾನುಭಾವಿಗಳೆಲ್ಲರು ಕಾಯದಲ್ಲಿಯೇ ಮುಕ್ತರು
ಜೀವಾನುಭವಿಗಳೆಲ್ಲ ಜೀವದಲ್ಲಿಯೇ ಮುಕ್ತರು
ಪವನಾನುಭವಿಗಳೆಲ್ಲ ಪವನದಲ್ಲಿಯೇ ಮುಕ್ತರು... ಕೂಡಲಚನ್ನಸಂಗಮದೇವಾ೧೯
ಹಠಯೋಗ ಲಂಬಿಕೆಯೆಂದು ಆಕುಂಚನವೆಂದು
ವಜ್ರಿ ಅಮರಿಯ ಕಲ್ಪವೆಂದು....ಅನ್ನ ಬಿಟ್ಟೆವೆಂಬ ಭೂತಚೇಷ್ಟಕರಲ್ಲ ಶರಣರು
ಇವೆಲ್ಲವು ಕಾಕು ಸಟೆ ಭ್ರಾಂತೆಂದು ತಿಳಿದು
ನಿರ್ಭರ ನಿಜದಿ ನಿಂದರು ಗುಹೇಶ್ವರಾ ನಿಮ್ಮ ಶರಣರು ಅಗ್ರಗಣ್ಯರು೨೦

ಇವೆಲ್ಲ ಅಂದರೆ ಯೋಗದ ಅಂಗಗಳಾದ ಒಂದೊಂದೇ ಯೋಗಗಳು ಒಂದು ಯೋಗದ ಅಂಗಗಳೆಂದು ಅರಿದು ಆಚರಿಸದಿರುವದು ಒಂದು ಯೋಗದ ಮೂಲಭೂತ ವಿಚಾರ, ಅದರ ಸಮಗ್ರತೆಯ ಅಲಕ್ಷ್ಯಗಳ ಕಡೆಗೆ ಗಮನಕೊಡದಿರುವದು ಒಂದು ಮಹಾದೋಷವಾಗಿರುತ್ತದೆಂಬುದು ವಿಚಾರಣೀಯವಾಗಿರುವದೆಂಬುದನ್ನು ಅರಿಯದೇ ಹೋದರೆ ಶಿವಶರಣರು ಆಯಾ ಯೋಗಗಳನ್ನು ಸ್ವತಂತ್ರವಾಗಿ ಅನುಷ್ಠಾನ ಮಾಡುವವರನ್ನು ಖಂಡಿಸುವದಕ್ಕೆ ಅನೇಕ ರೀತಿಯಲ್ಲಿ ಅರ್ಥಮಾಡಲು ಅವಕಾಶವಿರುವದು.

ಶಿವಯೋಗ ಚರಿತ್ರೆಯಲ್ಲಿ ಇನ್ನೊಂದು ಮಹತ್ವಾದನೆಯ ಅಂಶವೆಂದರೆ ಶಿವಯೋಗದ ಆಚರಣೆಯಲ್ಲಿ ಧಾರ್ಮಿಕ ಕ್ರಿಯೆಗಳ ಆಚರಣೆಗೆ ಅವಕಾಶವು ದೊರೆತಿರುವಂಥದು. ಇದರಿಂದ ಯೋಗವು ಧಾರ್ಮಿಕ ಕ್ರಿಯಾಪೂರ್ಣವಾಗಿ ಪೂರ್ಣಯೋಗದಲ್ಲಿ ಪರಾವರ್ತನೆಯಾಗಿರುವದನ್ನು ವಾಯುವೀಯ ಸಂಹಿತೆಯು ಉಲ್ಲೇಖಿಸಿರುತ್ತದೆ. ಇದರ ಸತ್ಪರಿಣಾಮವೇನೆಂಬುದು ತಕ್ಷಣ ಕಂಡು ಬರದೇ ಹೋಗಿರಬಹುದು. ಆದರೆ ಅದರ ಫಲವನ್ನು ನಾವು ಹನ್ನೆರಡನೆಯ ಶತಮಾನದ ಶಿವಶರಣರು ಆಚರಿಸಿರುವಲ್ಲಿ ಬಹು ಸ್ಪಷ್ಟವಾಗಿ ಕಾಣುತ್ತೇವೆ. ಇದು ತಂತ್ರಯೋಗ, ವೈದಿಕಯೋಗದ ಸಮನ್ವಯವಾಗಿರುವುದು. ಆದುದರಿಂದ ಇದರ ತಾತ್ವಿಕ ವಿಶ್ಲೇಷಣೆ ಮಾಡಿ ಅರಿತುಕೊಳ್ಳಬಹುದು.

---

೧೮. ಶೂನ್ಯಸಂಪಾದನೆ, III ೮೯.

೧೯. ಶೂನ್ಯಸಂಪಾದನೆ, X ೩೨ ಆದವಾನಿಮಠ ೧೯೫೮.

೨೦. ಗಣಭಾಷಿತ ರತ್ನಮಾಲೆ, ಪು. ೧೩೨. ವ. ೩. ಮುರುಘಾಮಠ, ಧಾರವಾಡ ೧೯೪೪

ಶಿವಯೋಗದ ಪರ್ಯಾಯಪದ ಲಿಂಗಾಂಗ ಸಾಮರಸ್ಯ ಅಥವಾ ಷಡಂಗಯೋಗ 'ವೆಂದು ಹೇಳುತ್ತಾರೆ. ಷಟ್‌ಸ್ಥಲ ಶಾಸ್ತ್ರವಲ್ಲಿ ಉಪನಿಷತ್ತುಗಳಲ್ಲಿ ಕೂಡಾ ಷಡಂಗಯೋಗವೊಂದಿರುವುದನ್ನು ಡಾ. ಡುಯಿಸನ್ ಎಂಬ ಶಾಸ್ತ್ರಜ್ಞನು ಉಲ್ಲೇಖಿಸಿರುವನು. ಲಿಂಗಾಂಗ ಸಾಮರಸ್ಯ ಸ್ವರೂಪದ ಷಡಂಗಯೋಗಕ್ಕೂ ಇದಕ್ಕೂ ಇರುವ ಅಂತರ ಬೇರೆ. ಆದ್ದರಿಂದ ಇವೆರಡು ಪರ್ಯಾಯಪದಗಳಾಗಿರುವುದಿಲ್ಲ. ಯೋಗವಿಲ್ಲದ ಭಾರತೀಯ ದರ್ಶನವಿಲ್ಲ. ಯೋಗವು ಆಯಾ ದರ್ಶನದ ಪ್ರಾಯೋಗಿಕ ವಿಭಾಗವಿದ್ದಂತೆ. ದರ್ಶನಗಳನ್ನು ಅನುಭವದಲ್ಲಿ ಸಿದ್ಧಿಸಿಕೊಳ್ಳುವ ವೈಜ್ಞಾನಿಕ ವಿಧಾನ ಯೋಗವಾಗಿರುವದೆಂಬುದನ್ನು ಭಾರತೀಯ ದರ್ಶನಗಳ ವಿದ್ಯಾರ್ಥಿಗಳಿಗೆ ನಿಚ್ಚಳವಾದ ಮನವರಿಕೆಯಾಗಿರುತ್ತದೆ. ದರ್ಶನದ ನಿರ್ಣಯಗಳನ್ನು ಯೋಗವು ಸಿದ್ಧಿಸಿ ತೋರುವುದರಿಂದ ದರ್ಶನಗಳ ಅಂತಿಮ ಗುರಿಯೇ ಯೋಗದ ಗುರಿಯಾಗಿರುತ್ತದೆ.

ಆತ್ಮ ಪರಮಾತ್ಮಗಳು ನಿರ್ಗುಣ. ಆದರೆ ನ್ಯಾಯದಂತೆ ಜಡವಲ್ಲ ಅದ್ವೈತದಲ್ಲಿ. 'ಆತ್ಮನ' 'ನಾನೆಂಬು 'ದನ್ನು ಅಜ್ಞಾನವೆಂದು ತೋರಿ 'ನಾನು' 'ನಿನ'ಗೆ ಅವಕಾಶ ಕೊಡದಂಥ ಜ್ಞಾನಾನುಭವವೇ ಆತ್ಮ ಪರಮಾತ್ಮಯೋಗ ಅದ್ವೈತದಲ್ಲಿ. ಆತ್ಮ ಪರಮಾತ್ಮನ ಸಂಬಂಧದ ಅರಿವಾಗಿ ಪರಮಾತ್ಮನಲ್ಲಿ ಸಾಯುಜ್ಯರೂಪ ಸಂಯೋಗವೇ ಯೋಗ ವಿಶಿಷ್ಟಾದ್ವೈತದಲ್ಲಿ. ಇವೆರಡೂ ಸಂನ್ಯಾಸಪರ. ಬೌದ್ಧವು ಕೂಡ ತಪೋ ಪ್ರವೃತ್ತಿಪರ ಜೈನದಂತೆ. ಜೈನದರ್ಶನದಲ್ಲಿ ಕೇವಲತ್ವವೇ ಯೋಗ. ಕರ್ಮನಿರ್ಲೇಪತ್ವ ಮುಖ್ಯ.ಕರ್ಮ ನಿರ್ಲೇಪವಾದುದೇ ಕೇವಲತ್ವಸಿದ್ಧಿ. ಬೌದ್ಧದರ್ಶನದಲ್ಲಿ ಯೋಗವೆಂದರೆ ನಿವೃತ್ತಿಯಿಂದ ಪ್ರವೃತ್ತಿ ಸಾಧನೆ. ಪ್ರವೃತ್ತಿಯಿಂದ ತಥಾಗತತ್ವ ಅದುವೇ ಪ್ರಕೃತಿ ಪುರುಷರ ಸಂಯೋಗತ್ವ ಸಿದ್ಧಿ ಯೋಗ. ಷಟ್‌ಸ್ಥಲವೂ ಈ ಅರ್ಥದಲ್ಲಿ ಶಿವಶಕ್ತಿಯರ ಸಂಯೋಗವಾಗಿದೆ. ಸಾಂಖ್ಯ ಯೋಗದಲ್ಲಿ ಪ್ರಕೃತಿ ಪುರುಷರ ವಿಯೋಗವೇ ಯೋಗವಾಗಿರುವಂತೆ ಈ ಸಂಯೋಗತ್ವ ಸಿದ್ಧಿಯಿಂದ ಲಿಂಗಸಂಸಾರವೇ ಹೊರತು ಅಂಗಸಂಸಾರವಲ್ಲ ಕರ್ಮ ನಿರ್ಲೇಪಪರ ಪ್ರವೃತ್ತಿಯಿದು. ಶರಣ ಎಂತಿರ್ದಡಂತೆ ಶಿವನು. ಪ್ರಪಂಚವೇ ಪರಬ್ರಹ್ಮ ಹೊರತು ಮಿಥ್ಯೆಯಲ್ಲ. ಇದು ವೀರಶೈವ ಷಡಂಗಯೋಗ ಅಥವಾ ಶಿವಯೋಗ.

ಇನ್ನೊಂದು ರೀತಿಯಲ್ಲಿ ಅಂದರೆ ತಂತ್ರದೃಷ್ಟಿಯಿಂದ ವಿಚಾರವನ್ನು ಕೂಡ ಶಿವಶರಣರು ಯೋಗಶಾಸ್ತ್ರದ ವಿಶ್ಲೇಷಣೆ ಮಾಡಿದ್ದಾರೆ. ಇದರಲ್ಲಿ ಕೂಡ ಇವರು ಮುಖ್ಯವಾದ ಆರು ಆಧಾರಗಳನ್ನು ಹೆಸರಿಸಿ ಅವುಗಳಿಗೆ ಷಟ್‌ಸ್ಥಲಗಳೆನ್ನುತ್ತಾರೆ. ಶರೀರದಲ್ಲಿ ಊರ್ಧ್ವ ಹೃದಯ; ಮಧ್ಯ ಹೃದಯ ಮತ್ತು ಅಧೋಹೃದಯ ಎಂದು ಮೂರು ಭಾಗಗಳನ್ನು ಮಾಡುತ್ತಾರೆ. ಈ ಎಲ್ಲ ಆಧಾರಗಳಿಗೆ, ಹೃದಯಗಳಿಗೆ ಆಧಾರ ವೊಂದಿದೆಯೆಂದು ತಿಳಿಸುತ್ತಾರೆ. ಈ ಆಧಾರವೇ ಆತ್ಮ. ಹನ್ನೊಂದು ಆಧಾರಗಳನ್ನು ಸಹ ವೀರಶೈವರು ಹೇಳುತ್ತಾರೆ. ಇಲ್ಲಿರುವ ಶಕ್ತಿ ಪ್ರಾಣಶಕ್ತಿ. ಈ ಪ್ರಾಣ ಶಕ್ತಿ ಈ ಎಲ್ಲ ಆಧಾರಗಳಲ್ಲಿರುವ ಲಿಂಗಗಳಲ್ಲಿ ಸಮರಸವಾಗುತ್ತ ಹೋಗಿ ಕೊನೆಗೆ ಕೊನೆಯ

ಲಿಂಗದಲ್ಲಿ ಲೀನವಾಗಿ ಬಿಡುತ್ತದೆ. ಆಗ ಪ್ರಾಣವು ಲಿಂಗವಾಗಿ ಬಿಡುವುದರಿಂದ ಪ್ರಾಣಲಿಂಗವಾಗಿ ಬಿಡುವನು. ಅವನೇ ಜಂಗಮಲಿಂಗ, ಜ್ಞಾನಲಿಂಗ, ಪರಶಿವಲಿಂಗ.

ವೀರಶೈವರ ಪ್ರಾಣಲಿಂಗಯೋಗದಲ್ಲಿ ಪ್ರಾಣದ ಜಾಗ್ರುತಿಯು ಕಣ್ಣಿನಿಂದ ಆಗುವುದು. ಇವರ ಅಸಾಮಾನ್ಯವಾದ ರೀತಿ. ಕಣ್ಣಿಗೂ ಹೃದಯಕ್ಕೂ ನೇರವಾದ ಸಂಬಂಧವಿರುವುದರಿಂದ ಪ್ರಾಣಲಿಂಗ ಜಾಗೃತಿಯು ಮಧ್ಯ ಹೃದಯದಲ್ಲಿಯೇ ಸಂಭವಿಸುವುದು. ಇದು ಈ ಯೋಗದ ವೈಶಿಷ್ಟ್ಯ. ನಾಸಿಕದಿಂದ ಸಂಭವಿಸುವ ಜಾಗೃತಿಗಿಂತ ಇದರಿಂದಾಗುವ ಪ್ರತಿಕ್ರಿಯೆಗಳು ಭಿನ್ನ ಹಾಗೂ ಮಹತ್ವಪೂರ್ಣ ವಾದವುಗಳು. ಇಲ್ಲಿಯೇ ಸಕಲ ನಿಷ್ಕಲತ್ವಸಿದ್ಧಿ. ನಿಷ್ಕಲಕ್ಕೂ, ಸಕಲಕ್ಕೂ ಇದು ಕೇಂದ್ರ ಸ್ಥಾನ. ಸಕಲದ ಭೀಕರತ್ವ. ನಿಷ್ಕಲದ ಅಸಾಧ್ಯತ್ವಗಳೆರಡನ್ನೂ ಇಲ್ಲಿಂದ ಅರಿತುಕೊಳ್ಳು ವದರಿಂದ ಸಾಧಕ ಜೀವನದ ಮಾರ್ಗ ಸುಗಮವಾಗುವದು.

# ಅರ್ಪಣಯೋಗ

ಡಾ. ಟಿ. ಜಿ. ಸಿದ್ದಪ್ಪಾರಾಧ್ಯ

ವೀರಶೈವ ಧರ್ಮದಲ್ಲಿ ಗುರುಲಿಂಗಜಂಗಮರ ಅರ್ಚನೆಗೆ ಎಷ್ಟು ಮಹತ್ವವಿದೆಯೋ ಅಷ್ಟೇ ಮಹತ್ವವು ಅರ್ಪಣಕ್ಕೂ ದೊರೆತಿದೆ. ಅರ್ಪಣವೆಂದರೆ ತನ್ನಲ್ಲಿರುವ ಭೋಜ್ಯವಸ್ತುಗಳನ್ನು ಪರಮಾತ್ಮನಿಗೆ ಭಕ್ತಿಯಿಂದ ಸಮರ್ಪಿಸಿ ಅವನ್ನು ಅವನೊಡನೆ ಸಮರಸವಾಗಿ ಭೋಗಿಸುವದೆಂದು ಅರ್ಥ. ಸಾಧಕನು ತನ್ನ ದೇಹದ ರಕ್ಷಣೆಗಾಗಿ ಪ್ರತಿದಿನವೂ ಉಪಯೋಗಿಸುವ ಆಹಾರ ಪದಾರ್ಥಗಳನ್ನು ಆಗಾಗಲೇ ಪರಮಾತ್ಮನಿಗೆ ಭಕ್ತಿಯಿಂದ ಅರ್ಪಿಸಿದರೆ ಅವನು ಅವನ್ನು ಸಂತೋಷದಿಂದ ಸ್ವೀಕರಿಸಿ ಭೋಗಿಸುವನು.

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೆ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ ॥

ಹೀಗೆ ಗೀತೆಯಲ್ಲಿ ಸಾಧಕನು ನಿರ್ಮಲದಿಂದ ಮನಸ್ಸಿನಿಂದ ಕೊಡುವದೆಲ್ಲವನ್ನು ಪರಮಾತ್ಮನು ಸಂತೋಷದಿಂದ ಸ್ವೀಕರಿಸುವುದಾಗಿ ಅವನಿಗೆ ಆಶ್ವಾಸನವನ್ನಿತ್ತಿರುವನು. ನಾವು ಶ್ರದ್ಧೆಯಿಂದ ಕೊಡುವುದನ್ನು ಅವನು ವಾತ್ಸಲ್ಯದಿಂದ ಒಪ್ಪಿಸಿಕೊಂಡು ಭೋಗಿಸುವನು. ನಮ್ಮಲ್ಲಿ ಇರುವದೆಲ್ಲವೂ ಅವನಿಗೆ ಅರ್ಪಿಸಲಿಕ್ಕಾಗಿಯೇ ನಮಗೆ ಬಂದಿದೆ. ಇದೆಲ್ಲವನ್ನು ನಮ್ಮ ಭೋಗಕ್ಕಾಗಿ ನಾವು ದುಡಿದಿರುವೆವೆಂದು ನಾವು ಭಾವಿಸಿ ತಪ್ಪು ದಾರಿಯಲ್ಲಿ ನಡೆಯುತ್ತಿರುವೆವು.

" ತೇನ ತ್ಯಕ್ತೇನ ಭುಂಜೀಥಾಃ "

ಎಂದು ಈಶಾವಾಸ್ಯೋಪನಿಷತ್ತು ನಮ್ಮನ್ನು ಈ ಬಗ್ಗೆ ಎಚ್ಚರಿಸುತ್ತಲಿದೆ. " ನಿನ್ನಲ್ಲಿ ಇರುವದನ್ನು ನೀನು ಶುದ್ಧವಾದ ಮನಸ್ಸಿನಿಂದ ಪರಮೇಶ್ವರನಿಗೆ ಕೊಡು ; ಹಾಗೆ ಕೊಟ್ಟರೆ ಅವನು ಅದನ್ನು ಸಂತೋಷದಿಂದ ಭೋಗಿಸುವನು. ಕೊಡುವಾಗ ನಿನ್ನ ಭಾವನೆ ನಿರ್ಮಲವಾಗಿರಬೇಕು. ಕಣ್ಣಿನಲ್ಲಿ ವ್ಯಾಮೋಹ ಹುಟ್ಟುವ ಮುನ್ನ ನಾಲಿಗೆ

ಯಲ್ಲಿ ಅಭಿರುಚಿ ಹುಟ್ಟುವ ಮುನ್ನ ಭೋಜ್ಯ ವಸ್ತುವನ್ನು ಪರಶಿವನಿಗೆ ಅರ್ಪಿಸುವ ದಾದರೆಯೇ ಅವನು ಅದನ್ನು ಸ್ವೀಕರಿಸುವನು. ಯಾರಿಗಾದರೂ ಒಂದು ಪದಾರ್ಥ ವನ್ನು ದಾನಮಾಡುವಾಗಲೂ

"ಇದಂ ತುಭ್ಯಂ ಸಂಪ್ರದದೇ ನ ಮಮ"

ಎಂದು ಹೇಳಿ ಕೊಡುತ್ತೇವೆ. "ಇದನ್ನು ನಿನಗೆ ಕೊಡುತ್ತೇನೆ. ಇನ್ನು ಇದು ನನ್ನ ದಲ್ಲ" ಎಂದು ಎರಡು ವೇಳೆ ಹೇಳಿ ಒಂದು ಉದ್ಧರಣೆ ನೀರನ್ನು ಹಾಕಿಕೊಡುತ್ತೇವೆ, ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಗೆ ಕೊಡುವಾಗಲೇ ಇಷ್ಟು ಶುದ್ಧ ಭಾವನೆ ಆವಶ್ಯಕ ವೆನಿಸಿರುವಾಗ ತತ್ವಸ್ವರೂಪಿನಿಂದ ಪರಮೇಶ್ವರನಿಗೆ ಅರ್ಪಿಸುವಾಗ ಸಾಧಕ ವ್ಯಕ್ತಿಯ ಮನಸ್ಸು ಎಷ್ಟು ಶುದ್ಧವಾಗಿರಬೇಕೆಂಬ ಬಗ್ಗೆ ಹೇಳುವದೇನಿದೆ. ಹೀಗೆ ಶುದ್ಧ ಭಾವನೆ ಯಿಂದ ಭೋಜ್ಯ ವಸ್ತುಗಳನ್ನು ಪರಮಾತ್ಮನಿಗೆ ಅರ್ಪಿಸುವುದೇ ಅರ್ಪಣಯೋಗವೆನಿ ಸುವದು. ಯೋಗವೆಂದರೆ ಮಾಡಬೇಕಾದ ಕರ್ಮದಲ್ಲಿ ಅಡಗಿರುವ ಕೌಶಲ; ನೈಪುಣ್ಯ; ವಿವೇಚನೆ; ಅರ್ಪಿಸುವಾಗ ತನ್ನಲ್ಲಿ ತೋರುವ ಸದ್ಭಾವನೆ ಈ ಬಗೆಯ ರಹಸ್ಯವನ್ನು ಅರಿಯದೆ ಎಷ್ಟನ್ನು ಕೊಟ್ಟರೂ ಸುಖವಿಲ್ಲ; ಶಾಂತಿಯಿಲ್ಲ; ನೆಮ್ಮದಿಯಿಲ್ಲ; ಸಮಾಧಾನ ವಿಲ್ಲ. ಆದಕ್ಕಾಗಿಯೇ ಅರ್ಪಣಯೋಗವನ್ನು ಇಲ್ಲಿ ವಿವೇಚಿಸಲಾಗಿದೆ. ಆದರಲ್ಲೂ ಹುಬ್ಬಳ್ಳಿ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾ ಸ್ವಾಮಿಗಳು ಲೋಕ ಕಲ್ಯಾಣಕ್ಕಾಗಿ ತಮ್ಮ ಸರ್ವಸ್ವವನ್ನು ಅವ್ಯಾಜ ವಾತ್ಸಲ್ಯದಿಂದ ಸಮರ್ಪಿಸಿ ಅರ್ಪಣ ಯೋಗಕ್ಕೆ ಆದರ್ಶ ನಿದರ್ಶನರಿರುವರು. ಅವರು ವಿಶ್ವದಲ್ಲಿ ಪ್ರತಿಯೊಬ್ಬ ಮಾನವ- ನಲ್ಲೂ ಪರಮೇಶ್ವರನನ್ನು ಕಂಡು ಆವನ ಪ್ರೀತಿಗಾಗಿ ತಮ್ಮ ತನುಮನ ಧನಗಳನ್ನು ಉತ್ಸಾಹದಿಂದ ನೀಡುತ್ತ ಲೋಕದ ಹಿತವನ್ನು ವಿಶ್ವತೋಮುಖವಾಗಿ ಸಾಧಿಸುತ್ತಲಿ ರುವರು. ಆದಕ್ಕಾಗಿಯೇ ಅರ್ಪಣಯೋಗವು ಮಹಾಸ್ವಾಮಿಗಳ ಪೀಠಾರೋಹಣದ ದ್ವಾದಶ ವಾರ್ಷಿಕ ಮಹೋತ್ಸವದ ಸ್ಮಾರಕ ಸಂಪುಟದಲ್ಲಿ ನೆಲೆಗೊಂಡು ಮಾನವರಲ್ಲಿ ಅರ್ಪಣದ ಹಿನ್ನೆಲೆಯನ್ನು ಮುನ್ನೆಲೆಯನ್ನು ತಿಳಿಸಬೇಕಾಗಿದೆ.

ಮನುಷ್ಯನಿಗೆ ದೇಹೇಂದ್ರಿಯಗಳು, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಇವೆ ಲ್ಲವೂ ಅರ್ಪಣಕ್ಕೆ ಬೇಕಾದ ಸಾಧನಗಳೆನಿಸಿವೆ. ಅರ್ಪಣಕ್ಕೆ ಇವಲ್ಲದೆ ಸಹಕಾರವೂ ಇರಬೇಕು. ಇವುಗಳಲ್ಲಿ ಯಾವುದೊಂದರ ಸಮ್ಮತಿ ಇಲ್ಲದಿದ್ದರೂ ಅರ್ಪಣವು ಪೂರ್ಣ ವಾಗಲಾರದು. ಈ ಸಾಧನಗಳನ್ನು ತನಗೆ ಅನುಕೂಲಮಾಡಿಕೊಂಡು ಜೀವನು ಇವು ಗಳ ಮೂಲಕ ತನ್ನಲ್ಲಿ ಇರುವ ಭೋಜ್ಯವಸ್ತುಗಳನ್ನು ಅರ್ಪಿಸಲು ತಯಾರಾಗಬೇಕು. ಇಂತಹ ಪರಿಸ್ಥಿತಿಯನ್ನು ಏರ್ಪಡಿಸಿಕೊಂಡರೆಯೇ ಅರ್ಪಣ ಸಾರ್ಥಕವೂ ಪರಿಣಾಮ ಕಾರಿಯೂ ಆಗಬಲ್ಲದು. ಈ ಬಗೆಯ ಪರಿಸ್ಥಿತಿಯೇ ವಿಚಾರವೆನಿಸುವುದು, ಮನು ಷ್ಯನು ಚೇತನನೂ ವಿವೇಚನಾಪರನೂ ಆದ್ದರಿಂದ ತಾನು ವಿಹಿತವಾಗಿ ದೇಹದಿಂದ ದುಡಿದದ್ದನ್ನು ಮನಃಪೂರ್ವಕವಾಗಿ ಅರ್ಪಿಸಿ ತನ್ನ ಜೀವನವನ್ನು ಪಾವನಗೊಳಿಸಿ

ಕೊಳ್ಳಬೇಕೆಂಬ ಸಂಕಲ್ಪವೇ ವಿಚಾರವೆನಿಸುವುದು. ತಾನು ದೇಹೇಂದ್ರಿಯಗಳಿಂದ ಸತ್ಯ ಶುದ್ಧವಾದ ರೀತಿಯಲ್ಲಿ ದುಡಿಯಬೇಕಾದ್ದು ತನ್ನ ಕರ್ತವ್ಯವೆಂಬ ಅರಿವೇ ಅವನಲ್ಲಿ ಹುಟ್ಟದೇ ಹೋದರೆ, ಅವನಿಗೆ ಅರ್ಪಣಯೋಗ ಲಭಿಸದು. ದೇಹೇಂದ್ರಿಯಗಳು ಉತ್ಸಾಹದಿಂದ ದುಡಿಯಬೇಕು. ಮನಬುದ್ಧಿಗಳು ಈ ದುಡಿಮೆಗೆ ತಕ್ಕ ವಿವೇಚನೆಯನ್ನು ದೊರಕಿಸಬೇಕು. ಚಿತ್ತ ನಿಶ್ಚಲವಾಗಿ ನೆಲೆಸಿ ದುಡಿಮೆಯನ್ನು ಮುಂದುವರಿಸಬೇಕು. ಹೀಗೆ ದೇಹೇಂದ್ರಿಯಗಳು ಮತ್ತು ಮನ ಬುದ್ಧಿ ಚಿತ್ತಗಳು ಉತ್ತಮ ಸಂಸ್ಕಾರವನ್ನು ಹೊಂದಿದ್ದರೆ ಮಾತ್ರವೇ ಮಾನವನಿಗೆ ಅಹಂಕಾರದ ದುಷ್ಪ್ರಭಾವ ವ್ಯಾಪಿಸಲಾರದು. ಅಹಂಕಾರವೆಂಬ ಪಿಶಾಚಿಯು ಕೈಗೆ ಮಾನವನು ಸಿಲುಕಿದರೆ ಅನೇಕ ಬಗೆಯ ವಿಕಾರಗಳಿಗೆ ವಶನಾಗಿ ಚಿತ್ತಚಾಂಚಲ್ಯದಿಂದಲೂ ಮನಶ್ಚಾಪಲ್ಯದಿಂದಲೂ ಬುದ್ಧಿಮಾಂದ್ಯದಿಂದಲೂ ಭೋಗದಲ್ಲಿಯೇ ಕಾಲವನ್ನು ಕಳೆಯುವನು. ಭೋಗದ ತಾತ್ಕಾಲಿಕ ಸುಖದಲ್ಲಿ ಮೈಮರೆತಮಾನವನು ಅರ್ಪಣದ ದಿವ್ಯಾನಂದವನ್ನು ಅನುಭವಿಸಲಾರನು. ಅರ್ಪಣದ ಮಹತ್ತ್ವವನ್ನು ಮಾನವನು ಅನುಭವಿಸಬೇಕಾದರೆ ಅವನಿಗೆ ಆತ್ಮವಿಚಾರದ ಅರಿವು ಅವಶ್ಯಕ.

ತಾನು ಪರಮಾತ್ಮನ ಅಂಶನಾದ್ದರಿಂದ ಅವನ ಸೇವೆಗಾಗಿಯೇ ದೇಹೇಂದ್ರಿಯಗಳನ್ನು ಮನಬುದ್ಧಿಗಳನ್ನು ಪಡೆದಿರುವೆನೆಂಬ ಅರಿವು ಮಾನವನಿಗೆ ದೊರಕಬೇಕಾದರೆ ವಿಚಾರ ಅವಶ್ಯಕ. ಪರಮಾತ್ಮನು ಸೃಷ್ಟಿಯ ಆರಂಭದಲ್ಲಿ ತನ್ನ ಏಕಾಂತ ವಾಸದ ಬೇಸರವನ್ನು ಕಳೆದುಕೊಂಡು ಲೀಲಾವೈಭವದಿಂದ ಸ್ವಪ್ರಕಾಶವನ್ನು ಹೊರಪಡಿಸಬೇಕೆಂದು ಇಚ್ಛಿಸಿದನು. ಇದನ್ನು ಶ್ರುತಿ ಸ್ಪಷ್ಟಪಡಿಸಿದೆ.

"ಯದಾ ತಮಃ ತನ್ನ ದಿವಾ ನ ರಾತ್ರಿಃ ನ ಸನ್ನ ಚಾ ಸಚ್ಛಿವ ಏವ ಕೇವಲಃ"

ಎಂದು ಶ್ವೇತಾಶ್ವತರ ಶ್ರುತಿಯು ಶಿವನ ಕೈವಲ್ಯಾವಸ್ಥೆಯನ್ನು ತಿಳಿಸುತ್ತದೆ. ಇದು ಅವನ ಆತ್ಮಾರಾಮ ಸ್ಥಿತಿ. "ಲೀಲೆ ತಪ್ಪಿದೊಡೆ ಸ್ವಯಂಭು" ಎಂದು ವಚನಕಾರರು ಇದೇ ಸ್ಥಿತಿಯನ್ನು ವರ್ಣಿಸಿದ್ದಾರೆ. ಇಂತಹ ಸ್ಥಿತಿಯಲ್ಲಿ ಹಗಲು ರಾತ್ರಿಗಳಿಲ್ಲದೆ, ವ್ಯಕ್ತಾವ್ಯಕ್ತ ಸ್ಥಿತಿಗಳಿಲ್ಲದೆ ಶಿವನೊಬ್ಬನೇ ಇದ್ದು ಅವನಿಗೆ ಈ ಬಗೆಯ ಏಕಾಂತ ಸ್ಥಿತಿಯು ಬೇಸರ ಉಂಟಾಗುವುದು ಸಹಜ. "ಸ ಏಕಾಕೀ ನ ರ ಮ ತೇ" ಎಂದು ಅದೇ ಶ್ರುತಿ ಅವನ ಬೇಸರವನ್ನು ತಿಳಿಸುತ್ತದೆ. ಹೀಗೆ ಅವನೇ ತನ್ನ ವಿನೋದಕ್ಕಾಗಿ ಅನೇಕ ಜೀವರಾಗಿ ಪರಿಣಮಿಸಿದನು. ಆ ಕೂಡಲೇ ಅವನ ಮಾಯಾಶಕ್ತಿ ಅನಂತ ದೇಹೇಂದ್ರಿಯಗಳಾಗಿಯೂ ಅನೇಕ ಭೋಗ್ಯವಸ್ತುಗಳಾಗಿಯೂ ಪರಿಣಮಿಸಿತು. ಏಕವಸ್ತುವೆನಿಸಿದ್ದ ಒಬ್ಬ ಪರಮಾತ್ಮನೇ ಅನೇಕ ದೇವರಾಗಿರುವುದರಿಂದಲೂ ಅವನ ವಿನೋದಕ್ಕಾಗಿಯೇ ಈ ವಿಷಯ ಪ್ರಪಂಚವು ಹೊರಬಂದಿರುವುದರಿಂದಲೂ ಇದರ ಅರಿವು ಮಾನವರೆಲ್ಲರಿಗೂ ಆಗಬೇಕಾದ್ದು ಅವಶ್ಯಕ. ಈ ಅರಿವು ಜನರಿಗೆ ಇದ್ದಿದ್ದರೆ ಅವರಲ್ಲಿ ಭೋಗದ ಆಸಕ್ತಿ ಹುಟ್ಟುತ್ತಿರಲಿಲ್ಲ. ಅವರು ಭೋಗಕ್ಕೆ ದಾಸರಾಗುತ್ತಿರಲಿಲ್ಲ. ತಮ್ಮ ದೇಹೇಂದ್ರಿಯ

ಗಳು ತಮ್ಮಲ್ಲಿರುವ ಭೋಗ್ಯ ವಸ್ತುಗಳನ್ನು ಪರಮಾತ್ಮನಿಗೆ ಅರ್ಪಿಸಲಿಕ್ಕಾಗಿ ಅವನ ಕೃಪೆಯಿಂದ ದೊರೆತಿರುವುವೆಂಬ ಅರಿವು ಮಾನವರಿಗೆ ವಿಚಾರದಿಂದ ದೊರೆತಿದ್ದರೆ ಅವರು ಪರಮಾತ್ಮನನ್ನು ಎಂದೆಂದಿಗೂ ಮರೆಯುತ್ತಿರಲಿಲ್ಲ. ಏಕವೇ ಅನೇಕವಾದ್ದರಿಂದ ತಾವೆಲ್ಲರೂ ಆ ಏಕ ವಸ್ತುವಿನ ಸೇವೆಗಾಗಿ ಬಂದಿರುವೆವೆಂಬ ಅರಿವು ಅವರಿಗೆ ಇಲ್ಲದ್ದರಿಂದಲೇ ಅವರು ಬೆಳಗಾದೊಡನೆ ಏಕವಸ್ತುವನ್ನು ನೆನೆಯದೆ ನಾಲಿಗೆ ರುಚಿಗಾಗಿ ಪಾನೀಯವನ್ನು ಕುಡಿಯಲಿಕ್ಕೂ ಹೊಟ್ಟೆಯನ್ನು ತಿಂಡಿಯಿಂದ ತುಂಬಿಸಿಕೊಳ್ಳಲಿಕ್ಕೂ ಹಾತೊರೆಯುತ್ತಿರುವರು. ತಾವು ಪರಮಾತ್ಮನ ಸಂಬಂಧಿಗಳೆಂದೂ. ತಾವು ಬಂದಿರುವುದು ತಮ್ಮ ಭೋಗಕ್ಕಲ್ಲವೆಂದೂ, ತಮ್ಮ ಮೂಲಾಧಾರವೆನಿಸಿದ ಪರಮಾತ್ಮನ ಸೇವೆಗೆಂದೂ, ತಮ್ಮಲ್ಲಿರುವ ಪದಾರ್ಥಗಳೆಲ್ಲವೂ ಅವನಿಗೆ ಅರ್ಪಿಸಲಿಕ್ಕಾಗಿ ಅವನ ಅನುಗ್ರಹದಿಂದಲೇ ಬಂದವೆಂದೂ ದೇಹೇಂದ್ರಿಯಗಳೆಲ್ಲವೂ ಈ ಮಹಾಕಾರ್ಯಕ್ಕಾಗಿಯೇ ಅವನ ಪ್ರಸಾದದಿಂದಲೇ ಬಂದಿರುವುವೆಂದೂ ಅರಿವು ಮಾನವರೆಲ್ಲರಿಗೂ ಅವರ ಹಿತದೃಷ್ಟಿಯಿಂದ ಅನಿವಾರ್ಯವೆನಿಸಿದೆ. ಈ ಅರಿವು ಅವರಿಗೆ ಬರಬೇಕಾದರೆ ಅವರು ತಮ್ಮನ್ನು ತಾವು ವಿಚಾರಿಸುತ್ತಿರಬೇಕು. ಆತ್ಮ ವಿಚಾರವಿಲ್ಲದ ಜೀವನ ನೀರಸವಾಗುವುದು. ಆತ್ಮವೇ ಜಡವಾದ ದೇಹೇಂದ್ರಿಯಗಳಿಗೂ ಮನಬುದ್ಧಿ ಚಿತ್ತಗಳಿಗೂ ಆಧಾರನಾಗಿರುವನು. ಇಂತಹ ಆತ್ಮನು ಇವೆಲ್ಲಕ್ಕೂ ಆಶ್ರಯನಾಗಿ ಇವೆಲ್ಲದರ ಸಹಕಾರದಿಂದ ಸತ್ಯಶುದ್ಧವಾದ ಮಾರ್ಗದಲ್ಲಿ ದುಡಿದು ಭೋಗಿಸಬೇಕಾದರೆ ಅವನಿಗೆ ಅರ್ಪಣಯೋಗದ ಅರಿವು ಅತ್ಯಾವಶ್ಯಕ. ತಾನು ಇಂದ್ರಿಯಗಳ ಮೂಲಕ ದುಡಿಯಲಿಕ್ಕೂ ದುಡಿದದ್ದನ್ನು ಸಂತೋಷದಿಂದ ಅರ್ಪಿಸಲಿಕ್ಕೂ ಹುಟ್ಟಿ ಬಂದಿರುವೆನೆಂಬ ಅರಿವು ಅವನಿಗೆ ಆತ್ಮ ವಿಚಾರದಿಂದ ದೃಢವಾಗಿ ನೆಲೆಸಿದರೆಯೇ ಅರ್ಪಣಯೋಗವು ಅವನಿಗೆ ಸಿದ್ಧಿಸುವುದು.

ತಾನು ಪರಶಿವನ ಬಂಧುವೆಂದೂ ಅವನ ಸೇವೆಗಾಗಿಯೇ ದೇಹೇಂದ್ರಿಯಗಳನ್ನು ಪಡೆದು ಬಂದಿರುವೆನೆಂದೂ ಅರಿತವನೇ ತನ್ನ ದುಡಿಮೆಯಿಂದ ಸದ್ವಿನಿಯೋಗದಿಂದ ಸಾರ್ಥಕಪಡಿಸಿಕೊಳ್ಳುವನು. ತಾನು ಹೀಗೆ ಅರ್ಪಿಸಲಿಕ್ಕಾಗಿಯೇ ಹುಟ್ಟಿರುವೆನೆಂದೂ ತಿಳಿಯುವುದೇ ವಿಚಾರ. ಹೀಗೆ ವಿಚಾರಿಸಿ ತನ್ನನ್ನು ಪರಶಿವನಿಗೆ ದಾಸನೆಂದು ಭಾವಿಸಿ ದೇಹೇಂದ್ರಿಯಗಳನ್ನು ಅವನ ಸೇವೆಗೆ ವಿನಿಯೋಗಿಸುವುದೇ ಆಚಾರ. ಇದೇ ಸದಾಚಾರವೆನಿಸುವುದು. ವಿಚಾರವಿಲ್ಲದವನಿಗೆ ಇಂತಹ ಆಚಾರವೇ ದೊರಕಲಾರದು. ತಾನು ಪರಶಿವನ ದಾಸನೆಂಬ ಭಾವನೆ ವಿಚಾರದಿಂದ ಯಾರಿಗೆ ಹುಟ್ಟಿರುವುದಿಲ್ಲವೋ ಅವನಿಗೆ ದೇಹೇಂದ್ರಿಯಗಳ ಮೇಲೆ ಮಮತೆ ವ್ಯಾಮೋಹಗಳು ಅಂಟಿಕೊಂಡಿರುವುದು ಸಹಜ. ಅವನು ಅರ್ಪಣ ಯೋಗದ ಮರ್ಮವನ್ನು ಅರಿಯಲಾರನು. ಏಕವೇ ತನ್ನ ಭೋಗಕ್ಕಾಗಿ ಅನೇಕರಾಗಿರುವಾಗ, ಅವನೇ ತನ್ನ ವಿನೋದಕ್ಕಾಗಿ ಅನೇಕ ಭೋಗ್ಯ ವಸ್ತುಗಳಾಗಿ ಪರಿಣಮಿಸಿರುವಾಗ ಇದನ್ನು ತಿಳಿಯದಿರುವುದು ಮಹಾಪಾಪವಲ್ಲವೆ? ತಾನು ಹುಟ್ಟಿರುವುದು ಭೋಗತ್ಯಾಗದಿಂದ ದೊರಕುವ ಯೋಗ ಸುಖಕ್ಕಾಗಿ ಎಂಬುದನ್ನು ತಿಳಿಯದವನು ಹೇಗೆ ನಿತ್ಯ ಸುಖಿಯಾಗಬಲ್ಲನು? ತನ್ನ ಜನ್ಮದ ಉದ್ದೇಶವನ್ನು ವಿಚಾರದಿಂದ

ತಿಳಿದವನೇ ಸತ್ಯ ಶುದ್ಧವಾದ ಆಚಾರದಿಂದ ಅರ್ಪಣದ ಮರ್ಮವನ್ನು ಅರಿತು ನೆಮ್ಮದಿಯಿಂದ ಬಾಳಬಲ್ಲನು. ವಿಚಾರವಿಲ್ಲದ ಆಚಾರದಿಂದ ಶಾಂತಿ ಸಮಾಧಾನಗಳ ದೊರೆಯಲಾರವು. ಹಾಗೆಯೇ ಆಚಾರವಿಲ್ಲದ ವಿಚಾರವೂ ಫಲಿಸಲಾರದು. ಮಾನವ ಸಾಮಾನ್ಯರಿಗೂ ತಾವು ಪರಮಾತ್ಮನ ಕುಟುಂಬ ವರ್ಗದವರೆಂದೂ ಅವನ ಸೇವೆಯೇ ಬಾಳಿನ ಗುರಿ ಎಂದೂ ಅವನಿಗೆ ನೀಡದೆ ತಾವು ಭೋಗಿಸಿದ್ದು ವಿಷವೆಂದೂ ಅರಿವು ಎಂದಿಗೆ ಉಂಟಾಗುವುದೋ ಅಂದೇ ಲೋಕವು ಶಾಂತಿಯ ನೆಲೆವೀಡಾಗುವುದು; ನಿತ್ಯ ಸುಖದ ತೌರೂರಾಗುವುದು ; ಜೀವನವು ಪಾವನವೂ ನಿತ್ಯ ಸುಂದರವೂ ಆಗುವುದು. ಇಂದಿನ ಮಾನವನು ಪರಮಾತ್ಮನನ್ನು ಮರೆತು ತನ್ನೊಡನೆ ತನಗಾಗಿ ಈ ದೇಹದಲ್ಲಿ ಅವನು ಇರುವನೆಂಬುದನ್ನು ತಿಳಿಯದೆ ಸ್ವತಂತ್ರನಾಗಿ ಅಭಿಮಾನಿಸಿ ಅಹಂಕಾರದಿಂದ ಮೆರೆಯುತ್ತಿರುವುದು ಶೋಚನೀಯ. ಅದಕ್ಕಾಗಿಯೇ ಆತ್ಮ ವಿಚಾರದ ಆಧಾರಸ್ತಂಭದ ಮೇಲೆ ನಿಂತು ಆಚಾರ ಪಂಕ್ತಿಗಳ ಮೇಲೆ ಮುಂದುವರೆದು ದಿವ್ಯಾಮೃತ ಪ್ರಸಾದವೆಂಬ ಮೃಷ್ಟಾನ್ನವನ್ನು ಭೋಗಿಸುವ ಸುಯೋಗ ಇಂದಿನ ಮಾನವರೆಲ್ಲರಿಗೂ ಅವಶ್ಯವಾಗಿ ದೊರೆಯಬೇಕು. ಇದರಿಂದಲೇ ಅವರ ಬಡತನ, ಆಲಸ್ಯ, ಕಾಲುಷ್ಯ, ವೈಮನಸ್ಯ. ರಾಗದ್ವೇಷ ಇವೆಲ್ಲವೂ ತೊಲಗಬೇಕಾಗಿದೆ. ಅಸೂಯೆ ಮಾತ್ಸರ್ಯಗಳು ತೊಲಗಿ ಸಮತೆ ಸಮಾಧಾನಗಳು ನೆಲೆಸಬೇಕಾದರೆ ಅರ್ಪಣದ ಯೋಗದ ಅರಿವು ಸರ್ವರಿಗೂ ಆಗಬೇಕಾದ್ದು ಅವಶ್ಯಕ. ತಾವೆಲ್ಲರೂ ದೇಹೇಂದ್ರಿಯಗಳಿಂದ ವಿಹಿತ ಮಾರ್ಗದಲ್ಲಿ ದುಡಿಯಲಿಕ್ಕೂ ಹಾಗೆ ದುಡಿದದ್ದನ್ನು ಮಾತ್ರವೇ ಪರಮಾತ್ಮನಿಗೆ ಅರ್ಪಿಸಲಿಕ್ಕಾಗಿಯೇ ತಾವು ಬಂದಿರುವೆವೆಂದು ಮಾನವರು ಅರಿತರೆಯೇ ಅವರ ಜನ್ಮ ಸಾರ್ಥಕವಾಗಬಲ್ಲದು. ಆತ್ಮ ವಿಚಾರದಿಂದಲೇ ಅವರಿಗೆ ದೇಹೇಂದ್ರಿಯಗಳ ಮೇಲಿನ ವ್ಯಾಮೋಹವು ತೊಲಗಬಲ್ಲದು. ಇವನ್ನು ತನ್ನೊಡನೆ ಇರುವ ಪರಮಾತ್ಮನಿಗೆ ಅರ್ಪಿಸಬೇಕಾದ್ದು ತನ್ನ ಕರ್ತವ್ಯವೆಂಬ ಅರಿವು ಅವರಿಗೆ ವಿಚಾರದಿಂದಲೇ ಬರಬೇಕು. ಆತ್ಮವಿಚಾರವಿಲ್ಲದವರು ಇವೆಲ್ಲವನ್ನೂ ತಮ್ಮವೆಂದೂ ತಮಗಾಗಿ ಇವೆ ಎಂದೂ ತಿಳಿದು ಕೆಡುವರು. ವಸ್ತುಸ್ಥಿತಿಯನ್ನು ತಿಳಿಯದೆ ಮಾಡುವ ಕ್ರಿಯೆ ಎಲ್ಲವೂ ವ್ಯರ್ಥವಾಗುವುದಲ್ಲದೆ ಅನರ್ಥ ಪರಂಪರೆಯನ್ನು ತಂದೊಡ್ಡುವುದು, ಹೀಗೆ ವಿಚಾರದಿಂದ ವಿವೇಚನೆಯನ್ನು ಗಳಿಸಿ ನ್ಯಾಯವಾದ ರೀತಿಯಲ್ಲಿ ಸಂಪಾದಿಸಲು ಪ್ರತಿಯೊಬ್ಬರೂ ದುಡಿಯಲು ಯತ್ನಿಸುವುದು ಅವಶ್ಯಕ.

ಹೀಗೆ ವಿಚಾರದಿಂದ ತಿಳಿದವನು ಪರಮಾತ್ಮನಿಗೆ ಏನನ್ನು ಅರ್ಪಿಸಬೇಕು ? ಹಾಗೆ ಅರ್ಪಿಸಲಿಕ್ಕೆ ಅವನು ತನ್ನೊಡನೆ ಇರುವನೆ ? ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ. ಇವನ್ನು ಇಲ್ಲಿ ವಿಚಾರಿಸುವುದರಿಂದ ಅರ್ಪಣ ಯೋಗವು ಎಲ್ಲರಿಗೂ ಮನವರಿಕೆಯಾಗುವುದು. ಏನನ್ನು ಅರ್ಪಿಸಬೇಕೆಂಬ ವಿಚಾರವನ್ನು ಈಗ ಸಮಾಲೋಚಿಸೋಣ. ಮನುಷ್ಯನು ತನ್ನ ಸುತ್ತಮುತ್ತಣ ಸನ್ನಿವೇಶದಲ್ಲಿ ಹೊಂದಿಕೊಂಡು ಯುಕ್ತವಾದ ರೀತಿಯಲ್ಲಿ ದುಡಿದದ್ದೆಲ್ಲವನ್ನು ಅರ್ಪಿಸಿಯೇ ಭೋಗಿಸಬೇಕು. ಹಾಗೆ ಅರ್ಪಿಸದೇ ಭೋಗಿಸುವುದು ಮಹಾಪಾಪವೆನಿಸುವುದು. ಅವನು ದೇಹೇಂದ್ರಿಯ

ಗಳಿಂದ ಯಾವುದಾದರೂ ವ್ಯವಸಾಯುವನ್ನೋ ವ್ಯವಹಾರವನ್ನೋ ಉದ್ಯಮವನ್ನೋ ಕೈಗೊಳ್ಳಲೇಬೇಕು. ಅದು ಸತ್ಯ ನಿಷ್ಠೆಯಿಂದಲೂ ನ್ಯಾಯ ಮಾರ್ಗದಿಂದಲೂ ಪ್ರಾಮಾಣಿಕತೆಯಿಂದಲೂ ನಡೆಯಬೇಕು. ಅದರಲ್ಲಿ ಅನ್ಯಾಯ, ಮೋಸ ವಂಚನೆಗಳು ಅಂಟಿಕೊಂಡಿರಬಾರದು. ಹಾಗೆ ಇರುವುದಾದರೆ ಅಂತಹ ಉದ್ಯಮ ಅರ್ಪಣಕ್ಕೆ ಯೋಗ್ಯವಾಗಲಾರದು. ಸರ್ವಸಾಕ್ಷಿಯಾದ ಪರಮಾತ್ಮನು ಮಾನವನ ಮೋಸ ಕೃತ್ಯ ಗಳನ್ನು ಅರಿಯುವನಾದ್ದರಿಂದ ಮೋಸದ ದುಡಿಮೆಯನ್ನು ಮೆಚ್ಚಲಾರನು. ದೇಹವನ್ನು ಮನಸ್ಸನ್ನು ಇಂದ್ರಿಯಗಳನ್ನು ಸುವ್ಯವಸ್ಥಿತವಾದ ರೀತಿಯಲ್ಲಿ ಉಪಯೋಗಿಸದೆ ಸಂಪಾದಿಸಿದ ಫಲವು ಅರ್ಪಣಕ್ಕೆ ಯೋಗ್ಯವಾಗಲಾರದು. ಸದ್ಭಾವನೆಯಿಂದ ಸಂಪಾದಿ ಸಿದ ವಸ್ತುವೇ ಅರ್ಪಣಕ್ಕೆ ಯೋಗ್ಯವಾಗಬಲ್ಲದು. ಸದ್ಭಾವನೆ ಎಂದರೆ ದುಡಿಯುವುದಕ್ಕೆ ಉಪಯೋಗಿಸುವ ದೇಹೇಂದ್ರಿಯಗಳಲ್ಲಿ ಸದ್ರೂಪನಾದ ಪರಮಾತ್ಮನು ನೆಲೆಸಿರುವ ನೆಂದು ಭಾವಿಸುವುದೇ ಆಗಿದೆ. ಹಾಗೆ ಭಾವಿಸಿ ಸಂಪಾದಿಸಿದ ವಸ್ತುಗಳೆಲ್ಲವೂ ಅವನ ವೆಂದು ಭಾವಿಸುವುದೂ ಸಹ ಸದ್ಭಾವನೆಯೇ ಆಗಿದೆ. ಅವನು ಎಲ್ಲಾ ವಸ್ತುಗಳಲ್ಲಿಯೂ ಅವ್ಯಕ್ತವಾಗಿ ನೆಲೆಸಿರುವನು. ಬಹಳ ಸೂಕ್ಷ್ಮವಾಗಿ ಎಲ್ಲದರಲ್ಲೂ ಅವನು ಇದ್ದೇ ಇರುವನು. ಅವನು ಇಲ್ಲದ ವಸ್ತುವೇ ಲೋಕದಲ್ಲಿ ಯಾವುದೂ ಇಲ್ಲ. ಅವನು ಗಂಭೀರನಾಗಿ ನೆಲೆಸಿರುವುದರಿಂದಲೇ ಎಲ್ಲಾ ವಸ್ತುಗಳೂ ನಮಗೆ ಆಕರ್ಷಣೀಯ ವಾಗಿರುವುದು. ನಾವು ಮುಂಜಾವಿನಿಂದ ಸಂಜೆಯವರೆಗೂ ದುಡಿಯುವ ವಸ್ತುಗಳೆಂದರೆ ಹೊನ್ನು ಹೆಣ್ಣು ಮಣ್ಣುಗಳೇ ಆಗಿವೆ. ಇವೆಲ್ಲದರಲ್ಲೂ ಅವನು ನೆಲೆಸಿಯೇ ಇರುವನೆಂದು ಭಾವಿಸುವುದೇ ಸದ್ಭಾವನೆ. ಅವನು ಇರುವುದರಿಂದಲೇ ಅವೆಲ್ಲಕ್ಕೂ ಒಂದು ರೂಪ ಬಂದಿದೆ. ರೂಪಕ್ಕೆ ಆಧಾರವಾದುದೇ ಪರಮಾತ್ಮ ಚೈತನ್ಯ. ಆ ಚೈತನ್ಯವು ತಮಸ್ಸಿನಿಂದ ಪೂರ್ಣವಾಗಿ ಆವೃತವಾಗಿರುವುದರಿಂದ ಹೊರಗಿನ ರೂಪ ವಷ್ಟನ್ನೇ ನಾವು ಗಮನಿಸಿ ಒಳಗೆ ಗೋಪ್ಯವಾಗಿ ಅಡಗಿರುವ ಚೈತನ್ಯವನ್ನು ಮರೆ ಯುತ್ತೇವೆ. ಒಂದು ರೂಪವನ್ನು ನೋಡಿದಾಗ ಅದರ ಹೊಳಪಿಗೆ ನಾವು ಮೈಮರೆತು ಅದರ ಮೂಲಾಧಾರವೆನಿಸಿದ ಚೈತನ್ಯವನ್ನು ಕಾಣದಷ್ಟು ಕುರುಡರಾಗಿದ್ದೇವೆ. ತಮೋ ಗುಣವು ಪ್ರತಿಯೊಂದು ವಸ್ತುವನ್ನು ವ್ಯಾಪಿಸಿರುವುದರಿಂದ ಆ ವಸ್ತುವಿನ ಹೊರ ಮೈಗೆ ನಾವು ಮೋಸ ಹೋಗುವ ಸನ್ನಿವೇಶವನ್ನು ತಪ್ಪಿಸಿ ಆ ವಸ್ತುವನ್ನು ತಮ್ಮ ದೇಹದೊಳಗಿನ ಪರಮಾತ್ಮನಿಗೆ ಅರ್ಪಿಸಿ ಪ್ರಸಾದವಾಗಿ ಭೋಗಿಸುತ್ತ ಸದ್ಭಾವನೆಯ ಪಾರಮೈಶ್ವರ್ಯವನ್ನು ನಿತ್ಯವೂ ಅನುಭವಿಸುತ್ತ ನೆಮ್ಮದಿಯಿಂದ ಬಾಳುವ ಸವಿ ಕಾಲವನ್ನು ಅರ್ಪಣಯೋಗವು ನಮಗೆ ದೊರಕಿಸಲಿದೆ. ಅಲ್ಲಿಗೆ ಅರ್ಪಿಸಬೇಕಾದ ವಸ್ತುಗಳು ಯಾವುವು ? ಅವನ್ನು ಈ ದೇಹದಲ್ಲಿ ನೆಲೆಸಿರುವ ಪರಮಾತ್ಮನಿಗೆ ಹೇಗೆ ಅರ್ಪಿಸಬೇಕು ? ಎಂಬುದರ ಅರಿವು ನಮಗೆ ಆವಶ್ಯಕ.

ನಾವು ಸಂಪಾದಿಸಿದ ಪ್ರತಿಯೊಂದು ವಸ್ತುವಿನಲ್ಲೂ ರೂಪ, ರಸ, ಗಂಧ, ಸ್ಪರ್ಶ ಶಬ್ದವೆಂಬ ಐದು ಪದಾರ್ಥಗಳಿವೆ. ನಾವು ಗಳಿಸಿದ ಹೊನ್ನಿನಲ್ಲೂ, ಹೆಣ್ಣಿನಲ್ಲೂ

ಮಣ್ಣಿನಲ್ಲೂ ಇವು ಐದೂ ನೆಲೆಸಿವೆ. ಇವುಗಳ ಸಂಪಾದನೆಗಾಗಿಯೇ ನಾವು ನಿದ್ದೆ ಇಲ್ಲವೆ ರಾತ್ರಿಗಳನ್ನೂ ಊಟವಿಲ್ಲದ ಹಗಲುಗಳನ್ನೂ ಕಳೆಯುತ್ತೇವೆ. ಇಷ್ಟೆಲ್ಲಾ ಶ್ರಮ ವಹಿಸಿ ದುಡಿದು ಇವುಗಳಿಂದ ಸುಖಶಾಂತಿಗಳಿಲ್ಲದೆ ಕೆಡುತ್ತಲಿರುವೆವು. ನಾವು ದುಡಿದದ್ದ ರಿಂದಲೇ ನಮಗೆ ನೆಮ್ಮದಿ ಇಲ್ಲದೇ ಇದ್ದರೆ ಅಂತಹ ದುಡಿಮೆಯನ್ನು ಮಾಡುವುದ ದಾದರೂ ಏತಕ್ಕೆ? ತನಗೇ ಶಾಂತಿ ಇಲ್ಲದಂತೆ ಲೋಕವೆಲ್ಲವನ್ನೂ ರೂಢಿಸಿಕೊಂಡರೆ ಪುಣ್ಯವಾದರೂ ಏನಿದ್ದೀತು ? ಈ ಸಮಸ್ಯೆಯನ್ನು ಬಗೆಹರಿಸಿ ಮಾನವರಿಗೆ ನಿತ್ಯ ಸುಖವನ್ನು ದೊರಕಿಸಲಿಕ್ಕಾಗಿ ಅರ್ಪಣಯೋಗವು ಸಿದ್ಧೌಷಧವೆನಿಸಿದೆ. ನಾವು ಸಂಪಾದಿ ಸಿದ ಪ್ರತಿಯೊಂದು ವಸ್ತುವಿನಲ್ಲೂ ಒಂದು ರೂಪವಿರುವುದನ್ನು ನಾವು ಮನಗಂಡಿರು ವೆವು. ಹಾಗೆಯೇ ಅದರಲ್ಲಿ ಒಂದು ರಸವೂ ಒಂದು ಬಗೆಯ ಗಂಧವೂ ಒಂದು ಬಗೆಯ ಸ್ಪರ್ಶವೂ ಒಂದು ಬಗೆಯ ಶಬ್ದವೂ ಇರುವುದನ್ನು ನಾವು ಮನಗಂಡಿರುವೆವು. ಆದರೆ ಇವುಗಳಲ್ಲಿ ಸುಂದರವಾದ ರೂಪವನ್ನು ನಾವು ಮೋಹಿಸುತ್ತೇವೆ. ಕುರೂಪವನ್ನು ಕಂಡು ಜುಗುಪ್ಸೆಗೊಳ್ಳುತ್ತೇವೆ; ಹಾಗೆಯೇ ಸಿಹಿರಸವನ್ನು ಮೋಹಿಸುತ್ತೇವೆ ; ಕಹಿ ರಸವನ್ನು ದೂಷಿಸುತ್ತೇವೆ, ಅದರಂತೆಯೇ ಸುಗಂಧವನ್ನುವೆ ೞಹಿಸುತ್ತ ದುರ್ಗಂಧ ವನ್ನು ದೂಷಿಸುತ್ತೇವೆ, ಮೃದು ಸ್ಪರ್ಶವನ್ನು ಮೋಹಿಸುತ್ತ ಕಠಿಣ ಸ್ಪರ್ಶವನ್ನು ದ್ವೇಷಿಸುತ್ತೇವೆ. ಇಂಪಾದ ಶಬ್ದವನ್ನು ಬಯಸುತ್ತಾ ಕಠಿಣವಾದ ಶಬ್ದವನ್ನು ಕೇಳಿ ಅಸಹ್ಯಪಡುತ್ತೇವೆ. ಹೀಗೆ ನಾವು ಮುಂಜಾನೆಯಿಂದ ಸಂಜೆಯ ವರೆಗೂ ನೋಡುವ ರೂಪದಲ್ಲೂ. ಕೇಳುವ ಶಬ್ದದಲ್ಲೂ, ರುಚಿಸುವ ರಸ ದಲ್ಲೂ ಮೂಸಿಸುವ ಗಂಧದಲ್ಲೂ ಮುಟ್ಟುವ ಸ್ಪರ್ಶದಲ್ಲೂ ಪ್ರಿಯ ಅಪ್ರಿಯಗಳ ಸಂಪರ್ಕ ನಮಗೆ ಆಗುತ್ತಲಿದೆ. ಪ್ರಿಯ ಅಪ್ರಿಯಗಳ ಸುಳಿಯಲ್ಲಿ ಸಿಲುಕಿ ನಾವು ವ್ಯವಸ್ಥಿತವಾದ ಜೀವನವನ್ನೂ ನಡೆಸಲಾಗದೆ ಒಮ್ಮೆ ಸುಖಿಗಳೂ ಒಮ್ಮೆ ದುಃಖಿ ಗಳೂ ಆಗಿ ನಗುತ್ತಲೂ ಅಳುತ್ತಲೂ ಇರುವೆವು. ಹೀಗೆ ಸುಖದಿಂದ ಹಿಗ್ಗುತ್ತಲೂ ದುಃಖದಿಂದ ಕುಗ್ಗುತ್ತಲೂ ನರಳುತ್ತಿರುವ ನಮಗೆ ಅರ್ಪಣಯೋಗವು ನಿತ್ಯಸುಖವೆಂಬ ದಿವ್ಯ ಪ್ರಸಾದವನ್ನು ಕರುಣಿಸುವ ದಿವ್ಯ ಸಂಜೀವಿನಿ ಎನಿಸಿದೆ. ನಾವು ಸಂಪಾದನೆಗಾಗಿ ಪ್ರಪಂಚದಲ್ಲಿ ವ್ಯವಹರಿಸುವಾಗಲೇ ಈ ಐದು ಪದಾರ್ಥಗಳು ನಮ್ಮ ಕಣ್ಣಿಗೆ ಬೀಳು ತ್ತವೆ, ಕಿವಿಗೆ ಕೇಳಿಸುತ್ತವೆ, ಮೂಗಿಗೆ ಬಂದು ತಗುಲುತ್ತವೆ. ನಾಲಿಗೆಗೆ ಅಂಟಿಕೊಳ್ಳು ತ್ತವೆ, ಚರ್ಮಕ್ಕೆ ವ್ಯಾಪಿಸುತ್ತವೆ. ವ್ಯವಹಾರಕ್ಕೆ ಹೊರಡುವಾಗಲೇ ರೂಪರಸಗಂಧ ಸ್ಪರ್ಶ ಶಬ್ದಗಳು ನಮ್ಮನ್ನು ಸುಂಗಿ ಹಾಕುತ್ತಿರುವಾಗ ಆ ವ್ಯವಹಾರದಲ್ಲಿ ಸಂಪಾದಿಸಿದ ಹೊನ್ನು ಹೆಣ್ಣು ಮಣ್ಣುಗಳು ನಮ್ಮನ್ನು ಸುಮ್ಮನೆ ಬಿಡಬಲ್ಲವೆ ? ಅವುಗಳಲ್ಲೂ ಅವು ಐದೂ ನೆಲೆಸಿವೆ. ಆ ಐದು ಪದಾರ್ಥಗಳನ್ನೆಲ್ಲಾ ನಮ್ಮ ಐದು ಇಂದ್ರಿಯ ಗಳೂ ಆಗಾಗಲೇ ನಮ್ಮ ಎದುರಿಗೆ ತಂದೊಡ್ಡುತ್ತಿರುವವು. ಪಶುವನ್ನು ಯಜ ಮಾನನು ಕೊರಳಿಗೆ ಹಗ್ಗವನ್ನು ಸುತ್ತಿ ಕೊಂಡಿಗೆ ಕಟ್ಟಿ ಹಾಕಿ ಹಸುರು ಹುಲ್ಲನ್ನು ಮೇಯಲಿಕ್ಕೆ ಹಾಕಿ ಅದರ ಸ್ವಾತಂತ್ರ್ಯವನ್ನು ಪೂರ್ಣವಾಗಿ ಕಿತ್ತುಕೊಳ್ಳುವಂತೆ ಆಶೆ

ಎಂಬ ಮಾಯೆ ನಮ್ಮನ್ನು ಸತ್ತ್ವ ರಜಸ್ಸುತಮಸ್ಸು ಎಂಬ ಮೂರೇ ಹಗ್ಗಗಳಿಂದ ದೇಹ ವೆಂಬ ಕೊಂಡಿಗೆ ಕಟ್ಟಿ ಹಾಕಿ ಐದು ಇಂದ್ರಿಯಗಳ ಮೂಲಕ ಐದು ಪದಾರ್ಥಗಳನ್ನು ಭೋಗಿಸಲಿಕ್ಕಾಗಿ ಪ್ರತಿನಿಮಿಷವೂ ನಮ್ಮ ಎದುರಿಗೆ ತಂದೊಡ್ಡುತ್ತಿರುವುದು. ಇವನ್ನು ಮಾನವನು ಬಿಡಬೇಕೇ ಕಟ್ಟಿಕೊಳ್ಳಬೇಕೇ ? ಇಂದ್ರಿಯಗಳನ್ನು ತಡೆಯಬೇಕೆ ? ಆಯಾ ವಸ್ತುಗಳ ಕಡೆಗೆ ತಿರುಗಿಸಬೇಕೆ ? ಈ ಸಮಸ್ಯೆಯನ್ನು ಬಗೆ ಹರಿಸಲಿಕ್ಕೆ ನಮಗೆ ಸಾಧ್ಯ ವಾಗದಂತಾಗಿದೆ. ಇದನ್ನು ಬಗೆಹರಿಸಲಿಕ್ಕೆ ಅರ್ಪಣಯೋಗವು ದಿವ್ಯ ಸಂಜೀವಿನಿ ಎನಿಸಿದೆ.

ನಾವು ವ್ಯವಹರಿಸುವಾಗ ಸಹಜವಾಗಿ ಒದಗುವ ರೂಪ ರಸಗಂಧ ಸ್ಪರ್ಶ ಶಬ್ದ ಗಳನ್ನು ಹೇಗೆ ಅನುಭವಿಸಿದರೆ ಅವು ನಮಗೆ ಬಂಧಕವಾಗಲಾರವು ? ಎಂಬುದನ್ನು ಅರ್ಪಣಯೋಗವು ನಮಗೆ ಮನವರಿಕೆ ಮಾಡಲಿದೆ. ಅವನ್ನು ಪದಾರ್ಥ ಭಾವನೆ ಯಿಂದ ನಾವು ಭೋಗಿಸಿದರೆ ಅವು ನಮಗೆ ಮಾರಕವಾಗುತ್ತವೆ. ಅವನ್ನು ಪ್ರಸಾದ ಭಾವನೆಯಿಂದ ನಾವು ಭೋಗಿಸಿದರೆ ಅವು ನಮ್ಮನ್ನು ವಿನಾಶ ಮಾಡುವ ಬದಲು ಉದ್ಧರಿಸತೊಡಗುವುವು, ಅವನ್ನು ಕಂಡಾಗಲೇ ಮುಟ್ಟಿದಾಗಲೇ ಕೇಳಿದಾಗಲೇ ಮೂಸಿಸಿದಾಗಲೇ ರುಚಿಸಿದಾಗಲೇ ಪರಮಾತ್ಮನಿಗೆ ಅರ್ಪಿಸಿದರೆ ಅವು ನಮಗೆ ಪ್ರಸಾದ ವಾಗಿ ಪರಿಣಮಿಸುತ್ತವೆ. ಇದನ್ನು ಗೀತೆಯಲ್ಲಿ ಕೃಷ್ಣನು ಬಹು ಸೊಗಸಾಗಿ ಹೇಳಿ ದ್ದಾನೆ.

ಯತ್ಕರೋಷಿಯದಶ್ನಾಸಿ ಯಜ್ಜುಹೋಷಿ ದದಾಸಿಯತ್ ।
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥

ಇದು ಮಾನವ ಸಾಮಾನ್ಯರಿಗೂ ತಾರಕ ಮಂತ್ರವೆನಿಸಿದೆ. ಇದನ್ನು ವಚನಕಾರರು ಬಹು ಸೊಗಸಾಗಿ ಹೇಳಿದ್ದಾರೆ. "ನೀನು ಪ್ರತಿನಿಮಿಷದಲ್ಲೂ ಮಾಡುವುದೆಲ್ಲವನ್ನೂ ತಿನ್ನುವುದೆಲ್ಲವನ್ನೂ ಪೂಜಿಸುವುದೆಲ್ಲವನ್ನು ಬೇರೆಯವರಿಗೆ ನೀಡುವುದೆಲ್ಲವನ್ನೂ ಆಗಾ ಗಲೇ ಪರಮಾತ್ಮನಿಗೆ ಅರ್ಪಿಸುವುದನ್ನು ಕಲಿತುಕೋ" ಇದರಿಂದ ನಿನಗೆ ಒಳ್ಳೆಯದು ಕೆಟ್ಟದ್ದು ಎಂಬ ಭೇದಭಾವನೆ ತೊಲಗಿ ಎಲ್ಲವೂ ಒಳ್ಳೆಯದೆಂಬ ಸದ್ಭಾವನೆ ನೆಲೆಸು ತ್ತದೆ. ಆಗಾಗ ಒದಗುವುದೆಲ್ಲವನ್ನು ಆ ಕೂಡಲೇ ನೀನು ಅರ್ಪಿಸುವುದನ್ನು ಕಲಿತರೆ ನೀನು ಭಕ್ತಿಯಿಂದ ಅರ್ಪಿಸಿದ್ದನ್ನು ನಿನ್ನ ಜೊತೆಯಲ್ಲಿಯೇ ನಿನಗಾಗಿ ಕಾಯ್ದುಕುಳಿ ತಿರುವ ಪರಮಾತ್ಮನು ಸಂತೋಷದಿಂದ ಸ್ವೀಕರಿಸುವನು. ಆಗ ನೀನು ನೋಡಿದ್ದು ಮುಟ್ಟಿದ್ದು ಕೇಳಿದ್ದು ರುಚಿಸಿದ್ದು ಮೂಸಿಸಿದ್ದು ಇದೆಲ್ಲವೂ ಅವನು ಒಪ್ಪಿಸಿಕೊಂಡು ನೀಡಿದ ಪ್ರಸಾದವೆನಿಸುವುದು. ಹೀಗೆ ತಾನು ತಿನ್ನುವುದನ್ನು ಕುಡಿಯುವುದನ್ನು ಪ್ರಸಾದವೆಂದು ಉಂಡರೆ ಕುಡಿದರೆ ಅದರಿಂದ ಒಳ್ಳೆಯದು ಕೆಟ್ಟದ್ದು ಎಂಬ ಭೇದ ಭಾವನೆ ಬೆಳೆಯದೆ ಎಲ್ಲವೂ ಒಳ್ಳೆಯದೆಂಬ ಒಂದೇ ಭಾವನೆ ಬೆಳೆಯ ತೊಡಗುವುದು" ಎಂಬ ಆಶಾ ಭಾವನೆಯನ್ನು ಕೃಷ್ಣನು ಲೋಕದ ಮಾನವರಿಗೆ ಈ ಒಂದು ಶ್ಲೋಕದಲ್ಲಿ

ಉಪದೇಶಿಸಿರುವನು. ಮಾನವರಿಗೆ ಲೋಕದ ವಸ್ತುಗಳಲ್ಲಿ ತರತಮಭಾವನೆಯನ್ನು ಹುಟ್ಟಿಸದೆ ಎಲ್ಲವೂ ಒಂದೇ ಎಂಬ ಸದ್ಭಾವನೆಯನ್ನು ಹುಟ್ಟಿಸುವುದರಿಂದಲೇ ಶಾಂತಿ ಸಮಾಧಾನಗಳು ಲಭಿಸಬೇಕಾಗಿವೆ. ಇದು ಹೇಗೆ ರಚನಾತ್ಮಕವಾಗಿ ಮಾನವರಿಗೆ ಅನುಭವ ಗೋಚರವಾಗುವುದೆಂಬುದನ್ನು ಈಗ ವಿಮರ್ಶಿಸೋಣ.

ದೇಹದಲ್ಲಿ ಮಾನವನು ಐದು ಇಂದ್ರಿಯಗಳೊಡನೆ ನಿತ್ಯವೂ ವ್ಯವಹರಿಸುತ್ತಿರುವನು. ಆದರೆ ಅವನು ಅಲ್ಲಿ ತಾನೊಬ್ಬನೇ ಇರುವನೆಂದು ತಿಳಿದಿರುವನು. ಇದೇ ಅವನ ವಿಚಾರವಿಲ್ಲದ ಅಂಧ ಮಾರ್ಗ. "ಗುಹಾಂ ಪ್ರವಿಷ್ಟಾ ಆತ್ಮಾನ್ ಹಿ ತದ್ದರ್ಶನಾತ್" ಎಂದು ಬ್ರಹ್ಮಸೂತ್ರವು ಎದೆಗುಹೆಯಲ್ಲಿ ಇಬ್ಬರು ಆತ್ಮರಿರುವರೆಂದು ಸ್ಪಷ್ಟವಾಗಿ ತಿಳಿಸಿದೆ. "ಇವರಿಬ್ಬರೂ ಸನಾತನರೂ ಹುಟ್ಟು ಸಾವುಗಳಿಲ್ಲದವರೂ ಆಗಿರುವರೆ"ಂದು ಶ್ರುತಿ ತಿಳಿಸಿದೆ. ಇವರಲ್ಲಿ ಒಬ್ಬನು ಎಲ್ಲಾ ಇಂದ್ರಿಯಗಳಿಗೂ ಮನಸ್ಸಿನೊಡನೆ ಹೋಗಿ ದುಃಖ ಮಿಶ್ರವಾದ ಇಂದ್ರಿಯ ಸುಖಗಳನ್ನು ಭೋಗಿಸುತ್ತಲೂ ಅದರ ಪರಿಣಾಮವಾಗಿ ನರಳುತ್ತಲೂ ಇರುವನೆಂದೂ ಮತ್ತೊಬ್ಬನು ಏನನ್ನೂ ತಿನ್ನದೆ ನಿರಭಿಮಾನದಿಂದ ನೋಡುತ್ತಲೂ ಇರುವನೆಂದೂ ಅದೇ ಶ್ರುತಿ ತಿಳಿಸಿದೆ. ಅಲ್ಲಿಗೆ ಪ್ರತಿಯೊಂದು ಇಂದ್ರಿಯದಲ್ಲೂ ನಿರ್ವಿಕಾರನಾಗಿ ನಿರಭಿಮಾನದಿಂದ ನೋಡುವ ಶಕ್ತಿಯೂ ಹಾಗೆಯೇ ಅಭಿಮಾನದಿಂದ ಭೋಗಿಸುವ ಶಕ್ತಿಯೂ ಒಟ್ಟಿಗೆ ಸೇರಿರುವುವೆಂಬುದು ನಿಶ್ಚಿತವಾಯಿತು. ನಿರಭಿಮಾನದಿಂದ ನೋಡುವ ಶಕ್ತಿಯೇ ಪರಮಾತ್ಮ ಚೈತನ್ಯ, ಅಭಿಮಾನಿಸಿಕೊಂಡು ನೋಡುತ್ತ ಮುಟ್ಟುತ್ತ ಭೋಗಿಸುತ್ತಲೂ ಇರುವ ಶಕ್ತಿಯೇ ಜೀವಚೈತನ್ಯ. ಹೀಗೆ ಪರಮಾತ್ಮನೂ ಜೀವಾತ್ಮನೂ ಇಬ್ಬರೂ ಪ್ರತಿಯೊಂದು ಇಂದ್ರಿಯದಲ್ಲೂ ಕೂಡಿಯೇ ಇರುವರೆಂಬುದು ಶ್ರುತಿಯಿಂದ ಸ್ಪಷ್ಟವಾಗುತ್ತದೆ. ಯುಕ್ತಿಗೂ ಅನುಭವಕ್ಕೂ ಇದೇ ಸಮಂಜಸವಾಗಿ ಕಂಡುಬರುತ್ತದೆ. ಮೂಗಿನಲ್ಲಿಯಿರುವ ಚೈತನ್ಯ ನಿರಭಿಮಾನದಿಂದ ಗಂಧವನ್ನು ಗ್ರಹಿಸುವಾಗ ಆಚಾರಲಿಂಗವೆನಿಸುತ್ತದೆ. ಮೂಗಿಗೆ ಹೊರಗಿನ ಗಂಧ ಬಂದಿತು ತಗಲುವಾಗ ಅಲ್ಲಿಯೇ ಇರುವ ಜೀವ ಚೈತನ್ಯವು ಅದನ್ನು ಭಕ್ತಿಯಿಂದ ಆಗಲೇ ಅರ್ಪಿಸಿದರೆ ಭಕ್ತನೆನಿಸುವುದು, ನನಗಾಗಿ ಪರಮಾತ್ಮನು ನನ್ನೊಡನೆಯೇ ಸೇರಿರುವನೆಂಬುದನ್ನು ವಿಚಾರದಿಂದ ತಿಳಿದವನು ಅದಕ್ಕೆ ಅನುಗುಣವಾದ ಆಚಾರದಿಂದ ತಾನು ಉದ್ಧಾರವಾಗಬೇಕೆಂದು ಬಯಸುವವನು ತನ್ನ ಮೂಗಿಗೆ ಸಹಜವಾಗಿ ಬೀಳುವ ಗಂಧ ಪದಾರ್ಥವನ್ನು ಆಗಲೇ ಸಂತೋಷದಿಂದ ತನ್ನೊಡನೆ ಇರುವ ಪರಮಾತ್ಮನಿಗೆ ಅರ್ಪಿಸ ತೊಡಗುವನು. ಹೀಗೆ ಅರ್ಪಿಸುವುದರಿಂದ ಅವನಿಗೆ ಲೋಕದ ಗಂಧವೆಲ್ಲವೂ ಸುಗಂಧವಾಗಿಯೇ ಪರಿಣಮಿಸತೊಡಗುವುದು. ಅದರಲ್ಲಿ ಸುಗಂಧ ದುರ್ಗಂಧವೆಂಬ ಭೇದಭಾವನೆಯೇ ಅವನಿಗೆ ಹುಟ್ಟುವುದಿಲ್ಲ. ಯಾರು ಗಂಧವನ್ನು ಅರ್ಪಿಸಬಲ್ಲರೋ ಅವರು ಅದನ್ನು ಪ್ರಸಾದವೆಂದು ಭೋಗಿಸಬಲ್ಲರು. ಹಾಗೆ ಅರ್ಪಿಸುವಾಗ ಅವರು ಭಕ್ತರೆನಿಸುವರು. ಅದನ್ನು ಅರ್ಪಿಸಿಕೊಳ್ಳುವಾಗ ಪರಮಾತ್ಮನು ದೇಹದ ಶುದ್ಧೀಕರಣ ಕ್ರಿಯೆಗೆ ಅನುಕೂಲನಾಗಿ ವರ್ತಿಸುತ್ತ ಆಚಾರಲಿಂಗ ವೆನಿಸುವನು.

ಹೀಗೆ ಆಚಾರಲಿಂಗ ಭಕ್ತ ಇಬ್ಬರೂ ಮೂಗಿನಲ್ಲಿ ಕೂಡಿಯೇ ಇದ್ದು ಗಂಧವನ್ನು ಗ್ರಹಿಸುತ್ತಲೂ ಅರ್ಪಿಸುತ್ತಲೂ ಇರುವರು. ಅಲ್ಲಿಗೆ ಲೋಕದ ಗಂಧವೆಲ್ಲವೂ ಸಾಧಕ ನಿಗ ಸುಖದುಃಖಾತ್ಮಕರವಾದ ಪದಾರ್ಥವೆನಿಸದೆ ನಿತ್ಯ ಸುಖವನ್ನೀಯುವ ಪ್ರಸಾದ ವೆನಿಸಿದಂತಾಯಿತು. ಇಂತಹ ಪ್ರಸಾದ ಸೇವನೆಯಿಂದ ಯಾವತ್ತೂ ದುಃಖದ ವಾಸ ನೆಯೇ ಇಲ್ಲದೆ ನಿತ್ಯ ಸುಖವೇ ದೊರಕುತ್ತಿರುವುದು. ಇದಕ್ಕೆ ಸಾಧಕವಾಗಿ ಅವನು ಯಾವತ್ತೂ ಪರಶಿವನ ಹೆಸರನ್ನು ಮಾನಸಿಕವಾಗಿ ಹೇಳುತ್ತಿರಬೇಕು. ಹೀಗೆಯೇ ನಾಲಿಗೆಗೆ ಯಾವುದಾದರೊಂದು ವಸ್ತುವಿನ ರಸ ಬಂದು ತಗಲಿದಾಗ ಅದನ್ನು ಅಲ್ಲಿ ಇರುವ ಪರಮಾತ್ಮನಿಗೆ ಭಕ್ತಿಯಿಂದ ಅರ್ಪಿಸುವುದನ್ನು ಯಾವನು ಅಭ್ಯಾಸದಿಂದ ಕಲಿಯುವನೊ ಅವನು ಸಿಹಿ ಕಹಿರಸಗಳೆಂಬ ಬೇದ ಭಾವನೆಯನ್ನು ಮರೆತು ಎಲ್ಲವೂ ಸಿಹಿ ಎಂಬ ಸದ್ಭಾವನೆಯನ್ನು ಜೀವನದಲ್ಲಿ ಅಳವಡಿಸಿಕೊಳ್ಳುವನು. ನಾಲಿಗೆಗೆ ರಸ ಪದಾರ್ಥವು ಬಂದು ತಗಲಿದಾಗ ಅದನ್ನು ನಿರಭಿಮಾನದಿಂದ ನಿರ್ವಿಕಾರನಾಗಿ ಗ್ರಹಿಸುವ ಪರಮಾತ್ಮ ಚೈತನ್ಯವು ಸಿಹಿ–ಕಹಿಗಳನ್ನು ಸಮದೃಷ್ಟಿಯಿಂದ ಗ್ರಹಿಸುವಂತೆ ಉಪದೇಶ ಮಾಡುವ ಸ್ವಭಾವದಿಂದ ಗುರುಲಿಂಗವೆನಿಸಿದೆ. ಆ ಬಗೆಯ ಉಪದೇಶಕ್ಕೆ ತಕ್ಕ ಅರ್ಹತೆಯನ್ನು ಪಡೆದು ಮಹೇಶ್ವರನಿಗೆ ಪ್ರಿಯನೆನಿಸಿದ್ದರಿಂದ ಭಕ್ತನು ಮಾಹೇಶ್ವರನೆನಿಸುವನು. ಅಂತಹ ಮಾಹೇಶ್ವರನು ತನ್ನ ನಾಲಿಗೆಗೆ ತಗಲುವ ರಸವನ್ನು ಆಗಲೇ ವಿವೇಚನೆಯಿಂದ ವಿಚಾರ ಮಾಡಿ ಅದನ್ನು ತನ್ನದಲ್ಲವೆಂದೂ ಭಾವಿಸಿ ತನ್ನೊಡನಿರುವ ಗುರುಲಿಂಗಕ್ಕೆ ಭಕ್ತಿಯಿಂದ ಸಮರ್ಪಿಸಿ ಅದನ್ನು ಪ್ರಸಾದ ವಾಗಿ ಭೋಗಿಸತೊಡಗುವನು. ಯಾವನು ಆಚಾರಲಿಂಗಕ್ಕೆ ಶ್ರದ್ಧೆಯಿಂದ ಗಂಧ ವನ್ನು ಅರ್ಪಿಸಿ ಪ್ರಸಾದವಾಗಿ ಭೋಗಿಸುವುದನ್ನು ಕಲಿತಿರುವನೋ ಅವನೇ ಮಾಹೇ ಶ್ವರನೆನಿಸಿ ರಸವನ್ನು ನಿಷ್ಠೆಯಿಂದ ಗುರುಲಿಂಗಕ್ಕೆ ಅರ್ಪಿಸಿ ಪ್ರಸಿದವಾಗಿ ಭೋಗಿಸಬ ಲ್ಲನು. ಇಂತಹ ಭೋಗದಿಂದ ಮಾನವನು ಸುಖದುಃಖಗಳ ಸೋಂಕಿಲ್ಲದೆ ನಿತ್ಯ ಸುಖಿ ಯಾಗಿ ಶಾಂತತೆಯಿಂದ ಬಾಳಬಲ್ಲನು. ಇಂತಹ ಮಾಹೇಶ್ವರನು ಕಣ್ಣಿನಿಂದ ಕಂಡ ರೂಪವನ್ನೆಲ್ಲಾ ತನ್ನೊಡನೆ ನಿರ್ಲಿಪ್ತನಾಗಿ ನೆಲೆಸಿರುವ ಶಿವಲಿಂಗಕ್ಕೆ ಆಗಲೇ ಎಚ್ಚರಿಕೆ ಯಿಂದ ಸಮರ್ಪಿಸಿ ಆ ರೂಪವನ್ನು ಪ್ರಸಾದವೆಂದು ಭಾವಿಸತೊಡಗಿ ಪ್ರಸಾದಿ ಎನಿಸು ವನು. ಇಂತಹ ಪ್ರಸಾದಿಗೆ ರೂಪ ಕುರೂಪವೆಂಬ ಭೇದ ದೃಷ್ಟಿ ಇರುವುದಿಲ್ಲ. ಇವ ನಿಗೆ ನೋಡಿದ ವಸ್ತುವಿನಿಂದ ಯಾವ ವಿಕಾರವೂ ಆಗುವಂತಿಲ್ಲ, ಇವನಿಗೆ ಜಗತ್ತೆ ಲ್ಲವೂ ಪ್ರಸಾದವಾಗಿ ಪರಿಣಮಿಸುವುದು. ಇಂತಹ ಸ್ಥಿತಿಯಲ್ಲಿ ಅವನು ಶಿವಲಿಂಗ ದೊಡನೆ ನಿರ್ಲಿಪ್ತನಾಗಿ ಬಾಳುತ್ತ ಪ್ರಸಾದಿ ಎನಿಸುವನು. ಹೀಗೆ ಮಾನವರೆಲ್ಲರೂ ಪ್ರಸಾದಿಗಳೆನಿಸಿ ಲೋಕವನ್ನು ನಿರಭಿಮಾನದಿಂದ ನೋಡುವ ನಿತ್ಯಸುಖದ ಹಾದಿ ಯನ್ನು ಅರ್ಪಣಯೋಗವು ಎಲ್ಲರಿಗೂ ದೊರಕಿಸಲಿದೆ. ಇಂತಹ ಪ್ರಸಾದಿಯು ಹೃದ ಯದಲ್ಲಿ ತನ್ನೊಡನೆ ನೆಲೆಸಿರುವ ಜಂಗಮಸ್ವರೂಪದ ಪರಮಾತ್ಮನನ್ನು ಮಾನಸಿಕ ವಾಗಿ ಕಂಡು ಅನುಭವಿಸಿ ಪ್ರಾಣಲಿಂಗ ಎನಿಸಿ ಆಗಾಗ ಮುಟ್ಟುವ ಮೃದು ಕಠಿಣ ಸ್ಪರ್ಶ

ವೆಲ್ಲವನ್ನೂ ಆ ಕೂಡಲೇ ನಿರಭಿಮಾನದಿಂದ ಅರ್ಪಿಸುತ್ತ ಲೋಕದ ಸುಖದುಃಖಗಳೆ ಲ್ಲವನ್ನೂ ಪ್ರಸಾದವಾಗಿಯೇ ಭಾವಿಸತೊಡಗುವನು. ಇಂಥವನು ಯಾವತ್ತೂ ಆನಂದದಿಂದ ಬಾಳುತ್ತ ಕಿವಿಗಳಲ್ಲಿ ಸಮಭಾವನೆಯಿಂದ ನೆಲೆಸಿರುವ ಪ್ರಸಾದ ಲಿಂಗಕ್ಕೆ ಆಗಾಗ ಕೇಳಿಬರುವ ಶಬ್ದವೆಲ್ಲವನ್ನೂ ಸಮರ್ಪಿಸುತ್ತ ಸರ್ವಾರ್ಪಣಭಾವದ ಶರಣಾ ಗತಿಯಿಂದ ಶರಣನೆನಿಸುವನು. ಇವನಿಗೆ ಲೋಕದ ಸ್ತುತಿನಿಂದೆಗಳೆಲ್ಲವೂ ಶಬ್ದ ಪ್ರಸಾ ದವಾಗಿ ಪರಿಣಮಿಸುವ ಪ್ರಯುಕ್ತ ಯಾವುದನ್ನೂ ಕೇಳಿದರೂ ವ್ಯಥೆ ಇರುವುದಿಲ್ಲ. ಇಂಥಹ ಶರಣನಿಗೆ ಲೋಕದ ರೂಪ ರಸ ಗಂಧ ಸ್ಪರ್ಶ ಶಬ್ದ ಈ ಐದು ಪದಾರ್ಥಗಳೂ ಅರ್ಪಿತವಾಗಿರುವ ಪ್ರಯುಕ್ತ ಅರ್ಪಿಸಲಿಕ್ಕೆ ಬೇರೆ ಏನೂ ಇಲ್ಲದ್ದರಿಂದ ಇವನು ತನ್ನನ್ನೇ ಹೃದಯದ ಮಹಾಲಿಂಗನಿಗೆ ಅರ್ಪಿಸಿ ಐಕ್ಯಾನಂದವನ್ನು ಅನುಭವಿಸತೊಡಗುವನು.

ಹೀಗೆ ಜೀವ ನದಿಯು ತನ್ನ ಮೂಲವೆನಿಸಿದ ಪರಮಾತ್ಮನೆಂಬ ಮಹಾ ನದಿ ಯಲ್ಲಿ ಸಮರಸವಾಗಿ ಬೆರೆತು ತನ್ನ ಅಲ್ಪತನವನ್ನು ಸ್ವಾರ್ಥತೆ ವ್ಯಾಮೋಹಗಳನ್ನು ಅಹಂಕಾರವನ್ನು ಕ್ರಮವಾಗಿ ಕಳೆದುಕೊಂಡು ವಿಶಾಲನೂ ವ್ಯಾಪಕನೂ ಆದ ಮಹಾ ಜ್ಯೋತಿಯಾಗಿ ಪರಿಣಮಿಸಿ ನಿತ್ಯಾನಂದವನ್ನು ಇಲ್ಲಿಯೇ ಈ ದೇಹದಲ್ಲಿಯೇ ಅನುಭವಿ ಸುವ ಸದವಕಾಶವನ್ನು ಅರ್ಪಣಯೋಗವು ಮಾನವರೆಲ್ಲರಿಗೂ ದೊರಕಿಸಲಿದೆ. ದೇಹ ದಲ್ಲಿ ತಾನೊಬ್ಬನೇ ಇಲ್ಲವೆಂದೂ ತನ್ನೊಡನೆ ತನಗಾಗಿ ಈಶ್ವರನಿರುವನೆಂದೂ ಯಾವನು ವಿಚಾರದಿಂದ ತಿಳಿದು ಅದಕ್ಕೆ ಸೂಕ್ತವಾದ ಆಚಾರದಿಂದ ಬಾಳುವನೋ ಅವನಿಗೆ ಅರ್ಪಣಯೋಗವು ದಿವ್ಯಸಂಜೀವಿನಿ ಎನಿಸಿ ಎಲ್ಲಾ ರೋಗ ವ್ಯಸನಗಳನ್ನು ಪರಿಹರಿಸಿ ಆರೋಗ್ಯಭಾಗ್ಯವನ್ನು ತೃಪ್ತಿ ಆನಂದ ಸೌಭಾಗ್ಯಗಳನ್ನು ದೊರಕಿಸಬಲ್ಲದು. ಇಂದ್ರಿ ಯಗಳ ಜಂಜಾಟದಿಂದ ಮಾನವರನ್ನು ತಪ್ಪಿಸಿ ದೇವತ್ವಕ್ಕೆ ಏರಿಸಿ ನಿತ್ಯಸುಖವನ್ನು ಇಲ್ಲಿಯೇ ಈ ಪ್ರಸಾದ ಕಾಯದಲ್ಲಿಯೇ ಅನುಭವಿಸುವ ದಿವ್ಯಾವಕಾಶವನ್ನು ಅರ್ಪಣ ಯೋಗವು ದೊರಕಿಸಲಿದೆ. ಸತ್ತ್ವರಜಸ್ಸುತಮಸ್ಸುಗಳಿಂದ ಆವರಿಸಲ್ಪಟ್ಟಿರುವ ಮಾನವ ಪ್ರಕೃತಿಯನ್ನು ಸತ್‌ಚಿತ್ ಆನಂದಮಯದ ದೈವೀಪ್ರಕೃತಿಯನ್ನಾಗಿ ಪರಿ ಣಮಿಸಿ ಅದರೊಳಗೇ ಮಾನವರು ನಿರಭಿಮಾನದಿಂದ ನಿರ್ಲಿಪ್ತರೂ ತೃಪ್ತರೂ ನಿರ್ವಿಕಾರಸ್ಥಿತಿಯಲ್ಲಿ ತಮ್ಮ ಕರ್ತವ್ಯಗಳನ್ನು ಶ್ರದ್ಧೋತ್ಸಾಹಗಳಿಂದ ನೆರ ವೇರಿಸುತ್ತ ನೆಮ್ಮದಿಯಿಂದ ಬಾಳುವ ಸುವರ್ಣಯೋಗವನ್ನು ದೊರಕಿಸುವ ದಿವ್ಯಶಕ್ತಿ ಅರ್ಪಣಯೋಗದಲ್ಲಿ ಗಂಭೀರವಾಗಿ ಅಡಗಿದೆ, ಮಾನವರನ್ನು ವಿಚಾರ ಮತ್ತು ಆಚಾರಗಳೆರಡರ ಉದಾರಾಶ್ರಯದಲ್ಲಿ ಬೆಳೆಸಿ ಸಮದೃಷ್ಟಿ ಸಮಾಧಾನಗಳೆಂಬ ದಿವ್ಯಫಲಗಳನ್ನು ಅನುಗ್ರಹಿಸಿ ಅವರಲ್ಲಿ ವೈಷಮ್ಯ, ವೈವಿಧ್ಯ ಗಳನ್ನು ತೊಲಗಿಸಿ ಲೋಕಹಿತಕ್ಕಾಗಿಯೂ ಸಮಾಜಕಲ್ಯಾಣಕ್ಕಾಗಿಯೂ ಶ್ರದ್ಧೆಯಿಂದ ದುಡಿಯುವ ಮನೋಭಾವವನ್ನು ಕರುಣಿಸುವ ದಿವ್ಯಾಸ್ತ್ರವೇ ಅರ್ಪಣಯೋಗವೆಂದರೆ ತಪ್ಪಾಗಲಾರದು. ಇದನ್ನು ಮಾನವರೆಲ್ಲರೂ ತಿಳಿದು ಆಚರಿಸಿದರೆ ಲೋಕದಲ್ಲಿ ರಾಗ ದ್ವೇಷಗಳು ಸುಳಿಯಲಾರವು, ಭಯಶೋಕ ಮೋಹಗಳು ತೊಲಗಿ ಜನರಲ್ಲಿ ಶಾಂತಿ

ಸೈರಣೆ ಸಮಾಧಾನಗಳ ಹೊಂಬೆಳಕು ವ್ಯಾಪಿಸತೊಡಗುವುದು, ಆತ್ಮಜ್ಞಾನ, ಆತ್ಮ ಗೌರವ ಆತ್ಮವಿಶ್ವಾಸಗಳ ದಿವ್ಯಸಂಪತ್ತು ಮಾನವರಲ್ಲಿ ನೆಲೆಸಿ ತೃಪ್ತಿಸಮಾಧಾನಗಳು ಬೇರೂರಿ ಜೀವನವು ಪಾವನವಾಗತೊಡಗುವುದು. ಇಂತಹ ಪವಿತ್ರವೂ ಜ್ಯೋತಿರ್ಮ ಯವೂ ಅಮೃತಮಯವೂ ಆದ ಸುಂದರ ಜೀವನವನ್ನು ಬಾಳಲು ತಕ್ಕ ಸೌಕರ್ಯ ವನ್ನು ಅರ್ಪಣಯೋಗವು ಸುಧಾರಕರೆಲ್ಲರಿಗೂ ದೊರಕಿಸಲಿದೆ. ಜೀವನದಲ್ಲಿ ಉತ್ತಮ ಸಾಧನೆಯಿಂದ ಮಾನವರೆಲ್ಲರೂ ಸಾಧಿಸಬೇಕಾದ ಪರಮಾದರ್ಶವೆಂದರೆ ಇದೆಯೇ; ಎಲ್ಲರೂ ಪಡೆಯಬೇಕಾದ ಪರಿಪೂರ್ಣತೆ ಎಂದರೆ ಇದೆಯೇ. ಪ್ರತಿಯೊಬ್ಬನೂ ಬಾಳಿನಲ್ಲಿ ಸಾಧಿಸಬೇಕಾದ ಶಕ್ತಿ ವಿಕಾಸವೆಂದರೆ ಇದೆಯೇ. ಇದಕ್ಕೆ ಅಂಥವರು ಇಂಥ ವರು ಎಂಬ ವ್ಯತ್ಯಾಸವಿಲ್ಲ. ಇದನ್ನು ಪಡೆಯಲು ಮಾನವರೆಲ್ಲರೂ ಯೋಗ್ಯರಿರು ವರು. ಇದು ವಿಚಾರ ಆಚಾರಗಳೆಂಬ ಎರಡು ಪದಗಳ ಮೇಲೆ ನಿಂತು ಮಾನವರನ್ನು ಉದ್ಧರಿಸಲಿದೆ. ಎಲ್ಲರೂ ಇದನ್ನು ಪಡೆದು ನಿತ್ಯಾನಂದವನ್ನು ಜೀವನದಲ್ಲಿ ಅನುಭವಿ ಸಲೆಂದು ಹಾರೈಸಲಾಗಿದೆ, □

# ಶೈವ-ಜೈನ ದರ್ಶನಗಳು

ಮಿರ್ಜಿ ಅಣ್ಣಾರಾಯ

ಭಾರತೀಯ ಧರ್ಮ, ದರ್ಶನ, ಸಂಸ್ಕೃತಿಗಳನ್ನು ಹೇಳುವಾಗ ಅವು ನಿಗಮಾಗಮ ನಿರೂಪಿತವೆಂದೂ ವೇದಾಗಮ ವಿಹಿತವೆಂದು ಹೇಳುವುದುಂಟು. ಅದರಂತೆ ಕೆಲವು ದರ್ಶನಗಳು ಮೂಲದಲ್ಲಿ ವೇದಪ್ರಣೀತವೆಂದು ಕಂಡುಬಂದರೆ ಇನ್ನುಳಿದ ಕೆಲವು ದರ್ಶನಗಳು ಆಗಮಪ್ರಣಾಲಿಯಲ್ಲಿ ಹರಿದುಬಂದವುಗಳಾಗಿವೆ. ಇಂಥ ದರ್ಶನಗಳಲ್ಲಿ ಶೈವ-ಜೈನ ದರ್ಶನಗಳು ಸಮಾವೇಶಗೊಳ್ಳುತ್ತವೆ. ಇವೆರಡೂ ದರ್ಶನಗಳನ್ನು ರೂಪಿಸಿದ ಯತಿಗಳು, ಅವನ್ನು ಆರಾಧಿಸುತ್ತಿದ್ದ ಸಮಾಜ ಭಾರತದ ಪ್ರಾಗೈತಿಹಾಸಿಕ ಕಾಲದಲ್ಲಿ ಒಂದೇ ಪ್ರದೇಶದಲ್ಲಿ ಒಟ್ಟಾಗಿ ಬಾಳಿ ಬೆಳೆದಿರುವಂತೆ ಕಂಡುಬರುತ್ತದೆ. ಆದರಿಂದ ಈ ಎರಡು ದರ್ಶನಗಳಲ್ಲಿ ಪರಸ್ಪರ ಆದಾನ-ಪ್ರದಾನ, ಪ್ರಭಾವಗಳನ್ನು ಗುರುತಿಸುತ್ತೇವೆ. ಭಾರತೀಯ ಸಂಸ್ಕೃತಿಯ ಭಾವೈಕ್ಯದ ದೃಷ್ಟಿಯಿಂದ ದರ್ಶನಗಳ ಇಂಥ ತುಲನಾತ್ಮಕ ಅಧ್ಯಯನವೂ ಇಂದು ತೀರ ಅವಶ್ಯಕವಾಗಿದೆ.

ವೇದ ಕಾಲದ ರುದ್ರದೇವನು ಮುಂದೆ ಶಿವನೆಂದು ಪ್ರಚುರಗೊಂಡನೆಂದು ವಿದ್ವಾಂಸರು ಹೇಳುವರು. ಜೈನ ಪುರಾಣಗಳು ವೃಷಭ ತೀರ್ಥಂಕರರ ಕಾಲದಲ್ಲಿ ರುದ್ರ ಮುನಿಯಿಂದ ಶೈವ ದರ್ಶನವು ಪ್ರತಿಪಾದಿಸಲ್ಪಟ್ಟಿತೆಂದು ಹೇಳುತ್ತವೆ. ಜೈನ ಸಂಪ್ರದಾಯಕ್ಕನುಸರಿಸಿ ವೃಷಭ ದೇವನ ಕಾಲವು ಪ್ರಾಗೈತಿಹಾಸಿಕ ಕಾಲಕ್ಕೆ ಸೇರುವುದು. ಆಗಲೇ ಶೈವ ದರ್ಶನದ ಉಗಮವನ್ನು ಕಾಣುವೆವು.

ರುದ್ರನು ಮೊದಲಿನಿಂದಲೂ ವೈದಿಕ ದೇವತೆಗಳಿಂದ ಭಿನ್ನನಾಗಿದ್ದಾನೆ. ಅಲ್ಲದೆ ಸಂಹಿತೆಗಳಲ್ಲಿ ಈತನು ಸಂರಕ್ಷಿಸುವ ಹಾಗೂ ಶಿಕ್ಷಿಸುವ ಶಕ್ತಿಯುಳ್ಳ ದೇವನೆಂದು ವರ್ಣಿಸಲ್ಪಟ್ಟಿದ್ದಾನೆ. ಯಜುರ್ವೇದದಲ್ಲಿ ಈತನ ಪ್ರಾರ್ಥನೆಯಿದೆ. ಅದರಂತೆ ವರ್ಣನೆಯೂ ಬಂದಿದೆ. ಅಲ್ಲಿ ಈತನು ಪರ್ವತಗಳಲ್ಲಿ ನಿರ್ಜನ ಪ್ರದೇಶದಲ್ಲಿ ನೆಲೆಸಿರುವಂತೆ ಹೇಳಿದೆ. ಅಲ್ಲದೆ ಆಗಲೇ ಶಂಕರ, ನೀಲಕಂಠ ಎಂಬ ಸಾರ್ಥಕ ನಾಮಗಳನ್ನು ಹೊಂದಿದ್ದನು; ಶಂಕರನು ಕಲ್ಯಾಣಕಾರಕನಾದ ದೇವನು. ಸಿಂಧೂತೀರದ ಮೋಹೆಂಜೊದಾರೋದ ಅವಶೇಷಗಳಲ್ಲಿ ಯೋಗಮುದ್ರೆಯ ಶಿವಮೂರ್ತಿಯನ್ನು ಸಂಶೋಧಕರು ಗುರುತಿಸುವರು.

ಶಿವನು ಕೈಲಾಸವಾಸಿ; ತಪಸ್ವಿ: ನಂದಿವಾಹನ. ಅನೇಕ ಶಿವಗಣಂಗಳ ಬಳಗವುಳ್ಳವನು. ಲೋಕೋಪಕಾರಿ. ಇವನು ಮುಕ್ಕಣ್ಣನು. ಚಂದ್ರಮೌಳಿ. ಗಂಗಾಧರ, ನೀಲಕಂಠ, ಅಲ್ಲದೆ ಈತನು ಮಹಾದೇವನು, ಭೈರವನು, ಪಶುಪತಿ ಹರನು. ನಿರಾಕಾರ ರೂಪದಲ್ಲಿ ಶಿವನು ಸಚ್ಚಿದಾನಂದ, ಸರ್ವಜ್ಞ, ನಿರಾವರಣ, ನಿರಂಜನ, ನಿತ್ಯ, ಪರಿಪೂರ್ಣ, ನಿಷ್ಕಲನೆನಿಸಿದ್ದಾನೆ. ಶೈವಾಗಮಗಳು ಶಿವನನ್ನು ನಿರಾಕಾರ ರೂಪದಿಂದಲೇ ಪೂಜಿಸುವದನ್ನು ಪ್ರತಿಪಾದಿಸುತ್ತವೆ. ನಿರಾಕಾರ ಶಿವನ ಗುರುತೇ ಲಿಂಗವೆನಿಸಿ ಲಿಂಗಪೂಜೆಯು ಬಳಕೆಯಲ್ಲಿ ಬಂದಿದೆ.

ಶೈವದರ್ಶನ, ಸಂಸ್ಕೃತಿಗಳು ಬಹು ಪವಿತ್ರವಾದವುಗಳು, ಪರಿಶುದ್ಧವಾದವುಗಳು. ಭಾರತದ ವಿವಿಧ ಭಾಗಗಳಲ್ಲಿ ಪೂರ್ವಕಾಲದಲ್ಲಿ ಈ ದರ್ಶನವು ಪ್ರಚಾರದಲ್ಲಿ ಇತ್ತು. ವಿಶೇಷವಾಗಿ ಶೈವಧರ್ಮವನ್ನು ಪ್ರಚುರಪಡಿಸಿದವರು ಅರವತ್ತುಮೂರು ಮಂದಿ ಪುರಾತನರು. ಇವರು ಈ ದರ್ಶನ ಪ್ರಸಾರಕರು, ಸತ್ಪುರುಷರು.

ಶೈವಧರ್ಮಕ್ಕೆ ಶಿವಾಗಮಗಳೇ ಮೂಲವೆಂದು– ಶೈವಾಚಾರ್ಯರು ಪ್ರತಿಪಾದಿಸಿದ್ದಾರೆ. ಶಿವಾಗಮಗಳಲ್ಲಿ ಬರುವ ವಿಷಯಗಳನ್ನೆಲ್ಲ ನಾಲ್ಕು ಪಾದಗಳಲ್ಲಿ ವಿಂಗಡಿಸಲಾಗಿದೆ. ಅವುಗಳಿಗೆ ೧) ಕ್ರಿಯಾಪಾದ, ೨) ಚರ್ಯಾಪಾದ, ೩) ಯೋಗಪಾದ ೪) ಜ್ಞಾನಪಾದಗಳೆಂದು ಹೆಸರುಗಳಿವೆ. ಇವುಗಳಲ್ಲಿ ಕ್ರಮವಾಗಿ ಮೂರ್ತಿ ನಿರ್ಮಾಣ, ಸ್ಥಾಪನೆ, ಪೂಜಾಕ್ರಮ, ಶುದ್ಧಾಚರಣೆ, ಯೋಗಿಕ ಸಾಧನ ಮತ್ತು ಜೀವ–ಶಿವರ ಸಂಬಂಧ, ಲೋಕವಿಚಾರ, ಪದಾರ್ಥಗಳ ಸ್ವರೂಪ ವಿವರಣೆಯು ವಿವರವಾಗಿ ಬರುವುದು. ಈ ವಿಷಯಗಳೆಲ್ಲ ಶೈವದರ್ಶನದ 'ಆಸ್ತಿವಾರದಂತಿವೆ. ಬಹು ವಿಸ್ತಾರವಾಗಿಯೂ ಮೂಲದಲ್ಲಿ ವಿವರಿಸಲ್ಪಟ್ಟಿರಬೇಕು. ಪ್ರತಿಯೊಂದು ಆಗಮದಲ್ಲಿ ಇರುವ ಗ್ರಂಥ ಸಂಖ್ಯೆಯನ್ನು ಗಮನದಲ್ಲಿ ತಂದರೆ ಈ ಮಾತು ಲಕ್ಷ್ಯದಲ್ಲಿ ಬರುವುದು ಕಾರಣಾಗಮದ ಸಂಖ್ಯೆ ಕೋಟಿ, ಸೂಕ್ಷ್ಮಾಗಮದ ಸಂಖ್ಯೆ ಪದ್ಮ. ಅಜಿತಾಗಮ ಸಂಖ್ಯೆಯಲ್ಲಿ ನಿಯುತವೆಂದು ಹೇಳಿದೆ. ಹೀಗೆ ಆಗಮ ಗ್ರಂಥಗಳ ಸಂಖ್ಯಾ ಪ್ರಮಾಣವು ಬೆಳೆಯುತ್ತ ಹೋಗುವದು.

ಇನ್ನು ಋಗ್ವೇದದಲ್ಲಿ, ಭಗವಾನ್ ಋಷಭದೇವನ ವರ್ಣನೆಯು ಬರುವಲ್ಲಿ 'ಹೇ ರುದ್ರತುಲ್ಯದೇವ' ಎಂದು ವರ್ಣನೆಯು ಆರಂಭವಾಗಿರುವುದೆಂದು ವೈದಿಕ ವಿದ್ವಾಂಸರಾದ ಪ್ರೊ. ವಿರುಪಾಕ್ಷ ಎಂ. ವಿ. ವೇದತೀರ್ಥ ಅವರು ಒಂದೆಡೆಗೆ, ಸೂಚಿಸುವರು. ಶ್ರಮಣ ಸಂಪ್ರದಾಯದ ಋಷಭದೇವನು ಜೈನರ ಆದಿತೀರ್ಥಂಕರನು ಅವೈದಿಕ ಜನಾಂಗ ದೇವರು. ಋಷಭನು ತಪಸ್ಸು ಮಾಡಿ ಮುಕ್ತನಾದುದು ಕೈಲಾಸ ಶಿಖರದಲ್ಲಿ. ಅವನ ಸಮವಸರಣದಲ್ಲಿಯೂ ಅನೇಕ ಗಣಧರರಿದ್ದಾರೆ. ಅವನ ಲಾಂಛನ ಎತ್ತು. ಇವನೂ ಲೋಕ ಕಲ್ಯಾಣಕರವಾದ ಧರ್ಮವನ್ನು ಬೋಧಿಸಿದ್ದಾನೆ. ಋಷಭದೇವ ದಿಗಂಬರ, ಸರ್ವಜ್ಞ, ಜ್ಞಾನರೂಪಿ, ಶಿವಸ್ವರೂಪಿಯೆನಿಸಿದ್ದಾನೆ. ಅವನಿಗೆ ಶಿವನೆಂದೂ ಒಂದು ಹೆಸರಿದೆ.

ಜೈನಧರ್ಮ ದರ್ಶನಗಳು ಪ್ರಾಚೀನ ಕಾಲದಿಂದಲೂ ಭಾರತದ ವಿವಿಧ ಭಾಗಗ ಗಳಲ್ಲಿ ಪ್ರಚಾರದಲ್ಲಿವೆ. ಅವುಗಳನ್ನು ಪ್ರಸಿದ್ಧಿಸಿದವರು ತ್ರಿಷಷ್ಠಿ ಶಲಾಕಾ ಪುರುಷರು. ಇವರ ಚರಿತ್ರೆಗಳನ್ನು ವರ್ಣಿಸುವ ಗ್ರಂಥವು "ಮಹಾಪುರಾಣ"ವೆಂದು ಜೈನಾಗಮಗ ಳಲ್ಲಿ ಪ್ರಸಿದ್ಧವಾಗಿವೆ. ಮಹಾಪುರುಷರ ಸಂಖ್ಯೆಯಲ್ಲಿಯೂ ಶೈವ ಜೈನ ಸಂಪ್ರದಾ ಯಗಳು ಒಂದೇ ಧ್ವನಿಯನ್ನು ಎತ್ತಿವೆ. ಇವರು ನಮ್ಮ ನಮ್ಮ ಸಂಸ್ಕೃತಿಯಲ್ಲಿ ಆದರ್ಶ ಪುರುಷರು; ಧರ್ಮೋದ್ಧಾರಕರು; ಐತಿಹಾಸಿಕ ವ್ಯಕ್ತಿಗಳೂ ಅಹುದು. ಇವರು ಆಯಾ ಧರ್ಮಗಳ ಇತಿಹಾಸವನ್ನು ರೂಪಿಸಿದ್ದಾರೆ, ಪರಮಪೂಜ್ಯರೆನಿಸಿದ್ದಾರೆ.

ಶೈವಧರ್ಮಕ್ಕೆ ಶಿವಾಗಮಗಳು ಮೂಲವಾಗಿದ್ದಂತೆ ಜೈನ ಧರ್ಮಕ್ಕೆ ಜಿನಾ ಗಮಗಳು ಮೂಲವಾಗಿವೆ. ಅವುಗಳಿಗೆ (೧) ಪ್ರಥಮಾನುಯೋಗ, (೨) ಕರ- ಣಾನುಯೋಗ. (೩) ದ್ರವ್ಯಾನುಯೋಗ, (೪) ಚರಣಾನುಯೋಗ ಎಂದು ಹೆಸರು ಗಳಿವೆ. ಈ ಆಗಮಗ್ರಂಥಗಳಲ್ಲಿ ಕ್ರಮವಾಗಿ ಜೈನ ಮಹಾಪುರುಷರ ಚರಿತ್ರೆ ಗಳು. ಲೋಕದ ರಚನೆ ಮತ್ತು ಜಗತ್ತಿನ ಭೂಗೋಲ ವಿಷಯ; ಜೀವ, ಆತ್ಮ ಕರ್ಮ, ಕಾಲ, ಪ್ರಾಣಗಳ ಸ್ವರೂಪ ಕಥನ; ಜೈನ ಗೃಹಸ್ಥ ಹಾಗು ಮುನಿಗಳ ಆಚಾರಗಳ ವಿವರಗಳನ್ನೆಲ್ಲ ವಿಸ್ತಾರವಾಗಿ ವರ್ಣಿಸಿದೆ. ಜೈನಾಗಮಗಳ ಗ್ರಂಥ ಸಂಖ್ಯೆಯೂ ಶಿವಾಗಮಗಳಂತೆಯೇ ವಿಪುಲವಾಗಿವೆ. ಜೈನಾಗಮಗಳ ಮೊದಲ ನೆಯ ಅಂಗವಾದ ಆಚಾರಾಂಗದಲ್ಲಿ ಹದಿನೆಂಟು ಸಾವಿರ ಪದಗಳಿದ್ದರೆ, ವಿಪಾಕ ಸೂತ್ರಾಂಗದಲ್ಲಿ ಒಂದು ಕೋಟಿ, ಎಂಭತ್ತುನಾಲ್ಕು ಲಕ್ಷ ಪದ ಸಂಖ್ಯೆಯಲ್ಲಿ ಪಾಪ ಪುಣ್ಯಗಳ ವಿವರಣೆಯಿದೆ.

ಹೀಗೆ ಭಾರತೀಯ ಸಂಸ್ಕೃತಿಯ ಪ್ರಾರಂಭಾವಸ್ಥೆಯಲ್ಲಿ ಶೈವ ಹಾಗೂ ಜೈನ (ಶ್ರಮಣ) ದರ್ಶನಗಳು ಒಮ್ಮುಖವಾಗಿ ಬೆಳೆದು ಜನರಲ್ಲಿ ತ್ಯಾಗ ಜೀವನ, ಸತ್ಯ ನಿಷ್ಠೆ, ಪ್ರಾಣಿದಯೆಗಳನ್ನು ಬೋಧಿಸಿದುವು. ಭಾರತದ ಪ್ರಾಗೈತಿಹಾಸಿಕ ಕಾಲದ ಸಂಸ್ಕೃತಿಯನ್ನು ರೂಪಿಸಿದುವು. ಈ ಎರಡು ಪ್ರಾಚೀನ ಪರಂಪರೆಗಳ ಸಮ್ಮೇಲನವು ಹೀಗೆ ಬಹು ಸ್ಪೃಹಣೀಯವಾಗಿದೆ. ಅದರಂತೆ ದರ್ಶನಗಳ ಆಧಾರ-ಪ್ರಧಾನವೂ ಮನೋರಂಜಕವಾಗಿದೆ. ಅಧ್ಯಯನ, ಅನುಶೀಲನಗಳ ವಿಷಯವೂ ಆಗಿದೆ.

* * * *

ಶೈವ ಸಿದ್ಧಾಂತವು, ಪರಮಾತ್ಮನು ಈ ವಿಶ್ವವನ್ನು ಜೀವರಾಶಿಯವರ ಉಪಯೋಗ ಕ್ಕಾಗಿ ನಿರ್ಮಿಸಿದನೆಂದು ಪ್ರತಿಪಾದಿಸುತ್ತದೆ. ಇದು ಕುಂಬಾರನು ಗಡಿಗೆಯನ್ನು ಮಾಡಿದಂತೆಯಿದೆ. ಗಡಿಗೆಯನ್ನು ಮಾಡಲು ಮಣ್ಣು ಬೇಕಾಗುವಂತೆ ವಿಶ್ವರಚನೆಗೆ ಒಂದು ವಸ್ತುವು ಬೇಕು. ಈ ವಸ್ತುವಿಗೆ ಶೈವಾಗಮಗಳು 'ಮಾಯೆ' ಎಂದೂ ಕರೆದಿವೆ. ಇದು ಅದ್ವೈತಿಗಳ ಮಾಯೆಯಂತಲ್ಲ. ಯಾವ ವಸ್ತುವಿನಿಂದ ವಿಶ್ವವು ನಿರ್ಮಾಣಗೊಂಡಿದೆಯೋ ಅದುವೇ ( Matter ) ಮಾಯೆಯು. ಇದು ವಿಶ್ವಕ್ಕೆ ಉಪಾದಾನ ಕಾರಣವಾಗಿದೆ. ಮಾಯೆಯಿಂದ ರೂಪುಗೊಂಡ ಜಗತ್ತಿಗೆ ಪಾಶವೆಂದು

ಹೆಸರು. ಈ ಪಾಶವನ್ನು ಉಪಯೋಗಿಸಿಕೊಳ್ಳುವ ಜೀವಿಗಳಿಗೆ ಪಶುಗಳೆನ್ನುವರು. ಪಶುಗಳು ತಮ್ಮ ಮಲವನ್ನು ಕಳೆದುಕೊಳ್ಳಲು ವಿಶ್ವವನ್ನು ಉಪಯೋಗಿಸಿಕೊಳ್ಳು ವರು. ಈ ಪಶುಗಳನ್ನು ಕರುಣಿಸಿ ಮುಕ್ತಿಯನ್ನು ಕೊಡುವವನು ಶಿವನು. ಆದರಿಂದ ಇವನು ಪತಿ. ಇವನಿಗೆ ಕಾಲ ನಿಯತಿಗಳ ಸಹಾಯ ಇದೆ. ಹೀಗೆ ಶೈವ ಸಿದ್ಧಾಂ-ತವು ಪತಿ, ಪಶು, ಪಾಶಗಳೆಂಬ ಮೂರು ಪದಾರ್ಥಗಳನ್ನು ಸ್ವೀಕರಿಸುವುದು. ಇವು ಮೂರು ನಿತ್ಯವಾದವುಗಳು. ಆದರಿಂದ ಇದು ಅದ್ವೈತ ಧರ್ಮವಲ್ಲ. ಇನ್ನು ಈ ವಿಶ್ವದಲ್ಲಿ ಬಾಳಿಯೇ ಜೀವಾತ್ಮರು ತಮ್ಮ ಮಲಗಳನ್ನು ಕಳೆದುಕೊಂಡು ಶುದ್ಧರಾಗ ಬೇಕು. ಜೀವಾತ್ಮರಿಗೆ ಅಂಟಿದ ಈ ಮಲವು ಆಣವ, ಮಾಯಾ, ಕಾರ್ಮಿಕಗಳೆಂದು ಮೂರು ತೆರನಾಗಿರುತ್ತದೆ. ಬಾಳಿನಲ್ಲಿ ಮಾನವನು ಉತ್ತಮ ಕ್ರಿಯೆಗಳನ್ನು ಪರೋಪ ಕಾರಾದಿಗಳನ್ನು ಮಾಡಿ. ಜಪತಪ ಪೂಜಾದಿಗಳಿಂದ ಕಾರ್ಮಿಕ ಮಲವನ್ನು ಕಳೆದು ಕೊಳ್ಳಬಹುದು. ಆಗ ಮಾಯಾ ತತ್ತ್ವವನ್ನು ದಾಟಲು ಶಕ್ತನಾಗುತ್ತಾನೆ; ಮಾಯಾ ಮಲವನ್ನು ಕಳೆದುಕೊಳ್ಳುತ್ತಾನೆ. ಆಮೇಲೆ ಪರಮಾತ್ಮನ ಅನುಗ್ರಹದಿಂದ ಆಣವ ಮಲವನ್ನು ನಷ್ಟಗೊಳಿಸಿಕೊಳ್ಳುವನು.

ಜೀವ ಮುಕ್ತನಾಗಲು ತನ್ನಲ್ಲಿ ಸೇರಿದ ಅಥವಾ ತನಗೆ ಅಂಟಿದ ಸರ್ವ ಕರ್ಮ ಗಳನ್ನು ಕಳೆದುಕೊಳ್ಳಲೇಬೇಕೆಂದು ಜೈನ ದರ್ಶನವು ಪ್ರತಿಪಾದಿಸುತ್ತದೆ. ಈ ಕರ್ಮ ನಿರ್ಜರೆಗೆ ಜೀವನ ಶುದ್ಧಾಚರಣೆ. ಜಪತಪಗಳೇ ಸಾಧನವೆಂದು ಅದು ಸಾರಿದೆ. ಇಂಥ ಸಾಧನೆಯನ್ನು ಮಾನವನು ವ್ಯಕ್ತಿಶಃ ಈ ವಿಶ್ವದಲ್ಲಿ ಜೀವಿಸಿಯೇ ಮಾಡಬೇಕಾಗು ತ್ತದೆ. ಆದರಿಂದ ಜೀವನಿಗೆ ಪ್ರಪಂಚವೊಂದು ಸಾಧನಾ ರಂಗವೆನಿಸಿದೆ. ಅದಕ್ಕಾಗಿ ಜೀವನವು ಸಾಧಕನಿಗೆ ಹೇಯವಲ್ಲ; ಉಪಾದೇಯವಾಗಿದೆ. ಆತ್ಮನು ವ್ಯಕ್ತರೂಪ ವನ್ನು ಹೊಂದುವುದು ಈ ಕರ್ಮದ ಸಂಸರ್ಗದಿಂದ. ಈ ಸಂಸರ್ಗ ಅನಾದಿಕಾಲ ದಿಂದಲೂ ಆತ್ಮನಿಗೆ ಇದೆ. ಆದರಿಂದಲೇ ಪುನರ್‌ಜನ್ಮಾದಿಗಳು, ವಿವಿಧ ಗತಿಗಳೂ ಸುಖ, ದುಃಖಗಳೂ ಉಂಟಾಗುತ್ತಿವೆ, ಇವೆಲ್ಲವುಗಳನ್ನು ನಷ್ಟಗೊಳಿಸುವುದೇ ಮುಕ್ತಿ. ಇದನ್ನು ಪಡೆಯುವುದಕ್ಕೆ ಸ್ವತಃ ಜೀವವೇ ಹೆಣಗಲಿಕ್ಕೆ ಬೇಕು. ಇದಕ್ಕೆ ಯಾರ ಅನುಗ್ರಹವೂ ಅವಶ್ಯಕವಿಲ್ಲ. ಮುಕ್ತಾತ್ಮರ ಆದರ್ಶ ಜೀವನಾನುಷ್ಠಾನಗಳೇ ಅದಕ್ಕೆ ಆದರ್ಶ. ಅದನ್ನು ನಂಬಿ ನಡೆಯುವುದೇ ಸಮ್ಯಕ್ತ್ವ. ಇಂಥ ಸಮ್ಯಕ್ ದರ್ಶನ, ಜ್ಞಾನ, ಚಾರಿತ್ರಗಳೇ ಮುಕ್ತಿಗೆ ಸಾಧನಗಳು. ಆಕಾಶದಲ್ಲಿ ಜಡ, ಚೈತನ್ಯಗಳು ಒಂದುಗೂಡುವುದ ರಿಂದ ಸೃಷ್ಟಿ ರೂಪುಗೊಂಡಿದೆ. ಇದು ಸ್ವಾಭಾವಿಕವಾದುದು. ಇದಕ್ಕೆ ಸೃಷ್ಟಿಕರ್ತನೆಂಬು ವವನಿಲ್ಲ. ಅವನ ಆವಶ್ಯಕತೆಯೂ ಇಲ್ಲ ಎಂದು ಜೈನದರ್ಶನವು ಸಾಧಿಸುತ್ತದೆ. ಇಂಥ ವಿವರಗಳಲ್ಲಿ ವ್ಯತ್ಯಾಸಗಳಿದ್ದರೂ ಶೈವ–ಜೈನ ದರ್ಶನಗಳೆರಡೂ ಆತ್ಮಕ್ಕೆ ಅಂಟಿದ ಕರ್ಮ ವನ್ನು ಮಲವೆಂದು ಸ್ವೀಕರಿಸುತ್ತವೆ. ಅದನ್ನು ಕಳೆದುಕೊಂಡಾಗಲೇ ಮುಕ್ತಿ ಎಂದು ನಂಬುತ್ತವೆ. ಇದಕ್ಕೆಲ್ಲ ಜೀವಿಗೆ ವಿಶ್ವವೇ–ಬದುಕೇ–ಸಾಧನ ರಂಗವೆಂದು ಗ್ರಹಿಸಿಯೂ ಇವೆ. ಶುದ್ಧಾಚರಣೆ, ಜಪತಪಾದಿಗಳೇ ಮುಕ್ತಿಯ ಮಾರ್ಗವೆಂದು ನಂಬಿ ಮುನ್ನಡೆದಿವೆ.

ಜೀವವು ತನ್ನ ಉದ್ಧಾರಕ್ಕೆ ತಾನೂ ಸ್ವತಂತ್ರ; ಅವನಿಗೆ ಇನ್ನೊಬ್ಬರ ಕರುಣೆಯ ಆಶ್ರಯ ಬೇಕಿಲ್ಲ; – ಎಂದು ಸಾಧಿಸುವ ಜೈನ ಧರ್ಮದ ಮಾತನ್ನು ಶೈವ ದರ್ಶನದ 'ಪತಿ ಪದಾರ್ಥ' ಗಳ ನಿರೂಪಣೆಯ ಹಿನ್ನೆಲೆಯಲ್ಲಿ ಅವಲೋಕಿಸಬೇಕು. ಶಿವನು ಪತಿ ಆದರೂ ಜೀವಗಳಿಗೆ ಅವುಗಳ ಪೂರ್ವಕರ್ಮದಂತೆ, ಸುಖ ದುಃಖಗಳನ್ನು ಭೋಗಿಸಲು ಹಚ್ಚುವನು. ಅದರಿಂದ ಈತನ ಕ್ರಿಯಾಶಕ್ತಿಯು ಜೀವಿಗಳ ಕರ್ಮವನ್ನು ಅವ ಲಂಬಿಸಿದೆ. ಜೀವಿಗಳ ಪ್ರಾಪ್ತನ ಕರ್ಮವನ್ನು ಅಲ್ಲಗಳೆದು ಸರ್ವಶಕ್ತನಾದ ಶಿವನೂ ಏನನ್ನೂ ಮಾಡಲಾರ, ಆದರೆ ಜೈನ ದರ್ಶನದಲ್ಲಿ ಕರ್ಮಫಲವನ್ನು ಜೀವವು ಭೋಗಿಸುವಲ್ಲಿ ಶಿವ ಶಕ್ತಿಯ ಮಧ್ಯಸ್ಥಿಕೆಯನ್ನು ಸ್ವೀಕರಿಸಿಲ್ಲ. ಅಂದರೂ ಎರಡೂ ದರ್ಶನಗಳಲ್ಲಿ ಜೀವದ ಆಗು – ಹೋಗುಗಳಿಗೆ ಕರ್ಮವೇ ಬಲವತ್ತರ ಕಾರಣವೆನಿಸಿದೆ.

ಶೈವ ದರ್ಶನದಲ್ಲಿ ಜೀವಾತ್ಮನು ಪಶು, ಅವನು ಅಣುಸ್ವರೂಪಿ, ಕ್ಷೇತ್ರಜ್ಞ. ಶಾಶ್ವತನೂ ಸರ್ವವ್ಯಾಪಿಯೂ ಆಗಿರುವನು. ಇಂಥ ಜೀವಾತ್ಮರು ಅನೇಕರಿರುವರು. ಪಾಶ ಹರಿದ ನಂತರ ಜೀವನು ಶಿವಸ್ವರೂಪವನ್ನು ಹೊಂದುವನು. ಈ ವಿಚಾರದಲ್ಲಿ ಜೈನ – ಶೈವ ದರ್ಶನಗಳಲ್ಲಿ ತುಂಬ ಹೊಂದಿಕೆಯಿದೆ. ಜೀವಗಳು ಅನೇಕ, ಅನಂತ ಎಂಬ ಸಂಗತಿಯನ್ನು ಅದೂ ಪ್ರತಿಪಾದಿಸಿದೆ. ಪಾಶ ಹರಿಯುವ ಮಾತನ್ನು ಕರ್ಮ ಬಂಧದಿಂದ ಬಿಡುಗಡೆ ಹೊಂದುವುದೆಂದು ಜೈನ ದರ್ಶನವು ಹೇಳುವುದು. ಕರ್ಮಬಂಧ ಕಳೆದುಕೊಂಡವನೇ ಮುಕ್ತ. ಅವನೇ ಸಿದ್ಧಾತ್ಮ, ಪರಮಾತ್ಮ. ಅವನನ್ನೇ ಶಿವ ಸ್ವರೂಪಿಯೆಂದೂ ಹೇಳಬಹುದು.

ಕರ್ಮದ ಸ್ವರೂಪ, ಜೀವದೊಡನೆ ಅದರ ಇರುವಿಕೆ, ಅದರ ಅವಸ್ಥೆಗಳು ಇತ್ಯಾದಿ ವಿಷಯಗಳಲ್ಲಿ ಶೈವ–ಜೈನ ದರ್ಶನಗಳೆರಡೂ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಮಾರ್ಗ ವನ್ನು ಅನುಸರಿಸಿವೆ. ಶೈವ ದರ್ಶನವು ಜೀವಾತ್ಮನ ಜ್ಞಾನ ಕ್ರಿಯಾಶಕ್ತಿಗಳನ್ನು ಮರೆ ಮಾಡುವ ಪದಾರ್ಥಕ್ಕೆ ಮಲವೆಂದು ಸಂಬೋಧಿಸುವುದು. ಈ ಮಲದಲ್ಲಿ ಆಣವ ಮಾಯಾ, ಕಾರ್ಮಿಕಗಳೆಂದು ಮೂರು ಪ್ರಕಾರಗಳನ್ನು ಸ್ವೀಕರಿಸುತ್ತದೆ. ಜೈನ ಸಾತ್ವಿ ಕರು ಕರ್ಮದಲ್ಲಿ ಜ್ಞಾನಾವರಣೀಯ, ದರ್ಶನಾವರಣೀಯವೇ ಮೊದಲಾದ ಎಂಟು ಪ್ರಕಾರಗಳನ್ನು ಹೇಳುವರು. ಈ ಕರ್ಮಗಳೂ ಸಹ ಆತ್ಮನ ಜ್ಞಾನ, ದರ್ಶನ ಗುಣ ಗಳನ್ನು ದೂರಮಾಡುತ್ತವೆಂದು ಪ್ರತಿಪಾದಿಸಿದ್ದಾರೆ. ಜೀವಿಯ ಕೃತಿಯ ಪರಿಣಾಮವೇ ಕರ್ಮವೆಂಬ ಮಾತನ್ನು ಎರಡು ದರ್ಶನಗಳೂ ಒಪ್ಪುತ್ತವೆ. ಅದರಂತೆ ಶೈವರು ಕರ್ಮವು ಶುದ್ಧ, ಅಶುದ್ಧವೆಂದು ವಿಂಗಡಿಸಿದ್ದರೆ ಜೈನರು ಶುಭ, ಅಶುಭವೆಂದು ವಿಭಜಿಸಿದ್ದಾರೆ. ಕರ್ಮ ಜೀವರ ಸಂಬಂಧ 'ಅನಾದಿಯೆಂದೂ' ಬೀಜವೃಕ್ಷ ನ್ಯಾಯದಂತೆ ಎಂದು ಎರಡೂ ದರ್ಶನಗಳು ಸ್ವೀಕರಿಸುತ್ತವೆ.

ಶೈವ ದೃಷ್ಟಿಯು ಜೀವಾತ್ಮರನ್ನು 'ಪಶು' ಎಂದು ಸಂಬೋಧಿಸಿತು. ಈ ಪಶು ಗಳು ಮೂರು ಪ್ರಕಾರವಾಗಿರುವವು: ೧. ವಿಜ್ಞಾನಕಲರು ೨. ಪ್ರಲಯ ಕಲರು, ೩. ಸಕಲರು. ಜೈನತತ್ವವು ಸಂಸಾರಿ ಜೀವಿಗಳಲ್ಲಿ ಭವ್ಯ, 'ಅಭವ್ಯರೆಂದು ಎರಡು ವಿಧ

ವಾಗಿ ವಿಂಗಡಿಸಿದೆ, ಭವ್ಯರಲ್ಲಿ 'ಕಾಲಲಬ್ಧಿ'ಯನ್ನು ಹೊಂದಿದವರು ವಿಶಿಷ್ಟ ತರಗತಿಯವರು. ದೂರಭವ್ಯರು ಇನ್ನೊಂದು ತರಗತಿಯ ಜನರು. ವಿಜ್ಞಾನ, ಯೋಗ, ಸನ್ಯಾಸಗಳಿಂದ ಕಾರ್ಮಿಕ ಮಲಗಳನ್ನು ತೊಳೆದುಕೊಂಡು ಕಲೆಗಳ ಸಂಬಂಧವನ್ನು ಕಡಿದೊಗೆದ ಜೀವಾತ್ಮರು ವಿಜ್ಞಾನಕಲರು. ಇವರಲ್ಲಿ ಸಮಾಪ್ತಕಲುಷರೆಂದು ಅಸಮಾಪ್ತ ಕಲುಷರೆಂದೂ ಎರಡು ಪ್ರಕಾರಗಳಿವೆ. ವಿಜ್ಞಾನಕಲರು ಜೈನದರ್ಶನದಲ್ಲಿ ಹೇಳಿದ 'ಕೇವಲಿ'ಗಳಂತೆ ಇರುವವರು. ಕೇವಲಿಗಳ ಆತ್ಮನು ಜ್ಞಾನ ದರ್ಶನಗಳಿಗೆ ಇಂದ್ರಿಯ ಮೊದಲಾದವುಗಳು ನೆರವನ್ನು ಅಪೇಕ್ಷಿಸುವದಿಲ್ಲ. ಅದರಿಂದ 'ಕೇವಲಿ' ಎನಿಸಿಕೊಳ್ಳುವನು. ಇವನು ಇನ್ನೂ ದೇಹಧಾರಿಯಾಗಿರುವದರಿಂದ 'ಸಯೋಗಿ' ಎನಿಸುವನು. ಆದರೆ ಘಾತಿಕರ್ಮಗಳಿಂದ ದೂರನಾಗಿರುವದರಿಂದ 'ಜಿನ' ನೆನಿಸುವನು. ಇವನೇ ಅರಹಂತನು. ಇವನಂತೆಯೇ ಸಮಾಪ್ತ ಕಲುಷರು ಶೈವ ದರ್ಶನದ ಪ್ರಕಾರ ವಿದ್ಯೇಶ್ವರರು. ಇವರು ಅನಂತ, ಸೂಕ್ಷ್ಮ, ಶಿವೋತ್ತಮ ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ ಮತ್ತು ಶಿಖಂಡಿಯೆಂದು ಎಂಟು ವಿಧ. ಈ ಪ್ರಕಾರವನ್ನು ಜೈನರ ಸಿದ್ಧರ ಎಂಟು ಗುಣಗಳೊಡನೆ ಹೋಲಿಸಬಹುದು. ಅವು (೧) ಸಮ್ಯಕ್ತ್ವ. (೨) ದರ್ಶನ, (೩) ಜ್ಞಾನ, (೪) ಅಗುರುಲಘುತ್ವ (ಜಡವೂ ಅಲ್ಲ ಹಗುರೂ ಅಲ್ಲ), (೫) ಅವಗಾಹನತ್ವ (ಒಂದು ಜೀವದ ಸ್ಥಳದಲ್ಲಿ ಅನೇಕ ಜೀವಗಳೂ ನಿಲ್ಲುವುದು), (೬) ಸೂಕ್ಷ್ಮತ್ವ, (೭) ಅನಂತವೀರ್ಯತ್ವ, (೮) ಅವ್ಯಾಬಾಧತ್ವ (ಬಾಧೆಯಿಲ್ಲದ) ಹೀಗಿವೆ. ಈ ಗುಣಗಳಿಂದ ಕೂಡಿದ ಸಿದ್ಧರು ಯಾವ ಕಾರ್ಯವನ್ನು ಮಾಡರು. ಸ್ವಭಾವಸ್ಥಿತರಿವರು. ವಿದ್ಯೇಶ್ವರರು ಸಹ ಪುರುಷರಿಗೆ ಯೋಗ್ಯವಾದ ದೊಡ್ಡ ಅಧಿಕಾರಿಗಳಲ್ಲಿರುವರು. ಜೈನರ ಅರಹಂತ, ಸಿದ್ಧರ ಅವಸ್ಥೆಗಳಂತೆಯೇ ಶೈವದರ್ಶನದ ಅಸಮಾಪ್ತಕಲುಷ, ಸಮಾಪ್ತಕಲುಷರ ಸ್ಥಿತಿಗಳಿವೆ.

ಇನ್ನು ಪ್ರಲಯಕಲರು ಕಾರ್ಮಿಕ ಮಲವನ್ನು ಗೆದ್ದ ಜೀವಾತ್ಮರು. ಇವರಲ್ಲಿ ಇನ್ನೂ ಆಣವ ಮತ್ತು ಮಾಯಾ ಮಲಗಳು ಇರುವವು. ಇವರಲ್ಲಿಯೂ ಪಕ್ವಪಾಶದ್ವಯರು, ಅಪಕ್ವಪಾಶ್ವದಯರು ಎಂದು ಎರಡು ವಿಧ. ಇವರಲ್ಲಿ ಮೊದಲನೆಯವರು ಶಿವನ ಅನುಗ್ರಹದಿಂದ ಮುಕ್ತಿಯನ್ನು ಹೊಂದುವರು. ಜೈನ ದರ್ಶನದ ಭವ್ಯ ಜೀವಿಗಳೂ ಪಕ್ವಪಾಶದ್ವಯರಂತೆಯೇ, ಆದರೆ ಅವರು ತಮ್ಮ ಸಾಧನೆಯಿಂದ ಮುಕ್ತಿಯನ್ನು ಹೊಂದುತ್ತಾರೆ. ಯಾರ ಅನುಗ್ರಹಕ್ಕೂ ಕಾಯುವದಿಲ್ಲ. ಅಪಕ್ವಪಾಶದ್ವಯರು ಜೈನ ದರ್ಶನದಲ್ಲಿ ಹೇಳಿದ ಸಂಸಾರೀ ಜೀವಿಗಳಂತೆ ಇರುತ್ತಾರೆ. ಈ ವರ್ಗದವರು ಕರ್ಮಬಂಧನದಲ್ಲಿ ತೊಳಲುತ್ತ ಸಂಸಾರಚಕ್ರದಲ್ಲಿ ಸಿಕ್ಕು, ಜನ್ಮಾಂತರಗಳನ್ನು ಹೊಂದುತ್ತಲಿರುವರು. ಜೈನರು ಕಾರ್ಮಾರ್ಣಕವೆಂದು ಸೂಕ್ಷ್ಮಶರೀರವು ಇವರ ಭವಾಂತರಕ್ಕೆ ಕಾರಣವಾಗಿರುತ್ತದೆನ್ನುವರು. ಆ ಸೂಕ್ಷ್ಮ ಶರೀರವನ್ನೇ ಶೈವದರ್ಶನವು 'ಪುರ್ಯಾಷ್ಟಕ' ಎಂದು ಕರೆದಿದೆ. ಮುಂದೆ ಸಕಲರಲ್ಲಿಯೂ ಪಕ್ವಕಲುಷ, ಅಪಕ್ವಕಲುಷರೆಂದು ಎರಡು ವರ್ಗಗಳನ್ನು ಶೈವದರ್ಶನವು ಹೇಳುವುದು. ಈ ಪಕ್ವಕಲುಷರನ್ನು ಸಾಧಾರಣವಾಗಿ

ಕಾಲಲಬ್ಧಿ ಹೊಂದಿದ ಜೀವಿಗಳಂತೆಯೂ ಕ್ಷೀಣಕಷಾಯವೆಂಬ ಅವಸ್ಥೆಯನ್ನು ಹೊಂದಿದ ಜೈನಸಾಧಕರಂತೆಯೂ ಎಂದು ತಿಳಿಯಬಹುದು. ಅಪಕ್ವಕಲುಷರು ಜೈನರು ಹೇಳುವ ದೂರ ಭವ್ಯರೇ ಸರಿ. ಇವರು ಯಾವಾಗಲೂ ಕರ್ಮಗಳ ಫಲಗಳನ್ನು, ಭೋಗಿಸುತ್ತ ಚತುರ್ಗತಿಗಳಲ್ಲಿ ಭ್ರಮಣ ಮಾಡುತ್ತ ಇರುತ್ತಾರೆ.

ಎರಡೂ ದರ್ಶನಗಳು ಜೀವಿಗಳಿಗೆ ಮುಕ್ತಿ ಎಂಬ ಅವಸ್ಥೆಯನ್ನು ಸ್ವೀಕರಿಸಿವೆ. ಅಲ್ಲದೆ ಅದೇ ಜೀವದ ಅತ್ಯಂತ ಕೊನೆಯ ಅವಸ್ಥೆಯೆಂದೂ, ಅನಂತ ಸುಖದ ನೆಲೆಯೆಂದೂ ನಂಬಿವೆ. ಅದರಂತೆ ಈ ಮುಕ್ತಿಯ ಸಾಧನೆಗೆ ಒಂದು ನಿಶ್ಚಿತ ಮಾರ್ಗವನ್ನೂ ರೂಪಿಸಿ, ಜನಾಂಗದ ಎದುರಿಗೆ ಮಂಡಿಸಿವೆ. ಶೈವ ದರ್ಶನವು ಷಟ್‌ಸ್ಥಲ ಮಾರ್ಗವನ್ನು ನಿರೂಪಿಸಿದ್ದರೆ ಜೈನ ದರ್ಶನವು ಗುಣಸ್ಥಾನಗಳ ಕ್ರಮವನ್ನು ಹಾಕಿಕೊಟ್ಟಿದೆ. ಷಟ್‌ಸ್ಥಲಗಳು—(೧) ಭಕ್ತಸ್ಥಲ (೨) ಮಹೇಶ್ವರ ಸ್ಥಲ (೩) ಪ್ರಸಾದಿ ಸ್ಥಲ (೪) ಪ್ರಾಣಲಿಂಗಿ ಸ್ಥಲ (೫) ಶರಣಸ್ಥಲ (೬) ಐಕ್ಯಸ್ಥಲ ಎಂದು ಅರಿವೆ. ಅವೇ ಗುಣಸ್ಥಾನಗಳು— (೧) ಮಿಥ್ಯಾತ್ವ (೨) ಸಾಸಾದನ (೩) ಸಮ್ಯಗ್ಮಿಥ್ಯಾತ್ವ (೪) ಅವಿರತ (೫) ದೇಶವಿರತ (೬) ಪ್ರಮತ್ತ (೭) ಅಪ್ರಮತ್ತ (೮) ಅಪೂರ್ವಕರಣ (೯) ಅನಿವೃತ್ತಿ (೧೦) ಸೂಕ್ಷ್ಮಸಾಂಪರಾಯ (೧೧) ಉಪಶಾಂತ (೧೨) ಕ್ಷೀಣಕಷಾಯ (೧೩) ಸಯೋಗ ಕೇವಲಿ (೧೪) ಅಯೋಗ ಕೇವಲ ಎಂದು ಹದಿನಾಲ್ಕು ಇವೆ. ಇನ್ನು ಇವೆರಡೂ ಮಾರ್ಗಗಳಿಂದ ಸಾಗುವ, ಸಾಧಕರ ಸ್ಥಿತಿಯನ್ನು ಸ್ವಲ್ಪ ತುಲನಾತ್ಮಕ ದೃಷ್ಟಿಯಿಂದ ಅವಲೋಕಿಸೋಣ.

ದೇಹವೆಂಬ ಉಪಾಧಿಯನ್ನೇ ಉಪಯೋಗಿಸಿಕೊಂಡು, ದೇಹ ನಾನೆಂಬ, ದೇಹ ನನ್ನದೆಂಬ ಅಜ್ಞಾನ ಅಭಿಮಾನಗಳನ್ನೂ ಬಿಟ್ಟು ನಿಜದ ಕಡೆಗೆ ಸಾಗಬೇಕು ; ಸಾಧನೆಯನ್ನು ಮಾಡಬೇಕು. ಈ ಸಾಧನೆಯ ಮೊದಲ ಮೆಟ್ಟಲೇ ಭಕ್ತಸ್ಥಲವು. ಭಕ್ತನಿಗೆ ಗುರುವು ಕೊಟ್ಟ ಇಷ್ಟಲಿಂಗವೇ ಪರದೈವ. ಇಷ್ಟಲಿಂಗದ ಪೂಜೆಯನ್ನು ಶಾಸ್ತ್ರೋಕ್ತ ಮಾಡುವುದು. ಅದರಲ್ಲಿಯೇ ತಲ್ಲೀನನಾಗುವುದು ಅವನ ಸಾಧನಾ ಧರ್ಮ. ಅವನ ತನು – ಮನ – ಧನಗಳನ್ನು ಎತ್ತ ಪರೀಕ್ಷಿಸಿದರೂ ಅದರಲ್ಲಿ ಸರ್ವಾರ್ಪಣ ಭಾವವು ಮೂಡಿರಬೇಕು. ಸತ್ಕ್ರಿಯಾಚರಣೆಯೇ ರೂಪುಗೊಂಡಂತಿರಬೇಕು ಭಕ್ತ. ಈ ಮಾರ್ಗಾನುಸರಣೆಯಲ್ಲಿ ತೊಡಗಿದಾಗ ಭಕ್ತನಿಗೆ ಅಜ್ಞಾನದಿಂದ ಸಂಶಯಗಳು ಬರಬಹುದು, ತೊಡಕುಗಳು ಉಂಟಾಗಬಹುದು. ಮನಸ್ಸು ಸಂದೇಹಕ್ಕೊಳಗಾಗಬಲ್ಲುದು. ಒಮ್ಮೊಮ್ಮೆ ಶಿವಸಾಧನೆಯಲ್ಲಿ ನಿರುತ್ಸಾಹವೂ ಹುಟ್ಟೀತು. ಇವೆಲ್ಲವುಗಳನ್ನು ಹೋಗಲಾಡಿಸುವುದಕ್ಕೆ ಭಕ್ತರ ಸಹವಾಸವೇ ಅವಶ್ಯಕವಾದುದು. ಅದರಿಂದ ಭಕ್ತನು ಶಿವಭಕ್ತರ ಸಂಗದಲ್ಲಿ ಇರಬೇಕು. ಶಿವನಾಗುವುದೇ ಭಕ್ತನ ಕರ್ತವ್ಯ. ಅದಕ್ಕಾಗಿ ನಿಷ್ಠೆಯುಳ್ಳವನಾಗಿ ವೀರ ವ್ರತಿಯಾಗಿ, ಪ್ರಾಣ ಹೋದರೂ ವ್ರತವನ್ನು ಬಿಡಲಾರದವನಾಗಿ ಸಾಧನೆಯನ್ನು ಮುಂದುವರಿಸುತ್ತಾನೆ. ಹೀಗೆ ಸಾಧಿಸಿದ ಮುಂದಿನ ಮೆಟ್ಟಲೇ ಮಹೇಶ್ವರ ಸ್ಥಲವು.

ಈ ಮಹೇಶ್ವರ ಸ್ಥಲದ ಸಾಧನೆಗೆ ನಿಷ್ಠಾ ಭಕ್ತಿಯು ತೀರ ಅವಶ್ಯಕವಾದುದು. ಮನುಷ್ಯ ಸ್ವಭಾವವು ವಿಚಿತ್ರವಾದುದು. ಸಾಧಕನಲ್ಲಿ ಪ್ರಾರಂಭದಲ್ಲಿದ್ದ ಉತ್ಸಾಹ ಶ್ರದ್ಧೆಗಳು ಕಾಲಕ್ರಮದಲ್ಲಿ ಕಡಿಮೆಯಾಗುವ ಸಂಭವವಿರುತ್ತದೆ. ಆದರಿಂದ ವಿಘ್ನ ಗಳಿಗೆ ಹೆದರದೆ, ವ್ಯಾಮೋಹವನ್ನು ತ್ಯಜಿಸಿ. ಸಾಧನೆಯಲ್ಲಿ ಮುಂದರಿಯಲಿಕ್ಕೆಬೇಕು. ಲಿಂಗಕ್ಕೆ ಮೀಸಲಾದ ಮನಸ್ಸು ಕಣ್ಣು ಕೈಗಳನ್ನು ಅನ್ಯತ್ರ ಉಪಯೋಗಿಸಿದರೆ ವ್ರತ-ಭಂಗವಾಗುವುದು. ವ್ರತ ಶೀಲಗಳನ್ನು ಹಿಡಿದಿರುವೆನೆಂದು ಬಿಂಕದಿಂದ ನಡೆದರೂ ಆಗದು. ಆದರಂತೆ ಅನ್ಯದೈವಗಳ, ಅನ್ಯೋಪದೇಶಗಳ ಆಕರ್ಷಣೆಗೆ ಒಳಗಾಗ ಕೂಡದು. ಶಿವನೇ ಸರ್ವೋತ್ತಮನು, ಷಟ್‌ಸ್ಥಲವೇ ಸರ್ವೋತ್ತಮ ಮಾರ್ಗವೆಂದು ದೃಢವಾದ ನಂಬಿಕೆಯಿರಬೇಕು. ಹೀಗೆ ನಿಷ್ಠಾ ಭಕ್ತಿಯಿಂದ ಕೂಡಿದ ಮಾಹೇಶ್ವರನು 'ಸುಬುದ್ಧಿ' ಯಿಂದ 'ನಿರಹಂಕಾರ'ನಾಗಿರುವನು. ಆದರಿಂದ 'ನಿಷ್ಠಾಭಕ್ತಿ'ಯು 'ಅವಧಾನಭಕ್ತಿ' ಯಾಗಿ ಮಾರ್ಪಡುತ್ತದೆ. ಇದೇ ಪ್ರಸಾದಸ್ಥಲವು.

ಷಟ್‌ಸ್ಥಲ ಮಾರ್ಗದ ಭಕ್ತ, ಮಾಹೇಶ್ವರ ಸ್ಥಲಗಳಲ್ಲಿ ನಡೆಯಿಸುವ ಸಾಧನೆ ಯನ್ನು ಗುಣಸ್ಥಾನ ವಿಧಾನನಲ್ಲಿ ಜೈನಾಚಾರ್ಯರು ಮಿಥ್ಯಾತ್ವ, ಸಾಸಾಧನ, ಸಮ್ಯಕ್ ಮಿಥ್ಯಾತ್ವ ಮತ್ತು ಅವಿರತ ಎಂಬ ನಾಲ್ಕು ಗುಣಸ್ಥಾನಗಳಲ್ಲಿ ವಿಭಜಿಸಿ ಆಚರಿಸಲು ಹೇಳಿದ್ದಾರೆ. ಸಾಧಕನು ಸಿದ್ಧನಾಗಬೇಕಾದರೆ— ಮುಕ್ತನಾಗಬೇಕಾದರೆ- ತನ್ನ ಆತ್ಮ ವನ್ನು ಉಜ್ವಲಗೊಳಿಸಬೇಕಾಗುತ್ತದೆ. ಈ ಉಜ್ವಲತೆಗೆ ಸಾಧನವು ತತ್ತ್ವಜ್ಞಾನ ವಾಗಿದೆ. ಈ ತತ್ತ್ವಜ್ಞಾನವು ಪುದ್ಗಲರೂಪಿಯಾದ ಕರ್ಮದೇಹ ಹಾಗೂ ಅನಂತ ಶಕ್ತಿ ನಿಧಿಯಾದ ಆತ್ಮಗಳನ್ನು ವಿಶ್ಲೇಷಣ ಮಾಡಿ ನಿಜವಾದುದ್ದನ್ನು ನಂಬಲಿಕ್ಕೆ ಅನುವು ಮಾಡಿಕೊಡುತ್ತದೆ. ಇಂಥ ನಂಬಿಕೆಗೆ ಸಮ್ಯಗ್ದರ್ಶನವೆಂದು (Right Faith) ಹೇಳುವರು. ಈ ಪ್ರಕಾರ ಆತ್ಮಶಕ್ತಿಯ ಮೇಲೆ ಸಂಪೂರ್ಣ ಶ್ರದ್ಧೆಯುಳ್ಳ ವನಲ್ಲಿ ಇರುವ ಜ್ಞಾನಕ್ಕೇನೇ ಸಮ್ಯಗ್‌ಜ್ಞಾನವೆನ್ನುವರು, ಈ ಜ್ಞಾನದಿಂದ ಆತ್ಮ-ಕಲ್ಯಾಣಕ್ಕಾಗಿ ಉಂಟಾಗುವ ಮಾನವನ ಪ್ರವೃತ್ತಿಗಳಿಗೆಲ್ಲ ಸಮ್ಯಕ್ಚಾರಿತ್ರ್ಯವೆಂದು ಜೈನ ದರ್ಶನವು ಪ್ರತಿಪಾದಿಸುತ್ತದೆ. ಸಾಧಕನ ವಿಧಾನಕ್ಕೆ ಜೈನ ಋಷಿಗಳು 'ರತ್ನತ್ರಯ ಮಾರ್ಗ' ಎಂದು ಕರೆಯುವರು. 'ತತ್ತ್ವಾರ್ಥಸೂತ್ರ'ದ ಆರಂಭದಲ್ಲಿ "ಸಮ್ಯಗ್ದ-ರ್ಶನ ಜ್ಞಾನ ಚಾರಿತ್ರಾಣಿ ಮೋಕ್ಷಮಾರ್ಗಃ" ಎಂದು ಉಮಾಸ್ವಾಮಿಯವರು ಹೇಳಿದ್ದಾರೆ.

ಈ ಸ್ಥಿತಿಗೇರಿದ ಸಾಧಕನು, ಶರೀರದ ಬಗ್ಗೆ ಆತ್ಮೀಯ ಭಾವವನ್ನು ತಾಳಲಾ ರನು. ಆದರೂ ಸದ್ಗುಣಗಳನ್ನು ಧಾರಣ ಮಾಡಿರುವ ಈ ದೇಹಕ್ಕೂ ಸಾಧನದ ದೃಷ್ಟಿಯಿಂದ ಒಂದು ಮಹತ್ವದ ಸ್ಥಾನವಿದೆ. ಸೌಂದರ್ಯ ಸಂಪನ್ನವಾದ ಸಂಸಾರ ಮಗ್ನ ಪುಷ್ಟ ದೇಹಕ್ಕಿಂತ ಸದ್ಗುಣಿ, ವೀತರಾಗ, ಶಾಂತಿ ಸಮಾಧಾನಗಳ ನೆಲೆಯಾಗಿದ್ದ ನಿರ್ಮಲ ದೇಹವು ಆವನ ದೃಷ್ಟಿಯಲ್ಲಿ ಶ್ರೇಷ್ಠವಾದುದು. ತತ್ತ್ವಜ್ಞಾನದ ಈ ದೃಷ್ಟಿಗೆ 'ನಿರ್ವಿಚಿಕಿತ್ಸೆ' ಎಂದು ಜೈನ ದಾರ್ಶನಿಕರು ಹೇಳುವರು. ಈ ನಿರ್ವಿಚಿಕಿತ್ಸಾ ಅಂಗ

ವನ್ನು ಸ್ವೀಕರಿಸಿದ ಸಾಧಕನು, ತನ್ನ ಸಾಧನೆಗೆ ಅನ್ಯರ ಹೊಗಳಿಕೆಯನ್ನು ಬಯಸನು. ಅಲ್ಲದೆ ಯಾವನಾದರೂ ಒಬ್ಬ ಸಾಧಕನು. ಆತ್ಮದ ದುರ್ಬಲತೆಯಿಂದ ಆಧ್ಯಾತ್ಮಿಕ ಸಾಧನೆಯಿಂದ ಚ್ಯುತಿ ಹೊಂದಿದ್ದರೆ, ಅವನನ್ನು ಸಹಾನುಭೂತಿಯಿಂದ ಕಾಣುವನು. ಮೇಲಾಗಿ ಅಂಥವನನ್ನು ಹಿತವಚನಗಳಿಂದ ಸನ್ಮಾರ್ಗಕ್ಕೆ ಹಚ್ಚುವನು. ರಾಗಾದಿ ವಿಕಾರ ಗಳು ಎಂಥ ಮನುಷ್ಯನನ್ನೂ ವಿಚಲಿತಗೊಳಿಸುವವೆಂಬ ಅರಿವು ಸಾಧಕನಿಗೆ ಇರುತ್ತದೆ ಕೆಟ್ಟ ಜನರ ಸಹವಾಸ, ಅಲ್ಪಜ್ಞಾನಗಳಿಂದ ಸಮ್ಯಕ್ತ್ವವು ಒಮ್ಮೊಮ್ಮೆ ಮಲಿನಗೊಳ್ಳು ವದುಂಟು, ಇದಕ್ಕೆ ಸಕಾಲಕ್ಕೆ ವಿಶಿಷ್ಟಜ್ಞಾನಿಗಳ ಸಂಪರ್ಕ ಸಿಕ್ಕದೆ ಇರುವುದೂ ಕಾರಣವಾಗುವುದು. ಆದರಿಂದ ನಾಲ್ಕನೆಯ ಗುಣಸ್ಥಾನದಲ್ಲಿದ್ದ ಮನುಷ್ಯನೂ ಒಮ್ಮೊಮ್ಮೆ ಮೂರನೆಯ ಎರಡನೆಯ ಗುಣಸ್ಥಾನಕ್ಕೂ ಇಳಿಯುವುದುಂಟು. ಏರುವಾಗ ಮಾತ್ರ ಮೊದಲನೆಯ ಗುಣಸ್ಥಾನದಿಂದ ಒಮ್ಮೆಲೇ ನಾಲ್ಕನೆಯ ಗುಣಸ್ಥಾನಕ್ಕೆ ಏರುವುದುಂಟು. ನಾಲ್ಕನೆಯ ಗುಣಸ್ಥಾನದಲ್ಲಿ ಚಾರಿತ್ರ್ಯವಾಗಲಿ, ವ್ರತಗಳಾಗಲಿ ಘಟಿಸುತ್ತಿರುವುದಿಲ್ಲ. ಅಲ್ಲಿ ಕೇವಲ ಶ್ರದ್ಧೆಯೊಂದಿರುವುದು. ಎಂತಲೇ ಅದಕ್ಕೆ 'ಅವಿರತ ಸಮ್ಯಕ್ತ್ವ' ಎಂದು ಹೇಳುವರು. ಈ ತರಗತಿಗೆ ಮುಟ್ಟಿದ ಸಾಧಕರು ಜೀವ ಹಿಂಸೆಯನ್ನಾಗಲಿ, ಪರಘಾತವನ್ನಾಗಲಿ ಮಾಡುವುದಿಲ್ಲ. ಪಾಪಕರ್ಮವು ಘಟಿಸುವ ಪ್ರಸಂಗವು ಬಂದರೆ, ಸಾಧ್ಯವಿದ್ದಷ್ಟೂ ದೂರವಿರುವರು. ನಾಲ್ಕನೆಯ ಗುಣ ಸ್ಥಾನವಲ್ಲಿರುವಾಗ ಒಂದು ವೇಳೆ ತೀವ್ರ ಕಷಾಯಗಳು ಉಂಟಾದರೆ ಸಾಧಕನು ಅಲ್ಲಿಂದ ಇಳಿಯುವನು. ಆ ಕಾಲಕ್ಕೆ ಮಿಥ್ಯಾತ್ವ ಕರ್ಮದ ಉದಯವಾದಲ್ಲಿ, ಆತನು ಮಿಥ್ಯಾತ್ವ ಗುಣಸ್ಥಾನಕ್ಕೂ ಇಳಿಯಬಹುದು. ಮಿಥ್ಯಾತ್ವ ಕರ್ಮದ ಉದಯ ಇಲ್ಲದಿದ್ದರೆ, ಅವನೆಂದೂ ಮೊದಲನೆಯ ಗುಣಸ್ಥಾನಕ್ಕೆ ಮುಟ್ಟುವಷ್ಟು ಪತಿತನಾಗಲಾರನು. ಅವನು ಇಳಿದಿರುವ ಅವಸ್ಥೆಗೆ ಜೈನಾಚಾರ್ಯರು 'ಸಾಸಾದನ ಗುಣ ಸ್ಥಾನ' ಎಂದು ಕರೆದಿದ್ದಾರೆ. ಇದು ಎರಡನೆಯ ಗುಣಸ್ಥಾನವು. ಮೂರನೆಯ ಗುಣಸ್ಥಾನಕ್ಕೆ ಇಳಿದ ವ್ಯಕ್ತಿಯಲ್ಲಿ ಮಿಶ್ರಭಾವನೆ ಇರುತ್ತದೆ. ಎಂತಲೇ ಈ ಗುಣ ಸ್ಥಾನಕ್ಕೆ 'ಮಿಶ್ರ' ಎಂತಲೂ 'ಸಮ್ಯಗ್ ಮಿಥ್ಯಾತ್ವ' ಎಂತಲೂ ಕರೆಯುವರು. ಈ ಅವಸ್ಥೆಯಲ್ಲಿ ಪರಿಣಾಮಗಳು ಅರ್ಧ ಶುದ್ಧವಾಗಿಯೂ ಅರ್ಧ ಮಲಿನವಾಗಿಯೂ ಇರುತ್ತವೆ. ಇಂಥ ಸಾಧಕರನ್ನೆಲ್ಲ ಐದನೆಯ ಗುಣಸ್ಥಾನವನ್ನು ಸಂಪಾದಿಸಿದ ವ್ಯಕ್ತಿಯು ಒಳ್ಳೇ ಕುಶಲತೆಯಿಂದ ಸನ್ಮಾರ್ಗಕ್ಕೆ ಹಚ್ಚುವನು. ಅಧಃಪತನ ಹೊಂದುವಂಥ ವ್ಯಕ್ತಿಗೆ ದುಷ್ಟರು ಇನ್ನಿಷ್ಟು ಪ್ರೋತ್ಸಾಹ ಕೊಟ್ಟು, ಬೇಗನೆ ಮೊದಲನೆಯ ಗುಣಸ್ಥಾನದಲ್ಲಿ ಒಯ್ದು ಚೆಲ್ಲುವ ಸಂದರ್ಭವನ್ನು ಕಂಡರೆ, ಸಾಧಕರು ಸಾಧಕರಿಗೆ ನೆರವಾಗುವರು. ಯಾಕೆಂದರೆ ಅವರಿಗೆ ಮಾನವ ಪ್ರಕೃತಿಯ ಪ್ರವೃತ್ತಿಗಳೂ ಕರ್ಮದ ವಿಚಿತ್ರ ಸ್ವಭಾವ ಗಳೂ ಗೊತ್ತಿರುತ್ತವೆ. ಆದರಿಂದ ಅವುಗಳನ್ನು ಗಮನಿಸಿ, ಐದನೆಯ ಗುಣಸ್ಥಾನಕ್ಕೆ ಮುಟ್ಟಿದ ಸಾಧಕನು ಸಾಧನಪಥದಿಂದ ವಿಚಲಿತನಾದ ಮುಮುಕ್ಷುವಿಗೆ ಒಳ್ಳೇ ಸಾಹಸ ಮಾಡಿ ಸದ್ವಿಚಾರದ ಸಹಕಾರ ಸಹಾಯಗಳನ್ನು ನೀಡುವನು. ಇದು ತನ್ನ ಕರ್ತವ್ಯವೆಂದು

ಭಾವಿಸುವನು. ಆದರೆ ಷಟ್‌ಸ್ಥಲ ಮಾರ್ಗದಲ್ಲಿ ಒಮ್ಮೆ ಮುಂದಿನ ಸ್ಥಲದಲ್ಲಿ ಸಾಗಿದ ಸಾಧಕನು ಯಾವ ಕಾರಣದಿಂದಲೂ ಪತಿತನಾಗಿ ಹಿಂದಿನ ಸ್ಥಲಕ್ಕೆ ಬರುವುದಿಲ್ಲ. ಅಲ್ಲಿ ಮುಂದೆ ಮುಂದೆಯೇ ಸಾಗುತ್ತ ಹೋಗುವ ಪದ್ಧತಿಯನ್ನು ಹೇಳಿದೆ.

ಪ್ರಸಾದಿಸ್ಥಲವು ಮೂರನೆಯದು, ಷಟ್‌ಸ್ಥಲ ಮಾರ್ಗದಲ್ಲಿ. ಇದನ್ನು ಸಂಪಡಿಸಿದ ಸಾಧಕನ ಅಂತರಂಗವು ಶಾಂತಿಯುಕ್ತವಾಗಿ ಜ್ಞಾನೋದಯವಾಗಿರುತ್ತದೆ. ಅದರಿಂದ ಎಲ್ಲ ಕಡೆಗೂ ಶಿವನನ್ನು ಕಾಣುವ ಸ್ವಭಾವ, ಸರ್ವವೂ ಶಿವನ ಕಾರ್ಯ ಎಂದು ತಿಳಿಯುವ ಬುದ್ಧಿ, ಎಲ್ಲವನ್ನೂ ಶಿವನ ಪ್ರಸಾದವೆಂದು ಪಡೆಯುವ ಅರಿವು ಈ ಪ್ರಸಾದಿಸ್ಥಲದಲ್ಲಿ ಉಂಟಾಗುತ್ತವೆ. ಪ್ರಸಾದಿಯ ಪಂಚಜ್ಞಾನೇಂದ್ರಿಯಗಳೆಲ್ಲ ನಿವೃತ್ತಿ ಹೊಂದಿರುತ್ತವೆ. ಅಂತರಂಗವು ಚಿರಶಾಂತಿಯನ್ನು ಪಡೆದು ನಿರ್ಮಲವಾಗಿ ಪರಂಜ್ಯೋತಿಯ ಹೊಳಪು ಹೊಳೆಯುವುದಕ್ಕೆ ತಕ್ಕರಂಗವಾಗಿ ಮಾರ್ಪಡುತ್ತದೆ. ಈ ಜ್ಯೋತಿಯು ಅಂತರಂಗದಲ್ಲಿ ಕಾಣುವಂತಹದು. ಅದರಿಂದ ಅವನು ಅಂತರ್ಮುಖಿ-ಯಾದ ಅನುಭಾವಿಯಾಗುವನು. ಸಂಸಾರದಲ್ಲಿದ್ದು ಭೋಗಿಯಾಗಿಯೂ ತ್ಯಾಗಿ-ಯಾಗಿರುವನು, ಇವನನ್ನು 'ಬಳಸಿ ಬ್ರಹ್ಮಚಾರಿ' 'ಉಂಡು ಉಪವಾಸಿ' ಎಂದು ಹೇಳಬಹುದಾಗಿದೆ. ಇದನ್ನು ಪರರ ಸಹಕಾರದಿಂದ ಪಡೆಯುವ ಪ್ರಮೇಯವಿಲ್ಲ. ಸ್ವಂತ ಧ್ಯಾನದಿಂದ, ಯೋಗ ಸಮಾಧಿಯಿಂದ ಪಡೆಯಬೇಕು. ಆಗಲೇ ಪ್ರಾಣಲಿಂಗಿ ಸ್ಥಲಕ್ಕೆ ಪ್ರವೇಶ.

ಪ್ರಾಣಲಿಂಗಿ ಸ್ಥಳದಲ್ಲಿ ಕರ್ಮಕ್ಕೆ ಪ್ರಾಧಾನ್ಯವಿಲ್ಲ. ಇಲ್ಲಿಂದ ಮುಂದಿನ ಸ್ಥಲಗಳಲ್ಲೆಲ್ಲ ಜ್ಞಾನಕ್ಕೇನೇ ಪ್ರಧಾನ ಸ್ಥಾನವು. ಕರ್ಮವು ಗೌಣವಾಗಿರುವುದು. ಈಗ ಸಾಧಕನು ತನ್ನೊಳಗೆ ಲಿಂಗದ ಬೆಳಕನ್ನು ಕಂಡಿರುತ್ತಾನೆ. ತನುತ್ರಯಗಳ ವ್ಯಾಪಾರವನ್ನು ನಡೆಸುವ ಷಡ್‌ಲಿಂಗಗಳನ್ನು ಮಂತ್ರಗಳನ್ನೂ ಗ್ರಹಿಸಿ ಪ್ರಾಣಲಿಂಗದ ಉಪಾಸನೆಗೆ ತೊಡಗುತ್ತಾನೆ. ನೆಲದ ಮರೆಯ ನಿಧಾನದಂತೆ ಇರುವ ಆ ಪರಂಜ್ಯೋತಿಯನ್ನು ಕಾಣಲು ಪ್ರಾಣ-ಲಿಂಗಿಯು ಅಂತರ್ಮುಖಿಯಾಗಿ ಶಿವಯೋಗದಲ್ಲಿ ನಿರತನಾಗಿರುತ್ತಾನೆ. ತ್ಯಾಗಾಂಗ. ಭೋಗಾಂಗ, ಯೋಗಾಂಗಗಳು ಶಿವಯೋಗದ ರೂಪಾಂತರಗಳೇ ಆಗಿವೆ. ಸಕಲ ಭೋಗ ಗಳಿಗೂ ಲಿಂಗದ ಕರ್ತೃತ್ವವನ್ನು ವಹಿಸಿ, ಸೂಕ್ಷ್ಮತನುವು ಪ್ರಾಣಲಿಂಗದಲ್ಲಿ ಸಂವೇದಿಸಿ ಮನವು ನಷ್ಟವಾಗಿ ಪ್ರಾಣಲಿಂಗವಾಗಿರುತ್ತದೆ. 'ನೀನು ನಾನು' ಅಳಿದಿರುತ್ತದೆ. ಕಾರಣ ತನುವು ಭಾವಲಿಂಗದಲ್ಲಿ ಸಂಯೋಗಹೊಂದಿ,ಭಾವವು ನಷ್ಟವಾಗಿಭಾವಲಿಂಗವಾಗುತ್ತದೆ. ಆಗ ಲಿಂಗವನ್ನುಳಿದು ಕ್ಷಣಕಾಲವೂ ಇರಲು ಮನಸ್ಸಿಲ್ಲ. 'ಲಿಂಗಬಾಹ್ಯ ಪರಂ ನಾಸ್ತಿ' ಎಂಬ ಭಾವವೇ ಶರಣಸ್ಥಲವಾಗಿದೆ.

ಜೈನದರ್ಶನವು ಐದನೆಯ ಗುಣಸ್ಥಾನದಲ್ಲಿ 'ಪ್ರತಿಮೆ'ಗಳೆಂಬ ಹೆಸರಿನ ಹನ್ನೊಂದು ಉಪಮೆಟ್ಟಲುಗಳನ್ನು ಹೇಳಿದೆ. ಇಂಥ ಉಪಸ್ಥಲಗಳ ವಿಚಾರವೂ ಕೂಡ ಶೈವದರ್ಶನದಲ್ಲಿದೆ. ಷಟ್‌ಸ್ಥಲದ ಒಂದೊಂದು ಮೆಟ್ಟಲಿನಲ್ಲಿಯೂ ಆರಾರು ಒಳಪಂಗಡಗಳನ್ನು ಮನಸ್ಸಿನ ಹದವರಿತು ಮಾಡಿದ್ದಾರೆ. ಇಂಥ ಸಾಧಕನ ಹಂತಗಳನ್ನೇ

ಶ್ರಾವಕನು ಸಾಧುವಾಗುವದಕ್ಕಿಂತ ಪೂರ್ವದಲ್ಲಿ 'ಪ್ರತಿಮೆ'ಗಳೆಂಬ ಹೆಸರಿನಿಂದ ಆಚರಿಸಬೇಕಾಗುತ್ತದೆ. ಇವನು ಆಚರಿಸುವ ಅಣುವ್ರತ, ಗುಣವ್ರತ, ಶಿಕ್ಷಾವ್ರತಗಳೆಲ್ಲ ಮುಂದಿನ ಸಾಧನೆಗೆ—ಮುನಿವ್ರತಕ್ಕೆ ಶಿಕ್ಷಣವನ್ನು ಒದಗಿಸುವ ವ್ರತಗಳೇ ಆಗಿವೆ. ಜೈನ ಪರಂಪರೆಯಲ್ಲಿ ಹೇಳಿದ 'ಪಂಚಪರಮೇಷ್ಠಿ' ಪದಗಳು ಇನ್ನು ಮುಂದಿನ ಸಾಧಕರಿಗೇನೇ ಲಭಿಸುತ್ತವೆ. ಹಿಂಸೆ, ಅಸತ್ಯ, ಚೌರ್ಯ, ಪರಸ್ತ್ರೀಸೇವನ, ಪರಿಗ್ರಹಮುಮತ್ತ್ವ ಇವು ಮಹಾಪಾತಕಗಳು. ಇವುಗಳನ್ನು ಸಂಪೂರ್ಣ ತ್ಯಜಿಸಬೇಕಾದರೆ ಆ ವ್ಯಕ್ತಿಯು ಸನ್ಯಾಸತನವನ್ನು ಸ್ವೀಕರಿಸಲೇಬೇಕಾಗುತ್ತದೆ, ಆದುದರಿಂದ ಆರನೆಯ ಗುಣಸ್ಥಾನವನ್ನು ಹೊಂದಬೇಕಾದರೆ ಸಾಧಕನು ಸನ್ಯಾಸಿಯಾಗಲೇಬೇಕು. ಆಗ ಅವನು 'ನಗ್ನತ್ವ'ವನ್ನು ಹೊಂದಬೇಕಾಗುವುದು. ಇನ್ನು ಮುಂದಿನ ಗುಣಸ್ಥಾನಗಳೆಲ್ಲ ಸನ್ಯಾಸಿಗೇನೇ ಲಭಿಸುವಂತಹುಗಳಾಗಿವೆ.

ಪಂಚಪರಮೇಷ್ಠಿ ಪದಗಳಲ್ಲಿ ಇರುವ ಮೊದಲಿನ ಸಾಧುಗಳು, ಉಪಾಧ್ಯಾಯರು ಆಚಾರ್ಯರು—ಮೂರು ಪದದವರು ಆರನೆಯ ಗುಣಸ್ಥಾನದಿಂದ ಹನ್ನೆರಡನೆಯ ಗುಣಸ್ಥಾನದವರೆಗೂ ಒಂದಿಲ್ಲೊಂದು ಗುಣಸ್ಥಾನದಲ್ಲಿರುವರು. ಸಾಧಕನು ಏಕಾಗ್ರ ಚಿತ್ತದಿಂದ ಧರ್ಮಧ್ಯಾನದಲ್ಲಿ ತೊಡಗಿದಾಗ 'ಅಪ್ರಮತ್ತ' (ಆತ್ಮನಲ್ಲಿ ಎಚ್ಚರಿಕೆಯುಳ್ಳ) ಗುಣಸ್ಥಾನದಲ್ಲಿರುವನು. ಆ ಧ್ಯಾನವು ಶುದ್ಧವಾದಾಗ ಅವನು 'ಅಪೂರ್ವಕರಣ'ವೆಂಬ ಎಂಟನೆಯ ಗುಣಸ್ಥಾನವನ್ನು ಪಡೆಯುವನು. ಇಲ್ಲಿಂದ ಮುಂದೆ ಸಾಧಕನಲ್ಲಿ ವಿವಿಧ ಭಾವನೆಗಳಿಂದ ಉಂಟಾಗುವ ಮಲಿನ ಪರಿಣಾಮಗಳನ್ನು ನಷ್ಟಗೊಳಿಸುವ ಶಕ್ತಿಯು ಪ್ರಾಪ್ತವಾಗುತ್ತದೆ. ಇದು 'ಅನಿವೃತ್ತಿಕರಣ' ಎಂಬ ಒಂಭತ್ತನೆಯ ಗುಣಸ್ಥಾನವು. ಈ ಗುಣಸ್ಥಾನದಲ್ಲಿ ನಿಂತು ಸಾಧಕನು ಎಲ್ಲ ಕಷಾಯಗಳನ್ನು ನಷ್ಟಪಡಿಸಿಕೊಳ್ಳಬೇಕಾಗುತ್ತದೆ. ಅದಕ್ಕೆ ಶುದ್ಧವಾದ ಧ್ಯಾನವೇ ಸಾಧನವು. ಕಷಾಯಗಳ ನಷ್ಟವಾದಾಗ ಅವನು ಹತ್ತನೆಯ ಗುಣಸ್ಥಾನಕ್ಕೆ ಏರುವನು. ಅದೇ 'ಸೂಕ್ಷ್ಮ ಸಾಂಪರಾಯುವು. ಇದರಲ್ಲಿಯೂ ಸಾಧಕನಲ್ಲಿ ಸೂಕ್ಷ್ಮ ಲೋಭವೆಂಬುದೊಂದು ಇದ್ದೇಇರುತ್ತದೆ. ಅದನ್ನು ತೊರೆದಾಗ 'ಉಪಶಾಂತ'ವೆಂಬ ಹನ್ನೊಂದನೆಯ ಗುಣಸ್ಥಾನದ ಅಧಿಕಾರಿಯಾಗುವನು. ಅವನೇ ಮುಂದೆ 'ಕ್ಷೀಣ ಕಷಾಯಿ' ಎನಿಸುವನು. ಆಗ ಅವನು ಹನ್ನೆರಡನೆಯ ಗುಣಸ್ಥಾನದಲ್ಲಿರುವನು. ಇನ್ನು ಮುಂದೆ ಸಾಧಕನು ಅರ್ಹತ ಪದವನ್ನು ಹತ್ತಬೇಕು. ಆ ಮೇಲೆ ಸಿದ್ಧಪದವು. ಈ ಐದು ಪದಗಳನ್ನು ಸೇರಿಸಿ ಪಂಚಪರಮೇಷ್ಠಿ ಪದಗಳೆಂದು ಹೇಳಲಾಗುತ್ತಿದೆ. ಅರ್ಹತ್ ಪರಮೇಷ್ಠಿಯು ಜೀವನ್ಮುಕ್ತಾವಸ್ಥೆಯಲ್ಲಿರುತ್ತಾನೆ.

ಈ ಅರ್ಹತ್‌ಪದದ ಸ್ವರೂಪವನ್ನು ಅವಲೋಕಿಸುವ ಪೂರ್ವದಲ್ಲಿ ಶರಣಸ್ಥಲದ ಸ್ಥಿತಿಯನ್ನು ಗಮನಿಸಬೇಕು, ಶರಣನು ಜ್ಞಾನಿ; ನಿತ್ಯಾನಿತ್ಯಗಳನ್ನು ತಿಳಿದವನು. ದೇಹ ಸಂಸಾರಾದಿಗಳ ಮೋಹವನ್ನು ಬಿಟ್ಟವನು, ಈತನು ಅಂತರ್ಮುಖಿಯಾದಾಗ ಕಾರಣ ತನುವಿನ ಭಾವಲಿಂಗದ ಸಂಬಂಧ ಬಹಿರ್ಮುಖವಾದಾಗ ಸ್ಥೂಲ ಸೂಕ್ಷ್ಮತನುಗಳ ವ್ಯವಹಾರವುಳ್ಳವನು. ಬಾಹ್ಯಾಭ್ಯಂತರಗಳಲ್ಲೆಲ್ಲ ಲಿಂಗದ ನೆನಹುಳ್ಳವನು, ಈತನು

ತನುಮನಗಳ ಗುಣಗಳಿಂದ ಭಾರಿತನಲ್ಲ. ಇವನ ವ್ಯವಹಾರವು ಪಂಚಭೂತಾತ್ಮಕವಾದ ದೇಹ ತಾನಲ್ಲ, ಪ್ರಕೃತಿ–ಪುರುಷ ತಾನಲ್ಲ. ಅಂತಃಕರಣ ಚತುಷ್ಟಯ ತಾನಲ್ಲ ಎಂದ. ಸಾಗಿರುವುದು. ಶರಣನಿಗೆ ಕ್ರಿಯೆಯುಂಟು. ಆದರೆ ಈ ಕ್ರಿಯೆಯು ಲಿಂಗದ ಕ್ರಿಯೆಯು. ಅವನ ಮನ, ಭಾವಗಳು ಲಿಂಗಮಯ, ಮಾಯೆಯಿಂದುಂಟಾದ ದೇಹವ್ಯಾಪಾರವನ್ನು ಮೀರಿ ನಿಂತವನೀತ. ಕಾರ್ಮಿಕಮಲ, ಮಾಯಾಮಲಗಳಿಂದ ಮುಕ್ತನಾಗಿ ಆಣವ-ಮಲವನ್ನು ನೀಗಿಸಿಕೊಳ್ಳುವ ಸ್ಥಿತಿಯಲ್ಲಿ ಇರುವನು. ಈತನು ಶಿವರೂಪಿಯಾಗಿದ್ದರೂ ಶಿವರೂಪಿಯೆಂಬ ಅರಿವು ಭಿನ್ನವಾಗಿರುವುದರಿಂದ ಶರಣನು. ಇನ್ನು ಐಕ್ಯಸ್ಥಲ ದೂರಿಲ್ಲ.

ಇನ್ನು ಅರ್ಹಂತರು ನಾಲ್ಕು ಪ್ರಕಾರದ ಘಾತಿ ಕರ್ಮಗಳನ್ನು ಗೆದ್ದುದರಿಂದ 'ಜಿನ'ರೆನಿಸುವರು. ಇವರಿಗೆ ಅನಂತಜ್ಞಾನ, ದರ್ಶನ, ವೀರ್ಯ, ಸುಖಗಳು ಪ್ರಾಪ್ತವಾಗಿರುವವು. ಇವರೇ ಕ್ಷುಧೆ, ತೃಷೆ, ಭಯ, ದ್ವೇಷ, ರಾಗ, ಮೋಹ, ಚಿಂತೆ, ಜರೆ, ರೋಗ, ಮೃತ್ಯು. ಖೇದ, ಸ್ವೇದ, ಮದ. ಅರತಿ, ವಿಸ್ಮಯ. ಜನ್ಮ, ನಿದ್ರೆ, ವಿಷಾದ ಎಂಬ ಹದಿನೆಂಟು ದೋಷಗಳೂ ಇರುವುದಿಲ್ಲ. ವೀತರಾಗರಿವರು. ಇವರು ಜಗತ್ತನ್ನು ಉದ್ಧರಿಸುವ ಧರ್ಮತೀರ್ಥವನ್ನು ನಿರ್ಮಾಣ ಮಾಡತಕ್ಕವರು. ಎಂತಲೇ ತೀರ್ಥಂಕರರೆನಿಸುವರು. ಇವರಿಗೆ ಪವಿತ್ರ ದೇಹವು ಇರುವುದು. ಅದು ಸಪ್ತಧಾತುರಹಿತವಾದುದು. ಅತ್ಯುಜ್ವಲವಾದುದು. ಈ ಅರ್ಹಂತರ ಸಾಧನೆಯ ಕ್ರಮವನ್ನು ಆದರ್ಶವಾಗಿಟ್ಟುಕೊಳ್ಳುವುದೇ ಸಾಧಕರಿಗೆ ಸಹಕಾರಿಯಾದುದು, ಭಕ್ತರಿಗೆ ಫಲಕೊಡುವಂತಹದು. ಸಾಧಕನು ತನ್ನ ಆತ್ಮನಲ್ಲಿ ತಾನು ಪ್ರಸನ್ನವಾಗಿರುವುದರಿಂದ, ಉಪಚಾರಕ್ಕಾಗಿ ಪರಮಾತ್ಮನಲ್ಲಿಯೂ ಪ್ರಸನ್ನತೆಯನ್ನು ಕಲ್ಪಿಸಿರುವನು. ಇವರನ್ನು ಜೈನಾಗಮಗಳು 'ವಿಮಲತರ ಗುಣಸಮೃದ್ಧಂ' ಎಂದು ವರ್ಣಿಸುತ್ತವೆ. ಅರ್ಹಂತರಿಗೆ ಸ್ಥಿರಪದವು ದೂರಿಲ್ಲ.

ಇಲ್ಲಿಂದ ಮುಂದಿನದೇ ಐಕ್ಯಸ್ಥಲ, ಸಿದ್ಧಪದ. ಇಲ್ಲಿ ಜ್ಞಾತೃ. ಜ್ಞೇಯಗಳೆಲ್ಲಿಯವು? ಇದೇ ಐಕ್ಯ ಸ್ಥಲ. ಒಂದು ವಸ್ತು ಎರಡಾಗಿತ್ತು, ಪುನಃ ಅಂತರಂಗದಲ್ಲಿ ಕೂಡಿ ಒಂದಾಯಿತು. ಇಂಥ ಸಂಪೂರ್ಣ ಸಾಮರಸ್ಯವೇ ಐಕ್ಯ. ಇದು ಶಿವಾಗಮದ ಮಾತು. ಆತ್ಮವು ಪರಿಶುದ್ಧ ಸ್ಥಿತಿಯಲ್ಲಿ,ತನ್ನಸ್ವರೂಪದಲ್ಲಿ ತಾನು ನಿಲ್ಲುವುದೇ ಸಿದ್ಧಿ.ಪರಮಾತ್ಮಪದ ಎನ್ನುವುದು ಜಿನಾಗಮದ ಸೊಲ್ಲು. ಎರಡು ಅವಸ್ಥೆಗಳು ಒಂದೇ. ಶರಣನು ಶಿವನಲ್ಲಿ ಐಕ್ಯನಾಗುವನು. ಸಿದ್ಧರು ಸಿದ್ಧಸಿಲೆಯಲ್ಲಿ ನೆಲಸುವರು, ಆದರೆ ಇವರಿಬ್ಬರ ಸ್ಥಿತಿಯೂ ಅದೇ. ಆಗ

"ತನು ಬಯಲು ನಿರವಯದೊಳಡಗಿತ್ತು.
ಮನ ಬಯಲು ನಿರವಯದೊಳಡಗಿತ್ತು.
ಭಾವ ಬಯಲು ನಿರವಯದೊಳಡಗಿತ್ತು.
ಬಯಲು ಬಯಲು ಬೆರಸಿ ಬಯಲೇ ಆಯಿತ್ತು.
ಕೂಡಲ ಚೆನ್ನ ಸಂಗಯ್ಯನೆಂಬ ನುಡಿಯಡಗಿತ್ತು"

ಇಲ್ಲಿದೆ ಸಾಮರಸ್ಯ. ಶಿವನೇ ಜಿನ. ಜಿನನೇ ಶಿವ. ಎರಡೂ ಎಲ್ಲವೂ ನಾಮ ಮಾತ್ರಭಿನ್ನ. ಅಂತರಂಗದಲ್ಲಿ ಒಂದು ವಿಮಲತರ ಗುಣಸಮೃದ್ಧಂ ಸಿದ್ಧಂ. □

# ಷಟ್‌ಸ್ಥಲ ಸಿದ್ಧಾಂತದ ಹಿರಿಮೆ

ಪ್ರೊ. ಜಿ. ಡಿ. ನಾಡಕರ್ಣಿ

ಕನ್ನಡನಾಡಿನಲ್ಲಿ ಹನ್ನೆರಡನೆಯ ಶತಮಾನದಲ್ಲಿ ಆಧ್ಯಾತ್ಮಿಕ ಸುಗ್ಗಿಯ ಕಾಲವು ಆಗಿ ಹೋಗಿದ್ದು ಇತಿಹಾಸದಲ್ಲಿ ಚಿರಸ್ಮರಣೀಯವಾಗಿದೆ. ಆಗ ಬಸವಾದಿ ಶ್ರೇಷ್ಠ ಶಿವಶರಣರು ಕರ್ನಾಟಕದ ಸಾಹಿತ್ಯ, ಸಮಾಜ, ಧರ್ಮ, ಸಂಸ್ಕೃತಿಗಳ ಸರ್ವಾಂಗೀಣ ಉನ್ನತಿಯನ್ನುಂಟುಮಾಡಿದರು. ಆಗ ಸಮಗ್ರ ನಾಡಿನ ಜೀವನವು ಉನ್ನತ ಮಟ್ಟಕ್ಕೆ ಏರಿತು. ಮೇಲು–ಕೀಳು ಇಲ್ಲದ, ಸೋದರಭಾವದ ಸ್ವಭಾವದ ಸಮಾಜರಚನೆ, ಭಕ್ತಿ ಪ್ರಧಾನವಾದ ಧರ್ಮ ಪ್ರಚಾರ, ನೀತಿ–ಸದಾಚಾರಗಳ ಪ್ರತಿಪಾದನೆ, ವ್ಯಕ್ತಿಯ ಹಾಗೂ ಸಮಾಜದ ಉದ್ಧಾರ ಮೊದಲಾದ ಉದಾತ್ತ ಉದ್ದೇಶಗಳು ಆಗಿನ ಶಿವಶರಣರ ಮುಂದೆ ಇದ್ದುವು. ಆಗ ಕೇವಲ ಒಂದು ಮತದ ಪ್ರಸಾರವು ಗುರಿಯಾಗಿರದೆ, ಮಾನವಕುಲದ ಉದ್ಧಾರವೇ ಅವರ ಹಿರಿಯ ಗುರಿಯಾಗಿತ್ತು. ಇದನ್ನು ಸಾಧಿಸುವಾಗ ಸಾಮಾನ್ಯ ಜನತೆಗೆ ಶಿವಶರಣರು ಬೋಧಿಸಬೇಕಾಗಿತ್ತು. ಆ ಬೋಧೆಯ ಪರಿಣಾಮವಾಗಿ ಶಿವಶರಣರ ವಚನಗಳು ಉದಯವಾಗಿ, ಕನ್ನಡಸಾಹಿತ್ಯದ ಶ್ರೀಮಂತಿಕೆ ವರ್ಧಿಸಿತು, ಶ್ರೀ ಎಂ. ಆರ್. ಶ್ರೀಯವರು ಹೇಳಿದಂತೆ –"ವಚನಗಳು ಕನ್ನಡ ನಾಡಿನ ಉಪನಿಷತ್ತುಗಳು, ವಚನಕಾರರು ಕರ್ನಾಟಕದ ರಸಋಷಿಗಳು." ನೀತಿ, ತತ್ವಜ್ಞಾನ ಹಾಗೂ ಕಾವ್ಯ ಇವುಗಳ ತ್ರಿವೇಣೀಸಂಗಮವನ್ನು ನಾವು ವಚನಸಾಹಿತ್ಯದಲ್ಲಿ ಕಾಣುತ್ತೇವೆ, ಡಾ. ರಂ ಶ್ರೀ. ಮುಗಳಿಯವರು ಹೇಳಿದಂತೆ—"ವಚನ ಸಾಹಿತ್ಯ ಪಾಂಡಿತ್ಯಪ್ರತಿಭೆಗಳ ಸಂಯೋಗದಿಂದ ಉಂಟಾದ ಗ್ರಂಥ ಸಾಹಿತ್ಯವಲ್ಲ; ಅನುಭಾವಿಗಳ ಆತ್ಮಮಥನದಿಂದ ಹೊರಹೊಮ್ಮಿದ ಮಥನ ಸಾಹಿತ್ಯ." ಈ ಕಾಲದಲ್ಲಿ ಚೆನ್ನಬಸವಣ್ಣನವರು ವಿಶೇಷವಾಗಿ ಷಟ್‌ಸ್ಥಲಸಿದ್ಧಾಂತವನ್ನು ವಿವರವಾಗಿ ನಿರೂಪಿಸಿ ಮಹದುಪಕಾರ ಮಾಡಿದ್ದಾರೆ. ಮಹಾದಾರ್ಶನಿಕರಾದ ಚೆನ್ನಬಸವಣ್ಣವರು ಈ ಸಿದ್ಧಾಂತವನ್ನು ಪ್ರತಿಪಾದಿಸಿ "ಷಟ್‌ಸ್ಥಲಜ್ಞಾನ ಚಕ್ರವರ್ತಿ" ಎನಿಸಿದರು, ಈ ಸಿದ್ಧಾಂತದ ಸಾಮಾನ್ಯ ಸ್ವರೂಪವನ್ನೂ, ಹಿರಿಮೆಯನ್ನೂ ಅರಿಯುವುದೇ ಈ ಲೇಖದ ಉದ್ದೇಶ;

ಷಟ್‌ಸ್ಥಲ ಸಿದ್ಧಾಂತದ ಪ್ರಕಾರ ಪರವಸ್ತುವೊಂದೇ ಲಿಂಗ, ಅಂಗ ಎಂದರೆ, ಪರಮಾತ್ಮ–ಜೀವಾತ್ಮಗಳೆಂದು ಎರಡಾಯಿತು. ಪರವಸ್ತುವಿನಲ್ಲಿಯ ಶಕ್ತಿಯು ಒಂದು ಭಾಗ ಅಂಗದಲ್ಲಿ ಸೇರಿಕೊಂಡು ಭಕ್ತಿ ಎಂಬ ಹೆಸರಿನಿಂದ ವ್ಯವಹರಿಸಲ್ಪಡುವದು. ಸೃಷ್ಟಿಕ್ರಮದಲ್ಲಿ ಕಾರಣತನು ಒದಗಿದಾಗ ಅಂಗ ಯೋಗಾಂಗವಾಗಿ, ಸ್ಥೂಲತನುವಿನಲ್ಲಿ ತ್ಯಾಗಾಂಗವಾಗಿ ಪರಿಣಮಿಸಿತು. ಈ ತನುಗಳಲ್ಲಿ ಕ್ರಮವಾಗಿ ಭಾವಲಿಂಗ. ಪ್ರಾಣಲಿಂಗ ಇಷ್ಟಲಿಂಗಗಳಾಗಿ ಲಿಂಗ ಪರಿಣಾಮಹೊಂದಿ ಸೇವೆ ಮಾಡಿಸಿಕೊಳ್ಳಲು ಸಿದ್ಧವಾಗಿದೆ. ಶಿವಜ್ಞಾನೋದಯವಾಗುವ ಕಾಲಕ್ಕೆ ತಕ್ಕ ಗುರು ಒಂದು ದೀಕ್ಷಾಸಂಸ್ಕಾರದಿಂದ ಕರ್ಮ, ಮಲ ಎಂಬ ಪಾಶಗಳನ್ನು ಛೇದಿಸಿ ಒಳಗಿರುವ ನಿಷ್ಕಲಲಿಂಗ ಕಳೆಯನ್ನೇ ತನುತ್ರಯಗಳಲ್ಲಿ ಪ್ರಜ್ವಲಿಸುವಂತೆಮಾಡಿ. ಅಂಗಲಿಂಗಗಳ ಸಂಬಂಧವನ್ನು ಮನದಟ್ಟು ಮಾಡಿಸಿ ಹೊರಗೆ ಹರಿಯುವ ಇಂದ್ರಿಯಗಳನ್ನು ಅಂತರ್ಮುಖವಾಗಿ ಮಾಡು-ತ್ತಾನೆ. ಆ ನಂತರ ಮನಸ್ಸಿನಲ್ಲಿ ಸಿದ್ಧವಾಗಿರುವ ಭಕ್ತಿಯಂತ್ರ ಕೆಲಸಮಾಡತೊಡಗುತ್ತದೆ. ಈ ಭಕ್ತಿಯ ಸಹಾಯದಿಂದ ಅಂಗವು (ಎಂದರೆ ಜೀವನು) ಏರಿಹೋಗಿ ಲಿಂಗದೊಡನೆ ಸಮರಸವಾಗುವುದಕ್ಕೆ ಇರುವ ಆರು ಮೆಟ್ಟಲುಗಳೇ ಷಟ್‌ಸ್ಥಲಗಳು. ಭಕ್ತ ಮಹೇಶ. ಪ್ರಸಾದಿ. ಪ್ರಾಣಲಿಂಗಿ. ಶರಣ ಮತ್ತು ಐಕ್ಯ ಎಂಬಿವೇ ಆರುಮೆಟ್ಟಲುಗಳು. ಅವುಗಳಲ್ಲಿರುವ ಭಕ್ತಿಯ ಹೆಸರುಗಳು ಕ್ರಮವಾಗಿ ಸದ್ಭಕ್ತಿ, ನೈಷ್ಠಿಕೀಭಕ್ತಿ, ಅವಧಾನ ಭಕ್ತಿ, ಅನುಭವಭಕ್ತಿ. ಆನಂದ ಭಕ್ತಿ ಹಾಗೂ ಸಮರಸ ಭಕ್ತಿ.

ಜೀವನ, ಕರ್ಮತ್ರಯಗಳಿಂದಲೂ. ಮಲತ್ರಯಗಳಿಂದಲೂ ಪಂಚೇಂದ್ರಿಯಗಳು ಬಂಧಿತನಾಗಿ ಪಂಚಭೂತಾತ್ಮಕವಾದ ದೇಹವನ್ನು ಧರಿಸಿರುತ್ತಾನೆ. ಪಂಚೇಂದ್ರಿಯಗಳು ಅವನನ್ನು ವಿಷಯಾದಿಗಳ ಕಡೆಗೆ ಪ್ರೇರೇಪಿಸುತ್ತವೆ. ಈ ಪ್ರೇರಣೆಗಳಿಗೆ ಒಳಗಾಗಿ ಜೀವನು ಕೇವಲ ದೇಹಸೌಖ್ಯವನ್ನು ಪಡೆಯುವ ಹವ್ಯಾಸದಲ್ಲಿ, ಪ್ರಪಂಚದಲ್ಲಿ ತೊಳಲುತ್ತ. ಸುಖ–ದುಃಖಗಳಂತೆ ದ್ವಂದ್ವವನ್ನು ಉಪಭೋಗಿಸುತ್ತ, ಪರಮಾತ್ಮನ ಕಡೆಗೆ ದೃಷ್ಟಿಯನ್ನು ತಿರುಗಿಸದೆ ಇರುತ್ತಾನೆ. ಐಹಿಕ ಭೋಗಗಳ ಬಗೆಗೆ ಯಾವಾಗ ವೈರಾಗ್ಯ ತಲೆದೋರವುದೋ, ಯಾವಾಗ ಸಮತೆ–ಸದಾಚಾರಗಳು ಬೇರೂರಿ ಚಿತ್ತಶುದ್ಧಿಯುಂ-ಟಾಗುವುದೋ ಆಗ ಪರಮಾತ್ಮನ ಕಡೆಗೆ ಜೀವಾತ್ಮನಲ್ಲಿ ಒಲವು ಉಂಟಾಗುವುದು. ಸಾಸವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖವನ್ನು ಅನುಭವಿಸಿಸುತ್ತಿದ್ದೇನೆ ಎಂಬ ಅರಿವು ಮೂಡಿದಾಗ ವೈರಾಗ್ಯಭಾವ ಉದಯಿಸುತ್ತದೆ, ಆಗ ಸಾಧಕನು ಹೊರಗೆ ಹರಿಯುವ ಮನಸ್ಸನ್ನು ಅಂತರ್ಮುಖವಾಗಿ ಮಾಡಿ ಪರಮವಸ್ತುವಿನ ಸ್ವರೂಪವನ್ನು ಅರಿಯಲು ಉದ್ಯುಕ್ತನಾಗುತ್ತಾನೆ, ಸಾಧಕನಿಗೆ ಕೈಲಾಸದ ಗಣಪದವಿಗಿಂತಲೂ ಮೀರಿದ್ದು ಸಾಮರಸ್ಯಮುಕ್ತಿ. ಈ ನಿಜಮುಕ್ತಿಯನ್ನು ಪಡೆಯಬೇಕಾದರೆ ಷಟ್‌ಸ್ಥಲಮಾರ್ಗವನ್ನು ಅನುಸರಿಸಬೇಕು. ಪರವಸ್ತು ಸಾಕಾರವಾಗಿ ಇಷ್ಟಲಿಂಗವಾಗಿ, ಸೂಕ್ಷ್ಮಶರೀರದಲ್ಲಿ ಪ್ರಾಣಲಿಂಗವಾಗಿ, ಕಾರಣಶರೀರದಲ್ಲಿ ಭಾವಲಿಂಗವಾಗಿದೆ, ಹೀಗೆ ತನುತ್ರಯದಲ್ಲೂ ಲಿಂಗದೊಡನೆ ಸಂಯೋಗ ಹೊಂದಿ, ಒಳಗೆ–ಹೊರಗೆ ಲಿಂಗಭರಿತನಾಗಬೇಕು. ಸಾಧಕರು

ತನುಮನಗಳನ್ನು ಗುರುಲಿಂಗ ಜಂಗಮಕ್ಕೆ ಸಮರ್ಪಿಸಬೇಕು. ಎರಡನೆಯದಾಗಿ ಮನಸ್ಸಿನ 'ಅಹಂ' ಹೋಗಿ ಒಳಗೆ ಲಿಂಗ ಸ್ಥಾಪಿತವಾಗಬೇಕು. ಇದು ಪ್ರಾಣಲಿಂಗಜ್ಞಾನದಿಂದ ಸಾಧ್ಯ. ಪ್ರಾಣಲಿಂಗಕ್ಕೆ ಅರ್ಪಿಸಿ ಎಲ್ಲವನ್ನು ಪ್ರಸಾದ ರೂಪದಲ್ಲಿ ಪಡೆಯಬೇಕು. ಪ್ರಾಣಲಿಂಗದ ಭೋಗವೇ ಸಾಧಕನ ಭೋಗವಾಗಬೇಕು, ಮೂರನೆಯದಾಗಿ ನಿಜದಲ್ಲಿ ಬೆರೆಯಬೇಕು: ಆತ್ಮದ ನೈಜಸ್ವರೂಪವನ್ನು ನೈಜಪರಿಣಾಮವನ್ನು ಅದಕ್ಕೆ ದೊರಕಿಸಬೇಕು. ಇಲ್ಲದವರನ್ನು ಶಿವನು ಒಲ್ಲ. ಆದುದರಿಂದ ಅವನೊಡನೆ ಬೆರೆಯಲು ಶಿವನಂತಾಗಿ ಬೆರೆಯಬೇಕು. ಇದೇ ಷಟ್‌ಸ್ಥಲದ ಮರ್ಮ. ಒಟ್ಟಿನಲ್ಲಿ, ಸಾಧಕನು ಅಂಗಕ್ಕೆ ಲಿಂಗದ ಗುಣಗಳನ್ನು ತಂದುಕೊಳ್ಳಬೇಕು. ಈ ಗುಣಗಳು ತುಂಬಬೇಕಾದರೆ ಸಾಧನೆಯನ್ನು ಮಾಡಬೇಕು. ಈ ಸಾಧನೆಯ ಮೊದಲನೆಯ ಮೆಟ್ಟಲು ಭಕ್ತಸ್ಥಲ.

೧. **ಭಕ್ತಸ್ಥಲ :** "ಭಕ್ತನು ಶಾಂತನಾಗಿರಬೇಕು. ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು. ಭೂತಹಿತವಚನವ ನುಡಿಯಬೇಕು; ಸಕಲ ಪ್ರಾಣಿಗಳ ತನ್ನಂತೆ ಕಾಣಬೇಕು; ತನುಮನಧನವ ಗುರುಲಿಂಗ ಜಂಗಮಕ್ಕೆ ಸವೆಸಬೇಕು; ಅಪಾತ್ರ ದಾನವ ಮಾಡಲಾಗದು; ಸಕಲೇಂದ್ರಿಯಗಳನ್ನು ತನ್ನ ವಶವ ಮಾಡಬೇಕು, ಇದೇ ಮೊದಲಲ್ಲಿ ಬೇಹ ಶೌಚ ನೋಡಾ" ಎಂಬ ಚೆನ್ನಬಸವಣ್ಣನವರ ವಚನದಲ್ಲಿ ಭಕ್ತಸ್ಥಲದ ಮುಖ್ಯ ಲಕ್ಷಣಗಳು ಚೆನ್ನಾಗಿ ವ್ಯಕ್ತವಾಗಿವೆ, ದೀಕ್ಷಾಕಾಲದಲ್ಲಿ ಗುರು ಕೊಟ್ಟ ಇಷ್ಟಲಿಂಗವನ್ನು ಬಿಟ್ಟು ಸ್ಥಾವರಲಿಂಗಕ್ಕೆ ಭಕ್ತನು ಎರಗಲಾಗದು. ಏಕೆಂದರೆ ಇಷ್ಟಲಿಂಗವೇ ಪರದೈವ. ಇಷ್ಟಲಿಂಗಪೂಜೆಯನ್ನು ಶಾಸ್ತ್ರೋಕ್ತವಾಗಿ ಮಾಡಬೇಕು. ಪೂಜೆಯಲ್ಲಿ ತಲ್ಲೀನನಾಗಬೇಕು. ಗುರುಲಿಂಗ ಜಂಗಮದ ದಾಸೋಹದಲ್ಲಿ ತನುಮನಧನಗಳನ್ನು ಸಮರ್ಪಿಸಿ ಪರಿಣಾಮಿಸಬೇಕು, ಶಿವಭಕ್ತರೊಡನೆ ಇದ್ದು ತನ್ನ ಭಕ್ತಿಯ ಭಂಡಾರವನ್ನು ತುಂಬಿಕೊಂಡು, ತನ್ನ ಆಚರಣೆಯನ್ನು ಪರಿಶುದ್ಧವಾಗಿಟ್ಟುಕೊಳ್ಳಬೇಕು,

೨. **ಮಹೇಶ್ವರಸ್ಥಲ :** ಸದ್ಭಕ್ತಿಯು ದೃಢಪಟ್ಟು ನಿಷ್ಠಾಭಕ್ತಿಯಾಗಿ ಪರಿಣಮಿಸಿ ತನ್ಮೂಲಕ ವೀರವ್ರತಿಯಾಗಿ ಪ್ರಾಣಹೋದರೂ ವ್ರತವನ್ನು ಬಿಡಲಾರದ ಮಹೇಶ್ವರ" "ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ, ಛಲ ಬೇಕು ಶರಣಂಗೆ ಪರಸತಿಯನೊಲ್ಲೆನೆಂಬ ... ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವಯ್ಯ" ಎಂಬ ಪ್ರಸಿದ್ಧವಚನವು ಮಹೇಶ್ವರ ಸ್ಥಲದ ವೈಶಿಷ್ಟ್ಯವನ್ನು ನಿರೂಪಿಸುತ್ತದೆ. ನಿಷ್ಠಾಭಕ್ತಿಯ ಮಹತ್ವವನ್ನು ಇಲ್ಲಿ ಒತ್ತಿ ಹೇಳಲಾಗಿದೆ. ಮೊದಲಿದ್ದ ಉತ್ಸಾಹ-ಶ್ರದ್ಧೆಗಳು ಕ್ರಮೇಣ ಕಡಿಮೆಯಾಗಬಾರದು ಎಂಬುದೇ ಈ ನಿಷ್ಠೆಯ ಉದ್ದೇಶ. "ಹರ ತನ್ನ ಭಕ್ತರ ತಿರಿವಂತೆ ಮಾಡುವ. ಒರೆದು ನೋಡುವ ಸುವರ್ಣದ ಚಿನ್ನದಂತೆ, ಅರೆದು ನೋಡುವ ಚಂದನದಂತೆ, ಅರಿದು ನೋಡುವ ಕಬ್ಬಿನ ಕೋಲಿನಂತೆ." ಇಂಥ ಕಠಿನ ಪರೀಕ್ಷೆಗಳನ್ನು ಭಕ್ತನು ಧೈರ್ಯದಿಂದ ಎದುರಿಸಬೇಕು. ಶಿವಾಧಿಕ್ಯವನ್ನು ಸ್ಥಾಪಿಸಬೇಕು. ಶಿವನಿಂದೆ ಕೇಳಕೂಡದು. ಶಿವ

ನಿಂದಕರನ್ನು ನಿಗ್ರಹಿಸಲಾಗದಿದ್ದರೆ ತಾನು ಪ್ರಾಣವನ್ನಾದರೂ ಕೊಡಬೇಕು. ಮಹಾಕವಿ ಹರಿಹರನು ಮಾಹೇಶ್ವರಭಕ್ತಿಗೆ ಉತ್ತಮ ಉದಾಹರಣೆ.

**(೩) ಪ್ರಸಾದಿಸ್ಥಲ :** ನಿಷ್ಠಾಭಕ್ತಿ ಇಲ್ಲಿ ಅವಧಾನಭಕ್ತಿಯಾಗಿ ಮಾರ್ಪಾಡು ಹೊಂದುತ್ತದೆ. ಎಲ್ಲ ಕಡೆಯೂ ಶಿವನನ್ನು ಕಾಣುವ ಸ್ವಭಾವ, ತಾನು ಶಿವನ ಪೋಷಣೆಗೆ ಒಳಗಾಗಿ ಶಿವನ ಮೂಲಕ ಎಲ್ಲವನ್ನು ಪ್ರಸಾದ ರೂಪವಾಗಿ ಪಡೆಯುತ್ತಿರುವೆನೆಂಬ ಅರಿವು ಈ ಪ್ರಸಾದಿಸ್ಥಲದಲ್ಲಿ ದೊರೆಯುತ್ತದೆ. "ಲಿಂಗಕ್ಕೆಂದೇ ನೆನೆವೆ, ಲಿಂಗಕ್ಕೆಂದೇ ಮಾಡುವೆ, ಲಿಂಗಕ್ಕೆಂದೇ ಕೊಡುವೆನು ನಾನಯ್ಯ. ಸಕಲ ಪದಾರ್ಥಂಗಳ ಲಿಂಗಕ್ಕೆಂದೇ ಭಾವಿಸುವೆ. ಅಂಗಗುಣಂಗಳ ನಾನರಿಯೆನಯ್ಯ" ಎಂಬ ಬಸವಣ್ಣನವರ ವಚನವು ಪ್ರಸಾದಿಸ್ಥಲದ ಸ್ವರೂಪವನ್ನು ವಿವರಿಸುತ್ತದೆ. "ನಾನು ಭೋಗಿಸುತ್ತೇನೆ." "ನನಗೆ ತೃಪ್ತಿಯಾಯಿತು" ಎಂದು ಅಹಂಕಾರಕ್ಕೆ ಅನ್ವಯಿಸಿಕೊಂಡು, ಎಲ್ಲದರಲ್ಲೂ ತಮ್ಮ ಕರ್ತೃತ್ವವನ್ನು ಆರೋಪಿಸಿಕೊಂಡು ಸಾಮಾನ್ಯರು ಸುಖದುಃಖಗಳಿಗೆ ಈಡಾಗುವರು. ಅದರ ಬದಲು ಭಕ್ತನು— "ಸಕಲೇಂದ್ರಿಯಗಳಲ್ಲಿ ಕುಳಿತಿರುವ ಲಿಂಗದೇವನು ತಾನು ಸವಿದು ಭಕ್ತನಿಗೆ ಪ್ರಸಾದವನ್ನು ಕರುಣಿಸುತ್ತಿರುವನು" ಎಂದು ಭಾವಿಸಬೇಕು. ಎಲ್ಲವೂ ಅವನ ಪ್ರಸಾದವೇ ಹೊರತು ಅನರ್ಪಿತವೆಂಬುದೇ ಇಲ್ಲ. ಎಲ್ಲವೂ ಲಿಂಗಾರ್ಪಿತವಾಗುವುದರಿಂದ ಭಕ್ತನು ಈ ಸ್ಥಲದಲ್ಲಿ "ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ" ಆಗಿರುತ್ತಾನೆ.

**(೪) ಪ್ರಾಣಲಿಂಗಸ್ಥಲ :** ಪ್ರಾಣಲಿಂಗ ಸ್ಥಲದಿಂದ ಮುಂದೆ ಜ್ಞಾನ ಪ್ರಧಾನವಾಗಿ ಕರ್ಮ ಗೌಣವಾಗುತ್ತದೆ. "ಲಿಂಗವೇ ಪ್ರಾಣ, ಪ್ರಾಣವೇ ಲಿಂಗವಾಯಿತ್ತು. ಅಂಗ ಲಿಂಗವಾಯ್ತು.ಗುಹೇಶ್ವರಲಿಂಗದಲ್ಲಿ ಸರ್ವಾಂಗ ಪ್ರಾಣಲಿಂಗಸ್ವಾಯತವಾಯಿತ್ತು ಕಾಣಾ" ಎಂಬ ವಚನ ಇದಕ್ಕೆ ಸಮರ್ಪಕ ಉದಾಹರಣೆ. ಈಗ ಭಕ್ತನ ಚಿತ್ತ ಶುದ್ಧವಾಗಿರುವುದರಿಂದಲೂ, ಬುದ್ಧಿ ನಿರ್ಮಲವಾಗುವುದರಿಂದಲೂ, ಅಹಂಕಾರ ಮರೆಯಾಗಿರುವುದರಿಂದಲೂ, ಇಂದ್ರಿಯಗಳೆಲ್ಲ ಸ್ತಬ್ಧವಾಗಿ ನಿವೃತ್ತಿ ಹೊಂದಿರುವುದರಿಂದಲೂ ಲಿಂಗ ಜ್ಯೋತಿ ಆತ್ಮನಿಗೆ ಕಾಣುತ್ತದೆ. ಸ್ವಸ್ವರೂಪಜ್ಞಾನವೂ ಅಂಕುರಿಸುತ್ತದೆ. ಆತ್ಮಪರಮಾತ್ಮರುಗಳ ಸಂಬಂಧ ಬೆಳೆಯುತ್ತದೆ. ಆದರೆ ಈ ಯೋಗವು ಲಿಂಗವಿರಹಿತವಾದುದಲ್ಲ.

**(೫) ಶರಣಸ್ಥಲ :** ಶರಣನು ಜ್ಞಾನಿ, ನಿತ್ಯಾನಿತ್ಯಗಳನ್ನು ತಿಳಿದವನು, ದೇಹ-ಸಂಸಾರಾದಿ ಮೋಹಗಳನ್ನು ಬಿಟ್ಟವನು. ಶರಣನು ಪಂಚಭೂತಾತ್ಮಕವಾದ ದೇಹ ತಾನಲ್ಲ, ಅಂತಃಕರಣ ಚತುಷ್ಟಯ ತಾನಲ್ಲ, ಪ್ರಕೃತಿ ಪುರುಷ ತಾನಲ್ಲ ಎಂದು ಭಾವಿಸುವನು. ಅಂಗತತ್ವಗಳಾದ ೨೫ ಅಶುದ್ಧ ತತ್ವಗಳನ್ನು ಮೀರಿ, ವ್ಯವಹರಿಸುತ್ತಿರುವವನು ಶರಣ, ಹೀಗ ಲಿಂಗದ ಗುಣಗಳನ್ನು ಪಡೆದು ಶಿವರೂಪಿಯಾಗಿ, ಅಂಗ-ಲಿಂಗ ಎಂಬ ಭೇದ ಭಾವವರಿಯದೆ ಇರುತ್ತಾನೆ ಶರಣ. ಶಿವಶಕ್ತಿಯರಿಗೆ ಹೇಗೆ ಅವಿನಾಭಾವವೋ ಹಾಗೆ ಪ್ರಕೃತಿ ಪುರುಷಾದಿಗಳನ್ನು ಮೀರಿದ ಶರಣ ಮತ್ತು ಲಿಂಗ ಇವರಿಗೆ ಅವಿನಾಭಾವವಿರುತ್ತದೆ. ಶಕ್ತಿಯೇ ಶಿವ, ಶಿವನೇ ಶಕ್ತಿ ಹೇಗೋ ಹಾಗೆ ಶರಣನೇ ಲಿಂಗ. ಲಿಂಗವೇ ಶರಣ,

(೬) **ಐಕ್ಯಸ್ಥಲ :** ಜ್ಞಾತೃ,ಜ್ಞಾನ,ಜ್ಞೇಯ ಎಂಬುವು ಅಳಿದು "ಘೃತ ಘೃತವ ಬೆರಸಿದಂತೆ, ಜ್ಯೋತಿ ಜ್ಯೋತಿಯು ಬೆರಸಿದಂತೆ. ಬಯಲ ಬಯಲ ಬೆರಸಿದಂತೆ" ಲಿಂಗ ಸಮರಸನಾಗಿ ಇರುವುದೇ ಐಕ್ಯಸ್ಥಲ. ಒಂದೇ ವಸ್ತು ಎರಡಾಗಿತ್ತು. ಪುನಃ ಅಂತ ರಂಗದಲ್ಲಿ ಕೂಡಿ ಒಂದಾಯಿತು. ಇದು ಸಂಪೂರ್ಣ ಸಾಮರಸ್ಯದ ಐಕ್ಯ.

"ಲಿಂಗವೆನ್ನೆ ಲಿಂಗೈಕ್ಯವೆನ್ನೆ, ಸಂಗವೆನ್ನೆ ನಿಸ್ಸಂಗವೆನ್ನೆ, ಆಯಿತ್ತೆನ್ನೆ ಆಗದೆಂದೆನ್ನೆ. ನೀನೆನ್ನೆ ನಾನೆನ್ನೆ. ಚೆನ್ನಮಲ್ಲಿಕಾರ್ಜುನ ಲಿಂಗದಲ್ಲಿ ಘನಲಿಂಗೈಕ್ಯವಾದ ಬಳಿಕ ಮತ್ತೇನೂ ಎನಲೊಲ್ಲದೆ ಇದ್ದೆನು" ಎಂಬ ವಚನದಲ್ಲಿ ಐಕ್ಯಸ್ಥಲದ ಕಲ್ಪನೆ ಕಂಡು ಬರುತ್ತದೆ. "ಕರ್ಪೂರದ ಗಿರಿಯನುರಿ ತಾಗಿದಂತೆ." ಆಲಿಕಲ್ಲು ನೀರಲ್ಲಿ ಬೆರತಂತೆ ಮೊದಲನೆಯ ದೃಷ್ಟಾಂತಗಳು ಈ ಸಾಮರಸ್ಯದ ಸ್ವರೂಪವನ್ನು ಮನದಟ್ಟು ಮಾಡಿ ಕೊಡುತ್ತವೆ.

ಇದುವರೆಗೆ ಷಟ್‌ಸ್ಥಲದ ಸಾಮಾನ್ಯ ಕಲ್ಪನೆಯಯ್ನು ಮಾಡಿಕೊಂಡದ್ದಾಯಿತು. ಈ ಷಟ್‌ಸ್ಥಲದ ಸಾಧನೆ ಸುಲಭವೇನೂ ಅಲ್ಲ. "ಲಕ್ಷಕ್ಕೊಬ್ಬ ಭಕ್ತ. ಕೋಟಿಗೊಬ್ಬ ಶರಣ" ಎಂದು ಹೇಳಿದಂತೆ ಇಂಥ ಸಿದ್ಧಿಯನ್ನು ಪಡೆದವರು ಕೆಲವರೇ ಮಾತ್ರ. (ಹಿಡಿದ ಸ್ಥಳದಲ್ಲಿಯೇ ಷಟ್‌ಸ್ಥಲಗಳೆಲ್ಲವನ್ನೂ ಸಾಧಿಸಬಹುದೆಂಬ ಅಭಿಪ್ರಾಯವೂ ವಚನಕಾರರಲ್ಲಿದೆ.)

ಈ ಸಿದ್ಧಾಂತದಲ್ಲಿ ಕರ್ಮ, ಭಕ್ತಿ, ಜ್ಞಾನಗಳನ್ನು ಸಮನ್ವಯಗೊಳಿಸಲಾಗಿದೆ. ಅಲ್ಲದೆ ದ್ವೈತ ಹಾಗೂ ಅದ್ವೈತ ಪರಮಾತ್ಮನ ಸಗುಣ ಮತ್ತು ನಿರ್ಗುಣ ರೂಪಗಳನ್ನು ಈ ಸಿದ್ಧಾಂತದಲ್ಲಿ ಸುಂದರವಾಗಿ ಸಮನ್ವಯ ಮಾಡಲಾಗಿದೆ. ಇದು ಕೇವಲ ತರ್ಕದ ಶಾಸ್ತ್ರವಾಗಿದೆ. ಬೇರೆ ಬೇರೆ ನೆಲೆಗಳಲ್ಲಿರುವ ಸಾಧಕರಿಗೆ ಸಾಧನಮಾರ್ಗದ ಪೂರ್ಣ ಚಿತ್ರವನ್ನು ತೋರಿಸಿಕೊಡುತ್ತದೆ ಷಟ್‌ಸ್ಥಲಸಿದ್ಧಾಂತ. ಭಾರತೀಯ ದಾರ್ಶನಿಕರು ಕಂಡ ಸತ್ಯದ ನಾನಾಮುಖಗಳನ್ನು ನಾವಿಲ್ಲಿ ಒಟ್ಟು ಒಂದೇ ಚಿತ್ರವಾಗಿ ಕಾಣುತ್ತೇವೆ. ಷಟ್‌ಸ್ಥಲ ಸಿದ್ಧಾಂತವನ್ನು ಸೂಕ್ಷ್ಮವಾಗಿ ಗಮನಿಸಿದರೆ ಅಧ್ಯಾತ್ಮ ವಿಚಾರದಲ್ಲಿಯ ಭಿನ್ನಾಭಿಪ್ರಾಯಗಳು, ಪರಸ್ಪರ ವಿರೋಧಗಳು ತಂತಾನೆ ಮಾಯವಾಗುವವು. ಇಂಥ ಶ್ರೇಷ್ಠ ಸಿದ್ಧಾಂತವನ್ನು ಕಾವ್ಯಮಯವಾಗಿ ಪ್ರತಿಷ್ಠಾಪಿಸಿದ ಮಹಾದಾರ್ಶನಿಕರಿಗೆ ವಂದಿಸಿ ;ಈ ಚಿಕ್ಕ ಲೇಖನ ಮುಗಿಸುವೆ. □

# ಬಸವಣ್ಣನವರ ಚರಿತ್ರೆಯ ಹಲವು ಸಮಸ್ಯೆಗಳು

ಡಾ. ಪಾಂಡುರಂಗರಾವ ದೇಸಾಯಿ

ಮಹಾತ್ಮಾ ಬಸವಣ್ಣನವರದು ವರ್ಣರಂಜಿತ ವಿಗ್ರಹ; ವೈವಿಧ್ಯಮಯ ವ್ಯಕ್ತಿತ್ವ. ಭಕ್ತನೆಂದು, ಸಂತನೆಂದು, ಸಿದ್ಧನೆಂದು, ಅನುಭಾವಿ ಎಂದು, ಅವತಾರಿ ಎಂದು, ದೇವನೆಂದು, ಧರ್ಮ ಸುಧಾರಕನೆಂದು, ಸಮಾಜೋದ್ಧಾರಕನೆಂದು, ಭಾಷಾ ಪ್ರಭುವೆಂದು, ಸಾಹಿತ್ಯ ಪ್ರವರ್ತಕನೆಂದು, ಕ್ರಾಂತಿ ಪುರುಷನೆಂದು, ಹಲವರು ಹಲವು ವಿಧದಿಂದ ಅಣ್ಣನನ್ನು ಕಂಡಿದ್ದಾರೆ, ಕೊಂಡಾಡಿದ್ದಾರೆ.

## ಚಿನ್ನದ ಚೌಕಟ್ಟು

ಆದರೆ ಬಹುಮುಖ್ಯವಾದ, ಅವರ ವ್ಯಕ್ತಿತ್ವದ ಇನ್ನೊಂದು ಮುಖವನ್ನು ಸರಿಯಾಗಿ ಕಂಡವರು ವಿರಳ. ಅದು ಅವರ ಐತಿಹಾಸಿಕತೆ. ಇತಿಹಾಸದಲ್ಲಿ ಅವರ ಇತಿಹಾಸ ಪ್ರಸಿದ್ಧ ಸ್ಥಾನವು ಅಚಲವಾಗಿದ್ದರೂ ಆ ಅಚಲ ಸ್ಥಾನದ ನಿರ್ಮಾಣದ ವಿವರಗಳು ಸಾಕಷ್ಟು ಸ್ಪಷ್ಟವಾಗಿಲ್ಲ. ಆದ್ದರಿಂದ ಚಾರಿತ್ರಿಕ ದೃಷ್ಟಿಯಿಂದ, ಐತಿಹಾಸಿಕ ಪ್ರಜ್ಞೆಯಿಂದ ಸ್ಥಲ ಕಾಲಗಳ ಪರಿಸರದಲ್ಲಿ ಬಸವಣ್ಣನವರ ಜೀವಮಾನದ ಘಟನೆಗಳನ್ನು ಪರಿಶೋಧಿಸಿ, ಪರಿಷ್ಕರಿಸಿ ಪ್ರಕಟಿಸುವದು ಇಂದಿನ ಕಾಲದಲ್ಲಿ ತುಂಬ ಅವಶ್ಯಕವಾಗಿದೆ. ಇಂಥ ಆವಿಷ್ಕಾರದಿಂದ ಅವರ ಬಹುಮುಖ ವ್ಯಕ್ತಿತ್ವದ ಪ್ರತಿಮೆಯನ್ನು **ಚಿನ್ನದ ಚೌಕಟ್ಟಿನ**ಲ್ಲಿ ಕೂರಿಸಿ ವಜ್ರದ ಮಂಟಪದಲ್ಲಿ ಬೆಳಗಿಸಿದಂತೆ ಆಗುತ್ತದೆ.

ಕೆಲವರು ಶಂಕಿಸಬಹುದು. ಅಣ್ಣನ ಸಾಧನಗಳೇ ಸ್ವಯಂಪ್ರಕಾಶಿ ಆಗಿರುವಾಗ ಇತಿಹಾಸವು ಮಾತ್ರ ಹೆಚ್ಚಿನ ಪ್ರಕಾಶವನ್ನೇನು ನೀಡಬಲ್ಲದು? ಹೀಗೆಂದರೆ ಗರ್ಭಗುಡಿಯಲ್ಲಿ ವಿಗ್ರಹವು ತಾನೇ ಇರುವಾಗ ಅಲ್ಲಿ ನಂದಾದೀಪದ ಅಗತ್ಯವೇನು ಎಂದು ಕೇಳಿದ ಹಾಗೆ ಆಗುತ್ತದೆ. ಇತಿಹಾಸವೊಂದು ಸತ್ಯದ ದರ್ಶನ. ಆವರಣದಲ್ಲಿದ್ದ ಜ್ಯೋತಿಯ ಪ್ರಭೆಯನ್ನು ಅನಾವರಣಗೊಳಿಸುವದೇ ಇತಿಹಾಸದ ಉದ್ದೇಶ. ಇಂಥ ಪ್ರಕಾಶನ ಕಾರ್ಯವು ನಡೆಯದೆ ದೇವನದೇ ಆಗಲಿ, ದೇವಮಾನವನದೇ ಆಗಲಿ ದರ್ಶನ ಪೂರ್ಣವಾಗಲಾರದು, ಸಾಕಾರವಾಗಲಾರದು, ಸಫಲವಾಗಲಾರದು. ಆದ್ದರಿಂದ

ಅಣ್ಣನ ಜೀವನದ ಐತಿಹಾಸಿಕ ಘಟನೆಗಳನ್ನು ಪರಿಶ್ರಮ ಪೂರ್ವಕ ಸಂಶೋಧಿಸಿ ಪ್ರಚಾರಗೊಳಿಸಿದರೆ ಅದೊಂದು ರಾಷ್ಟ್ರೀಯ ಸೇವೆಯೇ ಆದೀತು.

## ಸಮಸ್ಯೆಗಳು

ಒಂದು ವಿಧದಿಂದ ಅಣ್ಣನ ವ್ಯಕ್ತಿತ್ವವು ಒಂದು ಸಮಸ್ಯೆ ಆಗಿದೆ. ಈ ಸಮಸ್ಯೆಯನ್ನು ಸ್ಥೂಲ ಮತ್ತು ಸೂಕ್ಷ್ಮ ಎಂಬ ಎರಡು ವಲಯಗಳಲ್ಲಿ ವಿಂಗಡಿಸಬಹುದು. ಸ್ಥೂಲ ವಲಯದಲ್ಲಿ ಎಂದರೆ ಅವರು ತಮ್ಮ ಕಾರ್ಯಕ್ಷೇತ್ರದಲ್ಲಿ ಬಹಿರಂಗವಾಗಿ ಸಾಧಿಸಿದ ಸಾಧನೆಗಳ ವಿಚಾರದಲ್ಲಿ ಈಗೀಗ ಸಮಸ್ಯೆಗಳು ಹೆಚ್ಚಾಗಿ ಉಳಿದಿಲ್ಲ. ಆದರೆ ಇನ್ನೊಂದು ಎಂದರೆ ಚರಿತ್ರಾತ್ಮಕ ಜೀವನದ ಸೂಕ್ಷ್ಮ ವಲಯದ ಸಮಸ್ಯೆಗಳು ಮಾತ್ರ ಬಹಳಷ್ಟು ಪರಿಹಾರವಾಗದೆ ಹಾಗೆಯೇ ಉಳಿದಿವೆ. ಕೆಲವನ್ನು ಮಾತ್ರ ಸೂಚಿಸಬಹುದು : ಜನ್ಮ–ಬಾಲ್ಯದ ವಿವರಗಳು ; ಸಂಪ್ರದಾಯದ ಬಂಧನಗಳನ್ನು ತೊರೆದು ಸ್ವತಂತ್ರ ಮಾರ್ಗಕ್ಕೆ ಪ್ರೇರಣೆ ಪಡೆದ ರೀತಿ ; ಸಾಧಕಾವಸ್ಥೆಯ ಘಟನೆಗಳು ; ರಾಜಕೀಯ ಕ್ಷೇತ್ರದಲ್ಲಿ ಪ್ರವೇಶ, ಉತ್ಕರ್ಷ ; ಬಿಜ್ಜಳನ ಜೊತೆಯಲ್ಲಿ ಸಹಕಾರ, ಅಸಹಕಾರದ ಕಾರಣ ಮೀಮಾಂಸೆ ; ವೀರಶೈವ ಸ್ಥಾಪನೆ, ಪ್ರಚಾರದ ಕ್ರಮ ವಿಕ್ರಮಗಳು, ಕೊನೆಯ ದಿನಗಳ ವಾಸ್ತವಿಕ ಚಿತ್ರ, ಜೀವಿಸಿದ ಕಾಲಾವಧಿ, ಇತ್ಯಾದಿ. ಇಂಥ ಒಂದೊಂದು ಹಂತದಲ್ಲಿಯೂ ಅಸ್ಫುಟಗಳು, ಅನಿರ್ಣೀತಗಳು ಹಣೆಯಿಕ್ಕಿ ನಿಂತಿವೆ. ಈ ಮುಂದಿನ ವಿವೇಚನೆಯಿಂದ ಈ ವಿಷಯ ಸ್ಪಷ್ಟವಾಗುತ್ತದೆ.

## ಜನ್ಮಕಾಲ

ಬಸವಣ್ಣನವರು ಮರ್ತ್ಯಲೋಕದಲ್ಲಿ ಹುಟ್ಟಿಬಂದದು ಯಾವಾಗ ? ಎಂದು ? ಅವರು ಜನನ ಕಾಲ ಕುರಿತು ವರ್ಷ ತಿಥಿ, ಮಿತಿ ಮುಂತಾದ ವಿವರಗಳು ದೊರಕುತ್ತವೆಯೆ? ನೋಡುವ ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ (ಸುಮಾರು ಕ್ರಿ. ಶ. ೧೪೬೫) ಎಂಬ ಗ್ರಂಥದಲ್ಲಿ ಅಣ್ಣನ ಜನನ ಕಾಲದ ವಿವರಗಳೂ ಹೀಗೆ ಉಕ್ತವಾಗಿವೆ. ಸಿದ್ಧಾರ್ಥಿ ಸಂವತ್ಸರ ಕಾರ್ತಿಕ ಪೌರ್ಣಿಮೆ ಕೃತ್ತಿಕಾ ನಕ್ಷತ್ರ, ಸೋಮವಾರ, ಮಧ್ಯರಾತ್ರಿ. ವೃಷಭಲಗ್ನ, ಶಿವಯೋಗ. ಇತಿಹಾಸ ಮತ್ತು ಐತಿಹಾಸಿಕ ಕಾಲಗಣನಾ ಶಾಸ್ತ್ರದ ದೃಷ್ಟಿಯಿಂದ ಈ ಮಿತಿ ಅಸಂಬದ್ಧವಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಸಿದ್ಧಾರ್ಥಿ ಸಂವತ್ಸರವು ಕ್ರಿ. ಶ. ೧೧೪೦ ಕ್ಕೆ ಹೊಂದಾಣಿಕೆ ಆಗುತ್ತದೆ. ಈ ಮಿತಿಯನ್ನು ನಂಬಿದರೆ ಅಣ್ಣನ ಜೀವನದ ಘಟನೆಗಳೆಲ್ಲ ಅಸ್ತವ್ಯಸ್ತವಾಗುತ್ತವೆ : ಮುಖ್ಯವಾಗಿ, ಅವರು ಜೀವಿಸಿದ್ದು ಇಪ್ಪತ್ತೇಳು ವರ್ಷಕಾಲ ಮಾತ್ರ ಎಂದು ತಿಳಿಯಬೇಕಾಗುತ್ತದೆ.

ಸಿಂಗಿರಾಜ ಪುರಾಣದಲ್ಲಿ (ಕ್ರಿ. ಶ. ಸು. ೧೫೦೦) ಅಣ್ಣನ ಜನ್ಮದ ಕಾಲ ವಿವರ ಹೀಗೆ ಹೇಳಲಾಗಿದೆ: ಆಶ್ವಿಜ ಶುದ್ಧ ಚತುರ್ದಶಿ, ಸೋಮವಾರ, ಚಂದ್ರ, ಆದ್ರ್ರಾನಕ್ಷತ್ರ

ಮತ್ತು ಶಿವಯೋಗ ಇವುಗಳ ಸಂಯೋಗ. ಈ ವಿವರಗಳನ್ನು ಮೇಳಗೂಡಿಸುವುದು ಕಷ್ಟಕರವಾಗಿದೆ. ಇಲ್ಲಿ ಮುಖ್ಯವಾಗಿ ಶಾಲಿವಾಹನಶಕ ವರ್ಷವಾಗಲಿ, ಸಂವತ್ಸರ-ವಾಗಲಿ, ನಿರ್ದೇಶಿಸಲಾಗಿಲ್ಲ. ಆದ್ದರಿಂದ ಇದರ ನಿಶ್ಚಿತ ಮಿತಿಯನ್ನು ನಿಷ್ಕರ್ಷೆ ಮಾಡುವದು ಅಸಾಧ್ಯವೇ ಆಗಿದೆ;

ಪಾಲ್ಕುರಿಕೆ ಸೋಮನಾಥನ ತೆಲುಗು ಬಸವ ಪುರಾಣದಲ್ಲಿ (ಕ್ರಿ. ಶ. ಸು. ೧೨೦೦), ಭೀಮ ಕವಿಯ ಕನ್ನಡ ಬಸವ ಪುರಾಣದಲ್ಲಿ (ಕ್ರಿ.ಶ. ೧೩೬೯), ಎರಡು ಸಂಸ್ಕೃತ ಬಸವಪುರಾಣಗಳಲ್ಲಿ (ಕ್ರಿ.ಶ.ಸು. ೧೫ನೆಯ ಶತಮಾನ) ಅಣ್ಣನು ಹುಟ್ಟಿದ್ದು ಆರ್ಧೋದಯ ಎಂಬ ಶುಭ (ಲಗ್ನದಲ್ಲಿ) ಎಂದು ಹೇಳಿದೆ. ಮಹಾಶಿವರಾತ್ರಿಯಂತೆ ಅರ್ಧೋದಯವೆಂಬುದು ಶುಭಯೋಗ, ನಿಜ. ಮಾಘದ ಅಮಾವಾಸ್ಯೆ, ಭಾನುವಾರ ದಂದು, ಹಗಲು ರೋಹಿಣೀನಕ್ಷತ್ರ ಮತ್ತು ವ್ಯತೀಪಾತ ಯೋಗ ಕೂಡಿದ ಸಂದರ್ಭ ದಲ್ಲಿ ಅರ್ಧೋದಯ ಯೋಗವು ಉಂಟಾಗುತ್ತದೆ. ಆದರೆ ಈ ಯೋಗದ ಖಚಿತ ಕಾಲ ನಿಶ್ಚಯ ಮಾಡಲು ಶಕವರ್ಷ ಮತ್ತು ಸಂವತ್ಸರ ಇವು ಉಕ್ತವಾಗಿರಬೇಕಾಗು ತ್ತದೆ. ಅವು ಮೇಲೆ ಹೆಸರಿಸಿದ ಗ್ರಂಥಗಳಲ್ಲಿ ದೊರಕುವುದಿಲ್ಲವಾದ್ದರಿಂದ ಎಲ್ಲವು ಸಂದಿಗ್ಧವಾಗಿಯೇ ಉಳಿಯುತ್ತದೆ.

ಕಾಲಜ್ಞಾನ ಎಂಬ ಕೃತಿಗಳಲ್ಲಿ ಮತ್ತು ಚೆನ್ನಬಸವ ಪುರಾಣ ಮುಂತಾದ ಇನ್ನೂ ಕೆಲವು ಪುರಾಣಗಳಲ್ಲಿ ಬಸವಣ್ಣನವರ ಜೀವನದ ಕೆಲವು ಘಟನೆಗಳ ಮಿತಿಗಳು ದೊರ ಕುತ್ತವೆ. ಅವು ಮುಖ್ಯವಾಗಿ ಸಂವತ್ಸರಗಳನ್ನು ನಿರ್ದೇಶಿಸುತ್ತವೆ. ಉದಾಹರಣೆ ಯಾಗಿ, ಕೆಲವು ಕಾಲಜ್ಞಾನ ವಚನಗಳಲ್ಲಿ, ಅಣ್ಣ ಜನಿಸಿದ ಸಂವತ್ಸರ ವಿಕ್ರಮವೆಂದು, ಐಕ್ಯವಾದ ಸಂವತ್ಸರ ರಾಕ್ಷಸವೆಂದು ವಿವರಗಳಿಲ್ಲದೆ ಅನಿರ್ದಿಷ್ಟವಾಗಿ ಹೇಳಿದೆ. ಇದ ರಿಂದ ನಿಶ್ಚಯಾತ್ಮಕ ಪ್ರಯೋಜನ ಉಂಟಾಗುವುದಿಲ್ಲ. ಈ ಕಾಲಜ್ಞಾನ ಕೃತಿಗಳು ಅಲ್ಲಮ ಪ್ರಭು, ಬಸವಣ್ಣ, ಚೆನ್ನಬಸವಣ್ಣ, ರುದ್ರಮುನಿ, ಮುಂತಾದ ಮಹನೀಯ ರಿಂದ ಪ್ರಸ್ತುತವಾದವು ಎಂದು ಅವುಗಳಲ್ಲಿ ಹೇಳಲಾಗಿದ್ದರೂ, ಅದು ಕೇವಲ ಔಪ ಚಾರಿಕವಾಗಿ ಎಂದು ಇಟ್ಟುಕೊಳ್ಳಬೇಕಾಗುತ್ತದೆ. ಅವುಗಳಲ್ಲಿ ಇಕ್ಕೇರಿಯ ಪಾಳೇ ಗಾರರು, ಮರಾಟರು, ಮೊಗಲರು, ಮುಂತಾದವರ ಸಂದರ್ಭ ಬರುವುದರಿಂದ ಐತಿ ಹಾಸಿಕ ಪ್ರಜ್ಞಾವಂತರು ಅವು ಹದಿನಾರು, ಹದಿನೇಳು ಶತಮಾನದಷ್ಟು ಈಚೆಯ ಕಾಲದಲ್ಲಿ ರಚಿತವಾದವು ಎಂದು ತೀರ್ಮಾನಿಸಿರುವರು. ಅಣ್ಣನ ಅನಂತರ ಅನೇಕ ಶತಮಾನಗಳಷ್ಟು ದೀರ್ಘಕಾಲಾಂತರದಲ್ಲಿ ರಚಿತವಾದುದರಿಂದ ಅವುಗಳಲ್ಲಿ ಇಂಥ ಅನಿ ಶ್ಚಿತ, ಅನೈತಿಹಾಸಿಕ ಸಂಗತಿಗಳು ತಲೆದೋರಿವೆ.

ಶಕವರ್ಷ, ಸಂವತ್ಸರಗಳ ವಿಚಾರವನ್ನು ಬದಿಗಿರಿಸಿ, ಈಗ ಪ್ರಚಲಿತವಾಗಿರುವ ಬಸವಣ್ಣನವರ ಜನ್ಮತಿಥಿಯನ್ನು ಕುರಿತು ಕಿಂಚಿತ್ ಆಲೋಚಿಸುವಾ. ಈಗ ನಾವು ನಂಬಿರುವಂತೆ ವೈಶಾಖ ಶುದ್ಧ ತೃತೀಯೆ ಬಸವಜಯಂತಿಯ ದಿನ. ಇದಕ್ಕೆ ಏನಾದರೂ ಆಧಾರವಿದೆಯೆ ? ಇದೆ, ಸ್ವಲ್ಪ ಮಟ್ಟಿಗೆ ಇದೆ. ಸುಮಾರು ಹದಿನೈದನೆಯ ಶತಮಾನ

ದಲ್ಲಿ ರಚಿತವಾದ, ವ್ಯಾಸಕೃತವೆಂದು ಹೇಳಲಾದ ಸಂಸ್ಕೃತ ಬಸವ ಪುರಾಣದಲ್ಲಿ, ನಕ್ಷತ್ರವೇ ಮುಂತಾದ ಕೆಲವು ವಿವರಗಳು ಉಕ್ತವಾಗಿವೆ. ಅವುಗಳನ್ನು ಗುಣಿಸಿ ನೋಡಿದ ಜ್ಯೋತಿಷ ಪಂಡಿತರೊಬ್ಬರು ಅದು ವೈಶಾಖ ಶುದ್ಧ ತೃತೀಯೆ, ರೋಹಿಣೀ ನಕ್ಷತ್ರವೆಂದು ನಿರ್ಧರಿಸಿರುವರು. ಆದರೆ ವ್ಯಾಸಕೃತ ಬಸವಪುರಾಣದಲ್ಲಿ ಸಂವತ್ಸರದ ನಿರ್ದೇಶವಿಲ್ಲ. ಅದು ಹೋಗಲಿ ಎಂದರೆ' ಅರ್ಧೋದಯ ಯೋಗವನ್ನು ಮಾತ್ರ ಅದರಲ್ಲಿ ಸ್ಫುಟವಾಗಿ ನಿರ್ದೇಶಿಸಿದೆ. ಅದರ ವಿಚಾರವೇನು ? ಅದನ್ನು ತಳ್ಳಿ ಬಿಡ ಬಹುದೆ ? ಮೇಲಿನ ಮಿತಿಯನ್ನು ನಿರ್ಧರಿಸುವಾಗ ಪಂಡಿತರು ಅದನ್ನು ಅಲಕ್ಷಿಸಿದಂತೆ ತೋರುತ್ತದೆ. ಏಕೆಂದರೆ ಅರ್ಧೋದಯಯೋಗವು ಮಾಘದ ಅಮವಾಸ್ಯೆಯೆಂದು ಮಾತ್ರ ಉಂಟಾಗುವದು. ವೈಶಾಖದಲ್ಲಿ ಶುದ್ಧ ತೃತೀಯೆಯಂದು ಅಲ್ಲ. ಈ ವಿಸಂಗತಿಗೆ ಪರಿಹಾರ ಯಾವುದು ?

ಈ ಪರಿಸ್ಥಿತಿಯಲ್ಲಿ ಈ ಸಮಸ್ಯೆಗಳು ನಮ್ಮನ್ನು ಬಾಧಿಸುತ್ತವೆ: ಲಕ್ಕಣ್ಣ ದಂಡೇಶನನ್ನು ನಂಬಿದರೆ ಅಣ್ಣ ಹುಟ್ಟಿದುದು ಕಾರ್ತೀಕದಲ್ಲಿ. ಸಿಂಗಿರಾಜನಿಗೆ ಸೈ ಅಂದರೆ ಆತ ಜನಿಸಿದುದು ಆಶ್ವೀಜದಲ್ಲಿ. ಅರ್ಧೋದಯ ಯೋಗವನ್ನು ಆಧಾರವಾಗಿ ಇಟ್ಟು ಕೊಂಡರೆ, ಮಾಘದ ಅಮವಾಸ್ಯೆಯೆಂದು ಅಣ್ಣನ ಜನ್ಮವೆಂದು ಗ್ರಹಿಸಬೇಕಾಗುತ್ತದೆ. ಪ್ರಚಲಿತ ತಿಥಿಗೆ ತಲೆ ಬಾಗಿದರೆ ವೈಶಾಖವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಇವುಗಳಲ್ಲಿ ಯಾವುದು ಸತ್ಯ, ಯಾವುದು ಮಿಥ್ಯ ?

ಬಸವೇಶ್ವರರಂಥ ಮಹಾವಿಭೂತಿಯ ಜನ್ಮವೇಳೆಯ ಬಗೆಗೆ ಇಷ್ಟೊಂದು ಸಂದಿಗ್ಧತೆ ಏಕೆ ? ಗೊಂದಲವೇಕೆ ? ಈ ಸಮಸ್ಯೆಗೆ ಪರಿಹಾರವೇನು ? ಇದನ್ನು ಬಲ್ಲವರು ಪ್ರಜ್ಞಾವಂತರೆಲ್ಲರೂ ಆಳವಾಗಿ ಆಲೋಚಿಸಬೇಡವೆ ? ಇದರ ವಿಮರ್ಶೆ ಸಂಶೋಧನೆ ನಡಯಿಸಬೇಕಲ್ಲವೇ ?

## ಐಕ್ಯಕಾಲ

ಜನ್ಮಕಾಲದ ಸಂಗತಿ ಹಾಗಿರಲಿ. ಈ ಮಗು ಮುಂದೆ ಮುಗಿಲ ಉದ್ದಕ್ಕೂ ಬೆಳೆದು ಮಹಾಮಹಿಮನೆಂಬ ಘನತೆಯನ್ನು ಪಡೆದೀತು ಎಂದು ತಂದೆ ತಾಯಿಗಳಿಗೆ ಆಗ ಕಲ್ಪನೆ ಇಲ್ಲದ್ದರಿಂದ ಅವರು ಅಣ್ಣನ ಜನನ ವೇಳೆಯ ವಿವರಗಳನ್ನು ಸ್ಮರಣೆಯಲ್ಲಿ ಇಟ್ಟುಕೊಂಡಿರಲಿಕ್ಕಿಲ್ಲ; ಹೀಗೆ ಸಮಾಧಾನ ತಳೆಯೋಣ.

ಆದರೆ ಆತ ಮಹಾಪುರುಷನ ಪ್ರಖ್ಯಾತಿಯನ್ನು ಗಳಿಸಿ ಶಿವನಲ್ಲಿ ಐಕ್ಯವಾದ ಗಳಿಗೆಯನ್ನಾದರೂ ಭಕ್ತರು ತುಂಬ ಜಾಗರೂಕತೆಯಿಂದ ಹೃದಯಾಂತರಾಳದಲ್ಲಿ ಧ್ಯಾನಿಸುತ್ತ ಕಾಪಾಡಿಕೊಂಡು ಬಂದಿರಬೇಕಲ್ಲವೇ ? ದುರ್ದೈವದಿಂದ ಈ ವಿಷಯದಲ್ಲಿಯೂ ನಿರಾಶೆಯೇ ನಮ್ಮನ್ನು ಎದುರಿಸುತ್ತದೆ, ಅದು ಹೀಗೆ—

ಕಾಲಜ್ಞಾನ ಸಾಹಿತ್ಯದಲ್ಲಿ ಒಂದೆಡೆ ಅಣ್ಣನ ಐಕ್ಯದ ತಿಥಿ ಶ್ರಾವಣ ಶುದ್ಧ ಪಾಡ್ಯ ಎಂದು ಹೇಳಿದೆ. ಇನ್ನೊಂದೆಡೆ ಅದು ಮಾರ್ಗಶೀರ್ಷ ಶುದ್ಧ ಪ್ರತಿಪದೆ ಎಂದಿದೆ.

ಈ ಎರಡೂ ದಿನಗಳಲ್ಲಿ ವಾರದಿನಮಾತ್ರ ಮಂಗಳವಾರವೇ ಆಗಿತ್ತಂತೆ. ಚೆನ್ನಬಸವ ಪುರಾಣದಲ್ಲಿ ಈ ತಿಥಿ ಫಾಲ್ಗುಣ ಶುದ್ಧ ಏಕಾದಶಿಯೆಂದು ಹೆಸರಿಸಿದೆ. ಇವುಗಳಲ್ಲಿ ಯಾವುದು ನಿಜ, ಯಾವುದು ಸುಳ್ಳು? ಮೂರೂ ನಿಜವಾಗಲಾರವಷ್ಟೆ? ಸುಳ್ಳಾದರೂ ಆಗಬಹುದು; ಅದಕ್ಕೆ ಆತಂಕವಿಲ್ಲ.

ಚೆನ್ನಬಸವಪುರಾಣದ ಕ್ರಿ.ಶ. (೧೫೮೪) ಕಾಲಜ್ಞಾನ ವಿಭಾಗದಲ್ಲಿ ಬಸವಣ್ಣನ ಐಕ್ಯಕಾಲದ ನಿರ್ದೇಶವು ವಿವರವಾಗಿ ಹೇಳಲಾಗಿದೆ. ಆದರೆ ಅವೆಲ್ಲವು ಒಂದೇ ವಿಧವಾಗಿ ದೊರಕುವದಿಲ್ಲ. ಈ ಗ್ರಂಥದ ಹಸ್ತಲಿಖಿತ ಪ್ರತಿಗಳಲ್ಲಿ ವ್ಯತ್ಯಾಸವು ಕಂಡು ಬರುತ್ತದೆ. ಈ ನಿರ್ದೇಶದ ನಾಲ್ಕು ಪ್ರಕಾರಗಳು ಮಾಸ ಮತ್ತು ತಿಥಿಯನ್ನು ಬಿಟ್ಟು ಈ ಮುಂದೆ ಕಾಣಿಸಿದಂತೆ ಇರುತ್ತವೆ. ಶಾಲಿವಾಹನ ಶಕಕ್ಕೆ ಸರಿಗೂಡುವ ಕ್ರಿಸ್ತಶಕವನ್ನು ಅವುಗಳ ಜೊತೆಗೆ ಇಲ್ಲಿ ತೋರಿಸಲಾಗಿದೆ.

೧. ಶಾ. ಶಕ ೬೦೭, ರಕ್ತಾಕ್ಷಿ — ಕ್ರಿ.ಶ. ೬೮೫
೨. ಶಾ. ಶಕ. ೬೯೬, ರಕ್ತಾಕ್ಷಿ — ಕ್ರಿ.ಶ. ೭೭೪
೩. ಶಾ. ಶಕ. ೬೯೬ ರಾಕ್ಷಸ — ಕ್ರಿ.ಶ. ೭೭೪
೪. ಶಾ. ಶಕ ೭೦೭ ರಕ್ತಾಕ್ಷಿ — ಕ್ರಿ.ಶ. ೭೮೫

ಮೇಲೆ ಕಾಣಿಸಿದ ಕ್ರಿ.ಶ.ದ ವರ್ಷಗಳು ಎಷ್ಟು ಅಸಂಬದ್ಧವಾಗಿವೆ ಎನ್ನುವುದಕ್ಕೆ ಹೆಚ್ಚಿನ ವಿವರಣೆ ಅನಾವಶ್ಯಕ. ಬಸವಣ್ಣನವರು ಜೀವಿಸಿದ್ದು, ಐಕ್ಯವಾದದ್ದು ಹನ್ನೆರಡನೆಯ ಶತಮಾನದಲ್ಲಿ ಎಂಬುದು ಇತಿಹಾಸಜ್ಞರಿಗೆ ಸುಪರಿಚಿತ ಸಂಗತಿ. ಈ ಮೇಲಿನ ನಿರ್ದೇಶನಗಳನ್ನು ಅವಲೋಕಿಸಿದರೆ ಅವರು ಏಳು ಮತ್ತು ಎಂಟನೆಯ ಶತಮಾನದಲ್ಲಿ ಊರ್ಜಿತರಾಗಿದ್ದರು ಎಂದು ತಿಳಿಯಬೇಕಾಗುತ್ತದೆ! ಇನ್ನೊಂದು ವಿಷಯ. ಮೇಲೆ ಕಾಣಿಸಿದ ಸಂವತ್ಸರಗಳಲ್ಲಿ ಐಕ್ಯಮತ್ಯವಿಲ್ಲ. ರಾಕ್ಷಸ ರಕ್ತಾಕ್ಷಿ ಈ ಎರಡು ಸಂವತ್ಸರಗಳು ಉಕ್ತವಾಗಿವೆ. ಇವುಗಳ ಮಧ್ಯೆ ಹತ್ತು ವರ್ಷಗಳ ಅಂತರವಿದೆ. ಇದಲ್ಲದೆ ಮತ್ತೊಂದು ವಿಚಿತ್ರ ವಿಷಯವೆಂದರೆ ಶಾಲಿಹಾನಶಕ ಮತ್ತು ಆ ಆ ಸಂವತ್ಸರ ಇವುಗಳಿಗೆ ಹೊಂದಾಣಿಕೆಯೇ ಇಲ್ಲ. ಶಾಲಿವಾಹನಶಕ ೬೦೭ ಕ್ಕೆ ಮೇಳಗೂಡುವ ಸಂವತ್ಸರ ಪಾರ್ಥಿವ; ಆದರೆ ಇಲ್ಲಿ ಹೇಳಿದುದು ರಕ್ತಾಕ್ಷಿ. ಮಿಕ್ಕ ಮೂರು ಮಿತಿಗಳೂ ಅದೇ ಪರಿಯಲ್ಲಿ ಅಸಂಗತವಾಗಿವೆ.

ಇಂಥ ವಿಚಿತ್ರ ವ್ಯತ್ಯಾಸ–ವಿಸಂಗತಿಗಳಿಗೆ ಕಾರಣವೇನು? ಈ ಸಮಸ್ಯೆಯನ್ನು ಸಮರ್ಪಕವಾಗಿ ಬಿಡಿಸುವ ಮಾರ್ಗ ಯಾವುದು?

## ಸಿಂಗಿರಾಜನ ಸುವರ್ಣಪ್ರಕಾಶ

ಬಸವಣ್ಣನವರ ಚರಿತ್ರೆ ಮತ್ತು ಜೀವನದ ಯಥಾರ್ಥ ಘಟನೆಗಳ ಕುರಿತು ಅಸ್ಫುಟತೆ ಮತ್ತು ಸಂದಿಗ್ಧತೆ, ಈಚಿನ ಕಾಲದಲ್ಲಿ ಮಾತ್ರವಲ್ಲ, ಹಿಂದಿನ ಕಾಲದಲ್ಲಿಯೂ

ಉಂಟಾಗಿದ್ದಿತು. ಈ ವಿಷಯವು ಸಿಂಗಿರಾಜನು ಹೇಳುವ ಕೆಲವು ಮಾತುಗಳಿಂದ ಸೂಚಿತವಾಗುತ್ತದೆ. ಆ ಕಥಾಸಂದರ್ಭ ಹೀಗಿದೆ,

ಕೂಡಲಸಂಗಮದಲ್ಲಿ ಶಿವಭಕ್ತಿಯನ್ನು ಆಚರಿಸುತ್ತಿದ್ದ ಬಸವಣ್ಣನ ಕೀರ್ತಿ ಕಲ್ಯಾಣನಗರಕ್ಕೆ ಪಸರಿಸಿತು. ಅಲ್ಲಿ ಬಿಜ್ಜಳನ ಮಂತ್ರಿಯಾಗಿದ್ದ ಬಲದೇವನು ಆತನ ವಿಚಾರವನ್ನೆಲ್ಲ ಅರಿತುಕೊಂಡು ಆತನೇ ತನ್ನ ಪುತ್ರಿ ಗಂಗಾಂಬೆಗೆ ತಕ್ಕ ವರನೆಂದು ನಿರ್ಧರಿಸುವನು. ಆತನನ್ನು ವೈಭವದಿಂದ ಬರಮಾಡಿಕೊಂಡು ವಿಜೃಂಭಣೆಯಿಂದ ವಿವಾಹ ಸಮಾರಂಭವನ್ನು ನೆರವೇರಿಸುವನು. ಮಾವನ ಮನೆಯಲ್ಲಿ ಕೆಲ ಕಾಲ ಮಾತ್ರ ಉಳಿದುಕೊಂಡು ಮುಂದೆ ಬಸವಣ್ಣ ಸೊಡ್ಡಳ ಬಾಚರಸನೆಂಬ ಅಧಿಕಾರಿಯ ಕಾರ್ಯಾಲಯದಲ್ಲಿ ಗಣಕವೃತ್ತಿಯ (accounts) ಕೆಲಸಕ್ಕೆ ಸೇರುವನು.

ಈ ಸಂಗತಿಯನ್ನು ವಿವರಿಸುತ್ತ ಸಿಂಗಿರಾಜನು ಹೀಗೆ ನುಡಿಯುವನು, ವಿವಾಹವಾದ ಅಲ್ಪ ಕಾಲದಲ್ಲಿಯೇ ಬಲದೇವನು ತೀರಿಕೊಂಡುದರಿಂದ ಆತನ ಮಂತ್ರಿಪದವನ್ನು ಬಸವೇಶನಿಗೆ ಒಪ್ಪಿಸಲಾಯಿತು, ಎಂದು ಕೆಲವರು ಹೇಳುವರು. ಜನರೂಢಿಯಲ್ಲಿದ್ದ ಈ ಕಥೆ ಸರಿಯಲ್ಲ. ಕಾರಣಿಕ ಪುರುಷನಾಗಿದ್ದರೂ ಬಸವಣ್ಣ ಸಾಮಾನ್ಯ ಮಾನವನಂತೆ ಒಂದು ಚಿಕ್ಕವೃತ್ತಿಯಿಂದ ಕಾರಣಶಾಲೆಯಲ್ಲಿ ತನ್ನ ಜೀವನವನ್ನು ಪ್ರಾರಂಭಿಸಿದನು. ಈ ಮಾತಿಗೆ ಚೆನ್ನಬಸವಣ್ಣನ ವಚನವೇ ಆಧಾರವಾಗಿದೆ ( ಆರನೆಯ ಸಂಧಿ. ಪದ್ಯಗಳು ೪೮–೪೯)

ಪಾಲ್ಕುರಿಗೆ ಸೋಮನಾಥನ ಮತ್ತು ಭೀಮಕವಿಯ ಬಸವಪುರಾಣಗಳಲ್ಲಿ ಬಸವಣ್ಣನ ವಿವಾಹಾನಂತರ ಕೆಲವೇ ದಿನಗಳಲ್ಲಿ ಬಲದೇವಮಂತ್ರಿ ನಿಧನ ಹೊಂದುವನೆಂದು, ಬಳಿಕ ಕೂಡಲೆ ಆತನ ಮಂತ್ರಿಪದ ಬಸವಣ್ಣನಿಗೆ ಪ್ರಾಪ್ತವಾಗುವದೆಂದು ವರ್ಣಿಸಿದೆ. ಸಿಂಗಿರಾಜನ ಅಭಿಪ್ರಾಯದಂತೆ ಇದು ಕರ್ಣಾಕರ್ಣಿ ನಡೆದು ಬಂದು ಜನರು ಹೇಳುವ ಒಂದು ಜಾನಪದ, ಕಥೆ; ಇದು ಸತ್ಯಕ್ಕೆ ದೂರವಾದುದು; ಇದಕ್ಕೆ ಆಧಾರವಿಲ್ಲ. ಈ ಕಥೆ ವಿಶ್ವಾಸಾರ್ಹವಲ್ಲ ಎಂಬ ಸಂಗತಿ ಚೆನ್ನಬಸವಣ್ಣನ ಒಂದು ವಿಶ್ವಸನೀಯ ವಚನದಿಂದ ಸಿದ್ಧವಾಗುತ್ತದೆ. ಸತ್ಯ ಕಥೆ ಮೇಲೆ ನಿರೂಪಿಸಿದಂತಿದೆ. ಹರಿಹರ ಕವಿಯ ನಿವೇದನೆ ಇದಕ್ಕೆ ಅನುಗುಣವಾಗಿದೆ ಎಂಬುದನ್ನು ಇಲ್ಲಿ ಸ್ಮರಿಸಬಹುದು.

ಸಿಂಗಿರಾಜನ ಈ ನುಡಿಗಳು ಬಸವಣ್ಣನ ಜೀವನ ಕುರಿತು ಸಂಶೋಧನೆಯ ಅಗತ್ಯವನ್ನು ಒತ್ತಿ ಹೇಳುತ್ತವೆ. ಸಂಶೋಧಕರಿಗೆ ಇವು ದಾರಿದೀಪವೇ ಆಗಿವೆ. ದುರ್ದೈವವೆಂದರೆ ಈ ಕಥೆ ಹೇಳುವ ಚೆನ್ನಬಸವಣ್ಣನ ಆ ವಚನವು ಮಾತ್ರ ಇದುವರೆಗೆ ಎಲ್ಲಿಯೂ ದೊರೆತಿಲ್ಲ.

## ಐತಿಹಾಸಿಕ ಜೀವನ ಚರಿತ್ರೆ

ಮೇಲಿನ ವಿವೇಚನೆಯಿಂದ ಪುರಾಣಾದಿ ಸಾಹಿತ್ಯಕೃತಿಗಳನ್ನು ಶಾಸನಗಳನ್ನು ಕೂಲಂಕಷವಾಗಿ ಸಂಗ್ರಹಿಸಿ, ಪರಿಶೋಧಿಸಿ, ವಿಮರ್ಶಾತ್ಮಕವಾಗಿ ಬಸವಣ್ಣನವರ ಚರಿ

ತ್ರೆಯನ್ನು ಬರೆಯುವ ಆಗತ್ಯವು ಎಷ್ಟಿದೆ ಎಂಬ ವಿಷಯ ಬಲ್ಲವರಿಗೆ ಮನವರಿಕೆಯಾಗದಿರದು. ಇಂದಿನ ವಿದ್ಯಾವಂತರು ಕೇವಲ ಭಾವುಕತೆಗಿಂತ ಚಿಕಿತ್ಸಕ ದೃಷ್ಟಿಯಿಂದ, ಐತಿಹಾಸಿಕ ಪ್ರಜ್ಞೆಯಿಂದ ಸೃಷ್ಟಿಯಾದ ಲೇಖನ ಗ್ರಂಥಗಳನ್ನು ಮೆಚ್ಚುವರು. ಏಕೆಂದರೆ ಇಂಥ ಸೃಷ್ಟಿಯಲ್ಲಿ ಸಾಂಪ್ರದಾಯಿಕ ಶ್ರದ್ಧೆ-ಭಾವನೆಗಿಂತ ಸತ್ಯದ ಮೋಹಕ ಪ್ರಕಾಶವು ಹೆಚ್ಚಾಗಿ ದೊರಕುತ್ತದೆ.

ಪುರಾಣ ಮತ್ತು ಇತಿಹಾಸ ಪರಸ್ಪರ ವಿರೋಧಿ ಅಲ್ಲ. ರೀತಿ ಬೇರೆ ಆಗಿದ್ದರೂ ಇವೆರಡರ ಗುರಿ ಒಂದೇ. ಪುರಾಣಗಳಲ್ಲಿ ಪ್ರತಿಫಲಿಸದೆ ಇದ್ದಂಥ ಕೆಲವು ಉಜ್ವಲ ವರ್ಣಗಳು, ಭಾವ ಭಂಗಿಗಳು ಬಸವಣ್ಣನವರ ಚಾರಿತ್ರಿಕ ಪ್ರತಿಮೆಯಲ್ಲಿ ತೇಜಃಪುಂಜವಾಗಿ ಪ್ರಕಟವಾಗಬಹುದು, ಮಾನವ ಜೀವನವು ಅಗಾಧವಾಗಿದೆ; ಮಹಾಮಾನವನ ಜೀವನವು ಇನ್ನೂ ಅಗಾಧವಾಗಿದೆ, ರಹಸ್ಯಮಯವಾಗಿದೆ. ಸಾಗರದ ಆಳದಲ್ಲಿ ಮುಳುಗುವ ಸಾಹಸಿಗಳಿಗೆ ತಾನೇ ರತ್ನಗಳು ಕರಗತವಾಗಬಲ್ಲವು ? □

# ಮಹಾದೇವಿಯಕ್ಕನ ಯೋಗಾಂಗ ತ್ರಿವಿಧಿ

ಡಾ. ಎಂ. ಎಸ್. ಲಠೆ

ಮಹಾಶಿವಶರಣೆ ಮಹಾದೇವಿಯಕ್ಕ ಬಾಳಿದುದು ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ; ಕರ್ನಾಟಕದ ಶಿವಶರಣರ ಕ್ರಾಂತಿಕಾಲದಲ್ಲಿ. ಸುಸಂಸ್ಕೃತ ತಾಯಿ ತಂದೆಗಳ ಸಂಸ್ಕಾರದ ಪ್ರಭಾವ ಮುದ್ರೆಯಿಂದಾಗಿ ಆಕೆ ಮಹಾಶಿವಶರಣೆಯಾದುದನ್ನು ಮರೆಯುವಂತಿಲ್ಲ, ಯೋಗ್ಯ ಗುರುವಿನ ಮಾರ್ಗದರ್ಶನದಲ್ಲಿ ಷಟ್‌ಸ್ಥಲ ಮಾರ್ಗದ ತಿಳುವಳಿಕೆಯಾದುದರಿಂದ ಆಕೆ 'ಶರಣ ಸತಿ; ಲಿಂಗ ಪತಿ ಭಾವ ತಾಳಿದ್ದು. ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೆ ಬೀಜ ಎಂದು ಸಾರಿ ಅಂತರಂಗ ಪರಿಶುದ್ಧಳಾಗಿ ದೇವನನ್ನೇ ಪತಿಯನ್ನಾಗಿ ವರಿಸಿದ್ದು. ದೇವರೆ ಪತಿ–ಎಂದು ನುಡಿಯುವುದು ಸುಲಭದ ಮಾತು, ನಡೆಯುವುದು ಕಠಿಣ. ಅಂಥ ಪ್ರಸಂಗ ಬಂದಾಗ ಧೈರ್ಯದಿಂದ ಆತ್ಮಬಲದ ಪ್ರಭೆಯನ್ನು ಲೋಕಕ್ಕೆ ಬೆಳಗಿ ತೋರಿಸಿದಳು.

ಮಹಾದೇವಿಯಕ್ಕನ ಜೀವನ ಸಾತ್ವಿಕ ವೃತ್ತಿಯ ತಾತ್ವಿಕ ಜೀವನ. ಪ್ರಣಯ ಪ್ರೇಮವನ್ನು ಅಲ್ಲಗಳೆದು ಭಕ್ತಿಮಾರ್ಗವಿಡಿದ ವೈರಾಗ್ಯ ಜೀವನ. ಶಾಶ್ವತ ಸುಖದ ಸುಂದರವು, ಪರಿಶುದ್ಧವು, ಪವಿತ್ರವು ಆದ ಅವಳ ಜೀವನ ಲಿಂಗಾಂಗ ಸಾಮರಸ್ಯದ ಜೀವನ, ಅವಳ ಅನುಭಾವ ಸಾಹಿತ್ಯ ತತ್ವಗರ್ಭಿತ ಸಾಹಿತ್ಯ.

ಮಹಾದೇವಿಯಕ್ಕ ಸೃಷ್ಟಿಸಿದ ಸಾಹಿತ್ಯ ಇಂದು ಸಂಶೋಧನೆಗೆ ನಿಲುಕಿದ್ದು ತೀರ ಅಲ್ಪ. ಸುಮಾರು ೩೫೨ ವಚನಗಳನ್ನು ಕ್ರಮಬದ್ಧರೀತಿಯಲ್ಲಿ ಆಯ್ಕೆಮಾಡಿ ಅವುಗಳ ಜೊತೆಗೆ ಸೃಷ್ಟಿಯ ವಚನ; **ಯೋಗಾಂಗ ತ್ರಿವಿಧಿ** ಹಾಗೂ ಹದಿನೇಳು ತಾತ್ವಿಕ ಪದಗಳನ್ನು ಸಂಗ್ರಹಿಸಿ ಇತ್ತೀಚೆಗೆ ಪ್ರಕಟಪಡಿಸಿದವರು ಡಾ. ಆರ್. ಸಿ. ಹಿರೇಮಠ ಅವರು.

ಮಹಾದೇವಿಯಕ್ಕನು ಬರೆದಿರುವ 'ಯೋಗಾಂಗ ತ್ರಿವಿಧಿ' ಎಂಬುದು ಅರುವತ್ತೇಳು ಪದ್ಯಗಳಿಂದ ಕೂಡಿದ ಚಿಕ್ಕ ಕಾವ್ಯಕೃತಿ. ಮೊದ ಮೊದಲು ಅಂಶಗಣಗಳಿಂದ

೧. ಶಿವಶರಣೆಯರ ವಚನಗಳು: ಭಾ. ೧. ೧೯೬೮- ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

ಕೂಡಿ ಮಾತ್ರಾಗಣಕ್ಕೆ ತಿರುಗಿರುವ ತ್ರಿಪದಿಯಲ್ಲಿ ಇದು ರಚಿತವಾದುದು, 'ತ್ರಿವಿಧಿ' ಯನ್ನುವ ಶಬ್ದಕ್ಕೆ ' ತಿವದಿ ' ಎಂದು ' ತ್ರಿಪದಿ ' ಎಂದೂ ಹೆಸರು, ಛಂದೋಬದ್ಧ ರಚನೆಯ ತ್ರಿಪದಿಯೆ ಇಲ್ಲಿ 'ತ್ರಿವಿಧಿ' ಯೆನಿಸಿಕೊಂಡಿದೆ. ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳ ಮೇಲೆ ಇಷ್ಟಪ್ರಾಣ ಭಾವಲಿಂಗಗಳನ್ನು ಧರಿಸಿ ತ್ರಿವಿಧಪೂರ್ವಕವಾಗಿ ಅಂಗ ಗುಣಗಳನ್ನು ಅಳಿದು ಲಿಂಗಗುಣ ತಾಳುವುದೇ ಈ ತ್ರಿವಿಧಿ ಎನ್ನುವ ಶಬ್ದಕ್ಕಿರುವ ವಿಶೇಷವಾದ ಅರ್ಥ.

ಯೋಗ ಎಂಬ ಶಬ್ದವು 'ಯುಜ್' ಎಂಬ ಧಾತುವಿನಿಂದ ಬಂದದ್ದು, ಕೂಡು, ಬೆರೆ, ಒಂದಾಗು ಎಂಬ ಅರ್ಥದಲ್ಲಿ .'ಯುಜಿರ್ ಯೋಗೆ' ಎರಡು ವಸ್ತುಗಳನ್ನು ಒಂದಾಗಿ ಸೇರಿಸುವುದು[೨] ಆಧ್ಯಾತ್ಮಿಕ ಅರ್ಥದಲ್ಲಿ ಜೀವಾತ್ಮ ಪರಮಾತ್ಮರ ಸಂಯೋಗ ವನ್ನೇ ಯೋಗವೆಂದು ಹೇಳುತ್ತಾರೆ. ಯೋಗಶ್ಚಿತ್ತವೃತ್ತಿ ನಿರೋಧಃ[೩] ಎಂದು ಪಾತಂಜಲಿ ಋಷಿಗಳು ಯೋಗದ ವ್ಯಾಖ್ಯೆಯನ್ನು ನುಡಿಯುತ್ತ ಚಿತ್ತವೃತ್ತಿಯನ್ನು ನಿರೋಧಗೊಳಿಸಿ ಅವುಗಳನ್ನು ಅಂಕಿತದಲ್ಲಿಟ್ಟುಕೊಳ್ಳುವುದೆ ಯೋಗವೆಂದೂ ಅದರಿಂದ ಆತ್ಮತತ್ವದ ಜ್ಞಾನ ಲಭಿಸುತ್ತದೆಂದು ಹೇಳಿದ್ದಾರೆ. ಯೋಗಕ್ಕೆ ಪ್ರಧಾನವಾದ ಮತ್ತು ಸಾಮಾನ್ಯವಾದ ಅರ್ಥದಲ್ಲಿ ಧ್ಯಾನವೆಂದು ಹೇಳುವರು. ಆದರೆ ಗೌಣವಾದ ಹಾಗು ಪಾರಿಭಾಷಿಕ ಅರ್ಥದಲ್ಲಿ ಕೂಡುವುದು, ಬೆರೆಯುವುದು ಎಂದು ಅರ್ಥವಾಗುವುದು. ಶಿವಯೋಗವೆಂದರೆ ನಿರಾಕಾರನಾದ ಶಿವನನ್ನು ಲಿಂಗರೂಪದಲ್ಲಿ ಧ್ಯಾನಿಸುವುದು. ಈ ಲಿಂಗರೂಪಧ್ಯಾನದ ಅಂಗಗಳನ್ನು ಪ್ರತಿಪಾದಿಸುವ ತಾತ್ವಿಕ ವಿವೇಚನೆ ಈ ತ್ರಿವಿಧಿಯಲ್ಲಿ ಇರುವುದರಿಂದ ಇದು 'ಯೋಗಾಂಗ ತ್ರಿವಿಧಿ'ಯಾಗಿದೆ.

ಯೋಗದಲ್ಲಿ ಮುಖ್ಯವಾಗಿ ಎರಡು ಕವಲುಗಳು- ಲೌಕಿಕ ಮತ್ತು ಅಲೌಕಿಕ ಎಂದು. ಲೌಕಿಕ ಯೋಗದಲ್ಲಿ ಅನೇಕ ಪ್ರಕಾರಗಳಿದ್ದು ಅವೆಲ್ಲ ಸೇರಿ 'ವಸ್ತುಯೋಗ' 'ವ್ಯಕ್ತಿಯೋಗ' ಎಂದು ಎರಡು ಭಾಗಗಳು. ಒಂದಿಲ್ಲ ಒಂದು ದಿನ ಇವು ವಿಯೋಗ ವಾಗತಕ್ಕವುಗಳು. ಲೌಕಿಕ ಯೋಗದಿಂದ ಮನುಷ್ಯನಿಗೆ ಶಾಶ್ವತ ಸುಖ ಲಭಿಸ ಲಾರದು. ಅಲೌಕಿಕ ಯೋಗದಿಂದ ಮಾತ್ರ ಅದು ಸಾಧ್ಯ. ಅಲೌಕಿಕ ಯೋಗಗಳಲ್ಲೆಲ್ಲ ಶಿವಯೋಗವೆ ಶ್ರೇಷ್ಠವಾದುದು. ಕಣ್ಣು, ಮನಸ್ಸು. ಭಾವಗಳಿಂದ ಇಷ್ಟ, ಪ್ರಾಣ- ಭಾವಲಿಂಗಗಳನ್ನು ತನ್ನೊಳು ತಾನು ತಿಳಿಯುವುದೆ ಈ ಶಿವಯೋಗದ ಶಿವ ಜ್ಞಾನವಾಗಿದೆ.

> "ಬ್ರಹ್ಮರಂಧ್ರದಲ್ಲಿಪ್ಪ ನಾದಚೈತನ್ಯವಪ್ಪ ಪರಮಚಿತ್ಕಲೆಯನೇ
> ಭಾವಮನಕರದಲ್ಲಿ ಶ್ರೀಗುರು ತಂದು ಸಾಹಿತ್ಯವ ಮಾಡಿದನಾಗಿ
> ಭಾವದಲ್ಲಿ ಸತ್ತು ಸ್ವರೂಪವಪ್ಪ ಭಾವಲಿಂಗವೆನಿಸಿ
> ಪ್ರಾಣದಲ್ಲಿ ಚಿತ್‌ಸ್ವರೂಪವಪ್ಪ ಪ್ರಾಣಲಿಂಗವೆನಿಸಿ

೨. ಭಾರತೀಯ ಸಂಸ್ಕೃತಿಯ ದರ್ಶನ ಸಂ. ಅ. ನ. ಕೃ. ಪುಟ ೧೫೨.
೩. ಯೋಗಸೂತ್ರ ೧-೨.

ಕರಸ್ಥಲದಲ್ಲಿ ಆನಂದಸ್ವರೂಪವಪ್ಪ ಇಷ್ಟಲಿಂಗವೆನಿಸಿ
ಒಂದೇ ವಸ್ತು ತನು, ಮನ, ಭಾವಂಗಳಲ್ಲಿ
ಇಷ್ಟ, ಪ್ರಾಣ, ಭಾವವಾದ ಭೇದವನರಿದು
ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ
ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ
ಭಾವಲಿಂಗವ ಭಾವಜ್ಞಾನದಿಂದ ಗ್ರಹಿಸಿ
ಈ ಲಿಂಗತ್ರಯ ಪಿಡಿದಾಚರಿಸಿ ಲಿಂಗದೊಡನೆ ಗೂಡಿ
ಲಿಂಗವೆ ತಾನು ತಾನಾಗಿ ವಿರಾಜಿಸುತ್ತಿಪ್ಪುದೀಗ ಶಿವಯೋಗ
ನೋಡಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ"[೪]

ಎಂದು ತೋಂಟದ ಸಿದ್ಧಲಿಂಗ ಶಿವಯೋಗಿಗಳು ಈ ರೀತಿ ಇಷ್ಟಲಿಂಗಧಾರಿಯಾಗಿ ಕಾರ್ಮಿಕ, ಆಣವ, ಮಾಯಾ ಮಲಗಳನ್ನು ಕಳಚಿಕೊಂಡು ಲಿಂಗಾಂಗ ಸಮರಸ ಹೊಂದುವುದೆ ಈ ಶಿವಯೋಗದ ಮೂಲ ಉದ್ದೇಶವೆಂದು ಸಾರಿದ್ದಾರೆ.

"ಯೋಗದರ್ಶನದ ಪಿತರೆಂದು ಹೆಸರಾದ ಪತಂಜಲಿ ಮಹರ್ಷಿಗಳಿಂದಿತ್ತಿತ್ತಲಾಗಿ ಯೋಗಶಾಸ್ತ್ರವು ಬಲು ವಿಪುಲವಾಗಿ ಬೆಳೆದು ಅಣಿಮಾ, ಗರಿಮಾ, ಲಘಿಮಾ, ಮಹಿಮಾ ಮೊದಲಾದ ಅಷ್ಟಸಿದ್ಧಿಗಳನ್ನು ಸಂಪಾದಿಸುವ ವಿದ್ಯೆಯೆಂದೂ. ಸಿದ್ಧಿಗಳನ್ನು ತಿರಸ್ಕರಿಸಿದರೆ ಈಶ್ವರಸಿದ್ಧಿಯ ಮಾರ್ಗವೆಂದೂ ಗಣಿಸಲ್ಪಡಹತ್ತಿತು. ಆದರ ಓಘವು ಇಷ್ಟಕ್ಕೆ ನಿಲ್ಲಲಿಲ್ಲ. ಅನುಭವದಿಂದ ಕಂಡುಹಿಡಿಯಲಸಾಧ್ಯವಾದ ಅನೇಕ ವಿಷಯಗಳು ಬರಬರುತ್ತ ಆದರಲ್ಲಿ ಸೇರಹತ್ತಿ ಯೋಗವೆಂದರೆ ಯಾರಿಗೂ ತಿಳಿಯದಂಥ ಮತ್ತು ತಿಳಿಹೇಳದಂಥ ಒಂದು ವಿದ್ಯೆಯಾಯಿತು"[೫] ಇದರಿಂದಾಗಿ ಕೆಲವರು ದುರ್ಮಾರ್ಗಕ್ಕಿಳಿದು ಸಮಾಜಕ್ಕೆ ನಿರುಪದ್ರವಿಗಳೋಪಾದಿಯಲ್ಲಿ ಇದ್ದರು. ಇದನ್ನು ಹೋಗಲಾಡಿಸಿ ಪ್ರಪಂಚದಲ್ಲಿದ್ದುಕೊಂಡೇ, ತನ್ನ ಕಾಯಕ ಧರ್ಮಕ್ಕಂಟಿಕೊಂಡೇ ಆತ್ಮಜ್ಞಾನಮಾಡಿಕೊಳ್ಳುವ ಯೋಗಾಯೋಗ ಈ ಶಿವಯೋಗದಿಂದ ಬಂದದ್ದು; ಷಟ್‌ಸ್ಥಲಜ್ಞಾನ ಚಕ್ರವರ್ತಿ ಚೆನ್ನಬಸವಣ್ಣನು ತನ್ನ ಮಂತ್ರಗೋಪ್ಯದಲ್ಲಿ ಗುರುವಾಕ್ಯ ಹಿಡಿದು ಹಂತಹಂತವಾಗಿ ಷಟ್‌ಸ್ಥಲಗಳನ್ನು ಏರಿ ಶಿವಸಾಮರಸ್ಯ ಹೊಂದುವುದೇ ಮೇಲಾದ ಯೋಗವೆಂದು ಹೇಳಿದ್ದಾನೆ.

"ಯೋಗಯೋಗವೆಂದು ಏಕೆ ಬಳಲುವೆ ಯೋಗಿ
ಸಾಕು ಗುರು ಹೇಳಿದಂತಿಹುದು ಯೋಗ
ಏಕಾಗ್ರದಲಿ ನೋಡಿ ಗುರುವಾಕ್ಯದಿವಿಡಿದು ನಿಲೆ ನಿ
ನ್ನಾಕಾರ ನಿರಾಕಾರ ತಾನು ತಾನೆ"[೬]

೪. ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನಗಳು—ಸಂ. ಡಾ. R. C. ಹಿರೇಮಠ. ಪು. ೨೨೪–೨೨೫.

೫. ವೀರಶೈವ ತತ್ತ್ವಪ್ರಕಾಶ. ಲೇ. S. C. ನಂದೀಮಠ ಪು. ೨೭೪.

೬. ಚೆನ್ನಬಸವಣ್ಣನವರ ವಚನಗಳು. ಸಂ. R. C. ಹಿರೇಮಠ. ಪು. ೬೯೮. ಪದ್ಯ ೭೩.

ಶಿವಯೋಗಿ ಸಿದ್ಧರಾಮನು ಕೂಡ ಅಲ್ಲಮಪ್ರಭುವಿನಿಂದ ಶಿವಜ್ಞಾನ ಪಡೆದುದರಿಂದ ಶಿವಯೋಗಿ ಎಂಬ ಹೆಸರು ಗಳಿಸಿಕೊಂಡಿದ್ದಾನೆ. ಇಷ್ಟಲಿಂಗ ಪೂಜೆಯನ್ನು ಎತ್ತಿಹಿಡಿದ್ದಾನೆ.

> " ಇಷ್ಟಲಿಂಗ ಪೂಜೆಯದು ಅಷ್ಟೈಶ್ವರ್ಯಪ್ರದವಾಯಿತು.
> ಪ್ರಾಣಲಿಂಗ ಪೂಜೆಯದು ಅಖಂಡ ಚಿದೈಶ್ವರ್ಯ ಪ್ರದವಾಯಿತ್ತು
> ಭಾವಲಿಂಗ ಪೂಜೆಯದು ನಿರ್ಭಾವ ನಿಜಾನಂದ ವಸ್ತು
> ಸ್ವರೂಪವಾಯಿತ್ತು ಕೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ "೭

ಇದೇ ಮಾರ್ಗದಲ್ಲಿ ಬೆಳೆದುಬಂದ ಮಹಾದೇವಿಯಕ್ಕ ತಾನೂ ಶಿವಯೋಗಿಣಿಯಾಗಿದ್ದಾಳೆ. ಅಂತೆಯೆ ಲಿಂಗಾಂಗ ಸಂಧಾನದ ಅವಳ ಅನುಭಾವ ಸಿದ್ಧಾಂತ ಈ ಯೋಗಾಂಗ ತ್ರಿವಿಧಿಯಲ್ಲಿ ಹೊರಚಲ್ಲಿದೆ. ಅಲ್ಲಮಪ್ರಭು, ಸಿದ್ಧರಾಮ, ಮಹಾದೇವಿಯಕ್ಕ, ತೋಂಟದ ಸಿದ್ಧಲಿಂಗಯತಿಗಳು ಮೊದಲಾದವರು ಶಿವಯೋಗ ಸಾಧನೆಯಲ್ಲಿ ಪರಮಸಿದ್ಧಿಯನ್ನು ಪಡೆದ ಸೀಮಾಪುರುಷರು. " ನಮ್ಮ ವೀರಶೈವ ಗುರುಗಳು ಯೋಗವಿದ್ಯೆಯಲ್ಲಿ ಒಳ್ಳೇ ನಿಪುಣರಾಗಿದ್ದರು. ಯೋಗದ ಗುಟ್ಟನ್ನು ಕಂಡುಹಿಡಿದು ಅದು ಸರ್ವರಿಗೂ ಸಾಧ್ಯವಾಗುವಂತೆ ತಮ್ಮ ಸ್ವಾನುಭವದಿಂದ ಅದರಲ್ಲಿ ತಿದ್ದುಪಡೆಯನ್ನು ಮಾಡಿ ಅದಕ್ಕೆ ಶಿವಯೋಗವೆಂದು ಹೆಸರಿಟ್ಟರು.೮

'ಯೋಗದ ಹೊಲಬ ನಾನೆತ್ತಬಲ್ಲೆನಯ್ಯಾ. ಯೋಗ ಶಿವಶಕ್ತಿ ಸಂಪುಟವಾಗಿಪ್ಪುದಲ್ಲದೆ, ಶಿವಶಕ್ತಿವಿಯೋಗವಪ್ಪ ಯೋಗವಿಲ್ಲವಯ್ಯಾ'೯ ಯೋಗಸಾಧನೆಗೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ ಧಾರಣ ಸಮಾಧಿ ಎಂದು ಎಂಟು ಅಂಗಗಳಿವೆ. ಅವೇ ಅಷ್ಟಾಂಗಗಳು. ಪ್ರಾಣಾಯಾಮದಿಂದ ಪ್ರಾಣಕ್ಕೆ ಆಗಾಗ ಅಪಾಯವೊದಗುವ ಭಯ. ಆದ್ದರಿಂದ ಯೋಗಗಳ ಈ ಕಾಠಣ್ಯವನ್ನು ಕ್ಲಿಷ್ಟತೆಯನ್ನು ಹೋಗಲಾಡಿಸಿ ಸುಲಭ ಸಾಧ್ಯವಾದ ಶಿವಯೋಗವನ್ನು ವೀರಶೈವರು ಕಂಡು ಹಿಡಿದರು. ಅಷ್ಟಾಂಗಯೋಗದೊಳಗಿನ ಮೊದಲಿನ ಐದಂಗಗಳನ್ನು ಬಿಟ್ಟು ಧ್ಯಾನ, ಧಾರಣ, ಸಮಾಧಿ. ಈ ಮೂರನ್ನೇ ಶಿವಯೋಗದಲ್ಲಿ ಇಟ್ಟುಕೊಳ್ಳಲಾಯಿತು. ಇಷ್ಟಲಿಂಗಧಾರಣ, ಪ್ರಾಣಲಿಂಗಧ್ಯಾನ ಭಾವಲಿಂಗಸಮಾಧಿ ಇವು ವೀರಶೈವರಲ್ಲಿ ಮುಖ್ಯವಾದವುಗಳು.೧೦ ಇದನ್ನು ಅಲ್ಲಗಳೆದು ಕಠಿಣತರ ತಪಸ್ಸಿನೊಂದಿಗೆ ನಿಜಮುಕ್ತಿ ಹೊಂದುವುದೆಂದರೆ ಅಪಕ್ವರಸಾಯನದ ಸೇವನೆಯಿಂದ ರೋಗಹೋಗುವ ಬದಲು ರೋಗಿಯೆ ಹೋಗುವಂತೆ. ಅದಕ್ಕಾಗಿ ಆ ಮಾರ್ಗಬಿಟ್ಟು ಸರಳವೂ ಸುಲಭವೂ ಆದ

---

೭. ಸಿದ್ಧರಾಮನ ವಚನಗಳು– ಸಂ. ಡಾ. R.C. ಹಿರೇಮಠ ಪು-೩೧೧. ವ. ೧೦೨೨

೮. ವೀರಶೈವ ತತ್ವ ಪ್ರಕಾಶ– ಲೇ. ಡಾ. S. C. ನಂದೀಮಠ. ಪು. ೨೭೮

೯. ಶೂನ್ಯಸಂಪಾದನೆ— ಪು. ೫೮. ವ–೬೫

೧೦. ತೋ. ಸಿ. ಶಿ. ವಚನಗಳು— ಸಂ. ಡಾ. R. C. ಹಿರೇಮಠ– ಪ್ರ. ಪು. ೧೯೭

ಇಷ್ಟಲಿಂಗದ ಮುಖಾಂತರ ದೃಷ್ಟಿಯೋಗಕ್ಕಿಳಿವ ಶಿವಯೋಗವನ್ನು ಅನುಸರಿಸುವುದು ಅತ್ಯಂತ ಶ್ರೇಷ್ಠವಾದುದು. ಇದನ್ನೇ ಮಹಾದೇವಿಯಕ್ಕ ತನ್ನ ಯೋಗಾಂಗ ತ್ರಿವಿಧ ಯಲ್ಲಿ ಹಾಡಿದ್ದಾಳೆ.

'ಜೀವ ಪರಮರ ಭೇದ ಭಾವವನಳಿವಡೆ
ಆವಾವ ಮುಖದೊಳಿರುತಿಹುದೂ। ಎನ್ನಯ
ಭಾವಕ್ಕೆ ಬಂದುದೊರೆವೆನು'೧೧

ವಿಷಯ ಪ್ರಾರಂಭಿಸುವ ಮೊದಲು ಶ್ರೀ ಗುರುವಿಗೆ ನಮಸ್ಕರಿಸಿ ತನ್ನ ದೇವ ಚೆನ್ನಮಲ್ಲಿಕಾರ್ಜುನನನ್ನು ಮನಂಬುಗುವಂತೆ ಕೊಂಡಾಡುತ್ತಾಳೆ.

ಎಲ್ಲ ದೇವರ ದೇವ ವಲ್ಲಭನೆ ಗುರುಚೆನ್ನ
ಮಲ್ಲಿಕಾರ್ಜುನನೆ ನೀಯೆನ್ನ ಮನದೊಳಗೆ। ಇರು ಕಂಡಾ
ಬಲ್ಲಂತೆ ನಿಮ್ಮ ಸ್ತುತಿಸುವೆನು೧೨

ಶಿವನು ಸರ್ವವ್ಯಾಪಿ. ಎತ್ತೆತ್ತ ನೋಡಿದೊಡತತ್ತ ಅವನ ಪ್ರಭೆ. ಸರ್ವಾಂತ ರ್ಯಾಮಿಯಾಗಿರುವ ಆ ಶಿವನ ಕುರುಹಾದ ಇಷ್ಟಲಿಂಗದ ಘನಪ್ರಭೆಯ ಕಾಂತಿ ಹೃದಯ ಮಂದಿರವನ್ನೆಲ್ಲ ಬೆಳಗಿದಾಗ ಅದ ಕಂಡು ಏಕಾಂಗಿಯಾದವನೇ ಯೋಗಿ. (ಮುಕ್ತ) ಎಂದು ಮಹಾದೇವಿಯಕ್ಕ ಹಾಡಿದ್ದಾಳೆ.

ಆಕಾಶದೊಳಗಣ ಜ್ಯೋತಿಯ ಪ್ರಭೆ ಬಂದು
ಲೋಕಂಗಳೊಳಗೆ ಮುಸುಕಲು। ಅದಟೊಳಗೆ
ಏಕಾಂಗಿಯಾದಡಪಯೋಗಿ.೧೩

ಶಿವಯೋಗಕ್ಕೆ ಮೂಲಾಧಾರ – ಇಷ್ಟಲಿಂಗ. ಆ ಇಷ್ಟಲಿಂಗದ ಮುಖಾಂತರ ಶಿವ ಯೋಗದ ಮಾರ್ಗದಲ್ಲಿ ಮುನ್ನಡೆದ ಮಹಾದೇವಿಯಕ್ಕ ದೃಷ್ಟಿಯೋಗಕ್ಕಿಳಿಯುತ್ತಾಳೆ,

ಅಷ್ಟದಳ ಕಮಲದ ಬಟ್ಟಬಯಲೊಳ್‌ಗೊಂದು
ಮುಟ್ಟಬಾರದ ಘನವಿಹುದು। ಅದಟೊಳಗೆ
ದೃಷ್ಟಿಯಿಟ್ಟವನೆ ನಿಜಮುಕ್ತ.೧೪

ಮುಂದುವರಿದ ಆಕೆ ಇಂದ್ರಿಯಗಳ ವಿಷಯ ವಾಸನೆಗಳನ್ನು ಮುರಿದಿಕ್ಕಿ ಶಿವನ ಗೂಡಿ ನೊಳಗಾಡುತ್ತಾಳೆ.೧೫ ಜ್ಞಾನೇಂದ್ರಿಯಗಳ ಶಿರಗಳನ್ನು ಕತ್ತರಿಸಿ ಚಿಚ್ಛಕ್ತಿಯ ಕರವ ಪಿಡಿದು ಈಡಾ ಪಿಂಗಳಾ ನಾಡಿಗಳ ಮಧ್ಯದ ಸುಷುಮ್ನಾ ನಾಡಿಯನ್ನು ಊರ್ಧ್ವ

| | | | | | | |
|---|---|---|---|---|---|---|
| ೧೧ | ಶಿವಶರಣೆಯರ ವಚನಗಳು | ಭಾ. ೧– | ಪದ್ಯ | –೩. | (ಕ. ವಿ. ಧಾ) |
| ೧೨ | ” | ” | ” | ” | –೫ | ” |
| ೧೩ | ” | ” | ” | ” | ೮ | ” |
| ೧೪ | ” | ” | ” | ” | ೧೦ | ” |
| ೧೫ | ” | ” | ” | ” | ೧೧ | ” |

ಮುಖವಾಗಿ ತಿರುಗಿಸುತ್ತಾಳೆ. ಆಗ ಅದ್ಭುತ ಪ್ರಭೆ ಬಂದು ಅವಳ ಮನವನ್ನು ಬೆಳಗುತ್ತದೆ. ತನುಮನಗಳನ್ನು ಶಿವನಿಗೆ ಅರ್ಪಿಸಿ ಇಂದ್ರಿಯ ಕಾರ್ಯಗಳನ್ನೆಲ್ಲ ಲಿಂಗ ಮುಖೇನ ನಡೆಸುತ್ತ ವೈರಾಗ್ಯದ ತುತ್ತತುದಿಯಲ್ಲಿ ಮಹಾದೇವಿಯಕ್ಕ ನಿಂತ ನಿಲವು ಅವಳ ವೈರಾಗ್ಯದ ವ್ಯಕ್ತಿತ್ವಕ್ಕೆ ಕಳೆತಂದುಕೊಟ್ಟಿದೆ.

ಉಟ್ಟ ಸೀರೆಯ ಸೀಳಿ ತೊಟ್ಟ ತೊಡುಗೆಯ ಮುರಿದು
ಬಿಟ್ಟೇನು ಬಿಡುಮುಡಿಯ ಎಲೆದೇವ
ಕೊಟ್ಟೆನು ಎನ್ನ ತನುಮನವ॥೧೬
ಕೋಟಿ ರವಿಶಶಿಗಳಿಗೆ ಮೀಟದ ಪ್ರಭೆಬಂದು
ನಾಟಿತ್ತು ಎನ್ನ ಕರದೊಳಗೆ ಅದರಿಂದ
ದಾಟಿದೆನು ಭವದ ಕುಳಗಳ॥೧೭

ಅಂಥ ಅದ್ಭುತ ಪ್ರಭೆಯ ದರ್ಶನದಿಂದ ಮಹಾದೇವಿಯಕ್ಕನಿಗೀಗ ಬ್ರಹ್ಮರಂಧ್ರದಿಂದ ಸುರಿಯುವ ಅಮೃತವನ್ನು ಸವಿದಷ್ಟು ಆನಂದ. ಅಂತೆಯೆ ಅವಳೀಗ ಜನನ ಮರಣ ಗಳ ಬಾಧೆಯಿಂದ ಮುಕ್ತಳಾಗಿದ್ದಾಳೆ.

ಮೊರೆವ ನಾದ ಕೇಳಿ ಉರಿವ ಜ್ಯೋತಿಯ ನೋಡಿ
ಸುರಿವ ಅಮೃತವ ದಣಿದುಂಡ ಕಾರಣವು
ತೊರೆದೆನು ಜನನ ಮರಣಗಳ॥೧೮

ದೃಷ್ಟಿಯೋಗಕ್ಕಿಳಿದು ಅಷ್ಟಾವರಣದ ಹಣ್ಣನ್ನು ಸವಿಯದಲೆ ಬಹುಕಠಿಣತರವೂ ಅಪಾಯಕರವೂ ಆದ ಅಷ್ಟಾಂಗಯೋಗ ಮಾಡಿ ಬಳಲುವವರನ್ನು ಕಂಡು ಮಹಾದೇವಿ ಯಕ್ಕ ಮರಗುತ್ತಾಳೆ.

ಅಷ್ಟಾವರಣ ಹಣ್ಣು ಬಟ್ಟಬಯಲೊಳಗಿರಲು
ಅಷ್ಟಾಂಗಯೋಗಗಳ ಮಾಡಿ ಬಳಲುವರು
ದೃಷ್ಟಿಲಿಂಗವುದನು ಮರೆವರು॥೧೯

ಇಷ್ಟಲಿಂಗೋಪಾಸಕರಾಗಿ ದೃಷ್ಟಿಯೋಗಕ್ಕಿಳಿದು ಷಡ್‌ಲಿಂಗಗಳಿಗೆ ಷಡ್‌ಪದಾರ್ಥಗಳನ್ನು ಷಣ್ಮುಖಗಳಿಂದ ನೀಡಿ ಅಲ್ಲಿರುವ ಅಮೃತಫಲವನ್ನು ಸವಿದು ಸಂತೃಪ್ತಿ ಹೊಂದುವುದರಲ್ಲಿಯೆ ಜೀವನದ ಸಾರ್ಥಕತೆಯಿದೆಯೆಂದು ಮಹಾದೇವಿಯಕ್ಕ ಸಾರುತ್ತಾಳೆ. ಸಪ್ತಧಾತುಗಳು ಬತ್ತಿ ದಶೇಂದ್ರಿಯಗಳು ಸತ್ತು ಅಲ್ಲಿರುವ ಮುತ್ತು ಮಾಣಿಕವನ್ನು ಕಂಡು ಸತ್ತವನೂ ಎದ್ದು ಕುಣಿಯುತ್ತಾನೆ. ಎಂದು ಹೇಳುತ್ತಾಳೆ.[೨೦]

೧೬ ಶಿವಶರಣೆಯರ ವಚನಗಳು ಭಾ. ೧- ಪದ್ಯ -೪೦ (ಕ.ವಿ.ಧಾ)

| | | | | |
|---|---|---|---|---|
| ೧೭. ಶಿವಶರಣೆಯರ | ವಚನಗಳು | ಭಾ. ೧. | ಪದ್ಯ- | ೧೭ |
| ೧೮. ,, | ,, | ,, | ,, | ೯ |
| ೧೯. ,, | ,, | ,, | ,, | ೩೨ |
| ೨೦. ,, | ,, | ,, | ,, | ೩೪ |

ಆಧಾರ ಸ್ವಾಧಿಷ್ಠಾನ. ಮಣಿಪೂರಕ, ಅನಾಹತ ವಿಶುದ್ಧ, ಆಜ್ಞಾ, ಸ್ಥಾನಗಳಲ್ಲಿರುವ ಷಡ್‌ಲಿಂಗಗಳಾದ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದ ಲಿಂಗ, ಮಹಾಲಿಂಗಗಳಿಗೆ ಷಟ್‌ಪದಾರ್ಥಗಳಾದ ಗಂಧ, ರಸ, ರೂಪ, ಸ್ಪರ್ಶ, ಶಬ್ದ, ತೃಪ್ತಿಗಳನ್ನು ಸಲ್ಲಿಸಿದಾಗ ಅಂಗದ ಭ್ರಮೆ ಅಳಿದು ಲಿಂಗದಾಶ್ರಯದ ಸುಧೆಯನ್ನು ನಲಿದುಣ್ಣುವಂತಾಗುತ್ತದೆಂದೂ ವಿವರಿಸುತ್ತಾಳೆ.[೨೧] ಈ ಲಿಂಗಾಂಗ ಸಂಬಂಧ, ಜೀವ ಪರಮರ ಸಂಬಂಧ, ನಲ್ಲ ನಲ್ಲೆಯರ ಪ್ರೇಮದಷ್ಟು ಗಾಢವಾದದ್ದು. ಅಷ್ಟು ಸುಖ–ಕರವೂ ಆದದ್ದು.

ನಲ್ಲಳು ನಲ್ಲನ ಸುಖವ ಎಲ್ಲರಿಗೆ ಅರುಹುವಳೆ
ಬಲ್ಲಡೆ ಅದಟ ತೆರನಂತೆ। ಲಿಂಗಸುಖ
ಬಲ್ಲವರು ಪರರಿಗುಸುರುವರೆ[೨೨]

ಅವರಿರ್ವರ ಈ ಬೆಸುಗೆ-ಚಿನ್ನ–ಬಣ್ಣಗಳಂತೆ, ರತ್ನದೀಪ್ತಿಗಳಂತೆ, ಇಷ್ಟಲಿಂಗೋಪಾಸಕ ರಾದ ಭಕ್ತರು ಷಟ್‌ಸ್ಥಲಮಾರ್ಗವಿಡಿದು ಯೋಗಾಂಗದ ಸಾಧನೆಗಿಳಿದಾಗ ಲಿಂಗದಲ್ಲಿ ಭಿನ್ನವಿಲ್ಲದ ಬೆರಕೆ ಅವರದು[೨೩] ಅದು ಪರರಿಗೆ ಹೇಳಲು ಬಾರದಂತಹದು. ಅನು ಭವಿಸಿಯೇ ಆನಂದಪಡುವಂಥದ್ದು.

ಬಲ್ಲವರೆ ಬಲ್ಲರು ಎಲ್ಲರಿಗೆ ತಿಳಿಯದು
ಕಿಲ್ಬೊಳಗೆ ಅನಲ ಇರುವಂತೆ ಇದಟನುವ
ಬಲ್ಲವರಿಗರ್ಥ ತಿಳಿವುದು.[೨೪]

ಹೀಗೆ ಮಹಾದೇವಿಯಕ್ಕ ತಾನು ಕಂಡುಂಡ ಅಧ್ಯಾತ್ಮವಿದ್ಯೆಯನ್ನು ಲಿಂಗಾಂಗ ಸಾಮರಸ್ಯದ ಜೇಂಗೊಡವನ್ನು, ಈ ಯೋಗಾಂಗ ತ್ರಿವಿಧಿಯಲ್ಲಿ ಸಂಕ್ಷಿಪ್ತರೀತಿಯಲ್ಲಿ ಓದುಗರಿಗೆ ಉಣಬಡಿಸಿದ್ದಾಳೆ. ವೀರಶೈವನ ಧರ್ಮದ ಷಟ್‌ಸ್ಥಲ ಶಾಸ್ತ್ರದ ಸೂಕ್ಷ್ಮ ನಿರೂಪಣೆ ಇಲ್ಲಿದೆ, ಉತ್ತಮ ಕಾವ್ಯಕ್ಕೆ ಬೇಕಾದ ರಸಾನಂದ, ಅಲಂಕಾರಗಳು, ಓಜಸ್ಸು ಮಾಧುರ್ಯಗಳು ಛಂದೋಬದ್ಧ ತ್ರಿಪದಿಗಳಲ್ಲಿ ಅಚ್ಚೊತ್ತಿ ಮೂಡಿವೆ. ಅಷ್ಟಾಂಗ ಯೋಗದ ಅನೇಕ ಪಾರಿಭಾಷಿಕ ಶಬ್ದಗಳ ಬಳಕೆ ಹಾಗೂ ಯೋಗದ ಉನ್ನತಮಟ್ಟದ ಶಾಸ್ತ್ರ ಇಲ್ಲಿರುವುದರಿಂದ ಓದುವಾಗ ಒಮ್ಮೆಲೇ ಅರ್ಥವಾಗುವದಿಲ್ಲ. ಅಲ್ಲಿರುವ ಸಂಕೇತ ಪ್ರತಿಮೆ, ಪಾರಿಭಾಷಿಕ ಶಬ್ದಗಳ ಅರ್ಥವಾದಾಗ ಮಾತ್ರ ಆ ಎತ್ತರದ ವಿಚಾರಕ್ಕೆ ತಲೆ ದೂಗಬೇಕಾಗುತ್ತದೆ.

" ಯೋಗಾಂಗ ತ್ರಿವಿಧಿ ಚಿಕ್ಕದಾದರೂ ಅಕ್ಕನ ಅನುಭಾವ ಸಂಪತ್ತಿಯನ್ನು ಸಹಜ ಸಾಹಿತ್ಯ ರೂಪಕ್ಕೆ ತಂದ ಚೆಲುವಾದ ಕೃತಿ. ಅವಳ ತತ್ವ ಸಂಗ್ರಹ ಶಕ್ತಿ, ಗುರು

---

| | | | | |
|---|---|---|---|---|
| ೨೧. | ಶಿವಶರಣೆಯರ | ವಚನಗಳು- | ಭಾ. ೧ | ವದ್ಯ ೪೧–೫೦ |
| ೨೨. ೧ | ,, | ,, | ,, | ೬೦ |
| ೨೩. ೨ | ,, | ,, | ,, | ,, ೬೧ |
| ೨೪. ೩ | ,, | ,, | ,, | ,, ೬೫ |

ಭಕ್ತಿ ಇಲ್ಲಿ ಎದ್ದು ಕಾಣುತ್ತದೆ. ತ್ರಿಪದಿಯ ಛಂದಸ್ಸು ಸಲೀಲವಾಗಿ ಅವಳ ನಾಲಿಗೆಯ ಮೇಲೆ ಲಾಸ್ಯವಾಡಿದೆ. ಅಂಶಗಣದ ಲಕ್ಷಣವುಳ್ಳದಾದರೂ ಮಾತ್ರಾಗಣದತ್ತ ತಿರುಗಿ ಅದು[೨೫] ಸಾಕಷ್ಟು ಮುಂಬಂದಿದೆ—ಎಂಬುದಕ್ಕೆ ಯೋಗಾಂಗ ತ್ರಿವಿಧಿಸಾಕ್ಷಿಯಾಗಿದೆ.

ಶಿವಯೋಗಿಣಿ ಮಹಾದೇವಿಯಕ್ಕನ ಅನುಭವದ ಆಳ, ಎತ್ತರದ ಬಿತ್ತರ ಈ ಯೋಗಾಂಗ ತ್ರಿವಿಧಿಯಲ್ಲಿ ಚಿತ್ರಿತವಾಗಿದೆ. ಶಿವಯೋಗದ ಸಾಧನೆಯ ಸಿದ್ಧಿಫಲ ಇದು. ಅವಳ ಆತ್ಮಗೀತೆಯೂ ಅಹುದು. ಗಾತ್ರ ಚಿಕ್ಕದಾದರೂ ಭಾವಾರ್ಥ ಹಿರಿದಾದುದು. ಮೃದು ಮಧುರ ಶಬ್ದಗಳಿಂದ, ಸುಲಭದ ಉಪಮೆಗಳಿಂದ, ಜಾನಪದ ಧಾಟಿಯಿಂದ ಕಾವ್ಯ ಹೃದಯಂಗಮವಾಗಿದೆ, ಲಿಂಗಾಂಗ ಸಾಮರಸ್ಯದ ಮಿಗಿಲಾದ ಜ್ಞಾನದಿಂದಾಗಿ ಮಹಾದೇವಿಯಕ್ಕ ಈ ತ್ರಿವಿಧಿಯಲ್ಲಿ ಅಷ್ಟಾಂಗಯೋಗಕ್ಕಿಂತಲೂ ಇಷ್ಟಲಿಂಗ ಯೋಗವು ಸ್ವಾರಸ್ಯವೂ ರಹಸ್ಯಪೂರ್ಣವೂ ಆಗಿದೆಯೆಂದು ಪ್ರತಿಪಾದಿಸಿದ್ದಾಳೆ. ಅವಳು ಶಿವಾದ್ವೈತ ಸಿದ್ಧಾಂತದ ಅನುಯಾಯಿ, ಅರಿತು, ಅಳವಡಿಸಿಕೊಂಡು, ಆಚರಣೆಯಲ್ಲಿ ತಂದವಳು, ತತ್ವ ಓದಬಹುದು, ಕೇಳಬಹುದು, ಹೇಳಲೂ ಬಹುದು, ಅದು ಸುಲಭ. ಆದರೆ ಅದನ್ನು ಆಚರಣೆಯಲ್ಲಿ ತರುವುದು ಮಾತ್ರ ಕಠಿಣತರ ಮಾರ್ಗ. ಅಂಥ ಮಾರ್ಗದಲ್ಲಿ ಧೀರಳಾಗಿ ಮುನ್ನಡೆದ ವೀರ ವಿರಾಗಿಣಿಯ ಷಟ್‌ಸ್ಥಲ ಶಾಸ್ತ್ರದ ನಿರೂಪಣೆ ಈ ತ್ರಿವಿಧಿಯಲ್ಲಿ ಅಡಕವಾಗಿದೆ.

ಲೌಕಿಕ ರೀತಿಯ ಯಾವೊಬ್ಬನ ಸತಿಯಾಗಿ ಆಕೆ ಬಾಳದಿದ್ದರೂ ಪಾರಮಾರ್ಥಿಕ ದೃಷ್ಟಿಯಲ್ಲಿ ಅವಳು ಸತಿ, ಚನ್ನಮಲ್ಲಿಕಾರ್ಜುನನೇ ಪತಿ; ಅಂತೆಯೆ ಆ ಚೆಲುವ ಚೆನ್ನ-ಮಲ್ಲಿಕಾರ್ಜುನನಿಗೆ ತನ್ನ ತನು, ಮನ, ಭಾವಗಳ ಸುಖೋಪಭೋಗಗಳನ್ನೆಲ್ಲ ಸಮರ್ಪಿಸಿ ಶಿವಾರ್ಪಣಭಾವ ಮೆರೆದಿದ್ದಾಳೆ. ಮಧುವಿನಂತಹ ಮಧುರ ಭಕ್ತಿಯ ಮಂಗಲ ಗೀತೆಗಳನ್ನು ಇಲ್ಲಿ ಹಾಡಿ ಚೈತ್ರ ಮಾಸದ ಕೋಗಿಲೆಯೆನಿಸಿದ್ದಾಳೆ. ಕನ್ನಡ ಸಾಹಿತ್ಯದ ಮೊದಲ ಕವಯಿತ್ರಿಯೆನಿಸಿದ ಕನ್ನಡದ ಕಳಕಂಠವದು.

ಮಾಘ ಮಾಸವು ಪೋಗಿ, ಮೇಗೆ ಬಂದಿತು ಚೈತ್ರ
ಬೇಗ ಮಾಮರವು ತಳರಿತು । ಅದ ಕಂಡು
ಕೂಗಿ ಕರೆಯಿತು ಕಳಕಂಠ

□

೨೫. ೪ ಕನ್ನಡ ಸಾಹಿತ್ಯ ಚರಿತ್ರೆ ರಂ. ಶ್ರೀ. ಮು., ಪು. ೧೬೩ (೧೯೫೩)
೨೬ ಯೋಗಾಂಗ ತ್ರಿವಿಧಿ ಸಂ. ಚಂದ್ರಶೇಖರ ದೇವರು ಪ. ೭.

# ಹದಿನೈದನೆಯ ಶತಮಾನದ ವಚನ ಸಾಹಿತ್ಯ

ತ. ಸು. ಶಾಮರಾಯ

ಹನ್ನೆರಡನೆಯ ಶತಮಾನದ ಕಲ್ಯಾಣ ನಗರಿಯನ್ನು ನೆನೆಯುತ್ತಲೆ ನಾವು 'ರೋಮಾಂಚ ಕಂಚುಕಿತ ಗಾತ್ರ'ರಾಗುತ್ತೇವೆ. ನಮ್ಮ ಬಗೆಗಣ್ಣು ಎಂಟು ನೂರು ವರ್ಷಗಳಷ್ಟು ಸುದೀರ್ಘವಾದ ಕಾಲವನ್ನು ಮನೋವೇಗದಿಂದ ಹಾದುಹೋಗಿ, ಅಲ್ಲಿನ ದಿವ್ಯದರ್ಶನದ ಸಂದರ್ಶನದಿಂದ ಧನ್ಯತೆಯನ್ನು ಪಡೆಯುತ್ತದೆ. ಅಗೋ! ವೈರಾಗ್ಯಮೂರ್ತಿಯಾದ ಆ ಜ್ಞಾನಜ್ಯೋತಿ ಅಲ್ಲಮಪ್ರಭು. ಎಲ್ಲವನ್ನೂ ನಿಷ್ಪಕ್ಷವಾಗಿ ನಿರ್ಣಯಿಸಬಲ್ಲ ಸಾಕ್ಷಿಭೂತ ಚೇತನನಾಗಿ. ಶೂನ್ಯಸಿಂಹಾಸನದಲ್ಲಿ ಮಂಡಿಸಿದ್ದಾನೆ, ಆತನ ಸಮ್ಮುಖದಲ್ಲಿ ತಮತಮಗುಚಿತವಾದ ಸ್ಥಾನದಲ್ಲಿ ಕುಳಿತಿರುವ ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ. ಮಡಿವಾಳಯ್ಯ; ಮರುಳುಶಂಕರ, ಮೋಳಿಗೆಯ್ಯ, ಆಯ್ದಕ್ಕಿ ಮಾರಯ್ಯ, ನುಲಿಯ ಚೆಂದಯ್ಯ; ಘಟ್ಟಿವಾಳಯ್ಯ, ಮಹದೇವಿಯಕ್ಕ, ಮುಕ್ತಾಯಕ್ಕ ಇತ್ಯಾದಿ ಶರಣತಿಂಥಿಣಿ ಅವರ ವಿಚಾರಮಂಥನದಲ್ಲಿ ಉದಿಸುತ್ತಿರುವ ನವನೀತವನ್ನು ಸವಿಯುತ್ತಾ ಅಸಂಖ್ಯಾತ ಶರಣರು ಜಯಘೋಷ ಮಾಡುತ್ತಿದ್ದಾರೆ, ಸಭೆ ಮುಗಿಯಿತು. ಪ್ರಭುದೇವ, ಬಸವಣ್ಣ, ಚೆನ್ನಬಸವಣ್ಣ, ವೈರಾಗ್ಯ. ಭಕ್ತಿ ಜ್ಞಾನಗಳ ಸಂಕೇತದಂತಿರುವ ಈ ತ್ರಿಮೂರ್ತಿಗಳು ಮಾತನಾಡುತ್ತ ಮುಂದೆ ಹೋಗುತ್ತಿದ್ದಾರೆ, ಧಾರ್ಮಿಕ ಜಗತ್ತಿನ ಕಾರ್ಯರಂಗದಲ್ಲಿ ಚಾಲಕಶಕ್ತಿಗಳಾಗಿ ಸಂಚರಿಸುತ್ತಿರುವ ಈ ಪ್ರಭಾವಲಯ ಪರಿವೇಷ್ಟಿತರನ್ನು ಹಿಂಬಾಲಿಸುತ್ತಿದೆ. ಶರಣ ಸಮೂಹ ಎಲ್ಲರೂ ಬಸವಣ್ಣನ ಮಹಮನೆಯ ದಾಸೋಹಕ್ಕೆ ಸಿದ್ಧರಾಗಿ ಹೊರಟಿದ್ದಾರೆ. ಆ ಮಹಮನೆಯಲ್ಲಿ ಇವರೆಲ್ಲರ ಆತಿಥ್ಯಕ್ಕಾಗಿ ಆದೇನು ಸಡಗರ, ಸಂಭ್ರಮ, ಉತ್ಸಾಹ !

'ಹಲವು ಚಿತ್ತಾರವನ್ನು ಮಸಿನುಂಗಿತು' ಎಂಬ ಗಾದೆಯಂತೆ, ಬಸವಣ್ಣನ ಜೀವಿತದ ಕಡೆಯಂ ಭಾಗದಲ್ಲಿ ಕಲ್ಯಾಣದಲ್ಲಾದ ರಾಜಕೀಯ ಕ್ರಾಂತಿ ಅಲ್ಲಿನ ವಚನಕಾರರನ್ನು ಶರಣರನ್ನು ದಿಕ್ಕುದಿಕ್ಕಿಗೆ ಚೆಲ್ಲಾಪಿಲ್ಲಿಯಾಗಿ ಚದುರಿಸಿತು. ನೂತನ ಧರ್ಮದ ಆಧ್ವರ್ಯ ಗಳಾಗಿದ್ದ ಮೂವರೂ ಮೂರು ಕಡೆಗೆ ಬಸವಣ್ಣನು ಸಂಗಮಕ್ಕೆ, ಪ್ರಭುದೇವ, ಶ್ರೀಶೈಲಕ್ಕೆ, ಚೆನ್ನಬಸವಣ್ಣನ ಉಳಿವಿಗೆ ಹೋಗಿ ಶಿವೈಕ್ಯರಾದರು. ಅವರ ಅನುಯಾಯಿ

ಗಳು ಧರ್ಮಕ್ಕೆ ಆಧಾರಗ್ರಂಥಗಳಂತಿದ್ದ ವಚನ ವಾಙ್ಮಯವನ್ನು ತಮ್ಮ ಜೊತೆ-ಯಲ್ಲಿಯೆ ಕೊಂಡೊಯ್ದಿರಬೇಕು. ತಮ್ಮ ಧರ್ಮಕ್ಕೆ ಬಂದ ಈ ವಿಪತ್ತನ್ನು ಪರಿಹರಿಸಿ ಮತ್ತೆ ವೀರಶೈವವನ್ನು ಮೇಲಕ್ಕೆತ್ತುವ ಪ್ರಯತ್ನಗಳು ಈ ಶರಣಸಮೂಹದಿಂದ ನಡೆದಿರಬೇಕೆಂದು ಊಹಿಸಲು ಸಾಕಷ್ಟು ಕಾರಣಗಳಿವೆ. ಹನ್ನೆರಡನೆಯ ಶತಮಾನದ ಕಡೆಯ ಭಾಗದಲ್ಲಿ ಆದಯ್ಯ ಮತ್ತು ಏಕಾಂತದ ರಾಮಯ್ಯ ಎಂಬ ಶರಣರು ಈ ದಿಕ್ಕಿನಲ್ಲಿ ಸಾಕಷ್ಟು ಸಾಹಸ ಮಾಡಿ, ಬಹುಮಟ್ಟಿಗೆ ತಮ್ಮ ಕಾರ್ಯದಲ್ಲಿ ಕೃತಕೃತ್ಯ-ರಾದರು. ಆದರೂ ವಾಚನವಾಙ್ಮಯದ ಬೆಳವಣಿಗೆ ಅಲ್ಲಿಗೆ ನಿಂತುಹೋಯಿತೆಂದೇ ಹೇಳಬಹುದು ಹದಿಮೂರನೆಯ ಶತಮಾನದ ಪೂರ್ವಾರ್ಧದಲ್ಲಿ ಹೊಯ್ಸಳರಾಜರ ಮಂತ್ರಿಯಾಗಿದ್ದ ಕೆರೆಯ ಪದ್ಮರಸನು ವೀರಶೈವಧರ್ಮದ ಏಳಿಗೆಗೆ ಸಹಾಯಕನಾದನು. ಆ ಕಾಲದಲ್ಲಿ ಹರಿಹರಕವಿಯು ಕಾವ್ಯಸೃಷ್ಟಿಗೆ ಕೈಯಿಟ್ಟು ಸಾಹಿತ್ಯ ಜಗತ್ತಿನಲ್ಲಿ ಅದ್ಭುತ-ವಾದ ಕ್ರಾಂತಿಯನ್ನು ನಡೆಸಿ, ಕನ್ನಡ ಸಾಹಿತ್ಯದ 'ಸ್ವತಂತ್ರಯುಗ ಪ್ರವರ್ತಕ'ನೆಂಬ ಕೀರ್ತಿಗೆ ಪಾತ್ರನಾದುದಲ್ಲದೆ, ವೀರಶೈವಧರ್ಮದ ಪ್ರಚಾರ. ಪ್ರಸಾರಗಳಿಗೆ ಸಹಾಯಕ ನಾದನು. ಆದರೇನು? ಆತನು ವಚನಕಾರರನ್ನು ಕುರಿತು ಕಾವ್ಯರಚನೆ ಮಾಡಿದನೆ ಹೊರತು ವಚನಕಾರರ ವಚನಗಳನ್ನು ಕ್ವಚಿತ್ತಾಗಿ ಬಳಸಿಕೊಂಡು ಆ ವಚನಗಳು ಹುಟ್ಟಿರಬಹುದಾದ ಸನ್ನಿವೇಶದ ಮೇಲೆ ಸ್ವಲ್ಪಮಟ್ಟಿಗೆ ಬೆಳಕು ಚೆಲ್ಲಿದ್ದಾನೆ. ವಚನಗಳನ್ನೇನೂ ಬರೆಯಲಿಲ್ಲ.

ಹದಿಮೂರನೆಯ ಶತಮಾನದ ಕಡೆಯ ಭಾಗವು ದಕ್ಷಿಣ ಭಾರತದ ಇತಿಹಾಸದಲ್ಲಿ ಅತ್ಯಂತ ಭಯಂಕರವಾದ ಕಾಲ. ಭಯಂಕರವಾದ ಪೀಡೆಯೊಂದು ನಾಡನ್ನು ಹೊಕ್ಕಂತೆ ಅಲ್ಲಾವುದ್ದೀನ್ ಖಿಲ್ಜಿಯ ದಾಳಿ ನಡೆಯಿತು. ನೆತ್ತರು ಹೆಪ್ಪುಗಟ್ಟುವಂತಹ ಕ್ರೌರ್ಯಕ್ಕೆ ಒಳಗಾಗಿ ಇಲ್ಲಿನ ಹಿಂದೂ ರಾಜ್ಯಗಳೆಲ್ಲ ಮಣ್ಣುಗೂಡಿದವು. ರಕ್ತದ ಹೊಳೆ ಹರಿಯಿತು. ಧರ್ಮಗ್ರಂಥಗಳೆಲ್ಲ ಅಗ್ನಿಗೆ ಆಹುತಿಯಾದವು. ಈ ಹುಚ್ಚು ಹೊಳೆಗೆ ಸಿಕ್ಕಿ ವಚನ ಸಾಹಿತ್ಯದ ಬಹುಭಾಗವೂ ಕೊಚ್ಚಿಹೋಯಿತೆಂದೂ ತೋರುತ್ತದೆ. ಇದಾದ ಕೆಲವು ಕಾಲದ ಮೇಲೆ, ಹದಿನಾಲ್ಕನೆಯ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆ-ಯಾಗಿ, ದಕ್ಷಿಣ ಭಾರತದಲ್ಲಿ ಮತ್ತೆ ಶಾಂತಿ ನೆಲೆಸಿತು. ಈ ಸಾಮ್ರಾಜ್ಯ ರಮಾರಮಣರಲ್ಲಿ ಸುಪ್ರಸಿದ್ಧನಾದ ಪ್ರೌಢದೇವರಾಯನ ಕಾಲದಲ್ಲಿ,ಎಂದರೆ ಹದಿನೈದನೆಯ ಶತಮಾನದಲ್ಲಿ ವೀರಶೈವಧರ್ಮ ಮತ್ತೆ ತಲೆಯತ್ತಿತು. ರಾಜನ ದಂಡನಾಯಕನಾಗಿದ್ದ ಜಕ್ಕಣಾರ್ಯನೂ ನೂರೊಂದು ವಿರಕ್ತರೂ ವೀರಶೈವದ ಪ್ರಚಾರದಲ್ಲಿ ಪ್ರವೃತ್ತರಾಗಿ ವಚನವಾಙ್ಮಯದ ಪುನರುಜ್ಜೀವನ ಕಾರ್ಯದಲ್ಲಿ ಪ್ರಮುಖಪಾತ್ರವನ್ನು ವಹಿಸಿದರು.

ಧರ್ಮಪ್ರೇಮಿಯಾದ ದಂಡನಾಯಕ ಜಕ್ಕಣನಿಗೆ ಬಸವಾದಿ ಪ್ರಮಥರ ವಚನ ವಾಙ್ಮಯದಲ್ಲಿ ಅಪಾರವಾದ ಮಮತೆ: ಅದನ್ನು ಕೂಲಂಕಷವಾಗಿ ಓದಿ ಅರ್ಥ ಮಾಡಿ ಕೊಳ್ಳಬೇಕೆಂದು ಆತನ ಆಸೆ. ತನ್ನ ಈ ಬಯಕೆಯನ್ನು ಧರ್ಮ ಗುರುವಾದ ಬಂಕನಾಥ ನಲ್ಲಿ ಹೇಳಿಕೊಂಡನು. ಬಂಕನಾಥನು ಆತನನ್ನು ತನ್ನ ಗುರುವಾದ ಮಹಾಲಿಂಗ

ದೇವನ (೧೪೨೫) ಬಳಿಗೆ ಕರೆದೊಯ್ದನು. ಗುರು ಮಹಾಲಿಂಗದೇವನಿಗೆ ಹಿಂದಿನ ವಚನಗಳೆಲ್ಲ ಕರತಲಾಮಲಕ. ಆತನು ಜಕ್ಕಣನ ಉಪಯೋಗಕ್ಕಾಗಿ 'ಏಕೋತ್ತರ ಶತಸ್ಥಲ', 'ಪ್ರಭುದೇವರ ಷಟ್‌ಸ್ಥಲ ಜ್ಞಾನ ಚಾರಿತ್ರ ವಚನದ ಟೀಕು' ಎಂಬ ಎರಡು ವಚನ ಸಂಕಲನಗಳನ್ನು ಸಂಪಾದಿಸಿ, ನಿಂತು ಹೋಗಿದ್ದ ವಚನ ವಾಙ್ಮಯ ಚಕ್ರವನ್ನು ಮತ್ತೆ ಹರಿಯಬಿಟ್ಟನು. ಈತನ ಈ ಗ್ರಂಥಗಳೆರಡೂ ಪುರಾತನ ವಚನಗಳ ಸಂಗ್ರಹಗಳು ಮಾತ್ರ. ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವ ಮೊದಲಾದ ಶರಣರ ಸುಮಾರು ಒಂದುವರೆ ಸಾವಿರದಷ್ಟು ವಚನಗಳನ್ನು ಆಯ್ದುಕೊಂಡು, ಅವುಗಳನ್ನು ಅಂಗಸ್ಥಲ ೪೪, ಲಿಂಗಸ್ಥಲ ೫೭ ಒಟ್ಟು ನೂರಾ ಒಂದು ಸ್ಥಲಗಳ ಅನುಕ್ರಮದಲ್ಲಿ ವಿಭಾಗಿಸಿ ತನ್ನ 'ಏಕೋತ್ತರ ಶತಸ್ಥಲ'ವನ್ನು ರಚಿಸಿದ್ದಾನೆ. ಈತನ ಎರಡನೆಯ ಗ್ರಂಥದಲ್ಲಿ ಪ್ರಭುದೇವನ ವ್ಯಾಖ್ಯಾನಸಾಪೇಕ್ಷವಾದ ಬೆಡಗಿನ ವಚನಗಳಿಗೆ ಟೀಕೆಯನ್ನು ಬರೆದಿದ್ದಾನೆ. ಈ ಗ್ರಂಥದ ಕೊನೆಯಲ್ಲಿ "ಇದನು ಎನ್ನಲ್ಲಿ ತೋರಿದ ಅಲ್ಪಮತಿಯಿಂದ ನಾನು ಅನ್ವಯ ಮಾಡಿದೆನು" ಎಂಬ ಸಂಕಲನಕಾರನ ನಮ್ರತೆಯನ್ನು ಪ್ರದರ್ಶಿಸುವ ಹೇಳಿಕೆಯಿದೆ. ಆದರೆ ಗುರುಮಹಾಲಿಂಗನು ಬಹುದೊಡ್ಡ ಪಂಡಿತನೂ ಅನುಭಾವಿಯೂ ಆಗಿದ್ದನೆಂಬುದು ಆತನ ಟೀಕಯಿಂದ ವ್ಯಕ್ತವಾಗುತ್ತದೆ. ವಚನಗಳಿಗೆ ಟೀಕೆಯನ್ನು ಬರೆದು ಅವುಗಳನ್ನು ಅರ್ಥೈಸುವ ಸಂಪ್ರದಾಯವನ್ನು ಬಳಕೆಗೆ ತಂದ ಕೀರ್ತಿ ಈತನಿಗೆ ಸಲ್ಲುತ್ತದೆ. ಹಿಂದಿನ ವಚನ ವಾಙ್ಮಯವನ್ನು ಅಳಿಯದಂತೆ ಸಂರಕ್ಷಣೆ ಮಾಡಿ, ಅವುಗಳನ್ನು ಪ್ರಚಾರ ಮಾಡುವ ಸ್ತುತ್ಯ ಕಾರ್ಯವು ಈತನಿಂದ ಆರಂಭವಾದಂತಾಯಿತು. ಹಳೆಯ ಗುಡಿಯ ಜೀರ್ಣೋದ್ಧಾರ ಹೊಸ ದೇವಾಲಯದ ನಿರ್ಮಾಣದಷ್ಟೆ ಪುಣ್ಯಕರವಲ್ಲವೆ ?

ಮಹಾಲಿಂಗದೇವನ ಶಿಷ್ಯನಾದ ಕುಮಾರ ಬಂಕನಾಥ (ಕ್ರಿ. ಶ. ೧೪೭೦) ಮತ್ತು ಜಕ್ಕಣಾರ್ಯ (ಕ್ರಿ.ಶ. ೧೪೩೦) ಈ ಇರ್ವರೂ ವಚನ ವಾಙ್ಮಯ ಜಗತ್ತಿನಲ್ಲಿ ಸುಪ್ರಸಿದ್ಧರಾದವರೇ. ಗುರುಕರುಣೆಯಿಂದ ಪ್ರಾಚೀನ ವಚನ ವಾಙ್ಮಯದಲ್ಲಿ ಆಳವಾದ ಜ್ಞಾನವನ್ನು ಪಡೆದು, ಅದು ಸಾರ್ಥಕವಾಗುವಂತೆ ತಮ್ಮ ಗುರು ಕೈಕೊಂಡಿದ್ದ ವಚನ ಸಂಗ್ರಹ ಸಂಪಾದನೆ ಮತ್ತು ಟೀಕಾರಚನೆಯ ಕಾರ್ಯವನ್ನು ಮುಂದುವರಿಸಿದರು: ಕುಮಾರ ಬಂಕನಾಥನು 'ಷಟ್‌ಸ್ಥಲೋಪದೇಶ', 'ಪ್ರಭುದೇವನ ಟೀಕಿನ ವಚನ'ಗಳನ್ನು ರಚಿಸಿದನು. ಈತನ ಶಿಷ್ಯನಾದ ಜಕ್ಕಣಾರ್ಯನು ರಾಜಾಸ್ಥಾನದಲ್ಲಿ ಉನ್ನತಾಧಿಕಾರಿಯಾಗಿದ್ದಂತೆ ಭಕ್ತರ ಮಧ್ಯದಲ್ಲಿ ಭಕ್ತಿ ಭಂಡಾರಿಯೂ ಆಗಿದ್ದನು. ವೀರಶೈವ ಗ್ರಂಥಗಳ ರಚನೆಗಾಗಿ ಈತನು ಕೊಡುಗೈಯಿಂದ ಹಣವನ್ನು ನೀಡಿದುದಲ್ಲದೆ. ಸ್ವತಃ ಗ್ರಂಥ ರಚನೆಗೆ ಕೈ ಹಾಕಿ 'ಏಕೋತ್ತರ ಶತಸ್ಥಲ'ವನ್ನು ಬರೆದಿದ್ದಾನೆ. ಈ ಗ್ರಂಥ ರಚನೆಯನ್ನು ಕುರಿತು 'ಭೈರವೇಶ್ವರ ಕಥಾ ಸೂತ್ರ ರತ್ನಾಕರ'ದಲ್ಲಿ ಪುಟ್ಟದೊಂದು ಕಥೆ ಕಂಡು ಬರುತ್ತದೆ. ಪ್ರೌಢರಾಯನ ಆಸ್ಥಾನ ಕವಿಯಾದ ಮುಕುಂದಪೆದ್ದಿಯೆಂಬ ವೈಷ್ಣವನು ಭಾರತ ರಾಮಾಯಣಗಳ ಪ್ರವಚನವನ್ನು ಒಂಬತ್ತು ತಿಂಗಳ ಕಾಲ ನಡೆಸಿ, ಅಂತ್ಯದಲ್ಲಿ ಅವುಗಳನ್ನು ಆನೆಯ ಮೇಲೆ ಅಂಬಾರಿಯಲ್ಲಿಟ್ಟು ಮೆರವಣಿಗೆಯನ್ನು ಮಾಡಿಸಿದನಂತೆ!

ಇದನ್ನು ಕಂಡ ಜಕ್ಕಣಾರ್ಯನು ತನ್ನ ಗುರುವಾದ ಬಂಕನಾಥನ ನಿರೂಪದಂತೆ ತನ್ನ 'ಏಕೋತ್ತರ ಶತಸ್ಥಲ'ವನ್ನು ಬರೆದು, ಕಲ್ಲುಮಠದ ಪ್ರಭುದೇವ, ಚಾಮರಸು ಕರಸ್ಥಲದ ನಾಗಿದೇವ, ವೀರಣ್ಣೊಡೆಯ ಮೊದಲಾದ ನೂರೊಂದು ವಿರಕ್ತರೊಡನೆ ಅದನ್ನು ಪುಷ್ಪಕದಲ್ಲಿಟ್ಟು ಸಂಭ್ರಮದಿಂದ ಮೆರವಣಿಗೆ ಮಾಡಿಸಿದನಂತೆ! 'ಏಕೋತ್ತರ ಶತಸ್ಥಲ'ವು ಬಸವಾದಿ ಪ್ರಮಥರ ಐನೂರೈವತ್ತು ವಚನಗಳನ್ನು ನೂರೊಂದು ಸ್ಥಲಗಳ ಅನುಕ್ರಮದಲ್ಲಿ ವಿಭಾಗಿಸಿದೆ.

ಜಕ್ಕಣಾರ್ಯರ ಸಮಕಾಲೀನನ ಕಲ್ಲಮಠದ ಪ್ರಭುದೇವ (ಕ್ರಿ. ಶ. ೧೪೩೦)ನ "ಲಿಂಗಲೀಲಾ ವಿಲಾಸ ಚಾರಿತ್ರ್ಯ," 'ಪ್ರಭುದೇವರ ಮಂತ್ರಗೋಪ್ಯದ ಟೀಕೆ' ಗಳನ್ನು ಬರೆದಿದ್ದಾನೆ. 'ಲಿಂಗಲೀಲಾ ವಿಲಾಸ ಚಾರಿತ್ರ್ಯ'ವು ಷಟ್‌ಸ್ಥಲಮಾರ್ಗವನ್ನು ನಿರೂಪಿಸ ಹೊರಟಿರುವ ವಚನಸಂಗ್ರಹ. ಅದರ ಆರಂಭದಲ್ಲಿ 'ಭಕ್ತಿಕಾಂಡವೆ ಷಟ್‌ಸ್ಥಲಮಾರ್ಗ ಈ ಮಾರ್ಗವೆ' 'ಲಿಂಗಲೀಲಾವಿಲಾಸ ಚಾರಿತ್ರ್ಯ'ಎಂಬ ಸೂಚನೆ ಇದೆ. ಇದರಲ್ಲಿ ಪ್ರಭು ದೇವ, ಬಸವಣ್ಣ, ಚೆನ್ನಬಸವಣ್ಣ. ಮಹಾದೇವಿಯಕ್ಕ ಮೊದಲಾದ ಶರಣರ ಏಳು ನೂರಾ ಇಪ್ಪತ್ತು ವಚನಗಳನ್ನು ಆಯ್ದುಕೊಂಡು, ಷೋಡಶಸ್ಥಲ ಪರಿಕ್ರಮದಿಂದ ಅವುಗಳನ್ನು ಸೇರಿಸಿ, ವ್ಯಾಖ್ಯಾನ ಮಾಡಲಾಗಿದೆ. ಸ್ಥಲಗಳ ಆದಿಯಲ್ಲಿ ಕೆಲವು ಸಂಸ್ಕೃತ ಶ್ಲೋಕಗಳೂ ಅವುಗಳ ಟೀಕೆಯೂ ಕಂಡುಬರುತ್ತದೆ. 'ಪ್ರಭುದೇವರ ಮಂತ್ರ ಗೋಪ್ಯದ ಟೀಕೆಯಲ್ಲಿ ಸೀಸ ಪದ್ಯದಂತಿರುವ ಇಪ್ಪತ್ತೇಳು ಪದ್ಯಗಳಿವೆ; ಈ ಪದಗಳ ಲ್ಲೊಂದೊಂದಕ್ಕೂ ವಿಸ್ತಾರವಾದ ಟೀಕೆ ಇದೆ. ಪ್ರಭುದೇವನ ಸಂಕೇತಾರ್ಥವನ್ನು ಒಳಗೊಂಡ ಬೆಡಗಿನ ವಚನಗಳಿಗೆ ಇಂತಹ ವಿವರಣೆ ಅತ್ಯಗತ್ಯ. ಮಂತ್ರಗೋಪ್ಯದ ಈ ಒಂದು ಪದ್ಯವನ್ನು ಓದುಗರ ಕುತೂಹಲಕ್ಕಾಗಿ ಇಲ್ಲಿ ಎತ್ತಿಕೊಟ್ಟಿದೆ.

ಎಂಟೆಸಳ ಕಮಲದಾ ನವಬ್ರಹ್ಮಪುರದೊಳಗೆ
ಎಂಟು ಬೀದಿಯೊಳೆಂಟು ಕರಿಗಳುಂಟು
ಎಂಟು ಕರಿಗಳ ಸುಟ್ಟು, ಕಂಟಕಂಗಳ ಗೆಲಿದು
ದಾಂಟಿದೆನು ಸಂಸಾರ ಸಾಗರವನು "

ಇಲ್ಲಿನ ಒಂದೊಂದು ಶಬ್ದಕ್ಕೂ ಟೀಕೆಯಲ್ಲಿ ವಿವರಣೆಯನ್ನು ಕೊಟ್ಟು ಅದರ ಕೆಳಗೆ ಒಟ್ಟು ತಾತ್ಪರ್ಯವನ್ನು ಕೊಡುತ್ತಾನೆ. 'ಜ್ಞಾನದಿಂದ ದೇಹವಾಸನೆಯುಳಿದು. ಆ ಶಿವ ಜ್ಞಾನದಿಂದವೆ ಭವವಿರಹಿತವಹುದಲ್ಲದೆ, ಮಿಕ್ಕಿನ ಅಷ್ಟಾಂಗಯೋಗಗಳ ತನುದಂಡನೆಯ ಕರ್ಮಗಳಿಂದ ದೇಹವಾಸನೆಯುಳಿಯದೆಂದು ಪ್ರಭುದೇವರು ಸಿದ್ಧರಾಮಯ್ಯ ದೇವರಿಗೆ ಉಪದೇಶಿಸಿದರೆಂಬುದೀ ವಚನಾರ್ಥ. ಕಲ್ಲಮಠದ ಪ್ರಭುದೇವನು ತನ್ನ ಈ ಗ್ರಂಥವು 'ಶಿವಜ್ಞಾನದರ್ಪಣವಾಗಿರ್ದುದು' ಎಂದು ಹೇಳಿಕೊಂಡಿದ್ದಾನೆ. ಆತನು ಬರೆದಿರುವ ಇಪ್ಪತ್ತೇಳು ಪದ್ಯಗಳು ಮಾತ್ರ ಈಗ ದೊರೆತಿವೆ. ಇಂತಹ ಪದ್ಯಗಳು ಇನ್ನೂ ಹಲ-ವಾರನ್ನು ಆತ ಬರೆದಿರಬಹುದೆನಿಸುತ್ತದೆ. ವಿದ್ವಾಂಸರು ಈ ನಿಟ್ಟಿನಲ್ಲಿ ದೃಷ್ಟಿಹಾಯಿಸ ಬೇಕೆಂಬುದು ನಮ್ಮ ನಮ್ರವಾದ ಸೂಚನೆ.

ತೋಂಟದ ಸಿದ್ಧಲಿಂಗಯತಿಯ ಶಿಷ್ಯನಾದ ಗುಬ್ಬಿಯ ಮಲ್ಲಣ್ಣ (ಕ್ರಿ. ಶ, ೧೪೭೫) ನು ತನ್ನ "ಗಣಭಾಷ್ಯಮಾಲೆ" ಅಥವಾ "ಗಣಭಾಷಿತ ರತ್ನಮಾಲೆ" ಯಲ್ಲಿ ಹಿಂದಿನ ಒಂಬೈನೂರು ಎಪ್ಪತ್ತುನಾಲ್ಕು ವಚನಗಳನ್ನು ಸಂಗ್ರಹಿಸಿದ್ದಾನೆ. ತನ್ನ ಈ ಗ್ರಂಥವನ್ನು ಆತ ವೀರಶೈವಪ್ರತಿಷ್ಠಾಪನಾಚಾರ್ಯ, ದಿವ್ಯವೇದಾಂತ ಶಿರೋಮಣಿ' ಇತ್ಯಾದಿ ಬಿರುದುಗಳಿಂದ ಸಂಭಾವಿಸಿದ್ದಾನೆ. "ಬಸವರಾಜರು ಚೆನ್ನಬಸವದೇವರು, ಪ್ರಭುದೇವರು ಮುಖ್ಯರಾದ ಅಸಂಖ್ಯಾತ ಮಹಾಗಣಂಗಳು ನೂರೊಂದರಲ್ಲಿ ನಡೆದು ನುಡಿದ ವಚನಗಳು ಸ್ಥಲಭಿನ್ನಮಾರ್ಗದೊಡೆ ಚಂದವಲ್ಲೆಂದು ಕಂಠಮಾಲೆಯ ಕೋದು ಹೆಣಿಗೆಯರಿದು ಸೇರಿಸಿದೆನು' ಎಂದು ಆತನು ತನ್ನ ಗ್ರಂಥದ ಸ್ವರೂಪವನ್ನು ದಿಗ್ದರ್ಶಿಸಿದ್ದಾನೆ. ಈತನು ವೇದಾಗಮ ಪುರಾಣಾದಿಗಳಿಂದ ಪ್ರಮಾಣಗಳನ್ನು ಕೊಟ್ಟು ಪುರಾತನರ ವಚನಗಳನ್ನು ವಿವರಿಸುತ್ತಾನೆ. ಪುರಾತನರ ವಚನಗಳಲ್ಲಿ ಅವರು ನಡೆದಂತೆ ನುಡಿದಿದ್ದಾರೆ. ಆದ್ದರಿಂದ, ಗುಬ್ಬಿಯ ಮಲ್ಲಣ್ಣನು ವೀರಶೈವರು ಆಚರಿಸಬೇಕಾದ ಆಚರಣೆಗಳನ್ನೂ ವೀರಶೈವ ಸಿದ್ಧಾಂತವನ್ನೂ ಏಕಕಾಲದಲ್ಲಿಯೆ ಕಾಣಿಸುವಂತಹ ವಚನಗಳನ್ನೇ ಆಯ್ದುಕೊಂಡಿದ್ದಾನೆ.

ವಚನಸಂಗ್ರಹ ಕಾರ್ಯದ ಅತ್ಯುತ್ತಮ ಮಾದರಿಯನ್ನು ನೋಡಬೇಕಾದರೆ "ಶೂನ್ಯಸಂಪಾದನೆ"ಗೆ ಹೋಗಬೇಕು. ಹದಿನೈದನೆ ಶತಮಾನದ ಆದಿಯಲ್ಲಿ ಶಿವಗಣ ಪ್ರಸಾದಿ ಮಹದೇವಯ್ಯನಿಂದ ಸಂಕಲಿತವಾದ ಅದೊಂದು ಅದ್ಭುತವಾದ ಗ್ರಂಥ. ಹನ್ನೆರಡನೆ ಶತಮಾನದ ಕಲ್ಯಾಣದಲ್ಲಿ ಶರಣರ ಗೋಷ್ಠಿ ನಡೆಯುತ್ತಿದ್ದ "ಅನುಭವ ಮಂಟಪ"ವನ್ನು ಮುನ್ನೂರು ವರ್ಷಗಳಷ್ಟು ದೂರದಲ್ಲಿ ನಿಂತು ಛಾಯಾಚಿತ್ರವೊಂದನ್ನು ತೆಗೆದುಕೊಳ್ಳುವ ಕಾರ್ಯ ಇಲ್ಲಿ ನಡೆದಿದೆ. ಶೂನ್ಯಸಿಂಹಾಸನದಲ್ಲಿ ಮಂಡಿಸಿರುವ ಆ ದೇವ ಮಾನವನಾದ ಅಲ್ಲಮಪ್ರಭು. ಆತನ ಸಮ್ಮುಖದಲ್ಲಿ ಮಂಡಿಸಿರುವ ಶರಣ ಸಮೂಹ, ಹನ್ನೆರಡನೆಯ ಶತಮಾನದ ಪ್ರಮುಖ ವಚನಕಾರರೆಲ್ಲರೂ ಅಲ್ಲಿ ಕಾಣಿಸಿಕೊಂಡಿದ್ದಾರೆ. ಅವರಲ್ಲಿ ಹಲವರು ನಡೆಸಿದ ಧಾರ್ಮಿಕ ಚರ್ಚೆಯ ಈ ಮಹಾಗ್ರಂಥ. ಹನ್ನೆರಡನೆ ಶತಮಾನದಲ್ಲಿದ್ದ ಹಲವು ಹಿರಿಯ ಚೇತನಗಳ ವಚನಗಳನ್ನು ಸಂಕಲಿಸಿ ಈ ಕೃತಿ ರಚನೆಯಾಗಿದೆ. "ಕಾಯಕ ನಿಂದಿತ್ತು, ಹೋಗಯ್ಯ ಎನ್ನಾಳ್ದನೆ.... ಬೇಗ ಹೋಗು ಮಾರಯ್ಯ." "ಲಿಂಗದಲ್ಲಿ ವಿರಹಕ್ಕೆ ತೆರಹಿಲ್ಲ, ಕೇಳಾ ಸಂಗನ ಬಸವಣ್ಣ," "ಬಸವಣ್ಣ ಗುರುವಾದ ಕಾರಣ ನಾನು ನಿಮಗೆ ಚಿಕ್ಕ ತಮ್ಮ ಕೇಳಾ ಪ್ರಭುವೆ" – ಇಂತಹ ನೂರಾರು ವಚನಗಳು ಶರಣರಲ್ಲಿ ಪರಸ್ಪರ ನಡೆದ ಸಂಭಾಷಣೆಗೆ ಸಾಕ್ಷಿಯಾಗಿವೆ. ಈ ಸಂಭಾಷಣೆಗಳು ಮೂಡಿಬಂದಿರಬಹುದಾದ ಸನ್ನಿವೇಶ ಸಂದರ್ಭಗಳನ್ನು ಊಹಿಸಿ –, ಶರಣರ ಜೀವನ ಚರಿತ್ರೆ, ಸಂಪ್ರದಾಯದ ಕಥೆಗಳಲ್ಲಿ ಆಯಾ ವಚನಗಳಿಗೆ ಸೂಕ್ತವಾದ ಸಂದರ್ಭಗಳನ್ನು ಆಯ್ದುಕೊಂಡು – ಆಯಾ ಶರಣರ ವಚನಗಳನ್ನು ಅವರ ಬಾಯಲ್ಲಿಯೇ ಇಟ್ಟು, ಕಟ್ಟಿ, ರೂಪಿಸಿರುವ ಸಂಕಲನ ಗ್ರಂಥ

ಇದು. ಶರಣನೊಬ್ಬನು ತನ್ನೊಂದು ವಚನದ ಮೂಲಕ ಸಂವಾದವನ್ನು ಪ್ರಾರಂಭಿ-ಸುತ್ತಾನೆ, ಮತ್ತೊಬ್ಬ ಶರಣ ತನ್ನ ವಚನವೊಂದರ ಮೂಲಕ ಆ ಸಂಭಾಷಣೆಯನ್ನು ಮುಂದುವರಿಸುತ್ತಾನೆ, ಅಥವಾ ಪ್ರಭುದೇವನೆ ಆ ಸಂವಾದಕ್ಕೆ ಉತ್ತರ ರೂಪವಾಗಿತನ್ನ ಒಂದು ವಚನವನ್ನು ಹೇಳಬಹುದು.ಸಂಕಲನಕಾರನು ಈ ಇಬ್ಬರ ವಚನಗಳಿಗೂ ತನ್ನೊಂದು ಮಾತಿನಿಂದ ಸಂಬಂಧ ಸೂತ್ರವನ್ನು ಕಲ್ಪಿಸುತ್ತಾನೆ, ಹೀಗೆ ಕುತೂಹಲಜನಕವಾದ ದೃಶ್ಯಾಂಶದಿಂದ ಕೂಡಿರುವುದರಿಂದ ಈ ಗ್ರಂಥವು ಅತ್ಯಂತ ಜನಪ್ರಿಯವಾದುದು ಸಹಜವಾಗಿಯೆ ಇದೆ. ಆದ್ದರಿಂದಲೆ ೧೫ ನೆಯ ಶತಮಾನದ ಆದಿಯಲ್ಲಿ ಉದಿಸಿದ ಈ ಗ್ರಂಥ, ಆ ಶತಮಾನದ ಕೊನೆಯೊಳಗಾಗಿ ನಾಲ್ಕು ಸಂಸ್ಕರಣಗಳನ್ನು ಪಡೆದಿದೆ.

'ಶೂನ್ಯ ಸಂಪಾದನೆ' ಎಂದರೆ ದೈವ ಸಾಕ್ಷಾತ್ಕಾರವನ್ನು ಪಡೆಯುವುದು ಎಂದರ್ಥ, ತನ್ನ ಮಾತು 'ಜ್ಯೋತಿರ್ಲಿಂಗ'ವಾಗಿದ್ದ ಪ್ರಭುದೇವನ ದಿವ್ಯವಾಣಿ ಅಜ್ಞಾನ ಅಲ್ಪಜ್ಞಾನಗಳ ಕತ್ತಲನ್ನು ಕಳೆದು, ಸುಜ್ಞಾನದ ಬೆಳಕನ್ನು ನೀಡಿ, ತನ್ನ ಪ್ರಭಾವಲಯದಲ್ಲಿ ಬಂದ ಶರಣರಿಗೆಲ್ಲ ಶೂನ್ಯ ಸಂಪಾದನೆಯ ಭಾಗ್ಯವನ್ನು ಕರುಣಿಸಿದುದು ಈ 'ಶೂನ್ಯ ಸಂಪಾದನೆ' ಯಲ್ಲಿ ಕಂಡುಬರುತ್ತದೆ. ಪಂಚತಂತ್ರವು ರಾಜಕುಮಾರರ ಪಠ್ಯಪುಸ್ತಕವಾಗಲು ಯೋಗ್ಯವಾಗಿರುವಂತೆ 'ಶೂನ್ಯ ಸಂಪಾದನೆ' ವೀರಶೈವ ಧರ್ಮಜಿಜ್ಞಾಸುಗಳ ಪಠ್ಯಪುಸ್ತಕವಾಗಲು ತಕ್ಕದಾಗಿದೆ. ವೀರಶೈವ ವಾರಿಧಿ-ಯಲ್ಲಿ ಧರ್ಮಯಾತ್ರಿಗಳಾದವರಿಗೆ ಇದೊಂದು ಬೆಳಗುಗಂಬ. ಈ ದಿವ್ಯಗ್ರಂಥವನ್ನು ಕುರಿತು ಶ್ರೀ ರಾನಡೆಯವರು ತಮ್ಮ **Path way to God in Kannada Literature** ಎಂಬ ಗ್ರಂಥದ ಪುಟ ೬–೭ ರಲ್ಲಿ ಮುಕ್ತ ಕಂಠದಿಂದ ಹೊಗಳುತ್ತಾ ಅಸದೃಶವಾದ ಈ ಗ್ರಂಥದ ಸಂಭಾಷಣೆಯು ಪ್ಲೇಟೋವಿನ ಸಂಭಾಷಣೆಗಳ ಮಾದರಿಯಲ್ಲಿಯೆ ಯೋಜಿಸಲಾಗಿದೆಯೆಂದೂ, ಅಲ್ಲಿನ ಸಾಕ್ರೆಟೀಸ್. ಪ್ಲೇಟೊ, ಫೇಡೊ ಇವರ ಸ್ಥಾನದಲ್ಲಿ ಇಲ್ಲಿ ಕ್ರಮವಾಗಿ ಪ್ರಭುದೇವ, ಬಸವೇಶ್ವರ, ಮತ್ತು ಚೆನ್ನಬಸವೇಶ್ವರರು ನಿಲ್ಲುತ್ತಾರೆಯೆಂದೂ ತಿಳಿಸುತ್ತಾರೆ. ಆಕಾಶದಲ್ಲಿ. ಭೂಮಿಯ ಮೇಲೆ ಅದ್ಭುತಗಳಿರುವಂತೆ ಸಾಹಿತ್ಯ ಕ್ಷೇತ್ರದಲ್ಲಿಯೂ ಅದ್ಭುತಗಳಿವೆ; 'ಶೂನ್ಯಸಂಪಾದನೆ' ಅಂತಹ ಅದ್ಭುತಗಳಲ್ಲೊಂದು–ಎಂಬ ಅವರ ಅಭಿಪ್ರಾಯವೂ ಸಾರ್ಥಕವಾದುದೇ ಸರಿ.

೧೫ ನೆ ಶತಮಾನದ ವಚನ ಸಂಕಲನಕಾರರ ಸಾಲಿನಲ್ಲಿ 'ಪದ್ಯೆಕೋತ್ತರ ಶತಸ್ಥಲ' ವನ್ನು ಬರೆದ ಬಸವೇಶ (ಕ್ರಿ.ಶ. ೧೬೦೦)ನ ಹೆಸರು ಕಡೆಯದಾದರೂ ಸ್ಮರಣಾರ್ಹ-ವಾದುದು. ಶರಣರ ವಚನಗಳನ್ನು ವಾರ್ಧಕಷಟ್ಪದಿಯಾಗಿ ರೂಪಾಂತರಗೊಳಿಸ ಹೊರಟಿರುವುದು ಈತನ ವೈಶಿಷ್ಟ್ಯ.

ಕಲ್ಯಾಣದ ಕ್ರಾಂತಿಯೊಡನೆ ನಿಂತು ಹೋಗಿದ್ದ ಸ್ವತಂತ್ರ ವಚನರಚನಾ ಕಾರ್ಯವು ಹದಿನೈದನೆಯ ಶತಮಾನದಲ್ಲಿ ಮತ್ತೆ ಅಂಕುರಿಸಿ ಚಿಗುರಿ ದಾಂಗುಡಿಯಿಟ್ಟು ಹಬ್ಬಿ ಹರಡಿತು. ಅಂತಹ ವಚನಕಾರರಲ್ಲಿ ತೋಂಟಸಿದ್ಧೇಶ್ವರ (ಕ್ರಿ. ಶ. ೧೪೭೦) ಅಗ್ರಗಣ್ಯ. ಈತನನ್ನು ನಿರಂಜನ ಗಣೇಶ್ವರನ ಅವತಾರವೆಂದು ಚೆನ್ನಬಸವೇಶ್ವರ

ಪುರಾಣವು ವರ್ಣಿಸುತ್ತದೆ. ಈತನು ಪರಮೇಶ್ವರನ ಅಪ್ಪಣೆಯಂತೆ ಷಟ್‌ಸ್ಥಲದ ಉದ್ಧಾರಕ್ಕಾಗಿ ಏಳು ನೂರು ಜನ ಶಿವಗಣದೊಡನೆ ಕೈಲಾಸದಿಂದ ಭೂಲೋಕಕ್ಕೆ ಅವತರಿಸಿದ ಹರಪನಹಳ್ಳಿಯ ಗೋಸಲ ಚನ್ನಬಸವೇಶ್ವರನ ಕರಸಂಜಾತನಾದ ಸಿದ್ಧೇಶ್ವರನು. ತನ್ನ ಗುರುವಿನಿಂದ ದೀಕ್ಷೆಯನ್ನು ಹೊಂದಿ. ದೇಶಸಂಚಾರ ಮಾಡುತ್ತ ಈಗಿನ ತುಮಕೂರು ಜಿಲ್ಲೆಯಲ್ಲಿರುವ ಕಗ್ಗೆರೆಯೆಂಬ ಹಳ್ಳಿಯ ಹತ್ತಿರವಿದ್ದ ಒಂದು ತೋಟದಲ್ಲಿ ಇಳಿದುಕೊಂಡನು. ನಂಬಿಯಣ್ಣನೆಂಬ ಶಿವಭಕ್ತನೊಬ್ಬನು ಈತನನ್ನು ಕಂಡು ತನ್ನ ಮನೆಗೆ ಭಿಕ್ಷಕ್ಕೆಂದು ಆಹ್ವಾನಿಸಿದನು. ಗುರುವು ಅದಕ್ಕೆ ಒಪ್ಪಿದನು. ತಾನು ಮತ್ತೆ ಬಂದು ಕರೆದೊಯ್ಯುವುದಾಗಿ ಹೇಳಿ ಮನೆಗೆ ಹೋದ ನಂಬಿಯಣ್ಣ, ಯಾವುದೋ ಜಗಳದಲ್ಲಿ ಮಗ್ನನಾಗಿ ಗುರುವನ್ನು ಮರೆತೇ ಬಿಟ್ಟ. ಇತ್ತ ಗುರುವು ಧ್ಯಾನಮಗ್ನನಾಗಿ ಕುಳಿತವನು ದಿನಗಳ ಮೇಲೆ ದಿನಗಳುರುಳಿದರೂ ಬಾಹ್ಯಪ್ರಜ್ಞೆಗೆ ಮರಳಲೇ ಇಲ್ಲ. ಆತನ ಮೇಲೆ ದೊಡ್ಡದೊಂದು ಹುತ್ತ ಬೆಳೆದುಕೊಂಡಿತು. ಹಲವು ಕಾಲದ ಮೇಲೆ ಆಕಸ್ಮಾತ್ತಾಗಿ ಆತನ ಇರವನ್ನು ಅರಿತ ಭಕ್ತ ಜನರು ಹುತ್ತವನ್ನು ಅಗೆದು ಆತನನ್ನು ಉಪಚರಿಸಿದರು. ತೋಟದಲ್ಲಿ ವಸತಿಮಾಡಿದ್ದ ಆತನು 'ತೋಂಟದ ಸಿದ್ಧಲಿಂಗಯತಿ' ಯೆಂದೆ ಪ್ರಖ್ಯಾತನಾದನು. ಆತನ ನಡತೆಯಿಂದ ಉಪದೇಶದಿಂದ ಆಕರ್ಷಿತರಾದ ಜನ ಅಮಿತ ಸಂಖ್ಯೆಯಲ್ಲಿ ಆತನ ಸುತ್ತಲೂ ನೆರೆದರು. ಆತನು ಅವರ ಆರಾಧ್ಯ ದೈವವಾದ.

ಸಿದ್ಧಲಿಂಗಯತಿಯು ತನ್ನ ಸುತ್ತಲೂ ನೆರೆದ ಜನರಲ್ಲಿ ಧರ್ಮಶ್ರದ್ಧೆ, ಸಾತ್ವಿ-ಕೋತ್ಸಾಹಗಳನ್ನು ಕೆರಳಿಸಿ ಜನಜಾಗ್ರುತಿಯನ್ನು ಸಾಧಿಸಿದನು. ಬಸವಾದಿ ಪ್ರಮಥರ ಕಾಲ ದಲ್ಲಿ ಕಾಣಬರುತ್ತಿದ್ದ ಧಾರ್ಮಿಕ ವಾತಾವರಣ ಈತನ ಕಾಲದಲ್ಲಿ ಮತ್ತೊಮ್ಮೆ ಮೂಡಿತು, ದೇವಮಾನವನಾದ ಆತನು ಕೇವಲ ವ್ಯಕ್ತಿಮಾತ್ರನಾಗಿರದೆ ಒಂದು ಹಿರಿಯ ಸಂಸ್ಥೆಯಂತಾದನು, ಆತ ನೆಲೆಸಿದ ನೆಲ ಭೂಕೈಲಾಸವಾಯಿತು. ಆತನ ಸುತ್ತಲೂ ನೆರೆದ ಭಕ್ತಸಮೂಹ ವೀರಶೈವ ಪ್ರಚಾರ ಪ್ರಸಾರಗಳಲ್ಲಿ ಕಂಕಣಬದ್ಧರಾದರು. ಜನರ ಇಹಪರಗಳ ಶ್ರೇಯಸ್ಸನ್ನು ಸಾಧಿಸಿಕೊಟ್ಟ ಈ ಕಾರಣಪುರುಷನನ್ನು ಜನರು ದೇವರ ಅವತಾರವೆಂದು ನಂಬಿದರು. ಹಲವು ಪವಾಡಗಳನ್ನು ಆತನಲ್ಲಿ ಆರೋಪಿಸಿರುವುದು ಆತನ ವ್ಯಕ್ತಿತ್ವಕ್ಕೆ ಸಹಜವಾಗಿಯೇ ಇದೆ. ತೋಂಟದ ಸಿದ್ಧಲಿಂಗಯತಿಯು ತುಮಕೂರು ಜಿಲ್ಲೆಯ ಎಡೆಯೂರೆಂಬಲ್ಲಿ ನೆಲೆಸಿ, ಲೋಕಪೂಜಿತನಾಗಿ ಬಾಳಿದನು, ಈತನು ಹಲವು ಉತ್ತಮ ವಚನಗಳನ್ನು ಹಾಡಿದ್ದಾನೆ. ಈತನ ಕಾಲದಲ್ಲಿ ಎಡೆಯೂರು ಬಸವಾದಿ ಪ್ರಮಥರ ಕಾಲದ ಹಂಪೆಯಂತೆ ಧರ್ಮದ ಕೇಂದ್ರಸ್ಥಲವಾಯಿತು. ಈತನು ಜೀವಂತನಾಗಿಯೆ ಸಮಾಧಿಯನ್ನು ಪ್ರವೇಶಿಸಿ, ಅಲ್ಲಿ ನೆಲೆಸಿದನಂತೆ! ಆತನ ಜ್ಞಾಪಕಾರ್ಥ ವಾಗಿ ಭಕ್ತರು ಆತನ ಸಮಾಧಿಯಿರುವಲ್ಲಿ ಒಂದು ಶಿವಾಲಯವನ್ನು ಕಟ್ಟಿಸಿ, ಶಾಸನವನ್ನು ನೆಡಿಸಿದರು. ಆತನ ಮಹಿಮೆಯನ್ನು ಸಾರುವ ಮತ್ತು ಆತನಿಗಾಗಿ 'ಕಲ್ಲುಮಠ'ವನ್ನು ಕಟ್ಟಿಸಿದ ಭಕ್ತನನ್ನು ಹೆಸರಿಸುವ ಆ ಶಾಸನವೂ, ಸಿದ್ಧಲಿಂಗೇಶ್ವರನ

ಗುಡಿಯೂ ಎಡೆಯೂರಲ್ಲಿ ಇಂದಿಗೂ ಉಳಿದುಕೊಂಡು ಬಂದಿವೆ. ಇಂದಿಗೂ ಆವೂರು ಜಾಗ್ರುತಸ್ಥಳವೆಂದು ಪ್ರಸಿದ್ಧಿಯಾಗಿ, ಶಿವಭಕ್ತರ ಯಾತ್ರಾಸ್ಥಳವಾಗಿದೆ. ವಿರಕ್ತ ತೋಂಟದಾರ್ಯ, ಶಾಂತೇಶ ಮೊದಲಾದ ಕವಿಗಳು ಆತನ ಜೀವನ ಚರಿತ್ರೆಯನ್ನು ಕಾವ್ಯರೂಪದಲ್ಲಿ ಬರೆದಿದ್ದಾರೆ, ಅನೇಕ ಕವಿಗಳು ತಮ್ಮ ಕಾವ್ಯಕರ್ಮಕ್ಕೆ ಕೈಯಿಕ್ಕುವ ಮುನ್ನ ಆತನಿಗೆ ಸ್ತುತಿರೂಪದ ಪುಷ್ಪಾಂಜಲಿಯನ್ನು ಅರ್ಪಿಸಿದ್ದಾರೆ,

ತೋಂಟದ ಸಿದ್ಧಲಿಂಗ ಯತಿಯ ವಚನ ಸಂಕಲನಕ್ಕೆ 'ಷಟ್‌ಸ್ಥಲಜ್ಞಾನ ಸಾರಾಮೃತ'ವೆಂದು ಹೆಸರು: ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೆ' ಎಂಬುದು ಅವನ ವಚನಗಳ ಮುದ್ರಿಕೆ. ಈ ವಚನಗಳಲ್ಲಿ ಭಕ್ತನ ನಿಷ್ಠೆ, ಸ್ಪರ್ಧೆ ಆರ್ತಭಾವಗಳು ಎದ್ದು ಕಾಣುತ್ತವೆ. ಸ್ವಾನುಭವಜ್ಞಾನವುಳ್ಳವರೇ ಲಿಂಗಾಂಗ ಸಮರಸೈಕ್ಯರೆಂದು ಹೇಳುತ್ತಾ, ಆತನು 'ಸೂರ್ಯನ ಬೆಳಗಿಂಗೆ ಕೊಳ್ಳಿಯ ಬೆಳಗ ಹಿಡಿಯಲುಂಟೆ, ಮರುಳೆ? ತನ್ನ ಮುಖವ ತಾ ಬಲ್ಲಂಗೆ ಕನ್ನಡಿಯ ಹಿಡಿದು ನೋಡಲುಂಟೆ, ಹೇಳಾ? ತನ್ನ ಸುಳುಹಿನ ಸೂಕ್ಷ್ಮವ ತಾನರಿದ ಸ್ವಯಜ್ಞಾನಿಗೆ ಇನ್ನಾವ ಆಗಮದ ಬೋಧೆ ಏಕೆ, ಹೇಳಾ ? ಆಗಮ ಶಿಕ್ಷೆ ಎಂಬುದು ಲೋಗರಿಗಲ್ಲದೆ ಆದಿಯಲ್ಲಿ ಶಿವಬೀಜವಾದ ಮಹಾಮಹಿಮರಿಗುಂಟೆ?" ಎಂದು ಕೇಳುತ್ತಾನೆ. ಜ್ಞಾನಿಗಳಾದ ಶರಣರೆ ಲಿಂಗವೆಂದು ತಿಳಿದ ಮಹಾತ್ಮರಿಗೆ ಸಂಕಲ್ಪ ಭ್ರಮೆಯಿಲ್ಲವಂತೆ. ಆತನ ದಿವ್ಯವಾಣಿಯನ್ನು ಕೇಳಿ 'ಸುಧೆಯೊಳಗೆ ವಿಷವುಂಟೆ ? ಮಧುರದೊಳಗೆ ಕಹಿಯುಂಟೆ ? ದಿನಮಣಿಯೊಳಗೆ ಕಪ್ಪುಂಟೆ ? ಬೆಳದಿಂಗಳೊಳಗೆ ಕಿಚ್ಚುಂಟೆ ? ಅಮೃತಸಾಗರದೊಳಗೆ ಬೇವಿನ ಬಿಂದು ವುಂಟೆ ? ಎಂಬುದು ಆತನ ಸಮರ್ಥನೆ. ಆತನ ಮನಸ್ಥೈರ್ಯವನ್ನು ನೋಡಿ 'ನಿತ್ಯತೃಪ್ತಂಗೆ ಹಸಿವಿನ ಭಯವುಂಟೆ ? ಸತ್ಯಜ್ಞಾನಿಗೆ ಅಜ್ಞಾನದ ಭಯವುಂಟೆ ? ನಿಜದಿಂದ ತನ್ನ ತಾನರಿದು ತಾನೇ ತಾನಾದಾತನು ಮಾಯೆಂಯ ಗಜಬಜೆಯ ಹುಸಿಗೆ ಬೆದರುವನೆ ಮಹಾಶರಣನು ?' ಸಿದ್ಧೇಶ್ವರನ ವಚನಗಳಲ್ಲಿ ಸಾಧಕನ ಕಳವಳ, ಆತ್ಮ ರೋದನಕ್ಕಿಂತಲೂ ಸಿದ್ಧಪುರುಷನ ಪ್ರಶಾಂತತೆಯೆ ಹೆಚ್ಚು. ಆತನ ಈ ವಚನವನ್ನು ನೋಡಿ ' ಉದಯ ಕಾಲದೊಳೆದ್ದು ಹೂ ಪತ್ರಿಗಳ ಕೊಯ್ದೆಂದು ಹೊರ ಉಪಚಾರ ಮಾಡುವುದೆಲ್ಲ ಬರಿಯ ಭಾವದ ಬಳಲಿಕೆ ನೋಡಾ. ಅಳಲದೆ ಬಳಲದೆ ಅಯಾಸ ಪಡದೆ ಒಳಗಿನ ಜ್ಯೋತಿಯ ಬೆಳಗಿನ ಕಳೆಯ ಕಮಲವ ಪೂಜಿಸಬಲ್ಲ ಶರಣಂಗೆ ಬೆಳಗಾಗಿ ಎದ್ದು ಪೂಜಿಸಿಹೆನೆಂಬ ಕಳವಳವೇಸು ಹೇಳಾ !" ಎಂದು ಪ್ರಶ್ನಿಸಿ, "ಜಲಧಿಯ ಸಾಗರವ ದಾಂಟಿ, ಅಮೃತ ಸಾಗರವ ಬೆರಸಿ ಅನುಪಮ ಸುಖಿಯಾ ನಯ್ಯಾ" ಎಂದು ಹೇಳುವ ಮಾತನ್ನು ಕೇಳಿದಾಗ, ಆತನು ತನ್ನ ಹೆಸರಿಗೆ ತಕ್ಕಂತೆ ಆತ್ಮಸಿದ್ಧಿಯನ್ನು ಪಡೆದ ಸಿದ್ಧಪುರುಷನೇ ಸರಿಯೆನ್ನಿಸುತ್ತದೆ.

ತೋಂಟದ ಸಿದ್ಧೇಶ್ವರನ ಶಿಷ್ಯರಿಬ್ಬರು ಸ್ವತಂತ್ರ ಸಿದ್ಧಲಿಂಗೇಶ್ವರ (ಕ್ರಿ. ಶ. ೧೫೫೦) ಮತ್ತು ಗುಮ್ಮಳಾಪುರದ ಸಿದ್ಧಲಿಂಗೇಶ್ವರ (ಕ್ರಿ. ಶ. ೧೫೮೦) ಸ್ವತಂತ್ರವಾಗಿ ವಚನ ರಚನೆಗೆ ಕೈಯಿಕ್ಕಿದ್ದಾರೆ. ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು "ನಿಜಗುರು

ಸ್ವತಂತ್ರ ಸಿದ್ಧಲಿಂಗೇಶ್ವರ" ಎಂಬ ಅಂಕಿತವನ್ನು ಹೊಂದಿವೆ. ಈ ವಚನಕಾರನು "ಸ್ವತಂತ್ರ ಸಿದ್ಧಲಿಂಗೇಶ್ವರ ವಚನ"ಗಳನ್ನು ಮಾತ್ರವೆ ಅಲ್ಲದೆ "ಮುಕ್ತ್ಯಂಗನೆಯ ಕಂಠಹಾರ," "ಜಂಗಮುರಗಳ" ಎಂಬ ಮತ್ತೆರಡು ಗ್ರಂಥಗಳನ್ನು ಬರೆದಿದ್ದಾನೆ. ಸಾಹಿತ್ಯ ದೃಷ್ಟಿಯಿಂದ ಈ ಗ್ರಂಥಗಳಿಗೆ ಅಂತಹ ಮಹತ್ವವೇನೂ ಇಲ್ಲ. ಈತನ ವಚನಗಳು ಸರಳವಾಗಿ, ವಿಷಯಗರ್ಭಿತವಾಗಿವೆ. ಆದರೆ ವಚನ ವಾಙ್ಮಯದಲ್ಲಿ ಸಾಮಾನ್ಯವಾಗಿ ಕಾಣಬರುವ ಸಂಗ್ರಹಗುಣ, ನಿಶಿತತೆಗಳು ಅಷ್ಟಾಗಿ ಇವುಗಳಲ್ಲಿ ಕಂಡುಬರುವುದಿಲ್ಲ. "ಕಣ್ಣು ಕಾಲು ಎರಡುಳ್ಳವನು ದೂರವೆಯ್ದುವನಲ್ಲದೆ, ಕಣ್ಣು ಕಾಲು ಎರಡರೊಳಗೊಂದಿಲ್ಲದವನು ದೂರವೆಯ್ದಲರಿಯನೆಂಬುಂತೆ, ಜ್ಞಾನರಹಿತನಾಗಿ ಕ್ರಿಯೆಯನೆಷ್ಟು ಮಾಡಿದರೇನು ? ಅದು ಕಣ್ಣಿಲ್ಲದವನ ನಡೆಯುಂತೆ. ಕ್ರಿಯೆ ರಹಿತನಾಗಿ ಜ್ಞಾನಿಯಾದೊಡೇನು ? ಅದು ಕಾಲಿಲ್ಲದವನ ಇರವಿನಂತೆ." ಇಂತಹ ವಚನಗಳು ಕೇವಲ ವಾಕ್ಯವಾಗಿರುವಂತೆ ಕಾಣಿಸುತ್ತವೆ. ಈತನ ಅನೇಕ ವಚನಗಳಲ್ಲಿ ವಿವೇಕ ಬೋಧನೆ ಕಂಡುಬರುವುದಾದರೂ ಭಾವಬಂಧುರತೆ ಅಷ್ಟಾಗಿ ಇಲ್ಲ. "ವೇಷವ ಧರಿಸಿ, ಭಾಷೆಯ ಕಲಿತು, ದೇಶವ ಸುತ್ತಿ ಬಳಲಬೇಡ; ಜಗದೀಶನ ಪಾದವ ನೊಲಿದು ಪೂಜಿಸಿರಣ್ಣ" ಎಂಬಂತಹ ವಚನಗಳಲ್ಲಿ ಪ್ರಾಸಬದ್ಧತೆ ಸ್ವಲ್ಪಮಟ್ಟಿಗೆ ಕಂಡು ಬರುವದಾದರೂ, ಬುದ್ಧಿಗೆ ಬೆಳಕನ್ನು ಹೃದಯಕ್ಕೆ ಆನಂದವನ್ನು ನೀಡಬಲ್ಲ ಸಾಮಗ್ರಿ ಇಲ್ಲಿ ಕಡಿಮೆ. ಹನ್ನೆರಡನೆ ಶತಮಾನದ ವಚನಗಳನ್ನು ಓದಿದವರಿಗೆ ಈ ವಚನಗಳು ನೀರನ್ನು ಚಪ್ಪರಿಸಿದಂತೆ ಬಹು ಸಪ್ಪೆಯಾಗಿ ತೋರುತ್ತವೆ, ಸ್ವತಂತ್ರ ವಚನ ರಚನೆ ಬಹು ಕಾಲ ನಿಂತೇ ಹೋಗಿದ್ದುದರಿಂದ ಅವು ಹೊಸದಾಗಿ ಅಂಕುರಿಸುತ್ತಿರುವಾಗ ಅವುಗಳಿಗೆ ಒಂದು ಸ್ಥಾನ ನೀಡಬೇಕಾಗಿದೆ.

ಗುಮ್ಮಳಾಪುರದ ಸಿದ್ಧಲಿಂಗೇಶ್ವರನು ತೋಂಟದ ಸಿದ್ಧಲಿಂಗಯತಿಗೆ ಶಿಷ್ಯನೂ ಅಹುದು, ಪ್ರಶಿಷ್ಯನೂ ಅಹುದು. ಸಿದ್ಧಲಿಂಗಯತಿಯ ಶಿಷ್ಯನಾದ ಬೋಳಬಸವನು ಈತನ ವಿದ್ಯಾಗುರುವಾಗಿದ್ದಿರಬೇಕು. ತನ್ನ ವಚನಗಳಲ್ಲಿ 'ಬೋಳಬಸವೇಶ್ವರ, ನಿಮ್ಮ ಧರ್ಮ ನಿಮ್ಮ ಧರ್ಮ' ಎಂಬ ಅಂಕಿತವನ್ನು ಬಳಸಿರುವುದಲ್ಲದೆ, ಆತನ ಮೂಲಕವಾಗಿಯೆ ತೋಂಟದ ಯತಿವರ್ಯನ ಅನುಗ್ರಹ ತನಗೆ ದೊರೆಯಿತೆಂದು ಈತ ಹೇಳಿಕೊಂಡಿದ್ದಾನೆ. ಈತನ 'ಷಟ್‌ಸ್ಥಲ ಲಿಂಗಾಂಗ ಸಂಬಂಧದ ನಿರ್ವಚನ'ದಲ್ಲಿ ಹದಿನೈದು ವಚನಗಳು ಮಾತ್ರ ಇವೆ. ಬಸವಣ್ಣ, ಚೆನ್ನಬಸವಣ್ಣ, ಮಡಿವಾಳಯ್ಯ, ಪ್ರಭುದೇವ ಇತ್ಯಾದಿ ಪ್ರಮಥರ ಸ್ತೋತ್ರವನ್ನು ಒಳಗೊಂಡ ಈತನ ವಚನಗಳು ಸುದೀರ್ಘವಾಗಿವೆ. ಇದೇ ಅವುಗಳ ವೈಶಿಷ್ಟ್ಯ.

ತೋಂಟದ ಸಿದ್ಧಲಿಂಗಯತಿಯ ಮತ್ತೊಬ್ಬ ಶಿಷ್ಯನಾದ ಘನಲಿಂಗ (೧೪೮೦ ಕ್ರಿ. ಶ.)ನು 'ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ' ಎಂಬ ಅಂಕಿತವನ್ನು ಬಳಸಿಕೊಂಡು ವಚನಗಳನ್ನು ಬರೆದಿದ್ದಾನೆ. 'ಎನ್ನ ಗುರುವಿನ ಗುರು ಪರಮ ಗುರು ಪರಮಾರಾಧ್ಯ ತೋಂಟದಾರ್ಯನಿಗೆ ಗುರುಭಕ್ತಿಯಿಂದ ಎನ್ನ ಶರಣು ಮಾಡಿದರು. ಆ

ತೋಂಟದಾರ್ಯನು ತನ್ನ ಕೃಪೆಯೆಂಬ ತೊಟ್ಟಿಲೊಳಗೆನ್ನ ಮಲಗಿಸಿ, ಪ್ರಮಥ ಗಣಂಗಳ ವಚನ ಸ್ವರೂಪಾರ್ಥವೆಂಬ ಹಾಲು ತುಪ್ಪಮಂ ಸದಾ ದಣಿಯಲೆರೆದು, ಅಕ್ಕರಿಂದ ರಕ್ಷಣ್ಯಮಂ ಮಾಡಿ, ಘನಲಿಂಗಿಯೆಂಬ ನಾಮಕರಣಂ ಕೊಟ್ಟು, ಪ್ರಾಯ ಸಮರ್ಥೆಯಂ ಮಾಡಿ...' ಎಂದು ಆತ ತನ್ನ ಆತ್ಮಕಥೆಯನ್ನು ಹೇಳಿಕೊಂಡಿದ್ದಾನೆ. ತನ್ನ ವಚನವೊಂದ ರಲ್ಲಿ ಅದೇ ವಚನದ ಆರಂಭದಲ್ಲಿ 'ಎಲೆ ತಂಗಿ, ಶರಣಸತಿ ಲಿಂಗಪತಿಯಾದ ಪತಿವ್ರತಾ ಭಾವದ ಚಿಹ್ನ ನಿನ್ನ ನಡೆನುಡಿಯಲ್ಲಿ ಹೊಗರುದೋರುತ್ತಿದೆ. ನಿನ್ನ ಪೂರ್ವಾಪರ ವಾವುದಮ್ಮಾ?' ಎಂಬ ಪ್ರಶ್ನೆ ಹಾಕಿಕೊಂಡು, 'ಸುತ್ತೂರು ಸಿಂಹಾಸನದ ಪರ್ವತದೇವರ ಶಿಷ್ಯರು ಕೂಗುಲೂರ ನಂಜಯ್ಯದೇವರು. ಆ ನಂಜಯ್ಯದೇವರ ಕರಕಮಲದಲ್ಲಿ ಉದಯ ವಾದ ಶರಣವೆಣ್ಣಯ್ಯ ನಾನು' ಎಂದು ಹೇಳಿಕೊಂಡಿದ್ದಾನೆ. ಇದರಿಂದ ಈತನು ಮೈಸೂರು ಜಿಲ್ಲೆಯ ಸುತ್ತೂರಿನವನಾಗಿರಬೇಕೆಂದು ಊಹಿಸಲು ಅವಕಾಶವಿದೆ. ಈತನ ವಚನವೊಂದೊಂದೂ ಸುದೀರ್ಘವಾಗಿ ಬೆಳೆದುಕೊಂಡು ಹೋಗುತ್ತದೆ. ಆನೆಯನ್ನು ಕಂಡ ಕುರುಡರ ಒಂದು ಇಡೀ ಕಥೆಯೆ ಒಂದು ವಚನವಾಗಿ ಕೂತಿದೆ. ಈತನ ವಚನಗಳು ಸಾರವತ್ತಾಗಿವೆ. ಅವುಗಳಲ್ಲಿ ಸಾಧಕನ ಆರ್ತತೆಯಿದೆ, ನಿಷ್ಠೆಯಿದೆ. ಭಕ್ತಿಯಿದೆ. "ಎನ್ನ ಕೇಡಿಂಗೆ ಕಡೆಯಿಲ್ಲ. ಕಾಯವಿಕಾರವೆಂಬ ಕತ್ತಲೆಗವಿಯಿತ್ತು. ಮನೋವಿಕಾರವೆಂಬ ಮಾಯೆ ಸೆರೆಪಿಡಿದಳು. ಇಂದ್ರಿಯ ವಿಕಾರವೆಂಬ ಹುಚ್ಚು ನಾಯಿಗಳು ಕಚ್ಚಿ ಕಚ್ಚಿ ಒದರು ತ್ತಿವೆ. ಸಾವನ್ನಬರ ಸರಸ ಉಂಟೆ ಲಿಂಗವೆ ?" ಎಂಬ ಆತನ ಕರುಳರೋದನ ಹೃದಯ ಸ್ಪರ್ಶಿಯಾಗಿದೆ. ತನ್ನ ತಪ್ಪುಗಳನ್ನು ಮನ್ನಿಸಿ ಉದ್ಧರಿಸೆಂದು ಬೇಡುತ್ತಾ "ನಾನು ಮುಂದ ನರಿಯದ ಅಂಧಕನಯ್ಯ, ನಿನ್ನ ಬಾಗಿಲ ಕಾಯ್ವ ಗೊಲ್ಲನಯ್ಯ, ನಿನ್ನ ಕುದುರೆಗಳ ಕಾಯ್ವ ಗೋಪನಯ್ಯ. ನಿನ್ನ ಚಮ್ಮಾವುಗೆಯ ಹೊತ್ತು ಬದುಕುವವ ಬೋವರಲೆಂಕ ನಯ್ಯ, ನಿನ್ನ ಪಡಿಗವ ಹಿಡಿವ ದಿಂಡೆಯಯ್ಯ, ನೀನುಗುಳ್ದ ತಾಂಬೂಲವನುಂಬ ನಿನ್ನಾ ದಿಯ ಹಳೆಯನಯ್ಯ, ನಿನ್ನಂಗಳದಲ್ಲಿ ಬೊಗಳುವ ಶ್ವಾನವಯ್ಯ, ನಿನ್ನ ಮನೆಯ ನಡೆ ಸೊಡರಯ್ಯ, ಎನ್ನ ತಪ್ಪ ಕಾಯಯ್ಯ' ಎಂದು ಆತನು ಕರುಳು ಕರಗುವಂತೆ ಬೇಡಿ ಕೊಳ್ಳುತ್ತಾನೆ. "ನಿನ್ನ ನೆನೆನೆನೆದು, ಎನ್ನ ಮನ ಬೀಗಿ ಬೆಳೆದು ತಳಿರಾಗಿ ಹೂ ಮಿಡಿ ಗೊಂಬುದಯ್ಯ. ನಿನ್ನ ಹಾಡಿ ಹಾಡಿ ಎನ್ನ ಜಿಹ್ವೆ ಅಮೃತ ಸಾಗರದೊಳೋಲಾಡು ತಿಪ್ಪುದಯ್ಯ"; "ದೇವಾ, ಕಂಬಳಕ್ಕೆ ಹೋಗಿ ಕನಕದ ಕೊಡನ ಕಂಡಂತೆ, ಮರ್ತ್ಯ ಲೋಕಕ್ಕೆ ಬಂದು ಮಾನವ ಜನ್ಮವ ಕಂಡೆ", "ಕತ್ತಲೆ ಸತ್ತು ಬೆಳಗು ಬೀದಿವರಿದಿತ್ತು ನೋಡಾ"....ಇತ್ಯಾದಿಯಾದ ಆತನ ವಚನಗಳಲ್ಲಿ ಕಾವ್ಯಮಯವಾದ ಶೈಲಿ ಮಿನುಗು ತ್ತಿರುವುದನ್ನು ನಾವು ಕಾಣುತ್ತೇವೆ. ಒಮ್ಮೊಮ್ಮೆ ಆತನು ಒಂದು ರೂಪಕ ಪರಂಪರೆ ಯನ್ನೆ ಬೆಳೆಸಿ, ಒಂದು ವಚನವನ್ನು ಅರಳಿಸಬಹುದು. ವಚನ–ವಾಙ್ಮಯದಲ್ಲಿ ಘನಲಿಂಗ ನಿಗೆ ಒಂದು ಉಚ್ಚ ಸ್ಥಾನವನ್ನು ಕೊಡುವಷ್ಟು ಆತನ ವ್ಯಕ್ತಿತ್ವ ಅವುಗಳಲ್ಲಿ ಅಡಕವಾಗಿದೆ.

ವಚನ ವಾಙ್ಮಯವನ್ನು ಕುರಿತು "ಇದಮಿತ್ಥಂ" ಎಂದು ಹೇಳುವುದು ಯಾರಿಗೆ ಸಾಧ್ಯ ? ಎಷ್ಟು ಜನ ವಚನಕಾರರೂ ವಚನಗಳೂ ಇನ್ನೂ ಅಜ್ಞಾತವಾಸ

ದಲ್ಲಿವೆಯೋ, ಅಥವಾ ಖಿಲವಾಗಿ ಹೋಗಿವೆಯೊ! ದಿವಂಗತ ಶ್ರೀ ಆರ್. ನರಸಿಂಹಾಚಾರ್ಯರು ತಮ್ಮ ಕವಿ ಚರಿತೆಯ III ಸಂಪುಟದ ಕೊನೆಯಲ್ಲಿ ಇನ್ನೂ ಅನೇಕ ವಚನಕಾರರನ್ನು ಹೆಸರಿಸುವರಾದರೂ, ಅಪ್ರಕಟಿತವಾದ ಆ ವಚನಗಳನ್ನು ಸಮಗ್ರವಾಗಿ ಕಾಣದ ಹೊರತು ಅವುಗಳನ್ನು ಕುರಿತು ಬರೆಯುವಂತಿಲ್ಲ. ಹೆಸರು ಗೊತ್ತಿಲ್ಲದ ಸುಮಾರು ಐವತ್ತು ವಚನಕಾರರ ಅಂಕಿತಗಳೊಡನೆ ಸಿಕ್ಕಿರುವ ವಚನಗಳನ್ನೂ ಅಲ್ಲಿ ಉದಾಹರಿಸಲಾಗಿದೆ. ಹೆಸರು ಮತ್ತು ಅಂಕಿತಗಳಿರುವ ವಚನಕಾರರು ತಿಳಿದು ಬಂದಿರುವುದಾದರೂ ಅವರ ವಚನಗಳು ದೊರೆಯದಿರುವ ಸಂದರ್ಭಗಳೂ ಇವೆ. ಈ ನಿಟ್ಟಿನಲ್ಲಿ ಸಂಶೋಧನೆ ಅಗತ್ಯವೆಂಬುದನ್ನು ಮಾತ್ರ ನಾವಿಲ್ಲಿ ನಮ್ರವಾಗಿ ಸೂಚಿಸುತ್ತೇವೆ. □

# ಷಡಕ್ಷರದೇವನ ಮೇಲೆ ಕುಮಾರವ್ಯಾಸನ ಪ್ರಭಾವ ಎಂಥದು ?

ಪ್ರೊ. ಬಿ. ಬಿ. ಮಹೀಶವಾಡಿ

ಮಹಾಕವಿಯನ್ನು ಅನುಕರಣ ಮಾಡುವುದಕ್ಕೆ ಎಲ್ಲರೂ ಬಯಸುತ್ತಾರೆ. ಆದರೆ ಮಹಾಕವಿ ಅನುಕರಣೆಗೆ ಸಿಕ್ಕುವುದಿಲ್ಲ. ಅನುಕರಣಶೀಲ ಅವನನ್ನು ದಕ್ಕಿಸಿಕೊಳ್ಳಲೂ ಆರ....ಕುಮಾರವ್ಯಾಸನನ್ನು ಅನುಕರಿಸಿದವರಿಗೆ ಲೆಕ್ಕವಿಲ್ಲ, ಆದರೆ ಅವನನ್ನು ಅನುಸರಿಸಿದವರು ಮಾತ್ರ ವಿರಲ, ಕುಮಾರ–ವಾಲ್ಮೀಕಿ, ವಿಠಲನಾಥ, ಲಕ್ಷ್ಮೀಶ, ಕನಕದಾಸರು ಭಾಸ್ಕರ ಅಷ್ಟೇ ಏಕೆ ಚಂಪೂಮಾರ್ಗದ ಷಡಕ್ಷರಿ ಎಲ್ಲರೂ ಅವನ ಪ್ರಭಾವಕ್ಕೆ ಒಳಗಾಗಿದ್ದಾರೆ. ಅವನನ್ನು ಅರಗಿಸಿಕೊಳ್ಳುವುದಕ್ಕೆ ಎಷ್ಟು ಕಷ್ಟ ಎನ್ನುವುದಕ್ಕೆ ಒಂದೇ ನಿದರ್ಶನವನ್ನು ಕೊಡಬಹುದು. ಕುಮಾರವ್ಯಾಸನ ಕಿರಾತಾರ್ಜುನೀಯ ಪ್ರಸಂಗದ ಕಥಾಭಾಗವನ್ನು ಪಂಕ್ತಿಪಂಕ್ತಿಯಾಗಿ ಷಡಕ್ಷರಿ ಅನುವಾದ ಮಾಡಿದ್ದಾನೆ. ಆದರೆ ಎಷ್ಟರ ಮಟ್ಟಿಗೆ ಅನುಕರಣ ಮಾಡಲಾಗಿದೆ ನೋಡಿ :

'ಮಂಜು ಮುಸುಕಿದೊಡೇನು ಪರ್ವತ
ಅಂಜುವುದೆ ? ಹಾಲಾಹಲವ ನೊಣ
ನೆಂಜಲಿಸುವುದೆ ? ವಡಬಶಿಖಿ ನೆನೆಯುವುದೆ ತುಷಾರದಲಿ ?
ಕಂಜನಾಳದಿ ಕಟ್ಟುವಡೆವುದೆ
ಕುಂಜರನು ? ನರಶರದ ಜೋಡಿನ
ಜುಂಜುವೊಳೆಯಲಿ ಜಾಹ್ನವೀಧರ ಜಾರುವನೆ ?—ಯೆಂದ !'

ಇದು ಕುಮಾರವ್ಯಾಸನ ಪದ್ಯ, ಆದರ ಅನುವಾದವಿಲ್ಲಿದೆ :

ಮಂಜಿನಪುಂಜಮೊತ್ತರಿಸಿ ಮುತ್ತಿಮುಸುಂಕೆ ಭಯಾರ್ತಿಗೊಳ್ವನೇ
ಕಂಜಸಖಂ ? ಪತಂಗತತಿ ಪಾಯ್ದೊಡೆ ಬೆರ್ಚುಗುಮೇದವಾಗ್ನಿ ? ವಾ-
ತಂ ಜವದಿಂ ಪಳಂಚೆ ಗಿರಿ ಕಂಪನವಾಂಪುದೆ ? ಪಾಂಡುಪುತ್ರನಾ-
ತಂ ಜಡಿದೊತ್ತೆ ಜಾಜಿ ಪೆಜಸಾರ್ವನೆ ಧೀರ ಧನಂಜಯಾಂಬಕಂ ।

ಇದಕ್ಕಿಂತ ಬೇಕೆ ಬೇರೆಯ ನಿದರ್ಶನ. ಕುಮಾರವ್ಯಾಸ ಅನುವಾದಕ್ಕೆ ಸಿಕ್ಕನು ಎಂಬುದಕ್ಕೆ ?

—ಕುಮಾರ ( ಕುಮಾರವ್ಯಾಸ ಭಾರತಕ್ಕೆ ಬರೆದ " ತೋರಣನಾಂದಿ "ಯಲ್ಲಿ )

"ಶಬರಶಂಕರ ವಿಳಾಸಂ" ಪೀಠಿಕೆಯಲ್ಲಿ ಶಿ. ಶಿ. ಬಸವನಾಳರು ಇವೇ ಪದ್ಯಗಳನ್ನು ಪರಸ್ಪರ ಹೋಲಿಸುತ್ತ ಹೀಗೆ ಅಭಿಪ್ರಾಯಪಡುತ್ತಾರೆ.

"ಮಂಜು ಪರ್ವತವನ್ನೂ ಮುಸುಕಬಹುದು, ಸೂರ್ಯನನ್ನು ಮುಸುಕ ಬಹುದು. ಅದಕ್ಕೆ ಪರ್ವತವು ಬೆದರಲಿಕ್ಕಿಲ್ಲ, ಆದರೆ ಅದನ್ನು ಬೆದರಿಸುವ ಶಕ್ತಿ ಪರ್ವತಕ್ಕಿಲ್ಲ, ಸೂರ್ಯನಿಗೆ ಇದೆ. ಹಾಲಾಹಲವನ್ನು ನೊಣ ಎಂಜಲಿಸದೆಂದು ಹೇಳುವುದರಿಂದ ಹಾಲಾಹಲದ ಭೀಕರತೆಯನ್ನು ಹೇಳಿದಂತಾಯಿತೋ, ನೊಣದ ಜಾಣ್ಮೆಯನ್ನು ವರ್ಣಿಸಿದಂತಾಯಿತೋ ? ಹೀಗೆ ಹಲವು ಸಂದೇಹಗಳಿಗೆ ಎಡೆಗೊಡದೆ ಹೆಚ್ಚು ಬಲವತ್ತರವಾದ ಉದಾಹರಣೆಗಳನ್ನು ಕೊಟ್ಟು ಷಡಕ್ಷರದೇವನು ಕುಮಾರವ್ಯಾಸನ ಭಾವನೆಯಲ್ಲಿಯೇ ಮಾರ್ಪಾಟುಗಳನ್ನು ಮಾಡಿ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸಿದ್ದಾನೆ."

ಹೀಗೆಯೇ ಕುಮಾರವ್ಯಾಸನ ಇನ್ನೊಂದು ಪದ್ಯವನ್ನು ಷಡಕ್ಷರದೇವನ ಪದ್ಯದೊಂದಿಗೆ ಹೋಲಿಸುತ್ತ, "ಷಡಕ್ಷರದೇವನಿಗೆ ಗುಹಗಜಾಸ್ಯರ ನೆನಪು ಕುಮಾರವ್ಯಾಸನ ಪದ್ಯದಿಂದಲೇ ಆಗಿರಬಹುದು. ಆದರೂ ಇತರ ಕವಿಗಳಲ್ಲಿಯೇ ಸಿಕ್ಕುವ ಸೂಕ್ಷ್ಮ ಸೂಚನೆಗಳನ್ನು ತಟ್ಟನೆ ಗ್ರಹಿಸಿ ಅವನ್ನು ಮನಂಬುಗುವ ರೀತಿಯಲ್ಲಿ ವಿಸ್ತರಿಸಿ ಮೂಲಕ್ಕಿಂತಲೂ ಸುಂದರವಾಗುವಂತೆ ಮಾಡುವ ಕಲೆ ಷಡಕ್ಷರದೇವನಿಗೆ ಬಹು ಚೆನ್ನಾಗಿ ಸಾಧಿಸಿದೆ."— ಎನ್ನುತ್ತಾರೆ ಬಸವನಾಳರು. ಅದಲ್ಲದೆ "ಹೀಗೆ ಆಳವಾಗಿ ವಿವೇಚಿಸಿರುವುದರಿಂದ ಕರ್ಣಾಟಕ ಭಾರತಕ್ಕೂ, ಶಬರಶಂಕರವಿಳಾಸಕ್ಕೂ ಇರುವ ಸಾಮ್ಯ ಹೋಲಿಕೆಗಳು ಹೊರವೈಯ್ಯ ಹೋಲಿಕೆಗಳೆಂದು ಹೇಳಬಹುದೇ ಹೊರತು ಒಳದಿರುಳಿನವಲ್ಲ."— ಎಂದು ಅಭಿಪ್ರಾಯ ಪಡುತ್ತಾರೆ: ಇದನ್ನು ರಂ. ಶ್ರೀ. ಮುಗಳಿಯವರು ಒಪ್ಪುವದಿಲ್ಲ. "ತನಗಿಂತ ಪೂರ್ವಿಕರ ಸಾಮಗ್ರಿಯನ್ನು ಹೇಗೆ ಕುಮಾರವ್ಯಾಸನು ಬಳಸಿಕೊಂಡನೋ ಹಾಗೇ ಷಡಕ್ಷರಿ ಬಳಸಿಕೊಂಡಿದ್ದಾನೆ. ಇದರಲ್ಲಿ ಯಾರಿಗೂ ಹೀನಾಯವಿಲ್ಲ. ಎಲ್ಲಿಯೋ ಕೆಲವು ಭಾವಗಳನ್ನು ಒಳದಿರುಳಿನಲ್ಲಿ ತೆಗೆದುಕೊಂಡರೆ ಸ್ವತಂತ್ರ ಕಲ್ಪಕನಾದ ಷಡಕ್ಷರಿಗೆ ಕುಂದಕವಲ್ಲ. ಹಾಗೆ ಅವನು ತಿಳಿದಿರಲಾರನು. ಆದ್ದರಿಂದ ಹೋಲಿಕೆಗಳೆಲ್ಲಾ ಹೊರವೈಯ್ಯ ಹೋಲಿಕೆಗಳೆಂಬ ತೀರ್ಮಾನವು ನಮಗೆ ಸಂಮತವಾಗಿಲ್ಲ;" ಎನ್ನುತ್ತಾರೆ ಮುಗಳಿಯವರು,

ತ. ಸು. ಶಾಮರಾಯರು ಇದೇ ಸಂದರ್ಭವನ್ನು ಕುರಿತು "ಈ ಭಾಗದಲ್ಲಿ ಕವಿಯು ( ಷಡಕ್ಷರಿ ) ಕುಮಾರವ್ಯಾಸನಿಗೆ ಸಾಕಷ್ಟು ಋಣಿಯಾಗಿದ್ದಾನೆ. ಕವಿಯು ಮತ್ತೊಬ್ಬ ಕವಿಗೆ ಋಣಿಯೆಂದ ಮಾತ್ರಕ್ಕೆ ಆತನ ಕೀರ್ತಿಯ ತಲೆಯ ಮೇಲೆ ಹುಲ್ಲು ಹೊರಿಸಿದಂತಾಯಿತೆಂದು ಭಾವಿಸಬಾರದು" ಎನ್ನುತ್ತಾರೆ.

ಈ ವಿದ್ವಾಂಸರ ಅಭಿಪ್ರಾಯಗಳನ್ನು ಗಮನದಲ್ಲಿ ಇಟ್ಟುಕೊಂಡು ಪ್ರಸ್ತುತ ಸಂದರ್ಭವನ್ನು ಅಭ್ಯಾಸಮಾಡಿದರೆ. ಇನ್ನೂ ಹೆಚ್ಚಿನ ತಿಳುವಳಿಕೆ ಸಹೃದಯರ ಮನಗಮನವನ್ನು ಸೆಳೆಯದೆ ಇರಲಾರದು. ಇಲ್ಲಿ ಒಂದು ಉದಾಹರಣೆ ನೋಡಿರಿ.:

ಕುಮಾರವ್ಯಾಸ : ಬಂದನೀಶ್ವರ. "ನಾವು ಕೆಡಹಿದ ಹಂದಿ ನಮ್ಮದು. ತೆಗೆಯಿರಿ !" ನರನೆಂದ; "ನಮ್ಮಂಬಿನಲಿ ಬಿದ್ದುದ್ದು ಸಾರು ನೀನು ।" ಬಾಲೇಂದುಧರ

ಎಂದು ಎತ್ತಬಲ್ಲನು. ಕೆಣಕಿದನು ಶಿವನ ! " ಎಲೆ ಕಿರಾತ, ಮದೀಯ ಬಾಣದ ಬಲೆಗೆ ಮೃಗವಾಳದಿರು. ನಿನ್ನ ಆಳವ ಮೆರೆ. ಆ ಬನದ ನರಿ ಮೊಲ ಹಕ್ಕಿ ಹರಿಣನಲಿ ಗೆಲಿದ ಗರುವನು ನೀನು ! ನಿನ್ನಗ್ಗಳಿಕೆಗೆ ಆವು ಅಂಜುವೆವು ! ನಿನ್ನೀದಳಕೆ ಪತಿಯುಂಟಾದಡೆ ಆತನ ಕೊಂಡು ಬಾ! " ಎನಲು ನಕ್ಕನು ಶಂಭು :

"ಇದೇನು ತಮ್ಮಡಿ ನಿನಗೆ? ಖಡ್ಗವೇಕೆ ? ತಪವಲಿಧನುಶರಾವಳಿಯೇಕೆ? ನಿನ್ನಂಗವಣೆಯೇನು ? ಏಕೆ ನಿನಗೀ ತಪದ ಚಿಂತೆ ? " " ವಿಪಿನೌಕಸರ, ಸಂಹಾರ ವಿದ್ಯಾವೃತ್ತಿ ನಿನ್ನದಲೆ ? " "ನೀವು ಬಲ್ಲಿರಿ ಶಾಸ್ತ್ರದಲಿ, ಶಸ್ತ್ರವಳಿಯಲಿ! ಆವು ಇಂದು ಪಕ್ಷಿಮೃಗಾವಳಿಯ ಬೇಟೆಯಲಿ ಬಲ್ಲೆವು, ಜಾತಿಧರ್ಮವಿದು! ನೀವು ಬಲುಹು ಉಳ್ಳವರು, ನಿಮ್ಮೊಡನೆ ಆವು ಸೆಣಸುವರಲ್ಲ ! ನಿಮ್ಮವೊಲು ಆವ ಋಷಿ ಶಸ್ತ್ರಜ್ಞನೋ ಆತನ ಬಿರುದ ತಡೆ ! " ಎಂದ. " ಕಟಕಿಯೇಕೆ ಪುಳಿಂದ ?......ನಾವು ಉಬ್ಬಟೆಯ ತಪಸಿಗಳ್ !...ಜಟೆ ಮೃಗಾಜಿನ ಭಸ್ಮದೊಡನೆ ಉತ್ಕಟದ ಧನುಶರ ಖಡ್ಗದಲಿ ಧೂರ್ಜಟಿ ಇಹನು ! ನಾವು ಅವನ ಶಿಷ್ಯರು ! "

ಷಡಕ್ಷರದೇವ ; ಜವದಿಂ ಅಲ್ಲಿಗೆ ಬಂದು ಶಂಕರನೆಂದನು : ' ಈ ಕಿಟಿ ಎಮ್ಮದು ! ಅಂ ತವಿಸಿದೆಂ. ತೆಗೆ !' ಆಲಿಸುತ್ತ ವಿಕಲಂ : ' ಕೆಡೆದತ್ತಿದು ಎನ್ನಯ ಬಾಣದಿಂ, ಕಡೆಸಾರ್, ಬಿಡು !' ಅವನನ್ ಈಶ್ವರನೆಂದು ಬಲ್ಲನೆ ಪಾರ್ಥಂ ? ಒತ್ತಿ ಕೆರಳ್ಚಿದಂ ! ' ಎಲೆ ಶಬರ, ಕಾಡ ಬಡನರಿ ಪುಲ್ಲೆಗಳಲ್ಲಿ ನಿನ್ನ ಸಾಹಸಮುಂ ದೋರ್ಬಲಮುಂ ಮೆರೆಗುಂ! ಬೇಡ, ನಿನಗೇಕೆ ಸಾಹಸದ ಆಡಂಬರಂ ? ಎನ್ನೊಳು ಆಹವಕೆ ಅನುಗುಣನಂ ಜೋಡಿಸು, ನಿನಗೆ ಉಳ್ಳ ಒಡೆಯನಂ ? ಎನೆ, ನಸುನಕ್ಕು ಮೂರರಿಪು. ಗೊರವ, ನಿನ್ನಯ ಶೌರ್ಯಮದಿರ್ಕೆ. ಖಡ್ಗಂ ಈ ಧನುಶರಂ ಎತ್ತ? ನಿನ್ನ ತಪಂ ಎತ್ತ? ವಿಚಿತ್ರವಿದಲ್ತೆ ಧಾತ್ರಿಯೊಳ್?' 'ವಿಪಿನಚರ. ನಿನಗೆ ತಕ್ಕುದು ಚಪಲ ಮೃಗವ್ರಜದ ಬೇಂಟೆಯುಜ್ಜುಗಂ! ತಪದ ವಿಚಾರಂ ತಕ್ಕುದೆ?' "ತಾಪಸ. ಲೇಸನಾಡಿದೈ! ಕುಂದದೆ ಬೇಂಟೆಯುಜ್ಜುಗಂ ಇದೆಮ್ಮಯ ಕಜ್ಜಂ. ಇದು ಅಪ್ಪುದಪ್ಪುದು! ಆವಂದದಿಂ ಇಂತು ನಿನ್ನವೊಲ್ ಅದಾವನೊ ಶಾಂತಿ ಸಮಗ್ರಂ. ಉಗ್ರ ಶೌರ್ಯಂ ದಿಟಂ ಅಸ್ತ್ರ ಶಸ್ತ್ರ ಧರನಾದ ತಪಸ್ವಿ ಧರಾತಳಾಗ್ರದೊಳ್ ' " ಕಟಕಿಯಿದೇಂ ಪುಳಿಂದ ? ಎಮ್ಮ ವೃತ್ತಿಯುಂ ಪಟುತಪಂ ಅಂತ ತಾಪಸರೆ ಬಲ್ಲರ್! ಉದಾರ ಜಟಾಮೃಗಾಜಿನ ಸ್ಫುಟಭಸಿತಂಗಳಂ ಶರಶರಾಸನ ಖಡ್ಗಮನಾಂತು ತಾಪಸೋತ್ಕಟ ಮೃಡನಿರ್ಪನು! ಆ ಮೃಡನ ಶಿಷ್ಯತೆಯಾಂತ ಎನಗೇನಿದು ಒಪ್ಪದೆ?"

ಈ ಮೇಲಿನ ಅವತರಣಿಕೆಗಳನ್ನು ಆಯಾ ಕವಿಗಳ ಭಾಷೆಯಲ್ಲಿಯೇ ಬಳಸಲಾಗಿದೆ. ಆದರೆ ಸಂಧೀ ಬಿಡಿಸಿ ಓದಲು ಸುಲಭವಾಗುವಂತೆ ಸರಳ ಗದ್ಯದಲ್ಲಿ ಇಡಲಾಗಿದೆ. ಇವುಗಳನ್ನು ತುಲನಾತ್ಮಕವಾಗಿ ವಿಚಾರಿಸಿದಾಗ ಷಡಕ್ಷರದೇವನು ಕುಮಾರವ್ಯಾಸನ ಕಥಾಸರಣಿಯನ್ನು ಮಾತ್ರವೇ ಅನುಕರಣ ಮಾಡಿ ಸಮಾಧಾನ ಪಡದೆ ಅನೇಕ ಶಬ್ದಗಳನ್ನೂ. ವಾಕ್ಯ ರಚನಾಕ್ರಮವನ್ನೂ ಶೈಲಿಯನ್ನೂ ಕೆಲವು ಕಡೆಗೆ ಇದ್ದುದಿ

ದ್ದಂತೆಯೂ, ಇನ್ನು ಕೆಲವು ಕಡೆಗೆ ತೀರ ಸ್ವಲ್ಪ ಬದಲಾವಣೆಯೊಂದಿಗೆ ಸ್ವೀಕರಿಸಿದ್ದಾನೆ. ಇಷ್ಟೋದು ಅನುಕರಣಶೀಲನಾದರೂ ಷಡಕ್ಷರದೇವನ ಕಾವ್ಯಶಕ್ತಿ ಸಹೃದಯರ ಮನವನ್ನು ಸೂರೆ ಮಾಡುವುದು ಆಶ್ಚರ್ಯ ಸಂಗತಿ !

ಷಡಕ್ಷರದೇವನು ತನ್ನ "ಶಬರಶಂಕರವಿಳಾಸಂ" ಬರೆಯುವಲ್ಲಿ ಕುಮಾರವ್ಯಾಸ ನೊಬ್ಬನನ್ನೇ ಅನುಕರಿಸಿಲ್ಲ. ಮೂಲ ಭಾರತಕ್ಕೂ ಇನ್ನುಳಿದ ಅನುವಾದಗಳಿಗೂ ಅವನು ಋಣಿಯಾಗಿದ್ದಾನೆ. ಅವನ ಉಳಿದ ಕೃತಿಗಳಲ್ಲಿಯೂ ಅನ್ಯರ ಋಣ ಹೇರಳ ವಾಗಿದೆ. ಪಂಪ, ರನ್ನ, ನೇಮಿಚಂದ್ರ, ಅಗ್ಗಳ, ಹರಿಹರ, ರುದ್ರಭಟ್ಟ ಮೊದಲಾದ ಪ್ರಸಿದ್ಧ ಕನ್ನಡ ಕವಿಗಳ ಪದಪ್ರಯೋಗ, ಶೈಲಿ, ಭಾವ, ವರ್ಣನೆ, ಸಂದರ್ಭ, ರಚನೆ, ಅಲಂಕಾರ ಮುಂತಾದವುಗಳನ್ನು ಹಲವು ಪ್ರಸಂಗಗಳಲ್ಲಿ ಅನುಕರಣ ಮಾಡಿರುವುದು ವಿದ್ವಾಂಸರ ಗಮನಕ್ಕೆ ಬಂದಿದೆ. ಬಸವನಾಳರೂ ಈ ವಿಷಯವನ್ನು ಒಪ್ಪಿದ್ದಾರೆ. ಜೇನ್ನೊಣದಂತೆ ಹಲವು ಪುಷ್ಪಗಳ ಮೇಲೆ ಹಾರಾಡಿ ಮಕರಂದವನ್ನು ತಿರಿದು ತಂದು ಕಾವ್ಯದ ಜೇನುಗೂಡನ್ನು ಕವಿ ಕಟ್ಟಿದ್ದಾನೆ. ಆದರಲ್ಲಿರುವ ಜೇನುತುಪ್ಪದ ಒಡೆತನ ಷಡಕ್ಷರದೇವನದೇ. ಅದರ ಮಾಧುರ್ಯದ ಕೀರ್ತಿ ಅವನದೇ.

ಉಳಿದ ಕವಿಗಳನ್ನು ಷಡಕ್ಷರದೇವನು ಅಲ್ಲೋ ಇಲ್ಲೋ ಅನುಕರಣಮಾಡಿದ್ದರೂ ಕುಮಾರವ್ಯಾಸನನ್ನು ಮಾತ್ರ ಆದ್ಯಂತವೂ ಅನುಕರಿಸಿದ್ದಾನೆ— "ಶಬರಶಂಕರ ವಿಳಾಸ" ದಲ್ಲಿ ! ಈ ಮಾತಿನಲ್ಲಿರುವ ಸತ್ಯವನ್ನು ಸಾರುವುದಕ್ಕೆ ಇಬ್ಬರೂ ಕವಿಗಳ ಕೃತಿಗಳಿಂದ ಒಂದ ನ್ನೊಂದು ಹೋಲುವ ಸಂದರ್ಭಗಳನ್ನೂ ಅದೆಷ್ಟೋ ಉದಾಹರಣೆಗಳನ್ನು ಉಲ್ಲೇಖಿಸ ಬಹುದು.

೧. **ಕುಮಾರವ್ಯಾಸ :** ಕೆರಳಿದನು ಹೇರಂಬ ! ಗುಹನಬ್ಬರಿಸಿದನು ! ರೋಷ ದಲಿ ಮಸಗಿತು ತರತರದ ವರವೀರಭದ್ರಾದ್ಯಖಿಳ ಭೂತಗಣ ! ಹರನು ಕಂಡನು " ಇದೇನಚ್ಚರಿ ! ಧನಂಜಯನು ಎಮಗೆ ನೂರ್ಮಡಿ ಕರಹಿತವ ನಿಮ್ಮಿಂದ ! ನೀವ್ ಗಜಬಜಿಸಬೇಡ!" ಎಂದ. ಧನಂಜಯನು ಅನಿತು ಶರವನು ಕಡಿದು "ಎಸುಗೆಯೊಳ್ಳಿತು! ಶಬರನತಿ ಸಾಹಸಿಕನೈ ! ಬಿಲ್ಲಾಳಲಾ, ಸರಿಬೆಸನನು ಎಚ್ಚನೆಮ್ಮೊಡನೆ! ಮಝು ಪೂತು ಹಾಯ್! ಪಾರ್ಥನ ಅಂಬಿನ ಮೂಡಿಗೆಯ ಸಂವರಣೆ ಸವೆದುದು, ಸವೆಯದಾಟೋಪ!" "ಎಲೆ ಕಿರಾತ, ಕಿರಾತರೊಳು ಅಗ್ಗಳಿಯನಹೆಯೋ! ದೇವದಾನವರೊಳಗೆ ಸೈರಿಸಿ ನಿಲುವನಾವನ ನಮ್ಮ ವಿಲಗದಲಿ? ಅಳುಕದಿರು. ಕಲಿಯಾಗು !"

**ಷಡಕ್ಷರದೇವ :** ಮುಳಿದು ಗಜಾಸ್ಯನಬ್ಬರಿಸಿದಂ! ಕೆರಳ್ದಂ ಗುಹಂ! ರೋಷ ಮುಜ್ವಳಿಸಿ ಗಣಾಳಿ ಗರ್ಜಿಸಿದು ಆ ನರನೇಳ್ಗೆಗೆ ! ಚಿತ್ರಮಿಂತಿದೇಂ ಕಳವಳಂ! ಎನ್ನ ಭಕ್ತನಿವಂ! ಈತನೊಳಗಾಂಪ ವಿನೋದಮುಂಟು ! ನಿಶ್ಚಳತೆಯೊಳಿರ್ಪುದು! ಎಂದ— ವರ್ಗೆ ನೇಮಿಸಿದಂ!...ಶರವೃಂದಂ ಮಾಣದೆಲ್ಲಂ ಕಡಿವಡೆದು, "ಎಲೆಶಬರ ನಿನ್ನ ಪ್ರಥು ಭುಜಬಲಂ ಒಳ್ಳಿತು! ಎಸುಗೆ ಪೊಸತು ! ಬಿಲ್ಲಾಳ್ತನದೊಳ್ ಕಲಿ ನೀನಲ್ಲದೆ ಪೆರರಾರ್? ಛಲದಿಂ ಸಮನೆನಿಸಿ ಕಾದಿದಯ್ ಬಿಡದೆನ್ನೊಳ್! ಅರರೆ, ಭಪದೀಯ ಸಾಹಸವು ಅತಿಶ

ಯವು !.... ಸವೆದುದು ನಿಷಂಗಶರತತಿ, ಸವೆಯದು ಕೋಪಾಗ್ನಿ!" "ಕಿರಾತರೊಳು ನೀನು ಉರುತರ ಸಾಹಸಾಂಕನೆನಿಪಯ್! ನಿನಗಾರ್ ಸರಿವರ್ಪರ್? ಅಳ್ಕಿದೆ. ಓಸರಿಸದೆ ನಿಲ್ವುದಿನ್ನುಂ !"

ಹೀಗೆ ಅನೇಕ ಪ್ರಸಂಗಗಳಲ್ಲಿ ಕುಮಾರವ್ಯಾಸನಿಗೆ ಷಡಕ್ಷರದೇವನು ಋಣಿಯಾಗಿದ್ದರೂ, ಷಡಕ್ಷರದೇವನ ಸತ್ವ ಸಾಮರ್ಥ್ಯ ಎಳ್ಳಷ್ಟೂ ಕಡಿಮೆಯಾಗಿಲ್ಲ. ಕುಮಾರವ್ಯಾಸನ ಶಬ್ದ, ಪದಸ್ವರೂಪ, ವಾಕ್ಯಗಳಲ್ಲಿ ತನ್ನತನದ ಮುದ್ರೆ ಜಡಿದು ಹೊಸ ತೇಜಸ್ಸು ಹೊರ ಹೊಮ್ಮುವಂತೆ ರಚಿಸಿರುವ ಕಾವ್ಯ ಕೌಶಲ್ಯದಿಂದ ಷಡಕ್ಷರದೇವನ ವ್ಯಕ್ತಿತ್ವ ಅಚ್ಚೊತ್ತಿ ಸಹೃದಯರ ಎದೆಯಲ್ಲಿ ನೆಲೆಸಿ ನಿಲ್ಲುತ್ತದೆ. ಅಂತೆಯೇ ಅವನು ಕನ್ನಡದ ಚಿರಂತನ ಕವಿಗಳಲ್ಲಿ ಹೆಮ್ಮೆಯಿಂದ ನೆನೆಯುವ ಹಿರಿಯ ಕವಿಯಾಗಿದ್ದಾನೆ.

ಪಂಪಕವಿಯನ್ನು ರನ್ನನು ಹೀಗೆಯೇ ಅನುಸರಿಸಿದ್ದಾನೆ. ಗ್ರಂಥದ ಹೆಸರಿಡುವುದರಿಂದ ಮೊದಲ್ಗೊಂಡು ಸನ್ನಿವೇಶ ರಚನೆ, ಕಥಾಸರಣಿ, ಶಬ್ದಗಳ ಬಳಕೆ, ವಾಕ್ಯ ರಚನಾ ಪದ್ಧತಿ–ಎಲ್ಲದರಲ್ಲಿಯೂ ರನ್ನನು ಪಂಪನ ಅನುಕರಣೆ ಮಾಡಿದ್ದಾನೆ. ಆದರೆ ರನ್ನನ ಶಕ್ತಿ–ರಭಸ–ಜೋರು ಪಂಪನ ಕೃತಿಯಲ್ಲಿ ಇಲ್ಲ. ಹಾಗೆಯೇ ಷಡಕ್ಷರದೇವನೂ ಕೂಡ. ರನ್ನ ಮತ್ತು ಷಡಕ್ಷರ ದೇವ ಇಬ್ಬರ ಸ್ವಭಾವವೂ ಒಂದೇ ರೀತಿಯದು. ಇಬ್ಬರಲ್ಲಿಯೂ ಕಾವ್ಯದ ಕ್ರಾಂತಿ, ಓಜಸ್ಸು, ಸಾಹಸ, ಶೌರ್ಯ ತುಂಬಿ ತುಳುಕುತ್ತದೆ. ಇಬ್ಬರಲ್ಲಿಯೂ ಸಂಭಾಷಣಾ ಚಾತುರ್ಯ ನಾಟಕೀಯ ಪ್ರತಿಭೆ ಅಸಾಮಾನ್ಯವಾದುದು; ಅನ್ಯತ್ರ ನೋಡಲು ಸಿಗದು. ಅಂತೆಯೇ ಪಂಪನಿಂದ ರನ್ನನ ಶಕ್ತಿ ಕಡಿಮೆಯಾಗಲಿಲ್ಲ. ಕುಮಾರವ್ಯಾಸನಿಂದ ಷಡಕ್ಷರದೇವನ ಸಾಮರ್ಥ್ಯ ಕುಂದಲಿಲ್ಲ.

ಕುವೆಂಪು ರನ್ನನನ್ನು "ಶಕ್ತಿಕವಿ" ಎಂದು ಕರೆದಿದ್ದಾರೆ. ಹಾಗೆ ಷಡಕ್ಷರ ದೇವನೂ "ಶಕ್ತಿ–ಕವಿ"ಯೇ ಆಗಿದ್ದಾನೆಂದು ಹೇಳಬಹುದು. ಪಂಪನ ಹಳೆಯ ತಾಮ್ರದ ತಂತಿಯಲ್ಲಿ (ಶಬ್ದಸಮೂಹದಲ್ಲಿ) ರನ್ನನು ತನ್ನ ಹೊಸ ವಿದ್ಯುತ್ ಶಕ್ತಿಯನ್ನು ಹರಿಯಿಸಿದ್ದಾನೆ,—ಎಂದು ಕುವೆಂಪು ಅವರು ರನ್ನನ ಶಕ್ತಿಯ ಬಗ್ಗೆ ಹೆಮ್ಮೆಯಿಂದ ಪ್ರಶಂಸೆಮಾಡಿದ್ದಾರೆ. ಅದೇ ಮಾತನ್ನು ಷಡಕ್ಷರದೇವನ ಬಗ್ಗೆ ಹೇಳಿದರೂ ಅಚ್ಚುಕಟ್ಟಾಗಿ ಹೊಂದುತ್ತದೆ.

ಹಿಂದಿನ ಹಿರಿಯ ಕವಿಗಳ ಪ್ರಭಾವ ತರುವಾಯದ ಕವಿಗಳ ಮೇಲೆ ಇದ್ದೇ ಇರುತ್ತದೆ. ಆದರೆ ಆ ಪ್ರಭಾವದಿಂದ ಹೊರಬಂದು ತೋರುವ ಶಕ್ತಿ ಪ್ರಕಟವಾದರೆ ಆಗ ತರುವಾಯದ ಕವಿಗಳು ಸಾರ್ಥಕ್ಯಗೊಳ್ಳುತ್ತಾರೆ; ತಮ್ಮ ಶಕ್ತಿಯಿಂದ ಸ್ವತಂತ್ರರಾಗಿ ಉಳಿಯುತ್ತಾರೆ. ಪ್ರಭಾವದ ಪ್ರವಾಹದಿಂದ ಈ ಹೊರ ಬಂದು ದಡಮುಟ್ಟಿದ ಮಹಾಕವಿ ಷಡಕ್ಷರದೇವ ಎಂದೆಂದಿಗೂ ಅಮರ. ಅವನ ಕಾವ್ಯ ಕನ್ನಡಿಗರಿಗೆ ಚಿರಚೇತನದ ಬುಗ್ಗೆ! ಅನಂತಸ್ಫೂರ್ತಿಯ ಸೆಲೆ! ಶಾಂತಿ ಸಂತೃಪ್ತಿಗಳನ್ನು ನೀಡುವ ನೆಲೆ! □

# ರತ್ನಾಕರವರ್ಣಿಯ ಮೇಲಾದ ವೀರಶೈವ ಪ್ರಭಾವ

ಡಾ. ಎಂ. ಜಿ. ಜಿರಾದಾರ

ಕನ್ನಡ ಕವಿಕುಲೋತ್ತುಂಗರಲ್ಲಿ ರತ್ನಾಕರನೂ ಒಬ್ಬ ಎನ್ನುವ ಮಾತು ನಿರ್ವಿವಾದ. ಪಂಪ ರನ್ನ ಹರಿಹರ ಕುಮಾರವ್ಯಾಸರ ಸಾಲಿನಲ್ಲಿ ರತ್ನಾಕರನಿಗೂ ಒಂದು ಆಸನ ಮೀಸಲು. ಕನ್ನಡ ವಾಙ್ಮಯ ಪ್ರಪಂಚದ ಸ್ವಾತಿಕೆ ಶ್ರೀಮಂತಿಕೆಯಲ್ಲಿ ರತ್ನಾಕರನಿಗೂ ದಟ್ಟ ಪಾಲು ಸಲ್ಲುತ್ತದೆಂಬುದನ್ನು ತೀಕ್ಷ್ಣಮತಿಯ ಪಂಡಿತರೆಲ್ಲರೂ ಒಪ್ಪಿಕೊಳ್ಳುತ್ತಾರೆ.

ಕನ್ನಡ ಕವಿಗಳ ಕಾವ್ಯ ನಿರ್ಮಾಣಕ್ಕೆ ಸ್ವಧರ್ಮ ಪ್ರೇರಣೆ ವಿಪುಲವಾಗಿದ್ದರೂ,ಕೆಲವು ಕಾವ್ಯಗಳಾದರೂ ಸ್ವಧರ್ಮ ಸೀಮೋಲ್ಲಂಘನ ಮಾಡಿ, ವಿಶ್ವಧರ್ಮಕ್ಕೆ ಸಂಬಂಧಿಸಿದ ಕಾವ್ಯ ಗಳಾಗಿ ಮೂಡಿ ಬಂದಿವೆ.

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ರತ್ನಾಕರನದೊಂದು ವೈಶಿಷ್ಟ್ಯಪೂರ್ಣ ವ್ಯಕ್ತಿತ್ವ ಎನ್ನುವ ಮಾತು ಕೇವಲ ರೂಢಿಯ ಮಾತಲ್ಲ. ಅವನ ಕಾವ್ಯ ವಸ್ತು ಛಂದಸ್ಸು ಶೈಲಿ ಜೀವನದೃಷ್ಟಿ ಎಲ್ಲದರಲ್ಲಿಯೂ ಇಂಥವರನ್ನು ಅನುಕರಿಸಿದ್ದಾನೆಂದು ಹೇಳಲಾಗದ ನಿಲುವು ಅವನದು. ಇದಕ್ಕೆಲ್ಲ ಮುಖ್ಯ ಕಾರಣ ಅವನ ವೈಶಿಷ್ಟ್ಯಪೂರ್ಣವಾದ ಬದುಕೇ ಎಂದು ಹೇಳಬೇಕು.

ರತ್ನಾಕರ ಹುಟ್ಟು ಜೈನ, ಅದನ್ನು ಮುಂದೆ ಕಾರಣಾಂತರದಿಂದ ವೀರಶೈವನಾದ ಎಂಬುದು ನಿರ್ವಿವಾದ.

ಇದಕ್ಕೆ ಸಾಕ್ಷಿಯಾಗಿ ಶ್ರೀ ಉಗ್ರಾಣ ಮಂಗೇಶರಾಯರು ಹೇಳುವ ದಂತ ಕತೆ :

"......ಆ ರಾಜನು ಈ ಕವಿಯ ಪ್ರತಿಭೆಗೂ ಆತನ ಯೋಗ ಸಾಮರ್ಥ್ಯಕ್ಕೂ ಮೆಚ್ಚಿ, ಆತನು ಜಿನಮತವನ್ನು ಬಿಟ್ಟು, ತನ್ನ ವೀರಶೈವ ಮತವನ್ನವಲಂಬಿಸಬೇಕೆಂದು ಬೇಡಿಕೊಳ್ಳಲು, ಆತನ ಬಲುಮೆಗೊಳಗಾಗಿ ಕವಿಯು ಲಿಂಗವನ್ನು ಕಟ್ಟಿಕೊಂಡು ಶೈವ ನಾದನು......" ಎಂದು ಉಲ್ಲೇಖಿಸುತ್ತದೆ.

ಎರಡನೆಯದಾಗಿ ಕ್ರಿ. ಶ. ೧೮೩೮ ರಲ್ಲಿದ್ದ ಜೈನನಾದ ದೇವಚಂದ್ರನೇ ತನ್ನ ರಾಜಾವಳಿ ಕಥೆಯಲ್ಲಿ ಸ್ವಧರ್ಮದಿಂದ ಬಹಿಷ್ಕೃತನಾದ ರತ್ನಾಕರನನ್ನು ಕುರಿತು :

"………ಆತ್ಮ ಜ್ಞಾನಿಗೆ ಜಾತಿ ಕುಲ ಯಾವುದಾದೊಡಂ ಸಮಮೆಂದು ಲಿಂಗಮಂ ಕಟ್ಟಿಕೊಂಡು ವೀರಶೈವ ಶಾಸ್ತ್ರಂಗಳಂ ಬಸವ ಪುರಾಣ ಮೊದಲಾಗೆ ಮಾಡಿ ಕೆಲವು ದಿನದಿಂ ಮೇಲೆ ಉಪಶಮನವಂತಾಳ್ದು ನಂಬಿ ನಡೆದಂ………" ಎಂದು ಬರೆಯುತ್ತಾನೆ.

ಜನಜನಿತವಾದ ದಂತ ಕಥೆ, ಜೈನನೇ ಆದ ದೇವಚಂದ್ರನ ಹೇಳಿಕೆ ರತ್ನಾಕರ ಸ್ವಧರ್ಮದಿಂದ ಬಹಿಷ್ಕೃತನಾಗಿ ವೀರಶೈವನಾದ ಎಂಬ ಮಾತನ್ನು ಖಚಿತಪಡಿಸುತ್ತವೆ.

ಇವೆಲ್ಲಕ್ಕೂ ಮಿಕ್ಕು ಕವಿ ವೀರಶೈವ ಧರ್ಮ ಪ್ರಭಾವಕ್ಕೆ ಒಳಗಾಗಿದ್ದನೆಂಬುದನ್ನು ಅವನ ಕಾವ್ಯಾಂತರ್ಗತ ಪ್ರಮಾಣಗಳೂ ಸ್ಪಷ್ಟಪಡಿಸುತ್ತವೆ.

ರತ್ನಾಕರ ವಿರಚಿತ ಕೃತಿಗಳೆಂದರೆ :

ಮೂರು ಶತಕಗಳು :– ೧) ರತ್ನಾಕರಾಧೀಶ್ವರ ಶತಕ
೨) ಅಪರಾಜಿತೇಶ್ವರ ಶತಕ ಮತ್ತು
೩) ತ್ರಿಲೋಕ ಶತಕ

ಮಹಾ ಕಾವ್ಯ : ಭರತೇಶ ವೈಭವ

ಇದಲ್ಲದೆ ಕೆಲವು ಹಾಡುಗಳನ್ನು ಬರೆದಿದ್ದಾನೆ,

ಕನ್ನಡ ಶತಕ ಸಾಹಿತ್ಯ ಒಳ್ಳೇ ಹುಲುಸಾಗಿದೆಯಾದರೂ ಸತ್ವಯುತವಾದ ಶತಕಗಳು ತೀರ ವಿರಳ. ಅವುಗಳಲ್ಲಿ ಹರಿಹರನ ಪಂಪಾಶತಕ, ರಕ್ಷಾಶತಕ, ರತ್ನಾಕರನ ರತ್ನಾಕರಾಧೀಶ್ವರ ಶತಕ, ಅಪರಾಜಿತೇಶ್ವರ ಶತಕ ಮತ್ತು ಪುಲಿಗೆರೆಯ ಸೋಮನ ಸೋಮೇಶ್ವರ ಶತಕ, ಈ ಕೊನೆಯ ಶತಕವನ್ನು ರತ್ನಾಕರನೇ ರಚಿಸಿದನೆಂಬ ಸತ್ಯವಲ್ಲದ ವದಂತಿಯೊಂದು ಹಬ್ಬಿಕೊಂಡಿತ್ತು. ಇದಕ್ಕೆ ಕಾರಣ ಕೆಳಗಿನ ಈ ಪದ್ಯ.

" ವರಸಮ್ಯಕ್ತ್ವ ಸುಧರ್ಮ ಜೈನ ಮತದೊಳ್ತಾಂ ಪುಟ್ಟಿಯಾ ದೀಕ್ಷೆಯಂ
ಧರಿಸೀ ಸಂಸ್ಕೃತ ಕಾವ್ಯಶಾಸ್ತ್ರಗಳನುಂ ನಿರ್ಮಾಣಮಂ ಮಾಡುತಂ
ವರರತ್ನಾಕರ ಯೋಗಿಯೆಂದು ನಿರುತಂ ವೈರಾಗ್ಯ ಬಂದೇರಲಾಂ
ಹರದೀಕ್ಷಾವೃತನಾದೆನೈ ಹರಹರಾ ಶ್ರೀ ಚನ್ನಸೋಮೇಶ್ವರಾ ‖ "

ಇದು ಪ್ರಕ್ಷಿಪ್ತವೆಂದು ಕೆಲವರೂ, ಇದು ರತ್ನಾಕರನ ರತ್ನಾಕರಾಧೀಶ್ವರ ಶತಕದಲ್ಲಿಯ ಒಂದು ಪದ್ಯವಿರಬೇಕು. ಅದರ ಕೊನೆಯ ಮುದ್ರಿಕೆಯಾದ "ರತ್ನಾಕರಾಧೀಶ್ವರಾ" ತೆಗೆದು "ಶ್ರೀ ಚನ್ನಸೋಮೇಶ್ವರಾ" ಎಂದು ಮಾಡಿರಬೇಕೆಂದು ಕೆಲವರೂ ಅಭಿಪ್ರಾಯಪಡುತ್ತಾರೆ. ಇದು ಪ್ರಕ್ಷಿಪ್ತವೆನ್ನುವ ಮಾತೇ ಸತ್ಯ. ಯಾಕೆಂದರೆ ಈ ಪದ್ಯ ರತ್ನಾಕರಾಧೀಶ್ವರ ಶತಕದ ಯಾವ ಪ್ರತಿಯಲ್ಲಿಯೂ ಉಪಲಬ್ಧವಿಲ್ಲ, ಯಾರೊ ಕವಿ ವೀರಶೈವನಾಗಿದ್ದನ್ನು ಹೆಚ್ಚು ಸ್ಫುಟಗೊಳಿಸಲು ಈ ಪದ್ಯ ಸೇರಿಸಿರಬೇಕು. ರತ್ನಾಕರ ವೀರಶೈವನಾಗಿದ್ದನೆನ್ನಲು ಇದೂ ಒಂದು ಆಧಾರವಾಗಬಹುದು ಅಷ್ಟೆ.

ಇದೆಲ್ಲ ವಿಷಯ ಇಲ್ಲಿ ಪ್ರಸ್ತುತ ಅಲ್ಲವಾದರೂ ವೀರಶೈವ ಪ್ರಭಾವ ರತ್ನಾಕರನ ಮೇಲೆ ಎಷ್ಟು? ಎಂಬುದೇ ಇಲ್ಲಿ ಪ್ರಸ್ತುತ; ಪ್ರಧಾನ,

ಹರಿಹರನ ಶತಕಗಳು ಮುಂದೆ ಬಂದ ಶತಗಳಿಗೆಲ್ಲ ಭದ್ರ ಬುನಾದಿಯನ್ನು ಹಾಕಿಕೊಟ್ಟುವಲ್ಲದೆ ತಮ್ಮ ಪ್ರಭಾವವನ್ನು ಯಾವ ಶತಕಗಳ ಮೇಲೆಯೂ ಬೀರದೆ ಬಿಡಲಿಲ್ಲ.

ರತ್ನಾಕರ ಬಸವ ಪುರಾಣ ಮೊದಲಾದ ವೀರಶೈವ ಗ್ರಂಥಗಳನ್ನು ಅಭ್ಯಾಸ ಮಾಡಿದವ; ಶತಕ ರಚನೆಗೆ ಕೈಹಾಕಿದಾಗ ಹರಿಹರನ ಶತಕಗಳನ್ನು ಅವಲೋಕಿಸದೆ ಇರುವುದೆಂತು? ಅವುಗಳನ್ನು ಚೆನ್ನಾಗಿ ಅಭ್ಯಸಿಸಿದ್ದನಾದುದರಿಂದಲೇ ರತ್ನಾಕರನ ಶತಕಗಳ ಮೇಲೆ ಹರಿಹರನ ಶತಕಗಳ ಸ್ಪಷ್ಟ ಪ್ರಭಾವ ಮೂಡಿ ಬಂದಿದೆ. ಕೇವಲ ಭಾವ ಭಾಷೆಗಳಲ್ಲಷ್ಟೇ ಅಲ್ಲದೆ, ಹರಿಹರನ ಸರ್ವಾರ್ಪಣ ಭಕ್ತಿ, ಸರ್ವಶಕ್ತನಲ್ಲಿ ಸಮ್ಮಿಳ–ನಾಕಾಂಕ್ಷೆ, ಸಂಸಾರದ ಕ್ಷಣಭಂಗುರತೆ ಮತ್ತು ಇಂದ್ರಿಯ ದೌರ್ಬಲ್ಯ ಮೊದಲಾದ ವಿಷಯಗಳನ್ನು ಪ್ರತಿಪಾದಿಸುವಲ್ಲಿಯೂ ಹರಿಹರನಿಂದ ರತ್ನಾಕರ ದೂರಸರಿದಿಲ್ಲ. ಹಲವು ಕಡೆ ಅವನು ಹರಿಹರನ ಹಾದಿಯಲ್ಲೇ ಹೆಜ್ಜೆ ಇಟ್ಟುದನ್ನೂ ಕಾಣುತ್ತೇವೆ.

> ಬಸಿರೊಳ್ ಮಾಸೊತ್ತಿನೆತ್ತರ್ ಪಸರಿಸಿ ಕರುಳಿಂಸುತ್ತಿ ಮೂತ್ರಪುರೀಷಂ
> ಮುಸುಕಿಟ್ಟೆಲ್ಲಂಗದೊಳ್ ಕೆತ್ತಿರಲುದರ ಶಿಖಿಜ್ವಾಲೆಯಿಂದತ್ತಮಿತ್ತಂ
> ಕುಸಿಮುತ್ತುಂ ಪುಟ್ಟುವೊಂದುಜ್ಜುಗದೊಳೆ ಮರಣಾವಸ್ಥೆಯಂತಾಳ್ದು ಬಂದಾ
> ಯಾಸಮಂಚಿತ್ತಯಿಸಿ ಪಂಪಾಪುರದಾಸರ ರಕ್ಷಿಪ್ಪುದೆನ್ನಂ ॥ ಅ.ಪ ಶ. ೩ ॥

ಈ ಜನನದ ದುರವಸ್ಥೆಯನ್ನು ರತ್ನಾಕರನಿಂದಲೂ ಕೇಳಿ.

> 'ಮಾಸುಮುಸುಂಕಿ ತಾಯೊಡಲೊಳೆಂತಿರ್ಪುದು ಮೂತ್ರಮಾರ್ಗದೊಳ್
> ಹೇಸದೆ ಬರ್ಪುದೆಂತು ಮೊರೆದೊಳ್ಮಲ ಮೂತ್ರದೊಳಾಳುತೇಳುತಂ
> ಕೂಸೆನಿಸಿರ್ಪುದೆಂತುಟದನಾಂಮರೆದಾಗಳೆ ಠಕ್ಕು ಜವ್ವನಂ
> ಸಾಸದವೆಂದು ನಚ್ಚಿದೆನಲಾ ಮತಿಮೋರಪರಾಜಿತೇಶ್ವರ ॥ ಅ ಪ.ಶ. ೪೬ ॥

ಕಾಮನ ಕೈಗೊಂಬೆಯಾಗಿ ತನ್ನತನದ ನಿಜವನರಿಯದೆ ಕಷ್ಟಪಡುವ ಈ ಮನಸ್ಸಿನ ಸ್ಥಿತಿಯನ್ನು ಹರಿಹರನಿಂದ ಕೇಳಿ.

> 'ಸ್ತ್ರೀಮಾತ್ರಂ ನೇತ್ರದತ್ತಲ್ ಸುಳಿದೊಡೆ ಮನವಿರ್ಭಾಗವಾಗುತ್ತೆ ತಾಪ
> ಸ್ತೋಮಂ ಕೈಮೀರಿ ಲಜ್ಜಾರಸಮುಡುಗಿ ವಿವೇಕಂ ಕಳ್ದೋದಿರಾಗಂ
> ಕೈಮಿಕ್ಕಾವಾವನೇನೆಂದರಿಯದ ತೆರನಂ ಮಾಡುತ್ತಿರ್ದಪ್ಪುದಿಂತೀ
> ಕಾಮಂ ಕಾಮಾರಿ ಪಂಪಾಪುರದರಸ ವಿರುಪಾಕ್ಷ ರಕ್ಷಿಪ್ಪುದೆನ್ನಂ ॥ ರಕ್ಷಾ ಶ. ೬ ॥

ಇದೇ ವಿಚಾರವನ್ನು ರತ್ನಾಕರನಲ್ಲಿ ನೋಡಿ :

> 'ಎತ್ತೆತ್ತಂ ಲತಾಂಗಿಯರ್ಸುಳಿದರತ್ತತ್ತಾಡುಗಂ ಕಣ್ಗಳೆ
> ತೆತ್ತಂ ಕಾಮಿನಿಯರ್ಮೊಗಂದೆಗೆದರತ್ತತ್ತೊಂದುಗುಂ ಜಿಹ್ವೆಯು
> ತೆತ್ತಂ ಸರಿಮಿಂಡಿಯರ್ತೆಗೆದರತ್ತತೆಯ್ದುಗುಂ ಬುದ್ಧಿ ನಿ
> ನಿಮ್ಮತ್ತ ಬಾರದು ಕಟ್ಟನೇವೆನಕಟಾ ರತ್ನಾಕರಾಧೀಶ್ವರಾ॥ ॥ರತ್ನಾ. ಶ.೫ ॥

ವಿಷಯ ಸಾದೃಶ್ಯವಿದ್ದರೂ ವಿವರಣೆಯ ವಿಧಾನದಲ್ಲಿ ಮಾತ್ರ ಮಹದಂತರವಿದೆ. ಹರಿಹರನ ಮಾನಸಿಕ ವಿಶ್ಲೇಷಣೆ ರತ್ನಾಕರನಲ್ಲಿಲ್ಲ. ಕೇವಲ ಇಂದ್ರಿಯ ವ್ಯವಹಾರಮಾತ್ರ ಎದ್ದು ಕಾಣುತ್ತದೆ.

ಇಂದ್ರಿಯಗಳ ಕ್ರಿಯೆಗಳೆಲ್ಲ ಶಿವನ ಸೇವೆಗಾಗಿ ಮೀಸಲು ಎನ್ನುವ ಹರಿಹರ ನೊಂದಿಗೆರತ್ನಾಕರನೂ ದನಿಗೂಡಿಸುವುದನ್ನು ನೋಡಿ:

'ನೋಡದ ಕಣ್ಗಳೇಕೆ ಸಲೆ ಕೇಳದ ಕರ್ಣಮದೇಕೆ ಭಕ್ತಿಯಿಂ
ಪಾಡದ ಬಾಯಿಯದೇಕೆ ಪೆಸರ್ಗೊಳ್ಳದ ಜಿಹ್ವೆಯದೇಕೆ || ಪಂಪಾ.ಶ ೮ ||

'ನಾಲಗೆಗಾವುದಿಚ್ಛೆ ತವನಾಮ ರಸಾಮನಪೊಂದೆ ನಿನ್ನ ಚಿ
ತ್ತಾಲಯದೊಳ್ಪೆಳರ್ಪ ಮಣಿದೀಪಮದಾವುದು ನಿನ್ನ ರೂಪೆ || ಅಪ.ಶ. ೪೪ ||

ಕಾವ್ಯ ಪವಿತ್ರವಸ್ತು, ಅದನ್ನು ಅಪಾತ್ರದಲ್ಲಿ ಬಳಸಬಾರದು ಎನ್ನುವ ಮಾತ್ತ ಈರ್ವರದು:

"ಮನುಜರ ಮೇಲೆ ಸಾವರಮೇಲೆ ಕನಿಷ್ಠರಮೇಲಕ್ಕಟಾ
ತನಗಿಂದ್ರ ಚಂದ್ರ ರವಿಕರ್ಣ ದಧೀಚಿ ಬಲೀಂದ್ರನೆಂದು ಪೇಳ್
ಅನವರತಂ ಪೊಗಳ್ದು ಕೆಡಬೇಡಲೆ ಮಾನವ ನೀನರ್ಹನಿಶಂ
ನೆನೆಪೊಗಳರ್ಚಿಸೆನ್ನುಯ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ
|| ಪಂಪಾ.ಶ. ೮೨ ||

ಅಲ್ಪರನ್ನು ಅಮರರಂತೆ ಹೊಗಳಲು ಕಾವ್ಯ ಬಳಸಬಾರದು. ಹಂಪೆಯಾಳ್ದನ ಹೊಗಳಿಕೆಗೆ ಮಾತ್ರ ಈ ಕಾವ್ಯ ಮೀಸಲು, ಹರಿಹರ ಹರನಿಗೇ ನಾಲಗೆಯನ್ನು ಮಾರಿಕೊಂಡವನಲ್ಲವೇ ?

ರತ್ನಾಕರನೂ ಕವಿತಾಶಕ್ತಿಯನ್ನು ಸದ್ಧರ್ಮಕ್ಕಾಗಿಯೇ ಬಳಸಬೇಕು. ಅದು ಎಲ್ಲರ ಮನೋವಿಶುದ್ಧಿ ಬುದ್ಧಿ ಸಾಫಲ್ಯಗೊಳಿಸಬೇಕು ಎಂದು ಹೇಳುತ್ತಾನೆ.

"ಕವಿತಾ ಶಕ್ತಿಯೆ ಕಲ್ಪವಲ್ಲಿಯದನಾ ಸದ್ಧರ್ಮಪೆಂಬ ಮೇ
ರುವಿನೊಳ್ಪಿತ್ತಿ ಮನೋವಿಶುದ್ಧಿ ಬಲವೀರ್ಯಂ ಬುದ್ಧಿ ಸಾಫಲ್ಯಮಾ
ಕವಿಯುಂ ಸರ್ವರುಮುಣ್ಮರಾ ಫಲಮನಿತ್ತಲ್ಕಾಣ್ದು ಮಿಥ್ಯಾತ್ವಮಾ
ರವ ದೊಳ್ಪಿತ್ತಿ ಬಳಲ್ದರೇಕಕಟಾ ರತ್ನಾಕರಾಧೀಶ್ವರಾ || ರತ್ನಾ ಶ ೬೯ ||

'ಮಾನಿನಿಯರಂಗಾಂಗಗಳನ್ನು ಬಣ್ಣಿಸುವ ನಾನೇನು ಕವಿಯೋ ಕಪಿಯೋ ?' ಎಂದು ತನ್ನನ್ನು ಪ್ರಶ್ನಿಸಿಕೊಂಡಿದ್ದಾನೆ.

ಭರತೇಶ ವೈಭವದ ಆದಿಯಲ್ಲಿಯೂ ರತ್ನಾಕರನ ಈ ಕಾವ್ಯೋದ್ದೇಶದ ಪ್ರಜ್ಞೆ ಪ್ರಕಟಗೊಂಡುದನ್ನು ಕಾಣಬೇಕು.

" ಹೊಲ್ಲದ ನೃಪರಿಗೆ ಇಲ್ಲದ ಸದ್ಗುಣಗಳನಿಟ್ಟು
ಸೊಲ್ಲಿಸ ಕೃತಿ ಮಾರ್ಗವಿದಲ್ಲ || ಭವೈ. ಆಸ್ಥಾನ ೨೨ ||

ಎಂದು ಹೇಳುವಾಗಲೂ ಸಾವಕೆಡುವ ಈ ಲೋಗರ ಬಣ್ಣನೆಗೆ ಕಾವ್ಯವನು ಬಳಸಲಾಗದೆಂದು ಸಾರಿ ಹೇಳುತ್ತಾನೆ.

ಹೀಗೆ ಹರಿಹರನ ಶತಕಗಳ ಪ್ರಭಾವ ರತ್ನಾಕರನ ಶತಕಗಳ ಮೇಲಾದುದನ್ನು, ಆ ಶತಕಗಳ ಆಮೂಲಾಗ್ರಾಭ್ಯಾಸದಿಂದ ಯಾರೂ ಅರಿಯಬಹುದು. ಆದರೆ ಅವು ಹರಿಹರನ ಶತಕಗಳ ಪಡಿನೆಳಲೆಂದು ಯಾರೂ ಭಾವಿಸಲಾಗದು. ಸ್ವತಂತ್ರ ಸತ್ವ, ಸ್ವಂತಿಕೆಯನ್ನು ರತ್ನಾಕರ ಮೆರೆದು ಜಿನಧರ್ಮದಿಂದ ಜನಧರ್ಮದ ವೈಶಾಲ್ಯಕ್ಕೆ ಏರುತ್ತಾನೆ. ಅವನು ಅಭ್ಯಾಸ ಸಂಸ್ಕಾರ ಪಡೆದುದು ಅಪರಾಧವೆಂದು ಭಾವಿಸಲಾಗದು.

ಚಾಮರಸನು ಇನ್ನೊಬ್ಬ ಪ್ರಭಾವಶಾಲಿ ವೀರಶೈವ ಕವಿ. ಅವನ ಪ್ರಭುಲಿಂಗ ಲೀಲೆಯ ಪ್ರಭಾವದ ಕೆಲವು ಪ್ರಯೋಗಗಳನ್ನು ಇಲ್ಲಿ ನೋಡಬಹುದು.

‘ ಸತ್ಯ ಶರಣರು ತಿಳಿವುದೀ ಪ್ರಭುಲಿಂಗ ಲೀಲೆಯನು ’

(ಪ್ರ. ಲಿ. ಮಂಗಲಾಚರಣ ೧೪)

‘ ದಾಯಿಗರು ಲಾಲಿಸುವುದೀ ಪ್ರಭುಲಿಂಗ ಲೀಲೆಯನು ’

(ಪ್ರ. ಲಿ. ಮಂಗ. ೧೧)

ಎಂದು ಚಾಮರಸ ಹೇಳಿದರೆ.

‘ ಪಾಪವ ಕೆಡಿಸಿ ಪುಣ್ಯವ ಮಾಡಿ ಸ್ವರ್ಗಕೆ
ಪೋಪೆವೆಂಬರೆಲ್ಲ ಕೇಳಿ ॥ ಭ. ವೈ. ಆಸ್ಥಾನ ೧೭ ॥

ಎನ್ನುತ್ತಾನೆ ರತ್ನಾಕರ.

‘ ಹೊತ್ತುಹೋಗದೆ ಪುಂಡರಾಲಿಪ
ಮತ್ತಮತಿಗಳ ಗೋಷ್ಠಿಯಲ್ಲಿದು.... ॥ ಪ್ರ.ಲಿ. ಮಂಗ ೧೭ ॥

‘ ಈ ಪುಣ್ಯ ಕಥೆ ಪುಣ್ಯಜೀವಿಗಳಿಗೆ ಮೆಚ್ಚು
ಕಾಪುರುಷರಿಗೆ ಮೆಚ್ಚಲ್ಲ. ॥ ಭ. ವೈ. ಆಸ್ಥಾನ ೧೭ ॥

............ಜನನದ
‘ ಕುತ್ತದಲಿ ಕುದಿಕುದಿದು ಕರ್ಮದ
ಕತ್ತಲೆಗೆ ಸಿಲುಕುವರ ಸೀಮೆಯ ಹೊಲಬು ತಾವಲ್ಲ
॥ ಪ್ರ.ಲಿ. ಮಂಗಲ ೧೭ ॥

‘ ಹೊಲ್ಲದ ನೃಪರಿಗಿಲ್ಲದ ಗುಣಗಳನ್ನಿಟ್ಟು
ಸೊಲ್ಲಿಪಕೃತಿ ಮಾರ್ಗವಲ್ಲ ॥ ಭ.ವೈ. ಆಸ್ಥಾ. ೨೨ ॥

‘ ವಿವರಿಸುವೊಡೀ ಲೀಲೆಯನು ಹೇ
ಳುವನು ದಿಟ ನಾನಲ್ಲ ಕೇ
ಳುವರು ಮಾನವರಲ್ಲವಿದು ಸಾಮಾನ್ಯತರವಲ್ಲ ॥ ಪ್ರ.ಲಿ. ಮಂಗ ೧೦ ॥

‘ ಕೃತಿಯು ಪೇಳ್ವಾತ ಸಾಮಾನ್ಯನಹುದು ಕಾವ್ಯ
ಪತಿ ಚಕ್ರಿ ಸಾಮಾನ್ಯನಲ್ಲ ॥ ಭ.ವೈ. ಆಸ್ಥಾನ. ೧೬ ॥

ಹೀಗೆ ಕಾವ್ಯದ ಆದಿಯಲ್ಲಿ ಹೇಳಿಕೊಂಡ ಈರ್ವರ ಮಾತಿನಲ್ಲಿ ಸಾಕಷ್ಟು ಸಾಮ್ಯವಿದೆ. ಕಾವ್ಯೋದ್ದೇಶ, ಕಾವ್ಯ ಕಲ್ಪನೆ ಹಾಗೂ ಕಾವ್ಯ ಪ್ರಯೋಜನಗಳಲ್ಲಿ ಈರ್ವರೂ ಒಮ್ಮತದವರು.

ಅಷ್ಟೇ ಅಲ್ಲ ಭರತೇಶನ ವ್ಯಕ್ತಿತ್ವವನ್ನು ಕಾವ್ಯದಲ್ಲಿ ಕಡೆದಿಡುವಾಗ ರತ್ನಾಕರನ ಚಿತ್ತದಲ್ಲಿ ಭಾರತ, ಭಾಗವತಗಳ ಕೃಷ್ಣ ನಡೆದು ಹೋದಂತೆ ಚಾಮರಸನ ಅಲ್ಲಮ ಪ್ರಭುವೂ ಸುಳಿದು ಹೋಗಿರಬೇಕೆನ್ನುವಲ್ಲಿ ಸಂಶಯವೇ ಇಲ್ಲ. ಕನ್ನಡ ಸಾಹಿತ್ಯ ಹಿಮ ವತ್ಪರ್ವತದ ಕೈಲಾಸ ಶಿಖರದಂತಿದ್ದ ಅಲ್ಲಮ ಪ್ರಭು, ಕೃಷ್ಣ, ಭರತೇಶರ ವ್ಯಕ್ತಿತ್ವದಲ್ಲಿ ಸಾಕಷ್ಟು ಸಾಮ್ಯ ಇದೆ.

ಚಾಮರಸ–ರತ್ನಾಕರರ ವೈಚಾರಿಕ ಸಾಮ್ಯಕ್ಕೆ ಇಲ್ಲೊಂದು ಚೆನ್ನಾದ ಉದಾಹರಣೆ ಕೊಡಬಹುದು.

"ಕುಱಿಗಳೋಪಾದಿಯಲಿ ಕಬ್ಬಿನ
ಹೊರಗಣೆಲೆಮನೆ ಮೇದಕಟ ಮೆಲ
ಕಿಱಿವುತಲ್ಪಸುಖಕ್ಕೆ ಸೋಲದೆ ಕಬ್ಬಿನೊಳು ರಸವ ॥
ನೆಱೆಸವಿವಗಜದಂತೆ ಭಕ್ತಿಯು
ತೆಱನ ತಿಳಿದಾಚರಿಸಬೇಕೆಂ
ದಱಿದವರು ಲಾಲಿಸುವುದೀ ಪ್ರಭುಲಿಂಗ ಲೀಲೆಯನು ॥
॥ ಪ್ರ ಲಿಂ. ಮಂಗಲ ೧೪ ॥

"ನರುಗಬ್ಬಿನೊಳಗಣ ರಸವ ಕಾಣದೆ ಪಶು
ಹೊರಗಣೆಲೆಯ ಸವಿವಂತೆ
ಅರಿದೊಳಗಾತ್ಮ ಸುಖವನುಣಲರಿಯದೆ
ಹೊರಗೆಳಸುವರಂಗ ಸುಖಕೆ" ॥ ಭ. ವೈ. ಆಸ್ಥಾನ ೧೦೫ ॥

"ಪಸುರೆಲೆಗಳ ಬಿಟ್ಟು ತನಿಗಬ್ಬಿನೊಳಗಣ
ರಸವಕೊಂಬಾನೆಗಳಂತೆ
ಹಸಗೆಟ್ಟು ತನುಸುಖಕೊಲಿಯದೆ ಕೆಲರು ಭೇ
ದಿಸಿ ನಿಜಸುಖವ ಭೋಗಿಪರು" ॥ ಭ ವೈ. ಆಸ್ಥಾನ ೧೦೬ ॥

ಒಂದು ಷಟ್ಪದಿ; ಇನ್ನೊಂದು ಸಾಂಗತ್ಯ. ಛಂದೋಬಂಧವೊಂದನ್ನುಳಿದರೆ ಬೇರಾವ ಭೇದವೂ ಇಲ್ಲಿ ಕಾಣದು.

ಈರ್ವರೂ ವೈಯಕ್ತಿಕ ಧರ್ಮ ಬಂಧನದಿಂದ ಹೊರಗಾದ ವ್ಯಕ್ತಿಗಳಾದರೂ ಕಾವ್ಯಾ ಭ್ಯಾಸದ ಸಂಸ್ಕಾರದಿಂದ ಹೊರಗಾಗುವುದು ಎಂಥ ಕವಿಗೂ ಕಷ್ಟದ ಕಾರ್ಯ.

ರತ್ನಾಕರನ ಭರತೇಶವೈಭವದ ತುಂಬ ವೀರಶೈವ ವಿಚಾರ, ತತ್ತ್ವ, ಪಾರಿಭಾಷಿಕ ಪದ ಉಪಮೆಗಳನ್ನು ಧಾರಾಳವಾಗಿ ಕಾಣುತ್ತೇವೆ. ಕವಿ ಅರಿತೊ ಅರಿಯದೆಯೊ, ತನ್ನ ವ್ಯಕ್ತಿತ್ವದಲ್ಲಡಕವಾದ ಪ್ರಭಾವವನ್ನು ತನ್ನ ಕೃತಿಯಲ್ಲಿ ಅಭಿವ್ಯಕ್ತಗೊಳಿಸಿದ್ದಾನೆ.

ಭೋಗ ಯೋಗಗಳು ಜೀವನದ ಎರಡು ತದ್ವಿರುದ್ಧ ಮುಖಗಳು. ಈ ಎರಡೂ ಮುಖಗಳನ್ನು ಒಂದೇ ವ್ಯಕ್ತಿತ್ವದಲ್ಲಿಳವಡಿಸಿಕೊಂಡಿರುವ ವಿಧಾನವನ್ನು ವೀರಶೈವ ಸಿದ್ಧಾಂತ ಬೋಧಿಸುತ್ತದೆ. ಜೈನಸಿದ್ಧಾಂತವಾದರೋ ವಿಶೇಷ ಭೋಗದಿಂದ ವಿರತಿ ಹೊಂದುವುದನ್ನು ಬಿಂಬಿಸುತ್ತದೆ. 'ವೀರಶೈವ' ಸಂಸಾರವಿರತಿ ಮಾರ್ಗವಲ್ಲ. ಭೋಗ ಬೇಡವೆಂದು ಅದು ಹೇಳದು. ಆದರೆ ಆ ಭೋಗ ಮೈಮರೆಸುವಂಥದಾಗಬಾರದು. ಭೋಗ "ಶಿವಭೋಗ"ವಾಗಬೇಕು; ಯೋಗ "ಶಿವಯೋಗ"ವಾದಂತೆ! ಒಂದೇ ವ್ಯಕ್ತಿಯಲ್ಲಿದ್ದು ಒಂದರೊಳಗೊಂದು ಬೆರೆಯದೆ ಎರಡೂ ಶಿವಾರ್ಪಿತವಾಗಬೇಕು ಎನ್ನುವ ವೀರಶೈವ ತತ್ತ್ವ ಭರತೇಶನ ಜೀವನದಲ್ಲಿ ಎದ್ದು ಕಾಣುತ್ತದೆ. ಸರ್ವವೂ ಶಿವಾರ್ಪಿತವೆಂದು ಭೋಗಿಸುವ ಭೋಗ ಅದೂ ಯೋಗವೇ ಎಂದು ವೀರಶೈವ ತತ್ತ್ವ ಪ್ರತಿಪಾದಿಸುತ್ತದೆ. ಭೋಗದ ಪ್ರಾಚುರ್ಯ ಅಧಿಕವಾಗಿ. ಯೋಗದ ವಿಚಾರವೂ ಸಾಕಷ್ಟು ಜೈನರಲ್ಲಿದೆಯಾದರೂ ಭೋಗದಲ್ಲಿದ್ದು ಯೋಗಿಯಾಗುವ ರೀತಿ ವೀರಶೈವ ಪ್ರಭಾವವೆಂದೇ ಹೇಳಬೇಕು.

"ನೊಲೆಯ ಮೇಲಿದ್ದ ಯೋಗಿಗಳುಂಟು ಬೆಟ್ಟದ
ಶಿಲೆಯ ಮೇಲಿದ್ದೂ ಭೋಗಿಗಳುಂಟು"

ಎನ್ನುವ ತಾತ್ವಿಕ ಪ್ರಭಾವ ವೀರಶೈವ ಪ್ರಭಾವವೇ ಇರಬೇಕು. ರತ್ನಾಕರನ ಭರತೇಶ ವೈಭವದ ತುಂಬ ಈ ತತ್ತ್ವದ ಛಾಯೆಯನ್ನು ಕಾಣುತ್ತೇವೆ. "ಶಿವಯೋಗಿ ಅನ್ನುವಂತೆ 'ಜಿನಯೋಗಿ' ಅನ್ನುವ ಪದವನ್ನು ರತ್ನಾಕರ ಬಹಳ ಕಡೆ ಬಳಸುತ್ತಾನೆ.

ಎರಡನೆಯದಾಗಿ ವೀರಶೈವರಲ್ಲಿ ಗುರುವಿಗಿದ್ದಷ್ಟು ಪ್ರಾಧಾನ್ಯ ಹರನಿಗೂ ಇಲ್ಲ. ಹರ ಮುನಿದರೂ ಗುರು ಕಾಯುತ್ತಾನಂತೆ! ಜೈನರಲ್ಲಿ ಗುರು ಗೌರವ ಸಾಕಷ್ಟಿದ್ದರೂ ಗುರು ಜಿನನಿಗಿಂತಲೂ ಶ್ರೇಷ್ಠ ಅನ್ನುವ ಭಾವ ಅವರಲ್ಲಿಲ್ಲ. ಗುರು ಧರ್ಮಮಾರ್ಗದ ಮಾರ್ಗದರ್ಶಕ ಮಾತ್ರ. ಆದರೆ ಗುರುವಿನ ಮಹಿಮೆಯನ್ನು ಕೊಂಡಾಡುವ ಸನ್ನಿವೇಶ ಭರತೇಶ ವೈಭವದಲ್ಲಿ ಹೆಜ್ಜೆಹೆಜ್ಜೆಗೂ ಸಿಕ್ಕುತ್ತವೆ.

ಭರತೇಶ ವೈಭವದ ಆದಿಯಲ್ಲೇ 'ಬಿನ್ನಹ ಗುರುವೇ ಧ್ಯಾನಕ್ಕೆ ಬೇಸರಾದಾಗ ನಿನ್ನ ನಾದಿಯ ಮಾಡಿಕೊಂಡು' (ಆಸ್ಥಾನ ೫) ಈ ಕಾವ್ಯಬರೆಯುತ್ತೇನೆಂದು ಹೇಳಿಕೊಳ್ಳುತ್ತಾನೆ.

"ಗುರುವೇ ಪ್ರತ್ಯಕ್ಷವಾಗೆನಗೆ" (ಆಸ್ಥಾನ ೪) "ಪರಮಾರ್ಥ" ಗುರುವೆ (ಕವಿ. ಸ. ೧) 'ನಿಜಗುರುವಿಗೆ ಭಕ್ತನಂತೆ' (ಕವಿ. ಸ. ೧೨) ಗುರು ಭಕ್ತಿ ತೋರುವಂತರುಣೋದಯ ತೋರಿತು. (ಶಯ್ಯಾ. ಸ, ೧೨೪) "ಗುರುವಿಲ್ಲದುತ್ತಮತೀರ್ಥಾ" (ನಗರೀ. ಸ. ೩೫) "ಗುರುವೆನಿರಂಜನಸಿದ್ಧ" (ವಿದ್ಯಾಗೋಷ್ಠಿ ೨.)

ಹೀಗೆ ಕಾವ್ಯದ ಪುಟಪುಟಕ್ಕೂ ಗುರುಗೌರವ, ಗುರು ಸ್ಮರಣೆ ಹಬ್ಬಿ ಹಂದರವಾದುದನ್ನು ಕಾಣುತ್ತೇವೆ. ಜಿನ, ಧ್ಯಾನ ಜಿನಸ್ಮರಣೆಗೂ ಅಧಿಕವೆನ್ನುವಂತೆ

ಕಾವ್ಯದಲ್ಲಿ ಗುರುಧ್ಯಾನ ಮೂಡಿಬಂದಿದೆ. ಮುನಿಭಕ್ತಿಸಂಧಿಯು ಅದಕ್ಕೆ ಮೀಸಲು. ಅಷ್ಟೆ ಅಲ್ಲದೆ ಭರತೇಶ ತನ್ನ ಮಗನಿಗೆ "ಗುರುರಾಜ" ಎಂದು ಹೆಸರಿಟ್ಟಿದ್ದ. ವೀರಶೈವರಲ್ಲಿ "ಗುರಪ್ಪ" "ಗುರುಪಾದ" "ಗುರುಗೌಡ" "ಗುರುರಾಜ" "ಗುರುಮೂರ್ತಿ" "ಗುರುಚರಣ" ಮೊದಲಾದ ಹೆಸರುಗಳು ಮನೆಮನೆಗೂ ಸಿಕ್ಕುತ್ತವೆ. ಈ ತೆರನಾದ ಹೆಸರು ಜೈನರಲ್ಲಿ ಅಷ್ಟು ಬಳಕೆಯಲ್ಲಿಲ್ಲ. ಹಡೆದು ಹೆಸರಿಡುವ ಈ ಸಂಪ್ರದಾಯ ಉಪಕಾರ ಸ್ಮರಣೆಯ ದ್ಯೋತಕ. ರತ್ನಾಕರನೂ ಈ ಸಂಸ್ಕೃತಿಗೆ ಹೊರಗಾಗಿಲ್ಲ. ತನಗೆ ಮಕ್ಕಳಿರದಿದ್ದರೇನಾಯ್ತು, ತನ್ನ ಕಾವ್ಯನಾಯಕನ ಮಗನಿಗಾದರೂ ಆ ಹೆಸರನ್ನಿಟ್ಟು ಗುರುವಿಗೆ ಗೌರವ ಸಲ್ಲಿಸಿದ್ದಾನೆ.

ಗುರುವಿಗೆ ಇಷ್ಟೊಂದು ಪ್ರಾಧಾನ್ಯತೆ ನೀಡಿದ ಜೈನ ಕವಿಗಳು ನಮ್ಮ ನಿದರ್ಶನಕ್ಕೆ ಬಂದಿಲ್ಲ.

ತಂದೆಯ ಹೆಸರನ್ನು ಹೇಳುವಲ್ಲಿಯೂ ಗುರುವಿನ ಹೆಸರನ್ನೊ ದೇವರ ಹೆಸರನ್ನೊ ಹೇಳುವ ಸಂಪ್ರದಾಯವು ವೀರಶೈವ ಕವಿಗಳಲ್ಲಿ ದಟ್ಟವಾಗಿದ್ದುದನ್ನೂ ನೋಡಬಹುದು. ರತ್ನಾಕರನೂ ಸಹಿತ ಅದೇ ರೀತಿಯಲ್ಲಿ

ಆಮಯ ಜನನ ಮರಣವುಳ್ಳ ಜನಕರ
ನಾಮವ ಪೇಳ್ವರುರ್ವಿಯೊಳು
ಶ್ರೀಮಂದರ ಸ್ವಾಮೀ ನನ್ನಯ್ಯನೆಂದಾನು,
ನೇಮಿಸಿ ಸುಖಪಡೆದಿಹನು ॥ ಸರ್ವರ ಮೋಕ್ಷ ೧೧೦॥

ವಾಗ್ದೇವಿಯ ಭಂಡಾರದ ಶಬ್ದಸಂಪತ್ತು ಯಾವುದೇ ವ್ಯಕ್ತಿಯ ಯಾವುದೆ ಧರ್ಮದವರ ಸೊತ್ತಲ್ಲ. ಅವುಗಳನ್ನು ಬೇಕಾದವರೂ ಬಳಸಿಕೊಳ್ಳಬಹುದು. ಆದರೂ ಧಾರ್ಮಿಕ ತಾಂತ್ರಿಕ ಪಾರಿಭಾಷಿಕ ಶಬ್ದಗಳನ್ನು ವಿಶೇಷಾರ್ಥದಲ್ಲಿ ಮಾತ್ರ ವಿಶೇಷ ಸಂದರ್ಭದಲ್ಲಿ ಮಾತ್ರ ಬಳಸಿಕೊಳ್ಳಲಾಗುತ್ತದೆ. ಅಂಥಲ್ಲಿ ನಿಘಂಟುವಿನ ಸೀಮಿತ ಅರ್ಥವನ್ನು ಕಳೆದುಕೊಂಡು ವಿಸ್ತಾರವಾದ ವಿಶೇಷಾರ್ಥಕ್ಕೆ ಆ ಶಬ್ದ ಆಕರವಾಗುತ್ತದೆ. ಈ ರೀತಿ ಕನ್ನಡ ಸಾಹಿತ್ಯ ಗಂಗೋತ್ರಿಯಲ್ಲಿ ಒಂದೊಂದು ಧರ್ಮದ ಸಾಹಿತ್ಯವೂ ತನ್ನದೇ ಆದ ಕೆಲವು ಪಾರಿಭಾಷಿಕ ಶಬ್ದ ಸಂಪತ್ತಿಯನ್ನು ಹೊಂದಿದೆ.

ರತ್ನಾಕರ ವೀರಶೈವ ಪ್ರಭಾವಕ್ಕೊಳಗಾಗಿ ಅಂಥ ಹಲವಾರು ಪದಗಳನು ವೀರಶೈವ ತಾತ್ವಿಕಾರ್ಥದಲ್ಲೇ ಬಳಸಿಕೊಂಡಿದ್ದಾನೆ.

ನಿರಂಜನ ಸಿದ್ಧನ ಸ್ತೋತ್ರದಲ್ಲಿ 'ಗರಳಹರನೆ ಭವಹರನೆ' (ಕವಿವಾಕ್ಯ ೧) 'ಮಹಾದೇವ' (ಶಯ್ಯ ೧) 'ಸದಾಶಿವ' (ಪೂರ್ವಸಾಗರ ೧) 'ಶಿವಗಣ ಮುಖ್ಯ' (ನಗರೀ ೧) 'ಭಕ್ತರೊಡೆಯ' ವಿರಕ್ತರೊಡೆಯ (ಜಿನವಾಸ ೧) 'ಮಹೇಶಾ' (ಚಕ್ರೇಶ. ಕೈವಲ್ಯ ೧) ಮೊದಲಾದ 'ಶಿವಾರ್ಥ' ಶಬ್ದಗಳನ್ನು ಗುರುಸ್ತುತಿಯಲ್ಲಿ ಬಳಸಿಕೊಂಡಿದ್ದಾನೆ ವೀರಶೈವರ ಗುರುಹರರ ಅಭೇದ ಕಲ್ಪನೆ ಇಲ್ಲಿ ವ್ಯಕ್ತವಾಗುತ್ತದೆ. ಈ ಪದಗಳನ್ನು ಜೈನ ಕವಿಗಳಾರೂ ಇಷ್ಟು ದಟ್ಟವಾಗಿ ಬಳಸಿಕೊಂಡಿಲ್ಲ.

ವೀರಶೈವ ಸಿದ್ಧಾಂತದ ಪಾರಿಭಾಷಿಕ ಶಬ್ದಗಳಾದ 'ಪ್ರಸಾದ', 'ವಿಭೂತಿ', 'ಲಿಂಗ'ಗಳ ಬಳಕೆಯನ್ನು ರತ್ನಾಕರನ ಕಾವ್ಯದಲ್ಲಿ ಕಾಣಬಹುದು.

ಭರತ ತನ್ನ ತಾಯಿ ಎದುರು '......ಇದೆಲ್ಲ ನಿಮ್ಮ ಪ್ರಸಾದ (ಪಾರಣೆ ೧೮೯) ಎಂದು ಹೇಳುತ್ತಾನೆ. 'ಪ್ರಸಾದ' ಶಬ್ದದ ವ್ಯಾಪಕಾರ್ಥದ ಪಾವಿತ್ರ್ಯತೆ ಅಚ್ಚಳಿಯದೇ ಇಲ್ಲಿದೆ.

ಭರತನು ದಿಗ್ವಿಜಯಕ್ಕೆ ಹೋಗುವಾಗ–

'ಮೃತ್ಯುಂಜಯ ಸಿದ್ಧ ಚಕ್ರಾದಿ ಯಜ್ಞಗಳ ಶುದ್ಧ ವಿಭೂತಿಯ ಮುಟ್ಟಿ ಕೊರಳಿಗಿಟ್ಟು (ಪಟ್ಟಣ ಪಯಣವಮಂ) ಕೊಂಡು ಹೊರಡುತ್ತಾನಂತೆ! ಅಷ್ಟಾವರಣಗಳಲ್ಲೊಂದಾದ ವಿಭೂತಿಯನ್ನು ವೀರಶೈವರು ಹಣೆಗಷ್ಟೇ ಅಲ್ಲ ಕೊರಳಿಗೂ ಹಚ್ಚುವ ರೂಢಿ ಇಂದೂ ಇದೆ. ಇಡೀ ಅಂಗಾಂಗಗಳಿಗೂ ಹಚ್ಚುತ್ತಾರೆ. ಅಲ್ಲದೆ ಇಲ್ಲಿ ಉಕ್ತವಾದ 'ಮೃತ್ಯುಂಜಯಸಿದ್ಧ' ಶಬ್ದವೂ ವೀರಶೈವರದೇ ಅನ್ನಿಸುವದಿಲ್ಲವೇ? ಮೃತ್ಯುಂಜಯ ಇಂದೂ ವೀರಶೈವ ಸ್ವಾಮಿಗಳ ಪ್ರಖ್ಯಾತ ಹೆಸರು.

"ಚಿದ್ಘನಲಿಂಗಾ" (ಅಂಬಿಕಾ ೧) ಇನ್ನೊಂದು ಅಚ್ಚವೀರಶೈವ ಶಬ್ದ ಗುರು ಲಿಂಗ ಜಂಗಮ ಒಂದೇ ಎಂಬ ತತ್ವದಂತೆ, 'ಚಿದ್ಘನಲಿಂಗಾ' "ನಿರಂಜನ ಸಿದ್ಧಾ" ಎನ್ನುವಲ್ಲಿ ತನ್ನ ಗುರುವನ್ನು ಚಿದ್ಘನಲಿಂಗಕ್ಕಾರೋಪಿಸಿ ಹೇಳುವ ರೀತಿಯನ್ನು ನೋಡಿ.

ಅಲ್ಲದೆ "ಆರಾಧ್ಯ" "ಚಿದ್ರೂಪ" "ಚಿತ್ಕಲೆಯ ಬೆಳಗ" ಊಟಕ್ಕೆ ನೀಡು ಎಂಬರ್ಥದಲ್ಲಿ "ಎಡೆಮಾಡು" ಮೊದಲಾದ ಎಷ್ಟೋ ಶಬ್ದಸಾಕ್ಷಿಯನ್ನು ಸಂಗ್ರಹಿಸಬಹುದು

ಹೀಗೆ ಅಚ್ಚ ವೀರಶೈವ ಶಬ್ದಗಳನ್ನು ಅದೇ ಧರ್ಮದ ತಾತ್ವಿಕಾರ್ಥದಲ್ಲಿ ಬಳಸಿದ್ದನ್ನು ನೋಡಿದರೆ ರತ್ನಾಕರನ ಮನಸ್ಸಿನ ಮೇಲಿನ ವೀರಶೈವ ಪ್ರಭಾವ ಸ್ಪಷ್ಟವಾಗದಿರದು.

"........ಮಿಂದು ದೇವ[1] ಪೂಜೆಯ ಮಾಡಿದನಂತೆ ಭರತ. (ಅಂಬಿಕಾ೧೦೪) ಒಳಿತು ಕೆಡುಕಿಗೆ ಕಾರಣವಾದ ದೇವರ ಅಸ್ತಿತ್ವವನ್ನೇ ನಂಬದ ದೇವರಲ್ಲಿ ದೇವರ ಕಲ್ಪನೆ ಎಲ್ಲಿಂದ ಬಂತು ? ಜಿನಪೂಜೆಗೇ ಹಾಗೆ ಹೇಳಿದುದೆನ್ನಬಹುದಾದರೂ "ದೇವ ಪೂಜೆ" ಎನ್ನುವ ಪ್ರಯೋಗದಲ್ಲಿ ಸೃಷ್ಟಿಯ ಹುಟ್ಟು ಬದುಕು ಲಯಕ್ಕೆ ಕಾರಣವಾದ ಸರ್ವಶಕ್ತನ ಕಲ್ಪನೆ ಇಲ್ಲದಿಲ್ಲ. ಇದಕ್ಕೆಲ್ಲ ವೀರಶೈವ ಸಂಸ್ಕಾರವೇ ಮೂಲವಾಗಿರಬೇಕು.

"ಕಲ್ಲುತಾಗಿದ ಮಿಟ್ಟೆಯಂತೆ", "ಕರ್ಪುರದ ಗಿರಿಯ ಸುಟ್ಟರೆ ಇದ್ದಲುಂಟೆ ?" "ಹುರಿದು ಬಿತ್ತಿದ ಬೀಜ ಮೊಳೆವುದೆ ? "ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ" "ಪೊಳೆಯ ಮೇಲಿದ್ದು ಯೋಗಿಗಳುಂಟು ಬೆಟ್ಟದ ಶಿಲೆಯ ಮೇಲಿದ್ದು ಭೋಗಿ

---

1. ' Jainism makes no room for god who is a creator and distributor of favour and frawns, but it is a Pre-eminent Champion of 'Karma' doctrine Which is an automatically functioning machanism."

—Dr. A. N. Upadya

( Introduction to Atmanushasan by Gunabhadra Page 4 and 5)

ಗಳುಂಟು" "ತನುವೆ ಜಿನಾಲಯ" (ದೇಹವೇ ದೇಗುಲ ಎನ್ನುವಂತೆ) ಮೊದಲಾದ ವಚನ ಸಾಹಿತ್ಯದ ಈ ತಾತ್ವಿಕ ತುಕಡಿಗಳನ್ನು ನೋಡಿದರೆ, ರತ್ನಾಕರ ವೀರಶೈವ ಧರ್ಮ ಸಾಹಿತ್ಯವನ್ನು ಚೆನ್ನಾಗಿ ಅಭ್ಯಾಸಮಾಡಿ ಅದರ ಪ್ರಭಾವಕ್ಕೊಳಗಾಗಿರ ಬೇಕೆನ್ನುವುದನ್ನು ಅಲ್ಲಗಳೆಯಲಾಗದು.

ದೇವರ ಸ್ವರೂಪವನ್ನು ವೀರಶೈವರು "ಬೆಳಗಿನೊಳಗಣ ಬೆಳಗು ಮಹಾ ಬೆಳಗು" "ಬಯಲೊಳಗಿನ ಬಯಲು ನಿರ್ವಯಲು" ಎಂದು ಬಣ್ಣಿಸಿದ್ದಾರೆ. ರತ್ನಾಕರನಲ್ಲಿಯೂ ಇಂಥ ಬಣ್ಣನೆಗಳು ಸಾಕಷ್ಟೆಂಬುದನ್ನು ಭರತೇಶವೈಭವ ಓದಿ ಖಚಿತ ಪಡಿಸಿಕೊಳ್ಳ ಬಹುದು.

" ಬಯಲಲ್ಲಿ ಬರೆದ ಪುರುಷರೂಪೊ" ಅತಿಶಯ ರೂಪ ರೂಪಾತೀತ" "ದೇಹ ವರ್ಜಿತ ದೇಹಯುತ" "ಚಿನ್ಮಯಾಂಗ" "ಬಯಲ ರೂಪ, ಬಯಲಾಕಾರ ಬಕ್ಕಟ ಬಯಲ" ಮುಂತಾಗಿ ಹಲವಾರು ಸಾದೃಶ್ಯ ವರ್ಣನೆಗಳನ್ನು ಎತ್ತಿ ಹೇಳಬಹುದು.

ವೀರಶೈವರ ಶೂನ್ಯರೂಪನ ವರ್ಣನೆಗೂ ರತ್ನಾಕರನ ಆತ್ಮನ ವರ್ಣನೆಗೂ ಸಾಮ್ಯವು ಇಲ್ಲದಿಲ್ಲ.

" ನುಡಿಯಿಲ್ಲ ನಡೆಯಿಲ್ಲ ತನುವಿಲ್ಲ ಮನವಿಲ್ಲ
ಕಡೆಗೆ ಪಂಚೇಂದ್ರಿಯವಿಲ್ಲ
ಕಡುಸುಖ ಸುಜ್ಞಾನ ಕಾಂತಿಯೆ ರೂಪಾಗಿ
ಪೊಡಲು ತುಂಬಿಹುದಾತ್ಮರೂಪ ।। ಕವಿರ್ಗ ।। "

ಆತ್ಮಾರಾಮನಲ್ಲಿ ಲೀನವಾದಾಗಿನ ಆನಂದ "ಜ್ಯೋತಿರ್ಲೋಕವ ಹೊಕ್ಕಂತೆ" "ತಂಪಿನ ಜ್ಯೋತಿಯ ನಡುವೆ ನಿಂದಂತೆ !" ಎಂದು ಬಣ್ಣಿಸಿದ್ದಾನೆ. ಈ ಎಲ್ಲ ಬಣ್ಣ ನೆಯ ಅನುಭವಗಳು ವೀರಶೈವ ಸಿದ್ಧಾಂತಾನುಭವಗಳಿಗೆ ತೀರ ಹತ್ತಿರವಾಗಿ ಕಾಣುವ ದಿಲ್ಲವೇ ?

ಈ ಪ್ರಭಾವವನ್ನು ಸಂಕುಚಿತ ದೃಷ್ಟಿಯಿಂದ ಕಾಣಲಾಗದು. ಈ ಪ್ರಭಾವ ಕ್ಕೊಳಗಾದ್ದ ರತ್ನಾಕರನ ಕಾವ್ಯ ಇನ್ನೂ ಶ್ರೀಮಂತ ಸತ್ವಯುತವಾಯಿತಲ್ಲದೆ ಸಾರ್ವ-ತ್ರಿಕತೆಯನ್ನೂ ಪಡೆಯಿತೆಂದು ಹೇಳಬೇಕು. ಸ್ವಧರ್ಮದ ಸಂಕುಚಿತ ಸಂಕೋಲೆಯ ಬಿಗಿ ಸಡಿಲಿಸಿ, ಪರಧರ್ಮದ ಒಳಿತನ್ನು ಒಳಗೆ ಬರಮಾಡಿಕೊಂಡು ಧರ್ಮಕ್ಕೆ ವ್ಯಾಪಕ ವಾದ ಆದರ್ಶಮಾರ್ಗ ಹಾಕಿಕೊಡುವ ಕಾರ್ಯ ಮಾಡಿದ್ದಾನೆ ರತ್ನಾಕರ.

'ಪ್ರಭಾವ' ಎಂದರೆ ಇನ್ನೊಬ್ಬರಿಂದ ಕದ್ದಾಗಲೀ ಎರವಲಾಗಿಯಾಗಲೀ ಪಡೆಯುವದೆಂದಲ್ಲ. ಒಂದು ವಸ್ತುವಿನ ಸಂಪರ್ಕದಿಂದ ಸಂಸ್ಕಾರಹೊಂದಿ ಅದನ್ನು ತನ್ನದಾಗಿಸುವ ಕ್ರಿಯೆ. ಸ್ವಗುಣವನ್ನು ಕಳೆದುಕೊಳ್ಳದೆ ಅನ್ಯಗುಣವನ್ನು ಅಳಿಸಿಹಾಕದೆ, ಎರಡನ್ನು ತನ್ನಲ್ಲಿ ಉಳಿಸಿಕೊಂಡು ತನ್ನತನವನ್ನು ಬೆಳಸಿಕೊಂಡು ಹೊಸತನ ಹೊಂದುವ ವಿಶೇಷ ವಿಧಾನ ರತ್ನಾಕರನೇ ಹೇಳುವಂತೆ ;

ಬಾವನ್ನ ವೃಕ್ಷದೊತ್ತಿನೊಳಿರ್ದ ಮರಗಳು
ತಾವೆಲ್ಲ ಕಮ್ಮನಪ್ಪಂತೆ ॥

ಬಾವನ್ನ ವೃಕ್ಷಗಳ ಗುಂಪಿನಲ್ಲಿದ್ದ ಯಾವ ವೃಕ್ಷವೂ ಬಾವನ್ನದ ಸಂಪರ್ಕದಿಂದ ಸಂಸ್ಕಾರಹೊಂದಿ ಗಂಧದ ಸುವಾಸನೆಯನ್ನು ಹೊಂದುವುದಂತೆ! ಆದರೇನು ಬೇವೂ ತನ್ನ ಸಂಪೂರ್ಣಗುಣವನ್ನು ಕಳೆದುಕೊಂಡು ಬಾವನ್ನವಾಗುವುದೆಂದಲ್ಲ. ತನ್ನತನವನ್ನು ಬಿಡದೆ, ಬಾವನ್ನದ ಸೌಗಂಧವನ್ನು ಹೊಂದುವುದು. ತನ್ನತನವನ್ನು ಸಂಪೂರ್ಣ ನಾಶಮಾಡುವ ಪ್ರಭಾವ ತೀರ ವಿನಾಶಕಾರಿ.

ಒಬ್ಬ ಕವಿ ಇನ್ನೊಬ್ಬ ಕವಿಯಿಂದ, ಇನ್ನೊಂದು ಧರ್ಮ, ಭಾಷೆಯಿಂದ ಏನನ್ನಾದರೂ ತೆಗೆದುಕೊಂಡಿದ್ದಾನೆಂದು ಹೇಳಿದರೆ ಅವನ ವ್ಯಕ್ತಿತ್ವಕ್ಕೆ ದೋಷಾ-ರೋಪಣೆಯನ್ನೆಸಗಲಾಗದು. ಅದೊಂದು ರೀತಿಯ ಗುಣವೆಂದೇ ಹೇಳಬೇಕು. ಕದಿಯದ ಕವಿಯಿಲ್ಲ ಕದಿಯದ ವರ್ತಕನಿಲ್ಲವಂತೆ! ಜಗತ್ತಿನ ಎಲ್ಲ ಕವಿಗಳನ್ನು ಸಾಲಾಗಿ ನಿಲ್ಲಿಸಿದರೆ ಒಬ್ಬನ ಕಿಸೆಯಲ್ಲಿ ಇನ್ನೊಬ್ಬನ ಕೈ ಇದ್ದುದೇ ಎನ್ನುವ ಮಾತೇನೂ ಸುಳ್ಳಲ್ಲ. ಹಾಗೆ ನೋಡಿದರೆ ಕೈ ಹಾಕದವನಿಗೇ ಹೆಚ್ಚಿನ ಹಾನಿ. ಪಂಪನ ಕಾವ್ಯವನ್ನು ರನ್ನ ಕಳವು ಮಾಡಿದ ಎನ್ನಲಾದೀತೇ! ಅದರಿಂದ ರನ್ನನ ಕಾವ್ಯಕ್ಕೆ ಕುಂದಣ-ವಿಟ್ಟಂತಾಗಿದೆಯೇ ಹೊರತು, ಕುಂದುತನವಿಲ್ಲ. ಅಂತೆಯೇ ರತ್ನಾಕರನ ಕಾವ್ಯವು ವೀರಶೈವ ಪ್ರಭಾವಕ್ಕೊಳಗಾಗಿ ತನ್ನ ವೈಭವವನ್ನು ಹೆಚ್ಚಿಸಿಕೊಂಡಿರುವುದು ಆತನ ಘನತೆಗೊಂದು ಕುರಹು.

ರತ್ನಾಕರ ೧೬ನೆಯ ಶತಮಾನದಲ್ಲಿ ಹುಟ್ಟಿ ಬದುಕಿದ ಕವಿ. ಅದು ಕರ್ನಾಟಕದಲ್ಲಿ ಜೈನಧರ್ಮದ ಅವಸಾನ ಕಾಲ; ರತ್ನಾಕರನ ಸಾಹಿತ್ಯ ಕೇವಲ ಜಿನ ಸಾಹಿತ್ಯವಾಗಿ ಪ್ರಭಾವಬೀರುವುದು ಕಷ್ಟವಿತ್ತು. ಆದರೆ ಅದು ಜನಸಾಹಿತ್ಯವಾಗಿ ಖ್ಯಾತಿ ಪಡೆಯಿತು.

ಕವಿ ಕೇವಲ ವೀರಶೈವನಾದ ಮಾತ್ರಕ್ಕೆ ಆ ಸಿದ್ಧಾಂತ ಗ್ರಂಥಗಳನ್ನು ಅಭ್ಯಸಿಸಿದ ನೆಂದು ಹೇಳುವುದಕ್ಕಿಂತ, ಜೈನ ಧರ್ಮದ ಪ್ರಭಾವವನ್ನು ತಟ್ಟನೆ ತಡೆದು ತನ್ನ ಪ್ರಭಾವ ಬೀರಿ, ಜನಮನವನ್ನಾಕರ್ಷಿಸಿದ ಈ ವೀರಶೈವ ಧರ್ಮದಲ್ಲೇನಿದೆ" ಎಂಬ ಕುತೂಹಲ ದಿಂದ, ಮೊದಲಿನಿಂದಲೂ ವೀರಶೈವ ಸಾಹಿತ್ಯದಲ್ಲಿ ಆಸಕ್ತಿವಹಿಸಿ ಅಭ್ಯಾಸಮಾಡಿರ ಬೇಕು, ಎನ್ನುವ ಮಾತು ಹೆಚ್ಚು ಸಮಂಜಸ. ಆತ್ಮಜ್ಞಾನಿಗೆ ಜಾತಿಕುಲವಾವುದಾದರೂ ಸಮವೆಂದು ತಿಳಿದ ರತ್ನಾಕರ ಬಹಿಷ್ಕೃತನಾದಾಗ ಕರ್ನಾಟಕದಲ್ಲಿ ಇನ್ನುಳಿದ ಧರ್ಮ ವನ್ನುಳಿದು ವೀರಶೈವ ಧರ್ಮವನ್ನೇ ಸ್ವೀಕಾರ ಮಾಡಿದ್ದರ ಉದ್ದೇಶವೂ ಇದೇ ಇರಬೇಕು.

ಏನೇ ಆಗಲಿ 'ರತ್ನಾಕರ ವೀರಶೈವ ಪ್ರಭಾವಕ್ಕೊಳಗಾಗಿದ್ದಾನೆ' ಎಂಬ ದುರಭಿಮಾನ ವೀರಶೈವರದಾಗಿದ್ದರೆ, ಅವನನ್ನು ಕುರಿತು ನಿರಭಿಮಾನ ಜೈನರು ತಳೆದರೆ, ರತ್ನಾಕರನಿಗೇನೂ ಆಗಬೇಕಿಲ್ಲ. ಅವನು ಈ ದುರಭಿಮಾನ ನಿರಭಿಮಾನಗಳನ್ನು ಮೆಟ್ಟಿ ನಿಂತ ಸಿದ್ಧ ; ಶರಣ.

‘ ಬೇಕಾದರಾಲಿಸುವುದು ಬೇಡವಾಗೆ ಪ
ರಾಕು ಮಾಡುವುದೆನಗಿಲ್ಲಿ
ವ್ಯಾಕುಲವಿಲ್ಲ ಸಂತಸವಿಲ್ಲ ನಾನು
ನಿರಾಕಾಂಕ್ಷಿ ಸಾಕದಂತಿರಲಿ ’ ॥ ಸರ್ವರ ಮೋಕ್ಷ ೧೦೬ ॥

ಎಂಬ ಈ ಜನಮನವನ್ನು ಅರಿತೇ ಹೇಳಿದಂತಿದೆ. □

# ಮಾಯೆಯ ಮಹಾ ಕೋಲಾಹಲ

ದ. ಲ. ಕೆರೂರ.

ರಸವತ್ತಾದ ಕಾವ್ಯವೆಂದು ಅಭಿಮಾನಿಗಳಾದ ಆರಾಧಕರಿಂದ ಆನೆಯ ಮೇಲೆ ಮೆರವಣಿಗೆ ಮಾಡಿಸಿಕೊಳ್ಳಲ್ಪಟ್ಟ 'ಪ್ರಭುಲಿಂಗಲೀಲೆ'ಯ ಕವಿ ಚಾಮರಸನು ತನ್ನ ಈ ಕಾವ್ಯ ಎಂಥದು ಎಂಬುದನ್ನೆ ಹೇಳುತ್ತ 'ಮತ್ತ ಮತಿಗಳ ಗೋಷ್ಠಿಯಲ್ಲಿದು, ಸತ್ಯ ಶರಣರು ತಿಳಿವುದೀ ಪ್ರಭುಲಿಂಗಲೀಲೆಯನು' ಎಂದೂ 'ಭಕ್ತಿಯ ತೆರನ ತಿಳಿದಾಚರಿಸಬೇಕೆಂದಿರುವವರು ಲಾಲಿಸುವದೀ ಪ್ರಭುಲಿಂಗಲೀಲೆಯನು' ಎಂದೂ ಬರೆದಿದ್ದಾನೆ. ಆರಾರು ಆವ ಭಕ್ತಿಯ ರೀತಿಗಳಲಿಹರು ಅವರವರಿಗೆ ಅವರ ಪ್ರೀತಿಯಲಿ ರೂಪಾಗಿ ತೋರುವ ಮನುಜಕುಲಗುರು ಅಲ್ಲಮನನ್ನು ತನ್ನ ಕಾವ್ಯ ನಾಯಕನನ್ನಾಗಿಟ್ಟುಕೊಂಡ ಚಾಮರಸನು ಆತನ ವ್ಯಕ್ತಿತ್ವವನ್ನು ಉದಾತ್ತವಾಗಿ ಚಿತ್ರಿಸುವ ಉದ್ದೇಶದಿಂದ, ಆತನ ಜೀವನದಲ್ಲಿ ಬಂದು ಹೋಗುವ ಮಾಯೆ, ಬಸವ, ಸಿದ್ಧರಾಮ, ಅಕ್ಕಮಹಾದೇವಿ ಹೀಗೆ ಅನೇಕ ವ್ಯಕ್ತಿಗಳ ವೃತ್ತಾಂತವನ್ನು ರಮಣೀಯವಾಗಿ ನಿರೂಪಿಸಿದ್ದಾನೆ. ಮಾನವ ಕುಲಕ್ಕೆ ಅನುಭವ ಸ್ಥಿತಿಗತಿಯನ್ನು ಉಪದೇಶಿಸುವ ಗುರುವಾದ ಅಲ್ಲಮನು ಸಿದ್ಧಪುರುಷ, ಜಿತೇಂದ್ರಿಯ ಎಂಬುದನ್ನು ಎತ್ತಿ ತೋರಿಸುವುದಕ್ಕಾಗಿ ಚಾಮರಸನು ಇಲ್ಲಿ ಮಾಯೆಯ ಪಾತ್ರವನ್ನು ಯೋಜಿಸಿದ್ದಾನೆ.

ಈ ಮಾಯೆ ಕಮನೀಯವಾದ ವ್ಯಕ್ತಿ, ಪಾರ್ವತಿಯು ತನ್ನ ತಾಮಸ ತೇಜದ ಅಂಶವನ್ನು ಈ ಅಲ್ಲಮನ ಸತ್ವಪರೀಕ್ಷೆಗಾಗಿ ಕಳಿಸಿದಳು ಎಂಬ ಅಂಶವನ್ನು ಕ್ಷಣ ಹೊತ್ತು ಮರೆತು ನೋಡಿದರೆ ಮಾಯಾದೇವಿಯ ಪಾತ್ರದ ರಾಮಣೀಯಕತೆ ಇನ್ನೂ ಹೆಚ್ಚುತ್ತದೆ ಅನ್ನಬೇಕು. ಮಮಕಾರ ಭೂಪಾಲ-ಮೋಹಿನಿ ದೇವಿಯವರಿಗೆ ಮುದ್ದಿನ ಮಗಳಾಗಿ ಜನಿಸಿದ. ಮಾಯಾದೇವಿ, ಭೂಮಿಗಿಳಿದ ಕೂಡಲೆ ಧೀರಮುನಿಗಳು ದಿಟ್ಟಿಸಿದ್ದರು. ಉದಾರ ಯೋಗೀಶ್ವರರು ಭಯದಲಿ ಭೋರನೆ ಎದೆಗುಂದಿದರು. ಎತ್ತಣಿಂದೀ ಮಾಯೆ ಹುಟ್ಟಿತೆನ್ನುತ್ತ ಚಿಂತಾಕ್ರಾಂತರಾದರು ಎಂದು ಕವಿ ಬಣ್ಣಿಸಿದ್ದಾನೆ. ಇಂತು ಪ್ರಭಾವಿಯಾದ ಶಿಶು ತಾಯಿತಂದೆಗಳಿಗೆ ಅಚ್ಚು ಮೆಚ್ಚಾಗಿ ಬೆಳೆದು ನಾನಾ ಕುಶಲ ಶಾಸ್ತ್ರ ವಿದ್ಯಾನೀಕವನು ಪರಿಚರಿಸಿ ಪರಿಣತೆಯಾಗಿ ಸ್ಪೃಹಣೀಯಳಾಗುತ್ತಾಳೆ.

ಮುಂದೆ ಒಂದಿನ ಗುರು ಅಹಂಕಾರಾಚಾರ್ಯನು ಮಮಕಾರಲ್ಲಿಗೆ ಬಂದಾಗ ಈ ಮಾಯೆಗೆ ಶಿವನೇ ಪತಿಯೆಂದು ತಿಳಿಸಿ, ಆಕೆಗೆ ಉಪದೇಶವಿತ್ತು ಹೋದ ಬಳಿಕ, ಮಾಯೆಯು ಆ ಗುರುವು ತೋರಿಸಿದ ರೀತಿಯಲ್ಲಿ ಹರುಷದಿಂದ ನಿತ್ಯ ನೇಮವ ಹಿಡಿದು ಮಧುಕೇಶ್ವರ ಪೂಜಾರಾಧನೆಗಳಲ್ಲಿ ನಿರತಳಾಗುತ್ತಾಳೆ. ನಿಜ ಮನೋವಲ್ಲ-ಭನ ಬಯಕೆಯಲಿ ಮಧುಕೇಶ್ವರನನ್ನು ಅರ್ಚಿಸುತ್ತಾಳೆ.

ವಿದ್ಯಾವಿನಯ ಸಂಪನ್ನೆ, ಅಸಮ ಸುಂದರಿ, ಯೌವನಾನ್ವಿತೆಯಾದ ಮಾಯೆ ಹೀಗೆ ಮಧುಕೇಶ್ವರನಲ್ಲಿ ಹೋಗಿಬರುತ್ತ ಇರುವಾಗ ಒಂದು ದಿನ ಆಕೆಯ ಜೀವನವನ್ನೇ ಅಲ್ಲೋಲ ಕಲ್ಲೋಲ ಮಾಡುವ ಚಿಕ್ಕ ಘಟನೆ ಆ ದೇವಾಲಯದಲ್ಲಿಯೇ ನಡೆಯುತ್ತದೆ. ಮಾಯೆ ಒಳಗೆ ಮಧುಕೇಶ್ವರನಿಗೆ ತನ್ನ ಸೇವೆಯನ್ನು ಸಲ್ಲಿಸುತ್ತಿರುವಾಗ ಹೊರಗೆ ಬಾಗಿಲಲ್ಲಿ ಅಲ್ಲಮನು ಉಗ್ಘಡಣೆಯ ಘಡಾವಣೆಯಿಂದ ಮದ್ದಳೆಯನ್ನು ಬಾರಿಸ ಹತ್ತಿದ್ದನ್ನು ಮಾಯೆ ಕೇಳಿ, ಕಾರಮುಗಿಲಿನ ಗರ್ಜನೆಯ ಕಿವಿಯಾರೆ ಕೇಳಿದ ಸೋಗೆಯಂತಾದಳು. ತನ್ನ ಸಖಿಯರನ್ನು ಅಟ್ಟಿ ಆತನನ್ನು ಕರೆಯಿಸಿಕೊಂಡು, ವಿಕೃತ ವೇಷದಲಿ ನಟಿಸಿ ಬಂದ ಅಲ್ಲಮನ ಕುಲ ಗೋತ್ರಗಳನ್ನು ವಿಚಾರಿಸುವಳು. ಆಗ ಆತ "ನಾವು ಪರದೇಶಿಗಳು, ಹೆಸರು ಅಲ್ಲಮ. ಇಂಥಲ್ಲಿಯೇ ಇರಬೇಕೆಂಬ ನೇಮವಿಲ್ಲ. ಆದರೆ ಲೇಸುಮಾಡುವ ಠಾವುಗಳಲಿ ಹೊದ್ದುವೆವು" ಎಂದು ಹೇಳಲಾಗಿ ಮಾಯೆಯು ಆತನನ್ನು ತನ್ನ ಶಿಕ್ಷಾಚಾರ್ಯನನ್ನಾಗಿಸಿಕೊಳ್ಳುವ ಉದ್ದೇಶದಿಂದ ಅರಮನೆಗೆ ಕರೆತರುತ್ತಾಳೆ. ತಂದೆಗೆ ಹೇಳಿ ಆತನನ್ನು ಅರಮನೆಯಲ್ಲಿಟ್ಟುಕೊಳ್ಳುತ್ತಾಳೆ.

ಇಲ್ಲಿಂದ ಪ್ರಾರಂಭವಾಗುತ್ತದೆ ಮಾಯೆಗೆ ಕೋಟಲೆ. ಭರತ ವಿದ್ಯಾದ್ಯಖಿಳ ಕಳೆಗಳ ಪರಿಚಯದ ನೆವದಿಂದ ಮಾಯಾತರುಣಿ ಮನದೊಳು ಸೊಗಸಿ ಮಾತಾಡಿಸುವಳು ಅಲ್ಲಮನ. ಕೇವಲ ವಿದ್ಯಾರ್ಜನೆಯ ಆಸಕ್ತಿ ಇದ್ದಿದ್ದರೆ ಅದೊಂದು ರೀತಿಯಾಗುತ್ತಿತ್ತು. ಆದರೆ ಮಾಯೆಯು ಅಲ್ಲಮನು ಕರುಣಿಸುವ ಕಾಲದಲಿ ನಿತ್ಯವನು ಅರಿಯದೆ, ಮದನನ ಬಲೆಯ ಬಾಯಲ್ಲಿ ಸಿಲುಕಿ ಬಿದ್ದು ಕುದಿದು ಕೋಟಲೆಗೊಳಗಾಗುತ್ತಾಳೆ. ಅಷ್ಟೇ ಅಲ್ಲ, ತಾನು ರಾಜಕುಮಾರಿ, ಇನ್ನೂ ಕನ್ಯೆ, ಅಲ್ಲದೆ ತನ್ನ ಅಂತಸ್ತಿಗೆ ಸರಿದೊರೆಯಲ್ಲದ ಮದ್ದಳೆಗನಿಗೆ ಅಳುಪಿದೆ ಎಂಬ ಭಾವನೆಯಿಂದ ನಾಚಿ ಒಳಗೊಳಗೇ ಕುದಿಯುತ್ತಿರುವದನ್ನು ಆಕೆಯ ಸಖಿಯರು ಉಪಾಯದಿಂದ ಕಂಡರಿದು ಇವರ ಮಿಲನಕ್ಕಾಗಿ ಪ್ರಯತ್ನಿಸುತ್ತಾರೆ. ಮದವಮಾನಿ ಎಂಬ ದೂತಿಯೋರ್ವಳು ಮಾಯೆಯ ಪರವಾಗಿ ಅಲ್ಲಮನ ಬಳಿಗೆ ಬಂದು 'ನವಪ್ರೌಢತಿ ನಿನ್ನ ಮೇಲೆ ಮನಸ್ಸಿಟ್ಟು ನಿನಗೇ ಒಲಿದಿದ್ದಾಳೆ. ಆಕೆಯನೊಡಗೂಡಿ ಸುಖಿಸು ಬಾ' ಎಂದು ಪರಿಪರಿಯಿಂದ ಬಿನ್ನವಿಸಿಕೊಳ್ಳುತ್ತಾಳೆ.

'ಅವಳು ರಾಜಕುಮಾರಿ ನಾವು ಪರದೇಶಿಗಳು. ಸೇವಕನಲ್ಲಿ ಮಮತೆದೋರುವದು ಸಹಜ. ಅಷ್ಟಕ್ಕೇ ನಾವು ಮೈಮರೆಯಬಾರದು' ಎಂದು ನಾನಾವಿಧವಾಗಿ ತಿಳಿಸಿ ಹೇಳಿದರೂ ಮದವಮಾನಿ ಅಲ್ಲಮನಿಗೆ ಏನೊಂದು ನೆವ ಹೇಳಲು ಆಸ್ಪದ ನೀಡದೆ ಬಿನ್ನಹವ

ಗೈಯಲಾಗಿ ಕೊನೆಗೆ ಅಲ್ಲಮನು " ನಿಮ್ಮ ಮಾಯಾದೇವಿಯಂತಸ್ಥವನು ನೀವು ಬಲ್ಲಿರಿ, ಮನಸು ಬಂದಂತೆ ನೀವು ಮಾಡುವದು. ಎಮ್ಮ ಕೇಳುವದಾವುದುಂಟು" ಎಂದು ಸಮ್ಮತಿ ನೀಡಿದಂತೆ ಮಾಡುತ್ತಾನೆ. ಬಳಿಕ ಮದವಮಾನಿ ತಿರುಗಿ ಬಂದು ತನ್ನ ದೌತ್ಯ ಸಫಲ ವಾದುದೆಂದು ಅರುಹಲಾಗಿ, ಸಖಿಯರು ಅಂದಿನ ಇರುಳಿನಲಿ ಅಲ್ಲಮನನ್ನು ಯಾರೂ ಅರಿಯದಂತೆ ಮಾಯಾದೇವಿಯ ಅಂತಃಪುರಕ್ಕೆ ಕರೆತಂದರು, ತಮವ ತರಣಿಯ ನೊಂದುಗೂಡುವೆವೆಂಬ ಭಾವಭ್ರಮಿತ ಬುದ್ಧಿಯಲಿ. ಆದರೆ ಈ ವಿಪರೀತ ಸಂಗಮ ಸಾಧ್ಯವಿಲ್ಲ ಎಂಬುದನ್ನು ಕವಿ ಚಮತ್ಕಾರಿಕವಾಗಿ ಹೇಗೆ ಸೂಚಿಸಿದ್ದಾನೆಂಬುದನ್ನು 'ತಮ–ತರಣಿ' ಪದಪ್ರಯೋಗದಿಂದ ಕಂಡುಕೊಳ್ಳಬಹುದು. ಅಲ್ಲಮ ಕರುಣಿಸುವ ಕಾಲವಲಿ ನಿತ್ಯವನು ಅರಿಯಲರಿಯದೆ ಮಾಯೆ ಕುದಿದು ಕೋಟಲೆಗೊಳತಿರ್ದಳು ಎಂದೂ ಆತ ಸೂಚಿಸಿದ್ದಾನೆ.

ತನ್ನ ಮಗಳ ಈ ಅವ್ಯಾಪಾರವನ್ನು ಕೇಳಿ ತಾಯಿ ಮೋಹಿನಿದೇವಿ ಮಾಯೆಯ ಅಂತಃಪುರಕ್ಕೆ ಬಂದು ಇಂಥ ಅಕೃತ್ಯದಿಂದ ರಾಜಕುಲಕ್ಕೆ ಅವಮಾನ ಮಾಡಬಹುದೆ ಎಂದು ಕೇಳಲಾಗಿ, ಆಕೆಯ ಪರವಾಗಿ ಸಖಿಯರೇ ಉತ್ತರ ವೀಯುತ್ತ, " ಅಲ್ಲಮನಿಗಾಗಿ ರಾಜಕುಮಾರಿ ಹಂಬಲಿಸುತ್ತಿದ್ದಾಳೆ. ಆತ ದೊರೆಯ ದಿದ್ದರೆ ಈಕೆ ಬದುಕುವಂತಿಲ್ಲ. ಈ ಮಾನವಜನ್ಮ ಬಂದಾಗ ಸಕಲ ಸುಖಗಳನು– ತಿಳಿದು ಅನುಭವಿಸಬೇಕು. ನಿಮ್ಮ ಮಗಳ ಹಿತ ನೀವು ಕಡೆಗಣಿಸಬಾರದು " ಎಂದು ರಾಣಿಯ ಮನವೊಲಿಸುತ್ತಾರೆ. 'ಆಗಲಿ, ರಾಜನಿಗೆ ಇದು ಗೊತ್ತಾಗದಿರಲಿ' ಎಂದು ಹೇಳಿ ಆಕೆ ತೊಲಗುತ್ತಾಳೆ.

ಮಾಯಾದೇವಿ ಅಲ್ಲಮನನ್ನು ಹೀಗೆ ಗುಟ್ಟಾಗಿ ಕರೆಸಿಕೊಂಡದ್ದು ರಾಣಿಗೆ ತಿಳಿದು ರಟ್ಟಾಗಿ ಹೋಗಿದ್ದರಿಂದ ಸಖಿಯರು, ಇನ್ನು ಈ ವಿಷಯವು ಮಮಕಾರ ಭೂಪಾಲ ನಿಗೆ ತಿಳಿದರೆ ತಮ್ಮ ಗತಿ ಒಳಿತಾಗಲಿಕ್ಕಿಲ್ಲ ಎಂದು ಹೆದರಿ, ಸಕಳೆ ಎಂಬವಳನ್ನು ಮುಂದಿಟ್ಟುಕೊಂಡು ಅಲ್ಲಮನಲ್ಲಿಗೆ ಬಂದು, ಈಗಂತೂ ರಹಸ್ಯ ಬಯಿಲಾಯಿತು. ಮಾಯಾದೇವಿಯ ಅಂತಃಪುರದಲ್ಲಿರುವಂತೆಲ್ಲ, ಬಿಡಾರ ಕಿತ್ತಬೇಕು. ಮತ್ತೆ ಯೋಗಾ ಯೋಗವಿದ್ದರೆ ಮಾಯೆ–ನಿಮ್ಮನ್ನು ಕೂಡಬಹುದು ಎಂದು ಕೇಳಿಕೊಳ್ಳುತ್ತಾರೆ.

ಮಾಯೆಯುಗಲಿದ ಬಳಿಕ ಭಾವಿಸೆ ಕಾಯವುಂಟೇ ಎಂದು ಅಲ್ಲಮ ಚಮತ್ಕಾರ ವಾಗಿ ನುಡಿಯುತ್ತಾನೆ. ಮಾಯೆಯು, ಇಹದ ಬಂಧನ, ಅದು ತೊಲಗಿದ ಬಳಿಕ ಮುಕ್ತಿ ಯಲ್ಲದೆ ಇನ್ನೇನು ಎಂದು ಅಲ್ಲಮನ ಅರ್ಥ. ಆದರೆ ಸಖಿಯರು ತಿಳಿಮಕೊಳ್ಳುವದೇ ಬೇರೆ. ಅಲ್ಲಮ ಪುನಃ ಮಧುಕೇಶ್ವರ ದೇವಾಲಯಕ್ಕೆ ಹಿಂತಿರುಗುತ್ತಾನೆ.

ಮಾಯೆ ತನ್ನ ಕಾರ್ಯದಲ್ಲಿ ಎಷ್ಟರ ಮಟ್ಟಿಗೆ ಯಶಸ್ಸು ಸಂಪಾದಿಸಿದ್ದಾಳೆ ಎಂಬುದನ್ನು ಅರಿತುಕೊಳ್ಳುವ ಕುತೂಹಲದಿಂದ ಪಾರ್ವತಿ ವಿಮಳೆ ಎಂಬ ತನ್ನ ದಾಸಿ ಯನ್ನು ಬನವಾಸಿಗೆ ಕಳಿಸುತ್ತಾಳೆ. ಇಲ್ಲಿ ಮಾಯೆ ಅಲ್ಲಮನನ್ನು ಕೇವಲ ತನ್ನ ಅರ ಮನೆಗೆ ಕರೆದು ತರುವಷ್ಟರ ಮಟ್ಟಿಗೆ ಮಾತ್ರ, ತನಗೆ ನೇಮಿಸಿಕೊಟ್ಟ ಕಾರ್ಯದಲ್ಲಿ

ಯಶಸ್ವಿಯಾಗಿರುತ್ತಾಳೆ. ಆದರೆ ಅಲ್ಲಮನನ್ನು ಒಲಿಸಿಕೊಳ್ಳುವಲ್ಲಿ ಆಕೆಗೆ ಎಳ್ಳಷ್ಟೂ ಯಶದೊರೆತಿರುವದಿಲ್ಲ. ಹಾಗೆ ನೋಡಿದರೆ ಮಾಯೆ–ಅಲ್ಲಮರ ಬಳಕೆ ವ್ಯವಹಾರ ಕೇವಲ ನಾಟ್ಯಾದ್ಯಖಿಳ ಶಾಸ್ತ್ರಾರ್ಥಗಳ ಕುರಿತು ಚರ್ಚೆ ನಡೆಸುವಷ್ಟರ ಮಟ್ಟಿಗೆ ನಡೆದಿದೆಯೆ ಹೊರತು ಅದಕ್ಕೂ ಮುಂದೆ ಹೋಗಿರುವದಿಲ್ಲ. ಸಖಿಯರ ಮೂಲಕ ನಡೆದಂಥ ಸಂಭಾಷಣೆಗಳಲ್ಲಿ ಕೂಡ ಅಲ್ಲಮನು ಬಹು ಚತುರತೆಯಿಂದ ವ್ಯವಹರಿಸಿ ಅವರ ಜಾಲವಲ್ಲಿ ಸಿಲುಕದಿರುತ್ತಾನೆ. ಈ ಪರಿಸ್ಥಿತಿಯಲ್ಲಿ ಮಾಯೆಯಲ್ಲಿಗೆ ವಿಮಳೆ ಬಂದು ಆಕೆಯ ಕಾರ್ಯದ ಬಗ್ಗೆ ಎಚ್ಚರಿಸುತ್ತಾಳೆ.

ಬಿಸಿಲ ಬೇರಿಟ್ಟು ಇಳೆಗಿಳಿದ ಸೂರ್ಯನೊ ಎಂಬಿತಿರುವ ತೇಜೋಮಯದ ಅಲ್ಲಮಪ್ರಭು ಪ್ರಾಪ್ತವಯಸ್ಕನಾದೊಡನೆ ನನ್ನ ತಾಯ್ತಂದೆಗಳಿಗೇ ಐಕ್ಯಭಾವಸ್ಥಳವನ್ನು ಕಾಣಿಸಿಕೊಟ್ಟು ಆತ್ಮಸುಖಲೀಲಾಮಯನಾಗಿ ಹೊರಹೊರಟುಬಂದಿದ್ದಾನೆ ಎಂದು ವಿಮಳೆ ಹೇಳಲಾಗಿ ಮಾಯೆ ತಾನು ಅಂಥ ಯಾವ ಅಲ್ಲಮನನ್ನು ಕಂಡಿಲ್ಲ, ತನಗೆ ಭೆಟ್ಟಿಯಾದವ ಮದ್ದಳೆಯ ಅಲ್ಲಮ ಎಂದು ಅರುಹುತ್ತಾಳೆ. ನೀನು ಕಾಮುಕ ಭಾವದಿಂದ ಬಯಸಿದೆಯಾದ್ದರಿಂದ ಅಲ್ಲಮ ಮದ್ದಳಿಗನ ವಿಕೃತವೇಷದಿಂದ ಬಂದಿರಬಹುದು. ನನಗೆ ಅವನನ್ನು ತೋರಿಸು ಅಂದರೆ ಆತನೇ ದಿಟದ ಅಲ್ಲಮನಹುದೊ ಅಲ್ಲವೊ ಹೇಳುವೆ. ನಿನ್ನ ಕಾರ್ಯವ ಇಂತು ಮರೆಯಬಹುದೆ ಎಂದು ಪುನಃ ಹೇಳಲಾಗಿ ಮಾಯೆ ಅಲ್ಲಮನನ್ನು ತೋರಿಸಲು ಒಪ್ಪುತ್ತಾಳೆ.

ಮರುದಿನ ಮಾಯೆ ಮಧುಕೇಶ್ವರನ ದೇವಾಲಯಕ್ಕೆ ಬರುತ್ತಾಳೆ, ವಿಮಳೆಯೊಂದಿಗೆ. ಮಾಯೆಯು ಅಲ್ಲಿದ್ದ ಮದ್ದಳಿಗನನ್ನು ವಿಮಳೆಗೆ ತೋರಿಸಲಾಗಿ, ಆಹುದು. ಈತನೇ ನಿಜದ ಅಲ್ಲಮ ಎಂದು ಕಡೆಗಣ್ಣಿಂದ ಸೂಚಿಸುತ್ತಾಳೆ. ಆಗ ಮಾಯೆಗೆ ತನ್ನ ಪೈಜೆಯ ನೆಳಲು ನೆಲಸಿತು, ಹೇವ ಹೆಚ್ಚಿತು. ಅಲ್ಲಮನ ಆಳವನ್ನು ಅರಿಯುವ ಆಸೆ ಆಕೆಯಲ್ಲಿ ಬಲಿಯಿತು. ಈ ಮದ್ದಳಿಗನನ್ನು ಆಡಿಸುವೆನೆನ್ನುತ್ತ ಮಾಯೆ ತನ್ನ ಲಾಸ್ಯದಿಂದ ಅಲ್ಲಮನನ್ನು ಮುತ್ತಿ ಮಸಗಲಾಗಿ ಅಲ್ಲಮನು ಈಕೆಯ ಈ ಹೊಸಪರಿಯನ್ನು ಕಂಡು ಕಾಕರಿಗೆ ತನ್ನ ಸದಮಲಸ್ವರೂಪನ ಕಾಣಿಸುವದು ಅನುಚಿತ ಎಂದು ನಿಶ್ಚಯಿಸಿ ಮದ್ದಳೆಯನ್ನು ಅಲ್ಲಿಯೆ ಬಿಸುಟ–ದೇವಾಲಯದ ಹೊರಬಿದ್ದು ಕಾಣೆಯಾಗುತ್ತಾನೆ. ಮಾಯೆಯು ಅಲ್ಲಮ ಇಲ್ಲದಂತಾದುದನ್ನು ನೋಡಿ ಆತನನ್ನು ಹುಡುಕಲು ಧಾವಿಸುತ್ತಾಳೆ. ಇದು ಆಕೆಯ ಅಂತಿಮ ಪ್ರಯತ್ನಯಲ್ಲವೆ ! ಕೊನೆಗಂಡೇ ಬಿಡಬೇಕೆಂಬ ಹಟದಿಂದ ರಭಸದಿಂದ ಆಕೆ ಮುನ್ನುತ್ತಿರಲು ಜಪತಪಸಮಾಧಿಯ ಮಾಡುವವರೆಲ್ಲ, ಹುಲಿಕಂಡ ಹುಲ್ಲೆಗಳಂತೆ, ದೆಸೆದೆಸೆಗೆ ದಿಕ್ಕೆಟ್ಟು ಓಡತೊಡಗಿದರು.

ಮಾಯೆಯ ಈ ಹಾವಳಿಯನ್ನು ನಿರ್ಮೂಲಮಾಡಿಬಿಡಬೇಕು ಎಂದು ಅಲ್ಲಮನು ಆಕೆಗೆ ಕಾಣಿಸಿಕೊಂಡನು. ಕೂಡಲೆ ದಾಸಿಯರು ಅಲ್ಲಮನ ಶ್ರೀಪಾದ ಪಂಕಜವ ಮುತ್ತಿ 'ಮಾಯೆಯನು ಇಷ್ಟುದಿನ ಮನವೊಲಿಸಿ ಕಡೆಯಲಿ ಘಾಸಿಮಾಡುವದೆ ?" ಎಂದು ತಮ್ಮ ಒಡತಿಯ ಆಸರು ಬೇಸರೆಲ್ಲವನ್ನು ತೋಡಿಕೊಂಡರು.

ನನ್ನನ್ನು ಬಯಸಿದವರಾರು ? ಕರೆಯಕಳಿಸಿದವರಾರು ? ಬಳಿಕ ಉದಾಸೀನ ಮಾಡಿದವರಾರು ? ನಿಮ್ಮಂಥ ನಾರಿಯರಿಗಿದು ಸಹಜ ಎಂದು ಅಲ್ಲಮ ಉತ್ತರಿಸಿದ.

ಹರಿಯ ಎದೆಯ ಮೆಟ್ಟಿ, ಹರನ ಶಿರವಮೆಟ್ಟಿ, ಬ್ರಹ್ಮನಬಾಯಿ ಮುದ್ರಿಸಿದ ನಾನು ಮಾಯೆ ಇಡೀ ಜಗತ್ತನ್ನೇ ಆಡಿಸಬಲ್ಲೆ, ಅಲುಗಾಡಿಸಬಲ್ಲೆ. ಇನ್ನು ನಿನ್ನಂಥವರು ನನಗೆ ಈಡೆ ಎಂದು ಮಾಯೆ ವಿಜೃಂಭಿಸುತ್ತಾಳೆ.

ಈಗ ಅಲ್ಲಮನ ಉತ್ತರ ಕೇಳಬೇಕು.

ಹರಿಹರ ಬ್ರಹ್ಮರನ್ನು ಹೋರಾಡಿ ಕಾಡಿದನೆಂದು ಹೇಳುವ ನಿನ್ನನ್ನೇ ಆಡಿಸುತ್ತಿರುವವರಾರು ಎಂಬುದನ್ನು ಮೊದಲು ತಿಳಿದುಕೊಳ್ಳು ಎಂದು ಅಲ್ಲಮನೆನ್ನಲಾಗಿ ಮಾಯೆಯ ಅಹಂಕಾರವೆಲ್ಲ ಇಳಿದು ಹೋಗುತ್ತದೆ.

ಈ ವಾಗ್ವಾದ ಸಾಕು, ನಾನು ಮಧುಕೇಶ್ವರನನ್ನು ಭಕ್ತಿಯಿಂದ ಅರ್ಚಿಸಿದ್ದೇನೆ. ನನ್ನನ್ನು ಇನ್ನೂ ಹಿಂಸಿಸಬೇಡ, ಕೃಪೆಮಾಡು ಎಂದು ಮಾಯೆ ದೈನ್ಯದಿಂದ ಕೇಳಿಕೊಳ್ಳುತ್ತಾಳೆ. ಬೆಂದ ಹುಣ್ಣನ್ನು ಕಂಬಿಯಲಿ ಕೀಸುವರೇ ಎನ್ನುತ್ತಾಳೆ.

ನೀನೊಂದು ಖೊಟ್ಟಿನಾಣ್ಯ. ಹರನನ್ನು ಅರ್ಚಿಸುವ ರಂಗಭೇದಾಂತರವನರಿಯದೆ ಸಟೆಯ ಭಕ್ತಿಯ ಭರದಲಿ ಫಲವ ಬಯಸುತಿದೆ ಎಂದ ಅಲ್ಲಮ.

'ನಿನ್ನ ಕರುಣದಿಂದ ಆಕೆ ಬಾಳಬೇಕೀಗ. ಪರುಷ ಮಣಿಸ್ಪರ್ಶದಿಂದ ಕಬ್ಬಿಣವೂ ಹೊನ್ನಾಗಬಲ್ಲುದು' ಎಂದು ವಿಮಳೆ ಅಲ್ಲಮನಲ್ಲಿ ಬೇಡಿಕೊಳ್ಳಲಾಗಿ 'ಹಾಲಿದ್ದರೆ ಅದಕ್ಕೆ ಹೆಪ್ಪುಹಚ್ಚಿ ತುಪ್ಪವನುಣಬಹುದು. ಕಬ್ಬಿಣವಿದ್ದರೆ ತಾನೆ ಪರುಷಸ್ಪರ್ಶದಿಂದ ಚಿನ್ನವಾಗಬಲ್ಲುದು. ನಿಮ್ಮ ಮಾಯೆ ಬರಿ ನೀರು, ಕರಿ ಹಂಚು' ಎಂದು ಅಲ್ಲಮನು ತಿಳಿಹೇಳಿ ನಿಮ್ಮ ತಾಮಸದ ಚಂಚಲ ಭಕ್ತಿಗೆ ಸತ್ಫಲಂಗಗಳು ಬರಲಾರವು. ನೀವು ಬಂದ ದಾರಿಹಿಡಿದು ಹಿಂತಿರುಗಿರಿ ಎಂದೂ ಮಾಯೆಗೆ ಪರಮತತ್ವಜ್ಞಾನ ಲಭ್ಯವಿಲ್ಲೆಂದು ಹೇಳಿ ಕಾಣೆಯಾಗಿಬಿಡುತ್ತಾನೆ.

ಮಗಳು ಮದ್ದಳೆಯವನ ಬೆಂಬತ್ತಿ ಹೋದುದ್ದನು ಕೇಳಿ ಮಮಕಾರ ಭೂಪಾಲ ಆಕೆಯನ್ನು ಅರಸುತ್ತ ಬಂದು ಕಂಡು ಹೀಗೇಕೆ ಕುಲಕ್ಕೆ ಕಲಂಕ ತರುವ ಕೃತಿಯನೆಸಗಿದೆ ಎಂದು ವಿಚಾರಿಸುವನು? ತಾಯಿಯೂ ಜರೆಯುವಳು.

ಆಗ ಮಾಯೆ ತಾನು ಅಲ್ಲಮನ ಸತ್ವಪರೀಕ್ಷೆಗೆಂದು ಉಮೆಯಿಂದ ನೇಮಕಗೊಂಡು ಬಂದವಳು. ತನ್ನ ಕಾರ್ಯದಲ್ಲಿ ಯಶದೊರೆಯಲಿಲ್ಲ. ಇನ್ನು ರಜತ-ಪರ್ವತಕ್ಕೆ ಹಿಂತಿರುಗುತ್ತೇನೆ ಎಂದು ತಿಳಿಸಿ ವಿಮಳೆಯೊಡದೆ ಹೋಗಿಬಿಡುತ್ತಾಳೆ.

ನಿಜದ ನಿರಾಳ ನಿಶ್ಚಳ ನಿತ್ಯಸುಖ ಸಮ್ಮೇಳದಲಿ ಆಡುತಿಹ ಅಲ್ಲಮನನ್ನು ಪರೀಕ್ಷಿಸಿ ಹದಗೆಡಿಸ ಬಂದವಳು ಚಾಮರಸನ ಮಾಯೆ. ಆಕೆಯ ಕಾರ್ಯದಲ್ಲಿ ಯಶಸ್ಸು ದೊರೆಯಲಾರದು ಎಂಬುದೂ ಖಂಡಿತವೆ. ಆದರೆ ಚಾಮರಸನು ಪ್ರಾರಂಭಕ್ಕೆ ಅಲ್ಲಮನ ಪರಿಚಯ ಮಾಡಿಕೊಡದೆ ಮಾಯಾವಿಲಾಸವನ್ನೇ ವಿಜೃಂಭಿಸಿ ಅಲ್ಲಮನನ್ನು ಕೇವಲ ಮದ್ದಳಿಗನನ್ನಾಗಿ ಚಿತ್ರಿಸಿರುವದು ಚಾಮರಸನ ಕಲ್ಪನಾಶಕ್ತಿಯ ಹಿರಿಮೆಗೆ ದ್ಯೋತಕ.

ಸತ್ವಜೀವಿಯಾದ ವಿಮಳೆ ಮಾಯೆಗೆ ಅಲ್ಲಮನ ನಿಜರೂಪವನ್ನು ಅರಹುವ ನೆವದಲ್ಲಿ ಕವಿ ಅಲ್ಲಮನ ಪರಿಚಯ ಮಾಡಿಕೊಡುತ್ತಾನೆ. ಆಗಲೇ ಮಾಯೆಯ ಕಾರ್ಯ ಫಲಿಸದು ಎಂದು ಓದುಗರಿಗೆ ಹೊಳೆದುಬಿಡುತ್ತದೆ. ಈಶ್ವರೀ ಸಂಕೇತವೂ ಹಾಗೇ ಇದೆ ಎಂಬುದನ್ನೂ ಮರೆತು ಮಾಯೆಯ ಮುಂದಿನ ವಿಲಾಸಗಳನ್ನು ಅರಿತುಕೊಳ್ಳುವ ಕುತೂಹಲ ಉಳಿಯುವದು ಚಾಮರಸನ ಆಕರ್ಷಕ ಕಥನ ಕೌಶಲ್ಯದಿಂದಾಗಿ. ಚಾಮರಸನು ತನ್ನ ಕಥೆಯನ್ನು ಸುಂದರವಾಗಿ ಬೆಳೆಸಿಕೊಂಡು ಬರುವದಕ್ಕೆ ಆತನ ಚಿತ್ತಾಪಹಾರಕ ಸಂಭಾಷಣೆಗಳು ಬಹಳಷ್ಟು ಸಹಾಯಕವಾಗಿವೆ. ಕೇವಲ ಈ ಸಂಭಾಷಣೆಗಳನ್ನು ಆಸ್ವಾದಿಸಿದರೂ ಮಾಯೆ–ಅಲ್ಲಮ–ವಿಮಳೆಯರ ಚಿತ್ರಗಳು ವೈಶಿಷ್ಟ್ಯಪೂರ್ಣವಾಗಿ ನಮ್ಮ ಕಣ್ಣಮುಂದೆ ಕಟ್ಟುತ್ತವೆ. ಅಹಂಕಾರದಿಂದ ವಿಜೃಂಭಿಸುವ ಮಾಯೆಯ ಪ್ರಕರಣವನ್ನು ಚಾಮರಸನು ತುಂಬ ರಂಜಕವಾಗಿ ಚಿತ್ರಿಸಿದ್ದಾನೆ.

ಇನ್ನು ಹರಿಹರನ ಪ್ರಭುದೇವರ ರಗಳೆಯಲ್ಲಿ ನಿರ್ಮಾಯ (ಅಲ್ಲಮ) ಮಾಯೆಯನ್ನು ಮದುವೆಯಾಗಿ ಆಕೆ ಸತ್ತನಂತರ ವಿರಹಾಗ್ನಿಯಲ್ಲಿ ಬೆಂದು ಈಶ ಸಂಕೇತದಂತೆ ಗುರು ಕೃಪಾಕಟಾಕ್ಷಕ್ಕೆ ಪಾತ್ರನಾಗಿ ನಿತ್ಯಸುಖ ಪಡೆಯುತ್ತಾನೆ. ಆದರೆ ಚಾಮರಸನ ಅಲ್ಲಮ ಹುಟ್ಟಿನಿಂದಲೇ ಸಿದ್ಧಪುರುಷ. ಹೀಗೆ ಈ ಇಬ್ಬರು ಕವಿಗಳಲ್ಲಿ ತಮ್ಮ ನಾಯಕರ ಬಗೆಗೆ ಮೂಲಭೂತಕಲ್ಪನೆಗಳೇ ಭಿನ್ನವಾಗಿರುವಾಗ ಅವರಲ್ಲಿ ತುಲನೆ ಸಲ್ಲದು ವಿಮರ್ಶೆಯ ಮಾನದಂಡಕ್ಕೂ ಅದು ಒಪ್ಪಿತವಲ್ಲ. □

# ' ನೂರೊಂದರಲ್ಲಿ ನಿಜವ ಕಂಡ '

# ನಿರ್ವಾಣಿ ಬೊಳೇಶ

---

ಪ್ರೊ. ವಿ. ಶಿವಾನಂದ.

ವಿಜಯನಗರದ ದೊರೆ ಪ್ರೌಢದೇವರಾಯನ ಆಳ್ವಿಕೆಯ ಕಾಲವು ( ಕ್ರಿ. ಶ. ೧೪೨೪-೧೪೪೬ ) ವೀರಶೈವ ಸಾಹಿತ್ಯದ ಪುನರುತ್ಥಾನ, ಪುನರ್ವಿರಚನ, ಪರಾಮರ್ಶೆಗಳ ದೃಷ್ಟಿಯಿಂದ ಗಣನೀಯವಾದುದು.

ಹರರೂಪವಾದ ನೂರೊಂದು ವಿರಕ್ತರು, ಮಹಾಲಿಂಗದೇವ, ಜಕ್ಕಣಾರ್ಯ. ಕುಮಾರ ಬಂಕನಾಥ, ಕರಸ್ಥಲದ ವೀರಣ್ಣೊಡೆಯ ಕರಸ್ಥಲದ ನಾಗದೇವ, ಗುರುಬಸವ, ಮಗ್ಗೆಯ ಮಾಯಿದೇವ, ಚಾಮರಸ, ಲಕ್ಕಣ್ಣದಂಡೇಶರೇ ಮೊದಲಾದ ಶಿವಾನುಭಾವಿಗಳು, ವಚನ ಸಂಕಲನಕಾರರು ವಚನ ಟೀಕಾಚಾರ್ಯರು ಮಹಾಕವಿಗಳು ಏಕಕಾಲದಲ್ಲಿ ಅವತರಿಸಿ ವೀರಶೈವ ಸಾಹಿತ್ಯ ಸಂಸ್ಕೃತಿಯನ್ನು ಉಳಿಸಿದರು, ಬೆಳಸಿದರು.

ಅಂದಿನ ಎಲ್ಲ ಮಹಾನುಭಾವರಲ್ಲಿ ತಮ್ಮ ಅಪೂರ್ವ ವಿಲಕ್ಷಣ ಚರಿತ್ರೆಯಿಂದ ಹೆಸರಾಂತ ಶರಣರೆಂದರೆ ನೂರೊಂದು ವಿರಕ್ತರು. ಈ ವಿರಕ್ತರು ಯಾರು? ಅವರು ಗೈದ ಮಹತಿಗಳೇನು? ಸೃಜಿಸಿದ ಸಾಹಿತ್ಯವೆಂಥದು? ಎಂಬೀ ವಿಷಯವು ಇನ್ನೂ ನೆಲದ ಮರೆಯ ನಿಧಾನ'ವಾಗಿದೆ. ಕಾಲಗರ್ಭದಲ್ಲಿ ಹುದುಗಿದ ಈ ಲೋಕಪೂಜ್ಯರ ಚರಿತ್ರೆ ಬೆಳಕಿಗೆ ಬಾರದೆ ಹೋದರೆ ಪ್ರಾಯಶಃ ವೀರಶೈವ ಚರಿತ್ರೆ ಈಗ ನಶಿಸಿ ಹೋದುದೆಷ್ಟೆಂಬ ಲೆಕ್ಕವಿಲ್ಲದಿದ್ದರೂ ಮುಂದೆಯೂ ನಶಿಸೀತೆಂಬ ಭಯ ನಮ್ಮನ್ನು ಬಾಧಿಸದಿರದು. ನೂರೊಂದು ವಿರಕ್ತರ ಪ್ರಸ್ತಾಪವು ಗುಬ್ಬಿ ಮಲ್ಲಣಾರ್ಯನ ವೀರ-ಶೈವಾಮೃತ ಮಹಾಪುರಾಣ ( ೧೫೩೦ ) ಕಿಕ್ಕೇರಿಯಾರಾಧ್ಯನ ಭೈರವೇಶ್ವರಕಾವ್ಯ, ( ೧೫೫೦ ) ಅದೃಶ್ಯಕವಿಯ ಪ್ರೌಢರಾಯನ ಕಾವ್ಯ ( ೧೫೮೦ ) ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣ ( ೧೫೮೪ ) ಸಟೀಕುಸ್ವರ ಏಕೋತ್ತರ ಶತಸ್ಥಲ ( ಶಕೆ ೧೬೦೦ ) ಸಿದ್ಧನಂಜೇಶನ ರಾಘವಾಂಕ ಚರಿತ್ರೆ ( ೧೬೫೦ ) ರಾಮಪುರ ಬೊಕ್ಕಕವಿಯ ನಿಜಶರಣರ ತ್ರಿವಿಧಿ ( ೧೬೫೦ ) ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ ( ೧೬೭೨ ) ನಿರಂಜನ ವಂಶರತ್ನಾಕರ . ೧೮೫೦) ಇತ್ಯಾದಿ ಕಡೆಗಳಲ್ಲಿ ಬರುತ್ತದೆ. ಇವರ ಸಮಗ್ರ ಚರಿತ್ರೆಯನ್ನು ಪೋಣಿಸಿ ಹೇಳಿದ ಒಬ್ಬ ಪುರಾಣಕವಿಯೆಂದರೆ ಮೋದಿಯ

ರುದ್ರ. ಇವನ ಕಾಲ ಕ್ರಿ. ಶ. ೧೮೩೨. ಮಳೆಯ ಮಲ್ಲೇಶನ ಆಜ್ಞಾನುಸಾರಿಯಾಗಿ ಈತ ನೂರೊಂದು ವಿರಕ್ತ ಕಾವ್ಯಬರೆದುದಾಗಿ ಹೇಳಿಕೊಂಡಿದ್ದಾನೆ.[೧] ಇದನ್ನು ಸಂಶೋಧಿಸುವ ಕೆಲವೊಂದು ತೊಂದರೆಗಳು ಉದ್ಭವಿಸಬಹುದಾದರೂ ನೂರೊಂದು ವಿರಕ್ತರ ಚರಿತ್ರೆ ಕಪೋಲಕಲ್ಪಿತವಲ್ಲವೆಂಬುದಕ್ಕೆ ಅನೇಕ ಬಾಹ್ಯಾಂತರ ಪ್ರಮಾಣಗಳು ನಮಗೆ ಬೆಂಬಲ ನೀಡುತ್ತವೆ.

ನೂರೊಂದು ವಿರಕ್ತರಲ್ಲಿ ಕೆಲವರು ತರ್ಕ, ಅನುಭಾವ, ವೇದಾಂತ, ಸಿದ್ಧಾಂತ, ಶಿವಯೋಗಕ್ಕೆ ತವರ್ಮನೆಯೊಗಿದ್ದಾರೆ. ಹಲವರು ಸುಂದರವಾದ ಹಾಡುಗಳನ್ನು ರಚಿಸಿದ್ದಾರೆ. ಕರ್ನಾಟಕದಲ್ಲಿ ದಾಸರು ಕೀರ್ತನೆಗಳನ್ನು ಹಾಡುವವದಕ್ಕಿಂತ ಮೊದಲೇ ಇವರು ಬರೆದ ರಾಗ ತಾಳ ಬದ್ಧವಾದ ಹಾಡುಗಳ ಸಂಕಲನ ನಮಗೆ ದೊರಕುತ್ತಿರುವದು ಅಪೂರ್ವವಾಗಿದೆ.[೨] ಅಲ್ಲಿ ಅನೇಕ ರಾಗಕಲಿತ ವಚನಗಳೂ, ಸ್ವತಂತ್ರ ಹಾಡುಗಳೂ ಇರುವದು ಕಂಡುಬರುತ್ತದೆ. ಇವನ್ನು ಬರೆದ ನೂರೊಂದು ವಿರಕ್ತರಲ್ಲಿ ನಿರ್ವಾಣಿ ಬೋಳೇಶನೂ ಒಬ್ಬ.

ನಿರ್ವಾಣಿ ಬೋಳೇಶನ ವಿಷಯವು ಈ ವರೆಗಿನ ಕವಿ ಚರಿತೆಕಾರರ. ಸಾಹಿತ್ಯ ಚರಿತ್ರೆಕಾರರ ಅವಗಾಹನೆಗೆ ಬಾರದೇ ಹೋದುದಕ್ಕೆ ಅನೇಕ ಕಾರಣಗಳಿವೆ. ಮೊದಲನೆಯದಾಗಿ ನಿರ್ವಾಣಿ ಬೋಳೇಶನು ನೂರೊಂದು ವಿರತರಲ್ಲಿ ಒಬ್ಬನೆಂಬುದಕ್ಕೆ ಹಿಂದಿನವರೇ ಏಕಾಭಿಪ್ರಾಯವನ್ನು ಹೊಂದಿಲ್ಲ. ನೂರೊಂದು ವಿರತರ ಕಾವ್ಯವನ್ನು ಬರೆದ ಮೋದಿಯ ರುದ್ರನೂ ಕೂಡ ಈ ಹೆಸರನ್ನು ಹೇಳದೇ ಹೋಗಿರುವನು. ಎರಡನೆಯದಾಗಿ ನಿರ್ವಾಣಿ ಬೋಳೇಶನು ಬರೆದ ಸಾಹಿತ್ಯದ ಅನುಪಲಬ್ಧಿಯೂ ಕೂಡ ಇವನ ಚರಿತ್ರ ನಿರ್ದೇಶನಕ್ಕೆ ಆತಂಕವಾಗಿದ್ದವು. ಆದರೆ ಈಗಿನ ಉಪಲಬ್ಧ ಸಾಮಗ್ರಿಗಳ ಮೇಲಿಂದ ಇವನ ಬಗೆಗೆ ಕೆಲವು ಮಾಹಿತಿಗಳನ್ನಿಲ್ಲಿ ಒದಗಿಸಬಹುದು.

ನಿರ್ವಾಣಿ ಬೋಳೇಶನು ವಿಜಯನಗರದ ನೂರೊಂದು ವಿರತರಲ್ಲಿ ಒಬ್ಬನೆಂಬುದು ಸ್ಪಷ್ಟ. ನೂರೊಂದು ವಿರತರ ಕಾವ್ಯದಲ್ಲಿ ೩೩ನೆಯದಾಗಿ ಬರುವ ಬಯಲ ಶಾಂತನನ್ನೇ ನಿರ್ವಾಣಿ ಬೋಳೇಶ ಎಂದು ಊಹಿಸಲು ಬರುವಂತಿದೆ.[೩] 'ಬಯಲು' 'ನಿರ್ವಾಣ' 'ಬೋಳು' ಇವು ವೀರಶೈವ ಪರಿಭಾಷೆಯಲ್ಲಿ ಸಮಾನಾರ್ಥ ಸೂಚಕವಾಗಿವೆ. ವಿರೂಪಾಕ್ಷ ಪಂಡಿತನು ನಿರ್ವಾಣಿ ಬೋಳೇಶನನ್ನು ಕುರಿತು ಅವನ ಬಯಲ ಸಂಧಾನದ ವಿವರವನ್ನೇ ಮುಖ್ಯವಾಗಿ ತನ್ನ ಪದ್ಯದಲ್ಲಿ ಕೊಟ್ಟಿರುವದರಿಂದ ಇವರಿಬ್ಬರೂ ಒಂದೇ ವ್ಯಕ್ತಿಗಳಾಗಿರಬಹುದೆಂದು ತರ್ಕಿಸಬಹುದಾಗಿದೆ. ಮೋದಿಯ ರುದ್ರನಿಗಿಂತ ಪೂರ್ವದಲ್ಲಿಯೇ ರಚಿತವಾದ ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣದಲ್ಲಿ ಇವನ ಹೆಸರು ಉಲ್ಲೇಖಗೊಂಡಿದೆ. ಅದರಲ್ಲಿ ಬೋಳೇಶನ ವಿಷಯಿಕವಾಗಿ ಹೀಗೆ ಹೇಳಲಾಗಿದೆ.

---

೧. ನೂರೊಂದು ವಿರಕ್ತರ ಕಾವ್ಯ ಹಸ್ತಪ್ರತಿ ಕ. ವಿ ವಿ. ವಚನ ಭಂಡಾರ ಧಾರವಾಡ
೨. ಶಿವಯೋಗ ಪ್ರದೀಪಿಕೆ ಗಣವಚನ ರತ್ನಾವಳಿ ಇತ್ಯಾದಿ ಕ.ಚ.ಭಾ. ೩ ಪು. ೩೮೦
೩. ನೂ. ವಿ. ಕಾ. ಹ. ಪ್ರ. ಸಂ. ೧೩೭೯.

ಆಲಿಸಿನ್ನೆಲೆ ಸಿದ್ಧರಾಮೇಶ ನಿರ್ವಾಣಿ
ಬೋಳೇಶನತಿ ಪವಾಡಂಗಳಂ ಮೆರವುತಿರು
ತಾಲದಮರನ ಬಿಳಲಪಿಡಿಕೊಂಡು ಶಿವಯೋಗ ನಿಜಸಮಾಧಿಯಲಿನಿಂದು
ಲೀಲೆಯಿಂದಿರಲಾಗಲರ್ಲ್ಲಿರ್ಪ ಭಕ್ತಜನ
ಜಾಲಮೀತಂ ತೀರ್ದನೆಂದು ತೆಗೆಯಲ್ಕಿರದೆ
ಪೇಳಲೇನವರ ಕೈಯೊಳಗೆನಿರವಯುವಪ್ಪನೆಲ್ಲರುಂ ಚೋದ್ಯಮನಲು[೪]

ನಿರ್ವಾಣಿ ಬೋಳೇಶನು ಅನಂತ ಪವಾಡಗಳನ್ನು ಮೆರೆದು ಒಮ್ಮೆ ಆಲದ ಮರದ ಜಡೆಗಳನ್ನು ಹಿಡಿದುಕೊಂಡು ಅಲ್ಲಿಯೇ ಶಿವಯೋಗ ಸಮಾಧಿಸ್ಥನಾಗುವನು. ಇವನ ಅಂತರ್ಧಾನದ ಮರ್ಮವರಿಯದ ಅಲ್ಲಿ ಭಕ್ತಜನಗಳು ಈತನು ತೀರಿದನೆಂದು ಅವನ ಕೈಗಳನ್ನು ಜಡೆಗಳಿಂದ ಬಿಡಿಸುತ್ತಿರುವಾಗಲೇ ಬೋಳೇಶನು ಲಿಂಗೈಕ್ಯನಾಗುವನು.

ವಿರೂಪಾಕ್ಷ ಪಂಡಿತನ ಈ ಹೇಳಿಕೆಗೆ ಮೂಲ ಆಕರವೆಲ್ಲಿಂದ? ಎಂಬುದು ಗೊತ್ತಾಗದಿದ್ದರೂ ಇಂಥ ಅನೇಕ ಅಲೌಕಿಕ ವ್ಯಕ್ತಿಗಳು ನೂರೊಂದು ವಿರಕ್ತರಲ್ಲಿದ್ದರೆಂಬ ಜನಜನಿತ ವದಂತಿಗಳು ಮಾತ್ರ ಇವನ ವ್ಯಕ್ತಿ ಸಂಗತಿಗೆ ಪುಷ್ಟಿಯನ್ನೊದಗಿಸುತ್ತವೆ. ನಿರ್ವಾಣಿ ಬೋಳೇಶನು ಓರ್ವ ಪವಾಡ ಪುರುಷನೂ ಶಿವಯೋಗದ ನೆಲೆಯನರಿತ ಮಹಿಮನೂ ಆಗಿದ್ದನು. ಕರಸ್ಥಲದ ನಾಗಿದೇವ ಬಿದಿರ ಮೆಳೆಗೆ ತಲೆ ಸಿಕ್ಕಿಸಿಕೊಂಡು ಯೋಗ ಸಮಾಧಿಯಲ್ಲಿದ್ದರೆ ಬೋಳೇಶನು ಆಲದ ಮರದ ಜಡೆಗಳನ್ನು ಹಿಡಿದು ಕೊಂಡು ಯೋಗಸಮಾಧಿಯಲ್ಲಿ ಬೆರೆದನು. ಲೋಕದ ಕಣ್ಣಿಗೆ ಮರುಳನಂತೆ ತೋರಿ ನಿರವಯಲ ಸಿದ್ಧಿ ಪಡೆದನು. ಈ ಶಿವಯೋಗದ ಸಿದ್ಧಿಸಾಧನೆಗಳನ್ನು ನೋಡಿದರೆ ಪ್ರಾಯಶ: ಬೋಳೇಶ ಮತ್ತು ಕರಸ್ಥಲ ನಾಗಿದೇವರು ಮೊದಮೊದಲು ಹಠ ಯೋಗಕ್ಕೆ ಒಲಿದು ನಂತರದಲ್ಲಿ ಅನುಭಾವ ಪಥದ ಮೇಲೆ ನಡೆದು ಸಮಷ್ಟಿ ಯೋಗವಾದ ಶಿವಯೋಗವನ್ನು ದೊರಕಿಸಿಕೊಂಡರೆಂದು ಹೇಳಬಹುದು.

## ನಿರ್ವಾಣಿ ಬೋಳೇಶನ ಹಾಡುಗಳು :

ಯೋಗ ಸಾಧನೆ ಅನುಭಾವ ಸಿದ್ಧಿ ಹಾಗೂ ಶರಣ ತತ್ವಗಳ ಸಾಕಾರ ರೂಪ ವಾಗಿದ್ದ ಬೋಳೇಶನು ಕರಸ್ಥಲ ನಾಗಿದೇವನಂತೆ ಅನೇಕ ಹಾಡುಗಳನ್ನು ರಚಿಸಿರುವನ್ನು ನಿರ್ವಾಣಿ ಬೋಳೇಶ ನಿರ್ವಾಣಿ ಪ್ರಿಯ ಬೋಳೇಶ ಬೋಳೇಶಲಿಂಗ ಎಂಬ ಅಂಕಿತದ ಕೆಲವು ಹಾಡುಗಳು ಈಗಾಗಲೇ ಬೆಳಕು ಕಂಡಿವೆ.[೫]

ನಿರ್ವಾಣಿ ಬೋಳೇಶನ ಹಾಡುಗಳು ವೀರಶೈವ ಪ್ರಾಣಲಿಂಗಿ ಸ್ಥಲಕ್ಕೆ ಸಂಬಂಧಿ ಸಿದುದಾಗಿದೆ. ಅಲ್ಲದೆ ಕೆಲವು ಪದ್ಯಗಳು ಶರಣ ಸತಿ–ಲಿಂಗ ಪತಿ ಭಾವವನ್ನೂ ಇನ್ನೂ ಕೆಲವು ಅವನ ಯೋಗಾನುಸಂಧಾನದ ಬಗೆಯನ್ನೂ ಒಳಗೊಂಡಿವೆ.

---

೪. ಚೆ. ಬಾ. ಪು. ಸಂಧಿ ೬೩–ಪ. ೨೬.

೫. ಶಿವದಾಸ ಗೀತಾಂಜಲಿ ಹಾಡು ೧೨೭, ೧೪೪, ೧೮೩,
ಸಂ. ಡಾ. ಎಲ್. ಬಸವರಾಜ

ರಾಗ—ಭೈರವಿ

ನೋಡುವ ನೋಟಗಳೊಂದು
ಮಾಡುವ ಬೇಟಗಳೆರಡು ಮಾ
ತಾಡುವ ಸವಿಗಳು ಮೂಱು ಸರಸದ ಕಲೆ ನಾಲ್ಕು
ನೋಡುವ ಬೇಟವ ಮಾಡುತ ಮಾ
ತಾಡುವ ಸರಸವನಾಡುತ್ತ
ಗಾಡಿಕಾಜನಂಗವನಱಿವಳಾರೆ

ಶರಣ ಸತಿ-ಲಿಂಗ ಪತಿಯೊಡನಾಟದ ಸರಸ ಭಾವವನ್ನು ನಿರ್ವಾಣಿ ಬೋಳೇಶ ಇಲ್ಲಿ ಕ್ರಮಬದ್ಧವಾಗಿ ನಿರೂಪಿಸಿದ್ದಾನೆ. ನೋಡುವ ನೋಟ ಮಾಡುವ ಬೇಟ ಎಲ್ಲವೂ ಇಲ್ಲಿ ಲಿಂಗಧ್ಯಾನದಲ್ಲಿ ನಿರತವಾಗಿದೆ. ಈ ಬಗೆಯ ಸಾಮರಸ್ಯದ ಸೌಖ್ಯ ಪಡೆದ ಲಿಂಗಪತಿ ಒಬ್ಬ ಗಾಡಿಕಾರನೆಂದು ಹೇಳುವಲ್ಲಿ ಬೋಳೇಶನ ರೀತಿ ರಾಮಣೀಯಕವಾಗಿದೆ. ನೋಟ ಈಕ್ಷಣ ಭಕ್ತಿ ಮಾಟ ಮಾನಸಭಕ್ತಿ ಮಾತು ವಾಚಿಕ ಭಕ್ತಿ, ಸರಸ ಕಾಯಭಕ್ತಿ ಈ ನಾಲ್ಕು ಕಲೆಗಳು ನಾಲ್ಕು ಭಕ್ತಿಗಳಾಗಿವೆ. ಲಿಂಗದ ನೋಟ. ಮನದ ನೆನಹು ಸಮರಸ ಭಾವದಲ್ಲಿ ಶರಣ ತನುವೆಲ್ಲವು ಲಿಂಗಮಯವಾಗಿದೆ ಎಂಬುದರ ಬೆಡಗಿನ ಬಣ್ಣನೆ ನಿರ್ವಾಣಿ ಬೋಳೇಶನ ಮೇಲಣ ಪದ್ಯದಲ್ಲಿ ಅರ್ಥವತ್ತಾಗಿ ಮೂಡಿಬಂದಿದೆ.

"ಗೊರವಿಯ ರಾಡಿಯ ರಾಹೊ" ಎಂಬ ಅವನ ಪದ್ಯ ಸಂಪೂರ್ಣ ಬೆಡಗಿನಲ್ಲಿದೆ.

ರಾಗ—ಪಾಡಿ

'ಕುಂಕುಮದ ವಸಂತವನಮ್ಮ
ಶಂಕಿನ ಗೊರವಿಯ ರಾಡಿಯಹರಾಹೆ ‖ ಪಲ್ಲವಿ ‖

ಇಲ್ಲಿ ಬೋಳೇಶ ಶಿವತತ್ವ ರಹಸ್ಯವನ್ನು ಕಾವ್ಯಮಯ ರೀತಿಯಲ್ಲಿ ಬಣ್ಣಿಸುವನು.

ನವಿಲ ಹೀಲಿ ಗುಲಗುಂಜಿಯ ದಂಡೆ
ಕಾಲಲ್ಲಿ ಗೆಜ್ಜೆ ಕೊರಳಲ್ಲಿ ಶಂಖ ಮಣಿ
ಕುಂಭಿಟ್ಟು ಕುಣಿಬಾ ಕುಂಭಿಟ್ಟು ಕುಣಿಬಾ
ಕುಂಭಿಟ್ಟು ಕುಣಿ ಕುಣಿದಾಡಿಯರಾಹೊ.

ಬೋಳೇಶನ ಮೇಲಣ ಪದ್ಯ ಓರ್ವ ಬೇಡ ಕನ್ಯೆಯನ್ನು ವರ್ಣಿಸುವಂತೆ ತೋರಿದರೂ ಆ ವರ್ಣನೆ ಶರಣ ಸತಿಯ ಶೃಂಗಾರದ ವರ್ಣನೆಯಲ್ಲದೆ ಬೇರೊಂದಲ್ಲ. ಕುಂಕುಮ ವೆಂದರೆ ಇಲ್ಲಿ ಜ್ಞಾನಾನಂದ, ಗೊರವಿಯರು ಎಂದರೆ ಮಂತ್ರ ಶಕ್ತಿಯರು, ನವಿಲ ಹೀಲಿ – ಭಾವಾಚಾರ, ಗುಲಗಂಜಿ – ಸ್ಥಳಕುಳ, ಕಾಲಲ್ಲಿ ಗೆಜ್ಜೆ – ಕ್ರಿಯಾನುತಿ, ಕೊರಳಲ್ಲಿ ಶಂಖಮಣಿ – ದೃಢಭಾವ, ಈ ಬಗೆಯ ಅರ್ಥ ಸಂಪತ್ತಿನಿಂದಲ್ಲದೆ ಮೇಲಣ ಪದ್ಯದ ಬೆಡಗಿನ ಸೊಗಸು ವೇದ್ಯವಾಗುವದಿಲ್ಲ.

ನಿರ್ವಾಣಿ ಬೋಳೇಶನ ಇನ್ನೊಂದು ಪದ್ಯ ಶರಣಸತಿಯನ್ನು ಲಿಂಗಪತಿಗೆ ಧಾರೆ ಯೆರೆದಂ ಕೊಟ್ಟ ಸಂದರ್ಭವನ್ನು ವಿವರವಾಗಿ ವರ್ಣಿಸುತ್ತದೆ. ಇಲ್ಲಿ ಜೀವಾತ್ಮ –

ಪರಮಾತ್ಮ ಸಂಯೋಗದ ಸಕೀಲವನ್ನು ಹಿನ್ನೆಲೆಯಾಗಿಟ್ಟುಕೊಂಡು ತಾನು ಹೇಗೆ 'ನಿರ್ವಾಣ' 'ನಿಶ್ಚಿಂತ' ಪದವನ್ನು ಪಡೆದನೆಂಬುದನ್ನು ಬೋಳೇಶ ವಿಸ್ತರಿಸಿ ಹೇಳಿದ್ದಾನೆ.

ರಾಗ—ಭೈರವಿ

ಇಹಪರವೆಂಬ ಐರಣಿಹೂಡಿ ಶಿವೋಹಂ ಎಂಬ ಅಗ್ಗವಣಿ ತುಂಬಿದರು
ಅಂಬರ ಚಪ್ಪರದಲಿ ಕುಂಭಿನಿಯನೆ ಹಾಸಿದರು
ಆದಿಮದುವಣಿಗನಿಗೆ ಬ್ರಹ್ಮದ ಬಾಸಿಂಗ ಕಟ್ಟಿದರು.
ಅನಾದಿಮದವಳಿಗೆಗೆ ಆತ್ಮದ ತೊಂಡಿಲ ಕಟ್ಟಿದರು
ಮುತ್ತೈದೆಯರೆಂಬ ತತ್ವ ಹೆಣ್ಣುಗಳು ಶೋಭನದೊಸಗೆಯ ಹಾಡಿ
ಸತ್ಯಸಹಜ ಜ್ಯೋತಿಯ ಆರತಿಗೆಳನೆತ್ತಿ ಹಾಡಿದರು
ವೇದವರಿಯದ ಸಾಕ್ಷಿಯನಿದಿರಿಟ್ಟು
ಸಾದರದಿಂದ ಉಭಯರ ಕೈಗೂಡಿಸಿದರು

ಶರಣಸತಿ – ಲಿಂಗ ಪತಿಯರ ವಿವಾಹ ಮಹೋತ್ಸವವಿದು. ಈ ಮದುವೆ ಪರಕೆ ಪರಾನಂದ ಉಪಮೆಗುಪಮಾತೀತ. ಜೀವಾತ್ಮ ಪರಮಾತ್ಮರ ಅನುಸಂಧಾನವನ್ನು ನಿರ್ವಾಣಿ ಬೋಳೇಶ ಇಲ್ಲಿ ಬಹು ಮಾರ್ಮಿಕವಾಗಿ ನಿರೂಪಿಸಿದ್ದಾನೆ.

ನಿರ್ವಾಣಿ ಬೋಳೇಶನ ಆಧ್ಯಾತ್ಮದ ಭಾವಗೀತೆಗಳಲ್ಲಿ ಸುಂದರವಾದ ಇನ್ನೊಂದು ಗೀತೆ 'ಹೀಗೊತ್ತಿ ಬಾ' ಎಂಬದು[೪] ಶರಣಸತಿಯಳಿಗೆ ಲಿಂಗಪತಿಯನ್ನು ಕೂಡುವ ಹಂಬಲು. 'ಹೋಗರೇರ್ವ ಹೊಂಬಣ್ಣ ಮುಖದೊಳು ಮುಖವಿಟ್ಟು, ಉರದೊಳು ಉರ ಒತ್ತಿಕೋ ಬಾ' ಎಂದು ಲಿಂಗಪತಿ ಅವಳನ್ನು ಕರೆಯುತ್ತಾನೆ. ಆಕೆ ನಲ್ಲನಲ್ಲಿ ಒಡನಾಟನಾಡುವ ಬಗೆಯಿದು !

ರಾಗ - ಒಡ್ಡಿಯಾಧನ್ಯಾಸಿ

ಕಡೆಗಣ್ಣ ಕಾತುರ ಕಟ್ಟಿವಂಕುರಿಸೆ
ಕುಡುಕು ಚುಂಬನ ತುಂಬಿ ನವಸುಧೆಯು
ಜಡದೆ ಕುಂಕುಮ ವಾದ ಮೊಲೆಗಳ ಪೊಟ್ಟಣವೊತ್ತೆ
ಮುಡಿಸಿ ತೋಳುಗರ ಪಟ್ಟಿಡ ಪೊದಿಸೆ.

" ಮುಗುಳ್ನಗೆಯಿಂದ, ಸಂಗದ ಬೆಮರಿಂದ, ಮಂಗಳಾತ್ಮಕನಾದ ನಿರ್ವಾಣಿ ಬೋಳೇಶ ನನ್ನು ಹಿಂಗದೆ ಬಿಗಿದಪ್ಪಿಕೋ ಬಾ " ಮೇಲು ನೋಟಕ್ಕೆ ಇದೊಂದು ದಾಂಪತ್ಯ ಜೀವನದ ಶೃಂಗಾರ ಸನ್ನಿವೇಶವಾಗಿದ್ದರೂ ಇಲ್ಲಿನ ಭಾವೋನ್ನತಿ ಬೋಳೇಶನ ದರ್ಶನದ ಆಳದಿಂದ ಹೊರಹೊಮ್ಮಿದೆ. 'ಕಡೆಗಣ್ಣ ಕಾತುರವೆಂದರೆ ಅನಿಮಿಷ ದೃಷ್ಟಿ. '' ಕುಡುಕು ಚುಂಬನ 'ವೆಂದರೆ, ಮಂತ್ರೋಚ್ಚರಣೆ 'ಕುಂಕುಮದ ಮೊಲೆಗೆ ಭಕ್ತಿ, ಸತ್ಕರ್ಮ

೪. ಶಿ. ಧಾ. ಗೀ. ೧೩೬

ಗಳೆಂದರ್ಥ.' 'ತೋಳುಗಳನ್ನು ಮಡಿಸುವದು' ಎಂದರೆ ಭಾವ ನಿರ್ಭಾವವಾಗುವದು. 'ಉರದಲ್ಲಿ ಉರವೊತ್ತುವದೆಂದರೆ ಶರಣ ಸತಿಯುಳ ಅಂಗ ಮನ ಭಾವವೆಲ್ಲ ಲಿಂಗ ಮನಭಾವದಲ್ಲಿ ಬೆರೆಯುವದು. ಅರ್ಥಾತ್ ಲಿಂಗಾಂಗ ಒಂದಾದಗುವದು. ವೀರಶೈವ ತತ್ವ ರಹಸ್ಯದ ಬೆಡಗಿನ ಬಣ್ಣನೆಯೇ ಬೋಳೇಶನ ಈ ಪದ್ಯದಲ್ಲಿ ಯಥಾವತ್ತಾಗಿ ವಿವರಿಸಲ್ಪಟ್ಟಿದೆ.

ನಿರ್ವಾಣಿ ಬೋಳೇಶ ಯೋಗದ ಪರಮ ರಹಸ್ಯವನ್ನರಿತವನು. 'ಆತ ಯೋಗಿ'[೭] ಎಂಬ ಪದ್ಯದಲ್ಲಿ ಅವನ ಯೋಗ ಜೀವನದ ಆಳಗಲಗಳನ್ನು ಕಾಣುತ್ತೇವೆ. ಯಾರು ಯೋಗಿ ಎಂದು ಪ್ರಶ್ನಿಸುತ್ತ ನಿರ್ವಾಣಿ ಬೋಳೇಶ ಹೀಗೆ ವಿವರಿಸುತ್ತಾನೆ.

ರಾಗ—ಶ್ರೀರಾಗ

ಕಾಣಬಾರದ ಕರುಕನ ತಿರುಕನ ಆರು
ಕಾಣದ ಕಣ್ಣಲಿ ಕಂಡಾತ ಯೋಗಿ
ಆಡಗಿರ್ದ ಕಳ್ಳರನೈವರ ವಂಚಿಸಿ ಆರು
ನಡೆಯದ ಪಥದಲ್ಲಿ ನಡೆದಾತ ಯೋಗಿ
ಬಣ್ಣಿಸಬಾರದ ಬಸಿದಲೆ ವೊಡಿಲಿ ಆ
ರುಣ್ಣದೂಟವನುಂಬಾತ ಯೋಗಿ
ಉರುತರ ನಿರ್ವಾಣಿ ಪ್ರೇಮ ಬೋಳೇಶನೊಳಾರು
ನೆರೆಯದ ಕಾಂತೆಯು ನೆರೆದಾತ ಯೋಗಿ

ಈ ಕಾಲದ ಶರಣರ ಹಾಡುಗಳಲ್ಲೇ ಮೇಲಣ ಪದ್ಯ, ಶೈಲಿ. ಅನುಭಾವಗಳ ದೃಷ್ಟಿಯಿಂದ ಮೇಲಾದುದು. ಈ ಪದ್ಯದ ಮೊದಲಲ್ಲಿ ವರ್ಣಿತವಾದ ತಿರುಕನು ಇನ್ನಾರೂ ಅಲ್ಲ 'ಶಿವಜ್ಞಾನಿ'. ಯಾರು ತನ್ನ ಮೂಲಜ್ಞಾನದ ದೃಷ್ಟಿಯಿಂದ ಅವನನ್ನು ಕಾಣುವರೋ ಆತ ಯೋಗಿ. ೨ನೆಯ ಪದ್ಯದಲ್ಲಿ ಬರುವ ಕಳ್ಳರೈವರೆಂದರೆ ಪ್ರಾಣ ಪಂಚಕಗಳು. ಇವನ್ನು ಯೋಗ ಬಲದಿಂದ ಉರ್ಧ್ವಮುಖವಾಗಿಸಿಕೊಂಡವನೇ ಯೋಗಿ. ಯಾರು ನಡೆಯದ ಪಥದಲ್ಲಿ ಎಂದರೆ ಆಧಾರದಿಂದ ಮೊದಲಾಗಿ ಪಶ್ಚಿಮದ ಸಹಸ್ರಾರ ಚಕ್ರದ ಹೊಂಬೆಳಗಿನ ಹಾದಿ. 'ಬಸಿದಲೆ ಓಡೆಂದರೆ' ಬ್ರಹ್ಮ ರಂದ್ರ! ಆರುಣ್ಣದೂಟವೆಂದರೆ ಪರಮ ರಸಾನಂದದ ಶಿವಸಾಮರಸ್ಯದ ಸುಧಾಮೃತ. ಯಾರೂ ನೆರೆಯದ ಕಾಂತೆಯಲ್ಲಿ ನೆರೆವುದೆಂದರೆ ಶಿವವನಿತೆ ಅರ್ಥಾತ್ ಉನ್ಮನಿ ದೇವತೆಯಲ್ಲಿ ಸಮರಸವಾಗುವದು.

ಬೋಳೇಶನ ಮೇಲಿನ ಪದ್ಯವು ಅವನು ಎಷ್ಟು ಎತ್ತರದ ಶಿವಯೋಗಿಯಾಗಿದ್ದನೆಂಬುದನ್ನು ಸಾರವತ್ತಾಗಿ ಚಿತ್ರಿಸುತ್ತದೆ. ಈ ಯುಗದ ನೂರೊಂದು ವಿರತರೆಲ್ಲರೂ ಇಂಥ ಯೋಗಸಿದ್ಧಿಯನ್ನು ಪಡೆದವರೇ ಆಗಿರಬೇಕು. ಸಾಹಿತ್ಯ ಸೃಷ್ಟಿ ಮಾಡಿರದ ಕಾರಣ ಅವರಲ್ಲಿ ಅನೇಕರ ವ್ಯಕ್ತಿ ದರ್ಶನ ಸಮಗಾಗದೇ ಹೋಗಿದೆ. ಬೋಳೇಶನ ಈ

೭. ಅದೇ ೧೭೬

ಗೀತೆಗಳು ಕನ್ನಡದ ಅನುಭಾವ ಸಾಹಿತ್ಯದ ಅಮೂಲ್ಯ ಸಂಪತ್ತಾಗಿವೆ. ನಿರ್ವಾಣಿ ಬೋಳೇಶ ಮಹಾಯೋಗಿ ಮಹಾನುಭಾವಿ. ಅವನ ಭಾಷೆ ಬೆಡಗಿನದು. ಭಾವ ದಿವ್ಯಾನುಭೂತಿಯದು. ವೀರಶೈವ ಸಿದ್ಧಾಂತದ ಜೊತೆಗೆ ಯೋಗದ ನಿಗೂಢವನ್ನು ಅನುಭಾವದ ನಿಚ್ಚೈರಗನ್ನು ತನ್ನ ಪದ್ಯಗಳಲ್ಲಿ ಹಿಡಿದಿಡಹೋಗಿದ್ದಾನೆ. ಅವನು ಕೆಲವೇ ಹಾಡುಗಳನ್ನು ಬರೆದಿದ್ದರೂ ಅವುಗಳಲ್ಲಿ ವ್ಯಕ್ತವಾದ ತತ್ವನಿಷ್ಠೆ ನಿರೂಪಣಾರೀತಿ ಹಿರಿದಾದುದು. ನೂರೊಂದು ವಿರತರಲ್ಲಿ ಅನೇಕರು ಕೇವಲ ಪವಾಡ ಪುರುಷರೆಂಬಂತೆ ಕಂಡರೂ ನಿರ್ವಾಣಿ ಬೋಳೇಶ ತನ್ನ ಹಾಡುಗಳ ಮೂಲಕ ವೀರಶೈವ ಸಾಹಿತ್ಯದ ಹಿರಿಮೆಯನ್ನು ಹೆಚ್ಚಿಸಿದನು. ನೂರೊಂದು ವಿರತರಲ್ಲಿ ಅವನ ಹೆಸರು ಈ ಮೂಲಕ ಚಿರಸ್ಥಾಯಿಯಾಗಿದೆ. □

# ಇಲ್ಲಿ ಸಲ್ಲುವರು...........

ಸಾ. ಶಿ. ಮರುಳಯ್ಯ

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ:
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ:
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ:
ಕೂಡಲ ಸಂಗಮದೇವಾ :

ಸರಳ ಸುಂದರವಾದ ಈ ವಚನದಲ್ಲಿ ಅತಿಗಹನವಾದ ಅಂಶವೊಂದನ್ನು ಅಡಗಿಸಿಟ್ಟಿದ್ದಾನೆ ಬಸವಣ್ಣ. ನಾವೆಲ್ಲರೂ ಜಗತ್ತೆಂಬ ಟಂಕಸಾಲೆಯಲ್ಲಿ ಮಿಂಟಾದ ನಾಣ್ಯಗಳು. ತಮ್ಮ ಆಂತರಿಕ ಮೌಲ್ಯವನ್ನು ಹೆಚ್ಚಿಸಿಕೊಂಡಿರಲಿ. ಇಲ್ಲವೇ ಅಪಮೌಲ್ಯಗೊಳಿಸಿಕೊಂಡಿರಲಿ ಈ ನಾಣ್ಯಗಳು ಮಾತ್ರ ಸದಾ ಚಲಾವಣೆಯಲ್ಲಿರಬೇಕು. ಖೋಟಾನಾಣ್ಯಗಳು ಮಾತ್ರ ಆಗಿರಬಾರದು. ಶೆಟ್ಟಿ ಅಂಗಡಿಯಲ್ಲಿ ನಾವು ಕೊಟ್ಟ ನಾಣ್ಯ ಮಾನ್ಯವಾದರೆ, ರಿಜರ್ವ ಬ್ಯಾಂಕಿನಲ್ಲೂ ಮಾನ್ಯವಾಗುತ್ತದೆ. ಅಂಗಡಿಯಲ್ಲಿ ಹಿಡಿಯದಿದ್ದರೆ ಆ ನಾಣ್ಯ ಬ್ಯಾಂಕಿನಲ್ಲೂ, ಅಷ್ಟೇಕೆ ಎಲ್ಲೂ ಹಿಡಿಯುವುದಿಲ್ಲ. ಈ ರೂಪಕದ ಅಂತರಾರ್ಥ ಇಷ್ಟೆ–ಮಾನವ ಈ ಜಗತ್ತಿನಲ್ಲಿ ನಿತ್ಯ ಚಲಾವಣೆಯಲ್ಲಿರುವ ಒಂದು ನಾಣ್ಯವಿದ್ದಂತೆ. ಆತ ತನ್ನ ವ್ಯಕ್ತಿತ್ವವೆಂಬ ಆಂತರಿಕ ಮೌಲ್ಯವನ್ನು ಬೆಳಗಿ ಇಲ್ಲಿ ಶುದ್ಧ ಜೀವನವನ್ನು ಸಾಗಿಸಿದ್ದಾದರೆ ಅವನಿಗೆ ಪರದಲ್ಲಿ ಸದ್ಗತಿ ಸಾಧ್ಯ. ಇಲ್ಲಿಯ ಬದುಕು ಹದಗೆಟ್ಟಿದ್ದಾದರೆ ಪರದಲ್ಲಿ ಅವನಿಗೆ ಸ್ಥಾನವೇ ಇಲ್ಲ. ಆದುದರಿಂದ ಮೊದಲು ಇಹ ಜೀವನ ಸ್ವಚ್ಛವಾಗಬೇಕು. ಋಜುವಾಗಬೇಕು. ಅಷ್ಟಾದರೆ ಸಾಕು. ಪರದ ಚಿಂತೆ ಬೇಡ. ಅದು ತನಗೆ ತಾನೇ ಆಗುತ್ತದೆ. ಇದಿಷ್ಟೇ ಇಲ್ಲಿಯ ಭಾವ.

ಅಣ್ಣ ವಾಸ್ತವವಾದಿ. ವಾಸ್ತವಿಕ ಜಗತ್ತು ಮತ್ತು ಅದರ ಉದ್ಧಾರ–ಇವೇ ಅವನ ಹಸಿವು; ಹಂಬಲ, ಮಾನವನ ಇಹದ ಬದುಕು ಹಸನವಾಗಬೇಕು, ಹದವಾಗಬೇಕು. ಒಳ್ಳೆಯ ಬೆಳಸು ನೀಡುವ ಬೆಳ್ವೊಲವಾಗಬೇಕು. ಅದಾಗದಿದ್ದರೆ ಪರವನ್ನು ಕುರಿತ ಚಿಂತನೆ ನಿರರ್ಥಕ. "ಮಣ್ಣ ಬಿಟ್ಟು ಮಡಕೆ ಇಲ್ಲ. ನನ್ನ ಬಿಟ್ಟು

ದೇವರಿಲ್ಲ" ಎಂಬ ಗಾದೆಯಂತೆ ಇಹವನ್ನು ಬಿಟ್ಟು ಪರ ಇಲ್ಲ. ಇದೆ ಎಂದರೆ ಅದು ಶುದ್ಧ ಸುಳ್ಳು. ಅಷ್ಟೇಕೆ ಪರ ಎನ್ನುವುದು ಬೇರೆ ಇಲ್ಲವೇ ಇಲ್ಲ. ಅದಿರುವುದೂ ಇಹದ ಗರ್ಭದಲ್ಲಿ.

'ದೇವಲೋಕ ಮರ್ತ್ಯಲೋಕವೆಂಬುದು ಮತ್ತೆ ಬೇರುಂಟೆ '
ಈ ಲೋಕದೊಳಗೆ ಮತ್ತೆ ಅನಂತಲೋಕ'

ಎಂದು ಸ್ಪಷ್ಟಪಡಿಸಿದ್ದಾನೆ.

ಅರ್ಥವಿಲ್ಲದ ಆದರ್ಶಕ್ಕೆ ಬೆಲೆ ಸಿಕ್ಕುವುದಿಲ್ಲ ಅಣ್ಣನಲ್ಲಿ. ಸತ್ತ ಮೇಲೆ ತೆರೆಯುದಹುದಾದ ಭಾವನಾಸ್ವರ್ಗ ಆತನ ಗೌರವಕ್ಕೆ ಪಾತ್ರವಾದ ವಸ್ತುವೇ ಅಲ್ಲ. ಅದಕ್ಕೆಂದೇ "ಸತ್ತು ಬೆರಸಿಹೆನೆಂದರೆ ಕಬ್ಬಿನ ತುದಿಯ ಮೆಲಿದಂತೆ" ಎಂದಿದ್ದಾನೆ, ಕಬ್ಬಿನ ಬುಡ ಮತ್ತು ಕಾಂಡಗಳಲ್ಲಿರುವ ಸವಿ ತುದಿಯಲ್ಲಿಲ್ಲ. ಕಬ್ಬಿನ ತುದಿ ಉಪ್ಪ ಉಪ್ಪು ಇಲ್ಲವೇ ನೀರಸ; ಅದನ್ನು ಸವಿಯ ಹೋದವನ ಶ್ರಮ ವ್ಯರ್ಥ. ಆದುದರಿಂದ ಪರದ ಗೊಡವೆಯೇ ನಿನಗೆ ಬೇಡ, ಇಹದಲ್ಲಿ ಸಹಜವಾದ, ಸತ್ಯವಾದ, ಶುದ್ಧವಾದ ಬದುಕು ನಡೆಸು, ಅಷ್ಟು ಸಾಕು ಎಂಬುದು ಅಣ್ಣನ ವಿವೇಕದ ಮಾತು. ಮಾನವ ಮಹಾದೇವನೇ ಆಗಲಿ. ಅದರಲ್ಲಿ ಯಾವ ದೊಡ್ಡಸ್ತಿಕೆಯೂ ಇಲ್ಲ. ಆದರೆ ಅವನು ಮೊದಲು ಮನುಷ್ಯನಾಗಿದ್ದಾನೆಯೇ ಎಂಬುದು ಅಣ್ಣನ ಮೂಲಭೂತ ಪ್ರಶ್ನೆ! ಆದುದರಿಂದ ಮತ್ತೇನಾಗಲಿ ಬಿಡಲಿ. ತನ್ನಲ್ಲಿರುವ ಮಾನವೀಯ ಗುಣಗಳನ್ನು ಬೆಳಸಿಕೊಂಡು ಮನುಷ್ಯನಾದರೆ, ಆಗುವುದನ್ನು ಕಲಿತರೆ ಸಾಕು ಎಂಬ ತೃಪ್ತಿ ಅಣ್ಣನಿಗಿದ್ದಂತೆ ಕಾಣುತ್ತದೆ. ಒಟ್ಟಿನಲ್ಲಿ, ಮಾನವತಾವಾದಿಯಾದ ಬಸವಣ್ಣ ಮಾನವ ಮೊದಲು ಇಲ್ಲಿ ಸಲ್ಲಬೇಕು, ಸಂದರೆ ಸಾಕು—ಎಂಬ ತನ್ನ ಸಿದ್ಧಾಂತವನ್ನು ತನ್ನ ವಚನಗಳಲ್ಲಿ ಅವಕಾಶ ಸಿಕ್ಕಾಗಲೆಲ್ಲಾ ಸಾರ ಹೊರಟಿದ್ದಾನೆ, ಅದನ್ನೀಗ ಅವಲೋಕಿಸೋಣ.

ಮೊದಲನೆಯದಾಗಿ, ಅಣ್ಣನ ಸ್ವರ್ಗ ನರಕಗಳ ಕಲ್ಪನೆ ಬಹಳ ವಿಶಿಷ್ಟವಾದದ್ದು, ವಿಚಿತ್ರವೂ ಆದದ್ದು ಎನ್ನಬಹುದು. ಆತ ಅಂಗೈಯಲ್ಲಿ ಆಕಾಶ ತೋರಿಸ ಹೊರಟವನಲ್ಲ! ಇಹದಲ್ಲಿ ಪರವನ್ನು ಕಂಡಿದ್ದಾನೆ; ಕಂಡರಿಸಿದ್ದಾನೆ, ಅವನ ದೃಷ್ಟಿಯಲ್ಲಿ ದೇವಲೋಕವೆಂಬುದು ಮೇಲೆಲ್ಲೋ ಕಣ್ಣಿಗೆ ಕಾಣದೆ ಇರುವ ಒಂದು ಕಲ್ಪನಾ ಕಲ್ಪವಲ್ಲ. ಅದು ವಾಸ್ತವಿಕ ಜಗತ್ತಿನಲ್ಲೇ ಅಂತರ್ಗತವಾದ ಒಂದು ಭಾಗ. ನಡೆ ನುಡಿಯಲ್ಲಿ ಮಡಿಯಾದರೆ ಸಾಕು, ಅದೇ ದೇವಲೋಕದ ಬದುಕು; ಅಂಥವನು ಸಾಕ್ಷಾತ್ ದೇವನೇ ಹೊರತು ಬೇರೆ ಅಲ್ಲ. ಅಂತೆಯೇ ಸ್ವರ್ಗ ನರಕಗಳನ್ನು ನಿರ್ಮಿಸಿಕೊಳ್ಳುವ ಹೊಣೆಗಾರಿಕೆ ಮಾನವನ ಮೇಲಿದೆಯೇ ಹೊರತು ಅಜ್ಞಾತ ದೈವದ ಅಹಿತ ಕೈವಾಡ, ಪವಾಡಗಳಲ್ಲಿಲ್ಲ. ಇದನ್ನೇ ಈ ವಚನ ತಿಳಿಸುತ್ತದೆ.

"ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ
ಸತ್ಯವ ನುಡಿವುದೇ ದೇವಲೋಕ; ಮಿಥ್ಯವ ನುಡಿವುದೇ ಮರ್ತ್ಯಲೋಕ
ಆಚಾರವೇ ಸ್ವರ್ಗ, ಅನಾಚಾರವೇ ನರಕ"

ಅಂದರೆ ಸ್ವರ್ಗ ನರಕಗಳು ಬದುಕಿನಲ್ಲೇ ಇವೆ, ಬೇರೆಲ್ಲೂ ಅಂತರಿಕ್ಷದಲ್ಲಿಲ್ಲ. ಬದುಕನ್ನು ನಂದನವನ್ನೋ, ನರಕವನ್ನೋ ಮಾಡಿಕೊಳ್ಳುವ ಹೊಣೆ ಸಂಪೂರ್ಣವಾಗಿ ವ್ಯಕ್ತಿಯನ್ನೇ ಅವಲಂಬಿಸಿದೆ ಎಂಬುದನ್ನು ಸ್ಪಷ್ಟಪಡಿಸಿದ್ದಾನೆ.

ಅಣ್ಣ ಸಾರಿದ ಎರಡನೆಯ ಲೋಕಸಿದ್ಧಾಂತವೆಂದರೆ ದಾಂಪತ್ಯಕ್ಕೆ ಸಂಬಂಧಿಸಿದ್ದು. ಸಂಸಾರ ತುಚ್ಛ, ಹೇಯ ಎಂದು ಮುಂತಾಗಿ ತೆಗಳಿದವರು ಹಲವರುಂಟು. ಆದರೆ ಅಣ್ಣನ ದೃಷ್ಟಿಯಲ್ಲಿ ಅದು ಒಂದು ಯೋಗ, 'ಸಂಸಾರಯೋಗ'. ಅಲ್ಲಿ ಪ್ರೇಮವೇ ಪೂಜೆ, ನಲ್‌ನುಡಿಯೇ ಮಂತ್ರ, ಭೋಗವೇ ಭಕ್ತಿ, ಅನ್ಯೋನ್ಯವಾದ ಅವಿನಾಭಾವವೇ ಸಮಾಧಿ. ಇಂತಹ 'ಸತಿ ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಅದಕ್ಕಿಂದೇ—

"ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ
ಲಿಂಗದ ಮೇಲೆ ನಿಷ್ಠೆಯಿಲ್ಲವ ಭಕ್ತ ಇದ್ದರೇನೊ ಶಿವ ಶಿವಾ
ಹೋದರೇನೋ? ಕೂಡಲ ಸಂಗಮದೇವಯ್ಯಾ
ಊಡದ ಆವಿಂಗೆ ಉಣ್ಣದ ಕಱು ಬಿಟ್ಟಂತೆ"
"ಅರಸನ ಕಂಡು ತನ್ನ ಪುರುಷನ ಮಱೆದರೆ
ಮರನೇಱಿ ಕೈ ಬಿಟ್ಟಂತಾಯಿತ್ತಯ್ಯಾ!
ಇಹಲೋಕಕ್ಕೆ ದೂರ, ಪರಲೋಕಕ್ಕೆ ದೂರ..."

ಎಂದಿದ್ದಾನೆ. ಅಣ್ಣನ ಈ ಮಾತುಗಳಲ್ಲಿ ಸಂಸಾರಯೋಗವೇ ಅಡಗಿದೆ ಅನ್ನಿಸುತ್ತದೆ. ಸಂಸಾರದಲ್ಲಿ ಸಾಮರ‍್ಯಸ ಬೆಳೆಯದಿದ್ದರೆ, ಅದು ಇಹಕ್ಕೂ ಅಲ್ಲ, ಪರಕ್ಕೂ ಅಲ್ಲ, ಆ ಬಾಳು ಹಾಳು. ಆಗ ಸತಿಪತಿಗಳಿಬ್ಬರೂ ಎಲ್ಲಿಯೂ ಸಲ್ಲದ ಖೋಟಾ ನಾಣ್ಯಗಳು. ಒಂದು ವೇಳೆ, ಅಲ್ಲಿ ಸಲ್ಲಬೇಕೆನಿಸಿದರೆ ಮೊದಲು ಇಲ್ಲಿ ಸಲ್ಲುವ ಸುಖಸಂಸಾರ ನಡೆಸಲಿ; ಇಲ್ಲಿ ಪ್ರೇಮ ಪೂರ್ಣವಾದ ಪರಿಶುದ್ಧ ಜೀವನ ಸಾಗಿಸಿದ್ದಾದರೆ ಅಲ್ಲಿ ಸಂದಂತೆಯೇ ಸರಿ. ಇದು ಸಂಸಾರಯೋಗದ ಮೂಲಮಂತ್ರ, ಅಣ್ಣನ ಅಭಿಪ್ರಾಯವನ್ನು ಅನೇಕ ಶರಣರೂ ಒಪ್ಪಿದ್ದಾರೆ. ಒಪ್ಪಿ ಅದರಂತೆ ನಡೆದಿದ್ದಾರೆ. ಬಸವಣ್ಣನ ಸಂಸಾರವಂತೂ ಪ್ರೇಮ ದಾಂಪತ್ಯಕ್ಕೆ ಪ್ರತ್ಯಕ್ಷ ನಿದರ್ಶನವೇ ಆಗಿದೆ.

ಭೂತದಯೆಯೇ ಭಗವಂತನ ಆರಾಧನೆ ಎಂಬುದು ಅಣ್ಣನಲ್ಲಿ ಕಾಣ ಸಿಗುವ ಮಣ್ಣಿನ ಮೋಹದ ಮೂರನೆಯ ಅಂಶ. ಸದಾಕಾಲವೂ "ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಸಂಕಲ್ಪ ಸ್ವೀಕರಿಸಿದ್ದವನು ಬಸವಣ್ಣ ಆದುದರಿಂದಲೇ ಅವನು ಹುತ್ತಕ್ಕೆ ಹಾಲೆರೆಯ ಹೋಗಲಿಲ್ಲ, ಬೆಂಕಿಗೆ ತುಪ್ಪ ಸುರಿಯಹೋಗಲಿಲ್ಲ. ಹಾಲು ತುಪ್ಪಗಳನ್ನು ಮಕ್ಕಳಿಗೆ ಮಂದಿಗೆ, ಉಣಿಸಹೊರಟ.

'ಎಱೆದರೆ ನೆನೆಯದು ಮಱೆದರೆ ಬಾಡದು
ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ !
ಕೂಡಲ ಸಂಗಮದೇವಯ್ಯಾ,
ಜಂಗಮಕ್ಕೆಱೆದರೆ ಸ್ಥಾವರ ನೆನೆಯಿತ್ತು.

ಅಂದರೆ ಭೂತ ತೃಪ್ತಿಯೇ ಭೂತನಾಥನ ತೃಪ್ತಿ. ಹಸಿದವನಿಗೆ ಅನ್ನವಿಟ್ಟು ತೃಪ್ತಿಪಡಿಸಿದರೆ ಪರಮಾತ್ಮನನ್ನು ತೃಪ್ತಿಪಡಿಸಿದಂತೆಯೇ ಸರಿ. *

ಈ ಮಾನವೀಯತೆ ಅಣ್ಣನದು. "ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ" ಎನ್ನುತ್ತಾನೆ. ಇದನ್ನು ಅರ್ಥಮಾಡಿಕೊಳ್ಳದೆ ಅಂಧರಂತೆ ವರ್ತಿಸುವ ಮೂಢರನ್ನು ಕಂಡು,

ಕಲ್ಲನಾಗರ ಕಂಡರೆ ಹಾಲನೆರೆಯೆಂಬರು ;
ದಿಟದ ನಾಗರ ಕಂಡರ ಕೊಲ್ಲೆಂಬರಯ್ಯಾ !
ಉಂಬ ಜಂಗಮ ಬಂದರೆ ನಡೆಯೆಂಬರು :
ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ……….!'

ಎಂದು ವ್ಯಂಗ್ಯದ ನಗೆ ಹರಿಸಿದ್ದಾನೆ.

ಅಣ್ಣನ ದಯಾಗುಣದ ವ್ಯಾಪ್ತಿ ಕೇವಲ "ಸಕಲ ಜೀವಾತ್ಮರಿಗೆ ಲೇಸ ಬಯಸುವದರಲ್ಲೇ ಸೀಮಿತವಾಗಿಲ್ಲ" ಧರ್ಮಕ್ಷೇತ್ರಕ್ಕೂ ಹಬ್ಬಿದೆ. ಹಿಂದೂ ಧರ್ಮವಾಗಲಿ, ಬೌದ್ಧ ಧರ್ಮವಾಗಲಿ, ಜೈನ ಧರ್ಮವಾಗಲಿ, ವೀರಶೈವ ಧರ್ಮವಾಗಲಿ, ಕ್ರೈಸ್ತ-ಧರ್ಮವಾಗಲಿ, ಇಸ್ಲಾಂ ಧರ್ಮವಾಗಲಿ, ಆದು ಯಾವುದೇ ಧರ್ಮವಾಗಿರಲಿ ಅದಕ್ಕೆ ದಯೆಯ ಮೆರಗು ಬೇಕು. ದಯೆಯೇ ಧರ್ಮದ ಜೀವ ಜೀವಾಳ-ಅದನ್ನೇ-

ದಯವಿಲ್ಲದ ಧರ್ಮವದೇವುದಯ್ಯಾ ?
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ;
ದಯವೇ ಧರ್ಮದ ಮೂಲವಯ್ಯಾ…………,

ಹೀಗೆ ಸ್ಪಷ್ಟಪಡಿಸಿದ್ದಾನೆ. ಇಲ್ಲಿ ನಾವು ಗುರುತಿಸಬಹುದಾದದ್ದು ಅಣ್ಣ ತಿಳಿಸ ಹೊರಟ "ದಯೆ" ಎಂಬ ಮಾನವೀಯ ಗುಣವನ್ನು; ಅದು ಹೇಗೆ ಧರ್ಮಕ್ಕೆ ಬುನಾದಿಯಾಗಿವೆ ಎಂಬುದನ್ನು. ಆದುದರಿಂದ ಧರ್ಮವನ್ನು ವ್ಯಾಖ್ಯಾನಿಸುವಾಗಲೂ ಬಸವಣ್ಣ ಲೌಕಿಕ ಜೀವನವನ್ನು ಮರೆತು ಮಾತನಾಡಿಲ್ಲ ಎಂಬುದು ಅವನ ಇಲ್ಲಿ ಸಲ್ಲುವ ವಾದಕ್ಕೆ ಸಮರ್ಥನೆಯಾಗಿದೆ.

ನಾಲ್ಕನೆಯದಾಗಿ, ಬಸವಣ್ಣ ಕಾಯಕಕ್ಕೆ ತುಂಬಾ ಮಹತ್ವದ ಸ್ಥಾನವನ್ನು ಮೀಸಲಿರಿಸಿದ್ದಾನೆ. ಅವನು ದೈವವನ್ನು ಕಂಡದ್ದು ಕಲ್ಲಿನಲ್ಲಲ್ಲ, ಮಣ್ಣಿನಲ್ಲಲ್ಲ ಮರದಲ್ಲಲ್ಲ, ಮತ್ತೆ ಎಲ್ಲೂ ಅಲ್ಲ. ಶುದ್ಧ ಕಾಯಕ ನಿಷ್ಠನಲ್ಲಿ. ಕಾಯವಿರುವತನಕ ಕಾಯಕ ನಡೆಯುತ್ತಿರಬೇಕು. ಆಗ ಆ ಕಾಯಕವೇ ಕೈಲಾಸವಾಗುತ್ತದೆ. ಅಂದರೆ ಪ್ರತಿಯೊಬ್ಬನೂ ಒಂದೊಂದು ಉದ್ಯೋಗದಲ್ಲಿ ನಿರತನಾಗಿರಬೇಕು, ಸೋಮಾರಿತನ ಸಲ್ಲ, ಪರತಂತ್ರ ಹೊಲ್ಲ. ಉಸಿರಿರುವ ವರೆಗೂ ಮನುಷ್ಯನು ದುಡಿಯುತ್ತಿರಬೇಕು.

---

* ಶಿವಯೋಗಿನಿ ಸಂತೃಪ್ತೇ ತೃಪ್ತೋ ಭವತಿ ಶಂಕರಃ
ತತ್ತೃಪ್ತ್ಯಾ ತನ್ಮಯಂ ವಿಶ್ವಂ ತೃಪ್ತಿಮೇತಿ ಚರಾಚರಂ ||

'ದುಡಿಮೆಯೇ ದೇವರು' ಎಂಬುದು ಬಸವಣ್ಣನ ಮೂಲ ಮಂತ್ರ. ಅಂತೆಯೇ ಅವನ ಕಾಯಕದ ಅರ್ಥ ಬಹಳ ಅರ್ಥಪೂರ್ಣವಾದದ್ದು. ಮನುಷ್ಯ ನಿರುದ್ಯೋಗಿಯಾಗಿ ಕಾಲಹರಣ ಮಾಡದೆ ಸದಾ ಉದ್ಯೋಗಶೀಲನಾಗಿರಬೇಕು. ಅಂದರೆ ಯಾವುದಾದರೂ ಒಂದು ವೃತ್ತಿಯನ್ನು ಅವಲಂಬಿಸಿ ಧರ್ಮದಿಂದ ದುಡಿಯುತ್ತಿರಬೇಕು ಎಂದರ್ಥ. ಯಾರೇ ಆಗಲಿ ತಮ್ಮದಲ್ಲದ ವಸ್ತುವಿಗೆ ಆಸೆ ಪಡಬಾರದು. ಅಥವಾ ಅಪಹರಿಸಿ ಅದೇ ತನ್ನ ದಿನದ ದುಡಿಮೆಯಿಂದ ತೋರಿಸಬಾರದು.ಹಾಗಂದರೆ ಕಳ್ಳತನವೂ ಒಂದು ಕಾಯಕ ಎಂದಾದೀತು. ಆದರೆ ಕಳ್ಳತನ ಎಂದಿಗೂ 'ಕಾಯಕ' ಎಂಬ ಶಬ್ದಶಕ್ತಿಯನ್ನೂ, ಪೂಜ್ಯತೆಯನ್ನೂ ಪಡೆಯಲಾರದು. ಅದರಿಂದಲೇ ಅಣ್ಣ —

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ;
ಮುನಿಯಬೇಡ, ಅನ್ಯರಿಗೆ ಅಸಹ್ಯ ಬಡಬೇಡ;
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ;
ಇದೇ ಅಂತರಂಗಶುದ್ಧಿ, ಇದೇ ಬಹಿರಂಗ ಶುದ್ಧಿ;
ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ

ಎಂಬ ಸಪ್ತ ಸೂತ್ರಗಳನ್ನು ಹಾಕಿಕೊಟ್ಟನೆಂದು ತೋರುತ್ತದೆ. ಇದೇನೇ ಇರಲಿ, ಅಣ್ಣನ ಕಾಯಕದ ಮಹತ್ವವನ್ನು ಇಂದು ನಾವು ಮತ್ತೆ ಮತ್ತೆ ಮೆಲುಕು ಹಾಕಬೇಕಾಗಿದೆ. ಏಕೆಂದರೆ, ಇಂದು ಒಬ್ಬ ಇನ್ನೊಬ್ಬನನ್ನು ರಸ್ತೆಯಲ್ಲಿ ಅಪರೂಪಕ್ಕೆ ಭೇಟಿಯಾದಾಗ, 'ಏನಪ್ಪಾ ಚೆಂದಾಗಿದ್ದೀಯಾ? ಏನು ಕೆಲಸ ಮಾಡ್ತಿದ್ದೀಯಾ?' ಎಂದು ಕೇಳಿದರೆ ಆತ, 'ನೋಡಪ್ಪಾ ಹೀಗಿದ್ದೇನೆ! ಏನು ಚಂದವೋ ಏನೋ! ಕೆಲಸ ಅಂದೆಯಲ್ಲಾ ಇದೆ – ಎಂಥದೋ ಒಂದು ಸುಡುಗಾಡು ಕೆಲಸ' ಅನ್ನುವುದನ್ನು ನಾವು ಸಹಜವಾಗಿ ಅನೇಕ ವೇಳೆ ಕೇಳಿರುತ್ತೇವೆ. ಇಲ್ಲಿ ಆತನಿಗೆ ಅನ್ನ ಕೊಡುವ 'ವೃತ್ತಿ'ಯೇ 'ಸುಡುಗಾಡಾ' ದರೆ ಅವನೇನಾಗಬೇಕು ? ಊಹಿಸಿಕೊಳ್ಳಬಹುದು – ಹೆಣವಾಗಬೇಕು. ತನ್ನ ಕಸುಬು ತನಗೆ ದೈವಕ್ಕೆ ಸಮಾನವಾದದ್ದು ಎಂಬ ಭಾವನೆ ಬಂದರೆ, ಅದರ ಬಗೆಗೆ ಭಕ್ತಿ ಬಲಿದರೆ ನಿಜಕ್ಕೂ ಅವನಿಗೆ ತೃಪ್ತಿ ಸಿಗುತ್ತದೆ. ಅವನ ಬಾಳು. ಬಂಗಾರವಾಗುತ್ತದೆ ; ಯಾರಿಗೂ ಯಾವ ವಿಧದಿಂದಲೂ ಅವ್ಯವಸ್ಥೆ ಏರ್ಪಡುವುದೇ ಇಲ್ಲ. ಆಗ ನಿಜಕ್ಕೂ ಅವನು ಇಲ್ಲಿ ಸಂದ ವ್ಯಕ್ತಿಯಾಗುತ್ತಾನೆ. ಇಲ್ಲಿ ಸಂದ ಮೇಲೆ ಅಲ್ಲಿಯೂ ಸಲ್ಲುವನೆಂದು ಮತ್ತೆ ಹೇಳುವ ಅಗತ್ಯ ಇರುವದಿಲ್ಲ.

ಕಾಯಕದ ಹಿರಿಮೆಯನ್ನು ಬಸವಣ್ಣ ಕೇವಲ ಬಾಯಲ್ಲಿ ಆಡಿ ಮರೆಯಲಿಲ್ಲ; ಮಾಡಿ ಮುಗಿಸಿದ್ದಾನೆ. ಹಲವು ತತ್ವಜ್ಞಾನಿಗಳು ಆಡುತ್ತಾ ಸೋತಿದ್ದರೆ, ಬಸವಣ್ಣ ಮಾಡುತ್ತಾ ಗೆದ್ದಿದ್ದಾನೆ. ಕಲ್ಯಾಣದಲ್ಲಿದ್ದ ಎಲ್ಲ ಶರಣರೂ ಒಂದಲ್ಲ ಒಂದು ಉದ್ಯೋಗದಲ್ಲಿ ನಿರತರಾಗಿದ್ದವರು, ಯಾರೂ ಸೋಮಾರಿಗಳಲ್ಲ. ಕಾಯಕ ಎಂಬ ಪದದ ನೈಜ ಅರ್ಥವನ್ನು ಅರಿತು ಆಚರಿಸುತ್ತಿದ್ದವರು. ಅದನ್ನು ಕಲಿಸಿಕೊಟ್ಟ ಕೀರ್ತಿ ಬಸವಣ್ಣನಿಗೆ ಸಲ್ಲಬೇಕು.

ವ್ಯಕ್ತಿಗೆ ಕೊಟ್ಟಷ್ಟು ಬೆಲೆಯನ್ನು ಬಸವಣ್ಣ ಬೇರಾವ ದೈವಕ್ಕೂ ಕೊಟ್ಟಿಲ್ಲ. ಅವನ ನೂರಾರು ವಚನಗಳಲ್ಲಿ ಈ ಅಂಶ ಕಂಡು ಬರುತ್ತದೆ. ಇದನ್ನು ಐದನೆಯ ದೆಂದು ಪರಿಗಣಿಸಬಹುದು. ಶಕ್ತಿಗಿಂತ ವ್ಯಕ್ತಿ ದೊಡ್ಡವನಾಗಿ ಕಂಡಿದ್ದಾನೆ ಅಣ್ಣನ ಕಣ್ಣಿಗೆ.

ಜಗವ ಸುತ್ತಿಪ್ಪುದು ನಿನ್ನ ಮಾಯೆಯ್ಯಾ :
ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯಾ !
ನೀನು ಜಗಕ್ಕೆ ಬಲ್ಲಿದನು ; ಆನು ನಿನಗೆ ಬಲ್ಲಿದನು, ಕಂಡಯ್ಯಾ
ಕರಿಯು ಕನ್ನಡಿಯೊಳಗಡಗಿದಂತಯ್ಯಾ.
ಎನ್ನೊಳಗೆ ನೀನಡಗಿದೆ, ಕೂಡಲಸಂಗಮದೇವಾ !

ಇಲ್ಲಿ ಮಹತ್ವ ಅಡಗಿರುವುದು ಬರಿಯ ಮಾತಿನಲ್ಲಲ್ಲ, ಅದನ್ನು ನುಡಿಯುವ ವ್ಯಕ್ತಿ-ಯಲ್ಲಿ, ಅವನಲ್ಲಿ ಅಂತರ್ಗತವಾಗಿರುವ ವ್ಯಕ್ತಿತ್ವದಲ್ಲಿ ತನ್ನ ಅಂತರಂಗ ಪ್ರಭೆಯನ್ನು ಸದಾ ಪ್ರಜ್ವಲಿಸುವಂತೆ ಮಾಡಿಕೊಂಡದ್ದಾದರೆ ಆ ವ್ಯಕ್ತಿ 'ಶರಣ'ನಾಗುತ್ತಾನೆ; ಶಿವನಿಗಿಂತಲೂ ಶ್ರೇಷ್ಠನಾಗುತ್ತಾನೆ.

ಸಮುದ್ರ ಘನವೆಂಬೆನೆ ? ಧರೆಯ ಮೇಲಡಗಿತ್ತು.
ಧರೆ ಘನವೆಂಬೆನೆ? ನಾಗೇಂದ್ರನ ಫಣಾಮಣಿಯ ಮೇಲಡಗಿತ್ತು
ನಾಗೇಂದ್ರ ಘನವೆಂಬೆನೆ ?
ಪಾರ್ವತಿಯ ಕಿರುಕುಣಿಕೆಯ ಮುದ್ರಿಕೆಯಾಯಿತ್ತು.
ಅಂತಹ ಪಾರ್ವತಿ ಘನವೆಂಬೆನೆ? ಪರಮೇಶ್ವರನ ಅರ್ಧಾಂಗಿಯಾದಳು.
ಅಂತಹ ಪರಮೇಶ್ವರ ಘನವೆಂಬೆನೆ ?
ನಮ್ಮ ಕೂಡಲ ಸಂಗನ ಶರಣರ
ಮನದ ಕೊನೆಯ ಮೊನೆಯ ಮೇಲಡಗಿದನು !

ಪ್ರತಿಯೊಬ್ಬನೂ ಇಂತಾಗಬೇಕೆಂಬುದೇ ಅಣ್ಣನ ಆಶಯ. ಅವನಂತೆಯೇ ಅವನ ಸಮ ಕಾಲೀನರನೇಕರಲ್ಲಿ ಈ ಧೋರಣೆ ಇರುವುದು ಕಂಡುಬರುತ್ತದೆ. 'ಕೈಲಾಸವೆಂಬುದೊಂದು ಗುಡ್ಡ, ಅಲ್ಲಿ ಶಿವನೆಂಬುವನೊಬ್ಬ ಹೆಡ್ಡ' ಎಂದೇ ನುಡಿದಿದ್ದಾರೆ. ಈ ಒರಟುತನದ ಹಿನ್ನೆಲೆಯಲ್ಲಿ ವ್ಯಕ್ತಿ ವಿಕಾಸದ ಕೋಮಲತೆಯನ್ನು ಗುರುತಿಸಬಹುದಾಗಿದೆ. ಎಲ್ಲ ಶರಣರೂ ಒಂದರ್ಥದಲ್ಲಿ 'ಸ್ವತಂತ್ರ ಧೀರರೆ'; ಎಲ್ಲರೂ 'ಕಲಿಯ ಕೈಯ ಕೈದುಗಳೇ !' ಬಸವಣ್ಣ ಶರಣರ ಘನತೆಯನ್ನು ಅರಿತು ಈ ಪ್ರಶಂಸೆಯ ನುಡಿಗಳನ್ನಾಡಿದ್ದಾನೆ. ವ್ಯಕ್ತಿ-ಸ್ವಾತಂತ್ರ್ಯ, ವ್ಯಕ್ತಿತ್ವದ ವಿಕಾಸ-ಇವು ಇಲ್ಲಿ ಸಲ್ಲುವುದಕ್ಕೆ ಸಾಧನಗಳು.

ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವಿದೆ :-

ಶಿವನಿಗಿಂತ ಶರಣ ಶ್ರೇಷ್ಠ ನಿಜ. ಆದರೆ ಶರಣನಿಗಿಂತ ಶರಣನ ನುಡಿ ಶ್ರೇಷ್ಠ, ಅಷ್ಟೇ ಶ್ರೇಷ್ಠ ಅವನ ನಡೆ. ನಡೆ ನುಡಿಯಲ್ಲಿ ಮಡಿಯಾಗಿರದಿದ್ದರೆ ಅವನು ಎಂದಿಗೂ

ಇಲ್ಲಿ ಸಲ್ಲುವ ವ್ಯಕ್ತಿಯಾಗುವುದಿಲ್ಲ. ಅಂಥವನು. 'ನಡೆಯಲಱಿಯದೆ, ನುಡಿಯಲಱಿಯದೆ ಲಿಂಗವ ಪೂಜಿಸಿ ಫಲವೇನು ?' ಎತ್ತು ಗಾಳದ ಸುತ್ತಿದಂತಾಗುತ್ತದೆ. ನಡೆನುಡಿಗಳೆರಡನ್ನೂ ಏಕಗೊಳಿಸಿಕೊಳ್ಳಬೇಕಾದರೆ, ಅವೆರಡರಲ್ಲೂ ಶುದ್ಧೀಕರಣವಾಗಬೇಕಾದರೆ ವ್ಯಕ್ತಿಗೆ ಸ್ವಾತ್ಮಶಿಕ್ಷಣ ಅನಿವಾರ್ಯ. ಆತ್ಮಶೋಧವೇ ಸ್ವಾತ್ಮಶಿಕ್ಷಣ. ಹುತ್ತವ ಬಡಿದರೆ ಎಂದಿಗೂ ಹಾವು ಸಾಯುವುದಿಲ್ಲ; ಅದಕ್ಕೆ ಅಂತರಂಗ—ಆತ್ಮಗಳ ಶುದ್ಧಿ ಬೇಕೇ ಬೇಕು: ವ್ಯಕ್ತಿ ತನ್ನನ್ನು ತಾನೇ ವಿಮರ್ಶಿಸಿಕೊಳ್ಳಬೇಕು, ಆಗೊಮ್ಮೆ ಈಗೊಮ್ಮೆಯಾದರೂ ತನ್ನ ಬಾಳ ಸಂಪುಟದ ಹಾಳೆಗಳನ್ನು ತಿರುವಿಹಾಕುತ್ತಿರಬೇಕು.

'ಆಡಿ ಅಳುಪದಿರಾ, ಲೇಸ ಮಾಡಿ ಮರುಗದಿರಾ. ಎಲೆ ಮನವೆ
ಕೂಡಿ ತಪ್ಪದಿರಾ; ಬೇಡಿದವರಿಗಿಲ್ಲೆನದಿ ೨, ಕಂಡಾ, ಮನವೆ;
ನಾಡ ಮಾತುಬೇಡ, ಸೆಱಗೊಡ್ಡಿ ಬೇಡು ಕೂಡಲಸಂಗಮ ಶರಣರ'

ಇದೇ ಸ್ವಾತ್ಮಶಿಕ್ಷಣ. 'ಅರಿವೇ ಗುರು' ವಾದ್ದರಿಂದ ತನ್ನ ಅರಿವಿನಿಂದಲೇ ಅಮರತೆಯನ್ನು ಸಂಪಾದಿಸಿಕೊಳ್ಳಬೇಕು—ಎಂಬುದು ಇಲ್ಲಿನ ಅಂತರಾರ್ಥ.

ಕಡೆಯದಾಗಿ ಬಸವಣ್ಣನು ತನ್ನ ವಚನಗಳಲ್ಲಿ ಚಿತ್ರಿಸಿದ ಭಕ್ತಿ, ನಿರ್ಮಿಸಿದ ದೈವ-ಇವುಗಳನ್ನು ಗಮನಿಸಿದರೆ ಅವನು ಎಷ್ಟು ವಾಸ್ತವವಾದಿ, ಇಹದ ಬಾಳಿಗೆ ಎಷ್ಟರ ಮಟ್ಟಿಗೆ ಬೆಲೆ ಕೊಟ್ಟವನು ಎಂಬುದು ತಿಳಿಯುತ್ತದೆ.

ಭಕ್ತಿಯ ಬಗೆಗೆ ಹೆಚ್ಚು ಹೇಳಬೇಕಾಗಿಲ್ಲ. ಏಕೆಂದರೆ ಅಣ್ಣ ಭಕ್ತಿಭಾಂಡಾರಿ. ಇಹದ ಶಾಂತಿಗೆ, ಆತ್ಮಸಾಂತ್ವನಕ್ಕೆ ಭಕ್ತಿ ಬೇಕೇಬೇಕು. ಅಣ್ಣನ ವಚನಗಳಲ್ಲಿ ಬಹುಭಾಗ ಈ ಭಕ್ತಿ ಪ್ರತಿಪಾದನೆಗಾಗಿಯೇ ಮೀಸಲಾಗಿದೆ. ಅದರ ವರದಿಯ ಅಗತ್ಯ ಇಲ್ಲ. ಆದರೆ ಅಣ್ಣನು ತಳೆದ ದೈವಕಲ್ಪನೆಯ ಕಡೆಗೆ ನಮ್ಮ ದೃಷ್ಟಿ ಹರಿಸೋಣ—

ಮಡಕೆ ದೈವ, ಮೊಱ ದೈವ, ಬೀದಿಯ ಕಲ್ಲು ದೈವ,
ಹಣಿಗೆ ದೈವ, ಬಿಲ್ಲನಾರಿ ದೈವ, ಕಾಣಿರೋ,
ಕೊಳಗ ದೈವ, ಗಿಣ್ಣಿಲು ದೈವ. ಕಾಣಿರೋ !
ದೈವ, ದೈವವೆಂದು ಕಾಲಿಡಲಿಂಬಿಲ್ಲಾ !

ಇಂತಹ ಅಸಂಖ್ಯಾತ ದೈವಗಳನ್ನು ಕಂಡಾಗ ತನಗೆ ತಾನೇ ಪ್ರಶ್ನಿಸಿಕೊಳ್ಳುತ್ತಾನೆ.

ಅರಗು ತಿಂದು ಕರಗುವ ದೈವವ,
ಉರಿಯ ಕಂಡರೆ ಮುರುಟುವ ದೈವವನೆಂತು
ಸರಿಯೆಂಬೆನಯ್ಯಾ ?
ಅವಸರ ಬಂದರೆ ಮಾರುವ ದೈವವನೆಂತು ಸರಿಯೆಂಬೆನಯ್ಯಾ ?
ಅಂಜಿಕೆಯಾದರೆ ಹೂಳುವ ದೈವವನೆಂತು ಸರಿಯೆಂಬೆನಯ್ಯಾ ?

ಇದನ್ನು ನೋಡಿದರೆ ಬಸವಣ್ಣ ಸಂಕುಚಿತ ಬುದ್ಧಿಯವನು ಎನ್ನಿಸಬಹುದು, ಇಲ್ಲವೇ ನಾಸ್ತಿಕ ಎನ್ನಿಸಬಹುದು. ಏಕದೇವೋಪಾಸನೆಯ ಮೊಂಡುತನದಲ್ಲಿ ಬಸವಣ್ಣ

ಅನ್ಯ ದೈವಗಳನ್ನು ತೆಗಳುತ್ತಿದ್ದಾನೆ ಎಂದಂದುಕೊಳ್ಳಬಹುದು. ಆದರೆ ಅಣ್ಣ ಅಂತಹ ಸಣ್ಣವನಲ್ಲ. ಅವನಿಗೆ ತನ್ನ ಇಷ್ಟದೈವವಾದ ಕೂಡಲಸಂಗಮನಿಗಿಂತಲೂ ಮಿಗಿಲಾದ ದೈವ ಬೇರೆ ರೂಪದಲ್ಲಿ ಬೇರೆಡೆಯಲ್ಲಿದೆ. ಅದಿರುವುದು ಕಡು ಬಡವನ ಗುಡಿಸಲಿನಲ್ಲಿ; ಸದಾ ದುಡಿಯುತ್ತಿರುವ ಕರ್ಮಯೋಗಿಯಲ್ಲಿ; ನುಡಿದಂತೆ ನಡೆವ ಮಹಾತ್ಮನಲ್ಲಿ; ಅರೆದರೆ ಸಣ್ಣವಾಗಿ ಒರೆದರೆ ಬಣ್ಣವಾಗುವ ಪುಣ್ಯಾತ್ಮನಲ್ಲಿ; ಭಾಂಡ ಭಾಜನ (ಅಂತರಂಗ ಬಹಿರಂಗ) ಶುದ್ಧವಿರುವವನಲ್ಲಿ; ಮಾಡುವ ನೀಡುವ ನಿಜಗುಣವುಳ್ಳಾತನಲ್ಲಿ; ಸತ್ಯಪ್ರೇಮ ಅಹಿಂಸೆಗಳನ್ನು ಬಿತ್ತರಿಸಿದ ಪೂಜ್ಯನಲ್ಲಿ; ಪರವಧುವನ್ನು ಮಹಾದೇವಿ ಎಂಬ ಸದಾಚಾರ ಸಂಪನ್ನನಲ್ಲಿ; ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಶರಣ ಶ್ರೇಷ್ಠನಲ್ಲಿ; ವೈರಿಯೂ ಮೆಚ್ಚುವಂತಹ ನೀರಿನಲ್ಲಿ, ಅಂಗನೆಯೂ ಮೆಚ್ಚುವಂತಹ ವ್ರತಿಯಲ್ಲಿ, ಜಂಗಮ ಮೆಚ್ಚುವಂತಹ ಭಕ್ತನಲ್ಲಿ; ಪರಧನ, ಪರಸತಿ, ಪರದೈವ—ಇವುಗಳನ್ನೊಲ್ಲೆನೆಂಬ, ಹಾಗೂ, ಲಿಂಗ, ಜಂಗಮ ಒಂದೇ ಎಂಬ, ಪ್ರಸಾದ ದಿಟವೆಂಬ ಛಲಗಾರನಲ್ಲಿ; ಕಾಯದ ಕಳವಳಕ್ಕಂಜದೆ, ಉರಿ ಬರಲಿ, ಸಿರಿ ಬರಲಿ ಬೇಕು–ಬೇಡ ಎನ್ನುವ ಸಮಾಧಾನಿಯಲ್ಲಿ; ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಸಕಲರನ್ನೂ ಒಂದೇ ಎಂದು ತಿಳಿದು ನಡೆಸುವ, ಬೋಧಿಸುವ. ಉಚ್ಚನೀಚ ಭಾವದ ಕೊಚ್ಚೆಯನ್ನು ತೊಳೆದು ಶುದ್ಧಗೈದ ಆ ಜಗತ್ ಜಲಗಾರನಲ್ಲಿ: ಆರು ಮುನಿದು ನಮ್ಮನೇನ ಮಾಡುವರು ಎಂಬ ನಿಷ್ಠುರಿಯಲ್ಲಿ; ದರ್ಪ ದೌರ್ಜನ್ಯಗಳಿಗೆ ಬಲಿ–ಯಾಗದೆ ಧ್ಯೇಯಕ್ಕಾಗಿ ದೇಹವನ್ನು ಸಮರ್ಪಿಸಲು ಸಿದ್ಧನಿರುವ ಸ್ವಾಭಿಮಾನದ ಶಿಶುವಿನಲ್ಲಿ: ನೆಲನೊಂದೆ ಹೊಲೆಗೇರಿ–ಶಿವಾಲಯಕ್ಕೆ, ಜಲವೊಂದೆ ಶೌಚಾಚಮನಕ್ಕೆ, ಕುಲವೊಂದೇ ತನ್ನ ತಾನಱಿದವಂಗೆ, ಫಲವೊಂದೇ ಷಡದರುಶನ ಮುಕ್ತಿಗೆ ಎಂಬುದನ್ನರಿತು, ಅಸ್ಪೃಶ್ಯತೆಯ ಅರ್ಥವನ್ನೇ ಅರಿಯದ ಸರ್ವರಲ್ಲೂ ಸೋದರ ಭಾವವನ್ನುಳ್ಳ ನಿಷ್ಕಳ ನಿಜೈಕ್ಯನಲ್ಲಿ; ಮುತ್ತಿನ ಹಾರದಂತೆ, ಮಾಣಿಕ್ಯದ ದೀಪ್ತಿಯಂತೆ, ಸ್ಫಟಿಕದ ಸಲಾಕೆಯಂತೆ, ಲಿಂಗವೂ ಮೆಚ್ಚಿ ' ಅಹುದಹುದು ' ಎನ್ನುವಂತೆ ನುಡಿವ ನಡೆವ ಒಡೆತನ ಉಳ್ಳವನಲ್ಲಿ; ಸದಾಕಾಲವೂ ' ಸೋಹಂ ' ಎನ್ನದೆ, ' ದಾಸೋಹಂ ' ಎನ್ನುವ ವಿನಮ್ರ ಮೂರ್ತಿಯಲ್ಲಿ; ಭಕ್ತನಾಗಿ ಭಕ್ತಿದಾಸೋಹ, ಯುಕ್ತನಾಗಿ ಯುಕ್ತಿದಾಸೋಹ, ಐಕ್ಯನಾಗಿ ಮಮಕಾರ ದಾಸೋಹ–ಹೀಗೆ ಸರ್ವ ವಿಧದಲ್ಲೂ ದಾಸೋಹವನ್ನೇ ಆಹ್ವಾನಗೈಯುವ ಅನುಭಾವಿಯಲ್ಲಿ; ವಿಶ್ವಜಿತ ಧನುಜಿತ, ಸರ್ವಜಿತ. ಸುತ್ರಾಮಜಿತ, ನೃಜಿತ, ಉರ್ವರಾಜಿತ, ಅಶ್ವಜಿತ, ಗೋಜಿತ. ಸ್ವರ್ಜಿತ, ಸುಸಂವೇದ್ಯ, ವೇದನಾದಾತೀತ, ತುರೀಯ ಪರಮಾನಂದ, ನಿರವಯ, ಸೂರ್ಯಕೋಟಿ ಪ್ರಭೆಯ ಬೆಳಗಿನ ಸಹಸ್ರ ಕಿರಣದ ಅಗ್ರಪಟಲದ ಬೆಳಕು ಕಂಡವನಲ್ಲಿ; ಘನ ಗಂಭೀರ ಮಹಾಘನದೊಳಗಿನ ಘನಕ್ಕೆ ಘನವಾದ ಅಂದರೆ ಬೆಳಗಣೊಳಗಣ ಬೆಳಗು ಮಹಾಬೆಳಗಿನಲ್ಲಿ ಬೆರೆದು ಬಯಲಾದವನಲ್ಲಿ.

ಹಾಗಲ್ಲದೆ...

ಒಂದನಾಡ ಹೋಗಿ ಒಂಬತ್ತನಾಡುವ ಢಂಬಕನಲ್ಲಲ್ಲ, ನಂಬದೆ ನಚ್ಚದೆ ಬರಿದೆ ಕರೆವ ಆಷಾಢಭೂತಿಯಲ್ಲಲ್ಲ, ನುಡಿದು ಹುಸಿವ. ನಡೆದು ತಪ್ಪುವ ಪ್ರಪಂಚಿಯಲ್ಲಲ್ಲ. ಮರದ ನೆರಳಲ್ಲಿದ್ದೂ ತನ್ನ ನೆರಳನರಸುವ ಅತೀ ಬುದ್ಧಿವಂತನಲ್ಲಲ್ಲ, ಕಾಮು. ಹೇಮವ ತೊರೆಯುದೆ ಜರೆಯುದೆ ಶ್ವಾನನಂತೆ ಸುತ್ತುವವನಲ್ಲಲ್ಲ, ಅರಸನ ಕಂಡೊಡನೆಯೇ ತನ್ನ ಪುರುಷನನ್ನು ಮರೆಯುವ ಪತಂಗದಲಲ್ಲಲ್ಲ, ಜ್ಯೋತಿವಿಡಿದು ಕತ್ತಲೆಯನ್ನರಸುವ ಮರುಳು ಮಾನವನಲ್ಲಲ್ಲ, ಇಂತಹ ಮಾತಿನ ಮಾಲೆ ಎಷ್ಟೋ ಬೆಳೆಯಲಿ, ಅಣ್ಣನ ಲೌಕಿಕಪ್ರಜ್ಞೆ ಮಣ್ಣಿನ ಮೋಹ ಎಲ್ಲೂ ಕುಂಠಿತವಾಗುವುದಿಲ್ಲ. ಮೊದಲು ಮಾನವ ಇಲ್ಲಿ ಸಲ್ಲಬೇಕು ಎಂಬ ಆವನ ಸಿದ್ಧಾಂತ ಆವನಲ್ಲಿದ್ದ ಮಾನವೀಯತೆಗೆ ಬೆಲೆ ತಂದಿದೆ. □

# ಶರಣ ಸಾಹಿತ್ಯ ಮತ್ತು ದಾಸ ಸಾಹಿತ್ಯ

ಕೃಷ್ಣಮೂರ್ತಿ ಕಿತ್ತೂರ

ಪ್ರಭುದೇವರಾದಿಯಾಗಿ ಶರಣರನ್ನೂ, ಪುರಂದರದಾಸರಾದಿಯಾಗಿ ಕೀರ್ತನಕಾರರನ್ನೂ ಕವಿಗಳೆಂದು ಯಾರೂ ಕರೆದಿಲ್ಲ. ಕಾವ್ಯ ಬರೆದು ಖ್ಯಾತರಾಗಬೇಕೆಂದು ಅವರುಗಳು ಎಂದೂ ಆಶಿಸಲೂ ಇಲ್ಲ. ಆದರೂ ಅವರು ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ಕಾಣಿಕೆಯನ್ನು ಸಲ್ಲಿಸಿದರು. ತಮ್ಮ ತಮ್ಮ ಮತ ಧರ್ಮಗಳ ಪ್ರಸಾರ ಮತ್ತು ಅದರ ಅಂಗವಾಗಿ ಮಾನವ ಧರ್ಮದ ಪ್ರಸಾರವೇ ಅವರ ಮುಖ್ಯ ಉದ್ದೇಶವಾಗಿತ್ತು. ಅವರು ಅದನ್ನು ಬಹು ಮಟ್ಟಿಗೆ ಸಾಧಿಸಿದರೆಂದೇ ಹೇಳಬಹುದು. ಆದರೆ ಅದರ ಜೊತೆಗೇ, ಬಹುಶಃ ಅವರಿಗರಿವಿಲ್ಲದೆ, ಅವರು ಸಾಹಿತ್ಯ ಸೇವೆಯನ್ನು ಮಾಡಿದರು. ಎಲ್ಲ ಶರಣರ ಅಥವಾ ದಾಸರ ಎಲ್ಲ ವಚನಗಳು ಮತ್ತು ಕೀರ್ತನೆಗಳು ಶ್ರೇಷ್ಠವಾದ ಕಾವ್ಯ ಗುಣದಿಂದ ಕೂಡಿವೆಯೆಂದು ಯಾರೂ ಹೇಳಲಾರರು. ಆದರೂ ಒಟ್ಟಿನಲ್ಲಿ ಈ ಬರಹಗಳಲ್ಲಿಯ ಸಾಹಿತ್ಯ ಗುಣವು ತನ್ನ ಆಂತರಿಕ ಶಕ್ತಿಯಿಂದ ಎಲ್ಲರನ್ನೂ ತನ್ನೆಡೆಗೆ ಆಕರ್ಷಿಸಿಕೊಂಡಿದೆ. ಆದ್ದರಿಂದಲೇ ವಿಮರ್ಶಕರು ವಚನಗಳು, ಕೀರ್ತನೆಗಳು ಎಂದು ಮಾತ್ರ ಕರೆಯದೆ, ವಚನಸಾಹಿತ್ಯ ಮತ್ತು ದಾಸ ಸಾಹಿತ್ಯ ಎಂದೇ ಕರೆದರು. ಅಷ್ಟೇ ಅಲ್ಲದೆ ಇವುಗಳು ಕನ್ನಡ ಸಾಹಿತ್ಯದ ಪ್ರಮುಖ ವೈಶಿಷ್ಟ್ಯಗಳಾಗಿ ಮೆರೆದಿವೆ. ಈ ಎರಡೂ ಪ್ರಕಾರದ ಸಾಹಿತ್ಯದ ಮೂಲ ಉದ್ದೇಶವು ಒಂದೇ ಆಗಿರುವುದರಿಂದ ಇವುಗಳನ್ನು ತುಲನಾತ್ಮಕವಾಗಿ ವಿವೇಚಿಸುವುದರಲ್ಲಿ ಔಚಿತ್ಯವಿದೆ.

ತಾನು ಕಂಡ ಸತ್ಯವನ್ನು, ಪಡೆದ ಅನುಭವವನ್ನು ಹೃದ್ಯವಾಗಿ ನಿರೂಪಿಸುವುದು ಸಾಹಿತಿಯ ಮುಖ್ಯ ಕಾರ್ಯವೆಂದು ಹೇಳಬಹುದು. ಅದು ನಿತ್ಯ ನೂತನವಾಗಿರಬಹುದು. ಅಪೂರ್ವವಾಗಿರಬಹುದು. ಹಾಗಿಲ್ಲದೆಯೂ ಇರಬಹುದು. ಬೇರೆಯವರು ಪಡೆದ ಅಥವಾ ಪಡೆಯಬಹುದಾದ ಅನುಭವವನ್ನೇ ಸಾಹಿತಿ ತನ್ನದೇ ಆದ ರೀತಿಯಲ್ಲಿ ನಿವೇದಿಸಿ ಪರರ ಹೃದಯದಲ್ಲೂ ಅದು ಒಡಮೂಡುವಂತೆ ಮಾಡಿದರೆ ಆ ಮಟ್ಟಿಗೆ ಅದು ಕೃತಕೃತ್ಯತೆಯನ್ನು ಪಡೆದೇ ಪಡೆಯುತ್ತದೆ. ಹಾಗೆ ನೋಡಿದಾಗ ಶರಣರು ಮತ್ತು ದಾಸರು ಹೆಚ್ಚಾಗಿ ತಮ್ಮ ತಮ್ಮ ಅನುಭವಗಳನ್ನು

ನಿರೂಪಿಸಿದ್ದರೂ ಕೆಲವೆಡೆ ತಮ್ಮವಲ್ಲದ ವಿಚಾರಗಳನ್ನೂ ನಿವೇದಿಸಿರುವರು. ಆದರೆ ಆ ವಿಚಾರ ನಿರೂಪಣೆಯಲ್ಲಿ ಪರಕೀಯತೆಯನ್ನು ಕಳೆದುಕೊಂಡು ಸ್ವಾಂತಿಕೆಯನ್ನೇ ಅಭಿವ್ಯಕ್ತಗೊಳಿಸುತ್ತದೆ. ವೇದ, ಉಪನಿಷತ್ತು, ಆಗಮ, ಇತಿಹಾಸ, ಪುರಾಣ ಮೊದಲಾದವುಗಳಲ್ಲಿಯ ಹಲವು ಮಾತುಗಳನ್ನು, ವಿಚಾರಗಳನ್ನು ಅವರು ತಮ್ಮವನ್ನಾಗಿ ಮಾಡಿಕೊಂಡು ಜನತೆಯ ಭಾಷೆಯಲ್ಲಿ, ಜನರಿಗೆ ವೇದ್ಯವಾಗುವಂತೆ, ಮನವರಿಕೆಯಾಗುವಂತೆ ನಿರೂಪಿಸಿದರು. ಈ ರೀತಿಯಿಂದ ನೋಡಿದಾಗ ವಚನ ಸಾಹಿತ್ಯವು ವೀರಶೈವ ಮತವನ್ನೂ ದಾಸ ಸಾಹಿತ್ಯವು ಮಾಧ್ವಮತವನ್ನೂ ಮುಖ್ಯವಾಗಿ ಪ್ರತಿಪಾದಿಸಿದ್ದರೂ ಉಳಿದ ವಿಷಯದಲ್ಲಿ ಎರಡರಲ್ಲೂ ಸಾಮ್ಯವೇ ಹೆಚ್ಚಾಗಿದೆ.

ಮಾನವ ಧರ್ಮವನ್ನು ಬಿತ್ತರಿಸುವಲ್ಲಿ, ಸನಾತನ ಜೀವನ ಮೌಲ್ಯಗಳನ್ನು ಎತ್ತಿ ಹಿಡಿಯುವಲ್ಲಿ, ಮಾನವನ ಕುಂದು ಕೊರತೆಗಳನ್ನು ಎತ್ತಿ ತೋರಿಸಿ ಅವುಗಳನ್ನು ಖಂಡಿಸುವಲ್ಲಿ ಸಾಮಾಜಿಕ ಸ್ವಾಸ್ಥ್ಯವನ್ನು ಪ್ರತಿಷ್ಠಾಪಿಸುವಲ್ಲಿ ಶರಣ ಮತ್ತು ದಾಸ ಸಾಹಿತ್ಯಗಳು ಒಂದೇ ದಾರಿಯನ್ನು ತುಳಿದಿವೆ. ಶರಣರ ಮತ್ತು ದಾಸರ ಭಕ್ತಿ ನಿರ್ಭರತೆ ಮತ್ತು ಆತ್ಮ ವಿಮರ್ಶೆಗಳು ಅವರ ವಚನಗಳಲ್ಲೂ ಕೀರ್ತನೆಗಳಲ್ಲೂ ಪ್ರತಿಬಿಂಬಿತವಾಗಿವೆ. ಸಮಾಜದ ಶ್ರೀಸಾಮಾನ್ಯನನ್ನೇ ಅವರಿಬ್ಬರೂ ಗುರಿಯಾಗಿಟ್ಟುಕೊಂಡು ಕೃತಿಗಳನ್ನು ರಚಿಸಿದರು. ಜನಸಾಮಾನ್ಯರಲ್ಲಿ ದೈವಭಕ್ತಿಯನ್ನು ನೆಲೆಗೊಳಿಸಿದ ಶ್ರೇಯಸ್ಸು ಅವರದು. ದೇವರು ಇದ್ದಾನೆ, ಅವನು ಎಲ್ಲರನ್ನು ರಕ್ಷಿಸುತ್ತಾನೆ– ಎಂದು ತಾವೂ ನಂಬಿದರು, ಜನರನ್ನೂ ನಂಬಿಸಿದರು. ದೇವರಿದ್ದಾನೆ ಎಂಬ ಶ್ರದ್ಧೆ ಬಹುದೊಡ್ಡ ಮಾತು. ಅಂಥ ಶ್ರದ್ಧೆಯನ್ನು ಅವರು ಜನರಲ್ಲಿ ಹುಟ್ಟಿಸಿದರೆಂಬುದು ಸಾಮಾನ್ಯ ಮಾತಲ್ಲ.

ಶರಣರ ಮತ್ತು ದಾಸರ ನುಡಿಮುತ್ತುಗಳಲ್ಲಿ ಹೆಚ್ಚಿನ ಶಕ್ತಿ ಉಂಟಾಗಲಿಕ್ಕೆ ಮುಖ್ಯ ಕಾರಣವೆಂದರೆ ಅವರ ಮಾತುಗಳು ಅನುಭವ ಜನ್ಯವಾಗಿದ್ದು, ಹೃದಯದ ಆಳದಿಂದ ಬಂದುದು. ಅದು ಕಾರಣವೇ ಅವುಗಳಿಗೆ ಜನರ ಹೃದಯದಲ್ಲಿ ಪ್ರವೇಶ ದೊರೆಯಿತು. ಅವರ ಮಾತುಗಳ ಅರ್ಥ ಚಿಂತಿಸಿದಷ್ಟೂ ಹೆಚ್ಚುತ್ತದೆ. ಹಾಗಿರುವುದರಿಂದಲೇ ಅವುಗಳನ್ನು ಪುನಃ ಪುನಃ ಓದಬೇಕೆಂಬ ಹಂಬಲ ನಮ್ಮಲ್ಲಿ ಉಂಟಾಗುತ್ತದೆ ಮತ್ತು ಅದರಿಂದಲೇ ಶರಣ ಸಾಹಿತ್ಯಕ್ಕೂ ದಾಸ ಸಾಹಿತ್ಯಕ್ಕೂ ಕನ್ನಡದಲ್ಲಿ ಉನ್ನತವಾದ ವಿಶಿಷ್ಟ ಸ್ಥಾನ ದೊರಕಿತು.

ಶರಣರಿಗಾಗಲಿ ಅಥವಾ ದಾಸರಿಗಾಗಲಿ ಜನಸಾಮಾನ್ಯರ ಉದ್ಧಾರವೇ ಮುಖ್ಯವಾದ ಗುರಿಯಾಗಿತ್ತು. ಅವರು ಪಂಡಿತರಿಗಿಂತ ಸಾಮಾನ್ಯರನ್ನೇ ಉದ್ದೇಶಿಸಿ ವಚನಗಳನ್ನೂ ಕೀರ್ತನೆಗಳನ್ನೂ ರಚಿಸಿದರು. ಹಾಗಿರುವುದರಿಂದ ಜನಸಾಮಾನ್ಯರ ಬಳಕೆಯ ಭಾಷೆಯೇ ಅವರ ವಾಹಕವಾಯಿತು. ಶರಣರು ಹಳಗನ್ನಡ ಮತ್ತು ನಡುಗನ್ನಡಗಳ ಸಂಧಿಕಾಲದಲ್ಲಿದ್ದರು ಎಂದು ಹೇಳುವುದಕ್ಕಿಂತ, ಪ್ರೌಢ ಹಳಗನ್ನಡವನ್ನು ನಡುಗನ್ನಡವನ್ನಾಗಿ ಮಾರ್ಪಡಿಸಿದ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ ಎನ್ನುವುದು

ಹೆಚ್ಚು ಉಚಿತ. ಶರಣರ ಕಾಲದಲ್ಲಿ ಕೂಡ ಪ್ರೌಢವಾದ ಹಳಗನ್ನಡದಲ್ಲಿ ಕಾವ್ಯರಚನೆ ಮಾಡುವಂಥ ಪಂಡಿತ ಕವಿಗಳಿದ್ದರು. ಆದರೆ ಶರಣರು ಹಳಗನ್ನಡ ಭಾಷೆಗೆ ತಂದು ಕೊಟ್ಟ ತಿರುವು ಮುಂದಿನ ಕವಿಗಳ ಮೇಲೆ ಹೆಚ್ಚಿನ ಪರಿಣಾಮಗಳನ್ನು ಬೀರಿತು. ಹರಿಹರ–ರಾಘವಾಂಕರಂಥ ಉಭಯ ಭಾಷಾ ಪಂಡಿತ ಕವಿಗಳೂ ತಿಳಿಯಾದ ನಡು-ಗನ್ನಡದಲ್ಲಿ ಕಾವ್ಯರಚನೆಗೆ ಕೈಯಿಕ್ಕಿದುದು ಶರಣರ ವಚನ ಸಾಹಿತ್ಯದ ಪ್ರಭಾವದಿಂದಲೇ ಎಂದರೆ ತಪ್ಪಾಗಲಾರದು. ಕನ್ನಡಿಗರಿಗಾಗಿ ಸಂಸ್ಕೃತವನ್ನು ಬಿಟ್ಟು ಕನ್ನಡದಲ್ಲಿ ಕೃತಿಗಳನ್ನು ರಚಿಸಬೇಕೆಂದು ಮೊದಲು ಮನಗಂಡವರು ನಮ್ಮ ಜೈನ ಕವಿಗಳು. ಆದರೆ ಅದಕ್ಕಿಂತ ಮುಂದುವರಿದು ಎಂಥ ಗಹನವಾದ ವಿಚಾರವನ್ನು ತಿಳಿಯಾದ ಕನ್ನಡದಲ್ಲಿ ಅರುಹಲು ಸಾಧ್ಯವೆಂಬುದನ್ನು ಮೊದಲ ಬಾರಿಗೆ ತೋರಿಸಿಕೊಟ್ಟವರು ಶರಣರು. ನಂತರ ಹಲವರು ಅವರನ್ನು ಅನುಕರಿಸಿ ತಿಳಿಯಾದ ಕನ್ನಡದಲ್ಲಿ ಪ್ರೌಢವಾದ ಸಾಹಿತ್ಯವನ್ನು ನಿರ್ಮಿಸಿದರು.

ದಾಸರೂ ಇದೇ ಮಾರ್ಗವನ್ನು ಅನುಸರಿಸಿದರು, ವ್ಯಾಸಕೂಟ ಮತ್ತು ದಾಸ ಕೂಟವೆಂಬ ಎರಡು ಪಂಥಗಳಾಗಿ, ದಾಸಕೂಟದವರು ತಿಳಿಗನ್ನಡದಲ್ಲಿ ಕೀರ್ತನೆಗಳನ್ನು ರಚಿಸಲಾರಂಭಿಸಿದರೆಂಬುದು ಸರ್ವಶ್ರುತವೇ ಇವೆ. ದಾಸರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಜನಬಳಕೆಯ ಭಾಷೆಯನ್ನು ಶುದ್ಧಾಶುದ್ಧ ಭೇದವೂ ಇಲ್ಲದ ಕೃತಿಗಳನ್ನು ರಚಿಸಿದರು. ದಾಸರ ಸಾಹಿತ್ಯವನ್ನು ಕೂಲಂಕಷವಾಗಿ ಅಭ್ಯಸಿಸಿದರೆ, ಅವರು ನಿರ್ಮಿಸಿಕೊಂಡಿರುವ ತಮ್ಮವೇ ಆದ ವಿಪುಲ ಸಂಖ್ಯೆಯ ಅಪಭ್ರಂಶ ಪದಗಳು ಕಣ್ಣಿಗೆ ಬೀಳುವವು. ಅವರು ಭಾಷಾ ವಿಷಯದಲ್ಲಿ ಮಡಿವಂತಿಕೆಯನ್ನು ಎಳ್ಳಷ್ಟೂ ಪಾಲಿಸಲಿಲ್ಲವೆಂಬುದು ನಿಜವಾಗಿಯೂ ಅಚ್ಚರಿಯ ವಿಷಯವೇ ಸರಿ. ಒಟ್ಟಿನಲ್ಲಿ ಶರಣರು ಮತ್ತು ದಾಸರು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿದ ಕಾಣಿಕೆಗಳಲ್ಲಿ ಭಾಷಾವಿಷಯವೂ ಒಂದು ಎಂಬುದನ್ನು ಮರೆಯುವಂತಿಲ್ಲ. ಅವರು ಬಳಸಿದ ತಿಳಿ ಮಾತು, ಜನಬಳಕೆಯ ಪದಗಳು ಮತ್ತು ಜನಸಾಮಾನ್ಯರ ಜೀವನದಲ್ಲಿ ಕಂಡು ಬರುವ ಸಾದೃಶ್ಯಗಳು ಕನ್ನಡ ಸಾಹಿತ್ಯಕ್ಕೆ ಒಂದು ಹೊಸತನವನ್ನೂ, ಶ್ರೀಮಂತಿಕೆಯನ್ನೂ ತಂದುಕೊಟ್ಟವು.

ಹೀಗೆ ಅವರು ಮಾಡಿದ ನುಡಿಯ ಸೇವೆ ಹೆಚ್ಚಿನದಾದರೆ, ಅವರು ಗೈದ ನಾಡಿನ ಸೇವೆ ಇನ್ನೂ ಹೆಚ್ಚಿನದು. ಜನಮನದಲ್ಲಿ ಭಕ್ತಿಯ ಸಸಿಯು ಬೆಳೆದು ಹೆಮ್ಮರವಾಗಿ ನೆಲೆಸುವಂತೆ ಮಾಡಿದವರು ಕನ್ನಡನಾಡಿನ ಶರಣರು ಮತ್ತು ದಾಸರು. ಜನರು ಒಳ್ಳೆಯ ನೀತಿವಂತರಾಗಿ, ಸುಸಂಸ್ಕೃತ ಸಾಮಾಜಿಕರಾಗಿ ಬಾಳುವಂತೆ ಪ್ರೇರೇಪಿಸಿ ದವರಲ್ಲಿ ಶರಣರೂ ದಾಸರೂ ಪ್ರಮುಖರೆನ್ನಬಹುದು. ಭಕ್ತಿ, ಜ್ಞಾನ, ವೈರಾಗ್ಯ ಗಳನ್ನು ಬೋಧಿಸಿದರೂ, ಸಂಸಾರವನ್ನು ತ್ಯಜಿಸಿ ಎಲ್ಲರೂ ಸಂನ್ಯಾಸಿಗಳಾಗಬೇಕೆಂದು ಅವರು ಹೇಳಲಿಲ್ಲವೆಂಬುದು ಗಮನಾರ್ಹವಾಗಿದೆ.

" ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ

ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ
ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ ॥ ''

" ಮನವೆ ಚಂಚಲ ಮತಿಯು ಬಿಡು ನಮ್ಮ
ವನಜನಾಭನ ಭಜನೆಯು ಮಾಡು ''

" ಈಸಬೇಕು ಇದ್ದು ಜೈಸಬೇಕು
ಹೇಸಿಕೆ ಸಂಸಾರದಲ್ಲಿ ಆಶೆ ಲೇಸ ಮಾಡದ್ಹಾಂಗೆ ''

" ಸಂಸಾರವೆಂಬಂಥ ಭಾಗ್ಯವಿರಲಿ
ಕಂಸಾರಿ ನೆನೆವಂಥ ಸೌಭಾಗ್ಯವಿರಲಿ "

ಎಂಬಂಥ ಅವರ ನುಡಿಗಳಲ್ಲಿ ಅವರ ಜೀವನ ಸಂದೇಶ ವ್ಯಕ್ತವಾಗುತ್ತದೆ. ಸಂಸಾರದಲ್ಲಿ ಇದ್ದುಕೊಂಡರೂ, ಅದಕ್ಕೆ ಅತಿಯಾಗಿ ಅಂಟಿಕೊಳ್ಳದೆ, ಭಕ್ತಿ ಜ್ಞಾನಗಳನ್ನು ಗಳಿಸುತ್ತ ಜೀವನವನ್ನು ಉನ್ನತಗೊಳಿಸಬೇಕೆಂದೇ ಅವರು ಸಾರಿದರು. ಈ ಮಾರ್ಗ ಎಷ್ಟು ಸುಲಭವೋ ಅಷ್ಟೇ ಕಠಿಣವೂ ಅಹುದು. ಅದಕ್ಕೆ ಮುಖ್ಯವಾಗಿ ಅವ್ಯಾಜ ಭಕ್ತಿ ಬೇಕು. ಡಂಭಾಚಾರದ ಭಕ್ತಿಗೆ ದೇವ ಒಲಿಯಲಾರ. ಭಕ್ತಿಯಲ್ಲಿ ತೋರುವ ಡಂಭಾಚಾರವನ್ನು ಶರಣರೂ–ದಾಸರೂ ಏಕಪ್ರಕಾರವಾಗಿ, ಅಷ್ಟೇ ನಿಷ್ಠುರವಾಗಿ ಖಂಡಿಸಿರುವರು.

ಜೀವನದಲ್ಲಿ ನಮ್ಮನ್ನು ಅಡ್ಡದಾರಿಗೆ ಎಳೆಯುವ ವಿಷಯಗಳಿಗೆ ಮಿತಿಯಿಲ್ಲ, ಶರಣರೂ–ದಾಸರೂ ಅವುಗಳ ಬಗ್ಗೆ ನಮಗೆ ಎಚ್ಚರಿಕೆ ನೀಡಿ, ಜೀವನ ವಿವೇಕವನ್ನು ಬೋಧಿಸಿರುವರು,

" ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಂಗಳಿಗಂಜಿದಡೆಂತಯ್ಯಾ
ಸಮುದ್ರದ ತಡಿಯಲೊಂದು ಮನೆಯ ಮಾಡಿ
ನೊರೆತೆರೆಗಳಿಗಂಜಿದಡೆಂತಯ್ಯ
ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ
ನಾಚಿದಡೆಂತಯ್ಯ
ಚನ್ನಮಲ್ಲಿಕಾರ್ಜುನಕೇಳಯ್ಯ ಲೋಕದೊಳಗೆ
ಹುಟ್ಟಿದ ಬಳಿಕ
ಸ್ತುತಿ ನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ
ಸಮಾಧಾನಿಯಾಗಿರಬೇಕು."

" ಮಾನವ ಜನ್ಮ ದೊಡ್ಡದು, ಇದ
ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ ''

" ವಿಷಯದ ವಿಚಾರ ಬಿಡು ವಿಹಿತ ಕರ್ಮವ ಮಾಡು
ಮುಸಣ ಮನವೇ ಮಾಧವನ ಕೊಂಡಾಡು ''

"ನಂಬದಿರು ಈ ದೇಹ ನಿತ್ಯವಲ್ಲ
ಅಂಬುಜಾಕ್ಷನ ಭಜಿಸಿ ಸುಖಿಯಾಗೊ ಮನವೆ"

"ನಗೆಯು ಬರುತಿದೆ ಎನಗೆ ನಗೆಯು ಬರುತಿದೆ
ಜಗದೊಳಿರುವ ಜನರೆಲ್ಲ ಹಗರಣ ಮಾಡುವುದ ಕಂಡು"

"ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು
ನುಡಿಯೊಳಗಾಗಿ ನಡೆಯದಿದ್ದರೆ ಕೂಡಲ ಸಂಗಮದೇವ
ನೆಂತೊಲಿವನಯ್ಯ"

"ಲೋಕದ ಡೊಂಕ ನೀವೇಕೆ ತಿದ್ದುವಿರಿ ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ"

"ನಾ ನಿನ್ನ ಧ್ಯಾನದೊಳಿರಲು ಹೀನ ಮಾನವರೇನು
ಮಾಡುವರೊ ಗೋಪಾಲ"

"ಗಾಳಿಗೆ ಗಿರಿ ನಡುಗುವುದೇ ?
ತಾಳಿದವರಿಗೆ ವಿರುದ್ಧ ತಾ ಲೋಕವುಂಟೆ ?"
ತಲ್ಲಣಿಸದಿರು ತಾಳು ಮನವೇ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ."

– ಎಂಬಂಥ ನೂರಾರು, ಸಾವಿರಾರು ನುಡಿಮುತ್ತುಗಳು ಕನ್ನಡ ನಾಡಿನ ಜನ ಜೀವನವನ್ನು ತಿದ್ದಿ ತೀಡಲು ಕಾರಣವಾದುವು. ಈ ದೃಷ್ಟಿಯಿಂದ ನೋಡಿದಾಗ ಶರಣ ಮತ್ತು ದಾಸ ಸಾಹಿತ್ಯದಲ್ಲಿ ಹೆಚ್ಚಿನ ವ್ಯತ್ಯಾಸ ತೋರುವುದಿಲ್ಲ. ಆದರೂ ಅವರವರ ವೈಶಿಷ್ಟ್ಯಗಳು ಅವರವರ ಸಾಹಿತ್ಯದಲ್ಲಿ ಕಾಣಿಸಿಕೊಳ್ಳದೆ ಇಲ್ಲ.

ಶರಣ ಸಾಹಿತ್ಯ ಅಥವಾ ವಚನ ಸಾಹಿತ್ಯವೆಂಬುದು ಸಾಹಿತ್ಯ ಪ್ರಕಾರದ ದೃಷ್ಟಿಯಿಂದಲೂ ವೈಶಿಷ್ಟ್ಯಪೂರ್ಣವಾಗಿದೆ. ಹಾಗೆ ನೋಡಿದರೆ ಅದು ಪದ್ಯ ಸಾಹಿತ್ಯವಲ್ಲ; ಹಾಗೆಂದು ಅದನ್ನು ಕೇವಲ ಗದ್ಯವೆಂದೂ ಕರೆಯುವಂತಿಲ್ಲ. ಗದ್ಯರೂಪವಾದರೂ ಪದ್ಯದ ಲಯವನ್ನೂ. ಮಾಧುರ್ಯವನ್ನೂ ಚುರುಕುತನವನ್ನೂ ಪಡೆದಿರುವ ವಚನಗಳು ಶ್ರೇಷ್ಠ ಕಾವ್ಯಾಂಶದಿಂದ ಕೂಡಿವೆ. ಇಂಥ ವಚನಗಳನ್ನು ಕೆಲವರು "ಪದ್ಯ ಗಂಧಿ" ಎಂದೂ "ಅನುಭಾವ ಗದ್ಯದಲ್ಲಿರುವ ಆಧ್ಯಾತ್ಮಿಕ – ಭಾವಗೀತೆ" ಎಂದೂ ಕರೆದಿರುವರು. ವಚನಗಳಲ್ಲಿ ಭಾವಗೀತೆಯ ಮೂಲಸತ್ತ್ವವಿದೆ ಎಂಬುದು ಸತ್ಯ. ಒಟ್ಟಿನಲ್ಲಿ ಕನ್ನಡದಲ್ಲಿ ವಚನ ಸಾಹಿತ್ಯ ಒಂದು ವಿಶಿಷ್ಟವಾದ ಗದ್ಯ ಸಾಹಿತ್ಯ, ಆದರೆ ಕೀರ್ತನೆಗಳಲ್ಲಿರುವ ಗೇಯಗುಣ ವಚನಗಳಿಗೆ ಹೆಚ್ಚಾಗಿ ಇಲ್ಲ ಎನ್ನಬೇಕು. ವಚನಗಳನ್ನೂ ಹಾಡುತ್ತಿದ್ದರೇ ? ಎಂಬುದು ಇನ್ನೂ ಪಂಡಿತರ ವಿಚಾರದ ವಿಷಯವೇ ಆಗಿದೆ.

...

" ತಾಳ ಮಾನ ಸರಿಸವನರಿಯೆ, ಓಜೆ ಬಜಾವಣೆ ಲೆಕ್ಕವನರಿಯೆ
ಅಮೃತಗಣ ದೇವಗಣವನರಿಯೆ
ಕೂಡಲ ಸಂಗಮದೇವಾ ನಿನಗೆ ಕೇಡಿಲ್ಲವಾಗಿ
ಆನು ಒಲಿದಂತೆ ಹಾಡುವೆ "

ಎಂದು ಬಸವಣ್ಣನವರು ಸಾರಿದರು, ಹಾಗೆ ವಚನಗಳೆಲ್ಲಾ ಛಂದಸ್ಸು, ಮತ್ತು ಸಂಗೀತಕ್ಕೆ ಬದ್ಧವಾಗಿರದಿದ್ದರೂ, ಕೆಲಕೆಲವು ವಚನಗಳಲ್ಲಿ ಈ ಅಂಶವೂ ಕಂಡು ಬರುತ್ತದೆ. ಇತ್ತೀಚೆ ಕನ್ನಡ ನಾಡಿನ ಹೆಸರಾಂತ ಸಂಗೀತ ವಿದ್ವಾಂಸರಾದ ಶ್ರೀ ಮಲ್ಲಿಕಾರ್ಜುನ ಮನಸೂರ ಅವರಿಂದ ಆರಂಭವಾಗಿ ಉಳಿದವರೂ ವಚನಗಳನ್ನು ಸಂಗೀತ ಶಾಸ್ತ್ರದ ನಿಯಮಗಳಿಗನುಸಾರವಾಗಿ ಸುಶ್ರಾವ್ಯವಾಗಿ ಹೇಳುತ್ತಿರುವುದು ಸರ್ವಶ್ರುತ.

ಸಾಹಿತ್ಯಕ್ಕೆ ಛಂದಸ್ಸು ಮತ್ತು ಸಂಗೀತಗಳು ಹೆಚ್ಚಿನ ಮೆರುಗನ್ನು ಕೊಡಬಹು ದಾದರೂ, ಅವು ಅತ್ಯವಶ್ಯವೇನೂ ಅಲ್ಲ, ವಚನ ಸಾಹಿತ್ಯದಲ್ಲಿ ಛಂದಸ್ಸು ಸಂಗೀತ ಗಳಿಗಿಂತ ಕಾವ್ಯಗುಣವು ನಮ್ಮನ್ನು ಆಕರ್ಷಿಸುತ್ತದೆ, ಅರ್ಥ – ಭಾವಗಳ ಭಾರದಿಂದ ಮೈ ತುಂಬಿಕೊಂಡು ಬಳುಕುವ ವಚನಗಳ ಸೊಗಸನ್ನು ಕಂಡು ಮೆಚ್ಚದವರಾರು ?

ವಚನ ಸಾಹಿತ್ಯದಲ್ಲಿ ವಿಪುಲವಾಗಿ ಕಂಡುಬರುವ ಉಪಮೆ, ದೃಷ್ಟಾಂತ, ಅರ್ಥಾಂತರನ್ಯಾಸ, ರೂಪಕ, ಸ್ವಭಾವೋಕ್ತಿ, ವಕ್ರೋಕ್ತಿ ಈ ಮೊದಲಾದ ಅಲಂಕಾರಗಳ ಸೊಗಸು ನಿತ್ಯ ನೂತನ. ಅದರಲ್ಲೂ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮರಂಥವರ ಮಾತುಗಳಲ್ಲಿಯ ಮಾತು ನೇರವಾಗಿ ನಮ್ಮ ಹೃದಯವನ್ನೇ ಸೇರುತ್ತದೆ. ಅದಕ್ಕೆ ಮುಖ್ಯ ಕಾರಣವೆಂದರೆ ಅವರು ಕೊಡುವ ಸಾದೃಶ್ಯಗಳಲ್ಲಿಯ ಔಚಿತ್ಯ.

"ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ..."
" ಹುತ್ತುವ ಬಡಿದೊಡೆ ಹಾವು ಸಾಯಬಲ್ಲುದೆ? "
" ಬಂಜೆ ಬೇನೆಯರಿಯಳು, ಬಲತಾಯಿ ಮುದ್ದು ಬಲ್ಲಳೆ "
" ಮಾತೆಂಬುದು ಜ್ಯೋತಿರ್ಲಿಂಗ "
" ಸಾಸುವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ "
" ಧರೆಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
ಹರದ ಕುಳ್ಳಿರ್ದ ನಮ್ಮ ಮಹಾದೇವ ಶೆಟ್ಟಿ "
" ದೇವನೊಬ್ಬ ನಾಮ ಹಲವು, ಪರಮ ಪತಿವ್ರತೆಗೆ ಗಂಡನೊಬ್ಬ "
" ಬೆಳೆವ ಭೂಮಿಯಲೊಂದು ಪ್ರಳಯದ ಕಸಹುಟ್ಟಿ
ತಿಳಿಯಲೀಯದು ಎಚ್ಚರಲೀಯದು.
ಎನ್ನವಗುಣವೆಂಬ ಕಸವ ಕಿತ್ತು ಸಲಹಯ್ಯಾ ಲಿಂಗ ತಂದೆ ॥ "
ಸುಳಿದೆಗೆದು ಬೆಳೆವೆನು, ಕೂಡಲಸಂಗಮದೇವಾ
" ಅಂದಣವನೇರಿದ ಸೊಣಗನಂತೆ ಕಂಡೊಡೆ ಬಿಡದು
ಮುನ್ನಿನ ಸ್ವಭಾವವನು ॥ " ...

" ಜೆಲ್ಲವ ತಿಂದ ಕೋಡಗನಂತೆ ಸಿಹಿಯುನರಸದಿರಾ ಮನವೆ
ಕಬ್ಬು ತಿಂದ ನರಿಯಂತೆ ಹಿಂದಕ್ಕೆಳಸದಿರಾ ಮನವೆ
ಗಗನವಡರಿದ ಕಾಗೆಯಂತೆ ದೆಸೆದೆಸೆಗೆ ಹಂಬಲಿಸದಿರಾ ಮನವೆ "

" ಸಂಸಾರವೆಂಬುದು ಗಾಳಿಯ ಸೊಡರು
ಸಿರಿಯೆಂಬುದು ಸಂತೆಯ ಮಂದಿ
ಇವನೆಚ್ಚಿ ನೀ ಕೆಡಬೇಡ "

" ನಾನಾ ವರ್ಣದ ಸಂಸಾರ ಹಾವು ಹಾವಾಡಿಗನ ಸ್ನೇಹದಂತೆ."

" ಹರಿದಗೋಣಿಲಿಯುಲೊಬ್ಬ ಕಳವೆಯ ತುಂಬಿದ.
ಇರುಳೆಲ್ಲಾ ನಡೆದ ಸುಂಕಕ್ಕಂಜಿ ಕಳವೆಯೆಲ್ಲಾ ಹೋಗಿ ಬರಿಗೋಣಿ ಉಳಿಯಿತ್ತು
ಅಳಿ ಮನದವನ ಭಕ್ತಿ ಇಂತಾಯಿತ್ತು ರಾಮನಾಥಾ "

ಇಂಥ ಮಾತುಗಳಲ್ಲಿಯ ಚುರುಕುತನವನ್ನು, ಸಾಹಿತ್ಯ ಶಕ್ತಿಯನ್ನು, ಧ್ವನಿರಮ್ಯತೆಯನ್ನು ಕುರಿತು ವಿಪುಲವಾಗಿ ಬಳೆಯಬಹುದು. ಅದು ಕಾರಣವೇ ವಚನ ಸಾಹಿತ್ಯವು ಕನ್ನಡಿಗರು ಹೆಮ್ಮೆಯಿಂದ ಹೇಳಿಕೊಳ್ಳಬಹುದಾದ ಒಂದು ಅಕ್ಷಯ ನಿಧಿಯಾಗಿ ಇಂದಿಗೂ ಉಳಿದುಕೊಂಡು ಬಂದಿದೆ.

ವಚನಗಳಲ್ಲಿ ಹೀಗೆ ವಿಪುಲವಾಗಿ ಕಂಡುಬರುವ ಈ ಅಪೂರ್ವ ಸಾಹಿತ್ಯದ ಸೊಗಸು ದಾಸರ ಕೀರ್ತನೆಗಳಲ್ಲಿ ಇಷ್ಟು ಪ್ರಮಾಣದಲ್ಲಿ ಕಂಡುಬರುವದಿಲ್ಲ ಎನ್ನಬಹುದು. ಹಾಗೆಂದ ಮಾತ್ರಕ್ಕೆ ಕೀರ್ತನೆಗಳಲ್ಲಿ ಇಂಥ ಸಾಹಿತ್ಯಶಕ್ತಿಯು ಇಲ್ಲವೆಂತಲ್ಲ; ಶರಣರಂತೆ ದಾಸರ ಸಾದೃಶ್ಯಗಳೂ ಧ್ವನಿರಮ್ಯತೆಯಿಂದ ಕೂಡಿವೆ.

" ಜೇನಿನೊಳಗೆ ಬಿದ್ದ ನೊಣದಂತೆ ಸತಿಸುತ ಜನ ಪಾಶಬದ್ಧನಾದೆ
ಮೀನು ಮಾಂಸದಾಸೆಗೋಗಿ ಸಿಕ್ಕಿದಂತೆ ಮೋಸಹೋದೆನೋ ಬರಿದೆ "

" ಇಂದ್ರಿಯಂಗಳೆಂಬ ಕಳ್ಳರೈವರು
ಬಂಧಿಸಿ ತಮ್ಮ ವಿಷಯಕ್ಕೊಯ್ದೆನ್ನ
ಕಂದಿಸಿ ಜ್ಞಾನವೆಂಬ ದೃಷ್ಟಿಯ
ಎಂದೆಂದಿನ ಧರ್ಮ ಧನವನೊಯ್ದರು "

" ಸಲೆ ಉದರ ಪೋಷಣೆಗೆ ತಲೆ ಹುಳುಕನಾಯಂತೆ
ಹಲವು ಮನೆ ಅಲೆಯುತಿಹೆನೊ "

" ಹರಿ ಕರುಣವೆಂಬ ಕೀಲಿಯ ಕೈಯಿಂಪ ಇಂದು
ಎನ್ನ ಅಂತರಂಗದ ಕದವು ತೆರೆಯಿತು "

ಇಂಥ ಹಲವಾರು ಮಾತುಗಳಲ್ಲಿ ದಾಸರು ಸಾಹಿತ್ಯ ರಸಾಮೃತವನ್ನು ಉಣಬಡಿಸಿರುವರು. ನವವಿಧ ಭಕ್ತಿಯ ಉಪಾಸಕರಾದ ದಾಸರ ಪದಗಳಲ್ಲಿ ನವರಸಗಳಿಗೂ ಸ್ಥಾನವಿದೆ. ವಾತ್ಸಲ್ಯ, ಶೃಂಗಾರ ಮೊದಲಾದ ಭಾವಗಳನ್ನು ಅವರು ಮನಂಬುಗುವಂತೆ

ಚಿತ್ರಿಸಿರುವರು. ಆದರೂ ದಾಸರ ಮಾತು ಹಲವು ಸಲ ತೀರ ಸಾಮಾನ್ಯವಾಗಿ ಸಾಹಿತ್ಯ ಗುಣದಿಂದ ವಂಚಿತವಾಗುತ್ತದೆ. ಅವರು ಹೆಚ್ಚಾಗಿ ಸಂಗೀತಕ್ಕೆ ಪ್ರಾಧಾನ್ಯ-ವನ್ನಿತ್ತರು. ದಾಸರ ಕೀರ್ತನೆಗಳೆಲ್ಲವೂ ಪ್ರಾಸಬದ್ಧವಾಗಿ ಚಿತವಾಗಿವೆ. ಛಂದಸ್ಸಿನ ಕಟ್ಟಿನಲ್ಲೇ ಪದಗಳನ್ನು ರಚಿಸಹೊರಟ ಅವರಿಗೆ ಒಮ್ಮೊಮ್ಮೆ ಭಾವಕ್ಕಿಂತ ಪದಗಳು ಮುಖ್ಯವಾಗಿ ಕಂಡಿರಬಹುದು.

" ತಾಳಬೇಕು ತಕ್ಕ ಮೇಳಬೇಕು
ಗಳ ಶುದ್ಧಿ ಇರಬೇಕು, ತಿಳಿದು ಹೇಳಬೇಕು
.......................................
ಯತಿ ಪ್ರಾಸ ಇರಬೇಕು ಗತಿಗೆ ನಿಲ್ಲಿಸಬೇಕು "

ದಾಸರ ಈ ಒಂದು ಪದದಲ್ಲಿ ಅವರ ಸಾಹಿತ್ಯರಚನೆಯ ದಿಕ್ಸೂಚಿಯಿದೆ. ತಾಳ, ಯತಿ, ಪ್ರಾಸಗಳನ್ನು ಅವರು ಗಮನಿಸಿದರು. ಅದಕ್ಕೂ ಹೆಚ್ಚಾಗಿ ಹಾಡುಗಳನ್ನು ರಚಿಸಿ ಹಾಡುವ ದಾಸನಿಗೆ ಒಳ್ಳೆಯ ಶಾರೀರವಿರಬೇಕು ಎಂದು ಅವರು ನಂಬಿದ್ದರು. ಇವೆಲ್ಲ ಇದ್ದೂ ಜ್ಞಾನವಿಲ್ಲದವ ದಾಸನಾಗಲಾರ. ಆತ ಕೀರ್ತನೆಗಳನ್ನು "ತಿಳಿದು ಹೇಳಬೇಕು" ಹೀಗೆ ಭಕ್ತಿ. ಜ್ಞಾನ, ಕವಿತ್ವಶಕ್ತಿ, ಸಂಗೀತ ಇವುಗಳ ಜೋಡಣೆಯಿದ್ದವರೇ ದಾಸರಾಗಿ ಕೀರ್ತನೆಗಳನ್ನು ರಚಿಸಿದರು, ಹಾಡಿದರು, ಜನರಲ್ಲೂ ಹಾಡಿನ ಹುಚ್ಚು ಹುಟ್ಟಿಸಿದರು.

ದಾಸರ ಮುಖ್ಯ ಪ್ರೇರಣೆಯೂ ಭಕ್ತಿಯೇ ಆಗಿದೆ. ಆದರೆ ಅದು ಕೇವಲ ಭಾವಾವೇಶವಾಗಿರಲಿಲ್ಲ. ಅದಕ್ಕೆ ಜ್ಞಾನ ಮತ್ತು ಜೀವನವಿವೇಕಗಳ ಜೋಡಣೆ ಯಿದೆ, ಹಾಗಿರುವುದರಿಂದ ದಾಸ ಸಾಹಿತ್ಯವು ಕೇವಲ ಮಾಧ್ವಮತದ ಸೊತ್ತಾಗಿ ಉಳಿಯಲಿಲ್ಲ. ಸಂಸ್ಕೃತವರಿಯದ ಜನಸಾಮಾನ್ಯರಿಗೆ ಅದು ಭಕ್ತಿ-ಜ್ಞಾನ-ಕರ್ಮ ಮಾರ್ಗಗಳ ನಿವೇದಕವಾಯಿತು: ವೈದಿಕ ಸಂಸ್ಕೃತಿಯ ವಾಹಕವಾಯಿತು.

ದಾಸರು ಕೀರ್ತನೆಗಳನ್ನೆಲ್ಲದೆ ಸುಳಾದಿ, ಉಗಾಭೋಗ, ವೃತ್ತನಾಮ, ಷಟ್ಪದಿ ಸಾಂಗತ್ಯ, ಚೌಪದಿ, ಮುಂತಾದ ಹಲವಾರು ರೀತಿಗಳಲ್ಲಿ ಸಾಹಿತ್ಯ ಸೃಜನೆ ಮಾಡಿ, ತಾಳ ತಂಬೂರಿ ಸಹಿತವಾಗಿ ಊರೂರಿಗೆ. ಮನೆ ಮನೆಗೆ ಅಲೆದು, ಹಾಡಿ ಕುಣಿದು ಆರ್ತರಾದವರಿಗೆಲ್ಲ ಭಕ್ತಿರಸಪಾನವನ್ನು ಮಾಡಿಸಿದರು. ಅವರ ಕೀರ್ತನೆಗಳು ಕನ್ನಡಿಗರ ಕಿವಿಗಳನ್ನು ಮಾತ್ರ ತಣಿಸದೆ, ಅವರ ನಾಲಗೆಗಳ ಮೇಲೂ ನಲಿದಾಡಿದುವು. ಸಂಗೀತ ಶಾಸ್ತ್ರದ ಗಂಧವೂ ಕೂಡ ಇಲ್ಲದವರು, ಕೀರ್ತನೆಗಳನ್ನು ಕೇಳಿ ಕೇಳಿ, ತಾವೂ ಅನುಕರಿಸಿ ಹಾಡತೊಡಗಿದರು. ಅದರಿಂದ ಆ ಹಾಡಿನ ಸಂಪ್ರದಾಯ ಇಂದಿಗೂ ಉಳಿದುಕೊಂಡು ಬಂದಿದೆ. ದಾಸರು ಸಂಗೀತ ಶಾಸ್ತ್ರಕ್ಕೆ ಅಪಾರ ಕಾಣಿಕೆ ಸಲ್ಲಿಸಿದರೆಂದೂ ಸುಪ್ರಸಿದ್ಧ ವಾಗ್ಗೇಯಕಾರರಾದ ತ್ಯಾಗರಾಜರಿಗೆ ಸ್ಫೂರ್ತಿನೀಡಿದವರು ಪುರಂದರ ದಾಸರೇ ಎಂದೂ ಹೇಳುತ್ತೇವೆ, ಸಂಗೀತ ವಿದ್ವಾಂಸರ ಮಾತು ಇರಲಿ;

ಸಾಮಾನ್ಯ ಕನ್ನಡಿಗರಲ್ಲೂ ಸಂಗೀತದ ಅಭಿರುಚಿಯನ್ನು ಹುಟ್ಟಿಸಿದವರೇ ದಾಸರೆಂದರೆ ಅತಿಶಯೋಕ್ತಿಯಾಗಲಾರದು.

ಒಟ್ಟಿನಲ್ಲಿ ಶರಣರು ಮತ್ತು ದಾಸರು ರಸ ಸಾಹಿತ್ಯವನ್ನು ರಚಿಸಬೇಕೆಂದು ಕುರಿತು ಬರೆಯದಿದ್ದರೂ, ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ರಸ ಸಾಹಿತ್ಯವನ್ನು ಒದಗಿಸಿದರು, ತಮ್ಮ ತಮ್ಮ ಮತ ಧರ್ಮಗಳ ಕಟ್ಟು ಪಾಡುಗಳನ್ನು ಮೀರಿ ಅವರ ಸಾಹಿತ್ಯ ಉನ್ನತವಾದ ಮಾನವ ಧರ್ಮವನ್ನು ಪ್ರತಿಬಿಂಬಿಸುವ ಔನ್ನತ್ಯವನ್ನು ಪಡೆಯಿತು. ಆದ್ದರಿಂದ ಅವರನ್ನು ರಸಋಷಿಗಳೆಂದ ಕರೆಯುವುದು ಉಚಿತವೇ ಸರಿ. ಅವರು ದ್ರಷ್ಟಾರರೂ ಅಹುದು, ಕವಿಗಳೂ ಅಹುದು, ಅವರು ತಾವು ಕಂಡ ದರ್ಶನವನ್ನು ಅಂತರಂಗದ ಸ್ಫೂರ್ತಿಯಿಂದ ಎದೆ ತುಂಬಿ ಹಾಡಿ ನಾಡಿನ ಜನತೆಯನ್ನು ಉದ್ಧರಿಸಿದರು.

ಆದರೆ ಎಲ್ಲ ಶರಣ ಸಾಹಿತ್ಯವೂ ದಾಸ ಸಾಹಿತ್ಯವೂ ಸಾಹಿತ್ಯ ದೃಷ್ಟಿಯಿಂದ ಅಷ್ಟೇ ಉನ್ನತಿಕೆಯನ್ನು ಪಡೆದಿಲ್ಲ ಎಂಬುದನ್ನೂ ಒಪ್ಪಿಕೊಂಡರೂ, ಅವರು ಕನ್ನಡ ನಾಡಿನ ಸಾಹಿತ್ಯಕ್ಕೂ ಸಂಸ್ಕೃತಿಗೂ ಸಲ್ಲಿಸಿದ ಸೇವೆ ಅಪಾರವೆಂದು ಹೇಳಲೇಬೇಕಾಗುತ್ತದೆ. ವಚನಗಳಿಂದಲೂ ದಾಸ ಪದಗಳಿಂದಲೂ ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಶ್ರೀಮಂತಿಕೆ ಖಚಿತವಾಗಿಯೂ ಹೆಚ್ಚಿತು. □

# ಬಸವಣ್ಣನವರನ್ನು ಕುರಿತ ಒಂದು ಶೋಕಗೀತೆ-

ಕೆ. ಬಿ. ಪ್ರಭುಪ್ರಸಾದ್

ಕನ್ನಡನಾಡಿನ ಭಾಗ್ಯ ವಿಶೇಷವೆಂದು ಪರಿಗಣಿತವಾದ ವಚನ ಸಾಹಿತ್ಯಸೃಷ್ಟಿಯಾದುದು ಈಗ್ಗೆ ಎಂಟನೂರು ವರುಷಗಳ ಹಿಂದೆ. ಕನ್ನಡ ಭಾಷೆಗೂ ಸಾಹಿತ್ಯಕ್ಕೂ ಹೊಸ ಶಕ್ತಿಯನ್ನೂ ಹೊಸ ರೂಪವನ್ನೂ ಕೊಟ್ಟು ಎಲ್ಲ ದೃಷ್ಟಿಯಲ್ಲೂ ಕನ್ನಡದ ನವೋದಯವನ್ನು ಆರಂಭಿಸಿತು. ಉಜ್ವಲ ಪ್ರಭೆಯಿಂದ ಪ್ರಕಾಶಿಸಿದ ಆ ರತ್ನರಾಶಿ ಕಾರಣಾಂತರಗಳಿಂದ ವಿಸ್ಮೃತಿಯ ಕಾಲಗರ್ಭದಲ್ಲಿ ಮರೆಯಾಗಿ ಹೋಗಿತ್ತು. ಎಲ್ಲೆಲ್ಲೊ ಅಡಗಿ ಕಾಣದಾಗಿದ್ದ ವಚನಗಳನ್ನೆಲ್ಲ ಸಂಗ್ರಹಿಸಿ, ಪ್ರತಿಮಾಡಿ, ಪ್ರಕಟಿಸುವ ಕಾರ್ಯ ೧೯ನೇ ಶತಮಾನದಲ್ಲಿ ಮೊದಲು ಆರಂಭವಾದುದು ಮತ್ತೆ ಈ ಶತಮಾನದ ಆದಿಯಿಂದ ನಡೆಯುತ್ತಲೇ ಇದೆ. ಬರಿ ಸಂಗ್ರಹವೇ ಅಲ್ಲ, ಅವುಗಳನ್ನೆಲ್ಲ ಕ್ರಮಬದ್ಧವಾಗಿ ಜೋಡಿಸಿ, ವಿಂಗಡಿಸಿ. ಶಾಸ್ತ್ರೀಯವಾದ ಅಧ್ಯಯನಕ್ಕೆ ಸಿದ್ಧಗೊಳಿಸುವ ಸಂಪಾದನಾ ಕಾರ್ಯವೂ ನಡೆದಿದೆ. ಎಷ್ಟೋ ವಚನಗಳನ್ನು ಬೆಳಕಿಗೆ ತಂದಿದ್ದರೂ ಇನ್ನೂ ಸಿಕ್ಕದಿರುವ ವಚನಗಳ ಸಂಖ್ಯೆಉತ್ಪ್ರೇಕ್ಷೆಯೋ ಎನ್ನುವಷ್ಟು ವಿಪುಲವಾಗಿದೆ. ವಚನ ಭಂಡಾರದ ಪಾರ ಇಷ್ಟೇ ಎಂದು ಹೇಳುವುದೂ ಕಷ್ಟ.

ಈಚೆಗೆ ಶ್ರೀ ಸಿ. ಕೆ. ಪರಶುರಾಮಯ್ಯನವರು ತಮಗೆ ದೊರೆತ ಓಲೆಗರಿಗಳ ಕಟ್ಟಿನಲ್ಲಿ ಕಂಡ ೪೫ ವಚನಗಳು ಬಸವಣ್ಣನವರ ಪತ್ನಿ ಶರಣೆ ನೀಲಲೋಚನೆಯವರು ಬರೆದವುಗಳೆಂದು ಗುರುತಿಸಿ, ಸಂಪಾದಿಸಿ, ಪ್ರಕಟಿಸಿ ತುಂಬಾ ಶ್ಲಾಘನೀಯವಾದ ಕಾರ್ಯವನ್ನು ಮಾಡಿದ್ದಾರೆ. ಎರಡು ದೃಷ್ಟಿಯಿಂದ ಈ ವಚನ ಸಂಕಲನ ಮಹತ್ವಾದ್ದಾಗಿದೆ. ಒಂದು; ಶಿವಶರಣೆಯರ ವಚನಗಳೇ ಹೆಚ್ಚಾಗಿ ಸಿಕ್ಕದಿರುವಾಗ ಶರಣೆ ನೀಲಾಂಬಿಕೆಯವರು ರಚಿಸಿದ ವಚನಗಳು ಸಿಕ್ಕಿರುವುದು. ನಿಜಕ್ಕೂ ಒಂದು ಹೊಸ ಬೆಳಕು ಕಂಡ ಹಾಗೆ ವಿಶೇಷವಾದುದು. ಏಕೆಂದರೆ ಆತ್ಮತತ್ತ್ವ ಜಿಜ್ಞಾಸೆಯಲ್ಲಿ ಆಧ್ಯಾತ್ಮಿಕ ಸಾಧನೆಯಲ್ಲಿ ಸ್ತ್ರೀ ಪುರುಷ ಭೇದವನ್ನು ತೊಡೆದು ಶರಣರು ವಿಚಾರಯುಗದ ಹೊಸ ದಾರಿಯನ್ನು ಹಾಕಿಕೊಟ್ಟುದರಿಂದ ಹೆಣ್ಣು ಮಕ್ಕಳಲ್ಲೂ ನಿಲಾಂಬಿಕೆಯವರಂತಹ ಮಹಾಚೇತನಗಳು ಹೇಗೆ ವಿಕಾಸಗೊಂಡವು ಎಂಬುದು ಈ ವಚನಗಳಲ್ಲಿ ವ್ಯಕ್ತವಾಗುತ್ತದೆ. ಎರಡು; ಹಳೆ

ಗನ್ನಡ ಕಾವ್ಯದಲ್ಲಿ ಎಲ್ಲೂ ಕಾಣಿಸದ ಶೋಕ ಗೀತೆ (ಭಾವಗೀತೆಯ ಒಂದು ಮುಖ್ಯ ಬಗೆಯಾದ ಎಲಿಜಿ) ಎಂದು ಕರೆಯಬಹುದಾದ ರೀತಿಯಲ್ಲಿ ಈ ವಚನ ಗುಚ್ಛ ಇರುವದು,

'ನೋಡು ನೋಡು ನೋಡು ನೋಡು ನೋಡು ಲಿಂಗವೇ!
ನೋಡು ಬಸವಯ್ಯನ ಮಾಡಿದಾಟವ !''

ಎಂಬ ಒಂದೇ ಹಾಡಿನಿಂದ ಪ್ರಾಜ್ಞರ ಗಮನವನ್ನೂ ಗೌರವವನ್ನೂ ಸಂಪಾದಿಸಿ ಅವಿಸ್ಮರಣೀಯಳಾದ ನೀಲಾಂಬಿಕೆಯ ಈ ವಚನಮಾಲೆ ಪ್ರಾಚೀನ ಕನ್ನಡ ಸಾಹಿತ್ಯದಲ್ಲೇ ಅತ್ಯಂತ ವಿಶಿಷ್ಟ ಬಗೆಯದಾಗಿದೆ. ಇಂಗ್ಲಿಷಿನ ಎಲಿಜಿ (Elegy) (ಶೋಕ ಗೀತೆ) ಯ ಮಾದರಿಗೂ ಇದಕ್ಕೂ ಇರುವ ಸಾದೃಶ್ಯ ವಿಸ್ಮಯಕರವಾಗಿದೆ.

ಹಳಗನ್ನಡ ಸಾಹಿತ್ಯದಲ್ಲಿ ಇಂತಹ ಇನ್ನೊಂದು ಕೃತಿ ಇದುವರೆಗೂ ದೊರೆತಿಲ್ಲ. ಇಂದು ನಾವು ಭಾವಗೀತೆ ಎಂದು ಕರೆಯುವ ವ್ಯಕ್ತಿನಿಷ್ಠವಾದ ಬಿಡಿ ಕವನಗಳ ಪ್ರಕಾರ ಕನ್ನಡದ ಪ್ರಾಚಿನ ಸಾಹಿತ್ಯದಲ್ಲಿ ಎಲ್ಲೂ ಇಲ್ಲ. ಮಹಾಕಾವ್ಯಗಳಲ್ಲಿ. ಖಂಡಕಾವ್ಯಗಳಲ್ಲಿ ಭಾವಗೀತೆಯ ಅಂಶಗಳು ಅಲ್ಲಲ್ಲಿ ಕಾಣಬಹುದು. ಭಾವಗೀತಾತ್ಮಕವಾದ ಭಾಗಗಳಿರಬಹುದು. ಆಯಾ ಸಂದರ್ಭಗಳಿಂದ ಬೇರ್ಪಡಿಸಿ ನೋಡಿದಾಗ ಭಾವಗೀತೆಗಳಾಗಬಲ್ಲಂತಹ ಪದ್ಯಗಳು ಸಿಕ್ಕಬಹುದು. ಭಾವಗೀತೆಗೆ ಅತಿ ಹತ್ತಿರದ ರೂಪ ಎಂದರೆ ವಚನಗಳು ಮತ್ತು ದೇವರನಾಮುಗಳು. ಇವುಗಳಲ್ಲೂ "ಶೋಕ ಗೀತೆ" ಮಾದರಿಯ ರಚನೆಗಳು ಎಲ್ಲೂ ಇಲ್ಲ. ಮಹಾಕಾವ್ಯದ ಚೌಕಟ್ಟಿನಲ್ಲಿ ನವರಸಗಳೊಂದಿಗೆ ಶೋಕ ರಸವೂ ಒಂದು ಅವಿಭಾಜ್ಯ ಅಂಗವಾಗಿ ಬರುತ್ತದೆ. ವಿಯೋಗದ ವಿಲಾಪ. ದುಃಖದ ಪ್ರಲಾಪ ಸಂಕ್ಷಿಪ್ತವಾಗಿಯೋ, ದೀರ್ಘವಾಗಿಯೋ ಕಥನದ ಒಂದೊಂದು ಸನ್ನಿವೇಶದಲ್ಲಿ ಬರಬಹುದು ಆದರೆ ಅದೆಲ್ಲ ವಸ್ತುನಿಷ್ಠವಾಗಿ, ಕತೆಯಲ್ಲಿ ಬರುವ ಪಾತ್ರಗಳು ಅನುಭವಿಸುವ ದುಃಖವಾಗಿ ಅಭಿವ್ಯಕ್ತವಾಗಿ ಶೋಕರಸವನ್ನು ಮಿಡಿಯುತ್ತದೆ. ಇಂತಹದರಲ್ಲಿ ನೀಲಾಂಬಿಕೆಯವರ ಈ ವಚನ ಮಾಲೆ ಅವರ ಪ್ರೀತಿಯ ಪತಿಯೂ ಅರಿವಿನ ಗುರುವೂ ಆದ ಬಸವಣ್ಣನವರ ವಿಯೋಗದಿಂದ ಹೊಮ್ಮಿದ ಬಾಷ್ಪಾಂಜಲಿಯಾಗಿ 'ಶೋಕಗೀತೆ' ಯ ಎಲ್ಲ ಲಕ್ಷಣಗಳನ್ನೂ ಒಳಗೊಂಡ ಒಂದು ನೀಳ್ಗವನವಾಗಿ ಬಂದಿರುವುದು ಸೋಜಿಗವನ್ನುಂಟು ಮಾಡುತ್ತದೆ.

ಈ ವಚನಗುಚ್ಛವನ್ನು ಪಾಶ್ಚಾತ್ಯ ಮಾದರಿಯ 'ಎಲಿಜಿ' ಯಂತಿದೆ ಎಂದು ಹೇಳಿದ ಮಾತ್ರಕ್ಕೆ ಇದಕ್ಕೊಂದು ಹೆಚ್ಚಳ ಬರುವುದಿಲ್ಲ. ಹಾಗೆ ಕರೆಯದಿದ್ದ ಮಾತ್ರಕ್ಕೆ ಇದರ ಬೆಲೆ ಕಡಿಮೆಯಾಗುವುದೂ ಇಲ್ಲ. ಅಲ್ಲದೆ ನಮ್ಮ ಯಾವುದೇ ಸಾಹಿತ್ಯ ಕೃತಿಯನ್ನು ಪಾಶ್ಚಾತ್ಯ ಕಾವ್ಯ ಪ್ರಕಾರಗಳ ಲಕ್ಷಣಗಳ ಚೌಕಟ್ಟಿನಲ್ಲಿ ಹಾಕಿ ನೋಡಿ ವಿಮರ್ಶಿಸುವ ಮೋಹದಿಂದಾಗಲೀ, ಪಾಶ್ಚಾತ್ಯ ಕಾವ್ಯ ಮಾದರಿಯನ್ನು ನೋಡಿದಾಗ ಇದು. ಹೊಸದೇನಲ್ಲ ನಮ್ಮ ಹಳೆಯ ಕಾವ್ಯದಲ್ಲಿ ಇಂತಹದನ್ನಾಗಲೆ ನಮ್ಮವರು ರಚಿಸಿದ್ದರು ಎಂದು ವಾದಿಸುವ ಧೋರಣೆಯಿಂದಾಗಲೀ ಈ ಅವಲೋಕನವನ್ನು

ಬರೆಯುತ್ತಿಲ್ಲ. ನೀಲಾಂಬಿಕೆಯವರ ಈ ವಚನ ಮಾಲೆಯಲ್ಲಿ "ಎಲಿಜಿ"ಯ ಮುಖ್ಯ ಲಕ್ಷಣಗಳು ಕಂಡುಬರುವುದೇನೋ ಕುತೂಹಲಕರವಾಗಿದೆ. ಈ ಕೃತಿಯ ವಿಮರ್ಶಾತ್ಮಕ ಅಧ್ಯಯನದಲ್ಲಿ ಈ ಅಂಶವನ್ನೂ ಗಮನಿಸಬೇಕಾಗುತ್ತದೆ. ಶೋಕಭಾವ ವಿಶ್ವಸಾಮಾನ್ಯವಾಗಿರುವಂತೆ ಶೋಕಗೀತೆಯ ಲಕ್ಷಣಗಳೂ ಎಲ್ಲಾ ಭಾಷಾ ಸಾಹಿತ್ಯಗಳಲ್ಲೂ ಒಂದೇ ಆಗಿರುವುದು ಅಸಹಜವಲ್ಲ. ಮಾನವ ಹೃದಯದ ಮಿಡಿತ ಕಾಲ ದೇಶಗಳಿಗೆ ಸೀಮಿತವಾದುದಲ್ಲ. ಭಾಷೆ, ಕಾಲ.ದೇಶ ಬೇರೆ ಬೇರೆ ಆದರೂ ಉನ್ನತವಾದೊಂದು ಆತ್ಮ ಶಿಖರದಿಂದ ಹರಿದುಬರುವ ಮಾನವೀಯತೆಯ ಪವಿತ್ರವಾದ ಮಂಜುಳ ನಿರ್ಝರಿಣಿ–ಕಾವ್ಯ-ಮಾತ್ರ ಒಂದೆ.

" ಎಲಿಜಿ " ಎಂದರೆ ಶೋಕಗೀತೆ ಎಂದೇ ಈಗಿನ ಬಳಕೆಯ ಅರ್ಥ. "ತಮಗೆ ಅತ್ಯಂತ ಪ್ರಿಯನಾದ ವ್ಯಕ್ತಿ ತೀರಿಕೊಂಡಾಗ ಅವನನ್ನು ಕುರಿತು ಬರೆಯುವ ಕವನವನ್ನು ಎಲಿಜಿ ಅಥವಾ ಶೋಕ ಗೀತೆ ಎಂದು ನಾವು ಕರೆಯಬಹುದು" ಇದು ವೈಯಕ್ತಿಕ ಕವಿತೆಯ ಅತ್ಯಂತ ಮುಖ್ಯ ವಿಭಾಗಗಳಲ್ಲೊಂದು. "ಸಾಹಿತ್ಯದ ವಿಕಾಸದಲ್ಲಿ ಶೋಕ ಗೀತೆ ಬಹು ವಿಸ್ತಾರವನ್ನು ಪಡೆದು ಅನೇಕ ದಿಕ್ಕುಗಳಲ್ಲಿ ಹಿಗ್ಗಿದೆ. ಕೆಲವು ವೇಳೆ ಅದು ಸಾಮೂಹಿಕ ಭಾವನೆಯ ಮಾಧ್ಯಮವಾಗಿದೆ."

ಎಲಿಜಿ ಎಂಬ ಪದ ಪ್ರಾಚೀನ ಗ್ರೀಕ್ ಸಾಹಿತ್ಯದಲ್ಲಿ ಮೊದಲು ಬಳಕೆಯಾಯಿತು. ಅದೊಂದು ಛಂದಸ್ಸಿನ ಹೆಸರಾಗಿತ್ತು. ವಸ್ತು ಏನೇ ಆಗಿದ್ದರೂ ಆ ಛಂದೋ ರೂಪದಲ್ಲಿ ಬರೆದ ಕವನವೆಲ್ಲ ಎಲಿಜಿ ಎನಿಸಿಕೊಳ್ಳುತ್ತಿತ್ತು. ಸಾಮಾನ್ಯವಾಗಿ ಈ ಮಾದರಿಯ ಕವನಗಳ ವಸ್ತು ಯುದ್ಧ ಸಂಗತಿಯೊ, ಪ್ರಣಯವೋ, ದೇಶಾಭಿಮಾನವೊ, ರಾಜಕಾರಣವೊ, ವಿಯೋಗದ ದುಃಖವೋ ಆಗಿರುತ್ತಿತ್ತು. ಕ್ರಿ. ಪೂ. ೭ನೇ ಶತಕದಲ್ಲಿ ಆರ್ಗಿವ್, ಎಕೆಂಬ್ರೋಟಿಸ್ ಕವಿಗಳಿಂದ ರಚಿತವಾದ ಎಲಿಜಿ ಕವನಗಳು ಶೋಕಕ್ಕೆ ಸಂಬಂಧಿಸಿದ್ದವೆಂದು ಅನಂತರದ ವಿಮರ್ಶಕರು ಗುರುತಿಸಿದ್ದಾರೆ. ನಮಗೆ ದೊರೆಯುವ ಅತ್ಯಂತ ಪ್ರಾಚೀನ ಎಲಿಜಿ ಎಂದರೆ ಕ್ರಿ. ಪೂ. ೫ ನೇ ದಶಕದಲ್ಲಿ ರಚಿತವಾದ ಯೂರಿಪೀಡಿಸ್‌ನ ಆಂಡ್ರೋಮ್ಯಾಖೆ. ಅಲೆಕ್ಸಾಂಡ್ರಿಯನ್ ಕಾಲದಲ್ಲಿ ಎಲಿಜಿಗೆ ಕಥನರೂಪವನ್ನು ಕೊಡವುದೇ ಜನಪ್ರಿಯವಾದ ಕಾವ್ಯ ಪರಂಪರೆಯಾಯಿತು. ೩ನೇ ಶತಮಾನದಲ್ಲಿ ಸಿಸಿಲಿಯ ಥಿಯೋಕ್ರಿಟಸ್ ಎಂಬ ಕವಿ ಕುರಿಗಾವಲ (ಗ್ರಾಮ ಜೀವನ ಸಂಬಂಧವಾದ) ಸಂಕೇತ ತಂತ್ರವನ್ನು ಕಾವ್ಯದಲ್ಲಿ ಅಳವಡಿಸಿ ಒಂದು ರಮ್ಯವಾದ ಗೀತ ಪ್ರಕಾರವನ್ನು ಜನಪ್ರಿಯಗೊಳಿಸಿದ ಮೇಲೆ. ಎಲಿಜಿಯಲ್ಲೂ ಈ ತಂತ್ರವನ್ನೂ ಬಳಸುವುದು ರೂಢಿಯಾಯಿತು. ಇಂತಹದಕ್ಕೆ Pastoral Elegy ಎಂಬ ಹೆಸರು ಬಂದಿತು. ಕವಿ, ಗೆಳೆಯುನ ಮರಣಕ್ಕಾಗಿ ದುಃಖಿಸುವ ಒಬ್ಬ ಕುರಿಗಾಹಿಯ ಪಾತ್ರ ವಹಿಸುವನು. ನಿಸರ್ಗದ ಚೆಲುವಿನ ಮಡಿಲಲ್ಲಿ ಕಳೆಯುವ ಕುರುಬರ ಜೀವನದಲ್ಲಿ ನಡೆಯುವ ಸಂಗತಿಗಳ ಸಂಕೇತದಲ್ಲೇ ಕವಿ ತನ್ನ ಮೃತ ಗೆಳೆಯನ ಗುಣಗಾನವನ್ನೂ, ಅವನ ಜೀವನದ ಸವಿನೆನಪುಗಳನ್ನೂ ವ್ಯಕ್ತಗೊಳಿಸುತ್ತಾನೆ.

ಲ್ಯಾಟಿನ್ ಸಾಹಿತ್ಯದ ಬೆಳವಣಿಗೆಯ ಕಾಲದಲ್ಲಿ ಹೊರೇಸ್ ಮತ್ತು ಒವಿಡ್ ಕವಿಗಳು ಎಲಿಜಿ ಸಂಪೂರ್ಣವಾಗಿ ಶೋಕಕ್ಕೆ ಮೀಸಲಾಗಿರುವಂತೆ ಮಾಡಿದರೂ ಕ್ರಿಶ. ಏಳರಿಂದ ಒಂಬತ್ತನೇ ಶತಕದವರೆಗೂ ಗ್ರೀಕ್‌ಪರಂಪರೆಯನ್ನು ಅನುಸರಿಸಿ ಲ್ಯಾಟಿನ್‌ಕಾವ್ಯದಲ್ಲೂ ವಿವಿಧ ವಸ್ತುಗಳನ್ನು ಕುರಿತ ಎಲಿಜಿ ಕವನಗಳನ್ನು ರಚಿಸುವುದೇ ರೂಢಿಯಾಗಿತ್ತು. ಟೈಬುಲಸ್‌ನ ಪ್ರೇಮಗೀತೆಗಳಲ್ಲಿ ಎಲಿಜಿ ತನ್ನ ವಿಕಾಸದ ಶಿಖರವನ್ನುಮುಟ್ಟಿತು.

೧೬ನೇ ಶತಕದಿಂದೀಚೆಗೆ ಇಂಗ್ಲಿಷ್ ಸಾಹಿತ್ಯವನ್ನು ಪ್ರವೇಶಿಸಿದ ಎಲಿಜಿ ಸ್ಪೆನ್ಸರ್. ಮಿಲ್ಟನ್ ಮುಂತಾದ ಪ್ರತಿಭಾನ್ವಿತ ಕವಿಗಳಿಂದ ಒಂದು ಹೊಸ ಪರಂಪರೆಯಾಗಿ ರೂಪುಗೊಂಡಿತು. ಸ್ಪೆನ್ಸರ್‌ನ ಆಸ್ಟ್ರೋಫೆಲ್, ಮಿಲ್ಟನ್‌ನ ಲಿಸಿಡಾಸ್, ಷೆಲ್ಲಿಯ ಅಡೋನೇ, ಥಾಮಸ್‌ಗ್ರೇ ಕವಿಯ ಸುಪ್ರಸಿದ್ಧ ಎಲಿಜಿ, ಮ್ಯಾಥ್ಯೂ ಆರ್ನಾಲ್ಡ್‌ನ, ರಗ್ಬಿಚಾಪೆಲ್, ಹಾಗೂ ಥಿರ್ಸೀಸ್, ಟೆನಿಸನ್‌ನ ಇನ್ ಮೆಮೋರಿಯಂ ಎ. ಎಚ್. ಇಂಗ್ಲಿಷ್ ಕಾವ್ಯದಲ್ಲೆಲ್ಲ ಶ್ರೇಷ್ಠವಾದ ಶೋಕಗೀತೆಗಳೆಂದು ಖ್ಯಾತವಾಗಿವೆ. ಇವುಗಳ-ಲ್ಲೆಲ್ಲ ಮಿಲ್ಟನ್‌ನ ಲಿಸಿಡಾಸ್ ಮೊಟ್ಟಮೊದಲ ಬಾರಿಗೆ ತನ್ನ ವಿಶಿಷ್ಟವಾದ ಸೊಬಗಿನಿಂದ ಹಲವರ ಗಮನ ಸೆಳೆಯಿತು. ಕವಿಯ ಪ್ರತಿಭೆಯಲ್ಲಿ ಅದು ವೈಯಕ್ತಿಕ ಭಾವದ ಅತ್ಯಂತ ಶ್ರೇಷ್ಠ ಅಭಿವ್ಯಕ್ತಿಯಾದುದಲ್ಲದೆ ಮಿಲ್ಟನ್‌ನ ತಾತ್ವಿಕ ಹಾಗೂ ಚಿಂತನಾತ್ಮಕ ಮನೋಧರ್ಮದಿಂದ ಅದಕ್ಕೊಂದು ಗಾಂಭೀರ್ಯವೂ ಔನ್ನತ್ಯವೂ ದೊರೆತವು. Pastoral Elegy ಮಾದರಿಯ ಈ ಕವಿತೆಗೆ ಒಂದು ನಿರ್ದಿಷ್ಟವಾದ, ಕಲಾತ್ಮಕವಾದ, ರೂಪವನ್ನು ಕೊಟ್ಟು ಮಿಲ್ಟನ್ ಅದನ್ನು ಶೋಕಗೀತೆಯ ಒಂದು ಸೊಗಸಾದ ಮಾದರಿಯನ್ನಾಗಿ ಮಾಡಿದ. ಟೆನಿಸನ್‌ನ ಇನ್‌ಮೆಮೋರಿಯಂ ಅತ್ಯಂತ ಸ್ಪಷ್ಟವಾದ ವೈಯಕ್ತಿಕ ಶೋಕ-ಗೀತೆಯಾಗಿಯೂ. ಅಪಾರ ವ್ಯಾಪ್ತಿ ಮತ್ತು ಅರ್ಥವನ್ನುಳ್ಳ ತಾತ್ವಿಕ ಕವನವಾಗಿಯೂ ಇನ್ನೂ ಹೆಚ್ಚು ಗಮನಾರ್ಹವಾಗಿದೆ.

ಇಂಗ್ಲಿಷ್ ಕಾವ್ಯ ಪರಂಪರೆಯ ಎಲಿಜಿ ಎಂದರೆ ವೈಯಕ್ತಿಕ ವಿಯೋಗದುಃಖದ ನೇರವೂ ಸರಳವೂ ಆದ ಅಭಿವ್ಯಕ್ತಿ. ಭಾವದ ಅಭಿವ್ಯಕ್ತಿಯ ಸಂಪೂರ್ಣ ಪ್ರಾಮಾಣಿಕತೆಯೇ ಆದರ ತಳಹದಿ ಇದೆಲ್ಲ ಸರಿ. ಆದರೂ ಇದೊಂದು ಕವನವಾದುದರಿಂದ ಇದರಲ್ಲಿ ಅಭಿವ್ಯಕ್ತವಾಗುವ ಶೋಕ ಭಾವ ಅಷ್ಟು ಮಟ್ಟಿಗಾದರೂ ಕೃತಕವಾಗಿ ತೋರುವ ಸಂಭವ ಇದೆ.

ಶೋಕಗೀತೆ ಕೇವಲ ದುಃಖವನ್ನು ತೋಡಿಕೊಳ್ಳುವದರಲ್ಲೆ ಪರ್ಯವಸಾನವಾಗದೆ ಮೃತ್ಯುವಿನ ಗಭೀರ ಸನ್ನಿವೇಶ ಕವಿಯ ಅಂತರಂಗವನ್ನೇ ಕಲಕಿ ಪ್ರಚೋದಿಸುವ ಜೀವನದ ಅನೇಕ ಸಮಸ್ಯೆಗಳನ್ನು ಕುರಿತ ಚಿಂತನೆ, ತತ್ವವಿವೇಚನೆಗಳಿಗೂ ಮಾಧ್ಯಮವಾಗುತ್ತದೆ. ಮನಸ್ಸನ್ನು ಕುಗ್ಗಿಸಿ ಹತಾಶೆಗೊಳಿಸುವ ಶೋಕದಲ್ಲೇ ಕವನ ಮುಕ್ತಾಯವಾಗದೆ ಆ ಶೋಕಭಾವಕ್ಕೊಂದು ತಾತ್ವಿಕವಾದ ತಿರುವನ್ನು ಕೊಟ್ಟು " ಮೃತ್ಯುವಿನಾಚೆಗೆ, ಅದನ್ನು ಮೀರಿರುವ ಸ್ಥಿತಿಯ ಕಡೆಗೆ ನಮ್ಮ ಗಮನವನ್ನು ಅದು ಸೆಳೆದು ಅಮರವಾದ ಬದುಕಿನ ಮಧುರ ಸೌರಭದ ಪರಿಚಯ ನಮಗಾಗುವಂತೆ" ಮಾಡುತ್ತದೆ.

"ಶೋಕಗೀತೆ ಯಾವನಾದರೊಬ್ಬ ಮಹಾಪುರುಷನ ಬಗ್ಗೆ ಕವಿಯ ಗೌರವವನ್ನೂ, ಅವನ ಜೀವನ ಮತ್ತು ಶೀಲದ ವಿವೇಚನೆಯನ್ನೂ ಅವುಗಳಿಂದುಂಟಾದ ಸ್ಮೃತಿಗಳು, ಮತ್ತು ಆಲೋಚನೆಗಳನ್ನೂ ಒಳಗೊಂಡ ಜ್ಞಾಪಕಾರ್ಥವಾದ ಅಥವಾ ಸ್ತುತಿ ಪರವಾದ ಕವಿತೆಯಾಗಿ ಬೆಳೆದಿದೆ. ಆಗಾಗ ತಾತ್ವಿಕ ಹಾಗೂ ಚಿಂತನಾತ್ಮಕ ಅಂಶಗಳೂ ಅದರಲ್ಲಿ ಪ್ರಧಾನವಾಗಿರುವುದುಂಟು. ಕವಿ ತನ್ನ ವಿಷಯದ ಚಿಂತನೆಯಲ್ಲಿ ಮಗ್ನನಾಗಿ ಅದು ಎತ್ತುವ ಪ್ರಶ್ನೆಗಳನ್ನು ಕುರಿತೊ, ಬದುಕು ಮತ್ತು ವಿಧಿವಿಲಾಸದ ಗಭೀರ ಸಮಸ್ಯೆಗಳನ್ನು ಕುರಿತೊ ಪರಿಭಾವಿಸುತ್ತಾನೆ," ಎಂದು ಹಡ್ಸನ್ ಆಂಗ್ಲ ವಿಮರ್ಶಕ ಶೋಕಗೀತೆಯ ಪ್ರಧಾನಲಕ್ಷಣಗಳನ್ನು ಹೇಳುತ್ತಾನೆ. ಈ ವಿವರಣೆ ಬಸವಣ್ಣನವರ ವಿಯೋಗವನ್ನು ಕುರಿತ ಸತಿ ನೀಲಾಂಬಿಕೆಯವರ ವಚನ ಗುಚ್ಛಕ್ಕೆ ಬಹು ಚೆನ್ನಾಗಿ ಅನ್ವಯಿಸುತ್ತದೆ.

ಬಸವಣ್ಣನವರು ಸಂಗಮದಲ್ಲಿ ಐಕ್ಯರಾದ ಮೇಲೆ ತನ್ನ ಬಾಳಿನ ಸರ್ವಸ್ವವೂ, ನಿಜವನನುಭವಕ್ಕೆ ತಂದ ಗುರುವೂ ಆಗಿದ್ದ ಪತಿಯನ್ನು ಕಳೆದುಕೊಂಡು ಸತಿ ನೀಲಾಂಬಿಕೆಯವರ ಹೃದಯದಿಂದ ಸಹಜವಾಗಿ ಹೊಮ್ಮಿ ಬಂದ ಶೋಕವೇ ಈ ವಚನಗಳ ರಚನೆಗೆ ಪ್ರೇರಣೆಯಾಗುತ್ತದೆ. ಇಲ್ಲಿನ ಮೂಲ ಭಾವ ಸಂಪೂರ್ಣವಾಗಿ ವೈಯಕ್ತಿಕವಾದುದು. ಪತಿ ಶಿವೈಕ್ಯರಾದ ಕೆಲವೇ ದಿನಗಳಲ್ಲಿ ಸತಿ ರಚಿಸಿದ ಶೋಕ ಗೀತೆ ಇದು. ಅನಿರೀಕ್ಷಿತವಾಗಿ ಘಟಿಸಿದ ಪತಿಯ ವಿಯೋಗದ ದುಃಖ, ಮಹಾಪುರುಷ ಬಸವೇಶನ ಗುಣಗಾನ, ಅವರ ವ್ಯಕ್ತಿತ್ವದ ಹಿರಿಮೆಯನ್ನು ಕುರಿತ ಪ್ರಶಸ್ತಿ, ಅವರ ಬಾಳಿನ ಮಹತ್ಸಾಧನೆಯನ್ನು ಕುರಿತ ಮೆಚ್ಚುಗೆ, ಆ ಕಾರಣಪುರುಷನ ವಿಯೋಗದಿಂದ ಲೋಕಕ್ಕಾದ ನಷ್ಟ ಇವು ಕವನದ ಶೋಕ ಭಾವ, ಸ್ಮೃತಿ ಮತ್ತು ಪ್ರಶಸ್ತಿಗಳ ಅಂಶವಾಗಿ, ಶಿವಯೋಗ, ಶಿವಾನುಭವ, ಶರಣರದು ಮರಣವಲ್ಲ ಅದು ಹೇಗೆ ಶಿವನಲ್ಲಿ ಐಕ್ಯವಾಗುವ, ರೂಪ ಕಳೆದು ಬಯಲಾಗುವ ಪರಿ ಎಂಬೆಲ್ಲ ತಾತ್ವಿಕ ವಿಚಾರಗಳನ್ನೂ ಕುರಿತ ಆಲೋಚನೆಗಳು ಚಿಂತನಾಂಶವಾಗಿ, ಈ ಗೀತೆಯಲ್ಲಿ ಅಭಿವ್ಯಕ್ತವಾಗಿವೆ. ಇಷ್ಟೇ ಅಲ್ಲದೆ ವಚನಕಾರ್ತಿ ನೀಲಾಂಬಿಕೆಯವರು ತಳೆದ ಉನ್ನತವಾದ ಅಧ್ಯಾತ್ಮಿಕ ನಿಲುವಿನಿಂದ ಅವರ ನಿಷ್ಠೆ, ಹಿರಿಮೆ ಈ ಗೀತೆಯಲ್ಲಿ ಮೂಡಿ ನಿಲ್ಲುತ್ತವೆ. ಇಂತಹ ಚೇತನಕ್ಕೆ ಸ್ಫೂರ್ತಿಯಾಗಿದ್ದ ಬಸವಣ್ಣನವರ ಹಿರಿಮೆ ಇನ್ನೂ ಎಂತಹದಿರಬೇಕು ಎಂಬ ಪರೋಕ್ಷ ಗಣನೆ ಸಹ ಉಂಟಾಗುತ್ತದೆ.

ಇಲ್ಲಿ ಹೃದಯಸಹಜವಾದ ದುಃಖವೂ ಕಾಣುತ್ತದೆ. ಅನುಭಾವ ಸಿದ್ಧಿಯ ನಿಲುವಿನಲ್ಲಿ ನಿಂತು ಪಡೆಯುವ ಸಮಾಧಾನವೂ ಕಾಣುತ್ತದೆ. ಮರಣಕ್ಕೆ ಅಂಜುವುದಾಗಲೀ ಶೋಕಿಸುವುದಾಗಲೀ ಶರಣರ ಸ್ವಭಾವವಲ್ಲ. ಆದರೆ ಬಸವಣ್ಣನವರ ಹೆಜ್ಜೆಯಲ್ಲಿ ಹೆಜ್ಜೆ ಇಟ್ಟು ನಡೆದ ಆ ಸತಿಗೆ ಅವರಿಲ್ಲದ ಬದುಕಿನಲ್ಲಿ ಅರ್ಥ ಕಾಣಲಿಲ್ಲ. ಸತಿಯೂ ತನ್ನೊಡನೆ ಬರಲೆಂದು ಸಂಗಮಕ್ಕೆ ಬರಹೇಳಿದರೆಂದ ಶಿವಶರಣ ಅಪ್ಪಣ್ಣ ಅಣ್ಣನವರ ನಿರೂಪವನ್ನು ತಂದುರುಹಿದ.

" ನೋಡು ನೋಡು ನೋಡು ನೋಡು ನೋಡು ಲಿಂಗವೆ!
ನೋಡು ಬಸವಯ್ಯನ ಮಾಡಿದಾಟವ!
ಅಲ್ಲಿಗೆನ್ನನು ಬರಹೇಳಿದರಂತೆ!
ಇಲ್ಲಿ ತಾವಿಲ್ಲವೆ ಸಂಗಯ್ಯನು?
ಅಲ್ಲಿ ಇಲ್ಲಿ ಎಂಬ ಉಭಯ ಸಂದೇಹವು
ಬಲ್ಲ ಮಹಾತ್ಮರಿಗಿದು ಗುಣವೇ?"

ಎಂದು ಉದ್ಗಾರವೆತ್ತುತ್ತಾರೆ ನೀಲಮ್ಮನವರು. ಈ ಸಾಲುಗಳಲ್ಲಿ ಅಂತರಂಗದ ದುಃಖ ಸೂಕ್ಷ್ಮವಾಗಿ ಅಡಗಿದೆ. ಆದರೆ ಈ ದುಃಖ ಮನಸ್ಸನ್ನು ಹೊಯ್ದಾಟಕ್ಕೆ ಸಿಲುಕಿಸಿ ಚಾಂಚಲ್ಯವನ್ನುಂಟುಮಾಡದಂತೆ. ಅದುವರೆಗಿನ ಅವರ ಆಧ್ಯಾತ್ಮಸಾಧನೆಯಿಂದ ಪರಿ-ಪಾಕಗೊಂಡ ಜ್ಞಾನ ಮನಸ್ಸಿಗೆ ಸಂಯಮವನಿತ್ತು, ನಿಚ್ಚಳವಾದ ಬೆಳಕನ್ನು ಚೆಲ್ಲಿ, ಮುಂದಿನ ಮಾರ್ಗವನ್ನು ಅಸಂದಿಗ್ಧವಾಗಿ ಸೂಚಿಸುತ್ತದೆ.

" ಪರಿಣಾಮ ಮೂರ್ತಿ ಬಸವನ ರೂಪು ಕರಸ್ಥಲದಲ್ಲಿ
ಬೆಳಗಿದ ಬಳಿಕ ಸಂಗಯ್ಯನ ಹಂಗು ನಮಗೇತಕೆ ಅಪ್ಪಣ್ಣ?"

ಹೀಗೆಂದ ನೀಲಾಂಬಿಕೆಗೆ ಪತಿವಿಯೋಗದ ದುಃಖ ಇಲ್ಲದಿಲ್ಲ. ಆದರೆ ಅದು ಬರಿಯ ವ್ಯಥೆಯ ಪಾಡಾಗದೆ, ಬಯಲಾದ ಬಸವಣ್ಣನ ಅಲೌಕಿಕ ವ್ಯಕ್ತಿತ್ವದ ಕಥೆಯ ಹಾಡಾಗಿ ಹರಿಯುತ್ತದೆ. ಅಲ್ಲದೆ ಈ ಧೀರತೆ ಸತ್ಯನಿಷ್ಠೆಯಿಂದ, ನಿಶ್ಚಲವಾದ ಜ್ಞಾನದಿಂದ ಮಾತ್ರ ಬರುವಂತಹುದು. ನೀಲಾಂಬಿಕೆ ತಳೆಯುವ ಈ ಎತ್ತರದ ನಿಲುವು ಶಿವಶರಣೆಗೆ ಸಹಜವಾದುದು. ವೀರಶೈವ ದರ್ಶನದಲ್ಲಿ ನಿಷ್ಠವಾಗಿ ಪಕ್ವಗೊಂಡ ಮನೋಧರ್ಮಕ್ಕೆ ತಕ್ಕುದು.

ಐಕ್ಯವಾಗಲು ತಾನು ಸಂಗಮಕ್ಕೆ ಏಕೆ ಹೋಗಬೇಕು? ಅಂಗೈಯಲ್ಲೇ ಪತಿಯ ಪ್ರತಿರೂಪವಾದ ಇಷ್ಟಲಿಂಗವಿಲ್ಲವೆ? ಇದೇ ತನ್ನ ಮತ್ತು ತನ್ನ ಪತಿಯ ಆರಾಧ್ಯ ದೈವ ಸಂಗಯ್ಯನಲ್ಲವೆ? ಸಂಗಮಕ್ಕೆ ಎಂದು ಹೋದ ಬಸವಣ್ಣ ಐಕ್ಯವಾದ ಆ ಸಂಗಯ್ಯನೇ ಇಲ್ಲಿ ಕರಸ್ಥಲದಲ್ಲಿರುವಾಗ ತಾನು ಇಲ್ಲೇ ಐಕ್ಯವಾಗಿ ಬಸವಣ್ಣನನ್ನು ಸೇರಬಹುದಲ್ಲಾ! ಹೀಗೆ ತೀರ್ಮಾನಿಸುವಾಗ ಕೂಡ ಬಸವಣ್ಣನವರ ಅಕಾಲಿಕ ಮರಣಕ್ಕಾಗಿ ವ್ಯಥೆ ಇದ್ದೇ ಇದೆ. ಅವರು ಇಷ್ಟು ಬೇಗನೆ ಈ ಲೋಕವನ್ನು, ತಮ್ಮನ್ನೇ ನೆಚ್ಚಿದ ಶರಣಗಣವನ್ನು ತೊರೆದು ಬಯಲಾಗಬಾರದಿತ್ತು, ಎಂಬ ವ್ಯಥೆಯನ್ನು ನೀಲಾಂಬಿಕೆ ಒಂದು ವಚನದಲ್ಲಿ ಹೀಗೆ ತೋಡಿಕೊಳ್ಳುತ್ತಾರೆ:

" ಅಟ್ಟಡವಿಯಲಿ ಬಿಟ್ಟು ಹೋದಿರಿ ಬಸವಾ
ನಟ್ಟ ನಡು ಗ್ರಾಮವ ಕೆಡಿಸಿ ಹೋದಿರಿ ಬಸವಾ?
ಹುಟ್ಟಿಲ್ಲದ ಬಂಜೆಗೆ ಮಕ್ಕಳ ಕೊಟ್ಟಿರಿ ಬಸವಾ
ಆ ಮಕ್ಕಳ ಫಲವಿಲ್ಲದಂತೆ ಮಾಡಿದಿರಿ ಬಸವಾ"

ಶರಣರು ನೇತಾರನನ್ನು ಕಳೆದುಕೊಂಡು ದಿಕ್ಕುಗೆಟ್ಟರು. ರಾಜಧಾನಿ ಕಲ್ಯಾಣ ನಗರ ಚುಕ್ಕಾಣಿ ಕಳೆದುಕೊಂಡ ನಾವೆಯಾಯಿತು. ಬಂಜೆಗೆ ಮಕ್ಕಳ ಸೌಭಾಗ್ಯವಿತ್ತಂತೆ ನಾಡಿಗೆ ಭಾಗ್ಯೋದಯವನ್ನು ಕರುಣಿಸಿದ ಬಸವಣ್ಣ ಮಕ್ಕಳು ಯೋಗ್ಯರಾಗಿ ಬೆಳೆದು ಸಾರ್ಥಕ ವಾಗಿ ಬದುಕಿ ಮಹತ್ತಾದ ಗುರಿಯನ್ನು ಸಾಧಿಸಬಲ್ಲ ಸುಸ್ಥಿರವಾದ ಸಾಮರ್ಥ್ಯವನ್ನು ಪಡೆಯುವ ವರೆಗಾದರೂ ಇದ್ದು ಮಾರ್ಗದರ್ಶನ ನೀಡಬೇಕಾಗಿತ್ತು. ಆದಕ್ಕೆ ಅವರು ಮರೆಯಾಗಿ ಕತ್ತಲನ್ನೊಡ್ಡಿದರು. ಕಲ್ಯಾಣದೊಳಗೆ ಕಲಿ ಪ್ರವೇಶವಾಯಿತು. ಬಸವಣ್ಣನವರು ಹೊತ್ತಿಸಿದ ಲಕ್ಷೋಪಲಕ್ಷ ಶರಣ ದೀವಿಗೆಗಳು ನಡೆಸಿದ ಬೆಳಕಿನ ಹಬ್ಬ ಮುಗಿದು ಕತ್ತಲಾವರಿಸಿತು.

ಬಸವಣ್ಣನವರ ಐಕ್ಯವನ್ನು ಕುರಿತು ನೀಲಾಂಬಿಕೆ ಆಡುವ ಮಾತು :

''ಎಸಳೆಸಳ ಹೊಸೆದು ನೋಡುವ ಯೋಗಿಗಳು
ಬಸವನೈಕ್ಯವ ಕಾಣದಾದರು
ರೂಪ ನಿರೀಕ್ಷಿಸುವ ಯೋಗಿಗಳು
ಬಸವನೈಕ್ಯವ ಕಾಣದಾದರು."

ಇವರಾರೂ ಬಸವಣ್ಣನವರನ್ನು ತಡೆಯದೆ ಹೋದರೆ ಎಂಬ ವ್ಯಥೆಯನ್ನೂ, ಹಾಗೆ ತಡೆದಿದ್ದರೆ ಲೋಕೋಪಕಾರವಾಗುತ್ತಿತ್ತು ಎಂಬ ಆಶಯವನ್ನೂ ಬಹು ಮನೋಜ್ಞ ವಾಗಿ ವ್ಯಕ್ತಪಡಿಸುತ್ತದೆ. ಪಾಶ್ಚಾತ್ಯ ಮಾದರಿಯ ಎಲಿಜಿಯಲ್ಲಿ ಕವಿಯ ಮಿತ್ರನ ಸಾವು ಅಕಾಲಿಕವೂ ಆಕಸ್ಮಿಕವೂ ನಿಗೂಢವೂ ಆಗಿರುವ ವಿಚಾರವೂ, ಆ ಸಾವನ್ನು ಯಾರೂ ತಡಯದಾದರೇ ಎಂಬ ನೋವೂ ಬರುತ್ತವೆ. ಅಲ್ಲಿ ಲೌಕಿಕ ಭೂಮಿಕೆಯಲ್ಲಿ ಮೃತ್ಯು ನಿಗೂಢವಾಗಿ ಉಳಿಯುಮಂತೆ ಇಲ್ಲಿ ಅಲೌಕಿಕ ಭೂಮಿಕೆಯಲ್ಲಿ ಬಸವಣ್ಣನವರ ಐಕ್ಯಜ್ಞಾನಿಗಳ ತಿಳುವಳಿಕೆಗೂ ನಿಲುಕದ ರಹಸ್ಯವಾಗಿ ಕಣ್ಣು ತಪ್ಪಿಸುತ್ತದೆ.

ಬಸವಣ್ಣನವರು ಇಷ್ಟು ಹಠಾತ್ತನೆ ಸಂಗಯ್ಯನಲ್ಲಿ ಐಕ್ಯರಾದುದಕ್ಕೆ ಏನೋ ಕಾರಣ ಇರಬೇಕು. ಭಗವದಿಚ್ಛೆಗೆ ಅನುಗುಣವಾಗಿಯೇ ಹಾಗೆ ಆಗಿರಬೇಕು. ಆದರೆ ಇದು ಯಾರು ಬಲ್ಲರು ?

"ಸಂಗಯ್ಯ ನಿಮ್ಮ ಬಸವನೈಕ್ಯವ ಬಲ್ಲಾತ ಚೆನ್ನಬಸವಣ್ಣನು" ಎಂದು ಆ ವಚನ ಮುಗಿಯುತ್ತದೆ. ಐಕ್ಯದ ರಹಸ್ಯ ಅದರ ಹಿಂದಿನ ಭಗವತ್ಸಂಕಲ್ಪ ಯಾರಿಗಾದರೂ ತಿಳಿದಿದೆ ಎಂಬುದಾದರೆ ಅದು ಜ್ಞಾನಿ ಚೆನ್ನಬಸವಣ್ಣನೊಬ್ಬನಿಗೆ ತಿಳಿದಿದ್ದೀತು.

ತಿಳಿಯದ ನಮಗೆ–ಲೋಕಕ್ಕೆ–ನೆಚ್ಚಿನ ನಾಯಕನ ವಿಯೋಗದ ದುಃಖ ಮಾತ್ರ ಉಳಿಯಿತು. ಲೋಕವೆಲ್ಲದರ ಶೋಕವಾಣಿಯಾಗಿ ನೀಲಾಂಬಿಕೆಯ ಮಾತು ಹೊರಡುತ್ತದೆ. ಒಂದು ರೀತಿಯಲ್ಲಿ ಇದು ನೀಲಾಂಬಿಕೆಗೇ ಮೀಸಲಾದ ಪತಿವಿಯೋಗದ ದುಃಖ ಅಲ್ಲ. ಅಲ್ಲದೆ ಕೇವಲ ಮಡದಿಯಾಗಿ ನೀಲಾಂಬಿಕೆ ದುಃಖಿಸುತ್ತಿಲ್ಲ.

'' ಮಡದಿಯೆನಲಾಗದು ಬಸವಂಗೆ ಎನ್ನನು
ಪುರುಷನೆನಲಾಗದು ಬಸವನೆನಗೆ

ಉಭಯದ ಕುಲವ ಹರಿದು ಬಸವಗೆ ಶಿಶುವಾದೆ
ಬಸವನೆನ್ನ ಶಿಶುವಾದ
ಪ್ರಮಥ ಪುರಾತನರು ಸಾಕ್ಷಿಯಾಗಿ ಸಂಗಯ್ಯಸಿಕ್ಕಿದ
ದಿಬ್ಬವ ಮೀರದೆ ಬಸವನೊಳಗಾನಡಗಿದೆ "

ಇದು ವೈಯಕ್ತಿಕವಾದ ಪತಿಪತ್ನಿ ಸಂಬಂಧವಲ್ಲ. ಅಂತರಂಗದ ಜ್ಞಾನದ ಸಂಬಂಧ. ಇದು ಕೇವಲ ಒಂದು ಹೆಣ್ಣಿನ ಅಳಲಲ್ಲ. ಒಂದು ಚೇತನದ ಬವಣೆ. ಸದ್ಗುರು ಬಸವಣ್ಣನವರ ಕರುಣೆಯಲ್ಲಿ, ಅನುಗ್ರಹದಲ್ಲಿ ವಿಕಾಸಗೊಂಡ ನೀಲಾಂಬಿಕೆ-ಯವರಂತಹ ಹಲವಾರು ಚೇತನಗಳು ಅಣ್ಣನವರ ಅಗಲಿಕೆಯ ನೋವನ್ನು ಉನ್ನತ ವಾದ ಅನುಭಾವದ ನಿಲುವಿನಲ್ಲಿ ಹೇಗೆ ಸ್ಥೈರಿಸಿಕೊಂಡರೆಂಬುದು ಈ ವಚನದಲ್ಲಿ ಧ್ವನಿತವಾಗುತ್ತದೆ. ಇದಲ್ಲದೆ ಪರಮಾರ್ಥದಲ್ಲಿ ಇದು ವಿಯೋಗವೇ ಅಲ್ಲ ಎಂಬ ಸಮಾಧಾನವನ್ನೂ ಧ್ವನಿಸುತ್ತದೆ. 'ಎಂದೊ ಬಸವನೊಳಗಾನಡಗಿದ' ಬಳಿಕ ವಿಯೋಗದ ಮಾತು ಹೇಗೆ ಬಂದೀತು.

ಇಷ್ಟಕ್ಕೂ ಬಸವಣ್ಣ ಕಾರಣಪುರುಷ. ಅವನಿಗೆ ಮರಣ ಎಂಬುದೆಲ್ಲಿ? ತಾನು ಇಳೆಗ ಬಂದ ಕಾರಣ ಮುಗಿಯಲಾಗಿ ಅಮೃತಮಯವಾದ ಚಿದ್ಘನದಲ್ಲಿ ಒಂದಾಗಿಬಿಟ್ಟ.

'' ಕಾಯವಿಲ್ಲದೆ ಪುಷ್ಪಕನ ಕಂಡ ನಮ್ಮ ಬಸವಯ್ಯನು
ನಮ್ಮ ಬಸವಯ್ಯ ನೆಲೆ ಕರುಮಾಡವಾಯಿತ್ತು
ನಮ್ಮ ಬಸವಯ್ಯ ಹೂವಿನ ರಥವನೇರಿದ
ನಮ್ಮ ಬಸವಯ್ಯ ಸಂಗಯ್ಯನಾದ ಬಸವನ ರೂಪು ತದ್ರೂಪವಾಯಿತು.

ಎಂಬ ಮಾತುಗಳು ಮರಣದಲ್ಲಿ ಶರಣರ ಪರಮ ಶಿವಯೋಗವನ್ನು ದರ್ಶಿಸಿದಂತೆ ಹೊಮ್ಮಿದರೆ ;

" ರೂಪಿಲ್ಲದ ಬಹುರೂಪನಾದ ಬಸವಯ್ಯ "

ಎಂಬ ಮಾತು ಇನ್ನೂ ಸೊಗಸಾಗಿ ಶರಣರ ದಿವ್ಯಾತ್ಮ ಸಾಂತವಾದ ಏಕರೂಪವನ್ನು ತೊರೆದು ಅನಂತವಾದ ಬಹುರೂಪದ ವಿಶ್ವದಲ್ಲಿ ವ್ಯಾಪಿಸಿ ಒಂದಾಯಿತು ಎಂದು ಸೂಚಿಸುತ್ತದೆ.

" ಬಸವನ ಭಕ್ತಿ ಬಯಲನೆ ಕೂಡಿ ನಿರ್ವಯಲಾಯಿತ್ತು."

ಹೀಗೆ ವೈಯಕ್ತಿಕ ವಿಯೋಗ ಆರಂಭವಾದ ಶೋಕಗೀತೆ ದುಃಖವಾಗಿ ಸುಜ್ಞಾನದ ವಿಶ್ವತೋಭಾವದಲ್ಲಿ ಮುಕ್ತಾಯವಾಗುತ್ತದೆ. ಹೀಗೆ ಆಗುವುದು ಭಾರತೀಯ ತಾತ್ವಿಕ ಪ್ರಜ್ಞೆಗೂ ಎಲಿಜಿಯ ಒಂದು ಪ್ರಧಾನ ಲಕ್ಷಣಕ್ಕೂ ಅನುಗುಣವಾಗಿಯೆ ಇದೆ.

ಕನ್ನಡ ಸಾಹಿತ್ಯದಲ್ಲಿ ಇದುವರೆಗೆ ದೊರೆತಿರುವ ಕಾವ್ಯಗಳಲ್ಲಿ ಮೊಟ್ಟಮೊದಲ ಶೋಕಗೀತೆ (ಭಾವಗೀತೆ ಸಹ) ಆಗಿರುವ ನೀಲಲೋಚನೆಯ ಈ ವಚನಗಳನ್ನು ಇನ್ನೂ ವಿಶೇಷವಾಗಿ ಅಧ್ಯಯನ ಮಾಡಿ ಮೌಲ್ಯ ಮಾಪನ ಮಾಡುವಂತಹ ಪ್ರಾಯೋಗಿಕ ವಿಮರ್ಶೆಗೆ ಈ ಸ್ಥೂಲವಾದ ಸಮೀಕ್ಷೆ ಕೇವಲ ಒಂದು ಮಾರ್ಗಸೂಚಿ ಅಷ್ಟೆ. □

## ಗ್ರಂಥಋಣ

೧. ನೀಲಲೋಚನೆಯ ವಚನಗಳು —ಸಂ. : ಸಿ. ಕೆ. ಪರಶುರಾಮಯ್ಯ
೨. ಕನ್ನಡದಲ್ಲಿ ಭಾವಗೀತೆ —ಡಾಕ್ಟರ್ ಪ್ರಭುಶಂಕರ
೩. ಹೊಸಗನ್ನಡ ಕವಿತೆಯ ಮೇಲೆ
ಇಂಗ್ಲಿಷ್ ಕಾವ್ಯದ ಪ್ರಭಾವ —ಎಸ್. ಅನಂತನಾರಾಯಣ
೪. **The English Lyrical Forms** —*Narman Hepple*
೫. **An Introdnction to the Study of Literature** —*W. H. Hudson*
೬. ಸಾಹಿತ್ಯ ಪ್ರವೇಶ
(ಮೇಲಿನ ಪುಸ್ತಕದ ಅನುವಾದ) —ಸಿ. ಪಿ. ಕೆ.
೭. ಬ್ರಿಟಾನಿಕ್ ವಿಶ್ವಕೋಶ ೧೯೫೮
೮. ಮಿಲ್ಟನ್, ಗ್ರೇ, ಷೆಲ್ಲಿ, ಟೆನಿಸನ್,
ಆರ್ನಾಲ್ಡ್ ಮುಂತಾದವರ ಎಲಿಜಿ ಕವನಗಳು.

# ಜೈನಧರ್ಮ ಮತ್ತು ವೀರಶೈವ ಧರ್ಮ

ಡಾ. ಬಿ. ಎಸ್. ಕುಲಕರ್ಣಿ

ಭಾರತದ ಧರ್ಮಗಳ ಅಭ್ಯಾಸವನ್ನು ಮಾಡುವವರಿಗೆ ಎರಡು ಮುಖ್ಯಭೇದಗಳು ಕಂಡುಬರುತ್ತವೆ— ವೇದಗಳಂತೆ ನಡೆಯುವವರು, ಆಗಮಗಳಂತೆ ನಡೆಯುವವರು. ವೇದಗಳಂತೆ ನಡೆದುಕೊಂಡು ಬಂದುದಕ್ಕೆ, ಬರುವದಕ್ಕೆ "ವೈದಿಕ"ವೆಂದೂ ಆಗಮಗಳಂತೆ ನಡೆದುಕೊಂಡು ಬಂದುದಕ್ಕೆ, ಬರುವುದಕ್ಕೆ "ಆಗಮಿಕ" ಎಂದೂ ಕರೆಯಬಹುದು. ಈ ಶಬ್ದಗಳ ಹಿಂದೆ ಭಾರತದ ಪ್ರಾಚೀನ ಇತಿಹಾಸ, ಸಂಸ್ಕೃತಿಗಳೇ ಅಡಗಿ ನಿಂತಿವೆ ಎಂದು ಹೇಳಬಹುದು. ಆರ್ಯರು ಭಾರತಕ್ಕೆ ಹೊರಗಿನಿಂದ ಬಂದವರೋ ಅಥವಾ ಇಲ್ಲಿಯವರೋ ಎಂಬ ಪ್ರಶ್ನೆ ಇನ್ನೂ ಇತ್ಯರ್ಥವಾಗಿಲ್ಲವಾದರೂ ಆರ್ಯರೆನಿಸಿಕೊಂಡವರು ನಡೆದು ಬಂದ ರೀತಿಗಿಂತ ಭಿನ್ನವಾಗಿ ನಡೆದುಕೊಂಡು ಬಂದ ಜನಾಂಗವೊಂದು ಭಾರತದಲ್ಲಿ ಬಹು ಪ್ರಾಚೀನ ಕಾಲದಿಂದಲೂ ಇತ್ತೆಂಬುದರಲ್ಲಿ ಸಂದೇಹವಿಲ್ಲ. ಹರಪ್ಪಾ, ಮೊಹೆಂಜೋದಾರೋಗಳಲ್ಲಿ ನಡೆದ ಉತ್ಖನನವು ಮೇಲ್ಮಟ್ಟದ ನಾಗರಿಕ ಜೀವನ ನಡೆಯಿಸಿದ ಜನರ ಪರಿಚಯವನ್ನು ಒದಗಿಸುತ್ತಲಿದೆ. ಸಿಂಧೂ ನದಿ ಕೊಳ್ಳದ ಸಂಸ್ಕೃತಿಗೆ ಸರಿದೊರೆಯಾದ ಸಂಸ್ಕೃತಿಯುಳ್ಳ ಜನ ವಿಂಧ್ಯಗಿರಿಯ ಕೆಳಗಡೆಗೂ ಬಾಳುತ್ತಿದ್ದರೆಂಬುದನ್ನು ಇತ್ತೀಚಿನ ಅನೇಕ ಉತ್ಖನನಗಳು ಸಿದ್ಧಪಡಿಸಿವೆ. ಈ ಜನ ಆರ್ಯರಿಗಿಂತ ಪೂರ್ವದಿಂದಲೂ ಇದ್ದವರೆಂದು ಹೇಳುವವರು ಸತ್ಯದಿಂದ ದೂರವಿಲ್ಲವೆನ್ನಿಸುತ್ತದೆಯಾದರೂ, ಧಾರ್ಮಿಕ ಹಿನ್ನೆಲೆಯಲ್ಲಿ ಚರ್ಚಿಸುವಾಗ ಇಂದು. ಯಾವುದು ಮೊದಲು ಎಂಬುದನ್ನೇ ಚರ್ಚೆಗೆ ತಕ್ಕೊಳ್ಳಬೇಕಾಗಿಲ್ಲ. ಎರಡು ಸಾಂಪ್ರದಾಯದ ಜನ ಇದ್ದರೆಂಬುದಂತೂ ಖಚಿತವಾಗಿದೆ. ಎರಡೂ ಸಂಪ್ರದಾಯದ ಜನ ಸರಿದೊರೆಯಾಗಿ ಬಾಳುತ್ತ ಬಂದರೆಂದು ಹೇಳಿದರೆ ತಪ್ಪೇನಿಲ್ಲವೆನ್ನಿಸುತ್ತದೆ. ವೈದಿಕ ಸಂಪ್ರದಾಯದವರು ವೇದಗಳನ್ನು ಆಧಾರವಾಗಿಟ್ಟುಕೊಂಡಂತೆ, ಇನ್ನೊಂದು ಸಂಪ್ರದಾಯದವರು ಆಧಾರವಾಗಿಟ್ಟುಕೊಂಡ ಧರ್ಮಗ್ರಂಥಗಳಿಗೆ "ಆಗಮ"ಗಳೆಂದು ಕರೆದಿದ್ದಾರೆ. ಈ ಆಗಮಿಕ ಸಂಪ್ರದಾಯಕ್ಕೆ ಸಂಬಂಧಿಸಿದವುಗಳಾಗಿವೆ–ಜೈನಧರ್ಮ ಹಾಗೂ ವೀರಶೈವ ಧರ್ಮಗಳು! ಈಗ ಒಂದೊಂದನ್ನೇ ಕುರಿತು ಸ್ವಲ್ಪ ವಿವೇಚಿಸಬಹುದು.

ಜೈನ ಪರಂಪರೆ ಅಥವಾ ಶ್ರಮಣ ಪರಂಪರೆ ಬಹು ಪ್ರಾಚೀನ ಕಾಲದಿಂದಲೂ ನಡೆದು ಬಂದಿದೆಯೆಂದು ತಿಳಿಯುತ್ತದೆ. ವರ್ತಮಾನ ಕಾಲದ ಇಪ್ಪತ್ತು ನಾಲ್ಕು ಜನ ತೀರ್ಥಂಕರರಲ್ಲಿ ಕಡೆಯವರಾದ ಪಾರ್ಶ್ವನಾಥ ಹಾಗೂ ವರ್ಧಮಾನ ಮಹಾವೀರ ಇವರಿಬ್ಬರೂ ಐತಿಹಾಸಿಕ ವ್ಯಕ್ತಿಗಳಾಗಿದ್ದಾರೆ. ಕ್ರಿ. ಶ. ಪೂ ೬೦೦ ರಲ್ಲಿ ಜಗತ್ತಿನ ಹಲವಾರು ಕಡೆ ವಿಚಾರ ಕ್ರಾಂತಿ ನಡೆದುದು ಜಗತ್ತಿನ ಇತಿಹಾಸದಿಂದ ತಿಳಿಯುತ್ತದೆ. ಆಗ ಭಾರತದಲ್ಲಿ ವೈದಿಕ ಪರಂಪರೆಯ ಹಿನ್ನೆಲೆಯಲ್ಲಿ ಸಾಗಿದ ಯಜ್ಞಯಾಗಾದಿಗಳಿಂದ ಆಗುವ ಹಿಂಸೆಗೆ ಜನ ಹೇಸಿ ಹೋಗಿತ್ತು; ರೋಸಿ ಹೋಗಿತ್ತು. ಆಗ "ಅಹಿಂಸಾ ಪರಮೋ ಧರ್ಮಃ" ಎಂಬ ತತ್ವವನ್ನು ಮುಖ್ಯವಾಗಿಟ್ಟುಕೊಂಡು ವರ್ಧಮಾನ ಮಹಾವೀರನು ಜೈನಧರ್ಮವನ್ನು ಸ್ಥಾಪಿಸಿದನೆಂದು ಇತಿಹಾಸಕಾರರು ಹೇಳುತ್ತಾರೆ. ಆದರೆ ಆತನಕ್ಕಿಂತ ಮೊದಲು ೨೫೦ ವರ್ಷ ಪೂರ್ವದಲ್ಲಿ ಪಾರ್ಶ್ವನಾಥನಿದ್ದನೆಂದು ತಿಳಿಯುತ್ತದೆ. ಇತ್ತೀಚಿನ ಸಂಶೋಧನೆಗಳಿಂದ ಆದಿನಾಥ, ಅಜಿತನಾಥ, ಮೊದಲಾದ ಜೈನ ತೀರ್ಥಂಕರರು, ಭಾರತದಲ್ಲಿ ಬಾಳಿ ಹೋದರೆಂದೂ ವೇದ, ಪುರಾಣಗಳಲ್ಲಿ ಉಲ್ಲೇಖವಾದುದು. ಗೊತ್ತಾಗಿದೆ. ಕಾರಣ ಜೈನ ಧರ್ಮವು ಭಾರತದಲ್ಲಿ ಪ್ರಾಚೀನ ಕಾಲದಲ್ಲಿ ನಡೆಯುತ್ತ ಬಂದಿದೆಯೆಂದು ಹೇಳಬಹುದಾಗಿದೆ. ಹೀಗೆ ನಡೆದು ಬಂದ ಧರ್ಮದ ತತ್ವ ಪ್ರಣಾಲಿಯನ್ನು ಮಾತ್ರ ಇಲ್ಲಿ ಸ್ವಲ್ಪ ತಿಳಿದುಕೊಂಡರೆ ಸಾಕೆನ್ನಿಸುತ್ತದೆ. ಜೈನಧರ್ಮವು ತರ್ಕಬದ್ಧವಾದ ಧರ್ಮವು. ಯಾವುದೇ ವಿಷಯವನ್ನು ಅನೇಕ ದೃಷ್ಟಿಕೋನಗಳಿಂದ ಪರೀಕ್ಷಿಸಿ ಅದು ಸರಿ ಇದ್ದರೆ ಒಪ್ಪುವಂತಹದು. ಕಾರಣ ಜೈನಧರ್ಮದ ವಿಚಾರ ಪ್ರಣಾಲಿಯು ವೈಜ್ಞಾನಿಕ ದೃಷ್ಟಿಯುಳ್ಳುದಾಗಿದೆ. ಭಾರತದಲ್ಲಿ ಹುಟ್ಟಿದ ಅನೇಕ ತತ್ವ ಪ್ರಣಾಲಿಗಳು, ಕಣ್ಣಿಗೆ ಕಾಣಿಸುವ ಈ ಜಗತ್ತನ್ನು ನೋಡಿ, ಅದರ ಅದ್ಭುತತೆಗಾಗಿ ಬೆರಗಾಗಿ ಇಂತಹದನ್ನು ಸೃಷ್ಟಿಸಿದವನು ಅಸಾಮಾನ್ಯನಿರಲೇಬೇಕು, ಅವನು ಮಾನವನಾಗಿರಲಿಕ್ಕೆ ಸಾಧ್ಯವೇ ಇಲ್ಲ, ದೇವನಾಗಿರಬೇಕು, ಸರ್ವಶಕ್ತನಾಗಿರಬೇಕು. ಪರಮಾತ್ಮನಾಗಿರಲಿಕ್ಕೇಬೇಕು ಎಂದು ವಿಚಾರಿಸಿ ಈ ಜಗತ್ತನ್ನು ಹುಟ್ಟಿಸಿದ ಹಾಗೂ ಅದನ್ನು ನಡೆಸಿಕೊಂಡು ಹೋಗುವ ಸೃಷ್ಟಿಕರ್ತನ ಅಸ್ತಿತ್ವವನ್ನು ನಂಬಿದವು. ಆದರೆ ಜೈನ ಧರ್ಮವು ಈ ಸೃಷ್ಟಿಕರ್ತನೆಂಬುವವನನ್ನು ಯಾರು ಸೃಷ್ಟಿಸಿದರು ಎಂಬ ಪ್ರಶ್ನೆಯನ್ನು ಎತ್ತಿತು. ಕಾರ್ಯ ಇದೆ ಎಂದ ಮೇಲೆ ಅದರ ಕಾರಣ ಇರಲೇಬೇಕಲ್ಲವೆ? ಸೃಷ್ಟಿಕರ್ತನನ್ನು ಸೃಷ್ಟಿಸಿದವ ಒಬ್ಬನಿದ್ದಾನೆಂದು ಹೇಳಿದರೆ, ಆತನನ್ನು ಸೃಷ್ಟಿಸಿದವರು ಯಾರು ಎಂಬ ಪ್ರಶ್ನೆ ಮುಂದುವರೆಯುತ್ತದೆ. ತರ್ಕಕ್ಕೆ ನಿಲ್ಲದ ಈ ದಾರಿಯನ್ನು ಬಿಟ್ಟು ಬಿಟ್ಟು, ಜೈನ ಆಚಾರ್ಯರು ಸೃಷ್ಟಿಯನ್ನು ಯಾರೂ ಸೃಷ್ಟಿಸಲಿಲ್ಲ. ಅದು ನಿಸರ್ಗದ ಸ್ವಾಭಾವಿಕ ಕೃತಿ, ಅದರಲ್ಲಿರುವ ಮಣ್ಣು, ಕಲ್ಲು, ಮರ, ಹೊಳೆ, ಮನುಷ್ಯ, ಪ್ರಾಣಿ,ಪಕ್ಷಿ, ಎಲ್ಲವೂ ಸೂತ್ರಬದ್ಧವಾಗಿ ನಡೆಯುತ್ತಿರುವ ಪ್ರಕೃತಿಯ ನಿಯಮಕ್ಕೆ ಒಳಗಾಗಿವೆಯೆಂದು ಹೇಳಿದರು. ಕಣ್ಣಿಗೆ ಕಾಣುವ ಈ ಸೃಷ್ಟಿಯನ್ನು ಅವರು ಸುಳ್ಳು, ಭ್ರಮೆ ಎಂದು ಹೇಳಲಿಲ್ಲ. ಆದರ ಅಸ್ತಿತ್ವವನ್ನು ನಂಬಿದರು, ಆದು ಎಂದು ಹುಟ್ಟಿತು, ಎಂದು ನಾಶವಾಗುತ್ತದೆ. ಎಂಬ ಪ್ರಶ್ನೆಗಳಿಗೆ,

ಅದು ಅನಂತ ಕಾಲದಿಂದ ಇದೆ, ಹಾಗೆ ನಡೆದುಹೋಗುತ್ತದೆ ಅನಂತಕಾಲ ಎಂಬುದು ಉತ್ತರ! ಆದರೆ ಕಣ್ಣಿಗೆ ಕಂಡ ವಸ್ತುಗಳಲ್ಲಿ ಎರಡು ಮುಖ್ಯ ಭೇದಗಳನ್ನು ಮಾಡಿದರು. ಒಂದು ಜೀವ, ಇನ್ನೊಂದು ಅಜೀವ. ಜೀವ ಎಂದರೆ ಚೇತನವುಳ್ಳ ವಸ್ತು–ದ್ರವ್ಯ. ಚೇತನವಿಲ್ಲದ್ದು ಅಜೀವ. ಚೇತನವಿಲ್ಲದ ಈ ಜೀವವನ್ನು ಅವರು ಪುದ್ಗಲ ಧರ್ಮ. ಅಧರ್ಮ ಆಕಾಶ, ಕಾಲ ಎಂಬ ಐದು ತರಹದ ದ್ರವ್ಯಗಳಲ್ಲಿ ಗುರುತಿಸಿ– ಈ ಐದು ಅಜೀವ ದ್ರವ್ಯಗಳು ಕೂಡಿ ಆರು ದ್ರವ್ಯಗಳೆಂದು ಜೈನಾಚಾರ್ಯರು ಕಂಡುಕೊಂಡರು. ಈ ಆರು ದ್ರವ್ಯಗಳಿಗೆ ಜೈನ ಧರ್ಮದಲ್ಲಿ 'ಷಡ್ದ್ರವ್ಯ'ಗಳೆಂದು ಕರೆಯುತ್ತಾರೆ.

ಬಯಲೇ ಬಯಲಾಗಿರುವ ಆಕಾಶ ದ್ರವ್ಯವು ಉಳಿದ ಐದು ದ್ರವ್ಯಗಳಿಗೆ ಇರಲು ಅನುವು ಮಾಡಿಕೊಡುತ್ತದೆ. ಈ ಆಕಾಶವನ್ನು 'ಲೋಕಾಕಾಶ', 'ಅಲೋಕಾಕಾಶ' ಎಂದು ಎರಡು ಭಾಗ ಮಾಡಿ ಎಲ್ಲಿಯ ವರೆಗೆ ಉಳಿದ ಐದು ದ್ರವ್ಯಗಳು ಸಂಚರಿಸಲು ಸಾಧ್ಯವೋ ಅಲ್ಲಿಯ ವರೆಗಿನ ಆಕಾಶವನ್ನು ಲೋಕಾಕಾಶವೆಂದೂ. ಈ ದ್ರವ್ಯಗಳ ಸಂಚಾರದಿಂದ ಮುಕ್ತವಾಗಿರುವ ಆಕಾಶವನ್ನು ಅಲೋಕಾಕಾಶವೆಂದು ಕರೆದಿದ್ದಾರೆ. ಮೂರು ವಾತುವಲಯಗಳು ಸುತ್ತಿಕೊಂಡು ಆ ಮಧ್ಯ ಅಧೋಲೋಕ, ಮಧ್ಯಲೋಕ, ಊರ್ಧ್ವಲೋಕವೆಂದು ಲೋಕಗಳನ್ನು ನಿರ್ಮಾಣ ಮಾಡಿ, ಈ ಮೂರು ಲೋಕಗಳಲ್ಲಿ ಅಜೀವ ದ್ರವ್ಯದ ಸಂಗಡ ಸಂಪರ್ಕ ಬಂದು, ಬದ್ಧವಾಗಿರುವ ಆತ್ಮಗಳು ದೇವ, ಮಾನವ, ನಾರಕಿ, ತಿರ್ಯಕ್ ಎಂಬ ನಾಲ್ಕು ಗತಿಗಳಲ್ಲಿ ಇರುತ್ತವೆಂದು ಹೇಳಿದ್ದಾರೆ. ಊರ್ಧ್ವಲೋಕದ ತುಟ್ಟತುದಿಗೆ ಸಿದ್ಧಶಿಲೆಯೆಂಬ ಶಿಲೆಯನ್ನು ನಿರ್ಮಿಸಿದ್ದಾರೆ. ಅಲ್ಲಿಗೆ ಹೋಗಲು ಆತ್ಮಗಳು ಶಕ್ತಿಯನ್ನು ಪಡೆದರೆ ಎಲ್ಲ ಗತಿಗಳಿಂದಲೂ ಮುಕ್ತವಾಗಿ ಸಿದ್ಧರಾಗಿರುತ್ತವೆ. ಸಿದ್ಧಶಿಲೆಗೆ ಹೋದ ಆತ್ಮನು ಭವಬಂಧನದಿಂದ ದೂರವಾಗುತ್ತಾನೆ. ಹೀಗೆ ಭವಬಂಧನದಿಂದ ಪಾರಾಗಿ ಸಿದ್ಧರಾದ ಜೀವಾತ್ಮರುಗಳೇ ಪರಮಾತ್ಮರಾಗುತ್ತಾರೆ. ಪರಮಾತ್ಮರಾದ ಆತ್ಮರುಗಳಿಗೆ ಆತ್ಮದ ಸ್ವಾಭಾವಿಕ ಗುಣಗಳಾದ 'ಅನಂತ ಜ್ಞಾನ' 'ಅನಂತದರ್ಶನ' 'ಅನಂತವೀರ್ಯ' 'ಅನಂತ ಸುಖ' ಪ್ರಾಪ್ತವಾಗುತ್ತವೆ. ಜ್ಞಾನ ಸ್ವರೂಪಿಯಾಗಿ ಆತ್ಮನು ಕೊನೆಯ ವರೆಗೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಸಿದ್ಧಶಿಲೆಯಲ್ಲಿ ಇದ್ದುಬಿಡುತ್ತಾನೆ. ಜೀವದ್ರವ್ಯ, ಅಜೀವದ್ರವ್ಯದ ಸಂಪರ್ಕದಲ್ಲಿ ಬಂದು ಬದ್ಧನಾಗುವುದು ಹೇಗೆ? ಬದ್ಧನಾದುದು ಯಾವಾಗ? ಬದ್ಧನಾದುದು ಬಿಡುಗಡೆ ಆಗುವುದು ಹೇಗೆ? ಆತ್ಮಗಳು ಎಷ್ಟು? ಎಲ್ಲ ಆತ್ಮಗಳೂ ಸಿದ್ಧಶಿಲೆಗೆ ಹೋದರೆ ಈ ಜಗತ್ತು ಖಾಲಿಯಾಗುವುದೇ? ಎಂಬ ಮೊದಲಾದ ಪ್ರಶ್ನೆಗಳಿಗೆ ಜೈನ ವಿಚಾರ ಪ್ರಣಾಲಿ ತರ್ಕಬದ್ಧವಾಗಿಯೇ ಉತ್ತರಿಸಿದೆ. ಜೀವದ ಮುಖ್ಯ ಲಕ್ಷಣ ಚೇತನ. ಚೇತನವುಳ್ಳ ವಸ್ತು ಸ್ಪಂದನವುಳ್ಳದಾಗಿರುತ್ತದೆ. ಸ್ಪಂದನವನ್ನು ಹೊಂದುತ್ತಿರುವ ಈ ಆತ್ಮನ ಪ್ರದೇಶದಲ್ಲಿ ಪುದ್ಗಲ ದ್ರವ್ಯದ ಅಣುಗಳು ಪ್ರವೇಶಿಸುತ್ತವೆ. ಹೀಗೆ ಪ್ರವೇಶಿಸಿದ ಆತನು ಕರ್ಮಪುದ್ಗಲದಿಂದ ಬದ್ಧನಾದಂತಾಯಿತು. ಹೀಗೆ ಬದ್ಧನಾದ ಆತ್ಮನು ಜೀವಾತ್ಮನಾಗುತ್ತಾನೆ. ಆತ್ಮಕ್ಕೆ ಅಂಟಿಕೊಂಡ ಪುದ್ಗಲದ ಸಂಖ್ಯೆ ರೂಪ ಬೇರೆ ಬೇರೆ

ಆಗಿರಬಹುದು. ಅದಕ್ಕಿಂತಲೇ ಬೇರೆ ಬೇರೆ ತರಹದ ದೇಹಧಾರಣೆ ಮಾಡುವ ಸ್ಥಿತಿ ಆತ್ಮಗಳಿಗೆ ಬರುತ್ತದೆ. ಹೀಗೆ ಬದ್ಧರಾದ ಜೀವಾತ್ಮರುಗಳು ಒಂದು, ಎರಡು, ಮೂರು, ನಾಲ್ಕು, ಐದು ಇಂದ್ರಿಯಗಳುಳ್ಳವರಿರಬಹುದು, ದೇವ ಗತಿಯಲ್ಲಿ ಇರಬಹುದು, ತಿರ್ಯಕ್ ಅಥವಾ ನಾರಕ ಗತಿಗಳಲ್ಲಿ ಇರಬಹುದು ಅಂತು ಅಲ್ಲಿ ಪುದ್ಗಲ ಸಂಯೋಗ ಇದೆ. ದೇಹ ಇದೆ, ಆಯುಃಕರ್ಮ ಮಲಗಿದ ಕೂಡಲೇ ಆ ದೇಹದಿಂದ ಇನ್ನೊಂದು ಕಡೆಗೆ ಹೋಗುತ್ತದೆ–ಆತ್ಮ. ಆತ್ಮ ಜೀವಾತ್ಮನಾಗುವುದು ಸ್ವಾಭಾವಿಕ, ಅನಿವಾರ್ಯ, ಹೀಗೆ ನಡೆದುದು ಅನಂತ ಕಾಲದಿಂದ, ಆತ್ಮಗಳೂ ಅನಂತ, ಅಸಂಖ್ಯ. ಆತ್ಮಗಳು ಸಿದ್ಧಶಿಲೆಗೆ ಹೋಗೇ ತೀರುತ್ತವೆಂಬ ಆಶ್ವಾಸನೆ ಇದ್ದರೂ, ಹೋಗದೇ ಇಲ್ಲಿಯೇ ಭವಚಕ್ರದಲ್ಲಿ ತಿರುಗುವ ಜೀವಾತ್ಮಗಳೂ ಇದ್ದೇ ಇವೆ, ಇರುತ್ತವೆ. ಪುದ್ಗಲ ಸಂಯೋಗದಲ್ಲಿ ಬಂದ ಆತ್ಮನು ಹೇಗೆ ಬಿಡುಗಡೆ ಆಗುತ್ತಾನೆಂಬುದನ್ನು ವಿವರಿಸಿದ್ದಾರೆ. ಅದರ ವಿವರಣೆ ಹೀಗೆ ಇದೆ-ಚೇತನ ಸ್ವರೂಪಿಯಾದ ಆತ್ಮನ ಸ್ಪಂದನದಿಂದಾಗಿ ಆತ್ಮ ಪ್ರದೇಶದಲ್ಲಿ ಪುದ್ಗಲ ದ್ರವ್ಯವು ಪ್ರವೇಶಿಸುತ್ತದೆ. ಹೀಗೆ ಪ್ರವೇಶವಾಗುವುದಕ್ಕೆ "ಆಸ್ರುವ"ವೆಂದು ಹೇಳುತ್ತಾರೆ. ಪುದ್ಗಲ ಅಣುಗಳು ಪ್ರವೇಶವಾದ ಮೇಲೆ ಆ ಕರ್ಮಾಣುಗಳಿಂದ ಆತ್ಮನು ಬದ್ಧನಾಗುತ್ತಾನೆ. ಅದರ ಶುಭ ಅಥವಾ ಅಶುಭ ಕರ್ಮದ ಫಲವನ್ನು ಭೋಗಿಸಲು ಆತ್ಮನು ಬಂಧಿತನಾಗುತ್ತಾನೆ. ಇದಕ್ಕೆ 'ಬಂಧ' ಎಂದು ಕರೆದಿದ್ದಾರೆ. ಆತ್ಮನು ಚೇತನಮಯಿ ಇರುವುದರಿಂದ ಅವನು ಪುದ್ಗಲ ಅಣುಗಳನ್ನು ಸ್ವೀಕರಿಸುವುದು ಸ್ವಾಭಾವಿಕವಾದರೂ ಅದೇ ಚೇತನವನ್ನು ಹೊಸ ಪುದ್ಗಲ ದ್ರವ್ಯಗಳು ಪ್ರವೇಶಿಸಿ ತನ್ನನ್ನು ಹೆಚ್ಚೆಚ್ಚು ಬದ್ಧನನ್ನಾಗಿ ಮಾಡುವುದನ್ನು ತಪ್ಪಿಸಿಕೊಳ್ಳಲೂ ಬರು-ತ್ತದೆ. ಹಾಗೆ ಹೊಸ ಪುದ್ಗಲ ದ್ರವ್ಯ ಪ್ರವೇಶಿಸಿದಂತೆ ತಡೆಗಟ್ಟುವದಕ್ಕೆ 'ಸಂವರ' ಎನ್ನು-ತ್ತಾರೆ. ಹೊಸ ಪುದ್ಗಲವನ್ನು ತಡೆಗಟ್ಟಿದರೂ ಆಗಲೇ ಪ್ರವೇಶ ಮಾಡಿದವುಗಳನ್ನು ಹೊರಗೆ ಹಾಕಿ ಆತ್ಮನನ್ನು ಮುಕ್ತನನ್ನಾಗಿ ಮಾಡುವುದು ಅವಶ್ಯ. ಹಾಗೆ ಪುದ್ಗಲದ್ರವ್ಯ ವನ್ನು ಹೊರಗೆ ಹಾಕುವುದಕ್ಕೆ 'ನಿರ್ಜರಾ' ಎಂದು ಕರೆದಿದ್ದಾರೆ. ಹೊಸ ಕರ್ಮದ ಅಣು ಗಳು ಪ್ರವೇಶವಾಗದಂತೆ ಇದ್ದು, ಹಳೆಯ ಕರ್ಮಗಳನ್ನು ತನ್ನಲ್ಲಿಂದ ಹೊರಗೆ ಹಾಕಿದ ಆತ್ಮನು ಶುಭ ಅಥವಾ ಅಶುಭ ಕರ್ಮದ ಅಣುಗಳಿಂದ ಮುಕ್ತನಾಗಿ, ತನ್ನ ಮೂಲ ಸ್ವರೂಪವನ್ನು ಹಾಗೂ ಸತ್ವವನ್ನು ಪಡೆದವನಾಗಿ ಅಜೀವ ದ್ರವ್ಯಗಳ ಸಂಪರ್ಕ ಬಾರದಂತೆ ಸಿದ್ಧಶಿಲೆಗೆ ಹೋಗುತ್ತಾನೆ. ಅಲ್ಲಿ ಶಾಶ್ವತವಾದ ಪದವಿಯನ್ನು ಹೊಂದಿ ಇದ್ದು ಬಿಡುತ್ತಾನೆ. ಇದಕ್ಕೆ 'ಮೋಕ್ಷ' ವೆಂದು ಹೇಳಿದ್ದಾರೆ. ಜೀವ, ಅಜೀವ, ಆಸ್ರುವ, ಬಂಧ, ಸಂವರ, ನಿರ್ಜರಾ, ಮೋಕ್ಷ ಇವುಗಳಿಗೆ ಜೈನಧರ್ಮದಲ್ಲಿ ಸಪ್ತ ತತ್ವ ಗಳೆನ್ನುತ್ತಾರೆ. ಜೈನ ಧರ್ಮದ ತತ್ತ್ವಪ್ರಣಾಲಿಯನ್ನು ಒಂದೇ ಮಾತಿನಲ್ಲಿ ಹೇಳುವು ದಾದರೆ ಷಡ್ದ್ರವ್ಯ ಹಾಗೂ ಸಪ್ತ ತತ್ವಗಳೆಂದು ಹೇಳಬಹುದು. ಮೇಲೆ ಹೇಳಿದ ಅಜೀವದಲ್ಲಿ ಬರುವ ಧರ್ಮ, ಅಧರ್ಮ ದ್ರವ್ಯಗಳು ಆತ್ಮನ ಚಲನೆಗೂ, ಸ್ಥಗಿತಕ್ಕೂ ಕಾರಣವಾಗುವ ದ್ರವ್ಯಗಳಾಗಿವೆ. ಕಾಲದ್ರವ್ಯವು ಪುದ್ಗಲ ದ್ರವ್ಯವು ಫಲ ಕೊಡಲು

ಸಹಾಯ ಮಾಡುವ ದ್ರವ್ಯವಾಗಿದೆ. ಆತ್ಮಕ್ಕೆ ಅಂಟಿಕೊಳ್ಳುವ ಪರಮಾಣು ಸ್ವರೂಪ ದಲ್ಲಿರುವ ದ್ರವ್ಯವೇ ಪುದ್ಗಲ. ಇದಕ್ಕೆ ಕರ್ಮದ್ರವ್ಯ ಅಥವಾ ಕರ್ಮಾಣು ಎಂದು ಹೇಳಬಹುದು. ಇವೆಲ್ಲಕ್ಕೂ ಇರಲು ಆಸ್ಪದವಾಗಿರುವದು 'ಆಕಾಶ' ದ್ರವ್ಯ.

ವಿಜ್ಞಾನ ಯುಗದಲ್ಲಿ ಬಾಳುವ ಇಂದಿನವರಿಗೆ. ಜೈನ ಧರ್ಮದಲ್ಲಿ ಹೇಳಿದ ವಿಚಾರಗಳನ್ನು ನೋಡಿದಾಗ, ಜೈನ ಧರ್ಮವು ತರ್ಕಬದ್ಧವಾಗಿರುವುದಲ್ಲದೆ, ವೈಜ್ಞಾನಿಕ ದೃಷ್ಟಿಯಿಂದಲೂ ವಿಚಾರ ಮಾಡಿದುದಾಗಿದೆಯೆಂದು ಅನ್ನಿಸುತ್ತದೆ. ಆದರೆ ಯಾವುದೇ ಧರ್ಮದ ತತ್ವಗಳಿರಲಿ, ಅವು ಸಾಮಾನ್ಯನಿಗೆ ಎಟಕುವುದಿಲ್ಲ. ಅವುಗಳ ಬಗ್ಗೆ ಆತನಿಗೆ ಆಸ್ಥೆಯೂ ಇರುವದಿಲ್ಲ. ಈ ದೃಷ್ಟಿಯಿಂದ ಜೈನಧರ್ಮದಲ್ಲಿ ಸಾಮಾನ್ಯನು, ಹಂತ ಹಂತವಾಗಿ, ಸರಿಯಾಗಿ ವಿಚಾರ ಮಾಡಲು ಅನುಕೂಲವಾಗುವಂತೆ, ವ್ಯವಹಾರಿಕವಾಗಿ, ಸಾಮಾನ್ಯ ಗೃಹಸ್ಥನ ದೃಷ್ಟಿಯಿಂದ ವಿಚಾರ ಮಾಡಿ, ಅನೇಕ ಅನುಕೂಲತೆಗಳನ್ನು, ಮಾಡಲಾಗಿದೆ. 'ಚತುರ್ದಶ ಗುಣ ಸ್ಥಾನ', 'ರತ್ನತ್ರಯ', 'ದಶಧರ್ಮ', 'ಅಣುವ್ರತಗಳು', 'ಶಿಕ್ಷಾವ್ರತ'. 'ಗುಣವ್ರತ', ಮೊದಲಾದವುಗಳನ್ನು ಹೇಳಿ ಸಾಮಾನ್ಯನು ಧರ್ಮದತ್ತ ದೃಷ್ಟಿ ಹರಿಯಿಸಲೆಂದು ಏರ್ಪಾಡು ಮಾಡಲಾಗಿದೆ. ಆದರೂ ಸಮ್ಯಕ್ ದೃಷ್ಟಿ ಬರುವುದು ಕಷ್ಟ. ಮಿಥ್ಯಾದೃಷ್ಟಿಯಾದ ಸಾಮಾನ್ಯನು ತತ್ವಗಳಿಗೆ ಅಂಟಿಕೊಳ್ಳದೆ ಕ್ರಿಯಾಕಾಂಡಕ್ಕೆ ಅಂಟಿಕೊಳ್ಳುತ್ತಾನೆ. 'ಕ್ರಿಯಾಕಾಂಡ'ವೇ ಧರ್ಮವೆಂದು ಭ್ರಮಿಸಿ ಹೊರಡುತ್ತಾನೆ. ಇದರಿಂದ ಜೈನಧರ್ಮವೂ ಮುಕ್ತವಾಗಿಲ್ಲ. ಷಡ್ದ್ರವ್ಯ, ಸಪ್ತತತ್ವಗಳ ಹಿನ್ನೆಲೆಯಲ್ಲಿ ಬದ್ಧನಾದ ಆತ್ಮನನ್ನು ಪರಮಾತ್ಮನನ್ನಾಗಿ ಮಾಡುವ ಧರ್ಮದ ತತ್ವಪ್ರಣಾಲಿಯವರೇ ಅನೇಕ ರೀತಿಯ ಕರ್ಮಕಾಂಡಗಳಿಗೆ ಮರೆ ಹೊಕ್ಕಿದ್ದಾರೆ. ಇದು ನಡೆಯುವುದು ಅನಿವಾರ್ಯವೆಂದೇ ಹೇಳಬೇಕು. ಆದರೂ ಮೇಲೆ ಹೇಳಿದ ವ್ರತಗಳ ಹಿನ್ನೆಲೆಯಲ್ಲಿ, ಸಾಮಾನ್ಯನೂ ಸಿದ್ಧನಾಗುವ ದಾರಿಯನ್ನು ತೋರಿಸಲಾಗಿದೆಯೆಂದು ಹೇಳಬಹುದು. ಹೀಗೆ 'ವ್ಯವಹಾರ' ಹಾಗೂ 'ನಿಶ್ಚಯ'ಗಳ ಸುಮಧುರ ಮಿಲನ ಮಾಡಿ, ಮಾನವನ ಉನ್ನತಿಯಾಗುವಂತೆ ಅನುಕೂಲ ಮಾಡಿದ, ಜೈನ ಆಚಾರ್ಯರ ಪ್ರಯತ್ನ ಸ್ತುತ್ಯವಾಗಿದೆಯೆಂದು ಹೇಳಬಹುದು. ಜೈನ ಧರ್ಮದ ವಿಚಾರ ಲಹರಿಯನ್ನು ಕುರಿತು ವಿಚಾರ ಮಾಡಿದ ನಾವು ಈಗ ವೀರಶೈವ ವಿಚಾರ ಪ್ರಣಾಲಿಯನ್ನು ಕುರಿತು ಸ್ವಲ್ಪ ವಿವೇಚಿಸಬಹುದು.

ವೀರಶೈವ ಧರ್ಮವೂ ಆಗಲೇ ಹೇಳಿದಂತೆ 'ಆಗಮಿಕ' ಸಂಪ್ರದಾಯಕ್ಕೆ ಸೇರಿ ದುದೇ ಆಗಿದೆ. ಆದರೆ 'ವೀರಶೈವ'ವು ಕ್ರಿ. ಶ. ೧೨ನೆಯ ಶತಮಾನದಲ್ಲಿ ರೂಢಿಯಲ್ಲಿ ಬಂದುದಾಗಿದೆ. ಅದಕ್ಕೂ ಪೂರ್ವದಲ್ಲಿ 'ಶೈವ' ಧರ್ಮವು ರೂಢಿಯಲ್ಲಿದ್ದಿತು. 'ಶೈವ' ಧರ್ಮವು ಬಹಳೇ ಪುರಾತನ ಧರ್ಮವಾಗಿ ನಡೆದು ಬಂದಿದೆ. ಭಾರತದಲ್ಲಿ ಕಾಶ್ಮೀರ ದಿಂದ ಕನ್ಯಾಕುಮಾರಿ ವರೆಗೆ, ಗುಜರಾತದಿಂದ ಬಂಗಾಲದ ವರೆಗೆ ಎಲ್ಲ ಕಡೆಗೂ ಶೈವ ಧರ್ಮವು, ಪ್ರಾಚೀನ ಕಾಲದಿಂದ ರೂಢಿಯಲ್ಲಿದ್ದ ಬಗ್ಗೆ ಪ್ರಮಾಣಗಳು ಸಿಕ್ಕುತ್ತವೆ. ಭಾರತದ ಬೇರೆ ಬೇರೆ ಭಾಗಗಳಲ್ಲಿದ್ದ ಕಾಳಾಮುಖ, ಕಾಪಾಲಿಕ, ಕಾಶ್ಮೀರ, ವಂಗ,

ದಕ್ಷಿಣದ ಶೈವ, ಆರಾಧ್ಯ ಮೊದಲಾಗಿ ಶೈವ ಧರ್ಮದಲ್ಲಿದ್ದ ಒಳಪಂಗಡಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳು ಇದ್ದವು. ಆದರೂ ಅವೆಲ್ಲವೂ 'ಶೈವ' ಎಂಬ ದೊಡ್ಡ ವಿಭಾಗದಿಂದ ಬಂದುವೇ ಆಗಿದ್ದವು. ಕ್ರಿ.ಶ. ೧೨ನೆಯ ಶತಮಾನದಲ್ಲಿ ಇವೆಲ್ಲ ಪಂಗಡಗಳ ಜನರು ಕರ್ನಾಟಕದಲ್ಲಿ ಬಂದು ನೆಲಸಿದ್ದರು. ಬಹುಶಃ ಮುಸಲ್ಮಾನರ ದಾಳಿಯೇ ಇದಕ್ಕೆ ಕಾರಣವಿದ್ದರೂ ಇರಬಹುದು. ಕರ್ನಾಟಕದಲ್ಲಿ ಬಂದು ನಿಂತ ಈ ಎಲ್ಲ ಶೈವ ಪಂಗಡಗಳು ತಮ್ಮ ತಮ್ಮ ಹೆಚ್ಚಳಕ್ಕಾಗಿ ಹೋರಾಡುತ್ತಿದ್ದವು. ಜನರು ಯಾವುದನ್ನು ಅಪ್ಪಬೇಕು, ಒಪ್ಪಬೇಕು ಎಂಬುದನ್ನು ತಿಳಿಯದಂತಹ ಸ್ಥಿತಿಯಲ್ಲಿದ್ದರು. ಇಂಥ ಪರಿಸ್ಥಿತಿಯಲ್ಲಿ ಕನ್ನಡ ನಾಡಿನ ಪುಣ್ಯವೇ ಸಾಕಾರವಾಗಿ ಬಂದಂತೆ ಶ್ರೀ ಬಸವೇಶ್ವರರು ಜನ್ಮತಾಳಿ ಬಂದು, ಇವೆಲ್ಲ ಶೈವ ಪಂಗಡಗಳಲ್ಲಿದ್ದ ಉತ್ತಮ ಸಾರವನ್ನು ಹೀರಿ, ಹೌಹಾರಿದ ಜನತೆಗೆ ಸಂತೋಷವಾಗುವಂತೆ ಒಂದು ಹೊಸ ಧರ್ಮವನ್ನು ಕೊಟ್ಟರು. ಆ ಧರ್ಮವೇ ವೀರಶೈವ ಧರ್ಮವೆಂದು ಪ್ರಸಿದ್ಧವಾಗಿದೆ.

"ದಯವಿಲ್ಲದ ಧರ್ಮವಾವುದಯ್ಯಾ, ದಯವೇ ಬೇಕು ಸಕಲ ಪ್ರಾಣಿಗಳಲ್ಲಿ" ಎಂದೂ, ಗಂಡು, ಹೆಣ್ಣು ಎಂಬ ಭೇದವಿಲ್ಲದೆ ಎಲ್ಲರೂ ಪರಮಾತ್ಮನ ಅಂಶವೆಂದೂ. ಈ ಅಂಶವು ಶಕ್ತಿಯ ಮುಖಾಂತರ ಅಂಗವಾಗಿ ಬಂದು, ಭಕ್ತಿಯ ಮುಖಾಂತರ ಪುನಃ ಲಿಂಗದಲ್ಲಿ ಬೆರೆತು ಹೋಗುತ್ತದೆಂದೂ. ಇದನ್ನು ಸಾಧಿಸಲಿಕ್ಕೆ ಸಂಸಾರವನ್ನು ಬಿಡುವುದ ವಶ್ಯವಿಲ್ಲವೆಂದೂ, ತಾನು ಮಾಡುವುದೆಲ್ಲವೂ ದೇವರ ಪ್ರೇರಣೆಯೆಂದೂ, ತಾನು ಸ್ವೀಕರಿಸುವುದೆಲ್ಲ ದೇವರ ಪ್ರಸಾದವೆಂದೂ ತಿಳಿದು ನಡೆದರೆ ಈ ಜನ್ಮದಲ್ಲಿಯೇ ದೇವನಲ್ಲಿ ಐಕ್ಯನಾಗಬಹುದೆಂದು ಶರಣರು ಹೇಳಿದರು. ಹೀಗೆ ಹೇಳುವಲ್ಲಿ ಮೊದಲು ಸ್ವಾಮಿ–ಸೇವಕ ಭಾವನೆಯೂ, ನಂತರ " ಬ್ರಹ್ಮೋಸ್ಮಿ " ಎಂಬ ತತ್ವವೂ ಅಡಗಿದೆ. ಪರಮಾತ್ಮನ ಶಕ್ತಿಯೇ ಅಂಗವಾಗಿ ಬಂದು ಪುನಃ ಲಿಂಗವಾಗುವನೆಂದು ಹೇಳುವುದರಿಂದ ಇದಕ್ಕೆ "ಶಕ್ತಿ ವಿಶಿಷ್ಟಾದ್ವೈತ"ವೆಂದೂ ಕರೆಯುತ್ತಾರೆ,

ವೀರಶೈವ ಧರ್ಮ ತತ್ವ ಪ್ರಣಾಲಿಯ ಸ್ವಲ್ಪ ಪರಿಚಯವನ್ನು ಕೆಳಗಿನ ನಾಲ್ಕು ಮಾತುಗಳಲ್ಲಿ ಮಾಡಿಕೊಳ್ಳಬಹುದು. ವೀರಶೈವ ಧರ್ಮದ ಪ್ರಕಾರ ಪರಾತ್ಮರ ಮೂಲ ಶಕ್ತಿಯೊಂದು ಇದೆ. ಶೈವ ಮತದವರು ಶಿವನನ್ನು ಪೂಜಿಸುತ್ತಿದ್ದರು. ಅವರಂತೆ ವೀರಶೈವರಾದರೂ ಶಿವನನ್ನೇ ತಮ್ಮ ದೈವವನ್ನಾಗಿಟ್ಟುಕೊಂಡರು. ಆದರೆ ಶೈವರಂತೆ ವೀರಶೈವರು ಶಿವನಿಗೆ ಸಾಕಾರತೆಯನ್ನು ಕೊಡಲಿಲ್ಲ. ದೇವರ ನಿರಾಕಾರತೆಯಲ್ಲಿ ಅವರು ನಂಬುತ್ತಾರೆ. ಇವರ ಪ್ರಕಾರ ಶಿವನೆಂದರೆ ನಿರಾಕಾರ ಪರಾತ್ಮರ ವಸ್ತು–ಶಕ್ತಿ ಇದನ್ನೇ 'ಶೂನ್ಯ'ವೆಂದು ಕರೆದುದೂ ಉಂಟು. ಈ ಪರಾತ್ಮರ ಶಕ್ತಿಯು ಕ್ರಿಯಾಶಕ್ತಿಯಾಗಿ ಕಾರ್ಯರೂಪಕ್ಕೆ ಇಳಿದುದರ ಪರಿಣಾಮವೆ–ಈ ವಿಶ್ವ–ಪ್ರಪಂಚ. ಇಲ್ಲಿ ಇರುವ ಆತ್ಮಗಳೆಲ್ಲ ಆ ಮೂಲ ಶಕ್ತಿಯ ಅಂಶಗಳೇ. ಅಲ್ಲಿಂದ ಬಂದ ಈ ಅಂಶಗಳು ಇಲ್ಲಿಂದ ಹೋದ ಮೇಲೆ ಆ ಮೂಲ ಶಕ್ತಿಯಲ್ಲಿ ಐಕ್ಯವಾಗಿ ಹೋಗುತ್ತವೆ. ಇದನ್ನೇ ಪಾರಿಭಾಷಿಕ ಶಬ್ದಗಳಲ್ಲಿ ಹೀಗೆ ಹೇಳುತ್ತಾರೆ– ಈ ಶಕ್ತಿಯು ಮೊದಲು ಭಾವಲಿಂಗ, ಪ್ರಾಣಲಿಂಗ,

ಇಷ್ಟಲಿಂಗವೆಂದು ಮೂರು ತೆರನಾಗಿ. ನಂತರ ಮಹಾಲಿಂಗ, ಪ್ರಸಾದ ಲಿಂಗ, ಜಂಗಮ ಲಿಂಗ, ಶಿವಲಿಂಗ, ಗುರುಲಿಂಗ,ಆಚಾರ ಲಿಂಗವೆಂದು ಆರು ಪ್ರಕಾರವಾಗಿ ಪರಿಣಮಿಸಿತು. ಈ ಆರು ಲಿಂಗಗಳು ಆರು ಶಕ್ತಿಗಳ ಮೂಲಕ ಆರು ಅಂಗಗಳನ್ನು ನಿರ್ಮಿಸಿಕೊಂಡು ಅವುಗಳಲ್ಲಿ ನೆಲಸಿದವು. ಪರಮಾತ್ಮನು ಆರು ಲಿಂಗಗಳಾಗಿ ಆರು ಅಂಗಗಳಲ್ಲಿ ಆಳವಟ್ಟ ರೀತಿಗೆ 'ಪ್ರವೃತ್ತಿ' ಮಾರ್ಗವೆನ್ನುತ್ತಾರೆ.

ಇದರಂತೆ ಐಕ್ಯ, ಶರಣ, ಪ್ರಾಣಲಿಂಗಿ, ಪ್ರಸಾದ, ಮಹೇಶ್ವರ ಮತ್ತು ಭಕ್ತ ಎಂದು ಆರು ಅಂಗಸ್ಥಲಗಳನ್ನು ಹೇಳುತ್ತಾರೆ. ಈ ಅಂಗಗಳು ಪುನಃ ಲಿಂಗದಲ್ಲಿ ಬೆರೆಯುವ ರೀತಿ "ನಿವೃತ್ತಿ" ಮಾರ್ಗವೆನ್ನುತ್ತಾರೆ. ಈ ಲಿಂಗಗಳು ಆರು ತರದ ಭಕ್ತಿಗಳ ಮೂಲಕ ಲಿಂಗದಲ್ಲಿ ಸಮರಸವಾಗಿರುತ್ತದೆ. ಲಿಂಗದಿಂದ ಹುಟ್ಟಿದ ಅಂಗನು ಭಕ್ತಿಯ ಮಾರ್ಗದಿಂದ ಪುನಃ ಲಿಂಗನಾಗುತ್ತಾನೆ. ಈ ಸಿದ್ಧಾಂತಕ್ಕೆ "ಷಟ್ ಸ್ಥಲ" ಸಿದ್ಧಾಂತವೆನ್ನುತ್ತಾರೆ.

ಇದಲ್ಲದೆ ಗುರು, ಲಿಂಗ, ಜಂಗಮ. ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ ಮತ್ತು ಮಂತ್ರ ಎಂಬ ಅಷ್ಟಾವರಣಗಳನ್ನು ವೀರಶೈವರು ತಪ್ಪದೇ ಆಚರಿಸುತ್ತಾರೆ. ಆದರಂತೆ ಇಷ್ಟಲಿಂಗವು ಮುಕ್ತಿಯ ಮೊದಲನೆಯ ಮೆಟ್ಟಲೆಂದು ಹೇಳಲಾಗುತ್ತದೆ. ಮನಸ್ಸು, ಭಾವಗಳಿಗೆ ಸಂಬಂಧಪಟ್ಟ ಪ್ರಾಣಲಿಂಗ, ಭಾವಲಿಂಗದ ಕಲ್ಪನೆ ಸಾಮಾನ್ಯ ಮನುಷ್ಯನಿಗೆ ಸಾಧಿಸದ ವಿಷಯ. ಕಾರಣ ಇಷ್ಟಲಿಂಗದಿಂದ ಆರಂಭಿಸುವ ವಿಚಾರ ಹಾಗೂ ಅಷ್ಟಾವರಣಗಳ ಆಚರಣೆ ಸಾಮಾನ್ಯನನ್ನು "ಷಟ್‌ಸ್ಥಲ" ಮಾರ್ಗದತ್ತ ಸಾಗಿಸುವ ಉತ್ತಮ ಸಾಧನವಾಗಿದೆಯೆಂದು ಹೇಳಬಹುದಾಗಿದೆ.

ಇದೇ ರೀತಿ "ಕಾಯಕವೇ ಕೈಲಾಸ" ಎಂಬ ತತ್ವವನ್ನು ಸಾರಿ ಇಷ್ಟಲಿಂಗಧಾರಣೆಯ ಹಿನ್ನೆಲೆಯಲ್ಲಿ ಬಡವ ಬಲ್ಲಿದನೆಂಬ ತಾರತಮ್ಯವನ್ನು ಕಿತ್ತೊಗೆದ ವೀರಶೈವ ಧರ್ಮದ ಆಚರಣೆಯು ವಿಶ್ವಕ್ಕೆ, ಮಾನವಕುಲದ ಉದ್ಧಾರಕ್ಕೆ ಒಂದು ತಾರಕ ಮಂತ್ರವಾಗಿದೆ.

ಮೇಲಿನ ಸಾಮಾನ್ಯ ವಿವರಣೆಯಿಂದ, ಜೈನ ಹಾಗೂ ವೀರಶೈವ ಧರ್ಮಗಳು ಆಗಮಿಕ ಪದ್ಧತಿಗೆ ಸೇರಿದವುಗಳಾದರೂ. ಸೃಷ್ಟಿಕರ್ತನ ವಿಷಯದಲ್ಲಿ ಸ್ವಲ್ಪ ಭಿನ್ನವಾಗುತ್ತವೆ. ಉಳಿದ ಅನೇಕ ಅಂಶಗಳಲ್ಲಿ ಸರಿದೊರೆಯಾಗಿದ್ದುಕೊಂಡು, ಸಾಮಾನ್ಯನನ್ನು ಸಂಸಾರದಿಂದ ಮುಕ್ತಮಾಡಿ ಮೋಕ್ಷಮಾರ್ಗದತ್ತ ಸಾಗಿಸುವ ಉದ್ದೇಶದಿಂದ ಕೂಡಿದ ಹಾಗು ಮಾನವ ಕುಟುಂಬದ ಏಳ್ಗೆಯನ್ನೇ ಗುರಿಯಾಗಿಟ್ಟುಕೊಂಡ ಧರ್ಮಗಳಾಗಿವೆಯೆಂದು ತಿಳಿದುಕೊಳ್ಳಬಹುದಾಗಿದೆ. □

# ಭಗವಾನ್ ಸಿದ್ಧಲಿಂಗೇಶ್ವರರು

---

ಪಂಡಿತರತ್ನ ಬಿ. ಶಿವಮೂರ್ತಿ ಶಾಸ್ತ್ರಿಗಳು

ಕರ್ನಾಟಕದ ಉಜ್ವಲ ಚರಿತ್ರೆಯಲ್ಲಿ ತತ್ತ್ವಜ್ಞಾನ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಆಚಾರ್ಯ ರೇವಣಸಿದ್ದ. ನಿರಂಜನ. ಅಲ್ಲಮಪ್ರಭು ಮತ್ತು ಎಡೆಯೂರು ಸಿದ್ಧಲಿಂಗೇಶ್ವರ, ಎಂಬ ಈ ಮೂರು ಮಹನೀಯರು ಸ್ಮರಣಾರ್ಹರು. ಆಚಾರ್ಯ ರೇವಣಸಿದ್ಧರ ವಿಷಯದಲ್ಲಿ ಕನ್ನಡ, ತೆಲಗು ಮರಾಠಿ ತಮಿಳು ಮತ್ತು ಸಂಸ್ಕೃತ ಭಾಷೆಗಳಲ್ಲಿ ಸಾಕಷ್ಟು ಸಾಹಿತ್ಯವಿದೆ. ಅಲ್ಲಮ ಪ್ರಭುಗಳು ಅನುಭವಮಂಟಪದ ಅಧ್ಯಕ್ಷರಾಗಿದ್ದು ಸ್ವಯಂ ವಚನಕಾರರಾಗಿದ್ದು ಕನ್ನಡ ಸಾಹಿತ್ಯದಲ್ಲಿ ಧ್ರುವ ನಕ್ಷತ್ರದಂತೆ ಇದ್ದಾರೆ. ಮೇಲೆ ಕಂಡ ಈ ಉಭಯತರೂ ೧೨ ನೆಯ ಶತಮಾನದ ಪೂರ್ವಾರ್ಧ ಮತ್ತು ಉತ್ತರಾರ್ಧಗಳಲ್ಲಿ ಭರತಖಂಡದ ಬಹುಭಾಗಗಳಲ್ಲಿ ಸಂಚರಿಸಿ ವೀರಶೈವ ಧರ್ಮ ಪ್ರಚಾರಕ್ಕೆ ನೆರವಾಗಿದ್ದಾರೆ. ಭಗವಾನ್ ಸಿದ್ಧಲಿಂಗೇಶ್ವರರು ೧೫ ನೆಯ ಶತಮಾನದಲ್ಲಿ ಪ್ರಸಿದ್ಧರಾಗಿದ್ದು ಶೂನ್ಯ ಸಿಂಹಾಸನನಾಧಿಪತಿಗಳಾಗಿದ್ದು ಧಾರ್ಮಿಕ ಪ್ರಪಂಚದಲ್ಲಿ ಉನ್ನತ ಸ್ಥಾನಗಳಿಸಿದ್ದಾರೆ. ಇವರು ಬರೆದಿರುವ 'ಷಟ್‌ಸ್ಥಲ ಜ್ಞಾನ ಸಾರಾಮೃತ' ಎಂಬ ಗ್ರಂಥವು ವೀರಶೈವ ದರ್ಶನಾಭಿಗಳಿಗೆ ಕೈಗನ್ನಡಿ ಎಂಬಂತಿದೆ.

ಶ್ರೀ ಸಿದ್ಧಲಿಂಗೇಶ್ವರರನ್ನು ಕುರಿತು ಸುಮಾರು ಕ್ರಿ.ಶ. ೧೫೬೦ ರಲ್ಲಿದ್ದ ಬಿನ್ನಾವರದ ರಾಜಗುರು ವಿರಕ್ತ ತೋಂಟದಾರ್ಯನು 'ಸಿದ್ಧೇಶ್ವರ ಮಹಾಪುರಾಣ'ವನ್ನೂ ಅದೇಕಾಲದ ಗುಬ್ಬಿಯ ಶಾಂತ್ಯಕ ಕವಿಯು 'ಸಿದ್ಧಲಿಂಗೇಶ್ವರ ಪುರಾಣ'ವನ್ನೂ ರಚಿಸಿದ್ದಾರೆ. ಆಧುನಿಕನಾದ 'ಹೇರಂಬ' ಎಂಬ ಕವಿಯು 'ಸಿದ್ಧಲಿಂಗೇಶ್ವರ ಸಾಂಗತ್ಯ' ಎಂಬ ಕಾವ್ಯವನ್ನೂ ಬರೆದಿದ್ದಾನೆ. (ಇವನ ಕಾಲ ಸು. ಕ್ರಿ. ಶ. ೧೭೦೦) ಇತ್ತೀಚೆಗೆ ಕವಿ ಚೆನ್ನವೀರೇಶ ಕೃತ 'ಷಟ್‌ಸ್ಥಲ ವಲ್ಲಭ' ಎಂಬ ಕನ್ನಡ ಚಂಪೂ ಗ್ರಂಥವು ಲಭಿಸಿದೆ. ಅದನ್ನು ಸಿದ್ಧಲಿಂಗೇಶ್ವರ ಪಂಚಮ ಶತಮಾನೋತ್ಸವ ಸಮಿತಿಯವರು ಪ್ರಕಟಿಸಲು ಸಿದ್ಧಗೊಳಿಸುತ್ತಿದ್ದಾರೆ. ಮಹಾಕವಿ ಷಡಕ್ಷರದೇವರು, ಕೈ. ಮಾಗಡಿ ವೀರಪ್ಪ ಶಾಸ್ತ್ರಿಗಳು ಈ ಮಹಾತ್ಮರನ್ನು ಕುರಿತು ಕನ್ನಡ ಸಂಸ್ಕೃತಗಳಲ್ಲಿ ಸುಂದರವಾದ ಸ್ತೋತ್ರಗಳನ್ನು ಬರೆದಿದ್ದಾರೆ. ಮಾಗಡಿ ವೀರಪ್ಪ ಶಾಸ್ತ್ರಿಗಳು ' ಸಿದ್ಧಲಿಂಗೇಶ್ವರ ಶತಕ ' ಎಂಬ ಒಂದು ಕೃತಿಯನ್ನು ರಚಿಸಿದ್ದಾರೆ.

ಈಗ ಹುಬ್ಬಳ್ಳಿಯಲ್ಲಿರುವ ವ್ಯಾಕರಣತೀರ್ಥ ಪಂಡಿತ ಬಸವರಾಜ ಶಾಸ್ತ್ರಿಗಳು 'ಸಿದ್ಧಲಿಂಗೇಶ್ವರ ವಿಜಯ' ಮಹಾಕಾವ್ಯವನ್ನು ಸಂಸ್ಕೃತದಲ್ಲಿ ರಚಿಸಿದ್ದಾರೆ. ಆ ಗ್ರಂಥದಲ್ಲಿ ಎರಡು ಸಾವಿರಕ್ಕೂ ಹೆಚ್ಚು ಸಂಸ್ಕೃತ ಶ್ಲೋಕಗಳಿವೆ ಎಂದು ತಿಳಿದು ಬಂದಿದೆ.

ಶಿದ್ಧಲಿಂಗೇಶ್ವರ ಶಿಷ್ಯ ಪರಂಪರೆಗೆ ಸೇರಿದ ಸ್ವತಂತ್ರ ಸಿದ್ಧಲಿಂಗೇಶ್ವರ, ಘನಲಿಂಗದೇವ ಗುಮ್ಮಳಾಪುರದ ಸಿದ್ಧಲಿಂಗ ಯತಿ, ಗೋಳೂರಿನ ಸಿದ್ಧವೀರಣ್ಣ ಮೊದಲಾದವರು ತಮ್ಮ ಪರಮ ಗುರುವಾದ ಸಿದ್ಧಲಿಂಗನನ್ನು ಕುರಿತು ಭಕ್ತಿಯಿಂದ ತಮ್ಮ ತಮ್ಮ ವಚನ ಗ್ರಂಥಗಳಲ್ಲಿ ಹಾಡಿಹರಸಿದ್ದಾರೆ.

ಸಿದ್ಧಲಿಂಗೇಶ್ವರರು ಕೇವಲ ಸಾಹಿತ್ಯ ಕ್ಷೇತ್ರದಲ್ಲಿಯಲ್ಲದೆ ಶಿಲಾಶಾಸನಗಳಲ್ಲಿಯೂ ಕೂಡ ಕಾಣಿಸಿಕೊಂಡಿದ್ದಾರೆ. ಎಡೆಯೂರು, ಕಗ್ಗೆರೆ, ಮತ್ತು ಚಿತ್ರದುರ್ಗ ಈ ಮೂರು ಸ್ಥಳಗಳಲ್ಲಿ ಸಿದ್ಧಲಿಂಗರನ್ನು ಕುರಿತಾದ ಶಾಸನಗಳಿವೆ. 'ಶಾಸನಗಳಲ್ಲಿ ಶಿವಶರಣರು' ಎಂಬ ಇತ್ತೀಚಿನ ಕೃತಿಯಲ್ಲಿ ಮತ್ತು ಶರಣ ಸಾಹಿತ್ಯ ಸಂಪುಟಗಳಲ್ಲಿ ಇವುಗಳ ಪರಿಚಯವನ್ನು ನಾವು ಮಾಡಿಕೊಳ್ಳಬಹುದು.

ಸಿದ್ಧಲಿಂಗೇಶ್ವರನ ಜನ್ಮಸ್ಥಳ ಮೈಸೂರು ಜಿಲ್ಲಾ ಚಾಮರಾಜ ನಗರ ತಾಲೂಕು ಹರಪನಹಳ್ಳಿ. ಇಲ್ಲಿ ಇವರು ವಾಸಿಸಿದ ಮಠ, ಜನಿಸಿದ ಸ್ಥಳ ಮೊದಲಾದವುಗಳನ್ನು ಈಗಲೂ ಜನರು ತೋರಿಸುತ್ತಾರೆ. ಸಿದ್ಧಲಿಂಗೇಶ್ವರರ ಗುರು ಪರಂಪರೆಯು ಉಜ್ವಲವಾದುದು. ಇವರು ಶೂನ್ಯಸಿಂಹಾಸನಾಧಿಪತಿಗಳು ಎಂಬ ಕಾರಣದಿಂದ ಸಮಾಜದಲ್ಲಿ ಉನ್ನತ ಸ್ಥಾನಗಳನ್ನು ಗಳಿಸಿದ್ದಾರೆ. 'ಷಟ್‌ಸ್ಥಲ ಜ್ಞಾನ ಸಾರಾಮೃತ' ದಲ್ಲಿ ಆ ಗುರು ಪರಂಪರೆಯನ್ನು ಹೀಗೆ ಹೇಳಲಾಗಿದೆ. ೧) ಅನಾದಿ ಗಣೇಶ್ವರ ೨) ಆದಿ ಗಣೇಶ್ವರ ೩) ನಿರ್ಮಾಂಕ ಗಣೇಶ್ವರ (ಮಾಹೇಶ್ವರ) ೪) ನಿರಂಜನ ಗಣೇಶ್ವರ ೫)ಜ್ಞಾನಾನಂದ ಗಣೇಶ್ವರ ೬)ಆತ್ಮ ಗಣೇಶ್ವರ ೭) ಆಧ್ಯಾತ್ಮ ಗಣೇಶ್ವರ ೮) ರುದ್ರಗಣೇಶ್ವರ ೯) ಬಸವ ಪ್ರಭುದೇವರು ೧೦) ಆದಿಲಿಂಗ ದೇವರು ೧೧) ಚನ್ನವೀರೇಶ್ವರ ದೇವರು ೧೨) ಗೋಸಲ ಸಿದ್ಧೇಶ್ವರ ೧೩) ಶಂಕರದೇವರು ೧೪) ದಿವ್ಯಲಿಂಗೇಶ್ವರ ೧೫) ಚನ್ನಬಸವೇಶ್ವರ ೧೬) ಸಿದ್ಧ ಲಿಂಗೇಶ್ವರರು. ಈ ಮೇಲೆ ಕಂಡಂತೆ ೧೬ ಹೆಸರುಗಳನ್ನು ಹೇಳಿದ್ದರೂ ಕಲ್ಯಾಣದ ಶೂನ್ಯ ಸಿಂಹಾಸನದ ಪರಂಪರೆಯಲ್ಲಿ ಮತ್ತೆ ಮೂರು ಹೆಸರುಗಳು ಸೇರುತ್ತವೆ. ೧) ಅಲ್ಲಮ ಪ್ರಭುದೇವರು ೨) ಚನ್ನಬಸವೇಶ್ವರರು ೩) ಸಿದ್ಧರಾಮೇಶ್ವರರು ಈ ಮೇಲೆ ಕಂಡ ಲೆಕ್ಕದಿಂದ ಸಿದ್ಧಲಿಂಗೇಶ್ವರರು ಶೂನ್ಯ ಸಿಂಹಾಸನದ ಪರಂಪರೆಯಲ್ಲಿ ೧೯ ನೆಯ ಪೀಠಾಧಿಪತಿಗಳೆನಿಸುತ್ತಾರೆ.

ಮಹಾಮಹಿಮರಾದ ಈ ಗುರುಪುಂಗವರು ಐಕ್ಯವಾದ ಸ್ಥಳಗಳು ಇಂದಿಗೂ ಸುಕ್ಷೇತ್ರಗಳೆಂದು ಪರಿಗಣಿಸಲ್ಪಟ್ಟಿವೆ. ಹಲವುಕಡೆ ವರ್ಷಕ್ಕೊಮ್ಮೆ ಜಾತ್ರೆಗಳಾಗುತ್ತವೆ, ಕುಲಜಾತಿ ಪಂಥಗಳಿಲ್ಲದೆ ಹಿಂದೂ ಸಮಾಜದ ಎಲ್ಲ ಜನರೂ ಈ ಕ್ಷೇತ್ರಗಳಿಗೆ ಬಂದು ಈ ಮಹಾತ್ಮರ ಸ್ಮಾರಕಗಳಿಗೆ ತಲೆಬಾಗುತ್ತಾರೆ. ಇವೆಲ್ಲವೂ ಜಾಗೃತ ಸ್ಥಾನಗಳೆಂದು ಪರಿಗಣಿಸಲ್ಪಟ್ಟಿವೆ.

ಅಲ್ಲಮ ಪ್ರಭುಗಳು ಶೂನ್ಯ ಸಿಂಹಾಸನದ ಮೊದಲನೆಯ ಅಧ್ಯಕ್ಷರು. ಅವರ ಹೆಸರಿನಲ್ಲಿ ಕನ್ನಡ, ತೆಲಗು, ತಮಿಳು ಮತ್ತು ಸಂಸ್ಕೃತ ಭಾಷೆಗಳಲ್ಲಿ ಪ್ರಾಚೀನ ಕವಿಗಳಿಂದ ಪುರಾಣಗಳು ರಚನೆಯಾಗಿವೆ. ಇವರ ವಚನಗಳು ಉಪನಿಷತ್ತಿನ ಮಂತ್ರಗಳಿಗೆ ಸಮಾನವೆನಿಸಿವೆ. ಇವರ ತತ್ವಜ್ಞಾನಕ್ಕೆ ಶೂನ್ಯಸಂಪಾದನೆಯು ಕೈಗನ್ನಡಿಯಂತಿದೆ. ಇವರ ವಚನಗಳು ಮಗ್ಗೆಮಾಯಿದೇವರಿಂದ ಸಂಸ್ಕೃತಕ್ಕೆ 'ಪ್ರಭುಗೀತೆ' ಎಂದು ಭಾಷಾಂತರವಾಗಿವೆ.

ಶ್ರೀ ಚನ್ನಬಸವೇಶ್ವರರು ಬಸವಣ್ಣನವರ ಸೋದರಳಿಯ. ಅಕ್ಕ ನಾಗಮ್ಮ ಶಿವಸ್ವಾಮಿಯರ ಸುಪುತ್ರ. ಇವರ ಸಮಾಧಿ ಕಾರವಾರ ಜಿಲ್ಲಾ ಉಳವಿಯೆಂಬ ಕ್ಷೇತ್ರದಲ್ಲಿದೆ. ಇವರನ್ನು ಕುರಿತು ಪೂರ್ವದ ಕವಿಗಳಿಂದ ಕನ್ನಡ ತೆಲಗು, ಮತ್ತು ಸಂಸ್ಕೃತ ಭಾಷೆಗಳಲ್ಲಿ ಪುರಾಣಗಳು ರಚನೆಯಾಗಿವೆ. ಪ್ರತಿ ವರ್ಷ ಫಾಲ್ಗುಣ ಮಾಸದಲ್ಲಿ ಉಳವಿಯಲ್ಲಿ ಇವರ ಹೆಸರಿನ ಜಾತ್ರೆಯಾಗುತ್ತದೆ,

ಶೂನ್ಯ ಸಿಂಹಾಸನದ ಮೂರನೆಯ ಗುರು ಸಿದ್ಧರಾಮೇಶ್ವರರ ಶಿವ ಸಮಾಧಿಯು ಸೊಲ್ಲಾಪುರದಲ್ಲಿ ಅವರು ಕಟ್ಟಿದ ಕೆರೆಯ ಮಧ್ಯಭಾಗದಲ್ಲಿದೆ. ವರ್ಷಕ್ಕೊಮ್ಮೆ ಮಕರ ಸಂಕ್ರಾಂತಿಯಲ್ಲಿ ಜಾತ್ರೆಯಾಗುತ್ತದೆ. ಈತನು ಪ್ರಸಿದ್ಧ ವಚನಕಾರನು. ಹಲವಾರು ಶಿಲಾಶಾಸನಗಳಲ್ಲಿ ಈತನ ವಚನಗಳ ಉಲ್ಲೇಖವಿದೆ. ರಾಘವಾಂಕನ ಸಿದ್ಧರಾಮ ಪುರಾಣವು ಈತನ ಕೀರ್ತಿಗೆ ಸುವರ್ಣ ಕಲಶವಾಗಿದೆ. ಇಲ್ಲಿಂದ ಮುಂದೆ ಸಿದ್ಧ-ಲಿಂಗೇಶ್ವರರು ತಮ್ಮ ಗುರುಪರಂಪರೆಯನ್ನು ಹೇಳಿದ್ದಾರೆ. ಅಲ್ಲಿಯ ಪ್ರಭುಗಳಿಂದ ತಮ್ಮ ಪರಂಪರೆಯನ್ನು ಏತಕ್ಕಾಗಿ ಹೇಳಿಲ್ಲವೆಂಬುದು ಒಂದು ಸಮಸ್ಯೆಯಾಗಿದೆ.

ಅನಾದಿ ಗಣೇಶ್ವರ ಮತ್ತು ಆದಿ ಗಣೇಶ್ವರ ಇವರ ಚರಿತ್ರೆ ತಿಳಿದುಬಂದಿಲ್ಲ. ನಿರಂಜನ ವಂಶ ರತ್ನಾಕರದಲ್ಲಿ ಈ ಹೆಸರುಗಳಿಲ್ಲ, ಇವರ ಮುಂದೆ ನಿರ್ಮಾಯ ಗಣೇಶ್ವರರು. ಈ ಮಹಾತ್ಮನ ಜನಪ್ರಿಯ ಹೆಸರು ಮಾಹೇಶ್ವರ ಎಂದು. ಮೈಸೂರು ಜಿಲ್ಲಾ ಕೊಳ್ಳೇಗಾಲ ತಾಲೂಕು ಮಾಹೇಶ್ವರ ಬೆಟ್ಟದಲ್ಲಿ ಇವರ ಶಿವ ಸಮಾಧಿಯಿದೆ, ವರ್ಷಕ್ಕೆ ನಾಲ್ಕು ಸಲ ಜಾತ್ರೆಗಳಾಗುತ್ತವೆ. ಇವರ ಬಗ್ಗೆ ಜನಪದ ಸಾಹಿತ್ಯ ವಿಪುಲ-ವಾಗಿ ರಚನೆಯಾಗಿದೆ, ಗುರುಸಿದ್ಧ ಕವಿಯ 'ಮಾಹೇಶ್ವರ ಸಾಂಗತ್ಯ' ಮತ್ತು ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳಿಂದ ರಚಿತವಾಗಿರುವ 'ಮಾಹೇಶ್ವರ ಚರಿತ್ರೆ' ಹೈದರಾಲಿಯ ಶಾಸನಗಳಿಂದ ಇವರ ವಿಷಯ ತಿಳಿಯುತ್ತದೆ. ಇವರ ಅನಂತರ ನಿರಂಜನ ಗಣೇಶ್ವರರು. ಇವರು ಕಲ್ಯಾಣದ ಬಿಲ್ವವನದಲ್ಲಿ ಘನಲಿಂಗಿ ರುದ್ರಮುನಿಸ್ವಾಮಿಗಳ ಗವಿಯ ಸನಿಯದಲ್ಲಿ ಸಮಾಧಿಯಾಗಿದ್ದಾರೆ. ಮುಂದಿನ ಜ್ಞಾನಾನಂದ ಸ್ವಾಮಿಗಳು ಶ್ರೀಶೈಲದ ಪ್ರಭುದೇವರ ಮಠದಲ್ಲಿ ಐಕ್ಯರಾಗಿರುತ್ತಾರೆ. ಆಮೇಲೆ ಆತ್ಮ ಗಣೇಶ್ವರರು ಶ್ರೀಶೈಲದ ಕದಳೀ ವನಕ್ಕೆ ಹೋಗಿ ಬಯಲಾಗಿದ್ದಾರೆ. ಅನಂತರ ಆಧ್ಯಾತ್ಮ ಗಣೇಶ್ವರರು ತಮಿಳುನಾಡಿನ ತಿರುವಣ್ಣಾ ಮಲಯ ಕೆಂಗನಮಃ ಶಿವಾಯ ಎಂಬ ಗವಿಯಲ್ಲಿ ಸಮಾಧಿಸ್ಥರಾಗಿದ್ದಾರೆ. ರುದ್ರಮುನಿ ಸ್ವಾಮಿಗಳು ಚಿತ್ರದುರ್ಗ ಜಿಲ್ಲಾ ನಾಯಕನ ಹಟ್ಟಿಯಲ್ಲಿ

ಸಮಾಧಿಸ್ಥರಾಗಿದ್ದಾರೆ. 'ಶಿಪ್ಪೆರುದ್ರ ಸ್ವಾಮಿಗಳು' ಎಂಬ ಹೆಸರಿನಿಂದ ಇವರ ಕ್ಷೇತ್ರ ಪ್ರಸಿದ್ಧವಾಗಿದೆ. ವರ್ಷಕ್ಕೊಮ್ಮೆ ಜಾತ್ರೆಯಾಗುತ್ತದೆ. ಅನಂತರ ಬಸವ ಪ್ರಭು ಸ್ವಾಮಿಗಳು ವಿಜಾಪುರ ಜಿಲ್ಲಾ ತೇರದಾಳ ಕ್ಷೇತ್ರದಲ್ಲಿ ಐಕ್ಯರಾಗಿದ್ದಾರೆ. ಅಲ್ಲಿ ಇವರ ಗದ್ದಿಗೆ ಇಂದಿಗೂ ವೈಭವದಿಂದ ಮೆರೆಯುತ್ತದೆ. ಆ ಮೇಲೆ ಆದಿಲಿಂಗ ಸ್ವಾಮಿಗಳು ಮುರುಗೋಡು ನಾಡಿನ ಕಲ್ಲೂರಿನಲ್ಲಿ ಐಕ್ಯರಾಗಿರುತ್ತಾರೆ. ಅನಂತರ ಚೆನ್ನವೀರ ಸ್ವಾಮಿಗಳ ಸಮಾಧಿಯು ಮೂನಿಪಲ್ಲಿಯ(?) ಪಂಚಲಿಂಗೇಶ್ವರ ದೇವಾಲಯದಲ್ಲಿ ರುತ್ತದೆ. ಆ ಮೇಲೆ ಗೋಸಲ ಸಿದ್ಧೇಶ್ವರರು ತುಮಕೂರು ಪಕ್ಕದ ಸಿದ್ಧಗಂಗೆಯಲ್ಲಿ ಪವಾಡಗಳನ್ನು ಮೆರೆದು ಆ ಬೆಟ್ಟದ ಗವಿಯಲ್ಲಿ ಸಮಾಧಿಸ್ಥರಾಗಿದ್ದಾರೆ. ಅಲ್ಲಿ ವರ್ಷಕ್ಕೊಮ್ಮೆ ವೈಭವದಿಂದ ಶಿವರಾತ್ರಿಯಲ್ಲಿ ಜಾತ್ರೆಯಾಗುತ್ತದೆ. ಅನಂತರ ಶಂಕರಾ ಚಾರ್ಯ ಸ್ವಾಮಿಗಳು ತುಮಕೂರು ಜಿಲ್ಲಾ ಸಿದ್ಧರ ಬೆಟ್ಟದಲ್ಲಿ ಐಕ್ಯರಾಗಿರುತ್ತಾರೆ. ಈ ಬೆಟ್ಟವು ಗಿಡಮೂಲಿಕೆಗಳಿಗೆ ಪ್ರಸಿದ್ಧವಾಗಿದೆ. ಅನಂತರ ದಿವ್ಯಲಿಂಗೇಶ್ವರ ಸ್ವಾಮಿಗಳು ಹರದನಹಳ್ಳಿಯಲ್ಲಿಯೇ ಸಮಾಧಿಸ್ಥರಾದರು. ಆಮೇಲೆ ಚೆನ್ನಬಸವೇಶ್ವರರು ಗುಬ್ಬಿಯಲ್ಲಿ ಸಮಾಧಿಸ್ಥರಾಗಿದ್ದಾರೆ. ಅಲ್ಲಿ ಅವರ ಭವ್ಯ ದೇವಾಲಯವಿದೆ. ವರ್ಷಕ್ಕೊಮ್ಮೆ ಜಾತ್ರೆಯು ನಡೆಯುತ್ತಿದೆ. ಈ ಸುಪ್ರಸಿದ್ಧ ಗೋಸಲ ಚೆನ್ನಬಸವೇಶ್ವರರೇ ಈಗ ಗುಬ್ಬಿ ಚೆನ್ನಬಸವೇಶ್ವರರೆಂದು ಪ್ರಸಿದ್ಧರಾಗಿದ್ದಾರೆ. "ಚೆನ್ನಬಸವೇಶ್ವರ ದೇವರ ಕರಕಮಲದಲ್ಲಿ ಉತ್ಪತ್ತಿಯಾದ ಸಿದ್ಧಲಿಂಗ ನಾಗಯ್ಯ" ಎಂಬ ಷಟಸ್ಥಲ ಜ್ಞಾನ ಸಾರಾಮೃತದ ವಚನಾನುಸಾರವಾಗಿ (ಪುಟ್ಟ ಧಾರವಾಡದ ಪ್ರತಿ) ಈ ಚೆನ್ನಬಸವೇಶ್ವರರ ಶಿಷ್ಯರೇ ಸಿದ್ಧಲಿಂಗೇಶ್ವರರೆನಿಸಿಕೊಂಡಿದ್ದಾರೆ.

ಶ್ರೀ ಸಿದ್ಧಲಿಂಗೇಶ್ವರರು, ಮೈಸೂರು ಜಿಲ್ಲಾ ಹರದನಹಳ್ಳಿಯಲ್ಲಿ ಜನಿಸಿದರೆಂದು ಈಗಾಗಲೇ ಹೇಳಿದೆ. ಇವರ ಗುರು ಗೋಸಲ ಶ್ರೀ ಚೆನ್ನಬಸವೇಶ್ವರ ಎಂಬುದನ್ನು ಸ್ಪಷ್ಟಪಡಿಸಿದೆ. ಇವರು ಅಯೋನಿಜರೆಂದೂ ಎಂಟು ವರ್ಷದ ಶಿಶುವಾಗಿ ಬಂದು ಗುರು ಚೆನ್ನಬಸವೇಶ್ವರರಿಗೆ ಲಭಿಸಿದರೆಂದೂ 'ಸಿದ್ಧೇಶ್ವರ ಮಹಾಪುರಾಣ'ದಲ್ಲಿ ಹೇಳಿದೆ (ಸಿದ್ಧೇಶ್ವರ ಮಹಾಪುರಾಣ ಸಂಧಿ. ೨) ಆದರೆ ಆಧುನಿಕನಾದ ಹೇರಂಬ ಕವಿಯು ಇವರ ತಂದೆತಾಯಿಗಳ ಹೆಸರನ್ನು ಹೇಳಿ ಚರಿತ್ರೆಕಾರರಿಗೆ ಬೆಳಕು ತೋರಿದ್ದಾರೆ. ಇವರ ತಂದೆಯ ಹೆಸರು ಮಲ್ಲಿಕಾರ್ಜುನ ಎಂದೂ ತಾಯಿ ಜ್ಞಾನಾಂಗನೆಯೆಂದೂ ಕವಿ ಹೇಳಿದ್ದಾನೆ. ಸೀತಾದೇವಿಯು ಭೂಮಿಯಲ್ಲಿ ಹುಟ್ಟಿದಳು, ದ್ರೌಪದಿಯು ಬೆಂಕಿಯಲ್ಲಿ ಹುಟ್ಟಿದಳು, ನರಸಿಂಹನು ಕಂಬದಲ್ಲಿ ಜನಿಸಿದನು, ಎಂಬ ಪುರಾಣೋಕ್ತಿಗಳಂತೆ ವೀರ ಶೈವ ಗ್ರಂಥಗಳಲ್ಲಿಯೂ ಕೂಡಾ ರೇಣುಕಾದಿ ಪಂಚಾಚಾರ್ಯರು ಲಿಂಗೋದ್ಭವರೆಂದು ಹೇಳುವ ಸಂಪ್ರದಾಯವಿದೆ. ಈ ಅಯೋನಿಜತ್ವದ ಕಲ್ಪನೆ ಕೇವಲ ಪವಿತ್ರಭಾವನೆ ಎಂದು ಅರ್ಥ ಮಾಡಬಹುದು. ವಿಜ್ಞಾನ ಯುಗಕ್ಕೆ ಇದು ಸಮ್ಮತವಲ್ಲ. ಸಿದ್ಧ-ಲಿಂಗೇಶ್ವರರ ಸಾಂಗತ್ಯ (ಸಂಧಿ ೪, ಪದ್ಯ-೩೪) ಸಿದ್ಧಲಿಂಗೇಶ್ವರರು ಕರ್ನಾಟಕ, ತಮಿಳು ನಾಡು, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶಗಳಲ್ಲಿ ಸಂಚರಿಸಿ ಧರ್ಮ ಪ್ರಚಾರ

ಮಾಡಿದಂತೆ ಹೇಳಿದೆ. ಇವರ ಸಂಗಡ ನೂರೊಂದು ಮಂದಿ ವಿರಕ್ತರು ಸಂಚರಿಸಿದಂತೆ ತಿಳಿದು ಬಂದಿದೆ. ಇವರ ಅಸಂಖ್ಯಾತ ಶಿಷ್ಯರುಗಳ ಹೆಸರಿನಲ್ಲಿ ಕೆಲವರ ಹೆಸರುಗಳನ್ನು ಸಿದ್ಧೇಶ್ವರ ಪುರಾಣ ಮತ್ತು ಎಡೆಯೂರಿನ ಶಿಲಾಶಾಸನಗಳಲ್ಲಿ ಹೇಳಿದೆ. ಇವರ ಪ್ರಭಾವ ಮೊದಲಾದವುಗಳನ್ನು ಕುರಿತು 'ಚೆನ್ನಬಸವೇಶ್ವರ ಪುರಾಣ' ಮೊದಲಾದ ಗ್ರಂಥಗಳಲ್ಲಿಯೂ ಹೇಳಿದೆ. ಸುತ್ತೂರಿನ ವಚನಕಾರನಾದ ಘನಲಿಂಗದೇವರು ತನ್ನ ಒಂದು ವಚನದಲ್ಲಿ

> " ಎನ್ನ ಗುರುವಿನ ಗುರು ಪರಮಗುರು ಪರಮಾರಾಧ್ಯ
> ತೋಂಟದಾರ್ಯರಿಗೆ ಗುರುಭಕ್ತಿಯುತ ಎನ್ನ ಶರಣು ಮಾಡಿದರು
> ಆ ತೋಂಟದಾರ್ಯರು ತಮ್ಮ ಕೃಪೆಯೆಂಬ ತೊಟ್ಟಿಲೊಳಗೆ ಎನ್ನ
> ಮಲಗಿಸಿ ಪ್ರಮಥಗಣಗಳ ವಚನ ಸ್ವರೂಪಾರ್ಥವೆಂಬ
> ಹಾಲು ತುಪ್ಪವನುಂ ಸದಾ ತಣಿಯುತಿರಲೆಂದು ಅಕ್ಕರಿಂದ ಸಂರಕ್ಷಣಮಂ
> ಮಾಡಿ ಘನಲಿಂಗಿಯೆಂಬ ನಾಮಕರಣಮಂ ಕೊಟ್ಟು ಪ್ರಾಯ
> ಸಮರ್ಥೆಯುಂ ಮಾಡಿ ಸತ್ಯ ಸದಾಚಾರ ಜ್ಞಾನ ಕ್ರಿಯೆಗಳೆಂಬ
> ವಿದ್ಯಾಭರಣಗಳಂ ತೊಡಿಸಿ, ಅರುಪೆಂಬ ಬಣ್ಣವ ನಿರಿನಿಡಿದೂಸಿ
> ಅರ್ತಿಯ ಮಾಡುತಿರ್ಪ ಸಮಯದಲ್ಲಿ..............

ಎಂಬ ವಚನದಲ್ಲಿ ಗುರುಸಿದ್ಧಲಿಂಗರ ಬಗೆಗೆ ತಮ್ಮ ಭಕ್ತಿಯನ್ನು ವ್ಯಕ್ತಪಡಿಸಿದ್ದಾರೆ. (ಘನಲಿಂಗಿದೇವರ ವಚನ ಪುಟ ೩, ಶರಣಸಾಹಿತ್ಯ ಗ್ರಂಥ ಮಾಲೆ)

ಶ್ರೀ ಸಿದ್ಧಲಿಂಗೇಶ್ವರರು ತುಮಕೂರು ಜಿಲ್ಲಾ ಕಗ್ಗೆರೆಯ ನಾಗಿಣೀ ನದಿಯ ತೀರದ ಹೂವಿನ ತೋಟದಲ್ಲಿ ಬಹಳ ಕಾಲ ತಪಸ್ಸು ಮಾಡಿದುದರಿಂದ ಇವರಿಗೆ ತೋಂಟದಾರ್ಯ ಎಂಬ ಹೆಸರು ಪ್ರಸಿದ್ಧವಾಗಿದೆ. ತುಮಕೂರು ಜಿಲ್ಲಾ ಮಧುಗಿರಿಯ ಪಕ್ಕದಲ್ಲಿರುವ ಸಿದ್ದಾಪುರವು ಇವರ ಶುಭ ನಾಮದಲ್ಲಿ ಕಟ್ಟಿದ ಊರೆಂದು ಮಧುಗಿರಿಯ ಚರಿತ್ರೆಯಲ್ಲಿ ಹೇಳಿದೆ. (ಪುಟ ೧೮)

ತುಮಕೂರು, ಕಗ್ಗೆರೆ ಎಡೆಯೂರುಗಳಲ್ಲಿ ಇವರ ಹೆಸರಿನಲ್ಲಿ ಭವ್ಯವಾದ ದೇವಾಲಯಗಳಿವೆ. ಬೆಂಗಳೂರು ಸುಂಕೇನಹಳ್ಳಿ, ಮಠದಲ್ಲಿ ಸಿದ್ಧಲಿಂಗೇಶ್ವರರ ವಿಗ್ರಹವಿದೆ. ಎಡೆಯೂರಿನ ಇಂದಿನ ದೇವಾಲಯವೇ ಇವರು ಶಿವಸಮಾಧಿಯನ್ನು ಹೊಂದಿದ ಸ್ಥಳವೆಂದು ಆ ದೇವಾಲಯದಲ್ಲಿರುವ ಶಿಲಾಶಾಸನದಿಂದ ತಿಳಿಯಬಹುದಾಗಿದೆ. ಈ ದೇವಾಲಯವನ್ನು 'ಚಟ್ಟಿಗ ದೇವರು' ಎಂಬ ಶ್ರೀ ಸಿದ್ಧಲಿಂಗರ ಶಿಷ್ಯರೊಬ್ಬರು ಕಟ್ಟಿಸಿದರೆಂದು ಆ ಶಾಸನದಲ್ಲಿ ಹೇಳಲಾಗಿದೆ. (ಎ. ಕ. XII Kunigal 49)

ಕನ್ನಡ ಕವಿ ಚರಿತ್ರೆಕಾರರು ಶ್ರೀ ಸಿದ್ಧಲಿಂಗೇಶ್ವರರು ವಿಜಯನಗರ ವಿರುಪಾಕ್ಷನ ಕಾಲದಲ್ಲಿ ಇದ್ದಂತೆ ನಿರ್ಧರಿಸಿದ್ದಾರೆ. (೧೪೬೭–೧೪೭೮) (ಕವಿ ಚರಿತ್ರೆ ಭಾಗ ೨, ಪುಟ ೯೮) ಅವರ ಈ ನಿರ್ಧಾರಕ್ಕೆ ಚನ್ನಬಸವ ಪುರಾಣವು ಸಮರ್ಥನೆಯನ್ನು ಕೊಡುತ್ತದೆ. ಸಿದ್ಧಲಿಂಗೇಶ್ವರರ ಶಿಷ್ಯರಲ್ಲಿ ಕಂಬಳಿದೇವ,ಸಿದ್ಧನಂಜೇಶ,ಚನ್ನದೇವರು, ಗುಮ್ಮಳಾಪುರದ

ಸಿದ್ಧಲಿಂಗಯತಿ, ಸಿದ್ಧ ವೀರಣ್ಣೊಡೆಯ, ಘನಲಿಂಗಿದೇವ, ಲಂಬಕರ್ಣ ದೇವರು, ಶಾಂತ ಮಲ್ಲಿಕಾರ್ಜುನ, ಸಪ್ಪೆಯಾರ್ಯ, ಶಿವಪೂಜೆಯಾರ್ಯ (ಬೋಳಿ ಬಸವೇಶ್ವರ) ಸ್ವತಂತ್ರ ಸಿದ್ಧಲಿಂಗೇಶ್ವರ, ಮೊದಲಾದವರು ಮುಖ್ಯರಾಗಿದ್ದಾರೆ. ಈ ಹೆಸರುಗಳನ್ನು ಚೆನ್ನಬಸವ ಪುರಾಣ, ಸಿದ್ಧೇಶ್ವರ ಪುರಾಣ ಮತ್ತು ಎಡೆಯೂರಿನ ಶಾಸನಗಳಲ್ಲಿಯೂ ಕಾಣಬಹುದು.

ಸಿದ್ಧಲಿಂಗೇಶ್ವರನು ಅನಾದಿ ಜಂಗಮದ ಅವತಾರ. ನಿರಂಜನ ಗಣೇಶ್ವರನ ಅವತಾರ ಎಂಬ ಮಾತನ್ನು ಕೂಡಾ ಎಡೆಯೂರು ಶಿಲಾಶಾಸನದಲ್ಲಿ ಹೇಳಲಾಗಿದೆ. ಕವಿ ಚರಿತ್ರೆಕಾರರು ಈತನ ಕಾಲವು ಸು. ಕ್ರಿ. ಶ. ೧೪೭೦ ಎಂದು ಹೇಳಿದ್ದಾರೆ. 'ಚೆನ್ನಬಸವ ಪುರಾಣ'ದಲ್ಲಿ ಈತನು ಏಳನೂರು ಗಣಂಗಳನ್ನು ಕೂಡಿಕೊಂಡು ಭೂಮಿಯಲ್ಲಿ ಸಂಚರಿಸಿ ಷಟ್‌ಸ್ಥಲವನ್ನು ಉದ್ಧರಿಸಿದನು ಎಂದು ಹೇಳಿದೆ. ಈತನ "ಷಟಸ್ಥಲ ಜ್ಞಾನ ಸಾರಾಮೃತ"ದಲ್ಲಿ ೭೦೧ ವಚನಗಳಿವೆ. ೭ ವೃತ್ತಗಳಿವೆ. "ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ" ಎಂಬುದು ಈತನ ಅಂಕಿತ, ಈತನ ವಚನಗಳಲ್ಲಿ ಷಟ್‌ಸ್ಥಲ ತತ್ತ್ವಗಳು ಅತ್ಯಂತ ಸೂಕ್ಷ್ಮ ರೀತಿಯಿಂದ ವಿವರಿಸಲ್ಪಟ್ಟಿವೆ.

ಶ್ರೀ ಸಿದ್ಧಲಿಂಗೇಶ್ವರನ ಕ್ಷೇತ್ರಗಳು ಕರ್ನಾಟಕದ ಬಹುಭಾಗದಲ್ಲಿ ನೆಲಸಿವೆ. ಈತನನ್ನು 'ಸಿದ್ಧೇಶ್ವರ' ಎಂದು ಕರೆಯುವದು ಜನರಲ್ಲಿ ವಾಡಿಕೆಯಾಗಿದೆ. ಹರದನಹಳ್ಳಿಯಲ್ಲಿ ಈತನು ಹುಟ್ಟಿ ಬೆಳೆದ ಮಠವಿದೆ. ಸುತ್ತೂರ ವೀರ ಸಿಂಹಾಸನ ಮಠದಲ್ಲಿ ಶಿಷ್ಯ ಘನಲಿಂಗಿಯನ್ನು ಅನುಗ್ರಹಿಸುತ್ತ ಕೆಲವು ಕಾಲ ಇವರು ಇದ್ದಂತೆ ತಿಳಿದು ಬಂದಿದೆ. ಅಲ್ಲಿಂದ ಮುಂದೆ ಎಡೆಯೂರಿಗೆ ಹೋಗಿ ಅಲ್ಲಿ ಸಮಾಧಿಸ್ಥರಾದರು. ಈತನು ತುಮಕೂರಿನಲ್ಲಿ ಕೆಲಕಾಲ ನೆಲಸಿ ತುಂಬೆಯ ಹೂವಿನ ಮಳೆಯನ್ನು ಕರೆಸಿದ ಸ್ಥಳದಲ್ಲಿಯೇ ಈಗ ಸಿದ್ಧಲಿಂಗೇಶ್ವರ ದೇವಾಲಯವನ್ನು ಕಟ್ಟಿದ್ದಾರೆ. ಅನಂತರ ಗೂಳೂರು, ಹೆಬ್ಬೂರು, ನಾಗವಲ್ಲಿ, ಹೇರೂರು, ಹುಲಿಯೂರು ದುರ್ಗ ಮೊದಲಾದ ಕಡೆ ಪವಾಡಗಳನ್ನು ಮೆರೆದು ಕಡೆಗೆ ಕೆಗ್ಗೆರೆಯ ಕ್ಷೇತ್ರದಲ್ಲಿ ನಂಬಿಯಣ್ಣನೆಂಬ ಭಕ್ತನ ಸಲುವಾಗಿ ಕೆಲವು ಕಾಲ ತಪಸ್ಸು ಮಾಡಿದಂತೆ ಹೇಳಲಾಗಿದೆ. ಇವರು ಲಿಂಗಪೂಜೆಯ ನಿಮಿತ್ತ ಕುಳಿತ ಮೇಲೆ ಇವರ ಸುತ್ತ ಮೈಮೇಲೆ ಹುತ್ತ ಬೆಳೆದಂತೆ ಹೇಳಲಾಗಿದೆ. ಈ ಪವಾಡವನ್ನು ಕುರಿತು ' ಚೆನ್ನಬಸವ ಪುರಾಣ ' ' ಸಿದ್ಧೇಶ್ವರ ಪುರಾಣ 'ದಲ್ಲಿಯೂ ಬರೆಯಲಾಗಿದೆ.

ಶ್ರೀ ಸಿದ್ಧಲಿಂಗೇಶ್ವರರು ಎಡೆಯೂರಿನಲ್ಲಿ ಸಮಾಧಿಯಾಗುವ ಮೊದಲು ತನ್ನ ಶಿಷ್ಯನಾದ ನಿರಕ್ಷರ ಬೋಳಿ ಬಸವೇಶ್ವರನಿಗೆ ಷಟ್‌ಸ್ಥಲೋಪದೇಶ ಮಾಡಿದರೆಂದು ಸಿದ್ಧೇಶ್ವರ ಪುರಾಣದಲ್ಲಿ ಹೇಳಿದೆ. ಈ ಪ್ರಕರಣವು ಸಿದ್ಧೇಶ್ವರ ಮಹಾ ಪುರಾಣದ ಕಡೆಯಲ್ಲಿ ಸಂಧಿ ೨೨, ೨೩, ೨೪ ಮತ್ತು ೨೫ ರಲ್ಲಿ ವಿಸ್ತಾರವಾಗಿ ನಿರೂಪಿತವಾಗಿದೆ. ಈತನ ಪವಾಡಗಳನ್ನು ಕುರಿತು ವಿರಕ್ತ ತೋಂಟದಾರ್ಯನು ಬಹಳವಾಗಿ ಬಣ್ಣಿಸಿದ್ದಾನೆ. ಹೇರಂಬ ಕವಿಯು ಸಾಂಗತ್ಯದಲ್ಲಿಯೂ ಕ್ರಿ. ಶ. ೧೬೩೦ರಲ್ಲಿ ಬೆಳಗಾವಿ ಜಿಲ್ಲೆಯ ಹೂಲಿಯಲ್ಲಿದ್ದ ಸಿದ್ಧನಂಜೇಶನೆಂಬ ಕವಿಯು 'ರಾಘವಾಂಕನ ಚರಿತ್ರ' ಮತ್ತು 'ಗುರುರಾಜ ಚರಿತ್ರ' ಎಂಬ ಗ್ರಂಥಗಳ ಜೊತೆಗೆ 'ಭಾವ ರತ್ನಾಭರಣ' ಎಂಬ ಒಂದು ಕೃತಿಯನ್ನು

ಶ್ರೀ ಸಿದ್ಧಲಿಂಗೇಶ್ವರರನ್ನು ಕುರಿತು ಬರೆದಂತೆ ತಿಳಿದು ಬರುತ್ತದೆ. (ಕರ್ನಾಟಕ ಕವಿ ಚರಿತ್ರೆ ಭಾಗ ೨ ಪುಟ ೩೭೯) ಕ್ರಿ. ಶ ೧೬೦೦ರಲ್ಲಿದ್ದ ಸೋಮಶೇಖರ ಶಿವಯೋಗಿ ಎಂಬಾತನು 'ಷಟ್‌ಸ್ಥಲ ಜ್ಞಾನ ಸಾರಾಮೃತ'ಕ್ಕೆ ವಿಸ್ತಾರವಾದ ಟೀಕೆಯನ್ನು ಬರೆದಿದ್ದಾರೆ. ಬೆಂಗಳೂರಿನ ಬಳಾಪೂರ ಪೇಟೆಯ ಕೈ. ಶಿವಪ್ಪ ಶಾಸ್ತ್ರಿಗಳು 'ಸಿದ್ಧಲಿಂಗೇಶ ವಿಜಯ' ಎಂಬ ಒಂದು ಸುಪ್ರೌಢ ಗದ್ಯ ಗ್ರಂಥವನ್ನು ವಿದ್ವತ್‌ಪೂರ್ಣವಾಗಿ ರಚಿಸಿದ್ದಾರೆ. ಇದು ವಿರಕ್ತ ತೋಂಟದಾರ್ಯನ ಗ್ರಂಥದ ಸಾರಸರ್ವಸ್ವವಾಗಿದೆ. ಎಡೆಯೂರಿನಲ್ಲಿ ಚಟ್ಟಿಗ ದೇವರು ಮಠವನ್ನು ಕಟ್ಟಿಸಿದ ವಿಷಯವನ್ನು ಹೇರಂಬ ಕವಿಯ ಸಾಂಗತ್ಯದಲ್ಲಿಯೂ ಹೇಳಲಾಗಿದೆ.

"ಷಟ್‌ಸ್ಥಲ ಜ್ಞಾನ ಸಾರಾಮೃತ"ದಲ್ಲಿ ಮಂಗಳವಾಡದೊಳಗಿರ್ದ ಬಸವಾದಿ ಪ್ರಥಮಗಣ ಎಂಬ ವಚನದಲ್ಲಿ ಕಲ್ಯಾಣವನ್ನು ಮಂಗಳವಾಡವೆಂದು ಹೇಳಲಾಗಿದೆ. ಪಾಲ್ಕುರಿಕೆ ಸೋಮನಾಥನೇ ಮೊದಲಾದವರು ಚಾಲುಕ್ಯರ ರಾಜಧಾನಿಯಾದ ಕಲ್ಯಾಣ ಕಲಚೂರಿಯರ ರಾಜಧಾನಿಯಾದ 'ಮಂಗಳವಾಡ' ಇವುಗಳನ್ನು ಒಂದೇ ಪಟ್ಟಣವೆಂದು ತಿಳಿದಂತೆ ತೋರುತ್ತದೆ. ಕಲ್ಯಾಣವು ಈಗ ಬೀದರ ಜಿಲ್ಲೆಯಲ್ಲಿಯೂ ಮಂಗಳವಾಡವು ಸೋಲಾಪುರ ಜಿಲ್ಲೆಯಲ್ಲಿಯೂ ಇವೆ. ಬಸವಣ್ಣನವರು ಕೂಡಲ ಸಂಗಮದಿಂದ ಮಾಂಡಲಿಕ ಬಿಜ್ಜಳನಿದ್ದ ಮಂಗಳವಾಡಕ್ಕೆ ಬಂದುದೆ ಹರಿಹರನ "ಬಸವರಾಜ ದೇವರ ರಗಳೆ"ಯಲ್ಲಿ ಹೇಳಿದೆ. (ಬಸವರಾಜ ದೇವರ ರಗಳೆ ಪುಟ ೨೧) ಅನೇಕ ವೀರಶೈವ ಪುರಾಣಕಾರರು ಮತ್ತು ಲೇಖಕರು ಮಂಗಳವಾಡ ಮತ್ತು ಕಲ್ಯಾಣವನ್ನು ಒಂದೇ ಎಂದು ತಿಳಿದಿರುವುದನ್ನು ನಾವು ಈಗಲೂ ನೋಡಬಹುದಾಗಿದೆ. ಇದು ನಿಜಕ್ಕೂ ಆಶ್ಚರ್ಯಕರ ಸಂಗತಿ. ಕಲಚೂರಿಯ ಬಿಜ್ಜಳನು ಮೊದಲು ಮಂಗಳವಾಡದಲ್ಲಿ ಮಾಂಡಲಿಕನಾಗಿದ್ದು ಆನಂತರ ಸುಮಾರು ೧೧೬೨ ರಲ್ಲಿ ಕಲ್ಯಾಣದ ಚಾಲುಕ್ಯ ಸಿಂಹನನ್ನು ಹಿಡಿದು ಚಕ್ರವರ್ತಿಯೆಂದು ಘೋಷಿಸಿಕೊಂಡ ವಿಷಯ ಶಿಲಾಶಾಸನದಲ್ಲಿ ಪ್ರಸಿದ್ಧವಾಗಿದೆ. ಬಿಜ್ಜಳರಾಯನು ಚಾಲುಕ್ಯ ವಿಕ್ರಮನ ಮಗನ ಮಗನೆಂಬುದು ಇಲ್ಲಿ ಸ್ಮರಣಾರ್ಹವಾಗಿದೆ, ಬಸವಣ್ಣನವರು ಬಿಜ್ಜಳರಾಜನಲ್ಲಿ ಮೊದಲು ಮಂಗಳವಾಡದಲ್ಲಿಯೂ ಆನಂತರ ಕಲ್ಯಾಣದಲ್ಲಿಯೂ ಮಂತ್ರಿಗಳಾಗಿದ್ದರೆಂಬುದು ಗಮನಾರ್ಹ.

ಷಟ್‌ಸ್ಥಲಜ್ಞಾನ ಸಾರಾಮೃತದ ವಚನಗಳು ಬಸವಣ್ಣ, ಅಕ್ಕಮಹಾದೇವಿ ಪ್ರಭುದೇವರು, ಸಿದ್ದರಾಮಣ್ಣ ಮತ್ತು ಚೆನ್ನಬಸವಣ್ಣ ಮೊದಲಾದವರ ವಚನಗಳಂತೆ ಸಂಗ್ರಹವಾಗಿಯೂ ಸುಗಮವಾಗಿಯೂ ಇಲ್ಲ. ಇವು ಸಿದ್ಧಾಂತ ಬೋಧಕಗಳಾದ ಸುದೀರ್ಘ ವಚನಗಳಾಗಿವೆ, ಸಿದ್ಧಲಿಂಗೇಶ್ವರರ ವಚನಗಳಲ್ಲಿ ನಂದಿ, ಭೃಂಗಿ ವೀರಭದ್ರ ದಾರುಕ, ರೇಣುಕ. ಶಂಬುಕರ್ಣ, ಗೋಕರ್ಣ ಏಕಮುಖ ದ್ವಿಮುಖ ಚತುರ್ಮುಖ ಪಂಚಮುಖ ರೇವಣಸಿದ್ಧ ಬಸವೇಶ್ವರ ಮೊದಲಾದ ಪ್ರಮಥರ ಹೆಸರುಗಳನ್ನು ಕಾಣಬಹುದು. ಈ ಹೆಸರುಗಳಲ್ಲಿ ರೇವಣಸಿದ್ಧ ಮತ್ತು ಬಸವೇಶ್ವರ ಇವರು ಐತಿ–

ಹಾಸಿಕ ವ್ಯಕ್ತಿಗಳು. ಇವರ ಬಗ್ಗೆ ಶಿಲಾಶಾಸನಗಳಿವೆ. ನಂದಿ, ಭೃಂಗಿ ಮೊದಲಾದವರು ಶಿವಪುರಾಣ ಮತ್ತು ಶಿವಾಗಮಗಳಲ್ಲಿ ಉಕ್ತರಾದ ವ್ಯಕ್ತಿಗಳು, ಸಿದ್ಧಲಿಂಗರ ವಚನಗಳಲ್ಲಿ ವೇದಶಾಸ್ತ್ರ ಪುರಾಣ ಆಗಮಗಳಲ್ಲಿಯ ಉಲ್ಲೇಖಗಳು ಬಹಳವಾಗಿವೆ. ಆದ್ದರಿಂದ ಇವರು ಬಹಳ ದೊಡ್ಡ ಶಾಸ್ತ್ರ ಪಂಡಿತರೆಂದು ತರ್ಕಿಸಬಹುದು.

ಸಿದ್ಧಲಿಂಗೇಶ್ವರರ ಕರಕಂಜಸಂಜಾತರಾದ ಬೋಳ ಬಸವೇಶ್ವರರು ಮಧುಗಿರಿಯಲ್ಲಿ ಸಮಾಧಿಸ್ಥರಾದಂತೆ ನಿರಂಜನ ವಂಶ ರತ್ನಾಕರದಲ್ಲಿ ಹೇಳಿದೆ. ಧಾರವಾಡ ಜಿಲ್ಲಾ ಗದಗ ಮತ್ತು ಡಂಬಳಗಳಲ್ಲಿರುವ ತೋಂಟದಾರ್‍ಯರ ಮಠವು ಸಿದ್ಧಲಿಂಗೇಶ್ವರರ ಪರಂಪರೆಗೆ ಸೇರಿದುದೆಂದು ಹೇಳಲಾಗುತ್ತಿದೆ. ಇದನ್ನು ಚಿತ್ರದುರ್ಗದ ಬೃಹನ್ಮಠ. ಹುಬ್ಬಳ್ಳಿ ಮೂರುಸಾವಿರ ಮಠಗಳಂತೆ ಗದಗದ ಮಠಕ್ಕೂ ಶೂನ್ಯಮಠವೆಂದು ಹೇಳಲಾಗಿದೆ.

ಸಿದ್ಧಲಿಂಗೇಶ್ವರರ ವಚನಗಳನ್ನು ಈಗ ಪಂಚ ಶತಮಾನೋತ್ಸವ ಸಮಿತಿಯವರು ಇಂಗ್ಲಿಷ, ತಮಿಳು ಮೊದಲಾದ ಭಾಷಗಳಿಗೆ ಭಾಷಾಂತರಿಸಿ ಪ್ರಕಟಿಸಿದ್ದಾರೆ. ಆ ವಚನಗಳಲ್ಲಿಯ ಕೆಲವು ಅಣಿ ಮುತ್ತುಗಳನ್ನು ವಾಚಕರ ಪ್ರಯೋಜನಾರ್ಥಕವಾಗಿ ಇಲ್ಲಿ ಕೊಡಲಾಗಿವೆ.

**ಸಿದ್ಧಲಿಂಗೇಶ್ವರ ಸಂದೇಶ :**

೧. ತತ್‌ಪದವೇ ಲಿಂಗ, ತ್ವಂ ಪದವೇ ಅಂಗ, ಅಸಿಪದವೇ ಲಿಂಗಾಂಗ ಸಂಯೋಗ
೨. ಷಟಸ್ಥಲ ಮಾರ್ಗವನ್ನು ದ್ವೈತಾದ್ವೈತದೊಳಗೆ ಕೂಡಲಿಕ್ಕೆ ನುಡಿಯಲಾಗದು.
೩. ಭಕ್ತಿಯ ಗರ್ಭದಲ್ಲಿ ಸತ್ಯ ಶರಣರ ಉದಯ.
೪. ಅಂಗಲಿಂಗ ಸಂಬಂಧಿಗಳಿಗೆ ಪರಮ ವೀರಶೈವ ಆಗಮವೇ ಪ್ರಮಾಣ.
೫. ಪುರಾತನರ ಮಹಾವಾಕ್ಯವೇ ಪ್ರಮಾಣ.
೬. ವಸ್ತುವೆಂದರೆ ಪರಬ್ರಹ್ಮದ ನಾಮ, ಆ ವಸ್ತುವಿನಿಂದ ಆತ್ಮನ ಜನನ.
೭. ಪಿಂಡಜ್ಞಾನದ ಅರುಹೇ ಪರಬ್ರಹ್ಮವೆಂದು ಅರಿಯಲು ಯೋಗ್ಯ.
೮. ನಾಯಿಯ ಸಂಗ ಸೀರೆಯ ಕೇಡು. ಮಾಯೆಯ ಸಂಗ ಹರಣದ ಕೇಡು.
೯. ಶರಣರು ಲಿಂಗನೆನವೆಂಬ ಕಿಚ್ಚ ಹಿಡಿಯಲು ಅಂಗಜನ ಅರಮನೆ ಉರಿದು ಭವ ನೆರೆ ಹಿಂಗಿತ್ತು ನೋಡಾ.
೧೦. ಹೊನ್ನು ಹೆಣ್ಣು ಮಣ್ಣು ನೆಚ್ಚಿದ ಮನುಜರು ನಿಮ್ಮನೆತ್ತ ಬಲ್ಲರಯ್ಯ ?
೧೧. ಯುವತಿಯ ವ್ಯವಹಾರವೆಂಬ ವಿಕಳತೆ ಹತ್ತಿ ಯೋಗ್ಯದ ಸಮತೆ ಸಡಿಲಿತ್ತು ನೋಡಾ.
೧೨. ಕುದುರೆಯ ಹಿಡಿಯ ಹೇಳಿದರೆ ರಾವುತಿಕೆಯ ಮಾಡಿದರೆ ಒಪ್ಪುವರೇ ?
೧೩. ಅರುಹು 'ತಲೆದೋರಿತೆಂದು' ಗುರು–ಹಿರಿಯರ ಜರೆಯಲಾಗದಯ್ಯ.
೧೪. ಶಿವಾಶ್ರಮವೆಂದರೆ ಶ್ರೀ ಗುರುವಿನ ಕರಕಮಲವೆಂಬ ಪರಿ. ಭವಾಶ್ರಮವೆಂದರೆ ತನ್ನ ಹಿಂದಣದ ತಾಯಿ–ತಂದೆಗಳೆಂಬ ಪರಿ.

೧೫. ಕಾಯವನು ಜೀವವನು ಲಿಂಗದಲ್ಲಿ ಇರಿಸಬಲ್ಲರೆ ಅವನೇ ಮಹಾದೇವನೆಂಬೆ, ಬೇರುಂಟೆ ?
೧೬. ಕ್ರಿಯೆಗೂ ಜ್ಞಾನಕ್ಕೂ ಭಿನ್ನವುಂಟೆ ?
೧೭. ವಿಶ್ವಾಸದಿಂದ ಗುರು ಲಿಂಗ, ಜಂಗಮ.
೧೮, ತನುವ ಗುರುವಿಗೆ ಸವೆಸುವುದು ಶೀಲ, ಮನವ ಲಿಂಗಕ್ಕೆ ಸವೆಸುವುದು ಶೀಲ, ಧನವ ಜಂಗಮಕ್ಕೆ ಸವೆಸುವುದು ಶೀಲ.
೧೯. ಸಪ್ಪೆಯನು ಉಂಡರೇನೋ ಸ್ತ್ರೀಯರ ಅಪ್ಪುಗೆಯ ಬಿಡದನ್ನಕ್ಕರ.
೨೦. ಅಂಗವೆಂದರೆ ಆತ್ಮನು, ಲಿಂಗವೆಂದರೆ ಪರಮನು.
೨೧. ಕೈಯಲ್ಲಿ ಕುರುಹು, ಬಾಯಲ್ಲಿ ಅರುಹು, ನುಡಿಯುತ್ತಿಪ್ಪ ಅಯ್ಯಗಳಲ್ಲಿ ಇರುವಿನ ಮಾತ್ರದಲ್ಲಿ ಪ್ರಳಯವಾದರು ನೋಡಾ.
೨೨. ಈಚಲ ತಿಂದ ನರಿ ತನ್ನ ವಿಕಾರಕ್ಕೆ ಒರಲುವಂತೆ ಮಾತಿನ ಮಮಕಾರಕ್ಕೆ ಆಗ-ಮವ ಬಲ್ಲೆವೆಂದು ಕೂಗಿಡುವರು ನೋಡಾ.
೨೩. ಮನಸಿನ ಸಂಶಯು ಕನಸಿನ ಭೂತವಾಗಿ ಕಾಡುವುದು ನೋಡಾ.
೨೪. ಬೇವತಿಂದ ಕಾಗೆ ಬೆಲ್ಲದ ಸವಿನೆತ್ತ ಬಲ್ಲದು ನೋಡಾ.
೨೫. ತನ್ನ ಮನಕೆ ತೋರಿದ್ದಾಂಗೆ ಮಾಡಿದ ಭಕ್ತಿ ಶಿವನ ಮುಟ್ಟದು ನೋಡಾ.
೨೬, ಪ್ರಸಾದವೆಂದರೆ ಪರಂಜ್ಯೋತಿ ಸ್ವರೂಪವಪ್ಪ ಶಿವತತ್ತ್ವ.
೨೭. ಶರಣನು ನಾನಾ ಕುಟಿಲಸಿದ್ಧಿಯ ಪ್ರಪಂಚ ಹೊದ್ದನು ನೋಡಾ.
೨೮. ಪರುಷ ಸೋಂಕಿದರೂ ಪಾಷಾಣ ಶುದ್ಧವಾಗದಿದ್ದರೆ ಆ ಪರುಷದ ಗೊಡವೆ ಏತಕಯ್ಯ ?
೨೯. ವಾಚಾಳತ್ವದಿಂದ ಉದರವ ಹೊರೆವರೆಲ್ಲವರೂ ಗುರುಗಳೆ.
೩೦. ಎನಗೆ ಆವ ಫಲವೂ ಬೇಡ, ಆವ ಪದವೂ ಬೇಡ. ನಿನಗೆ ಭಿನ್ನವಿಲ್ಲದಪ್ಪ ಪರಮ ಭಕ್ತಿಯ ಸಂಪದವನೇ ಕೊಡಯ್ಯ.
೩೧. ಮನವನು ಅಳಿದಾತನೇ ಮಹಾದೇವನು ನೋಡಾ. ನಾನುಳ್ಳಕ್ಕರ ನೀನಲ್ಲದೆ ನಾನೆಂಬುದಳಿದ ಬಳಿಕ ನಾನಿಲ್ಲ, ನೀನಿಲ್ಲ ಸ್ವಯವಿಲ್ಲ ಪರವಿಲ್ಲ.
೩೨. ಕಾಯವೇ ಶರಣ ಜೀವವೇ ಲಿಂಗ.
೩೩. ಭಕ್ತಿ ಭೀಸರವಾದರೆ ಮುಕ್ತಿಯೆಂಬುದು ಇಲ್ಲ. ಚಿತ್ಪ್ರಾಣವಸ್ವರೂಪವೇ ಆದಿ ಮಹಾಲಿಂಗ.
೩೪. ಆದಿ ಅನಾದಿ, ಸುರಾಳ ನಿರಾಳವಿಲ್ಲದಂದು ಮಾಯೆಯನು ಕಾಣೆ ಆತ್ಮನನೂ ಕಾಣೆ.
೩೫. ತುರ್ಯಾವಸ್ಥೆಯ ಸುಖವೆ ಕೊಡು ಕಂಡ್ಯಾ ಮಹಾಲಿಂಗ ಗುರುವೆ.
೩೬. ಕರ್ಮಿ ಬಲ್ಲನೆ ಭಕ್ತಿ ಮರ್ಮದ ಪರಿಯ.
೩೭. ಗುರುವಿಗಿಂತ ಶಿಷ್ಯನು ಅರಹುಳ್ಳನಾದರೂ ಆ ಗುರುವಿಗೆ ಭೃತ್ಯನಲ್ಲದೆ ಕರ್ತನಲ್ಲವಯ್ಯ.

೩೮. ಆಚಾರವಿಲ್ಲದ ಗುರು ಭೂತಪ್ರಾಣಿ, ಆಚಾರವಿಲ್ಲದ ಲಿಂಗ ಶಿಲೆ, ಆಚಾರವಿಲ್ಲದ ಜಂಗಮ ಮಾನವ.

೩೯. ಶರಣನ ಹರಣವೇ ಲಿಂಗ. ಲಿಂಗದ ಹರಣವೇ ಶರಣ ನೋಡಾ.

೪೦. ಮನದ ಮಲಿನವು ಹಿಂಗದನ್ನಕ್ಕರ ಭವ ಹಿಂಗಿತ್ತೆಂಬ ಭಂಡರನೇನೆಂಬೆನಯ್ಯ.

೪೧. ಭಕ್ತಿಯೇ ರೂಪು ನಿತ್ಯವೇ ಲಾವಣ್ಯ; ಮುಕ್ತ್ಯಂಗನೆಯ ಕೂಡಿ ಸುಖಿಸುವುದೇ ಸುಖ.

೪೨. ಪಶ್ಚಿಮ ಚಕ್ರದಲ್ಲಿ ನಿತ್ಯ ನಿರಂಜನನ ಬೆಳಕು,

೪೩. ಸೂರ್ಯನ ಬೆಳಗಿಂಗೆ ಕೊಳ್ಳಿಯ ಬೆಳಗ ಹಿಡಿಯಲುಂಟೇ ಮರುಳೆ.

೪೪. ಶಿವತತ್ವವೊಂದೇ ನಿತ್ಯವು. ಉಳಿದೆಲ್ಲವೂ ಅನಿತ್ಯವು ಕಾಣಾ.

೪೫. ಅರಿಷಡ್ವರ್ಗಂಗಳನೆಲ್ಲ ಕಡಿದು ಕತ್ತರಿಸಬಲ್ಲರೆ ಶರಣ, ಇತ್ಯಾದಿ

ಎಡೆಯೂರು ಸಿದ್ಧಲಿಂಗೇಶ್ವರ ದೇವಾಲಯದಲ್ಲಿರುವ ಶಾಸನಾಧಾರದಿಂದ ಈ ಮಹಾತ್ಮರು ಸುಮಾರು ೧೪೦೦ರ ಆರಂಭದಲ್ಲಿ ಹರದನ ಹಳ್ಳಿಯಲ್ಲಿ ಮಲ್ಲಿಕಾರ್ಜುನ ಜ್ಞಾನಾಂಬೆಯರ ಪುತ್ರನಾಗಿ ಜನಿಸಿ ಗೋಸಲ ಚೆನ್ನಬಸವೇಶ್ವರರ ಅನುಗ್ರಹವನ್ನು ಪಡೆದು ಭರತ ಖಂಡದ ಬಹು ಭಾಗದಲ್ಲಿ ನೂರೊಂದು ಶಿಷ್ಯರೊಡನೆ ಸಂಚರಿಸಿ ಪವಾಡಗಳನ್ನು ಮೆರೆದು ಕೆಗ್ಗೆರೆಯಲ್ಲಿ ಉಜ್ವಲ ತಪಸ್ಸನ್ನು ನಡೆಸಿ ಬೋಳ ಬಸವೇಶ್ವರನಿಗೆ ಷಟ್‌ಸ್ಥಲೋಪದೇಶವನ್ನು ಮಾಡಿಸಿ ಕ್ರಿ.ಶ. ೧೪೭೦ರಲ್ಲಿ ಎಡೆಯೂರಿನಲ್ಲಿ ಶಿವಯೋಗ ಸಮಾಧಿಯನ್ನು ಹೊಂದಿದರೆಂದು ನಾವು ತಿಳಿಯಬಹುದು. □

# ಕೆಲವು ವಚನಗಳು
## ಒಂದು ಆಲೋಚನೆ

—ಬುದ್ಧಣ್ಣ ಹಿಂಗಮಿರೆ

ಮಹಾಕಾವ್ಯ ರೂಢವಾಗಿದ್ದ ಕಾಲದಲ್ಲಿಯೂ ವಚನಗಳು ಸ್ವತಂತ್ರ ಅಸ್ತಿತ್ವವನ್ನು ಪಡೆದುಕೊಂಡಿರುವುದು ತುಂಬ ಗಮನಾರ್ಹವಾಗಿದೆ. ಭಾವವೆಂದರೆ ಭಾವಕ್ಕೆ ಅಂಟಿಕೊಳ್ಳದೆ, ಕಾವ್ಯದ ಅತೀತಕ್ಕೆ ಸಿಕ್ಕು ಇಲ್ಲವೆ ಕಾವ್ಯ ಅಲ್ಲದ್ದಕ್ಕೆ ಜೋತು ಬೀಳದೆ ಒಂದು ಬಗೆಯ ಸಮತೂಕವನ್ನು ಕಾಯ್ದುಕೊಂಡು ಅರ್ಥಶೋಧನೆಯಲ್ಲಿ ವಚನಗಳು ಯಶಸ್ಸನ್ನು ಸಂಪಾದಿಸಿವೆ. ವಚನಗಳು ಕಾವ್ಯಕ್ಕೆ ಒಂದು ಹೊಸ ಆವರಣ (a new Pattern)ವನ್ನು ನಿರ್ಮಿಸಿರುವುದಲ್ಲದೆ ಭಾಷೆಯ ಬಳಕೆ ಹಾಗೂ ಅಭಿವ್ಯಕ್ತಿ ಕ್ರಮದಲ್ಲಿಯೂ ನಾವೀನ್ಯತೆಯನ್ನು ತೋರಿವೆ. ಬಾಹ್ಯ ಹಾಗೂ ಆಂತರಿಕ ಅನುಭವವನ್ನು ಕ್ರೋಢೀಕರಿಸಿಕೊಂಡು, ವ್ಯಕ್ತಿ ಪ್ರಜ್ಞೆಯ ಅಚ್ಚಿನೊಳಗಿಂದ ಹೊರಬಿದ್ದ ವಚನಗಳು ಆಯಾಯ ವಚನಕಾರರ ದೃಷ್ಟಿ–ಧೋರಣೆಗಳನ್ನು ನಿವೇದಿಸುತ್ತವೆ. ವಚನಕಾರರು ಧಾರ್ಮಿಕ–ಅಧ್ಯಾತ್ಮಿಕ ವಿಚಾರಗಳಿಂದ ಪ್ರೇರಿತರಾಗಿದ್ದರೂ ಅವರು ಕವಿ ಸಹಜವಾದ ನಿರಂಕುಶತ್ವವನ್ನು ಕಳೆದುಕೊಂಡಿಲ್ಲ. ಹೇರಳವಾಗಿ ರಚಿತವಾಗಿರುವ ವಚನಗಳನ್ನು ಅನುಲಕ್ಷಿಸಿದರೆ ಸಾಮಾನ್ಯ ಮಾತು ಕೂಡ ವಚನ ಇಲ್ಲವೆ ಕಾವ್ಯದ ಮಟ್ಟಕ್ಕೆ ಏರಿದ್ದು ಆದು ಉನ್ನತ ಸಾಮಾಜಿಕ ಪ್ರಜ್ಞೆಗೆ ದ್ಯೋತಕವಾಗಿದೆ. ಕಾವ್ಯವೆಂಬುದು ದೇವ ಭಾಷೆಯನ್ನಾಡಬೇಕೆಂದು, ಭಾಷೆ ಆ ಮಟ್ಟಕ್ಕೆ ಏರಬೇಕೆಂಬುದು ಕಾವ್ಯತತ್ವಜ್ಞರ ಅಭಿಮತ.

'Poetry is to speak the language of God' ಎಂದು ಹೇಳಿದ್ದು ಈ ಅರ್ಥದಲ್ಲಿಯೇ. ಅಲ್ಲಮ ಪ್ರಭುವಿನ ಉನ್ನತಮಟ್ಟದ ವಚನಗಳು ಆಧ್ಯಾತ್ಮಿಕ ಅನುಭಾವದ ಸಂವೇದನೆಗಳಾಗಿದ್ದು ಅವು ಬೌದ್ಧಿಕ ಹಕ್ಕು ಸ್ಥಾಪಿಸಿಕೊಂಡಿವೆ. ವಚನಗಳಲ್ಲಿ ನಿತ್ಯ ರೂಢಿಯ ಭಾಷಾ ಪ್ರಯೋಗಕ್ಕೆ ಪುರಸ್ಕಾರ ಲಭ್ಯವಾಗಿ, ಕನ್ನಡ ಭಾಷೆ ಪರೆ ಕಳಚಿಕೊಂಡು ಸತ್ವಪೂರ್ಣ ಹಾಗೂ ಗತಿ ಶೀಲವಾದ ಇನ್ನೊಂದು ಅವಸ್ಥೆಯನ್ನು

ಹೊಂದಿದ್ದು ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಅತ್ಯಂತ ಮಹತ್ವದ್ದಾಗಿದೆ. ಬಹುಪಾಲು ವಚನಗಳಲ್ಲಿ ಆಡುಮಾತನ್ನು ಆಡುಮಾತಿನ ಲಯವನ್ನು ರೂಢಿಸಿಕೊಳ್ಳುವ ಪ್ರಯತ್ನವಿದ್ದು ಆ ಕಾಲದ ಸಾಮಾಜಿಕ ಹಾಗೂ ಧಾರ್ಮಿಕ ಜೀವಂತ ಪ್ರಜ್ಞೆಯನ್ನು ಅಳವಡಿಸಿಕೊಂಡು ವಚನಗಳು ರಚಿತವಾಗಿವೆ. ವಚನಗಳ ಗದ್ಯತ್ವ, ರೂಪಕ ನಿರ್ಮಾಣ ಕೌಶಲ್ಯ ಹಾಗೂ ಸಾಂಕೇತಿಕತೆ–ಇವು ಅಲ್ಲದೆ ಇವುಗಳ ಸ್ವಚ್ಛಂದ ಚೌಕಟ್ಟು ಇವು ಇಂದಿನ ಹೊಸ ಕವಿಗಳ ಗಮನವನ್ನೂ ಸೆಳೆಯುವ ಹಾಗಿವೆ. ಸಂಸ್ಕೃತದ ಒತ್ತಡಕ್ಕೆ ಸಿಲುಕಿ ಉಸಿರುಗಟ್ಟಿ ಹೋಗುತ್ತಿದ್ದ ಕನ್ನಡ ಭಾಷೆಗೆ ವಚನಗಳು ಹೊಸ ಜೀವವನ್ನು ತುಂಬುವ ಮಂತ್ರವಾಗಿ ಪರಿಣಮಿಸಿದುವು. ವಚನಕಾರರು ತಮ್ಮ ಅನುಭವ ಹಾಗೂ ಅನುಭಾವದ ಸ್ತರಗಳನ್ನು ಗುರುತಿಸಿಕೊಂಡು ಅವನ್ನು ಸುವ್ಯವಸ್ಥಿತವಾದ ಕ್ರಮದಲ್ಲಿ ವಿಂಗಡಿಸಿ ಹೇಳಿದ್ದುಂಟು.

ಅಲ್ಲಮಪ್ರಭುವಿನ ಉನ್ನತ ಹಾಗೂ ಉದಾತ್ತ ಜೀವನ ಹಲವು ಕಾವ್ಯ, ಕಥೆಗಳಿಗೆ ಸ್ಫೂರ್ತಿ – ಪ್ರೇರಣೆಗಳನ್ನು ಇತ್ತಿದೆ. ಅಲ್ಲಮಪ್ರಭು ಶೂನ್ಯ ಸಿಂಹಾಸನವನ್ನು ಅಲಂಕರಿಸಿದ ಏಕಮಾತ್ರ ವ್ಯಕ್ತಿ. ಪ್ರಭುವಿನ ವಚನಗಳಲ್ಲಿ ಅಭಿವ್ಯಕ್ತವಾಗಿರುವ ಉನ್ನತ ನಿಲುವು ಈಗಲೂ ಹಲವರಿಗೆ ಅರ್ಥವಾಗುವುದಿಲ್ಲ. ಜ್ಞಾನ. ವೈರಾಗ್ಯ ಹಾಗೂ ಯೋಗ–ಈ ಕ್ಷೇತ್ರಗಳಲ್ಲಿನ ಅನುಭವ ಅನುಭಾವವಾಗಿ ಮಾರ್ಪಟ್ಟು ಅದೆಲ್ಲವೂ ಅವನ ವಚನಗಳಲ್ಲಿ ಪ್ರಕಟವಾಗಿದೆ, ಅಲ್ಲಮನ ವಚನಗಳು ವೈಚಾರಿಕ ಮಟ್ಟದ ಒಗಟುಗಳಂತಿವೆ. ಬೆಡಗಿನ ವಚನಗಳಲ್ಲಿ ಸಹಜವಾಗಿ ಅರ್ಥವಾಗಲಾರದಂತಹ ಬೆಡಗು, ರಹಸ್ಯ ಹುದುಗಿದ್ದ ಕಾರಣದಿಂದಲೇ ಅವು ಸುಲಭವಾಗಿ ಗ್ರಾಹ್ಯವಾಗುವಂತಿಲ್ಲ. ಅಂಥ ಬೆಡಗಿನ ವಚನಗಳು ರೂಪಕ—ಸಂಕೇತಗಳನ್ನು ಸುತ್ತಿಕೊಂಡು ನಿಬಿಡವಾಗಿರುತ್ತವೆ. ಜ್ಞಾನದ ಸರ್ವತೋಮುಖ ತಿಳಿವಳಿಕೆಯಿಲ್ಲದೆ ಪ್ರಭುವಿನ ಬೆಡಗಿನ ಮಾತುಗಳನ್ನು ಅರ್ಥ ಮಾಡಿಕೊಳ್ಳುವದು ಕಷ್ಟ.

ರಕ್ಕಸಿಗಿಬ್ಬರು ಮಕ್ಕಳು ತೊಟ್ಟಿಲ ಮೆಲ್ಯೆವರು
ರಕ್ಕಸಿ ಬಾಣತಿಯೆಂದರೆ ಮಕ್ಕಳಿಗಿನ್ನೆಂತೋ?
ತೊಟ್ಟಿಲ ತೂಗುವೆ. ಜೋಗುಳ ಪಾಡುವೆ
ರಕ್ಕಸಿ ಬಾಣತಿಯ ತೊಟ್ಟಿಲು ನುಂಗಿತ್ತು
ಇದೇನು ಹೇಳಾ ಗುಹೇಶ್ವರಾ.

ಇಲ್ಲಿ ರಕ್ಕಸಿ ಎಂದರೆ ಮಾಯೆ. ಜೀವ ಪ್ರಾಣ ಇವು ಆಕೆಯ ಎರಡು ಮಕ್ಕಳು. ಪಂಚ ಮಹಾಭೂತಗಳಿಂದ ಕೂಡಿದ ತನುವೇ ತೊಟ್ಟಿಲು. ರಕ್ಕಸಿಯಾದ ಮೇಲೆ ಅವಳಿಗೆ ತನ್ನ ಮಕ್ಕಳ ಬಗ್ಗೆ ವಾತ್ಸಲ್ಯ–ಮಮತೆ ಹುಟ್ಟಿಕೊಳ್ಳುವುದು. ಹೇಗೆ ಸಾಧ್ಯ? ತಾಯಿ ತನ್ನಿಂದ ಹುಟ್ಟಿದವರನ್ನೇ ನುಂಗಲಾರಂಭಿಸಿ ರಕ್ಕಸಿಯಾಗಿ ಬಿಟ್ಟರೆ ಮಕ್ಕಳ ಗತಿ ಏನು? ಮಾಯೆ ಹೀಗೆ ಎಂದಿನಿಂದಲೂ ತೊಟ್ಟಿಲು ತೂಗುತ್ತ. ತನ್ನಿಂದ ಹುಟ್ಟಿದವರನ್ನೇ ಭಕ್ಷಿಸುತ್ತ ಬಂದಿದ್ದಾಳೆ. ಮಾಯೆಯಿಂದ ಆವೃತವಾದ ಮನುಷ್ಯ ಜೀವಿತದ ದುಃಸ್ಥಿ

ತಿಯನ್ನು ಬಣ್ಣಿಸುವದು ಈ ವಚನದ ಉದ್ದೇಶ, ವಚನದ ಕೊನೆಯಲ್ಲಿ ಬರುವ "ಇದೇನು ಹೇಳಾ ಗುಹೇಶ್ವರಾ" ಎಂಬ ಉಕ್ತಿಯೇ ಇದೊಂದು ಒಗಟು ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಗಗನದ ಮೇಲೊಂದು ಭಿನ್ನದ ಗಿಳಿ ಹುಟ್ಟಿ
ಸಯ ಸಂಭ್ರಮದಲ್ಲಿ ಮನೆಯ ಮಾಡಿತ್ತು.
ಒಂದು ಗಿಳಿ ಇಪ್ಪತ್ತೈದು ಗಿಳಿಯಾಯಿತ್ತು

ಆತ್ಮವೆಂಬುದು ಆಕಾಶವಿದ್ದ ಹಾಗೆ. ಜೀವ ಎನ್ನುವುದೊಂದು ಗಿಳಿ. ಅದು ಸಂಸಾರ ಸಂಭ್ರಮದಲ್ಲಿ ಮನೆ ಮಾಡಿದ್ದು. ಆ ಗಿಳಿಯು (ಇಪ್ಪತ್ತೈದು ತತ್ವಗಳಿಂ ದೊಡಗೂಡಿದ್ದರಿಂದ) ಇಪ್ಪತ್ತೈದು ಗಿಳಿಯಾಯಿತ್ತು, ಹೀಗೆ ಗಿಳಿಯ ರೂಪಕ ಕಟ್ಟಿ ಬ್ರಹ್ಮ, ವಿಷ್ಣು, ರುದ್ರ ಈ ಮೂವರೂ ಆ ಗಿಳಿಗೆ ತುತ್ತಾದರೆಂದು—ಈ ಪದ್ಯದಲ್ಲಿ ಹೇಳುದ್ದುಂಟು.

i) ನೆಲದ ಬೊಂಬೆಗೆ ಜಲದ ಬೊಂಬೆಯನುಡಿಸಿ ಹಲವು ಪರಿಯಾಶ್ರಮದಲ್ಲಿ ಉಲಿವ ಗೆಜ್ಜೆಯ ಕಟ್ಟಿ

ii) ಕಾಲುಗಳೆರಡು ಗಾಲಿ ಕಂಡಯ್ಯ ದೇಹವೆಂಬುದು ತುಂಬಿದ ಬಂಡಿ ಕಂಡಯ್ಯ ಬಂಡಿಯ ಹೊಡೆವವರೈವರು ಮುನಿಸರು.

iii) ನೆಲವಿಲ್ಲದ ಭೂಮಿಯ ಮೇಲೊಂದು ಗಿಡವು ಹುಟ್ಟಿತ್ತು ಸಿಡಿಲ ಬಣ್ಣದ ವೆಂಟು ಹೂವಾದವು ನೋಡಾ.

ಅಲ್ಲಮಪ್ರಭುವಿನ ಇಂಥ ಮಾತುಗಳಲ್ಲಿ ಉನ್ನತ–ಕಲ್ಪನಾ ಶಕ್ತಿ ಮಾತ್ರವಲ್ಲದೆ ಕಾವ್ಯ ಶಕ್ತಿಯೂ ಸಮ್ಮಿಳಿತವಾಗಿದ್ದ ಅವು ಬುದ್ಧಿ ಶಕ್ತಿಗೆ ಚಾಲನೆಯನ್ನು ಒದಗಿಸುತ್ತವೆ. ಹಲವು ನಿರಾಕಾರ ಹಾಗೂ ನಿರವಯುಪರ ವಿಷಯಗಳಿಗೆ ರೂಪ, ಆಕಾರ ಕಲ್ಪಿಸಿ ಹೇಳುವುದು ಪ್ರಭುವಿಗೆ ಸುಲಭ ಸಾಧ್ಯವಾಗಿಬಿಟ್ಟಿದೆ.

ಗುಂಡಿಯನ್ನೊತ್ತಿದರೆ ವಿದ್ಯುದ್ದೀಪ ಬೆಳಕು ಸುರಿಯುವಂತೆ ಇಂಥ ವಚನಗಳ ಅರ್ಥ ಹೊಳೆದಾಗ ಒಂದು ಬಗೆಯ ನವೀನ ಅನುಭವವುಂಟಾಗುತ್ತದೆ. ಪ್ರಭು ವಿನ ವಚನಗಳಲ್ಲಿ ಆಧ್ಯಾತ್ಮಿಕ ಪ್ರಜ್ಞೆ, ಅನುಭಾವದ ದ್ರವ್ಯವೇ ಹೆಚ್ಚಾಗಿದ್ದರೂ–ಆಕಾಶ ಹಾಗೂ ಅದರಾಚೆಯ ಅನುಭವದ ಮಾತುಗಳು ಮೇಲಿಂದ ಮೇಲೆ ಕೇಳಿಸಿ ದರೂ ಪದ್ಯಗಳಿಗಾಗಿ ಆಯ್ದುಕೊಳ್ಳುವ ರೂಪಕ ಹಾಗೂ ಸಂಕೇತ ಇತ್ಯಾದಿ ನೆಲ–ಜಲದ ಸಂವೇದನೆಗಳನ್ನು ಸುತ್ತಿಕೊಂಡು ನಿರ್ಮಾಣಗೊಂಡಿರುವುದು ಗಮನಾರ್ಹ ವಾಗಿದೆ,

ವಿಚಾರವನ್ನು ಎಲ್ಲಿಯೋ ಹುದುಗಿಟ್ಟು ಅದರ ಸುತ್ತು ಶಬ್ದಾರ್ಥಗಳ ವ್ಯೂಹ ರಚಿಸುವ ವಿಧಾನ ಅತ್ಯಂತ ಜಟಿಲವಾದದ್ದು. ಶಬ್ದಾರ್ಥಗಳ ದ್ವಾರ ತೆರೆಯುತ್ತ ಹೋದಂತೆ ಅನುಭವದ ಸುರುಳಿ ಬಿಚ್ಚುತ್ತ ಹೋಗುತ್ತದೆ–ಬೆಡಗಿನ ವಚನಗಳಲ್ಲಿ

ಧರೆಯಗಲ ಜಲಕ್ಕೆ ಕರಿಯ ನೂಲಿನ ಜಾಲ
ಕಱಿಯ ಕಬ್ಬಿಲಹೊಕ್ಕು ಸೇದುತ್ತಿರಲು ಕರಕೈದಯಲಿಗಾಳ;
ಸೂಕ್ಷ್ಮ ವಿಚಾರದಿಂದಟಿದುಕೊಂಡಡೆ ಗಾಳಕ್ಕೆ ಹೊರಗಾಯಿತ್ತು.
ಹರಿವಲಜಂಗಳು ಬತ್ತಿ ಬೇಸಿಗೆಯ ಉಷ್ಣತೋರಿ
ಬಳಿಯ ಮಳಲಲ್ಲಿಗಲ್ಲಿಗೆ ಕಾಣಬರುತ್ತಿರಲು
ಕಟಿಯ ಕಬ್ಬಿಲ ಬಂದು ಉಟಿಯ ಮೆಟ್ಟಿನೋಡಿ ಕಾಣದೆ
ಮರಳ ಜಾಲವ ಹೊತ್ತುಕೊಂಡು ಹೋಹಾಗ, ದಂಗಟನ ಪುಣಜೆಯರು
ಹೊಂಗಱಿಯ ಬಿಲ್ಲುಕೋಲನೊಂದು ಕೈಯಲಿ ಪಿಡಿದು
ಒಂದು ಕೈಯಲಿ ಬಿದಿರಕ್ಕಿಯ ಹಿಡಿದು ಮುಂದೆ ಬಂದಾಡುತಿರೆ
ಕಂಗಳ ಮುತ್ತು ಸಡಿಲಿ ಪಾದದ ಮೇಲೆ ಬೀಳುತಿರೆ
ಅಂಗೈಯೊಳಗೊಂದು ಹಟಿದ ತಲೆ ಮೂಡಲು
ದಂಗಟನ ಹೊತ್ತು ಕುಣಿದಾಡುತಿರಲು ಸಿಂಗರಸಮಯವಾಯಿತ್ತು
ಕೂಡಲ ಚನ್ನಸಂಗಯ್ಯನಲ್ಲಿ ಭಕ್ತ್ಯಂಗನೆಯ ನಾವಿಂದು ಕಂಡೆವಯ್ಯಾ.

—ಚೆನ್ನ ಬಸವಣ್ಣನವರಿಂದ ರಚಿತವಾದ ಈ ಪದ್ಯದಲ್ಲಿ ಸಂಕೇತ, ರೂಪಕ, ಪ್ರತಿಮೆ—ಇತ್ಯಾದಿ ಒಂದರೊಳಗೊಂದು ಹೆಣೆಯಲ್ಪಟ್ಟು ಇಡೀ ಪದ್ಯವನ್ನು ಒಂದು ಹೊಸ ಅರ್ಥದಲ್ಲಿ ಜೀವಂತಗೊಳಿಸುತ್ತದೆ.

ಇಲ್ಲಿಯ ೩ನೆಯ ಹಾಗೂ ೧೩ನೆಯ ಸಾಲುಗಳನ್ನು ಹೊರತುಪಡಿಸಿದರೆ, ಇದೊಂದು ರೂಪಕ ಪ್ರತಿಮೆಗಳನ್ನು ಸುತ್ತಿಕೊಂಡು ನಿಂತ ಸಾಂಕೇತಿಕ ಪದ್ಯವಾಗುತ್ತದೆ. ಭಕ್ತನ ಆಂತರಿಕ ಅನುಭವ ಈ ಪದ್ಯದ ಮೂಲದ್ರವ್ಯ. ಭಕ್ತನ ಅನನ್ಯ ಜೀವನ ಅನುಭವ ಇಲ್ಲಿ ಸಂಕೇತ, ರೂಪಕ ಹಾಗೂ ಪ್ರತಿಮೆಗಳ ಮುಖಾಂತರ ಅಭಿವ್ಯಕ್ತಗೊಂಡದ್ದರಿಂದ ಪದ್ಯೆ ಕ್ಲಿಷ್ಟವೆನಿಸುವುದು ಅಸ್ವಾಭಾವಿಕವೇನಲ್ಲ. ೩ನೆಯ ಹಾಗೂ ೧೩ನೆಯ ಸಾಲುಗಳಲ್ಲಿನ ಮಾತಿನ ಜಾಡು ಹಿಡಿದು ಪದಾರ್ಥವನ್ನು ತಿಳಿದುಕೊಳ್ಳಲನುವಾಗುತ್ತದೆ.

i) ಕೈಯಲ್ಲಿ ಗಾಳ ಹಿಡಿದುಕೊಂಡು ಆಗಮಿಸುವ ಕಱಿಯ ಕಬ್ಬಿಲ ಇಲ್ಲಿ ಸಾವಿನ ಸಂಕೇತವಾಗಿದ್ದು—ಅದಕ್ಕೊಂದು ಆಕಾರವೂ ಪ್ರಾಪ್ತವಾಗಿದೆ. ಕರಿಯ ಎಂಬ ವಿಶೇಷಣ ಸಾವಿನ ಭೀಕರತೆಯನ್ನು ಸೂಚಿಸುತ್ತದೆ. ಯಮ ಕೋಣದ ಮೇಲೆ ಕುಳಿತು, ಕೈಯಲ್ಲಿ ಪಾಶ ಓಡಿದು ಬರುವ ಪ್ರಸ್ತಾಪ ಇರಲಿಲ್ಲ. ಇಲ್ಲಿಯ ಸಾವು ಕೈಯಲ್ಲೊಂದು ಗಾಳ ಓಡಿದುಕೊಂಡು ಜೀವಗಳನ್ನು, ಆತ್ಮಗಳನ್ನು ತನ್ನ ಬಲೆಗಿಕ್ಕಿಕೊಳ್ಳಲು ಹೊಂಚಿದ್ದು ಬಲೆಗೆ ಬೀಳುವ ಜೀವಗಳನ್ನು (ಹೊಕ್ಕು ಸೇದು) ಕೊಲ್ಲುವದರಲ್ಲಿಯೇ ಅವನಿಗೆ ತೃಪ್ತಿ ಅಥವಾ ಆಟ. ಭಕ್ತರು ತಮ್ಮ ಸಾಧನೆಯನ್ನು ಮುಂದುವರಿಸಿ. ಸೂಕ್ಷ್ಮ ವಿಚಾರದಿಂದ ಹುಟ್ಟು—ಸಾವುಗಳನ್ನು ಅರ್ಥ ಮಾಡಿಕೊಂಡು ಕಱಿ ಕಬ್ಬಿಲ ಎಸೆಯುವ ಗಾಳದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವುದು ಈ ಪದ್ಯದ ವಿಚಾರಗಳಲ್ಲಿ ಒಂದು.

ii) ಕೆಲವರು ಸುಖೋಪಭೋಗಗಳನ್ನು ಅನುಭವಿಸುವುದರಲ್ಲಿಯೇ ತೃಪ್ತರಾಗಿರುತ್ತಾರೆ. ಪುರುಷನ ಜೊತೆಗಿರುವ ಪ್ರಕೃತಿಯ ಸಂಬಂಧ ಅತಿಗಾಢವಾಗಿದ್ದು,—ಪ್ರಕೃತಿ

ಯೊಡ್ಡುವ ಛಾಯೆಯಲ್ಲಿ ಹಿಮ್ಮೈಮ್ಮೆ ಪುರುಷ ಶಕ್ತಿಯ ಆಟ ಸಾಗದ ಹಾಗಾಗುತ್ತದೆ. ಧರೆಯ ಮೇಲಿನ ಜಲ ಬತ್ತಿಹೋಗಿ ಮಳಲು ತೆರೆದುಕೊಳ್ಳುವಂತೆ ಜಲದ ಹಾಗೆ ಹರಿಯುವ ರಸಗಳೆಲ್ಲವೂ ಬತ್ತಿ ಹೋಗಿ ಬದುಕು ಚೈತನ್ಯವಿಹೀನವಾಗುತ್ತದೆ. ದೇಹವು ತನ್ನೆಲ್ಲ ಬಣ್ಣವನ್ನು ಕಳೆದುಕೊಂಡು ತೇಜೋವಿಹೀನವಾದಾಗ––ಅದು ಮರುಭೂಮಿಯನ್ನು ಹೋಲುತ್ತದೆ.

ಮನುಷ್ಯನ ಆತ್ಮವೆಂಬುದು ಅವಿನಾಶಿ. ಸಾವು ಎಂಬುದು ಮನುಷ್ಯ ಜೀವನದಲ್ಲಿ ಒಂದು ಸಾಮಾನ್ಯ ಘಟನೆ ಎನ್ನಿಸಿ ಬಿಡುತ್ತದೆ.ಆತ್ಮವಿಲ್ಲದ ದೇಹ ಬಿಳಿಯ ಮಳಲಿನಂತೆ, ಸಾವು ಜೀವವನ್ನು ಒಯ್ಯುತ್ತದೆಯೆಂದರೂ ಅದು ಹೊತ್ತೊಯ್ಯುವುದು ಮಳಲ ದೇಹವನ್ನು ಮಾತ್ರ. ಈ ವಿಚಾರವನ್ನಿಟ್ಟುಕೊಂಡು ಚೆನ್ನಬಸವಣ್ಣನವರು "ಉರಿಯ ಮೆಟ್ಟಿ ನೋಡಿ ಕಾಣದೆ" ಎಂದಿರುವುದು ಸಾವಿನ ದುರ್ಬಲತೆಯನ್ನು ಸೂಚಿಸುವುದಾಗಿದೆ:

iii) ದಂಗಟನ ಪುಣಜೆಯರು––ಇಲ್ಲಿ ಮಾಯೆ––ಹಾಗೂ ಮೋಹಕ್ಕೆ ಸಂಕೇತವಾಗಿದ್ದು ಅವರು ಇಂದ್ರಿಯಗಳನ್ನು ಹೋಲುತ್ತಾರೆ. ಬೇಡ ಸ್ತ್ರೀಯರಾಗಿ ಇಲ್ಲಿ ಕಾಣಿಸಿಕೊಳ್ಳುವ ಈ ರೂಪಕ ಅತ್ಯಂತ ಆಕರ್ಷಕವಾಗಿದೆ, "ಹೊಂಗಱಿಣೆಯ ಬಿಲ್ಲು ಕೋಲು"––ಅವರ ಆಕರ್ಷಣೆಗೆ ಪ್ರತೀಕವಾಗಿದೆ.ಒಂದು ಕೈಯಲ್ಲಿ ಆಕರ್ಷಣೆ ಇನ್ನೊಂದು ಕೈಯಲ್ಲಿ(ಬಿದಿರಕ್ಕಿ–ಸತ್ತ ಮೇಲೆ ಶವದ ಮೇಲೆ ಒಗೆಯುವ ಅಕ್ಕಿ) ವಿಕರ್ಷಣೆ ಇವೆರಡು ಹಿಡಿದು ಮರಳ ದೇಹವನ್ನು ಹೊತ್ತೊಯ್ಯುವ ಜಾಲಗಾರನೆದುರು ತಮ್ಮೆಲ್ಲ ಬಿಂಕ–ಬಿನ್ನಾಣಗಳನ್ನು ಪ್ರದರ್ಶಿಸುತ್ತಾರೆ. ಕಂಗಳ ಮುತ್ತು ಸುರಿಸಿ ಸಂತೋಷ ಹಾಗೂ ದುಃಖ ಇವೆರಡನ್ನು ಪ್ರದರ್ಶಿಸುತ್ತಾರೆ. ಇಲ್ಲಿ ಬಂದಿರುವ ದಂಗಟ ವ್ಯಾಮೋಹಕ್ಕೆ ಸಂಕೇತ.

iv) "ಅಂಗೈಯೊಳಗೊಂದು ಹಱಿದ ತಲೆ ಮೂಡಲು" ––ಎಂಬುದು ಲಿಂಗ ಸಾಕ್ಷಾತ್ಕಾರಕ್ಕೆ ಸಂಬಂಧಪಟ್ಟುದು. ಭಕ್ತನಿಗೆ ಲಭ್ಯವಾಗುವ ಸಿದ್ಧಿಯ ಫಲ ಅದು. ಹರಿವ ಜಲಂಗಳು ನಿಂತು ಹೋದ ಮೇಲೆ ಈ ಸ್ಥಿತಿ ಪ್ರಾಪ್ತವಾಗುವುದು. ಭಕ್ತಿ ಪರವಶತೆಯ ಬಣ್ಣನೆ ಇದರಲ್ಲಿದೆ.–ಈ ಪದ್ಯದಲ್ಲಿ ಗಮನಿಸಬೇಕಾದುದು––ಧರೆಯಗಲ ಜಲಕ್ಕೆ ಕರಿಯ ನೂಲಿನ ಜಾಲಾವನ್ನೊಡ್ಡಿರುವ ಜಾಲಗಾರನ ಪ್ರತಿಮೆ; ಅದೇ ಪದ್ಯದ ಉದ್ದಕ್ಕೂ ಅರ್ಥಗಳನ್ನು ಸುತ್ತಿಕೊಂಡು ಬೆಳೆಯುತ್ತ ಹೋಗಿದೆ ಭಕ್ತ್ಯಂಗನೆಯ ನೆವದಲ್ಲಿ ಇಲ್ಲಿ ಒಂದು ಹೊಸ ರೂಪನ. ಹೊಸ ಪ್ರತಿಮೆ ನಿರ್ಮಾಣವಾಗಿ ಅದು ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುತ್ತದೆ. ಇಂಥ ವಚನಗಳ ರಚನಾಕ್ರಮದ ಕುರಿತು ಆಲೋಚಿಸಿದಾಗ ಪದ್ಯಗಳ ಚೌಕಟ್ಟು, ನವೀನ ರೂಪಕ ಹಾಗೂ ಸಂಕೇತಗಳು, ಭಾಷಾ ಪ್ರಯೋಗ ಇವು ಸಹಜವಾಗಿಯೇ ಆಸಕ್ತಿಯನ್ನು ಕೆರಳಿಸುತ್ತವೆ. ವಚನಗಳ ಗದ್ಯತ್ವ ಭಾವ ತೀವ್ರತೆಯನ್ನು ಕಡಿಮೆ ಮಾಡಿ–ಒಂದು ವಿಶಿಷ್ಟ ತಿಳಿವಳಿಕೆ ಅಥವಾ ವಿಚಾರವನ್ನು ಹುಟ್ಟಿಸುವಲ್ಲಿ ಸಹಾಯಕವಾಗುತ್ತದೆ. ಈ ಕೆಲವು ಗಮನಾರ್ಹ ಅಂಶಗಳಿಂದ ಇಂಥ ವಚನಗಳು ವಿಚಾರ ಪ್ರಚೋದನೆಗಳನ್ನು ಒದಗಿಸುತ್ತವೆ. □

# ಕಾಯಕತತ್ತ್ವ—ಆಯ್ದಕ್ಕಿ ಮಾರಯ್ಯ

ಆಸ್ಥಾನ ವಿದ್ವಾನ್ ಶ್ರೀ ಎಂ. ಬಿ. ನಂಜುಂಡಾರಾಧ್ಯರು

ಶರಣರು ಕಾಯಕಕ್ಕೆ ಹೆಚ್ಚಿನ ಮಹತ್ವ ಕೊಟ್ಟಿದ್ದಾರೆ. ಅವರ ದೃಷ್ಟಿಯಲ್ಲಿ ಅದು "ಸತ್ಯ ಶುದ್ಧಕಾಯಕ". ಪ್ರತಿಯೊಬ್ಬನೂ ತನ್ನ ಮತ್ತು ಕುಟುಂಬದ ಸುಖಕ್ಕಾಗಿ ಏನಾದರೊಂದು ಉದ್ಯೋಗವನ್ನು ಮಾಡುವುದು ಅಗತ್ಯ. ಅದು ಪ್ರತಿಯೊಬ್ಬನ ಕರ್ತವ್ಯವೂ ಹೌದು. ತನ್ನ ಕರ್ತವ್ಯವನ್ನು ಮನಗಂಡ ಮಾನವ ಅವನವನ ಕುಟುಂಬ ಭಾರದ ಹೊಣೆ ಹೊತ್ತಲ್ಲಿ, ಆಯಾ ಸಮಾಜ ಮತ್ತು ರಾಷ್ಟ್ರಗಳಲ್ಲಿ ಜೀವನ ಸಮಸ್ಯೆ ಎಷ್ಟೋ ಹಗುರವಾಗುತ್ತದೆ.

ಹೀಗೆ ಮಾಡುವ ಉದ್ಯೋಗ ಪವಿತ್ರವಾದದ್ದಾಗಿರಬೇಕು; ಮಾತ್ರವಲ್ಲ, ಅದು ಪರಹಿಂಸೆಗೆ ಎಡೆಗೊಡದಿರಬೇಕು; ಹಾಗೂ ಬೇರೆಯವರ .ಉದ್ಯೋಗಕ್ಕೆ ಹಾನಿಯಾಗದಂತೆಯೂ ಇರಬೇಕು. ಅವನವನ ತಿಳಿವಿಗೆ ಅಥವಾ ಅಳವಿಗೆ ಅನುಗುಣವಾಗಿ ಮಾಡುವ ಪ್ರತಿಯೊಂದು ಪವಿತ್ರ ಉದ್ಯೋಗವೂ ಗೌರವಾರ್ಹ. ಅಧಿಕಾರ ಹೆಚ್ಚಿನದು, ಭೃತ್ಯತ್ವ ಕಡಮೆಯದು ಎಂಬ ಭಾವನೆಗೆ ಇಂಬು ಇರಬಾರದು. ಉದ್ಯೋಗ ಮಾಡುವವರಲ್ಲಿ ಮೇಲು ಕೀಳು ಭಾವನೆಗೆ ಎಡೆ ಇರಬಾರದು. ವೃತ್ತಿಗೆ ಗೌರವ(Dignity of Labour) ನೀಡುವುದು ರಾಷ್ಟ್ರದ ಧರ್ಮ.

ವ್ಯಕ್ತಿ ಮಾಡುವ ಉದ್ಯೋಗದ ಪ್ರತಿಫಲ ಅವನ ಅಥವಾ ಅವನ ಕುಟುಂಬದ ನಿರ್ವಹಣೆಗೆ ವಿನಿಯೋಗವಾಗುವುದು ಸ್ವಾಭಾವಿಕ. ಆದರೆ ಅದು ಸ್ವಾರ್ಥ, ಅಥವಾ ಕನಿಷ್ಠ. ಗೀತೆಯಲ್ಲಿ "ಭಗವಂತನು ಭಕ್ತನ ಆರಾಧನದಿಂದ ಸಂತೃಪ್ತನಾಗಿ ಅವರ ಇಷ್ಟಾರ್ಥಗಳನ್ನು ನೆರವೇರಿಸುತ್ತಾನೆ; ಆದರೆ ಭಕ್ತ ಆದನ್ನು ಈಶ್ವರಾರ್ಪಿತ ಬುದ್ಧಿಯಿಂದ ಅನುಭವಿಸದೆ ಸ್ವಾರ್ಥಿಯಾದರೆ ಅವನು ಒಬ್ಬ ಕಳ್ಳ"

> ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ।
> ತೈರ್ದತ್ತಾನ ಪ್ರದಾಯ್ಯೈಭೋ ಯೋ ಭುಂಕ್ತೆ ಸ್ತೇನ ಏವ ಸಃ ॥
>
> (ಭ. ಗೀ. ೩-೧೨)

ಎಂದು ಹೇಳಿದೆ.

ಶಾಸ್ತ್ರಕಾರರು ಇಂಥವರನ್ನು 'ಮಿತಂ ಪಚ' (ತನ್ನೊಬ್ಬನಿಗಾಗಿ ಪಾಕ ಮಾಡಿ ಕೊಳ್ಳುವರು). ಎಂದು ನಿಂದಿಸುತ್ತಾರೆ. ಸ್ವಾರ್ಥದ ಜೊತೆಗೆ ಯಥಾಶಕ್ತಿ ಪರಾರ್ಥ ಕ್ಕಾಗಿ ದುಡಿವುದು ಮಧ್ಯಮ; ಸ್ವಾರ್ಥವನ್ನು ಸಂಪೂರ್ಣವಾಗಿ ಬಿಟ್ಟು ಪರಾರ್ಥಕ್ಕಾ ಗಿಯೇ ತನ್ನನ್ನು ಸಮರ್ಪಿಸಿಕೊಳ್ಳುವುದು ಉತ್ತಮ ಜೀವನ. ಇದನ್ನು ನೀತಿ ಶಾಸ್ತ್ರ ಕಾರರು ಹೀಗೆ ವರ್ಣಿಸಿದ್ದಾರೆ.

ಸ್ವಾರ್ಥವ ಬಿಟ್ಟು ಲೋಕದೆ ಪರಾರ್ಥವ ಮಾಳ್ಪವರುತ್ತಮರ್ ಕರಂ
ಸ್ವಾರ್ಥಕೆ ಹಾನಿಗೈಯದೆ ಪರಾರ್ಥಕೆ ಯತ್ನಿಪರಲ್ತೆ ಮಧ್ಯಮರ್
ಸ್ವಾರ್ಥಕೆ ತಾಂ ಪರಾರ್ಥವ ವಿಘಾತಿಸುವರ್ನರರಾಕ್ಷಸರ್ಗಡಾ
ಸ್ವಾರ್ಥಮುಮಿಲ್ಲದಕ್ಕಟ ಪರಾರ್ಥವ ಕೀಳ್ವರ ನೇನನೆಂದಪೆಂ

(ಕನ್ನಡ ಭರ್ತೃಹರಿ ೬೫)

ಶಿವಶರಣರ ಕಾಯಕತತ್ತ್ವ ಈ ಹಂತವನ್ನೂ ಮೀರಿದ್ದು, ಅವರ ದೃಷ್ಟಿಯಲ್ಲಿ ಜಗತ್ತು ಶಿವಮಯ.

ಪತ್ರ ಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪಃ ।
ತಥಾ ಭೂಮ್ಯಾದಿ ರೂಪೇಣ ಶಿವ ಏಕೋ ವಿರಾಜತೇ ॥

(ಸಿ. ಶಿಖಾಮಣಿ ೧೦-೬೬)

ಕೊಂಬೆ, ರೆಂಬೆ, ಎಲೆ, ನಾರು, ಬೇರು ಮುಂತಾದವುಗಳಲ್ಲೆಲ್ಲ ವೃಕ್ಷತ್ವವು ವ್ಯಾಪಿ ಸಿರುವಂತೆ, ನೆಲ, ನೀರು, ಬೆಂಕಿ, ಗಾಳಿ ಮತ್ತು ಬಯಲುಗಳೆಲ್ಲವೂ ಶಿವನೇ. 'ಅವನಿಲ್ಲದೆ ಒಂದು ಹುಲ್ಲು ಕಡ್ಡಿಯೂ ಅಲುಗದು.' ಭಕ್ತನ ಉಪಯೋಗಕ್ಕಾಗಿ ಭಗವಂತ ಜಗತ್ತನ್ನು ಸೃಜಿಸಿದ್ದಾನೆ. ಅವನವನ ಪಾಪ ಪುಣ್ಯಗಳ ಪರಿಪಾಕದಿಂದ ಜೀವಿಗೆ ಶುಭಾಶಯ ಫಲಗಳು ಲಭಿಸುತ್ತವೆ ಎಂದು ತಿಳಿಯುವವರೇ ಶರಣರು ಅಥವಾ ಸಂತರು.

"ಇಳೆ ನಿಮ್ಮ ದಾನ, ಬೆಳೆ ನಿಮ್ಮದಾನ, ಎತ್ತು ನಿಮ್ಮ ದಾನ, ಬಿತ್ತು ನಿಮ್ಮ ದಾನ" ಈ ದೃಷ್ಟಿಯಿಂದ ಪರಿಶೀಲಿಸಿದಾಗ "ಕಾಯ ನಿಮ್ಮ ದಾನ, ಪ್ರಾಣ ಬುದ್ಧಿಗಳು ನಿಮ್ಮ ದಾನ, ನನ್ನ ರಟ್ಟೆಯ ಶಕ್ತಿ ಕೌಶಲ್ಯಗಳೆಲ್ಲವೂ ನಿಮ್ಮ ದಾನ"ವೇ ಎಂದು ಮೇಲೆ ನಾನು, ನನ್ನದು ಎಂಬುದಕ್ಕೆ ಅವಕಾಶವೆಲ್ಲಿದೆ ? ಹಾಗೆ ನಮ್ಮತನ ಅಳಿದಾಗಲೇ 'ವಸುಧೈವ ಕುಟುಂಬಕ'ತ್ವದ ತಿಳಿಬೆಳಗು ಮೂಡುತ್ತದೆ. ನಿಮ್ಮ ಸೊಮ್ಮು ನಿಮಗೆ ಒಪ್ಪಿಸಿ, ನೀವು ಕರುಣಿಸಿಕೊಟ್ಟ ಕಾರುಣ್ಯ ಪ್ರಸಾದವನ್ನು ಸೇವಿಸಿ ಆನಂದದಲ್ಲಿ ತನ್ಮಯ ನಾಗಿರುವುದೇ ಶರಣ ಜೀವನ ರಹಸ್ಯ.

## ವೃತ್ತಿ–ಕಾಯಕ

ವೃತ್ತಿ ಎಂದರೆ ಜೀವನ ನಿರ್ವಹಣಕ್ಕಾಗಿ ಕೈಗೊಳ್ಳುವ ಉದ್ಯೋಗ, ಅಥವಾ ಕಸಬು. ಇದಕ್ಕೂ ಮತ್ತು ಶಿವಶರಣರು ಹಿಡಿದಿದ್ದ ಕಾಯಕಕ್ಕೂ ಮಹದಂತರವಿದೆ. ಉದ್ಯೋಗವು ಸಂಸಾರಕ್ಕೆ ಅಭಿಮುಖವಾದ ಸಹಜ ಜೀವನ ಪ್ರವೃತ್ತಿ. ಕಾಯಕ ಶಿವಾಭಿಮುಖವಾದ ನಿರ್ಮಲ ನಿರ್ವಿಕಾರ ಕಾರುಣ್ಯ ಸಂತೃಪ್ತಿ.

"ನಿಮ್ಮ ಭೃತ್ಯತ್ವವ ವಹಿಸಿ, ನಿಮಗೆಂದು ಕಾಯಕಷ್ಟವ ಮಾಡಿ, ನಿರ್ವಂಚಕ ಬುದ್ಧಿಯಿಂದ ದುಡಿದು, ನಿಮ್ಮ ಸೊಮ್ಮು ನಿಮಗೆ ಸಲ್ಲಿಸಿ. ನೀವು ಕರುಣಿಸಿದ ಪ್ರಸಾದವ ಸೇವಿಸಿ, ಪ್ರಸಾದಕಾಯನಾಗಿರುವುದು ಕಾಯಕ" ಆದರಲ್ಲಿಯೂ ತಾನು ಕಾಯಕವಮಾಡುವೆನೆಂಬ ಹಂಬಲದಿಂದ ಹೆರವರ ಕಂದಿಸಿ, ಕುಂದಿಸಿ, ಬಂಧಿಸಿ, ನೋಯಿಸಿ, ಕೇಡು ಕಂಡವರ ಬೇಡಿ ತಂದು 'ದಾಸೋಹ'ವ ಮಾಡುವೆನೆಂಬುದು ಕಾಯಕವಲ್ಲ. ತನುಮನೋಧನಗಳನ್ನು ಗುರುಲಿಂಗ ಜಂಗಮಕ್ಕೆ ಒಪ್ಪಿಸಿ ತಾನು ತನ್ನದೆಂಬ ಅಭಿಮಾನ ವಳದು ಅವನೇ ತಾನೆಂದು ಬೆರೆದು ಬೇರಿಲ್ಲದಂತಿರುವುದು ದಾಸೋಹ.

ಶರೀರಾದಿ ಪದಾರ್ಥಾಂಶ್ಚ ದತ್ವಾದಾನಂ ಸಮರ್ಪಣಂ ।
ಸಮರ್ಪ್ಯ ಸೋऽಹಮಸ್ಮೀತಿ ದಾಸೋಹಂಭಾವ ಉಚ್ಯತೇ (ಅನುಭವ ಸೂತ್ರ)

ತನುಕರಗಿ, ಮನಬಳಲಿ, ಬಂದ ತೆರದನುವರಿದು, ಸಂದು ಸಂಶಯವಿಲ್ಲದೆ, ಜಂಗಮ ದಾಸೋಹ ಮಾಡುವ ಮಾಟ ಅದು. ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕೆ ಅರ್ಪಿತ. ದುರಾಸೆಯಿಂದ ಬಂದುದು ಅನರ್ಪಿತ. ಶಿವಶರಣರ ಪರಿಭಾಷೆಯಲ್ಲಿ ಕಾಯಕ ಮತ್ತು ದಾಸೋಹಗಳು ಪರಸ್ಪರ ಪೂರಕ.

ನಾನು ಆರಂಭವ ಮಾಡುವೆನಯ್ಯಾ ಶಿವಪೂಜೆಗೆಂದು
ನಾನು ಆರಂಭವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು,
ನಾನು ಆರಂಭವ ಮಾಡುವೆನಯ್ಯಾ ಜಂಗಮದಾಸೋಹಕ್ಕೆಂದು

ಎಂಬ ಅಣ್ಣನವರ ಮಾತಿನಲ್ಲಿ ಕಾಯಕ **ಗುರುಲಿಂಗ ಜಂಗಮದ** ಅನುಗ್ರಹ ಪಡೆಯಲಿಕ್ಕಾಗಿ ನೀವು ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದ ಕ್ರೀವಡೆನು 'ನಿಮ್ಮ ಸೊಮ್ಮಿಂಗೆ ಸಲಿಸುವೆನು' ಎನ್ನುತ್ತಾರೆ ಅವರು.

ಎರಡನೆಯದಾಗಿ ಕಾಯಕ ತತ್ವದಲ್ಲಿ ಮತ್ತೊಂದು ಮಹತ್ವದ ದೃಷ್ಟಿಯಿದೆ. ಶಿವಶರಣರು 'ಹಾಗದ ಕಾಯಕವ ಮಾಡಿ ಹಣವಡ್ಡತಾ' ಎನ್ನುವುದನ್ನು ಒಪ್ಪರು, ಮಾಡುವುದು ಅಲ್ಪ, ಬೇಡುವುದು ಅಧಿಕವಾಗಬಾರದೆಂಬುದು ಅವರ ಅಭಿಮತ. ಮತ್ತೆ ಕೆಲವರು ತಾವು ನೇಮ ಮಾಡುವುದಾಗಿ ಘೋಷಿಸಿಕೊಂಡು, "ಭಕ್ತರ ಭವನಂಗಳಂ ಹೊಕ್ಕು ಹಣವ, ಹೊನ್ನು ಬೇಡುವರು. ಅದು ಸದ್ಭಕ್ತರಿಗೆ ಸಲ್ಲ"ದೆಂದು ಅವರು ಖಂಡಿತವಾಗಿ ಹೇಳುತ್ತಾರೆ.

ಮೂರನೆಯದಾಗಿ ಗುರುಲಿಂಗ ಜಂಗಮ ರೂಪವಾದ ತ್ರಿವಿಧ ದಾಸೋಹಕ್ಕಾಗಿ ಮಾಡುವ ಕಾಯಕ ಪ್ರತಿನಿತ್ಯವೂ ನಡೆಯಬೇಕು. ತನಗೆ ವಿವೇಕವನ್ನು ಬೋಧಿಸುವವನೇ ಗುರು, ವಿವೇಕ ವೇದ್ಯನಾದ ಜಗತ್ಕರ್ತೃನೇ ಲಿಂಗ ; ಭಕ್ತನ ನಡೆ ಗುರ್ತಿಸಿ, ಫಲ ನೀಡಲು ಬಂದ ಕರುಣಾಳು ಪರಶಿವನೇ ಜಂಗಮ. ಇವರಿಗಾಗಿ ಮಾಡುವ ಆರಾಧನವೇ ತ್ರಿವಿಧ ದಾಸೋಹ. ಇದನ್ನು ನಡೆಸುವುದು ಪ್ರತಿಯೊಬ್ಬನ ಕರ್ತವ್ಯ. ವೇದೋಪನಿಷತ್ತುಗಳಲ್ಲಿ ಹೇಳುವ **ಋಣತ್ರಯ (ಪಿತೃ-ದೇವ-ಋಷಿ ಋಣ)** ನಿವೃತ್ತಿತತ್ವ

ಇದರಲ್ಲಿಯೇ ಅಡಗಿದೆ. ಈ ಬಗೆಯ ಆರಾಧನ ಸಾರೋದ್ಧಾರವಾಗಿ ನಡೆಯುತ್ತಿರಬೇಕು. ದವಸಧಾನ್ಯಗಳನ್ನು ಕೂಡಿಟ್ಟು ಒಮ್ಮೆ ಮಾಡುವುದಲ್ಲ ಕಾಯಕ. ಮುದುವಟ್ಟಗಳನ್ನು ಸ್ಥಾಪಿಸಿ, ಬರುವ ವೃದ್ಧ್ಯಂಶದಿಂದ ನಡೆಸುವದೂ ಅಲ್ಲ. ಸಂಗ್ರಹನೀತಿ ಸ್ವಾರ್ಥದ ಮೊದಲ ಮೆಟ್ಟಿಲು. ಇಂದಿನ ಹಣ ನಾಳೆಗೆ ತಂಗಳು. ಅದು ಚಿಲುಮೆಯ ನೀರಿನಂತೆ ಚೆಲ್ಲಿದಷ್ಟೂ ಊರುತ್ತಿರಬೇಕು. ಆಗ ಅದರಲ್ಲಿ ನೈರ್ಮಲ್ಯ, ಪವಿತ್ರತೆಗಳಿದ್ದಾವು! ಭಕ್ತನು ಭಗವಂತನಲ್ಲಿ ಇಟ್ಟಿರುವ ಅನನ್ಯ ಭಕ್ತಿ ಮತ್ತು ನಂಬುಗೆಗೆ ಇದು ಕುರುಹು. ಅನನ್ಯ ಶರಣನಾದ ಭಕ್ತನಿಗೆ ಭಗವಂತನು ಬೆಂಗಾವಲು. ಭಕ್ತನ ಯೋಗಕ್ಷೇಮದ ಹೊಣೆ ಭಗವಂತನದು.

ಶಿವಶರಣರಲ್ಲಿ ಗಣ್ಯರಾದ ಆಯ್ದಕ್ಕಿ ಮಾರಯ್ಯ. ಮೋಳಿಗೆ ಮಾರಯ್ಯ, ನುಲಿಯ ಚಂದಯ್ಯ ಮುಂತಾದವರ ಜೀವನಗಳಲ್ಲಿ ಈ ಕಾರ್ಯ ತತ್ವದ ಅನೇಕ ಪ್ರಕಾರಗಳು ಅಡಕವಾಗಿವೆ. ಪ್ರಕೃತ ಅವರಲ್ಲಿ ಒಬ್ಬರಾದ ಆಯ್ದಕ್ಕಿ ಮಾರಯ್ಯನವರ ಸಂಪಾದನೆ (ಸಾಧನೆ)ಯ ಪರಿಯನ್ನು ಪರಿಶೀಲಿಸುವುದು ಈ ಲೇಖನದ ಉದ್ದೇಶ.

ಶಿವಶರಣರ ದೃಷ್ಟಿಯಲ್ಲಿ ಜಗತ್ತು ಶಿವಮಯವಾದಂತೆ, ಶಿವನೂ ಜಗನ್ಮಯ. ಅಂದಮೇಲೆ ಜಗತ್ತು ಸತ್ಯ, ಮತ್ತು ಶಿವಸ್ವರೂಪ. ಶಿವಪ್ರಸಾದ ಲಭ್ಯವಾದ ವಸ್ತುಗಳನ್ನು ತತ್ರಾಪಿ ಪ್ರಸಾದರೂಪವಾದ ದವಸ ಧಾನ್ಯಗಳನ್ನು ವ್ಯರ್ಥಮಾಡುವುದೆಂದರೇನು? ಅವರ ಹೆಸರೇ ಹೇಳುವಂತೆ ಮಾರಯ್ಯನವರು ಪ್ರತಿದಿನ ಬೀದಿಯಲ್ಲಿ ಅಥವಾ ಶಿವಶರಣರ ಅಂಗಳದಲ್ಲಿ ಬಿದ್ದಿದ್ದ ಅಕ್ಕಿಕಾಳುಗಳನ್ನು ಸಾವಧಾನದಿಂದ ಆಯ್ದು ತರುವರು.

ಲಕ್ಕಮ್ಮ ಅವರ ಪ್ರಾಣಾಂಗನೆ. ಆಕೆ ಅವುಗಳನ್ನು ಶುಚಿಮಾಡಿ ಪಾಕಮಾಡುವಳು. ಸಕಾಲಕ್ಕೆ ಬಂದ ಜಂಗಮರಿಗೆ ಎಡೆಮಾಡಿ. ಉಳಿದ ಶ್ರೇಷ್ಠ ಪ್ರಸಾದವನ್ನು ಸೇವಿಸಿದ ಈ ದಂಪತಿಗಳು ಸಂಜೆ ಅನುಭವದ ಮಂಟಪದಲ್ಲಿ ಭಾಗವಹಿಸುವರು. ಇದು ಅವರ ದಿನಚರಿ.

ಮಾರಯ್ಯನವರ ದೃಷ್ಟಿಯಲ್ಲಿ ಗುರುಲಿಂಗ ಜಂಗಮ ಸೇವೆಗಿಂತ ಕಾಯಕ ಮಿಗಿಲು ಎಂಬುದು. ಕಾಯಕದಲ್ಲಿ ನಿರತನಾದವನು ಈ ಮೂವರು ಬಂದು ನಿಂದಿದ್ದರೂ ಅವರ ಹಂಗು ತೊರೆದು ಕಾರ್ಯನಿರ್ವಹಿಸಬೇಕು ಎಂದು ಭಾವಿಸಿದ್ದರು.

ಅನುಭವ ಮಂಟಪದಲ್ಲಿ ಗೋಷ್ಠಿ ನಡೆದಿರುವಾಗ ಒಂದು ದಿನ ಮಾರಯ್ಯನವರು ಕಾಯಕ ತತ್ತ್ವನಿಷ್ಠೆಯನ್ನು ಕುರಿತು ತಮ್ಮ ವಿಚಾರವನ್ನು ಬಿನ್ನೈಸಿದರು.

ಕಾಯಕದಲ್ಲಿ ನಿರತನಾದಡೆ
ಗುರುದರ್ಶನವಾದಡೂ ಮರೆಯಬೇಕು
ಲಿಂಗಪೂಜೆಯಾದಡೂ ಮರೆಯಬೇಕು
ಜಂಗಮ ಮುಂದಿದ್ದಡೆಯೂ ಹಂಗು ಹರಿಯಬೇಕು
ಕಾಯಕವೇ ಕೈಲಾಸವಾದಕಾರಣ.
ಅಮರೇಶ್ವರಲಿಂಗವಾಯಿತ್ತಾದರೂ ಕಾಯಕದೊಳಗು"

ಎಂದರು. ಮಾರಯ್ಯನವರ ದೃಷ್ಟಿಯಲ್ಲಿ ದುಡಿಯುವುದೇ ದೊಡ್ಡದು ಆದರೆ ವಾಸ್ತವಿಕ ದೃಷ್ಟಿಯಿಂದ ಗುರು ಸೇವೆ, ಲಿಂಗಪೂಜೆ ಮತ್ತು ಜಂಗಮ ದಾಸೋಹಗಳೂ ಕಾಯಕವೇ ! ಈ ವ್ಯಾಪಕವಾದ ಅರ್ಥ ಕಾಯಕದ ಆವೇಶದಲ್ಲಿ ಅವರಿಗೆ ಹೊಳೆಯಲಿಲ್ಲ. ದುಡಿಯುವುದಷ್ಟೇ ಕಾಯಕ. ದುಡಿಮೆಯಲ್ಲಿ ಮೈಮರೆತರೆ ಸಾಕು. ಅದೇ ಯೋಗ ಎಂದು ಅವರು ಭಾವಿಸಿದ್ದರು.

ಅನುಭವ ಮಂಟಪದಲ್ಲಿ ಅಧ್ಯಕ್ಷ ಪೀಠವನ್ನು ಅಲಂಕರಿಸಿದ್ದವರು ಪ್ರಭುದೇವರು. ಆದರೆ ಕೇವಲ ಪ್ರಭುವಲ್ಲ, ಅಲ್ಲಿಯ ಪ್ರಭುದೇವರು. ಅವರು ಸಾಮಾನ್ಯರಲ್ಲ, ಸಾಕ್ಷಾತ್ ಪರವಸ್ತು. ಆತ ಕರುಣಾಳು. ಪರಶಿವ ತಾನೇ ಗುರುವಾಗಿ ಬಂದು ದೀಕ್ಷೆ ಮಾಡಿದ, ಲಿಂಗವಾಗಿ ಸ್ಥೂಲ, ಸೂಕ್ಷ್ಮ ಮತ್ತು ಕಾರಣತನುಗಳನ್ನು ಇಂಬುಗೊಂಡು ಪೂಜೆಗೊಂಬ ಕಡೆಗೆ ಭಕ್ತನನ್ನು ಪರೀಕ್ಷಿಸಿ ಅನುಗ್ರಹಿಸಲು ಜಂಗಮನಾಗಿ ಬಂದಿದ್ದಾನೆ.

ಶಿವಶರಣ ವಾಙ್ಮಯದಲ್ಲಿ ಅಲ್ಲಮಪ್ರಭು ಮತ್ತು ಶೂನ್ಯಸಿಂಹಾಸನ ಪದಗಳು ಪಾರಿಭಾಷಿಕಗಳು, ಅವು ವಸ್ತುವಾಚಿಯಲ್ಲ; ತತ್ತ್ವವಾಚಕಗಳು; ಎಂದರೆ " ಪ್ರಭು> ಪರಬ್ರಹ್ಮ. ಅಲ್ಲಮ>ಅದಲ್ಲದೆ + ಏನೂ ಅಲ್ಲದವನು: ಶೂನ್ಯ > ಏನೂ ಅಲ್ಲದ್ದು ಅದರ ಹೊರತು ಮತ್ತೇನೂ ಅಲ್ಲವೆಂದು ಅರ್ಥ. ಏನೂ ಅಲ್ಲದ ಶೂನ್ಯ ಪೀಠದ ಮೇಲೆ ಏನೂ ಅಲ್ಲದ ಅಲ್ಲಮ ತಾನೇ ಅಧಿರೋಹಿಸಬಲ್ಲ! "ಪೂರ್ಣಾತ್ಪೂರ್ಣಮುದಚ್ಯತೇ" ಎಂಬ ಶ್ರುತಿ ಇದನ್ನು ಸಮರ್ಥಿಸಿದೆ. ಆದ್ದರಿಂದಲೇ ಪ್ರಭು ಆ ಪರಮಾತ್ಮನ ಸ್ಥಿತಿಯಲ್ಲಿ ನೆಲೆ ನಿಂತು ಎಲ್ಲ ಜೀವಿಗಳ ಪರಾತ್ಮಾನುಭೂತಿಯನ್ನು ಅಳೆದು ನೋಡುತ್ತಿದ್ದು ತಿಳಿದು ವಿಚಾರದ ಒರೆಗಲ್ಲಿಗೆ ತೀಡಿ ನೋಡುತ್ತಿದ್ದಾನೆ.

ಅಂಥ ಪ್ರಭು ಮಾರಯ್ಯನವರ ಕರ್ಮವಾದದ ಅತಿರೇಕವನ್ನು ನಿರಾಕರಿಸಿ ಕರ್ಮಕೌಶಲ ರಹಸ್ಯವನ್ನು ನಿರೂಪಿಸುತ್ತಿದ್ದಾನೆ.

"ಕಂಗಳಮುಂದಣ ಗೊತ್ತು ಹರಿಯದು,
ಕಾಮ್ಯದ ಮುಂದಣ ಚಿತ್ತ ಹರಿಯದು,
ಮಾಡಿಹೆನೆಂಬ ಕೂಟದ ಚಿತ್ತದಿಂದಲ್ಲದೆ ಸ್ವಸ್ಥವಿಲ್ಲ;
ಅಗಸ ನೀರಡಿಸಿ ನಿಂದಂತೆ ಆಗಬೇಡ
ಗುಹೇಶ್ವರ ಲಿಂಗನರಿಯುವದಕ್ಕೆ ಮಾರಯ್ಯ

ಎಂದರು! ಅಗಸ ನೀರಿನಲ್ಲಿದ್ದರೂ ಅವನಿಗೆ ನೀರಡಿಕೆಯುಂಟು ! ಹೊರಗಿನ ನೀರ ಕುಡಿದೇ ಅವನ ನೀರಡಿಕೆ ನಿಂದೀತು ಮನತಣಿದೀತು! ಕೇವಲ ದುಡಿಯುವದರಲ್ಲಿಯೇ ನೀನಿದ್ದರೆ, ದುಡಿದ ಫಲವೆನಿಸಿದ ಪರತತ್ವದ ಅನುಭವ ನಿನಗೆ ಹೇಗೆ ಆದೀತು? ಆ ಅನುಭವ ಆಗದ ಮೇಲೆ ಈ ದುಡಿಮೆಗೆ ಪ್ರಯೋಜನವಾದರೂ ಏನು ? ಎಂದು ಎಚ್ಚರಿಸಿದ ಪ್ರಭು ತನ್ನ ಮಾತನ್ನು ಮುಂದುವರಿಸುತ್ತಾನೆ.

ನೂಡುವ ಮಾಟದಿಂದಲೇ ಬೇರೊಂದನರಿಯಬೇಕು.
ಅರಿವಿಂಗೆ ನೆಮ್ಮುಗೆ ಒಡಮೂಡಬೇಕು.
ಅರಿವಿಂಗೆ ನೆಮ್ಮುಗೆ ಒಡಮೂಡಿದ ಬಳಿಕ
ಬಯಲ ಭ್ರಮೆ ಕಳೆದು ಗುಹೇಶ್ವರ ಲಿಂಗದಲಿ
ನಿಜ ಪದವನೈದುವದು ಮಾರಯ್ಯ

ಎಂದರು. ನಿಜ ಪದವನ್ನು ಪಡೆವುದು ಒಮ್ಮುಖದ ಹಾದಿ (One Way)ಯಲ್ಲಿ; ಅದು ಒಂದೇ ಬಾರಿಗೆ ಎರಡು ಕೆಲಸ ನಿರ್ವಹಿಸುವ (two things at a time)ಜಾಣ್ಮೆ! ತಲೆಯ ಮೇಲೆ ಕೊಡವಿಟ್ಟು ನರ್ತಿಸುವ ನಟಿ, ಆ ಕೊಡದ ಮೇಲೆ ತನ್ನ ಗಮನ ವಿಡುವಂತೆಯೇ ತಾಳಲಯಾದಿಗಳ ಮೇಲೆಯೂ ಗಮನವಿರಿಸುತ್ತಾಳೆ. ಅದರಂತೆ ತಾನು ಮಾಡುವ ಮಾಟದಲ್ಲಿಯೇ ಬೇರೊಂದನ್ನು ಅರಿಯಬೇಕು. ಆ ಅರಿವಿನಲ್ಲಿ ನಂಬುಗೆ ಒಡಮೂಡಬೇಕು. ಆಗಲೇ ಬಯಲ ಭ್ರಮೆ ಅಳಿದೀತು! ಹಾಗಲ್ಲದೆ ನಿಜ ಪದವಿ ದೊರೆಕೊಳ್ಳದು.

ಪ್ರಭುವಚನವನ್ನು ಮನನ ಮಾಡಿದ ಮಾರಯ್ಯನವರಿಗೆ ತನ್ನ ಕಾಯಕದಲ್ಲಿ ಅನಾದರ ಮೂಡಿತು. 'ಗೆದ್ದಲು ಮನೆಯ ಮಾಡಿ ಸರ್ಪಂಗೆ ಇಂಬಾದಂತೆ ತನ್ನ ಕಾಯಕ ಆಗಬಾರದು, ಎನಿಸಿತು. " ನಾನತ್ತಣ ದ್ರವ್ಯದ ತಂದು, ಇತ್ತ ಮಾಡಿದರೆ, ನನಗೆ ಎತ್ತಣ ಮುಕ್ತಿ?" ಎನಿಸಿತು. "ಘನಮಹಿಮ ಶರಣರ ಸಂಗದಿಂದ "ಮನಮಗ್ನ ಯೋಗ"ದಲ್ಲಿ ತನ್ನ ಚಿತ್ತ ಸ್ವಷ್ಟವಾದರೆ ಸಾಕು ಅರಿವು ಅರತು (ಹಿಂಗಿ), ಮರಹು ನಷ್ಟ ವಾಗಿ, ಅಮಳೇಶ್ವರ ಲಿಂಗದಲ್ಲಿ ಕೂಡುವದಾಗಿ ನಿರ್ಧರಿಸಿ ಪ್ರಭುದೇವರಿಗೆ ಬಿನ್ನೈಸಿದರು.

ಮಾರಯ್ಯನವರು ಯೋಗವನ್ನು ಮರೆತು ಕೇವಲ ಕರ್ಮದಲ್ಲಿ ನಿರತರಾಗಿದ್ದುದು ಪ್ರಭುವಿಗೆ ಸರಿದೋರಲಿಲ್ಲ, ಅದಕ್ಕಾಗಿಯೇ ಅವರು "ಯೋಗಿಯಾಗಿದ್ದರೂ ಕರ್ಮ ಮಾಡುವ ಕರ್ಮಯೋಗವನ್ನು ಉಪದೇಶಿಸಿದರು. ಕರ್ಮವನ್ನು ತೊರೆವುದು ಅವರ ಉದ್ದೇಶವಲ್ಲ. ಜೀವನ್ಮುಕ್ತಾವಸ್ಥೆಯಲ್ಲಿ ಶಿವನಲ್ಲಿ ಕೂಡಿದ್ದರೂ ಮಾಡುವುದನ್ನು ಮರೆಯಬಾರದು, ಅವನಲ್ಲಿ ಸುಮ್ಮನೆ ಕುಳಿತು ಬಿಡುವುದು ಯೋಗವೇ ಅಲ್ಲ ಎಂ-ಬುದು ಪ್ರಭುವಿನ ಅಭಿಮತ. ಆದರೆ ಮಾರಯ್ಯ ಗ್ರಹಿಸಿದ್ದು " ಕೂಡಿದ ಮೇಲೆ ಮಾಟವಿನ್ನೇಕೆ! ಎಂದು. ಎಂದರೆ ಮಾಳಿಗೆ ಹತ್ತಿದ ಮೇಲೆ ಏಣಿಯ ಹಂಗೇನು? ಎಂದಂ ತಾಯಿತು. ಅಷ್ಟರಲ್ಲಿ ಮಾರಯ್ಯನವರ ಪುಣ್ಯಾಂಗನೆ ಲಕ್ಕಮ್ಮ ಪ್ರವೇಶಿಸಿ, ಶರಣ ತ್ರಿಂಥಿಣಿಗೆ ವಂದಿಸಿ ಗಂಡನಿಗೆ ಬಿನ್ನೈಸಿದಳು.

ಕಾಯಕ ನಿಂದಿತ್ತು ಹೋಗಯ್ಯ, ಎನ್ನಾಳ್ದನೆ!
ಭಾವಶುದ್ಧವಾಗಿ ಮಹಾಶರಣರ ತಿಪ್ಪೆಯ ತಪ್ಪಲ
ಅಕ್ಕಿಯ ತಂದು ನಿಶ್ಚಯಿಸಿ ಮಾಡಬೇಕು,
ಬೇಗ ಹೋಗು ಮಾರಯ್ಯ!

ಎಂದಳು. ಮುಂದುವರೆದು ಎಚ್ಚರಿಸಿದಳು—

"ಅಂಗವರತ ಅರಿವು ಅಂಗದಲ್ಲಿ,
ಬಯಕೆಯು ರತ ಕೈಯಲ್ಲಿ
ತಂಡುಲವ ನಾಯ್ದುಕೊಂಡು,
ಸಂದ ಪ್ರಮಥರ ಅಂಗಳಕ್ಕೆ ಬೇಗ ಹೋಗಿ
ಕೊಂಡು ಬಾ, ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ ಮಾರಯ್ಯಾ"

ಕಾಯಕ ಮಾಡುವಲ್ಲಿ 'ಅಂಗವರತ ಅರಿದನ ಅಂಗ' ಎಂದರೆ ಅಂಗ ಗುಣಗಳು ಅಳಿದ ಅಂಗವಾಗಬೇಕು. ಅಕ್ಕಿಯನ್ನು ಆಯುವ ಕೈ 'ಬಯಕೆ ಅರತಿ(ಹಿಂಗಿ)ರ' ಬೇಕು. ನಿಷ್ಕಾಮವಾಗಿರಬೇಕು. ಅದೂ ಸಿಕ್ಕ ಸಿಕ್ಕಲ್ಲಿ ಹೋಗಿ ಅಕ್ಕಿ ಆಯಬಾರದು; ಸಂಗಮನಾಥನ ಪ್ರಮಥರ ಅಂಗಳದಲ್ಲಿಯೇ ಅರಿಸಿತರಬೇಕು ಎಂದರೆ ಸತ್ಯ ಶುದ್ಧ ಮಾನಸರಾದ ಪ್ರಮಥರ ಅಂಗಳದ ಆ ಅಕ್ಕಿಕಾಳುಗಳಲ್ಲಿಯೂ ಅಪವಿತ್ರತೆಯ ಸೋಂಕಿರಲಾರದು. ಮೇಲಾಗಿ ಒಡಲ ಅವಸರಕ್ಕೆ ಕುದಿವ ಬಯಕೆ ಬತ್ತಿರಬೇಕು. ತನ್ನ ಹಾಗೂ ತನ್ನ ಹೆಂಡತಿ ಮಕ್ಕಳ ಹೊಟ್ಟೆ ಹೊರೆಯುವ ಉದ್ದೇಶವಿಲ್ಲದುದಾಗಿರಬೇಕು ಆ ಕಾಯಕ ಎಂದು ಅವಳು ಕಾಯಕದ ನಿಜ ಸ್ವರೂಪವನ್ನು ಗಂಡನಿಗೆ ತಿಳಿ ಹೇಳಿದಳು. ಅವಳ ಮಾತಿನಲ್ಲಿ ಪ್ರಭು ಹೇಳುವ 'ಕಾಮ್ಯದ ಮುಂದಣ ಚಿತ್ತವ ಹರಿದು' ಎಂಬ ಮಾತಿನ ನವ್ಯಾರ್ಥವೂ ಸೇರಿದೆ.

ಪ್ರಭುದೇವರು ಹೇಳಿದ ಮಾತಿನ ಅರ್ಥವನ್ನು ಅರಿಯದ ಮಾರಯ್ಯನಿಗೆ ಕಾರ್ಯ ದಲ್ಲಿ ಅನಾದರ. ಅಮಳೇಶ್ವರ ಲಿಂಗದಲ್ಲಿ ಮನ ಮಗ್ನವಾದರೆ ಸಾಕು ಎಂಬ ಅಮಲು ಅವನಿಗೆ. ಆದರೂ ಆತ ಹೆಂಡತಿಯ ಒತ್ತಾಯಕ್ಕೆ ಕಾಯಕಕ್ಕೆ ಮುನ್ನಡೆದ. ಆದರೆ ಅತನಿಗೆ ಕಾಯಕತತ್ತ್ವ ಮರೆದಿತ್ತು. ಅದರ ಫಲವಾಗಿ ಆತ ಬೇಗ ಬೇಗ ತನ್ನ ಕಾರ್ಯ ಮುಗಿಸುವ ಹಂಬಲದಿಂದ ಅಕ್ಕಿ ಕಾಳುಗಳನ್ನು ಆರಿಸುವ ನಿಯಮವನ್ನು ತೊರೆದು ಅಕ್ಕಿಯನ್ನು ಬಾಚತೊಡಗಿದ. ಬಸವಣ್ಣನ ಅಂಗಳದಲ್ಲಿ ಅಂದು ಪುಷ್ಕಳ ಅಕ್ಕಿ ಚೆಲ್ಲಿತ್ತು, ಅದನ್ನು ಎರಡೂ ಕೈಗಳಿಂದ ರಾಶಿ ಮಾಡಿ ವಸ್ತ್ರದಲ್ಲಿ ಗಂಟಿಕ್ಕಿದ. ಅಲ್ಲಿಯೇ ಕಾಯಕತತ್ತ್ವದ ದಾರಿ ತಪ್ಪಿತ್ತು. ಪ್ರತಿ ನಿತ್ಯ ಒಂದು ಹಿಡಿ ಅಕ್ಕಿ ತರುತ್ತಿ ದ್ದವನು ಇಂದು ಹೆಚ್ಚು ಅಕ್ಕಿ ತುಂಬಿದ ಗಂಟು ತಂದುದನ್ನು ಕಂಡ ಲಕ್ಕಮ್ಮ ಕಳವಳಿಸಿ ದಳು. ಮತ್ತು ಕೇಳಿದಳು.

"ಇದೇನು ಎನ್ನಾಳ್ದನೆ, 'ಸಂದಣಿಗೊಂಡು ಮನ ಹರುಷದಿಂದ ಬಸವಣ್ಣನ ಅಂಗಳಕ್ಕೆ ಹೋಗಿ ತಿಪ್ಪೆಯ ತಪ್ಪಲಲ್ಲಿ ಬಿದ್ದಿರ್ದ ತಂಡುಲವ ಕಟ್ಟಿಕೊಂಡು "ಎಯ್ದಿದಿ ರಲ್ಲಾ! ಮತ್ತೆ ಎಂದಿನಂದವೆ ಸಾಕು! ಕಟ್ಟಿಕೊಂಡು ಹೋಗಿ ಅಲ್ಲಿಯೇ ಸುರಿಯಿರಿ.' ಎಂದಳು.

ಏಕೆಂದರೆ "ಆಸೆ ಎಂಬುದು ಅರಸಿಂಗಲ್ಲದೆ ಶಿವಭಕ್ತರಿಗಲ್ಲ, ರೋಷವೆಂಬುದು ಯಮದೂತರಿಗಲ್ಲದೆ, ಅಜಾತರಿಗಲ್ಲ, ಈ ಅಕ್ಕಿ ಆಸೆ ನಿಮಗೇಕೆ? ಇದನ್ನು ಶಿವ ಒಪ್ಪ."

" ಬಡತನವೆಂಬ ಕೊರತೆ ನಿಮಗೇಕೆ ? ಅಂಗಕ್ಕೆ ಬಡತನವಲ್ಲದೆ, ಮನಕ್ಕೆ ಬಡತನ ವುಂಟೆ ? ಬೆಟ್ಟವು ಬಲ್ಲಿತ್ತಾದರೂ ಅದು ಬಡತನ (ಹರಿತ)ವುಳ್ಳ ಉಳಿಯ ಹೊಡ ತಕ್ಕೆ ಒಡೆಯದೆ ? ಘನ ಭಕ್ತರಿಗೆ ಬಡತನವಿಲ್ಲ, ಸತ್ಯ ನಿಷ್ಠರಿಗೆ ದುಷ್ಕರ್ಮವಿಲ್ಲ."

" ಭಕ್ತರು ಕಾಯಕವೆಂದು ದಾಯಗಾರಿಕೆಯಲ್ಲಿದ್ದು ದಾಸೋಹ ಮಾಡಬಾರದು. ಒಮ್ಮನದಲ್ಲಿ ಮಾಡಿ. ಇಮ್ಮನವಾಗದ ಮುನ್ನವೇ ಲಿಂಗಕ್ಕೆ ಸಲ್ಲಿಸಬೇಕು.

ಮಾಡುವ ಕೆಲಸವನ್ನು ಕರ್ತವ್ಯ ದೃಷ್ಟಿಯಿಂದ ಒಂದೇ ಮನಸ್ಸಿನಿಂದ ಮಾಡ ಬೇಕು. ಅದೇ ಶಿವನಿಗೆ ಪ್ರಿಯವಾದ ಕಾಯಕ. ಇಮ್ಮನ (ಕವಲು ಮನಸ್ಸು) ಸಲ್ಲದು. ಇದು ಲಕ್ಕಮ್ಮಗಳ ದಾಸೋಹನಿಷ್ಠೆ. ಈಗ ಅದಕ್ಕೆ ಭಂಗ ಬಂತು. ಆಶೆ ಆವೇಶವಾದಾಗ ನಿಯಮ ಭಂಗವಾಗುವುದು ಸಹಜ.

'ಭಕ್ತರಿಗೆ ಬಡತನವುಂಟೆ ? ನಿತ್ಯರಿಗೆ ಮರಣವುಂಟೆ ? ಭಕ್ತರು ಬಡವರೆಂದು ಮತ್ತೊಂದ ಕೊಟ್ಟಿಹನೆಂದರೆ ಆಗ ಭಗವಂತನ ಅಸ್ತಿತ್ವದಲ್ಲಿಯೇ ನಮಗೆ ಸಂದೇಹ ಬಂದಂತಾಯಿತು ! ಭಾವಶುದ್ಧವಿಲ್ಲದ ಭಕ್ತಿ ಹೋಯಿತು. ಅದು ಶಿವನಿಗೆ ಪ್ರಿಯ ವಾಗದು. 'ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು. ನಡೆಯಿಲ್ಲದ ನುಡಿ ಅರಿವಿಂಗೆ ಹಾನಿ. ಕೊಡದೆ ತ್ಯಾಗಿ ಎನಿಸಿಕೊಂಬುದು ಮುಡಿಯಿಲ್ಲದ ಮಂಡೆಗೆ ಮಾಡುವ ಶೃಂಗಾರದಂತೆ—ಹಾಸ್ಯಾಸ್ಪದ. ಅದು ಶಿವಪ್ರಿಯವಾಗದು.

ಹೀಗೆ ಯೋಚಿಸಿದ ಲಕ್ಕಮ್ಮನಿಗೆ ಮತ್ತೊಂದು ಸಂದೇಹವೂ ಮೂಡಿತ್ತು. ಅದು ನಿಜವೂ ಆಗಿತ್ತು. ಪ್ರತಿದಿನ ಅಕ್ಕಿಕಾಳು ಆರಿಸುವ ಮಾರಯ್ಯನವರನ್ನು ಕಂಡು ಮರುಕಗೊಂಡ ಬಸವಣ್ಣ "ಶಿವಶಿವಾ ! ಒಂದೊಂದು ಕಾಳನ್ನು ಆರಿಸುತ್ತಾ ಕುಳಿತರೆ ಅವರ ದಾಸೋಹಕ್ಕೆ ಮೊಳೆಯಾದೀತಾ" ಎಂದು ಅಂದು ಅಂಗಳದಲ್ಲಿ ಹೆಚ್ಚು ಅಕ್ಕಿ ಸುರುವಿದ್ದ. ಅದನ್ನೇ ಮಾರಯ್ಯನವರು ಬಾಚಿ ಗಂಟಿಕ್ಕಿಕೊಂಡು ಬಂದಿದ್ದು ಲಕ್ಕಮ್ಮ ಹೇಳಿದಳು.

''ಒಮ್ಮಾನವ ಮೀರಿ ತಂದೀ, ಇದು ನಿಮ್ಮ ಮನವೊ ?
ಬಸವಣ್ಣನ ಅನುಮಾನದ ಚಿತ್ತವೊ?
ಈ ಮಾತು ಮಾರಯ್ಯಪ್ರಿಯ ಅಮಳೇಶ್ವರ ಲಿಂಗಕ್ಕೆ
ಸಲ್ಲದ ಬೋನ; ಇದನ್ನಲ್ಲಿಯೇ ಸುರಿದು ಬನ್ನಿ''

ಎಂದು. ಈ ಮಾತು ಕೇಳಿದ ಮಾರಯ್ಯನಿಗೆ ಬೇಸರ. ಆತ ದಿನದಿನವೂ ಮಾಡಿ ಮಾಡಿ ಬೇಸತ್ತಿದ್ದ; ಮತ್ತು ಹೇಳಿದ.

'ಈ ಮಾಡುವ ಕಷ್ಟ ತಪ್ಪಿ ಶಿವನಲ್ಲಿ ಕೂಡುವ ಸುಖ ಅದೆಂದಿಗೆ ಪ್ರಾಪ್ತಿ ಯಾದೀತು ! ' ಎಂದು. ಆಕೆ ಹೇಳಿದಳು.

"ಕೂಡುವಿಕೆ ಮಾಡುವಿಕೆಗೆ ಕೈಕೂಲಿಯಲ್ಲ. ಮಾಡಿ ಕೂಡುವುದು ಸಾಧಕನ ಸ್ಥಿತಿ, ಕೂಡಿಮಾಡುದು ಸಿದ್ಧನ ಸ್ಥಿತಿ. ಆದ್ದರಿಂದ ಮಾಡಿ ಕೂಡುವ ಹುಚ್ಚು ಹಂಬಲ ತೊರೆದು ಕೂಡಿಮಾಡುವ ಗುಟ್ಟನ್ನು ಅವಳು ವಿವರಿಸಿ ಹೇಳಿದಳು.

''ಮಾಡಿ ನೀಡಿ ಹೋಗಿಹೆನೆಂಬಾಗಲೆ
ಕೈಲಾಸವೇನು ಕೈಕೂಲಿಯೆ ?
ಮುಂದೊಂದ ಕಲ್ಪಿಸದೆ, ಹಿಂದೊಂದ ಭಾವಿಸದೆ.
ಸತಿ ಸಂದಿದ್ದಾಗಲೆ—ಅಮುಳೇಶ್ವರಲಿಂಗವಿದ್ದ ತಾವೆ ಕೈಲಾಸ ''

ಸತಿಯ ಮಾತನ್ನು ಆಲಿಸಿದ ಮಾರಯ್ಯನಿಗೆ ಜ್ಞಾನೋದಯವಾಯಿತು. ಅವಳಲ್ಲಿ ಭಕ್ತಿ ಮೂಡಿತು. ಸತಿಯ ಲಿಂಗಾಂಗಯೋಗದ ಸ್ವಾರಸ್ಯವನ್ನೂ ಬೆಸಗೊಂಡು ಹೇಳಿದ.

"ನೀ ಸತಿಯಾಗಿ, ನಾ ಪತಿಯಾಗಿ, ಉಭಯಪ್ರಾಣ ಏಕರೂಪಾಗಿ. ಯೋಗದ ಅಂಗನೆಯೇ ಅಮುಳೇಶ್ವರಲಿಂಗವ ತೋರಾ" ಎಂದ. ಶಿವಶರಣರು ಗಂಡುಹೆಂಡಿರಲ್ಲಿ ಭೇದವನ್ನು ಎಣಿಸುವುದಿಲ್ಲ. ಮೇಲಾಗಿ ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ ಎಂಬ ಭಾವ ಅವರದು.

ಲಕ್ಕಮ್ಮ ಉತ್ತರಿಸಿದಳು. " ಅಹಂಕಾರ ಗುಣವು ಅಳಿದ ತ್ರಿವಿಧ ದಾಸೋಹವೇ ಮಹಾಘನ ಲಿಂಗೈಕ್ಯ " ಎಂದು. ಮಾರಯ್ಯ ಸತಿಯ ಮಾತಿನ ಮರ್ಮವನ್ನು ಅರೈದು " ತ್ರಿವಿಧ ದಾಸೋಹವೇ ಸಚ್ಚಿದಾನಂದ ಪರಬ್ರಹ್ಮ " ವೆಂಬ ನಿರ್ಧಾರಕ್ಕೆ ಬಂದ.

ಲಕ್ಕಮ್ಮ ಪತಿ ಶುದ್ಧಕಾಯಕದಿಂದ ತಂದ ಒರ್ಬಿಡಿ ಅಕ್ಕಿಯನ್ನೇ ಪಾಕಮಾಡಿ, ಬಸವಾದಿ ಪ್ರಮಥರಿಗೆ ಆರೋಗಣೆಗೆ ಆಮಂತ್ರಣಕೊಡಬಯಸಿ ಲಕ್ಕಮ್ಮ.

"ಬಸವಣ್ಣ, ಚನ್ನಬಸವಣ್ಣ, ಪ್ರಭುದೇವರು ಮೊದಲಾದ ಅಸಂಖ್ಯಾತ
ಪ್ರಮಥಗಣದೆಡೆಗೈದಿ ವಿಭೂತಿಯ ಸಂಬಂಧಿಸಿ ಬನ್ನಿ"

ಎಂದು ಪತಿಗೆ ಬಿನ್ನೈಸಿದಳು.

ಆದರೆ ಮಾರಯ್ಯನಿಗೆ ಧೈರ್ಯಬರಲಿಲ್ಲ. ಆತ ಸಂದೇಹದ ಕಡಲಲ್ಲಿ ಮುಳುಗಿದ. "ಶಿವಶಿವಾ, ನಾವೆತ್ತ ? ನಿತ್ಯನಿಯಮ ವ್ರತಶೀಲ ಸಂಪನ್ನರಾದ ಅಸಂಖ್ಯಾತ ಮಹಾಗಣಂಗಳ ಆರೋಗಣೆಯೆತ್ತ ? ಅವಗೆಲ್ಲರನ್ನು ಸಂತೃಪ್ತಿಪಡಿಸಲು ನಮಗೆ ಅಳವೆ ? ನಾವು ಅಶಕ್ತರು" ಎಂಬ ಕಳವಳ ಆತನಿಗೆ. "ಆಯ್ದು ತಂದ ಒಂದು ಹಿಡಿ ಅಕ್ಕಿಯಿಂದ ಸಕಲ ಗಣಸಮೂಹವನ್ನು ದಾಸೋಹದಿಂದ ತೃಪ್ತಿಪಡಿಸಲು ಸಾಧ್ಯವೆ ?" ಎಂಬ ಚಿಂತೆಗೊಳಗಾದ. ಆಗದುದಕ್ಕೆ ಕೈಹಾಕಿ ನಗೆಗೀಡಾಗುವುದಕ್ಕಿಂತ ತೆಪ್ಪನಿರುವುದೇ ಲೇಸೆಂದು ನಿರ್ಧರಿಸಿದ.

ಮಾರಯ್ಯನ ಭಾವದ ಬಡತನದ ಇಂಗಿತವನ್ನು ಅರಿತ ಲಕ್ಕಮ್ಮ ಅವನ ಸಂದೇಹವನ್ನು ನಿರಾಕರಿಸಿ ದೃಢಶ್ರದ್ಧೆಯಿಂದ ಹೇಳಿದಳು.

ಮನಶುದ್ಧವಿಲ್ಲದವರಿಗೆ ದ್ರವ್ಯದ ಬಡತನವದಿದೆ
ಚಿತ್ತಶುದ್ಧದಲ್ಲಿ ಕಾರ್ಯಮಾಡುವಲ್ಲಿ ಸದ್ಭಕ್ತರಿಗೆ
ಎತ್ತ ನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು
ಮಾರಯ್ಯಪ್ರಿಯ ಅಮುಳೇಶ್ವರಲಿಂಗದ ಸೇವೆಯುಳ್ಳನ್ನಕ್ಕ

ಮುಂತಾಗಿ ಮಾರಯ್ಯನಿಗೆ ಧೈರ್ಯ ಹೇಳಿಕಳುಹಿಸಿದಳು. ಇತ್ತ ಲಕ್ಕಮ್ಮ ತನ್ನ ಅನುಭಾವಕ್ಕೆ ಅಳವಟ್ಟ ಸರ್ವಜ್ಞತ್ವದಿಂದ ಬಸವಾದಿ ಪ್ರಮಥರ ಹೃದಯಾಂತರಾಳವನ್ನು ಹೊಕ್ಕು ಅವರವರ ಬಯಕೆಯರಿದು, ಅದಕ್ಕೆ ತಕ್ಕಂತೆ ಭಕ್ತಿಯಿಂದ ಪಾಕ ಸಿದ್ಧಗೊಳಿಸಿದಳು.

ಮಾರಯ್ಯ ಬಸವಾದಿ ಪ್ರಮಥರಲ್ಲಿಗೆ ಹೋಗಿ ಸಲ್ಲಿಸಿದ ಬಿನ್ನಹ ಇದು—

"ಸತ್ಯವೆಂಬ ತಟ್ಟೆಯಲ್ಲಿ ಚಿತ್ತಶುದ್ಧವೆಂಬ ವಿಭೂತಿಯ
ಬೈಚಿಟ್ಟು ಸಕಲ ಸಂಪದ ಪ್ರಮಥರು ಮುಂತಾಗಿ
ಅಮುಳೇಶ್ವರ ಲಿಂಗದ ಆಶ್ರಯದಲ್ಲಿ ಪ್ರಸಾದವ
ಕೈಕೊಂಬುದಕ್ಕೆ ಬಾರಾ ಸಂಗನಬಸವಣ್ಣಾ !"

ಬಿನ್ನಹ ಕೇಳಿದ ಬಸವಣ್ಣ ಬೆರಗಾದ. ಮಾತೇ ಹೊರಡಲೊಲ್ಲದು. ಆತನಿಗೆ ಉಭಯ ಸಂಕಟ. "ಒಲ್ಲೆನೆಂದರೆ ಪ್ರಸಾದ ನಿರಾಕರಣೆಯ ದೋಷ. ಹೋದರೆ ಎಂತೊ, ಏನೊ ? ಬಡತನದ ಬವಣೆಗೊಳಗಾದ ಮಾರಯ್ಯನವರಲ್ಲಿಗೆ ಅಸಂಖ್ಯಾತ ಪ್ರಮಥರನ್ನು ಕರೆದೊಯ್ದರೆ ಅವರನ್ನು ಇಲ್ಲದ ತೊಂದರೆಗೆ ಒಳಪಡಿಸಿದಂತಾದೀತು !" ಎಂಬ ಸಂಕೋಚ.

ಆರೋಗಣೆ ಅದ್ದೂರಿಯಾಗಿಯೇ ನಡೆಯಿತು. ಯಾರ ನೇಮಕ್ಕೂ ಕುಂದು ಬರಲಿಲ್ಲ. ಸಂತುಷ್ಟನಾದ ಪ್ರಭು ಸಮಸ್ತ ಪ್ರಮಥರ ಪರವಾಗಿ ಹೀಗೆಂದ—

"ಆರಾರ ನೇಮಕ್ಕೆ ಸಂದಿತ್ತು,
ಇಚ್ಛಾ ಭೋಜನಕ್ಕೆ ಕೃತ್ಯವಾಯಿತ್ತು,
ಮನ ಘನವು ಕಂಡಯ್ಯ, ಸಂಗನಬಸವಣ್ಣಾ,
ಗುಹೇಶ್ವರ ಲಿಂಗಕ್ಕೆ ಆಶ್ಚರ್ಯವಾಯಿತ್ತು"

ಆರೋಗಣೆ ಅಷ್ಟೊಂದು ಆಪ್ಯಾಯಮಾನವಾದುದಕ್ಕೆ ಮತ್ತೊಂದು ಕಾರಣವೂ ಇತ್ತು. ಅದನ್ನು ಪ್ರಭು ಮರೆಮಾಚದೆ ಬಸವಣ್ಣನ ಮುಂದಿಟ್ಟ.

"ಉಭಯ ದೃಷ್ಟಿಯಲ್ಲಿ ದೃಷ್ಟವ ಕಾಂಬಂತೆ
ದಂಪತಿಗಳು ಏಕೋಭಾವದಲ್ಲಿ ನಿಂದಲ್ಲಿ
ಗುಹೇಶ್ವರ ಲಿಂಗಕ್ಕೆ ಅರ್ಪಿತವಾಯಿತ್ತು ಸಂಗನಬಸವಣ್ಣಾ !''

ಪ್ರಭು ವಚನವನ್ನು ಆಲಿಸಿದ ಮಾರಯ್ಯ ನಿರಹಂಭಾವದಿಂದ ಹೀಗೆಂದ—

ತನುವನೀವಡೆ ತನುವೆನಗಿಲ್ಲ,
ಮನವನೀವಡೆ ಮನವೆನಗಿಲ್ಲ
ಧನವನೀವಡೆ ಧನವೆನಗಿಲ್ಲ,
ಇಂತೀತನು ಮನಧನ ಸಕಲ ಸಂಪತ್ತುಳ್ಳ
ನಿಮ್ಮ ಶರಣರ ತಪ್ಪಲಕ್ಕಿಯನಾಯ್ದು ತಂದು
ಎನ್ನೊಡಲ ಹೊರೆವೆನಲ್ಲದೆ ಅಮುಳೇಶ್ವರಲಿಂಗಕ್ಕೆ
ನೀಡುವ ಬಯಕೆ ಎನಗಿಲ್ಲ ಸಂಗನಬಸವಣ್ಣಾ!"

ಆತನ ಬಡತನದ ಬಗ್ಗೆ ಮೊದಲೇ ಕಳವಳಗೊಂಡು, ಆತನ ದಾಸೋಹದ ಬಗೆಗೆ ಸಂದೇಹಿಸಿದ್ದ ಬಸವಣ್ಣನಿಗೆ ಈಗ ತುಂಬಾ ನಾಚಿಕೆಯಾಗಿತ್ತು. ಆತನ ನಿರಹಂಭಾವದ ಮಾತು ಕೇಳಿದ ಮೇಲಂತೂ ಆತ ಭೂಮಿಗಿಳಿದುಹೋದ. ಮಾರಯ್ಯನ ಮನೆಯ "ಬೋನದ ದಾಸೋಹ"ದಿಂದ ಸಂತುಷ್ಟನಾಗಿದ್ದ ಬಸವಣ್ಣನಿಗೆ ಅವರ "ಜ್ಞಾನ ದಾಸೋಹ"ದಿಂದ ಮತ್ತಷ್ಟು ಸಂತೃಪ್ತಿಯಾಗಿತ್ತು. ಅಣ್ಣ ಅತ್ಯಂತ ನಮ್ರತೆಯಿಂದ–

ನಾ ಮಾಡುವುದೆಲ್ಲವು ಅನಾಚಾರ,
ನಾ ನುಡಿವುದೆಲ್ಲ ಅವಿಚಾರ,
ನಡೆ ನುಡಿ ಶುದ್ಧವಿಲ್ಲದ ಅಪವಿತ್ರನ ತಂದು
ನಿಮ್ಮೊಕ್ಕುದನಿಕ್ಕಿ ಸಲಹಿದಿರಾಗಿ ಎನಗಿನ್ನಾವಭಯವಿಲ್ಲ
ಕೂಡಲ ಸಂಗಮದೇವರ ಸಾಕ್ಷಿಯಾಗಿ
ಆಯ್ದಕ್ಕಿಮಾರಯ್ಯಗಳ ಮನೆಯ ಮಗನು"

ಎಂದು ಶರಣಾದ. ಮಾರಯ್ಯಗಳು ಬಸವಣ್ಣನ ಈ ಬಗೆಯ ವಿನಯವನ್ನು ಕಂಡು,

ಹಮ್ಮು ಬಿಮ್ಮು ಅಳಿದ ಅನುವರಿತ ಶಿವ ನೀನು,
ಎನ್ನ ಕರಸ್ಥಳದ ಕಳೆನೀನು,
ಎನ್ನ ಮನೋಮಧ್ಯದ ಸ್ವಯಂ ಜ್ಯೋತಿ ನೀನು.
ಅಮಳೇಶ್ವರ ಲಿಂಗದ ಅನುವಿನ ಕಳೆ ನೀನು ಸಂಗನಬಸವಣ್ಣಾ"

ಎಂದು ಬಗೆಬಗೆಯಾಗಿ ಸ್ತುತಿಸಿದ. ಕಡೆಗೆ ಮಾರಯ್ಯ,

"ಅಮೃತದ ಸವಿ ಸ್ವಾದಿಸುವರಿಗಲ್ಲದೆ ಅಮೃತ ತನ್ನ ತಾ
ಸ್ವಾದಿಸದ ಪರಿಯಂತೆ, ನಿತ್ಯತೃಪ್ತಂಗೆ ಆಪ್ಯಾಯನವುಂಟೆ?
ಏಳನೂರೆಪ್ಪತ್ತು ಅಮರಗಣಂಗಳ ಕಟ್ಟಳೆಯ ಕಟ್ಟು ನಿನ್ನದು.
ನಿನಗೆ ಭಾವ ನಿರ್ಭಾವವೆಂಬುದುಂಟೆ?"

ಎಂದು ಸಾಷ್ಟಾಂಗವಾಗಿ ನಮಸ್ಕರಿಸಿದ. ಪ್ರಭು ಪ್ರಸನ್ನನಾದ. ಅಸಂಖ್ಯಾತ ಶಿವಶರಣರ ಕಾರುಣ್ಯದ ಕಡಲಿನಲ್ಲಿ ಮಾರಯ್ಯ ದಂಪತಿಗಳು ನಿರ್ಮಯಲಾದರು.

ಒಟ್ಟಿನಲ್ಲಿ ಕಾಯಕತತ್ತ್ವದಲ್ಲಿ ಮಾಟ ಬೇರೆ, ಕೂಟ ಬೇರೆ ಎಂಬ ಅಂತರವಿಲ್ಲ. ಮಾಟಕೂಟಗಳೆರಡೂ ಶಿವಸ್ವರೂಪವೆಂಬ ಶಿವಾದ್ವೈತ ಭಾವ ಅಡಗಿದೆ.

ಈ ಕಾಯಕ ತತ್ತ್ವರಹಸ್ಯವನ್ನು ಜನ ಮನಗಂಡು ನಡೆದುಂದು ಜಗದಂದುಗ ಕಳೆವುದು, ಜನಮನ ಇಹಪರ ಸುಖಸಾಮ್ರಾಜ್ಯದಲ್ಲಿ ನಲಿದೀತು! ಆ ಯುಗ ಶಿವಕೃಪೆಯಿಂದ ಒದಗಿಬರಲಿ. □

# ವಚನಗಳ ಭಾಷೆ—ವ್ಯಾಕರಣ

ಡಾ. ಬಿ- ಬಿ. ರಾಜಪುರೋಹಿತ,

## ಪೀಠಿಕೆ

ವಚನ ರಚನೆ ೧೧ನೆಯ ಶತಮಾನದಲ್ಲಿ ಆರಂಭವಾಗಿ ೧೭ನೆಯ ಶತಮಾನದ ವರೆಗೂ ಸಾಗಿ ಬಂದಿದೆ.ದೇವರ ದಾಸಿಮಯ್ಯ (೧೦೩೦) ಸಕಲೇಶಮಾದರಸ ಮೊದಲಾದ ಕೆಲವರು ಬಸವೇಶ್ವರರ ಪೂರ್ವದಲ್ಲಿ ಇದ್ದು ವಚನಗಳನ್ನು ರಚಿಸಿದರೂ ಮುಖ್ಯವಾಗಿ 'ವಚನ' ಎಂಬುದು 'ಪ್ರಕಾರ'(Form)ವಾಗಿ ರೂಪುಗೊಂಡು ಸ್ವತಂತ್ರ ಅಸ್ತಿತ್ವವನ್ನು ಪಡೆದದ್ದು ೧೨ ನೆಯ ಶತಮಾನದ ಮಧ್ಯಭಾಗದಲ್ಲಿ. ಬಸವೇಶ್ವರರು ಕೇಂದ್ರ ವ್ಯಕ್ತಿಯಾಗಿದ್ದು ಜಂಗಮತತ್ವವನ್ನು ಧರ್ಮದ ಎತ್ತರಕ್ಕೆ ಏರಿಸಿದ ಕಾಲದಲ್ಲಿ. 'ತತ್ತ್ವಜ್ಞಾನವೆಂದರೆ ಬೌದ್ಧಿಕ ತೀಕ್ಷ್ಣತೆಯ ಏರಾಟ, ತದ್ಭಿನ್ನವಾದದ್ದು ಅಧರ್ಮ' ಎಂಬ ಭಾವನೆ ಒಂದು ಕಡೆ ಬೆಳೆದುದರಿಂದ, " ಪ್ರತ್ಯಕ್ಷ ದಿನಜೀವನದ ಪ್ರಶ್ನೆಗಳನ್ನು ಎದುರಿಸುವ ಜನರ ಆಧ್ಯಾತ್ಮಿಕ ನೀರಡಿಕೆಯನ್ನು ಹೋಗಲಾಡಿಸುವಂಥ, ಜೀವ ಕೊಡುವ ಶ್ರದ್ಧಾವರ್ಷದ ಅಗತ್ಯತೆಯಿತ್ತು. ಬಸವೇಶ್ವರರು ಅದನ್ನು ಪೂರೈಸಿದರು. ಆದುದರಿಂದ ಬಸವೇಶ್ವರರನ್ನು ಅನುಸರಿಸಿದ ಜನತೆಯ ಶ್ರದ್ಧೆಯ ಉಸಿರೇ 'ವಚನ' ವಾಗಿ ಹೊರಬಿದ್ದಿತು. ಅಂದರೆ ಜನತೆ ತಾವು ಆರಿಸಿದ ತಾತ್ತ್ವಿಕ 'ಸಮಾಧಾನ'ದ ಜೊತೆಗೇ ಅನುಭವವನ್ನೂ ಅನಿಸಿದ್ದನ್ನೂ ಹೇಳುವದಕ್ಕಾಗಿ ಒಂದು ವಿಶಿಷ್ಟ ಪ್ರಕಾರದ ಮಾಧ್ಯಮವನ್ನೂ ಆರಿಸಿದರು. ಅವರು ದಿನಬಳಕೆಯ ವ್ಯವಹಾರವನ್ನೂ ವಚನ-ಭಾಷೆಯಲ್ಲಿಯೇ ನಡೆಸುತ್ತಿದ್ದರೆಂದು ನಂಬುವದು ಕಷ್ಟವಾದರೂ ವಿಶಿಷ್ಟ ವಿಷಯದ ನಿರೂಪಣೆಗೆ ವಿಶಿಷ್ಟ ಶೈಲಿ ಸ್ವೀಕೃತವಾಗಿ ಪೂರ್ಣಯಶಸ್ವಿಯಾಗಿ ಬಳಸಲಾಗುತ್ತಿತ್ತು ಎಂಬುದಂತೂ ನಿರ್ವಿವಾದ. ಬಹಳಷ್ಟು ವಚನಗಳು ಕಾವ್ಯಾತ್ಮಕವಾಗಿರುವದರಿಂದ; ಇದು ಹೇಳಬೇಕಾದಂಥ ವಿಷಯವಾದ್ದರಿಂದ ಹೇಳುತ್ತಿದ್ದೇನೆ ಎಂಬ ಭಾವನೆಯಲ್ಲಿ ಅರಿವಿನ ಅಭಿವ್ಯಕ್ತಿ (Conscious Expression) ವ್ಯಕ್ತವಾಗುವದರಿಂದ; ಒಬ್ಬರ

ಸಮಗ್ರ ವಚನೋಕ್ತಿಗಳಲ್ಲಿ ಒಂದು ತಿಳುವಳಿಕೆ, ನಂಬುಗೆ, ಧರ್ಮವು ರೂಪಗೊಂಡಿದ್ದ ರಿಂದ; ಆ ತಿಳುವಳಿಕೆ, ನಂಬುಗೆ, ಧರ್ಮವು ಬಹಳಷ್ಟು ವಚನಕಾರರಲ್ಲಿ ಸಾಮಾನ್ಯ-ವಾಗಿರುವದರಿಂದ (Common); ವಿಶಿಷ್ಟ ವಿಷಯ ನಿರೂಪಣೆಗೆ ವಿಶಿಷ್ಟ ಶೈಲಿ ಬಳಸಲಾಗುತ್ತಿತ್ತು ಎಂಬ ಮಾತು ದೃಢಪಡುತ್ತದೆ. ಅವರ ದೈನಂದಿನ ಭಾಷೆ ವಚನ ಭಾಷೆಗಿಂತ ಭಿನ್ನವಾಗಿದ್ದಿರಬಹುದು ಎಂಬ ಊಹೆಗೂ ಮೇಲಿನ **ಕಾರಣಗಳೇ** ತಳಹದಿ.

ಡಾ. ಹಾ. ಮಾ. ನಾಯಕರು ತಮ್ಮ 'Kannada Two Styles-Literary and Colloquial' ಎಂಬ ಪುಸ್ತಕದಲ್ಲಿ 'Lexicostatistics' (ಶಬ್ದ ಸಂಖ್ಯಾಶಾಸ್ತ್ರ)ದ ಲೆಕ್ಕದಿಂದ ಹೊತ್ತಗೆಯ ಹಾಗೂ ಬಳಕೆಯ ಭಾಷೆಗಳು ೬೨೦ ವರ್ಷಗಳ ಹಿಂದೆ ಭಿನ್ನಗೊಂಡವು" ಎಂದು ತೆಗೆದಿದ್ದಾರೆ. ಅಂದರೆ ಸುಮಾರು ಕ್ರಿ. ಶ, ೧೩೪೦ ರಿಂದೀಚೆಗೆ ಪುಸ್ತಕದ ಭಾಷೆ ಆಡುಭಾಷೆ ಭಿನ್ನಗೊಂಡವು ಎಂದಾಗುತ್ತದೆ. ಈ ಲೆಕ್ಕವೇಕೋ ಸರಿಯಲ್ಲ ಎಂಬುದನ್ನೂ ಅವರೇ ಸೂಚಿಸಿದ್ದಾರೆ. ಗ್ರಾಂಥಿಕ ಹಾಗೂ ಮೌಖಿಕ ಪದಗಳಲ್ಲಿ ಸಮಾನ ಅಸಮಾನ ಪದಗಳ (Cognates and non Cognates) ಶತಮಾನವನ್ನು (Percentage) ತೆಗೆಯುವದು ಕಷ್ಟ. ಈ ಶಬ್ದಸಂಖ್ಯಾಶಾಸ್ತ್ರದ ಲೆಕ್ಕವೆಲ್ಲ ಅದರ ಮೇಲೆಯೇ ನಿಂತಿದೆ. ಆದ್ದರಿಂದ ನಿರ್ದಿಷ್ಟವಾಗಿ ಹೇಳಲು ಸಾಧ್ಯ-ವಾಗುವದಿಲ್ಲ. ಅದೇನೇ ಇದ್ದರೂ ಆಡಿದ ಮಾತನ್ನು ಆಡಿದ ಹಾಗೆಯೇ ಬರೆದಿಟ್ಟರು ಎಂದೇ ಕಲ್ಪಿಸಿದರೂ ಶತಮಾನಗಳ ನಂತರ ಅದು ಗ್ರಾಂಥಿಕವೇ. ಆಡುಭಾಷೆಗೂ ಗ್ರಾಂಥಿಕ ಭಾಷಗೂ ಸಮಾನತೆ ವ್ಯತ್ಯಾಸಗಳನ್ನು ಕಂಡುಹಿಡಿಯಲು ಆಧಾರಗಳೇ ಉಳಿಯುವದಿಲ್ಲ. ದುರ್ದೈವದಿಂದ ಆಡುಮಾತು ಅವಶೇಷಗೊಳ್ಳುವದಿಲ್ಲ. (does not fossilize.) ಲಿಖಿತ ಭಾಷೆ ಒಂದು 'ಅವಶೇಷ' (fossil) ಎನ್ನಬಹು ದಾದರೂ ಅದಕ್ಕೆ ಸೀಮಾ ಬಂಧನಗಳಿವೆ. ಹೇಗೆಂದರೆ ಆಡುಮಾತಿನಲ್ಲಿ ಇರಬಹುದಾದ ಸೂಕ್ಷ್ಮ ಧ್ವನಿವ್ಯತ್ಯಾಸಗಳನ್ನು (Phonetic Variations) ಪರಂಪರಾಗತ ವಾಗಿ ಬಂದ ವರ್ಣಮಾಲೆಯಲ್ಲಿ ಹಾಕಿದಾಗ ವ್ಯತ್ಯಾಸಗೊಳ್ಳುತ್ತವೆ, ಅಥವಾ ಮಾಯವಾಗುತ್ತವೆ. ಉದಾಹರಣೆಗೆ ಬರೆಯುವದು ಅಂಗಳ ಎಂದೇ ಆದರೂ 'ಬಾಯ ಮೇಲ್ಭಾಗ' (ತಾಲು) ಎಂಬರ್ಥ ಬೇಕಾದಾಗಿನ ಉಚ್ಚಾರವು "ಮನೆಯ ಮುಂದಿನ ಬಯಲು" ಎಂಬರ್ಥ ಬೇಕಾದಾಗಿನ ಉಚ್ಚಾರಕ್ಕಿಂತ ಭಿನ್ನವಾಗಿದೆ. "ಅ" ಉಚ್ಚಾರ ವ್ಯತ್ಯಾಸವು ಅರ್ಥವ್ಯತ್ಯಾಸವನ್ನುಂಟು ಮಾಡುತ್ತದೆ. ಬೇಂದ್ರೆಯವರ ತುತ್ತಿನ ಚೀಲ ಪದ್ಯದಲ್ಲಿ "ಬಾಯಂಗಳದಲಿ—ಹುಟ್ಟಿದ ಮಾತು ! ಮುಗಿಲಿನ ಕಿವಿ ಯನು— ಮುಟ್ಟಲೇ ಇಲ್ಲ—ಇಲ್ಲಿ "ಬಾಯಂಗಳ"ದ ಒಂದು ಉಚ್ಚಾರ ಇನ್ನೊಂದಾದರೆ ಅರ್ಥಭಾಧೆ ಬರುತ್ತದೆ, ಅಥವಾ ಅರ್ಥ ಪ್ರತೀತಿಯೇ ಆಗುವದಿಲ್ಲ. "ಬಾಯಿ ಬಯಲು" ಎಂಬರ್ಥಕ್ಕಿಂತ "ಬಾಯ ಮೇಲ್ಭಾಗ (ತಾಲು)ದಲ್ಲಿ ಹುಟ್ಟಿದ ದನಿ ಎಂಬದು ಹೆಚ್ಚು ಅರ್ಥಪರಿಣಾಮವನ್ನುಂಟು ಮಾಡುತ್ತದೆ, ("ಅಂಗಳದಾಗ ಮಾತಾಡು" ಎಂಬ

ಧಾರವಾಡ ಕನ್ನಡ ಪ್ರಯೋಗ ಲಕ್ಷಿಸಬೇಕು) ಆದರೆ 'ಮಂಗಳಲೋಕದ ಅಂಗಳಕೇರಿ' (ಹಕ್ಕಿ ಹಾರುತಿದೆ) ಅಲ್ಲಿ "ಅಂಗಳ" ಬಯಲು. ಅದೇ ಈ "ಅ" ಉಚ್ಚಾರ ವ್ಯತ್ಯಾಸ ಲಕ್ಷ್ಮೀಶನ ಕಾಲಕ್ಕೆ ಇದ್ದಿರಲಿಲ್ಲವೆಂದು ತೋರುತ್ತದೆ. "ಇಲ್ಲಿಗೇಕೈತಂದೆ ತಂದೆ ಸೌಮಿತ್ರಿ ಹೇಳೆಂದು ಜಾನಕಿ ಸುಯ್ದಳು" ಎಂಬಲ್ಲಿ ಐತಂದೆ, ತಂದೆ. ಗಳಲ್ಲಿಯ "ತ"ದ ಉಚ್ಚಾರದಲ್ಲಿ ಇಂದಿನಂತೆ ಭೇದವಿದ್ದಿರಲಿಕ್ಕಿಲ್ಲ. ಇದ್ದಿದ್ದರೆ ಅನುಪ್ರಾಸದ ಸೌಂದರ್ಯವುಂಟಾಗುತ್ತಿರಲಿಲ್ಲ, ಅದೇ ಪದ್ಯದ ಉಳಿದ ಅನಪ್ರಾಸಗಳೊಡನೆ ಹೋಲಿಸಬೇಕು. "ಕಂಪೊಗೆದ ಪೊಗೆಳೆದದ "ಪಾವನದ ವನದೆಡೆಗಳು" ಇತ್ಯಾದಿ. ಈ ಅನುಪ್ರಾಸಗಳು ಐತಿಹಾಸಿಕ ಭಾಷಾ ಶಾಸ್ತ್ರಕ್ಕೆ Historical lingunstics) ಸಹಾಯಕಾರಿಗಳಾಗಬಲ್ಲವು. ಇಂಥ ಆಧಾರಗಳ ಮೇಲಿಂದ ಲಿಖಿತ ಭಾಷೆಯ ಧ್ವನಿ ರೂಪರೇಷೆಗಳ ಬಗೆಗೆ ಸ್ವಲ್ಪ ಮಟ್ಟಿಗೆ ಏನಾದರೂ ಹೇಳಬಹುದು. ಪ್ರಾಜ್ಞರು ಯೋಚಿಸಬೇಕು.

ಕುಮಾರವ್ಯಾಸ ಚಾಮರಸಾದಿಗಳು ತಮ್ಮ ಕಾಲದ ಭಾಷೆಯನ್ನೇ ಬಳಸಿದರು. ಎಂದು ಎಷ್ಟೇ ಹೇಳಿದರೂ ಭಾಷೆಯ ಎಲ್ಲ ಮುಖಗಳನ್ನು ಕುರಿತು—ಧ್ವನಿರೂಪ, ವ್ಯಾಕರಣರೂಪ, ವಾಕ್ಯರೂಪ ಹೇಳಿದ ಹಾಗೆ ಆಗಲಾರದು. ಆ ಕಾಲದಲ್ಲಿದ್ದ ಜನಪದ ಶಬ್ದಗಳನ್ನು ಬಳಸಿರುವದು ಹೆಚ್ಚು ಸಂಭವವಿದೆ. ಚಂದ್ರಶೇಖರ ಕಂಬಾರರ

ಇಳಿದ ಪಾರಂಜೀಗಿ ಗೊಡ್ಡೆಮ್ಮಿ ಮ್ಮೆತಿಕ್ಕಿ
ಸೆಗಣಿ ಹಾಕಿದ ನಾತ ಗೊನ್ಮೊಂದಿತ
ದಿನಧಾಂಗ ರಾಮಗೊಂಡ ಚರಿಗಿ ಹಿಡದ ಬಂದಾನು
ಕೂಡ್ರತಾನು ಮುದುಕನ ಹಂತ್ಯಾಕ (ಹೇಳತೇನ ಕೇಳ)

ಶತಮಾನಗಳ ನಂತರ ಅಲ್ಲಿಯ ಜಾನಪದ ಶಬ್ದಗಳನ್ನು ಬಿಟ್ಟು ಬೆಳಗಾವಿಯ ಕಡೆಯ ಭಾಷೆಯನ್ನು ಕುರಿತು ಧ್ವನಿರೂಪ ವಾಕ್ಯರೂಪಗಳನ್ನು ಕುರಿತು ಏನೂ ಹೇಳಲೂ ಸಾಧ್ಯವಾಗಲಿಕ್ಕಿಲ್ಲ. ಶಬ್ದ ಭಾಂಡಾರ ಕಾಲ ಕಾಲಕ್ಕೆ "ಅಧಿಕ–ಉಣೆ" ಆಗಿಯೇ ಆಗುತ್ತಿರುತ್ತದೆ. ಜನತೆಯ ನಾಲಗೆ ಕೆಲವೊಂದು ಧ್ವನಿಗಳನ್ನು ಕಳೆದುಕೊಳ್ಳುತ್ತದೆ. ಅದರ ಜೊತೆಗೆ ಶಬ್ದಗಳೂ ಹೋಗುತ್ತವೆ, "ಅಟೆ" ಮಜ್ಜಿಗೆ ಮಾಯವಾದದ್ದನ್ನೂ ಲಕ್ಷಿಸಬೇಕು. ಅದೇ ಪ್ರಕಾರ ಹೊಸ ಧ್ವನಿಗಳು ಹುಟ್ಟಿಕೊಳ್ಳುತ್ತವೆ. ಇಂದಿನ ಧಾರವಾಡದ ಬಳಕೆ ಮಾತಿನಲ್ಲಿ ಸೂಜಿಯಿಂದ "ಹೊಲಿ" ಬೆರೆ, ಹೊಲೆತನ ಅರ್ಥದ "ಹೊಲಿ" ಬೇರೆ ಉಚ್ಚಾರದಲ್ಲಿ. ಬಿಸುಪು ಅರ್ಥದ "ಕಾವು" ಬೇರೆ, ಕೊಡಲಿಯ ಹಿಡಿಕೆ ಬೇರೆ. ಬಳಕೆಯಲ್ಲಿ ಕೊಡಲಿಯ ಹಿಡಿಕೆ ಕಾವು ಕಾ̃ವು (ಸಾನುನಾಸಿಕ). ಬೇರೆ ಬೇರೆ ಸಂಕೇತಗಳಿಂದ ಇವುಗಳನ್ನು ಸೂಚಿಸಿ ಕಾಯ್ದಿಡದಿದ್ದರೆ ನಾಳಿನವರಿಗೆ ಇಂದಿನ ಬಳಕೆ ಮಾತಿನ ಸ್ವರೂಪವು ಅರ್ಥವಾಗಲಾರದು. ಈ ದಿಕ್ಕಿನಲ್ಲಿ ಡಾ. ಬ್ರೈಟ್ ಡಾ. ಹಿರೇಮಠ, ಡಾ. ಬೆಳಗಿರಿ, ಡಾ. ಭಟ್, ಡಾ. ಶಾಸ್ತ್ರಿ ಮೊದಲಾದವರ ಅಭ್ಯಾಸಗಳನ್ನು ಉಲ್ಲೇಖಿಸಬೇಕು.

ಭಾಷೆ ವ್ಯಾಕರಣ ಪ್ರಕ್ರಿಯಾ ದೃಷ್ಟಿಯಿಂದ ಬದಲಾಗುತ್ತಿರುವದು, ಶಬ್ದ ಸಂಪತ್ತಿಯ ದೃಷ್ಟಿಯಿಂದ ಬೆಳೆಯುತ್ತಿರುವುದು, ಧ್ವನಿರೂಪದ ದೃಷ್ಟಿಯಿಂದ ವ್ಯತ್ಯಾಸಗೊಳ್ಳುತ್ತಿರುವದು ದೈನಂದಿನ ವ್ಯವಹಾರಕ್ಕಾಗಿ ಬಳಕೆಯಾಗುತ್ತಿರುವ ಭಾಷೆಯ ಸ್ವಭಾವ. ಅದನ್ನು ಹಾಗೆಯೇ ಉಳಿಸಿಕೊಳ್ಳಬೇಕು. ಎಂದು ಪ್ರಯತ್ನ ಮಾಡದ ಹೊರತು. ಹಾಗೆ ಪ್ರಯತ್ನ ಮಾಡಲಾಗಿಯೂ ಇಂದು ಸಂಸ್ಕೃತ ಹಿಂದುಸ್ಥಾನದ ಬೇರೆ ಬೇರೆ ಭಾಷೆಯವರ ಬಾಯಲ್ಲಿ ಬೇರೆ ಬೇರೆಯಾಗಿಯೇ ಉಚ್ಚರಿತವಾಗುತ್ತದೆ. ಶಿಕ್ಷಾವಿಧಿಸಿಯೂ, ಕಟ್ಟುನಿಟ್ಟಾದ ನಿಯಮಗಳನ್ನು ಮಾಡಿಯೂ ಹಾಗಾಯಿತು. ಕೇಶರಾಜನೂ ಶಬ್ದಗಳ ಸಾಧುತ್ವ ಅಸಾಧುತ್ವದ ಬಗೆಗೆ ಅನೇಕ ಸೂತ್ರ ರಚಿಸಿ ಜನತೆಯನ್ನು "ಸರಿ" ದಾರಿಗೆ ತರಬೇಕೆಂದು ಪ್ರಯತ್ನಿಸಿದರೂ "ಬೆರಲ್" ಕೊನೆಗೂ ಬೆರಳೇ ಆಯಿತು. ಸಾಯುತ್ತಿದ್ದ ಱ, ಳ, ೞಳಗಳಿಗೆ ಹೇಮಗರ್ಭಮಾತ್ರೆಯನ್ನು ತೇದು ಕೊಡಿಸಿ ಬದುಕಿಸಬೇಕೆಂದು ಪ್ರಯತ್ನಿಸಿದರೂ " ನೋಡುವೊಡೊಂದಕ್ಕರಮದುಮಾಡುವೊಡುಚ್ಚರಣೆಗರಿದು ಮೂರುಂ ತೆರನು.... ಆದ್ದರಿಂದ... "ನೋಡಬೇಡ ಱ ಳ ೞಳನಿದರೊಳ್" ಎಂದು ಹರಿಹರನೇ ಅವುಗಳ ಸಮಾಧಿ ಮಾಡಿದ. ಒಟ್ಟಿನಲ್ಲಿ ನಿಯಮ ರಹಿತವಾಗಿ ಕಂಡರೂ ನಿಯಮಿತವಾಗಿ ನಡೆಯುವ ಈ ಧ್ವನಿ ವ್ಯತ್ಯಾಸಗಳನ್ನು ಕೇಶರಾಜನಂತೆ ವೈಯಾಕರಣಿ ವ್ಯಥೆಯಿಂದ ಕಾಣದೆ ಭಾಷಾ ಶಾಸ್ತ್ರಜ್ಞನಂತೆ ಭಾಷೆಯ ಹೆಜ್ಜೆಗುರುತಗಳನ್ನು ಗುರುತಿಸಬೇಕಾಗುತ್ತದೆ.

ಈ ಹಿನ್ನೆಲೆಯಲ್ಲಿ ವಚನಗಳ ಭಾಷೆಯನ್ನು ನೋಡಿದಾಗ ಅದು ಆ ಕಾಲಕ್ಕೆ ರಚಿತವಾಗುತ್ತಿದ್ದ ಇತರ ಸಾಹಿತ್ಯದ (ಅಂದರೆ ಮುಖ್ಯವಾಗಿ ಕಾವ್ಯಗಳ – ಎಂಬುದನ್ನು ಲಕ್ಷಿಸಬೇಕು) ಭಾಷೆಗಿಂತ ಭಿನ್ನವಾಗಿದೆ. ಆ ಭಿನ್ನತೆ ವ್ಯಾಕರಣ ಪ್ರಕ್ರಿಯೆಯಲ್ಲಿ ಹೆಚ್ಚು ಉಕ್ತವಾಗಿ ತೋರುತ್ತದೆ. ಧ್ವನಿ ವಿವರಣೆಯಲ್ಲಿ (Phonology) ಯಾವ ಲಿಖಿತ ಸಾಹಿತ್ಯದ ಬಗೆಗೂ ಹೆಚ್ಚು ಹೇಳಲು ಸಾಧ್ಯವಾಗುವದಿಲ್ಲ. ಏಕೆಂದರೆ ಒಂದು ಕಾರಣವನ್ನು ಮೇಲೆ ವಿವರಿಸಲಾಗಿದೆ. ವಚನಕಾರರು ಹೇಗೆ ಉಚ್ಚರಿಸುತ್ತಿದ್ದರು ಎಂಬುದನ್ನು ಕಂಡು ಹಿಡಿಯಲು ಸಾಧ್ಯವಿಲ್ಲ. ಅದಕ್ಕೆ ಯಂತ್ರಗಳೂ ಇಲ್ಲ. ಅಲ್ಲಿಯ ವಿವರಣೆಯೆಲ್ಲ ಚಾಕ್ಷುಷ ವರ್ಣಗಳನ್ನೇ ಅವಲಂಬಿಸುತ್ತದೆ. ಎರಡನೆಯ ಕಾರಣ ಸಂಪಾದಕರು ಪ್ರತಿಯನ್ನು ' ಶುದ್ಧಗೊಳಿಸು ' ವಾಗ ಭಾಷೆಯ ಶಾಸ್ತ್ರೋಕ್ತ ಸ್ವೀಕಾರ್ಯ ಅಸ್ವೀಕಾರ್ಯ ಪ್ರಯೋಗಗಳ ಕಡೆಗೆ ದೃಷ್ಟಿಯಿಟ್ಟು ಸಂಪಾದನೆ ಮಾಡುತ್ತಾರೆ. ಪರಿಣಾಮವಾಗಿ ಭಾಷೆಯ ಸ್ವೈಜ ಚಿತ್ರ ವ್ಯಾಕರಣ ನಿಯಮಗಳ ಹಿಂದೆ ಮಸುಕಾಗುತ್ತದೆ. ಹಸ್ತಪ್ರತಿಗಳು ತಾಳೆಗರಿಗಳು ಅಪಪ್ರಯೋಗಗಳನ್ನೂ ಅಶುದ್ಧ ಪ್ರಯೋಗಗಳನ್ನೂ ಒಳಗೊಂಡಿದ್ದರೆ ಯಾಕೆ ? ಎಂಬ ಪ್ರಶ್ನೆಗೆ ಉತ್ತರ ಕಂಡು ಹಿಡಿದರೆ ಹೆಚ್ಚು ಉಪಯೋಗ ಬೀಳಬಹುದೇ ಹೊರತು ' ಏನಿರಬೇಕು ? ' ಎಂಬುದನ್ನು ಕಂಡು ಹಿಡಿದು ತಿದ್ದುತ್ತ ಹೋದರೆ ಆಯಾ ಕಾಲದ ಭಾಷೆಯ ಪ್ರಾತಿನಿಧಿಕ ಚಿತ್ರ ಸರಿಯಾಗಿ ಸಿಕ್ಕುವದಿಲ್ಲ. ಆದ್ದರಿಂದ ಇಲ್ಲಿ ವಚನಗಳ ಭಾಷೆಯನ್ನು ಕುರಿತು ಆಡಿದ ಮಾತುಗಳೆಲ್ಲ

'ಸಂಪಾದಿತ' ವಚನಗಳ ಆಧಾರದ ಮೇಲೆಯೇ ಇವೆಯೆಂಬುದನ್ನು ಲಕ್ಷಿಸ ಬೇಕಾಗುತ್ತದೆ.

ವೀರಶೈವ ಸಂಪ್ರದಾಯವು ಹೇಳುವಂತೆ ಕಲ್ಯಾಣದಲ್ಲಿ 'ಅನುಭವ ಮಂಟಪ' ಎಂಬ ಒಂದು ಜ್ಞಾನದ ಪ್ರಯೋಗಶಾಲೆ ಇತ್ತಂತೆ. ಅಲ್ಲಿ ಎಲ್ಲ ಜ್ಞಾನಿಗಳ ಮಧ್ಯೆ ಜ್ಞಾನದ ಕೊಡುಕೊಳೆ ನಡೆಯುತ್ತಿತ್ತಂತೆ. ಇದು ಐತಿಹಾಸಿಕ ಸಂಗತಿಯಾಗಿದ್ದರೆ ಅಲ್ಲಿ ಪ್ರಶ್ನೋತ್ತರಗಳು, ವಿವರಣೆಗಳು ನಡೆಯುತ್ತಿದ್ದಿರಬೇಕು. ದೇಶದ ಬೇರೆ ಬೇರೆ ಭಾಗ ಗಳಿಂದ ಶರಣ ಶರಣೆಯರು ಬಂದು ಅಲ್ಲಿ ಸೇರುತ್ತಿದ್ದುದರಿಂದ ಚರ್ಚೆಯಲ್ಲಿ ಭಾಗವಹಿ ಸುತ್ತಿದ್ದುದರಿಂದ, ಇದು ಬಹುಕಾಲ ನಡೆಯಿತಾದ್ದರಿಂದ ಎಲ್ಲ ಪ್ರದೇಶಗಳ ಶಬ್ದಗಳ ನ್ನೊಳಗೊಂಡ ಒಂದು ಶಬ್ದ ಭಾಂಡಾರ ಸೃಷ್ಟಿಯಾಗಿರಬೇಕು. ಅವರವರ ವಚನಗಳಲ್ಲಿ ಅವರವರ ದೇಶ್ಯ ಪದಗಳನ್ನು ಗುರುತಿಸಬಹುದಲ್ಲದೆ ಸಾಮಾನ್ಯ ಶಬ್ದ ಭಾಂಡಾರವನ್ನೂ ಗುರುತಿಸಬಹುದು. ಮೇಲಾಗಿ ನಡೆಯುತ್ತಿದ್ದ ಚರ್ಚೆಯನ್ನು ಬರೆದಿಟ್ಟುಕೊಳ್ಳಲು ಕೋಲಶಾಂತಯ್ಯ ಮೊದಲಾದ ಕರಣಿಕರೂ ಇದ್ದರಂತೆ. ಹಾಗಿದ್ದರೆ ನಡೆದ ಚರ್ಚೆಯನ್ನು ಹಾಗೆ ಲಿಪಿಗಿಳಿಸಲಾಯಿತೆಂದು ನಂಬಬಹುದು. ಇಂಥ ಕರಣಿಕರ ಸಂಗ್ರಹದಿಂದಾಗಿ ೧೬೦ ಕೋಟಿ ವಚನಗಳಿವೆಯಂತೆ (ಎರಡೆಂಬತ್ತು ಕೋಟಿ). ಎಲ್ಲವೂ ಇಂದು ಲಭ್ಯವಿಲ್ಲ.

೧೫-೧೬ನೆಯ ಶತಮಾನಗಳ ಕಲ್ಲುಮಠದ ಪ್ರಭುದೇವ, ಗುಬ್ಬಿಯ ಮಲ್ಲಣ, ಎಳಮಲೆ ಗುರುಶಾಂತದೇವ, ಸಂಪಾದನೆಯ ಚೆನ್ನಂಜೆದೇವ, ಗೂಳೂರುಸಿದ್ಧವೀರಣಾರ್ಯ ಮೊದಲಾದವರು ಹಿಂದಿನ ವಚನಕಾರರ (ಪುರಾತನರ) ವಚನಗಳನ್ನು ಸಂಗ್ರಹಿಸಿದ್ದಾರೆ. ಸಂಪಾದಿಸಿದ್ದಾರೆ, ಕೆಲವರು ಭಾಷ್ಯ ಬರೆದಿದ್ದಾರೆ. ವಚನಗಳ ಭಾಷೆಯ ದೃಷ್ಟಿಯಿಂದ ಈ ಸಂಪಾದಕರ ಪಾತ್ರವೇನು ಎಂಬುದೂ ನಿರ್ಣಯವಾಗಬೇಕು. ಕರ್ನಾಟಕದ ವಿದ್ವಾಂ ಸರೊಬ್ಬರು ಚರ್ಚೆಯಲ್ಲಿ "ವಚನಗಳ ಸಂಪಾದಕರು ವಚನದ ಭಾವವನ್ನು ಮಾತ್ರ ಇಟ್ಟುಕೊಂಡು ಭಾಷೆಯನ್ನು ತಮ್ಮ ಕಾಲದ ಜನಕೆ ತಿಳಿಯುವ ಹಾಗೆ ಮಾರ್ಪಡಿಸಿ ಕೊಡಿರಬಹುದು" ಎಂದು ಒಮ್ಮೆ ನುಡಿದಿದ್ದರು. ಅದು ನಿಜವಿದ್ದರೆ ಇಂದು ವಚನ ಗಳ ಭಾಷೆಯನ್ನು ಕುರಿತು ಹೇಳಿದ್ದೆಲ್ಲ ಆ ಸಂಪಾದಕರ ಭಾಷೆಯನ್ನು ಕುರಿತು ಹೇಳಿ ದಂತಾಗುತ್ತದೆ. ಅದೇನೇ ಇದ್ದರೂ ಇಂದು ಲಭ್ಯವಿರುವ ವಚನಗಳ ವರ್ಣನಾತ್ಮಕ ವ್ಯಾಕರಣದ ರೂಪರೇಷೆಗಳನ್ನು ಬಿಡಿಸುವದು ಇಲ್ಲಿ ಉದ್ದೇಶವೇ ಹೊರತು ಯಾವ ಐತಿಹಾಸಿಕ ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ ನಿರ್ಣಯಗಳನ್ನು ಒದಗಿಸುವದಲ್ಲ. ವರ್ಣ ನಾತ್ಮಕ ವ್ಯಾಕರಣದ ವಿವರಣೆಗಳನ್ನೂ ಮೇಲೆ ವಿವರಿಸಿದ ಸೀಮಾರೇಖೆಗಳ ಮಧ್ಯದಲ್ಲಿ ನೋಡಬೇಕಾಗುತ್ತದೆ.

## ವಚನಗಳ ವರ್ಣರೂಪ ( Phonology )

ಇಲ್ಲಿ ವರ್ಣವೆಂಬ ಪದವನ್ನು Phonemeಗೆ ಸರಿಸಮಾನವಾಗಿ ಬಳಸಲಾಗಿದೆ. ಕನ್ನಡ ವೈಯಾಕರಣರು ಕರೆದಿರುವ ವರ್ಣಗಳೆಲ್ಲ ವರ್ಣನಾತ್ಮಕ ವ್ಯಾಕರಣದಲ್ಲಿ ವರ್ಣ

ಗಳಾಗಲಾರವು ಆದರೆ ನಾವು ಕರೆಯುವ ವರ್ಣಗಳೆಲ್ಲ ಅವರಿಗೂ ವರ್ಣಗಳಾಗಿದ್ದುವು. ವಿವರಣೆಯ ಅನುಕೂಲತೆಗಾಗಿ ಕೆಲವು ನಮ್ಮಲ್ಲಿ ಹೊಸವಿವೆ.

ಕನ್ನಡ ವರ್ಣಮಾಲೆಯಲ್ಲಿ ಎಷ್ಟು ವರ್ಣಗಳಿರಬೇಕೆಂಬುದನ್ನು ನಿರ್ಣಯಿಸುವಾಗ ಕನ್ನಡ ವೈಯಾಕರಣರು ಸಂಸ್ಕೃತ ವೈಯಾಕರಣರನ್ನು ಅನುಸರಿಸಿದರು. ಕೇಶಿರಾಜನು ೫೨+೫-೧೦=೪೭ ವರ್ಣಗಳು ಎಂದು ಹೇಳಿದ್ದಾನೆ. ಭಟ್ಟಾಕಳಂಕನು ಸಂಸ್ಕೃತ ವರ್ಣಮಾಲೆಗೆ ಕನ್ನಡದ ವಿಶಿಷ್ಟ ವರ್ಣಗಳನ್ನು ಸೇರಿಸಿ ೬೪ ಮಾಡಿದ್ದಾನೆ. ಡಕಾರ ಲಕಾರ ಸ್ಥಾನಾದಿಷ್ಟಗಳಾದ ಱ, ಕ್ಷಳಗಳನ್ನು ಬಿಟ್ಟಿದ್ದಾನೆ. (ಕುಂಡಲಗಿರಿ ಆಚಾರ್ಯರ ಶಬ್ದಾನುಶಾಸನ ಪ್ರಕಾಶಿಕೆ ಪು. ೧೫) ಕೇಶಿರಾಜನ ವರ್ಣಗಳು ಅಚ್ಚಗನ್ನಡದವು. ಭಟ್ಟಾಕಳಂಕನು ಪ್ರತ್ಯಕ್ಷ ಪ್ರಯೋಗದಲ್ಲಿದ್ದವುಗಳನ್ನು ಲಕ್ಷಿಸಿದಂತೆ ತೋರುವದಿಲ್ಲ.

ವಚನಗಳಲ್ಲಿ ಅ ಇ ಉ ಎ ಒ ವರ್ಣಗಳು ಹ್ರಸ್ವದೀರ್ಘಗಳಾಗಿ ೧೦ ಪ್ರಕಾರದಲ್ಲಿ ಋ ಸ್ವರವು ಕೇವಲ ಹ್ರಸ್ವವಾಗಿ ಬಳಕೆಯಾಗಿವೆ. ಅಲ್ಲದೆ ದೀರ್ಘಗಳಾದ ಎರಡು ಸಂಧ್ಯಕ್ಷರಗಳು ಇವೆ ಐ ಔ. ಹೀಗೆ ಒಟ್ಟು ೧೩. ಸ್ವರಗಳು ಪ್ಲುತಗಳು ಇದ್ದಿರಬೇಕು ಎಂಬ ಸಂದೇಹವುಂಟಾದರೂ ಅದರ ಬಗೆಗೆ ಹೇಳಲು ವರ್ಣ ಸಂಕೇತಗಳ ಆಧಾರವಿಲ್ಲ. 'ಅಯ್ಯಾ ಎಂದರೆ ಸ್ವರ್ಗ, ಎಲವೊ ಎಂದೆಡೆ ನರಕ' ಎಂಬಲ್ಲಿ 'ಯ್ಯಾ' 'ವೋ' ಗಳಲ್ಲಿಯ ಸ್ವರಗಳು ಪ್ಲುತವಾಗಿರಬೇಕು. ಏಕೆಂದರೆ ಮುಂದೆ ಸ್ವರಪರವಾದ್ದರಿಂದ ಅವು ದೀರ್ಘಗಳಾಗಿದ್ದರೆ ಲೋಪಸಂಧಿಯಾಗುತ್ತಿತ್ತು. ಪ್ಲುತಗಳ ಮೇಲೆ ಸಂಧಿಯಿಲ್ಲದ್ದರಿಂದ ಅವು ಪ್ಲುತಗಳಾಗಿರಬಹುದು. ಆದರೆ ಇದೊಂದೇ ಆಧಾರ ಸಾಲದು. ಏಕೆಂದರೆ ಸಂಧಿ ಸಾಮರ್ಥ್ಯವಿದ್ದ ಇತರೆಡೆಗಳಲ್ಲೂ ಸಂಧಿ ವಿಕಲ್ಪ ತೋರುತ್ತದೆ. 'ಅಪ್ಪುವಿನಲ್ಲಿ ಅದ್ದಿ' ಇಂಥ ಪ್ರಯೋಗಗಳನ್ನು ಲಕ್ಷಿಸಬೇಕು. ಅಲ್ಲದೆ ದೀರ್ಘ ಪ್ಲುತುಗಳನ್ನು ಬೇರ್ಪಡಿಸಿ ತೋರುವ ವರ್ಣಸಂಕೇತಗಳಿಲ್ಲದ್ದರಿಂದ ನಿಶ್ಚಿತವಾಗಿ ಹೇಳಲು ಸಾಧ್ಯವಾಗಲಾರದು. ಬಹಳಾದರೆ ಪ್ಲುತ ಭೇದವು ವಿಶಿಷ್ಟ ಸನ್ನಿವೇಶದಲ್ಲಿ (Predictable environment) ಬರುವ ಸ್ವರ-ಕಾಲ-ಭೇದ Duration ವೆಂದು ಹೇಳಬಹುದು. 'ಸಾಗುತಿಹುದು ಮಂದ್ರಾಕ್ರಾಂತ ರಸವಿರಹಿ ಛಂದ ಹಿಡಿದು' (ಮೇಘದೂತ) ಇಲ್ಲಿ ದಾದಲ್ಲಿಯ ಸ್ವರ ಪ್ಲುತ. ಅದನ್ನು ಛಂದೋದೃಷ್ಟಿಯಿಂದಲೇ ಗುರುತಿಸಲು ಸಾಧ್ಯ. (Prosodically defined) ಅಂಥ ಆಧಾರಗಳೂ ವಚನದಲ್ಲಿ ಅಸಾಧ್ಯವಾಗಿವೆ.

ಋ ಕಾರವನ್ನು ಹೇಗೆ ಉಚ್ಚರಿಸುತ್ತಿದ್ದರೆಂದು ಹೇಳುವದೂ ಕಷ್ಟ. ಅದು ಸಂಸ್ಕೃತ ಶಬ್ದಗಳಲ್ಲಿ ಮಾತ್ರ ಗೋಚರವಾಗುತ್ತದೆ. ಇಂದಿನಂತೆ ರಿ ರು ಗಳ ಮಧ್ಯೇ ತುಟಿಗಳನ್ನು ದುಂಡುಮಾಡದೆ ಉಚ್ಚರಿಸುತ್ತಿದ್ದರಾದರೆ ಅಲ್ಲಿಯ ಸ್ವರವು ಪದಾದಿಯಲ್ಲಿ ಬರಲಾರದು ಎಂದೂ ಒಂದೇ ವ್ಯಂಜನದ ಮೇಲೆ ಬರುವದಾದರೆ ಅದು ರ್‌ದ ಮೇಲೂ ಇತರೆಡೆ ಸಂಯುಕ್ತ ವ್ಯಂಜನಗಳ ಮೇಲೂ ಅದೂ ಎಲ್ಲಿ ರ್ ವು ಆ ಸ್ವರ ಪೂರ್ವದ ಸದಸ್ಯನಾಗಿರುವದೋ ಅಲ್ಲಿ, ಬರುತ್ತಿತ್ತು ಎಂದು ಹೇಳಬೇಕಾಗುತ್ತದೆ. ಋಷಿಯಲ್ಲಿ

ರ್ ದ ಮೇಲೆ, ಕೃತಕ ದಲ್ಲಿ ಕ್ ರ್ ಸಂಯುಕ್ತಗಳ ಮೇಲೆ, ವಿಸ್ಮೃತಿ ಯಲ್ಲಿ ಸ್‌ಮ್‌ರ್ ಗಳ ಮೇಲೆ, ಇ ಉ ಮಧ್ಯದ ಓಷ್ಠ್ಯ ವಿವೃತ ಸ್ವರ ಬರುತ್ತಿತ್ತೆಂದು ಹೇಳಬೇಕಾಗುತ್ತದೆ. ಛಂದೋದೃಷ್ಟಿಯಿಂದ ರ್ ದ ಮೇಲೆ ಬರುವ ಆ ಸ್ವರ ಉಳಿದ ಹ್ರಸ್ವಸ್ವರಗಳಂತಿರ ಬಹುದೆಂದೂ ದ್ವಿ ಸಂಯುಕ್ತಗಳ ಮೇಲೆ ಬಂದಾಗ ಹಿಂದಿನ ಸ್ವರ ಗುರುವಾಗುವದಿ ಲ್ಲವಾದ್ದರಿಂದ ಅಲ್ಲಿ ಅದು ಅತಿ ಹ್ರಸ್ವವಾಗಿರಬಹುದೆಂದೂ ಊಹಿಸಬೇಕಾಗುತ್ತದೆ.

ವ್ಯಂಜನಗಳಲ್ಲಿ ಕ್ ಗ್, ಚ್ ಜ್. ಟ್ ಡ್, ತ್ ದ್ ಪ್ ಬ್ ಗಳು ಸ್ಪರ್ಶ ವರ್ಣಗಳು. ಸಂಸ್ಕೃತ ಪದಗಳಲ್ಲಿಯ ಮಹಾ ಪ್ರಾಣಗಳು ತತ್ಸಮಗಳಲ್ಲಿ ಅಬಾಧಿತ ವಾಗಿ ಉಳಿದಿವೆ. ಕನ್ನಡ ಪದಗಳಲ್ಲಿ ಮಹಾಪ್ರಾಣಗಳು ಆಯಾ ಅಲ್ಪ ಪ್ರಾಣಗಳಿಗೆ ವಿಕಲ್ಪವಾಗಿ ಬರುತ್ತವೆ. ಗೋಳಿಡು ಘೋಳಿಡು, ದಾವತಿ ಧಾವತಿ ಹೀಗೆ. ಅನುಕರಣ ವಾಚಿಗಳಲ್ಲೂ ಅವುಗಳಿಗೆ ವಿಕಲ್ಪವಿದೆ. ಪರಭಾಷೆಯ ಸಂಖ್ಯಾವಾಚಿಗಳಲ್ಲಿಯೂ ಮಹಾಪ್ರಾಣಗಳು ಕಾಣುತ್ತವೆ. ಛತ್ತೀಸ ಇತ್ಯಾದಿ. ಕೆಲವೆಡೆ ಸಂಸ್ಕೃತದ ಅಲ್ಪ- ಪ್ರಾಣಕ್ಕೆ ಬದಲಾಗಿ ಮಹಾಪ್ರಾಣಗಳು ಬಂದಿವೆ. ಧಾತರಿಗೆ ಇತ್ಯಾತಿ.

ಅನುನಾಸಿಕಗಳಲ್ಲಿ ಮ್ ನ್ ಣ್ ಗಳು ಎಲ್ಲೆಡೆಗೂ ಬರಬಲ್ಲವು ಆದರೆ ಙ್ ಞ್ ಗಳಿಗೆ ಸ್ವತಂತ್ರವಾದ ಅಸ್ತಿತ್ವವಿಲ್ಲ, ಅವು ಅನುಕ್ರಮವಾಗಿ ಕವರ್ಗ ಚವರ್ಗಗಳ ಪೂರ್ವದಲ್ಲಿ ಮಾತ್ರ ಬರಬಲ್ಲವು. ಅದನ್ನು ಒಂದೇ ಒಂದು ಸಂಕೇತ– ಅನುಸ್ವಾರ (೦) ದಿಂದ ತೋರಿಸುತ್ತಾರೆ. ಮ್‌ಕ್, ನ್‌ಕ್, ಣ್‌ಕ್ ಗಳ ಸಂಯುಕ್ತಗಳಾಗಲಿ; ಮ್‌ಚ್, ನ್‌ಚ್, ಣ್‌ಚ್, ಗಳ ಸಂಯಯುಕ್ತಗಳಾಗಲಿ; ಙ್‌ಪ್, ಞ್‌ಟ್, ಇತ್ಯಾದಿ ಸಂಯುಕ್ತಗಳಾಗಲಿ ದೊರೆಯದ್ದರಿಂದ ಕ್ ಹಾಗೂ ಚ್ ಗಳ ಹಿಂದೆ ಬರುವ ಅನು ಸ್ವಾರವು ಆಯಾ ವರ್ಗೀಯ ಅನುನಾಸಿಕವಾಗಿರಬೇಕು. ಈ ವಿವರಣೆಯನ್ನು ಲಿಂಗ ಸೀಮೆಯನ್ನು (morpheme boundary)ಲಕ್ಷದಲ್ಲಿರಿಸಿ ಮಾಡಲಾಗಿದೆ ಎಂಬುದನ್ನು ಗಮನಿಸಬೇಕು. ಏಕೆಂದರೆ ವಾಙ್ಮನದಲ್ಲಿ ಙ್‌ಗಳ ಸಂಯುಕ್ತ ತೋರುತ್ತದೆ. ಆದರೆ ಅಲ್ಲಿ ಸಮಾಸ ಪೂರ್ವಪದವಾದ ವಾಕ್‌ನ ಕಕಾರಕ್ಕಾದೇಶವಾಗಿ ಙ್ ಬಂದಿದೆ, ಅಂದರೆ ವಾಙ್ಮನದಂಥ ಸಮಸ್ತ ಪದಗಳಲ್ಲಿ ಮಾತ್ರ ಇದು ಸಾಧ್ಯ, ಬೇರೆಡೆಗೆ ಅಲ್ಲ ಆದರೆ ಞ್ ಹೀಗೆ ಕೂಡ ಬೇರೆಡೆಗೆ ಬರಲಾರದು. ಈ ಅನುಸ್ವಾರವು ಕವರ್ಗ ಚವರ್ಗಗಳ ಸ್ಪರ್ಶಾಕ್ಷರ ಪೂರ್ವದಲ್ಲಿ ಅಲ್ಲದೆ ಟತಪವರ್ಗಗಳ ಸ್ಪರ್ಶಾಕ್ಷರ ಪೂರ್ವದಲ್ಲಿಯೂ ಬರು ತ್ತದೆ. ಬಂಟ, ಎಂತು, ಕಂಪು ಇತ್ಯಾದಿ. ಅಲ್ಲಿ ಅದು ಬಣ್ಟ, ಎನ್ತು. ಕಮ್ಪುಗಳಿಗೆ ಸಮಾನವಾಗಿದೆ. ಅವರ್ಗಾಕ್ಷರಗಳ ಪೂರ್ವದಲ್ಲಿ ಅನುಸ್ವಾರದ ಸ್ವರೂಪವನ್ನು ವರ್ಣಿಸಲು ಆಧಾರಗಳು ಸಾಲವು, ಉದಾಹರಣೆಗೆ ಸಂಯೋಗ, ಸಂವಿದ, ಸಂಸಾರ, ಸಂಶಯ, ಸಂಹಾರಗಳಲ್ಲಿ ಇಂದು ಕೂಡ ಸಯ್‌ಯೋಗ, ಸಮ್‌ಯೋಗ ಹೀಗೆ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಉಚ್ಚಾರಗಳಿರುವ ಮೇಲೆ ವಚನಕಾರರ ಕಾಲದ್ದನ್ನು ಹೇಗೆ ಊಹಿಸುವದು ? ಅಂತೂ ಮ್‌ನ್‌ಣ್ ಮೂರು ಅನುನಾಸಿಕಗಳು: ಅನು ಸ್ವಾರಕ್ಕೆ ವರ್ಗಾಕ್ಷರಗಳ ಪೂರ್ವದಲ್ಲಿ ಮುಂದಿನ ವರ್ಣದಿಂದ ಅದರ ಸ್ವರೂಪ,

ಉಳಿದೆಡೆ ಅದರ ಉಚ್ಚಾರ ಸ್ವರೂಪಗಳನ್ನು ಹೇಳಲು ಸಾಧ್ಯವಿಲ್ಲ ಎಂದು ಮಾತ್ರ ಹೇಳಬಹುದು. ಒಟ್ಟು ನಾಲ್ಕು ನಾಸಿಕ್ಯ ವರ್ಣಗಳಾದುವು,

ಈಷತ್‌ಸ್ಪೃಷ್ಟ ವರ್ಣಗಳಾದ ಹ್, ಯ್, ಱ್, ರ್, ಳ್, ಲ್, ವ್ ಗಳು ಎಲ್ಲ ಪರಿಸರಗಳಲ್ಲಿ ಬರುತ್ತವೆ ಎಂದ ಮೇಲೆ ಅವೆಲ್ಲ ಸ್ವತಂತ್ರ ವರ್ಣಗಳು. ಐತಿಹಾಸಿಕತೆಯ ದೃಷ್ಟಿಯಿಂದ ಱ್‌ದ ಬಗೆಗೆ ಒಂದೆರಡು ವಿವರಣೆ ಕೊಡಬೇಕು. ೧೨ನೆಯ ಶತಮಾನದ ಹೊತ್ತಿಗೆ ರಕಾರ ಱಕಾರಗಳ ಮಧ್ಯೆ ಳಕಾರ ೞಕಾರಗಳ ಮಧ್ಯೇ ವ್ಯತ್ಯಾಸ ಮಾಯವಾಗುತ್ತ ಬಂದಿತ್ತು. ವಚನಗಳಲ್ಲಿ ೞದ ಬಳಕೆ ಇಲ್ಲವೇ ಇಲ್ಲ, ಱವು ರದ ವಿರುದ್ಧ ಅರ್ಥವ್ಯತ್ಯಾಸವನ್ನು ಕೆಲವು ಶಬ್ದಗಳಲ್ಲಿಯಾದರೂ ಉಳಿಸಿಕೊಂಡಿದೆ, "ರಚ್ಚೆ" ಸತ್ಯ ಬಯಲಾಗು, "ಱಚ್ಚೆ" ಕೊಳೆ; "ಎರಗು" ನಮಸ್ಕರಿಸು "ಎಱಗು" ಅಕ್ರಮಣಮಾಡು; "ಎರೆ" ಕಪ್ಪುಮಣ್ಣು, "ಎಱೆ" (ನೀರು ಮೊದಲಾದ್ದನ್ನು) ಸುರಿ ಎಂಬ ಪದಗಳು ಬಳಕೆಯಾದ್ದರಿಂದ ಎರಡೂ ವರ್ಣಗಳ ಭಿನ್ನ ಉಚ್ಚಾರ ಬಳಕೆಯಲ್ಲಿ ಇದ್ದಿರಬೇಕು. ಅದರ ಜೊತೆಗೇ ಅವುಗಳ ಸ್ವಚ್ಛಂದ ವ್ಯತ್ಯಾಸವೂ ಕಂಡುಬರುತ್ತದೆ. "ಅಱಿದ" ಕತ್ತರಿಸಿದ "ಅರಿದ" ಎಂದೂ ಬಳಕೆಯಾಗಿದೆ "ತಿಳಿದ" ಅರ್ಥದ "ಅರಿದ"ವೂ ಬಳಕೆಯಲ್ಲಿದೆ, ಹೀಗೆ ಸ್ವಚ್ಛಂದ ವ್ಯತ್ಯಾಸ (Free Variation) ಪ್ರಚಲಿತವಿದ್ದರೂ ಮೇಲೆ ತೋರಿದ ವಿಭೇದವೂ (Contrast) ಕಂಡುಬರುತ್ತಿದೆ. ಅಲ್ಲಮನ ಒಂದು ವಚನದಲ್ಲಿ "ಕಾಗೆ ಕಱ್ಱೆಂದು" ಎಂಬ ಪ್ರಯೋಗವಿದೆ. ಅಲ್ಲಿ ಱಕಾರದ ಒತ್ತಿದ ಉಚ್ಚರಣೆಯನ್ನು ಗಮನಿಸಿದ್ದನ್ನು ಲಕ್ಷಿಸಬೇಕು, ಱಕಾರದಲ್ಲಿ ನಾಲಗೆ ತಾಲುವಿನ ಮುಂಭಾಗಕ್ಕೆ ಬಹಳ ಸಲ ಬಡಿದುಕೊಳ್ಳುತ್ತಿರಬೇಕು, ರಕಾರದಲ್ಲಿ ಬಹುಶಃ ಒಂದೇ ಸಲ ಬಡಿದುಕೊಳ್ಳುತ್ತಿರಬಹುದು.

ಈಷದ್‌ವಿವೃತ ವರ್ಣಗಳಾದ ಶ್ ಷ್ ಸ್ ಗಳು ಸ್ವತಂತ್ರವಾಗಿ ಬರಬಲ್ಲವು, ಶ್, ಷ್, ಗಳು ಸಂಸ್ಕೃತ ಶಬ್ದಗಳಲ್ಲಿ ಮಾತ್ರ ಬರುತ್ತದೆ. ಸ್‌ವು ಎಲ್ಲೆಡೆಗೆ ಬರುತ್ತದೆ. ಕೆಲವು ಶಕಾರ ಷಕಾರಗಳು ತದ್ಭವಗಳಲ್ಲಿ ಸದಲ್ಲಿ ಸಮಾವೇಶಗೊಂಡದ್ದುಂಟು, (merger) ಸಂಸ್ಕೃತ ತತ್ಸಮಗಳೂ ಬಳಕೆಯಾದ್ದರಿಂದ ಮೂರೂ ಬಳಕೆಯಲ್ಲಿದ್ದವೆಂದು ಹೇಳಬೇಕಾಗುತ್ತದೆ.

ವಿಸರ್ಗವು ಬೇರೆ ಬರದೆ ಕ್ ಕಾರ ಪ್ ಕಾರ ಪೂರ್ವವಲ್ಲಿ ಮಾತ್ರ ಬರುತ್ತದೆ. ಕೇಶಿರಾಜನು ಕ ಕಾರ ಪೂರ್ವದಲ್ಲಿ ಬರುವ ವಿಸರ್ಗವನ್ನು ಜಿಹ್ವಾಮೂಲೀಯ X (ಪಸುಂಬೆಯ ಲಕ್ಷಣ = ಹಸಿಬೆಯ ಆಕೃತಿ) ವೆಂದೂ ಪಕಾರ ಪೂರ್ವದಲ್ಲಿಯ ವಿಸರ್ಗವನ್ನು ಉಪಧ್ಮಾನೀಯ ಂಂ (ಕುಮಾರೀ ಸ್ತನಯುಗಳಾಕೃತಿ) ಎಂದೂ ವರ್ಣಿಸಿದ್ದಾನೆ. ಅವೆರಡೂ ಆಭ್ಯಂತರ ಪ್ರಯತ್ನದ ಪ್ರಕಾರ ಈಷದ್ ವಿವೃತ್ತಗಳು. ನಾವಿಲ್ಲಿ Xವನ್ನು ಕಕಾರಭೇದವೆಂದೂ ಂಂ ವನ್ನು ಪಕಾರ ಭೇದವೆಂದೂ ಗ್ರಹಿಸಬಹುದು. ಕಕಾರ ಪಕಾರಗಳ ಸಂಪರ್ಕ ಸ್ವಲ್ಪ ಬಿಟ್ಟುಕೊಂಡರೆ X ಂಂ ಗಳು ಹುಟ್ಟುತ್ತವೆ. ಅಲ್ಲದೆ ಅವುಗಳು ಸನ್ನಿ

ವೇಶದಿಂದ ನಿರ್ಣೀತವಾಗುತ್ತವೆ. ಹಾಗೂ ಹ್ ಕ್ ಗಳ ಅಥವಾ ಹ್ ಫ್ ಗಳ ಸಂಯುಕ್ತ ಅಸಂಭವವಿದ್ದುದರಿಂದ ಮೇಲಿನಂತೆ ಗ್ರಹಿಸಿದರೆ ಯಾವ ಬಾಧೆ ಇಲ್ಲ ಅಂದರೆ ಅಂತಃಕರಣವು ಅಂತXಕರಣ, ಅಂತಃಪುರವು ಅಂತಂಪುರ ಆಗದೇ ಬೇರೆ ಸಾಧ್ಯತೆಯು ಧ್ವನಿಗಳ ವಿಸ್ತಾರದಲ್ಲಿ ( Distribution ) ಸಾಧ್ಯವಿಲ್ಲ. ಈ ಚರ್ಚೆಯ ಫಲಶ್ರುತಿಯನ್ನು ಹೀಗೆ ಸಂಗ್ರಹಿಸಬಹುದು:

ಕೆಳಗಿನ ಪಟ್ಟಿಯನ್ನು ತಯಾರಿಸುವಾಗ ಆಧುನಿಕ ಧ್ವನಿ ಶಾಸ್ತ್ರಕ್ಕನುಗುಣವಾಗಿ ಪರಂಪರಾಗತವಾಗಿ ಬಂದ ವರ್ಣನೆಗಳನ್ನು ಹೊಂದಿಸಿಕೊಳ್ಳಲಾಗಿದೆ. ಸನ್ನಿವೇಶದಲ್ಲಿ ಊಹಿಸಬಹುದಾದ ಧ್ವನಿಗಳನ್ನು ( Allophones ) ಇಲ್ಲಿ ಬೀಡಲಾಗಿದೆ. ಏಕೆಂದರೆ ಆಯಾ ಸನ್ನಿವೇಶದಲ್ಲಿ ಧ್ವನಿಗಳು ಯಾವಾಗಲೂ ಅವೇ ಆಗಿ ಬರುತ್ತವೆ. ಬೇರೊಂದು ಸಾಧ್ಯವಿಲ್ಲ.

| | ಸ್ಪೃಷ್ಟ | ನಾಸಿಕ್ಯ | ಈಷತ್ ಸ್ಪೃಷ್ಟ | ಈಷತ್ ವಿವೃತ | ಸ್ವರ | ಸಂಧ್ಯಕ್ಷರ |
|---|---|---|---|---|---|---|
| ಕಂಠ್ಯ | ಕ್ ಗ್ | | ಹ್ | | ಅ | ಐ |
| ತಾಲವ್ಯ | ಚ್ ಜ್ | | ಯ್ | ಶ್ | ಇ, ಎ | (ಕಂಠ ತಾಲು) |
| ಮೂರ್ಧನ್ಯ | ಟ್ ಡ್ | ಣ್ | ಳ್ | ಷ್ | ಋ | ಔ |
| ದಂತ್ಯ | ತ್ ದ್ | ನ್ | ಲ್,ರ್,ಱ್ | ಸ್ | | (ಕಂಠೌಷ್ಠ) |
| ಓಷ್ಠ್ಯ | ಪ್ ಬ್ | ಮ್ | ವ್ | | ಉ,ಒ | |
| | | ಂ | | | | |

ಸ್ವರ–ಕಾಲ–ಭೇದಗಳು ಹ್ರಸ್ವ ದೀರ್ಘ ಎಂದು ಎರಡು ವಿಧ, ಹೀಗೆ ಒಟ್ಟು ೩೨ ವರ್ಣಗಳು ಐದು ಸ್ವರಗಳಿರುವ "ದೀರ್ಘತೆ" ( chroneme ) ಎಂಬ ಒಂದನ್ನೇ ಸೇರಿಸಿದರೆ ೩೩ ಆಗುತ್ತವೆ. ಐದು ದೀರ್ಘಸ್ವರಗಳನ್ನೂ ಪ್ರತ್ಯೇಕ ಸೇರಿಸಿದರೆ ೩೭ ಆಗುತ್ತವೆ. ಇದು ವಚನಗಳ ವರ್ಣ ವ್ಯವಸ್ಥೆ.

## ವಚನಗಳ ಲಿಂಗರೂಪ (Nominal and Verbal bases)

ಇಲ್ಲಿ ಲಿಂಗ ಪದವನ್ನು ಶಬ್ದಾನುಶಾಸನಕಾರನ ಅರ್ಥದಲ್ಲಿ ಬಳಸಲಾಗಿದೆ. ಲೀನಂ ಅರ್ಥಂ ಗಮಯತೀತಿ ಲಿಂಗಂ (ತನ್ನಲ್ಲಿದ್ದ ಅರ್ಥವನ್ನು ತೋರಿಸುತ್ತದೆಯಾಗಿ ಲಿಂಗ) ಎಂಬ ವ್ಯುತ್ಪತ್ತಿಯೊಡನೆ, 'ಅರ್ಥವಲ್ಲಿಂಗಂ' (ಶ. ಶಾ. ಸೂ. ೮) ಎಂಬ ವ್ಯಾಖ್ಯೆಯನ್ನೂ ಸ್ವೀಕರಿಸಲಾಗಿದೆ. ನಮ್ಮ ಅರ್ಥದಲ್ಲಿ ನಾಮವಿಭಕ್ತಿ ಪ್ರತ್ಯಯಗಳನ್ನೂ ಕ್ರಿಯಾವಿಭಕ್ತಿ ಪ್ರತ್ಯಯಗಳನ್ನೂ ತೆಗೆದುಕೊಳ್ಳಬಲ್ಲ ಸಾಮರ್ಥ್ಯವುಳ್ಳವುಗಳು ಲಿಂಗಗಳು 'ಸುಪ್ತಿಙಂತಂ ಪದಂ,' (ಶ. ಶಾ, ಸೂ. ೧೮) ಎಂಬ ವಿಧಿಯ ಪ್ರಕಾರ ವ್ಯುತ್ಪತ್ತಿೀತರ ಪ್ರತ್ಯಯ ಸೇರಿದ

ಲಿಂಗ ಪ್ರಕೃತಿಗಳನ್ನು ಪದಗಳಿಂದು ಗ್ರಹಿಸಲಾಗಿದೆ. ಇಲ್ಲಿ ತೃತೀಯ ಪುರುಷದಲ್ಲಿ ಮನುಷ್ಯರ ಗಂಡು ಹೆಣ್ಣು ಹಾಗೂ ಇತರಗಳನ್ನು ಸೂಚಿಸಲು ಬಳಸುವ ಲಿಂಗದಿಂದ ಇದು ಭಿನ್ನವಾಗಿದೆ ಎಂದು ತಿಳಿಯಬೇಕು.

## ಲಿಂಗದ ವಿಭಜನೆಯನ್ನು ಹೀಗೆ ಸೂಚಿಸಬಹುದು

(ಈ ವಿಭಜನೆ ವ್ಯಾಕರಣ ಮತ್ತು ಅರ್ಥದ ಶಾಸ್ತ್ರ (Semantics) ಗಳನ್ನಾಧರಿಸಿ ಮಾಡಲ್ಪಟ್ಟಿದೆ.)




ಹೀಗೆ ೧೨ ಪ್ರಕಾರಗಳಾಗಿ ವಿಭಾಗಿಸಬಹುದು; (ಇಲ್ಲಿ ಗುಣಿವಾಚಕ ಸಂಖ್ಯೇಯವಾಚಕ ಪರಿಮೇಯ ವಾಚಕ ನಾಮಪ್ರಕೃತಿಗಳನ್ನು ಗುಣವಾಚಕ ಸಂಖ್ಯಾವಾಚಕ ಪರಿಮಾಣವಾಚಕ ವಿಶೇಷಣಗಳಿಂದ ಬೇರ್ಪಡಿಸಿ ತಿಳಿಯಬೇಕು. ವಿಶೇಷಣಗಳು ಯಾವ ಪ್ರತ್ಯಯವನ್ನೂ ತೆಗೆದುಕೊಳ್ಳುವದಿಲ್ಲ. ಆದರೆ ಗುಣದಿಂದ, ಸಂಖ್ಯೆಯಿಂದ, ಪರಿಮಾಣದಿಂದ ವಸ್ತುವನ್ನು ಹೇಳುವಂಥವುಗಳು ಪ್ರತ್ಯಯಗಳನ್ನು ತೆಗೆದುಕೊಳ್ಳುತ್ತವೆ.)

ಉದಾಹರಣೆಗಳು :

೧) ಕೃತ್ : ಕೆತ್ತುಗ, ಅಳಿವು, ಕಟ್ಟಿಕೆ, ಗೆಲ್ಲತನ.

೨) ತದ್ಧಿತ: ಗಾಡಿಗ, ಬೇಟೆಕಾರ, ಚೆನ್ನಿಗ, ಕೋಪಿ, ಕುಲಜ, ದೊಡ್ಡತನ, ಒಳಬೊಳ್ಳೆತನ.

೨ಅ) ನಾಮಸಾಧಿತ ; ಕೋಪಿ, ಕುಲಜ, ಗಾಡಿಗ, ಹಾದರಿಗ, ಬೇಟೆಕಾರ.
೨ಬ) ವಿಶೇಷಣಸಾಧಿತ : ಒಳಬೊಳ್ಳತನ, ದೊಡ್ಡತನ, ಗುರುತನ.
೩) ಸಮಾಸ : ಭಾವಕಾಯ, ಹಿರಿಪದ. ಒಮ್ಮನ, ಇರ್ವಗೆ, ಪನ್ನಗಭೂಷಣ, ಇಹಪರ, ಹರಿಹರ.
೪) ಸಮಾಸ ಧಾತುಪ್ರಕೃತಿ : ಸುಖಿಂಬಡೆ, ಅರಕೆಗೊಳ್ಳು. ಮೊಳೆದೋರು ಬೀಸರವೋಗು
೫) ರೂಢ : ಲಿಂಗ, ಬಾವಿ, ತಳವಾರ, ತಲೆ
೬) ಅನ್ವರ್ಥ ; ಪೋಟಿ, ಕುರುಡ, ಹೆಳವ
೭) ಅಂಕಿತ ; ಚೆನ್ನಬಸವ, ಆದಯ್ಯ, ಅಕ್ಕಯ್ಯ. ಮಾದರಸ
೮) ಗುಣವಾಚಕ : ಮೂಢ, ಮರುಳು, ಕೆಂಚ. ಖುಲ್ಲ, ಶೂನ್ಯನು,
೯) ಸಂಖ್ಯೇಯವಾಚಕ : ಒಂದು, ಎರಡೂ, ಮೂರು, ನೂರು,
೧೦) ಪರಿಮೇಯವಾಚಕ ; ಸಕಲ, ಎಲ್ಲ,
೧೧) ಸರ್ವನಾಮ : ಅದು, ಇದು, ನಾನು
೧೨) ಧಾತುಪ್ರಕೃತಿ : ಅರಿ, ನೋಡು, ಕೇಳು, ನಡೆ,

**ನಾಮ ಪದ ರೂಪ.** ನಾಮ ಪ್ರಕೃತಿಗಳ ಮೇಲೆ ನಾಮ ವಿಭಕ್ತಿ ಪ್ರತ್ಯಯಗಳನ್ನು ಪ್ರಯೋಗಿಸಲಾಗುತ್ತದೆ. ಪ್ರತ್ಯಯಸಹಿತವಾದ ನಾಮ ಪ್ರಕೃತಿ ನಾಮಪದವೆನಿಸಿಕೊಳ್ಳುತ್ತದೆ. ವಾಕ್ಯದಲ್ಲಿ ನಾಮಪದಗಳು ಮಾತ್ರ ಬರಬಲ್ಲವು. ಪ್ರಥಮೆಯುಕ್ತ ಪದಗಳಿಗೆ ಮಾತ್ರ ವಿಕಲ್ಪದಿಂದ ಮೂಲರೂಪ ಬರುತ್ತದೆ. ನಾಮವಿಭಕ್ತಿ ಪ್ರತ್ಯಯಗಳು ವಚನ ಸಾಹಿತ್ಯದಲ್ಲಿ ಎಂಟುವಿಧ.

**ಪ್ರಥಮೆ :** — ಉ ∞ ಮೂಲರೂಪ.
**ದ್ವಿತೀಯೆ :** — ಅ ೮ ಅಮ್* ೮ — ಅನು ೮ — ಅನ್ನು
**ತೃತೀಯೇ :** — ಇಮ್* ೮ — ಇಂದ ೮ — ಇಂದೆ
**ಚತುರ್ಥಿ :** — ಗೆ ∞ — ಇಗೆ ∞ (ಕೆ೮—ಕ್ಕೆ)
**ಪಂಚಮಿ :** — ಇಂದ
**ಷಷ್ಠೀ :** — ಅ
**ಸಪ್ತಮಿ :** — ಅ ಲಿ ೮ — ಅಲ್ಲಿ ೮ — ಅಲು ೮ — ಒಳು ೮ — ಒಳಗೆ
**ಸಂಭೋಧನ:** — ಏ ∞ (— ದೀರ್ಘ ೮ ಮೂಲ ರೂಪ)

**ಸೂಚನೆಗಳು :**– ಗುರುತು ವಿಭಕ್ತಿ ಪ್ರತ್ಯಯವು ನಾಮಪ್ರಕೃತಿಯ ಜೊತೆಗೆ ಎಲ್ಲಿ ಸಂಬಂಧವನ್ನು ಪಡೆಯುತ್ತದೆ ಎಂಬದನ್ನು ಸೂಚಿಸುತ್ತದೆ. * ಗುರುತು ಹಾಕಿದ ಪ್ರತ್ಯಯಗಳನ್ನು ಒಳಗೊಂಡ ರೂಪಗಳು ವಿರಳವಾಗಿವೆ. ೮ ಗುರುತಿನ

ಹಿಂದು ಮುಂದಿನ ಪ್ರತ್ಯಯಗಳು ನಿರ್ಬಂಧವಿಲ್ಲದೆ ನಾಮಗಳ ಮೇಲೆ ಪ್ರಯೋಗವಾಗುತ್ತವೆ. (Free Variation). ∞ ಗುರುತಿನ ಹಿಂದು ಮುಂದಿನ ಪ್ರತ್ಯಯಗಳು ಮುಂದೆ ವಿವರಿಸಿದಂತೆ ನಿಯಮ ಬದ್ಧವಾಗಿ ಬರುತ್ತವೆ. (Morphologically Conditioned)

ಮೇಲೆ ವಿಭಾಗಿಸಿ ತೋರಿಸಿದ ನಾಮ ಪ್ರಕೃತಿಗಳು ವಿಭಕ್ತಿ ಪ್ರತ್ಯಯಗಳನ್ನು ಪಡೆಯುವಾಗ ಐದು ಗುಂಪುಗಳಲ್ಲಿ ಬೀಳುತ್ತವೆ. ಗುಂಪುಗಳನ್ನಾಗಿ ವಿಭಾಗಿಸುವಾಗ ಅವು ತೆಗೆದುಕೊಳ್ಳುವ ಪ್ರತ್ಯಯ ಹಾಗೂ ಪ್ರತ್ಯಯ ಪೂರ್ವದ ವರ್ಣ ಅಥವಾ ವರ್ಣಗಳನ್ನು ಲಕ್ಷಿಸಲಾಗಿದೆ. ಗುಂಪುಗಳ ಲಕ್ಷಣಗಳನ್ನು ಹೀಗೆ ಹೇಳಬಹುದು.

೧. ಅಕಾರಾಂತ ವ್ಯಕ್ತಿವಾಚಿಗಳು.
೨. ಇ, ಎ ಕಾರಾಂತ ವ್ಯಕ್ತಿ ಹಾಗೂ ಅವ್ಯಕ್ತಿವಾಚಿಗಳು.
೩. ಉ ಕಾರಾಂತ ವ್ಯಕ್ತಿ ಹಾಗು ಅವ್ಯಕ್ತಿವಾಚಿಗಳು (ನಾಲ್ಕನೆಯ ಗುಂಪನ್ನುಳಿದು)
೪. ತೃತೀಯ ಪುರುಷ ನಪುಂಸಕ ಲಿಂಗದ ಸರ್ವನಾಮಗಳು ಮತ್ತು ಸಂಖ್ಯೇಯ ವಾಚಕಗಳು.
೫. ಅಕಾರಾಂತ ಅವ್ಯಕ್ತಿವಾಚಿಗಳು.

ಮೊದಲಿನ ಮೂರು ಗುಂಪುಗಳು ಚತುರ್ಥಿಯಲ್ಲಿಗೆ ತೆಗೆದುಕೊಳ್ಳುತ್ತವೆ; ಕೊನೆಯ ಎರಡು ಗುಂಪುಗಳು ಕೆಲ-ಕ್ಕೆ ತೆಗೆದುಕೊಳ್ಳುತ್ತವೆ. ಬೇರೆ ವಿಭಕ್ತಿ ಪ್ರತ್ಯಯಗಳಲ್ಲಿ ಸ್ವಚ್ಛಂದ ವ್ಯತ್ಯಾಸವಿರುವದರಿಂದ ನಿರ್ಬಂಧಗಳನ್ನು ಹೇಳಲು ಚತುರ್ಥಿಯನ್ನು ಆಯ್ದುಕೊಳ್ಳಲಾಗಿದೆ. ಐದೂ ಗುಂಪುಗಳು ಎಲ್ಲ ಪ್ರತ್ಯಯಗಳ ಪೂರ್ವದಲ್ಲಿ ಪಡೆಯುವ ವರ್ಣ ಅಥವಾ ವರ್ಣಗಳನ್ನು ಹೀಗೆ ಸಂಗ್ರಹಿಸಬಹುದು.

| ವಿಭಕ್ತಿ ಗುಂಪು | ಚತುರ್ಥಿ | ತೃತೀಯೆ, ಪಂಚಮಿ, ಷಷ್ಠಿ, ಸಪ್ತಮಿ | ಪ್ರಥಮೆ-ಉ ಪೂರ್ವದಲ್ಲಿ | ದ್ವಿತೀಯೆ | ಸಂಬೋಧನ |
|---|---|---|---|---|---|
| ೧ | -ನ್- | -ನ್- | | — ನ್ — | |
| ೨ | ◡ | -ಯ್- | | — ಯ್ — | |
| ೩. | -ಇ-ಲ-ಇನ್- | ಸಂಸ್ಕೃತ ಶಬ್ದ:-ವ್-<br>ಲ-ವಿನ್<br>ಉಳಿದವು ◡ ಲ-ಇನ್ | | ಸಂಸ್ಕೃತ ಶಬ್ದ : -ವ್-<br>ಉಳಿದವು ; ◡ | |
| ೪ | -ಅ- | -ಅರ್- | | ಸಂಬೋಧನ ರೂಪವಿಲ್ಲ<br>ಉಳಿದೆಡೆ ◡ | |
| ೫ | ◡ | -ದ್- | | — ದ್ — | |

೫ನೆಯ ವಿಭಾಗದ ಕೆಲವು ಪ್ರಕೃತಿಗಳು ಅಪರೂಪಕ್ಕೊಮ್ಮೆ ಎಲ್ಲೆಡೆಗೆ -ನ್- ಪಡೆಯುತ್ತವೆ. ಪೊಲನ, ಪೊಲನಿಂದ. ( ◡ ಈ ಗುರುತನ್ನು 'ಏನೂ ಇಲ್ಲ' ಎಂಬುದನ್ನು ಸೂಚಿಸಲು ಬಳಸಲಾಗಿದೆ.)

ನಾನು, ಆನು, ನಾವು, ಆವು, ನೀನು, ನೀವು, ತಾನು, ತಾವು ಗಳು ಪ್ರತ್ಯಯ ಪೂರ್ವದಲ್ಲಿ ಬೇರೆ ರೂಪಗಳನ್ನು ಪಡೆಯುತ್ತವೆ. ಚತುರ್ಥಿಯಲ್ಲಿಗೆ ಪ್ರತ್ಯಯ ಪಡೆಯುತ್ತವೆ ಹಾಗೂ ಸಂಬೋಧನ ರೂಪಗಳು ಅವಕ್ಕೆ ಇಲ್ಲ. ಅವನ್ನು ಹೀಗೆ ಸಂಗ್ರಹಿಸಬಹುದು. * ಗುರುತಿನ ರೂಪಗಳು ವಿರಳ.

| | | | | | | | | |
|---|---|---|---|---|---|---|---|---|
| ಪ್ರಥಮಾ | ನಾನು | ಆನು | ನಾವು | ಆವು* | ನೀನು | ನೀವು | ತಾನು | ತಾವು |
| ಚತುರ್ಥಿ ಪೂರ್ವದಲ್ಲಿ | ನನ– | ಎನ– | ನಮ-* | ಎಮ– | ನಿನ– | ನಿಮ– | ತನ– | ತಮ– |
| ಉಳಿದೆಡೆ | ನನ್ನ್-* | ಎನ್ನ್– | ನಮ್ಮ್-* | ಎಮ್ಮ್- | ನಿನ್ನ್– | ನಿಮ್ಮ್– | ತನ್ನ್– | ತಮ್ಮ್- |

ಎಲ್ಲ ರೂಪಗಳನ್ನು ನಡೆಸಿ ನೋಡಬಹುದು. ಏಕವಚನದ ಎಲ್ಲ ರೂಪಗಳನ್ನು ಪಡೆಯಬಹುದು. ಮೂಲ ರೂಪಗಳನ್ನು ಲಿಂಗ ವಿಭಾಗದಲ್ಲಿ ಕೊಟ್ಟಿದೆ.

ಬಹು ವಚನವನ್ನು ಹೀಗೆ ವಿವರಿಸಬಹುದು. ಬಹು ವಚನದ ಪ್ರತ್ಯಯಗಳು ಎರಡು –ಆರ್– ಮತ್ತು –ಗಳ್–. ಬಹುವಚನ ಪ್ರತ್ಯಯವು ವಿಭಕ್ತಿ ಪ್ರತ್ಯಯದ ಪೂರ್ವದಲ್ಲಿ ಬರುತ್ತದೆ. ಒಂದನೆಯ ಗುಂಪಿನ ಶಬ್ದಗಳ ಮೇಲೆ ಹಾಗೂ ಎರಡನೆಯ ಗುಂಪಿನ ರಕ್ತಸಂಬಂಧವಾಚಿ ಕೆಲವು ಶಬ್ದಗಳ ಮೇಲೆ –ಆರ್– ಬರುತ್ತದೆ. ಇತರ ಕಡೆಗಳಲ್ಲಿ –ಗಳ್– ಬರುತ್ತದೆ. ಆದರೆ ನಾಲ್ಕನೆಯ ಗುಂಪಿನಲ್ಲಿ ಅವು–ಅದುವಿನ ಬಹುವಚನವಾಗಿಯೂ; ಒಂದು ಏಕ ವಚನವಾಗಿಯೂ ಉಳಿದವು ಬಹು ವಚನವಾಗಿ ಅವುಗಳ ರೂಪದಲ್ಲಿಯೇ ಬರುತ್ತವೆ. ಆರ್ ಅಥವಾ ಗಳ್‌ನ್ನು ತೆಗೆದುಕೊಳ್ಳುವದಿಲ್ಲ. ಬಹುವಚನದಲ್ಲಿ ಚತುರ್ಥಿ ವಿಭಕ್ತಿ–ಇಗೆ.

ನಾಮಪದ ರೂಪವನ್ನು ಮುಗಿಸುವ ಪೂರ್ವದಲ್ಲಿ ಎರಡು ಸಂಧಿ ನಿಯಮಗಳನ್ನು ಹೇಳಬೇಕು.

೧. ಸ್ವರ ಪರವಾದಾಗ ಪ್ರಕೃತಿಗಳು ಅಂತ್ಯ ಸ್ವರವನ್ನು ಕಳೆದುಕೊಳ್ಳುತ್ತವೆ.

೨. ನ್ ನಂತರ ಗ್ ಬಂದರೆ ಉಚ್ಚಾರದಲ್ಲಿ ಜ್‌ಗ್ ಎಂದಾಗುತ್ತದೆ, ಕಳ್ಳ–ನ್–ಗೆ ಉಚ್ಚಾರದಲ್ಲಿ ಕಳ್ಳಜ್ಗೆ ಇತ್ಯಾದಿ.

## ಕ್ರಿಯಾಪದ ರೂಪ

ನಾಮಪದ ರೂಪದಷ್ಟು ಕ್ರಿಯಾಪದ ರೂಪ ತೊಡಕಾಗಿಲ್ಲ. ವಚನ ಸಾಹಿತ್ಯದಲ್ಲಿ ಇಕಾರಾಂತ, ಎ ಕಾರಾಂತ, ಉಕಾರಾಂತ ಧಾತು ಪ್ರಕೃತಿಗಳು ಮಾತ್ರ ದೊರೆಯುತ್ತವೆ. ಕ್ರಿಯಾ ವಿಭಕ್ತಿ ಪ್ರತ್ಯಯಗಳನ್ನು ಪಡೆಯುವಾಗ ಇಕಾರಾಂತ ಎಕಾರಾಂತಗಳು ಒಂದು ಗುಂಪಾಗಿಯೂ ಉಕಾರಾಂತಗಳು ಇನ್ನೊಂದು ಗುಂಪಾಗಿಯೂ ವರ್ತಿಸುತ್ತವೆ. ಧಾತು ಪ್ರಕೃತಿಗಳು ತೆಗೆದುಕೊಳ್ಳುವ ಧಾತು ಪ್ರತ್ಯಯಗಳನ್ನು ಹೀಗೆ ವಿಭಾಗಿಸಬಹುದು :




ಪುರುಷ, ಲಿಂಗ. ವಚನ ವಿವಕ್ಷಿಗಳಾದ ಪೂರ್ಣಕ್ರಿಯಾವಾಚಿ ಧಾತುಪ್ರತ್ಯಯ-ಗಳನ್ನು ಸಾಮಾನ್ಯವಾಗಿ ನಾವು ಕ್ರಿಯಾವಿಭಕ್ತಿ ಪ್ರತ್ಯಯುಗಳು ಎಂದು ಕರೆಯುತ್ತೇವೆ. ಪೂರ್ಣಕ್ರಿಯಾವಾಚಿಗಳನ್ನೊಳಗೊಂಡ ಕ್ರಿಯಾಪದಗಳು ಸಾಮಾನ್ಯವಾಗಿ ವಾಕ್ಯದ ಕೊನೆಗೆ ಬರುತ್ತವೆ. ಅಥವಾ ವಾಕ್ಯಾರ್ಥವನ್ನು ಪೂರ್ತಿಗೊಳಿಸುತ್ತವೆ. ಅಪೂರ್ಣ ಕ್ರಿಯಾವಾಚಿಗಳನ್ನೊಳಗೊಂಡ ಕ್ರಿಯಾರೂಪಗಳು ಪೂರ್ಣ ಕ್ರಿಯಾಪದವನ್ನು ನಿರೀಕ್ಷಿಸುತ್ತವೆ. (ಸಾಪೇಕ್ಷ) ಅರ್ಥಾತ್ ಬರೀ ತಾವೇ ವಾಕ್ಯಾರ್ಥವನ್ನು ಪೂರ್ತಿಗೊಳಿಸುವದಿಲ್ಲ.

(೧) ಪುರುಷಲಿಂಗ ವಚನ ವಿವಕ್ಷಿಗಳು ಐದು ವಿಧದ ಗುಂಪುಗಳಿವೆ. ಅವು ಆಯಾ ಕಾಲಸೂಚಕ ಅಥವಾ ವಿಧಾನ ಸೂಚಕಗಳ ನಂತರ ಬರುತ್ತವೆ. (ಮುಂದೆ ಚೌಕ ನೋಡಿ) (ಅ) ವರ್ತಮಾನ ಕಾಲ (ಬ) ಭೂತಕಾಲ (ಕ) ಭವಿಷ್ಯತ್ ಕಾಲ (ಡ) ನಿಷೇಧ. ನಾಲ್ಕರಲ್ಲೂ ಸಮಾನವಾಗಿರುವ ಕ್ರಿಯಾವಿಭಕ್ತಿ ಪ್ರತ್ಯಯುಗಳು ಹೀಗಿವೆ.

| ಪುರುಷ | | ಏಕವಚನ | | ಬಹುವಚನ |
|---|---|---|---|---|
| ಪ್ರಥಮ | | –ಎಲ –ಎನು | | –ಎವು |
| ದ್ವಿತೀಯ | | –ಎ | | –ಇರಿ |
| ತೃತೀಯ | ಪು. | –ಅಲ –ಅನು | ಪುಂಸ್ತ್ರೀ | –ಅರು |
| | ಸ್ತ್ರೀ. | –ಅಳು | | |
| | ನ. | –ಉದು | ನ | –ಅವು ಲ –ಉವು |

ನಪುಂಸಕಲಿಂಗ ಏಕವಚನದಲ್ಲಿ–ಭೂತಕಾಲ ಪ್ರತ್ಯಯ–ತು (ಉದುವಲ್ಲ); ಅದೇ ಪ್ರಕಾರ ನಿಷೇಧದಲ್ಲಿ–ಅದು (ಉದುವಲ್ಲ)

ಮೇಲಿನವುಗಳಲ್ಲದೆ ಈ ಪ್ರತ್ಯಯುಗಳು ಅಪರೂಪಕ್ಕೊಮ್ಮೆ ಬರುತ್ತವೆ.

**ವರ್ತಮಾನ್ನ ಕಾಲದಲ್ಲಿ**

ಪ್ರ. ಪು.ಏ. ವ.–ಏನೆ; ತೃ. ಪು. ಪು. ಏ. ವ.–ಆನೆ; ಪುಂಸ್ತ್ರೀ ಬ. ವ.–ಆರೆ. ನ.ಏ. ವ.–ಕುಲ –ಕುಂ, ನ. ಬ. ವ.–ಅವೆ; ಭೂತಕಾಲದಲ್ಲಿ, ಪ್ರ. ಏ. ವ.–ಏನೆ;

ದ್ವಿ. ಏ. ವ.–ಇ; 'ಭವಿಷ್ಯತ್‌ಕಾಲದಲ್ಲಿ ತೃ. ಏವ. –ಅದು (–ಉದು ವಿನಷ್ಟೇಸಲು)

(ಇ) ಅಜ್ಞಾರ್ಥದಲ್ಲಿ ಕೆಳಗಿನ ಪ್ರತ್ಯಯಗಳು ಮಾತ್ರ ಇವೆ.

| | ಏ. ವ. | ಬ. ವ. |
|---|---|---|
| ಪ್ರಥಮ | | ಅ* |
| ದ್ವಿತೀಯ | ಮೂಲರೂಪ | –ಇ೧ –ಇರಿ೧ –ಇಂ* |
| ತೃತೀಯ | –ಅಲಿ (ಏ. ವ. ಮತ್ತು ಬ. ವ.) | |

*ಗುರುತಿನವುಗಳು ವಿರಳವಾಗಿವೆ.

ಫ) ಆರನೆಯ ಕಾಲವ ಸಂಭವನೀಯತೆ ತೋರುತ್ತದೆ. ಆದರೆ ಅದರ ಇತರ ರೂಪಗಳು ದೊರೆತಿಲ್ಲ. ಅದು ಸಂಭವ ಕಾಲ, ದೊರೆತವುಗಳು :

ತೃ. ಪು. ಪು. ಏ–ಆನು; ಸ್ತ್ರೀ. ಏ.–ಆಳು.

ಬಿ) —ಬಹುದು 'ಸಂಭವನೀಯತೆ; —ಬಾರದು 'ಅಸಂಭವನೀಯತೆ ಅಥವಾ ನಿಷೇಧಾಜ್ಞೆ'ಗಳನ್ನು ಸೂಚಿಸುವ ಪ್ರತ್ಯಯಗಳು ವಚನ ಲಿಂಗ ಪುರುಷವಿವಕ್ಷೆಗಳಲ್ಲ. ಅವು ಯಾವಾಗಲೂ–ಅ ರೂಪವನ್ನೊಳಗೊಂಡ ಧಾತುವಿನ ಮೇಲೆಯೇ ಬರುವದರಿಂದ ಅವುಗಳನ್ನು ಪ್ರತ್ಯಯಗಳೆಂದು ಗ್ರಹಿಸಲಾಗಿದೆ. ಅಲ್ಲದೆ ಅವು ಸ್ವತಂತ್ರವಾಗಿ ಕ್ರಿಯಾರೂಪದಂತೆ ಬರುವದೂ ಇಲ್ಲ. ಇತರ ಪ್ರತ್ಯಯಗಳಿಗಿಂತಲೂ ಅವು ಉದ್ದವಾಗಿರುವದರಿಂದ ಪ್ರತ್ಯಯಗಳೆಂದು ಹೇಗೆ ಗ್ರಹಿಸಬೇಕು ಎಂಬ ಸಂದೇಹವುಂಟಾಗುತ್ತದೆ. ಆದ್ದರಿಂದ ಅವುಗಳನ್ನು "ಸೂಚಿ"ಗಳೆಂದು ಮಾತ್ರ ಗ್ರಹಿಸಬಹುದು. ( Clitics ).

ಭ) ಅಪೂರ್ಣಕ್ರಿಯಾ ವಾಚಿಗಳು ಐದು ವಿಧವಾಗಿವೆ.

| | |
|---|---|
| (ಅ) –ಅ೧ –ಅಲು೧ –ಅಲಿಕೆ | "ಇಚ್ಛಾರ್ಥಕ" |
| (ಬ) –ದು೦ –ಇ | "ಅಪೂರ್ಣ ಭೂತ" |
| (ಕ) –ಅದೆ | "ನಿಷೇಧ" |
| (ಡ) –ಉತ೧ –ಉತ್ತ | "ಅಪೂರ್ಣ ವರ್ತಮಾನ" |
| (ಇ) –ಎ೦ (–ಒಡೆ೧ –ಅಡೆ–೧ಅಿರೆ) | "ಸಾವಲಂಬ" (Conditional) |

೧ ಗುರುತಿನ ಹಿಂದು ಮುಂದಿನವುಗಳು ಸ್ವಚ್ಛಂದವಾಗಿಯೂ, ೦ ಗುರುತಿನದು ಹಿಂದು ಮುಂದಿನವುಗಳು ನಿರ್ದಿಷ್ಟ ಸನ್ನಿವೇಶದಲ್ಲಿಯೂ ಬರುತ್ತವೆಯೆಂದು ಗ್ರಹಿಸಬೇಕು. ಅಂದರೆ ಇ, ಎ ಕಾರಾಂತ ಧಾತುಗಳೂ –ದು ವನ್ನೂ ಉ ಕಾರಾಂತಗಳು– ಇ

ಯನ್ನೂ ಪಡೆಯುತ್ತವೆಯೆಂದೂ; ಎಲ್ಲ ಧಾತುಗಳು ಎ ಯನ್ನು ಅಥವಾ ಉಳಿದವು ಗಳಲ್ಲಿ ಒಂದನ್ನು ಪಡೆಯುತ್ತವೆ ಎಂದು ತಿಳಿಯಬೇಕು.

ಪೂರ್ಣಕ್ರಿಯಾವಾಚಿ, ಅಪೂರ್ಣ ಕ್ರಿಯಾವಾಚಿ ಪ್ರತ್ಯಯಗಳನ್ನು ಪಡೆಯುವ ಪೂರ್ವದಲ್ಲಿ ಧಾತುಗಳು ಈ ವರ್ಣಗಳನ್ನು ಪಡೆಯುತ್ತವೆ; (ಮೇಲಿನ ವಿಭಾಗ ಕ್ರಮ ದಲ್ಲಿಯ ಸಂಖ್ಯೆಗಳಿಂದ ಧಾತುಗಳ ಸನ್ನಿವೇಶವನ್ನು ಸೂಚಿಸಲಾಗಿದೆ.) ಒಂದನೆಯ ಸನ್ನಿ ವೇಶದಲ್ಲಿಯ ವರ್ಣಗಳಿಗೆ ಆಯಾ "ಕಾಲ ಸೂಚಕ ಪ್ರತ್ಯಯ"ವೆಂಬ ಹೆಸರೂ ಇದೆ. ಹಾಗೇ ಇಲ್ಲಿ ಕೆಳಗಿನ ಇದ್, ವ್ ಗಳೂ ಕಾಲಸೂಚಕಗಳೆನ್ನಬಹುದು.

| ಸನ್ನಿವೇಶ ಧಾತುಗಳು | ೧ ಅ | ೧ ಬ | ೧ ಕ | ೧ ಡ<br>೧ ಇ<br>೨ ಬ | ೨ | ೨ ಅ<br>೨ ಕ<br>೩ ಡ | ೩ ಇ |
|---|---|---|---|---|---|---|---|
| -ಇ,-ಎ<br>ಕಾರಾಂತ | -ದಪ್-ಲ<br>-ದಿಪ್- | -ದ್- | -ವ್- | ○ | -ಯ- | -ಯ್ | -ಯ್-<br>(ಎ-ಪೂರ್ವದಲ್ಲಿ,<br>-ದ್-/-ವ್-<br>(ಇತರೆಡೆ) |
| -ಉ<br>ಕಾರಾಂತ | -ಇಹ್-ಲ<br>-ಇದಹ್-ಲ<br>-ಇರ್ಪ್-ಲ<br>-ಇಪ್ಪ್- | -ಇದ್- | -ವ್- | ○ | -ಅ- | ○ | ○<br>(-ಎ ಪೂರ್ವದಲ್ಲಿ,<br>-ಇದ್-/-ವ್-<br>(ಇತರೆಡೆ) |

(ಸೂಚನೆಗಳು ○ ಏನೂ ಇಲ್ಲ ಎಂಬುದನ್ನು ಸೂಚಿಸುತ್ತದೆ. | ಗುರುತು ಆಚೆಯದು ಅಥವಾ ಈಚೆಯದು ಎಂಬದುನ್ನು ಸೂಚಿಸುತ್ತದೆ.)

**ವಿಶೇಷಗಳು**

೧. ಆಜ್ಞಾರ್ಥ ಪ್ರಥಮಪುರುಷ ಬಹುವಚನದಲ್ಲಿ ಇ ಎ ಕಾರಾಂತಗಳು-ಯುವ್-ನ್ನೂ ಉಕಾರಾಂತಗಳು-ವ್-ನ್ನೂ ತೆಗೆದುಕೊಳ್ಳುತ್ತವೆ.

೨. ಭೂತಕಾಲದಲ್ಲಿ-ಇ- ಎ ಕಾರಾಂತಗಳು ನಪುಂಸಕ ಲಿಂಗ ಏಕವಚನದಲ್ಲಿ -ಯಿದ್-ತೆಗೆದುಕೊಳ್ಳುತ್ತವೆ, ಉದಾಹರಣೆ : ಸುಳಿ-ಯಿದ್-ತು > ಸುಳಿ ಯಿತ್ತು. ಸವೆ-ಯಿದ್-ತು > ಸವೆಯಿತ್ತು. ಹೀಗೆ. ಬಹಳ ಸ್ವಲ್ಪಕಡೆಗಳಲ್ಲಿ- ಇ - ಲ - ಇದ್ - ತೆಗೆದುಕೊಂಡ ಉದಾಹರಣೆಗಳೂ ಸಿಕ್ಕಿವೆ. ಅವೆಲ್ಲ ಉಕಾ- ರಾಂತಗಳು. ಸುತ್ತು-ಇದ್-ತು > ಸುತ್ತಿತ್ತು. ಸುತ್ತು-ಇ-ತು > ಸುತ್ತಿತ್ತು. ಮುಟ್ಟು-ಇದ್-ತು > ಮುಟ್ಟಿತ್ತು. ಮುತ್ತು-ಇ-ತು > ಮುಟ್ಟಿತು.

## ಅಪವಾದಗಳು

೧. ಈ ಕೆಳಗಿನ ಉಕಾರಾಂತ ರೂಪಗಳು ಪ್ರತ್ಯಯ ಪೂರ್ವ ವರ್ಣಗಳನ್ನು ತೆಗೆದುಕೊಳ್ಳುವಾಗ ವಿಶಿಷ್ಟ ರೂಪಗಳನ್ನು (oblique forms) ತಾಳುತ್ತವೆ. ಹಾಗೂ ವರ್ತಮಾನ, ಭೂತಕಾಲಗಳಲ್ಲಿ ಇ ಎ ಕಾರಾಂತಗಳಂತೆ ಪ್ರತ್ಯಯ ಪೂರ್ವ ವರ್ಣಗಳನ್ನು ಪಡೆಯುತ್ತವೆ. ಅಂದರೆ ವ. ಕಾ. ದಲ್ಲಿ–ದಹ್– ೮ ದಿಹ್– ವನ್ನೂ ಭೂತಕಾಲದಲ್ಲಿ–ದ್–ನ್ನೂ ಪಡೆಯಯುತ್ತವೆ. ಮತ್ತು ಭೂತಕಾಲ ತೃತೀ. ಪು. ನಪುಂ. ಲಿಂಗದಲ್ಲಿ –ದಿದ್–ತೆಗೆದುಕೊಳ್ಳುತ್ತವೆ. ಉದಾ :

**ಧಾತು ಪ್ರಕೃತಿ ವಿಶಿಷ್ಟ ರೂಪ**

| | | | |
|---|---|---|---|
| ಕಾಣು | ಕಣ್ | –ದಹ್–ಎನು > | ಕಂಡಹೆನು |
| | | –ದಿಹ್–ಎನು > | ಕಂಡಿಹೆನು |
| ಕೊಲ್ಲು | ಕೊನ್ | –ದಹ್–ಎನು > | ಕೊಂದಹೆನು |
| ಬೀಳು | ಬಿದ್ | –ದಹ್–ಎನು > | ಬಿದ್ದಹೆನು |
| ಬಿಡು | ಬಿಟ್ | –ದ್– ಅನು > | ಬಿಟ್ಟನು |
| ಅಳು | ಅತ್ | –ದ್– ಅಳು > | ಅತ್ತಳು |
| ಹೋಗು | ಹೊಕ್ | –ದಿದ್–ತು > | ಹೊಕ್ಕಿತ್ತು |

ಹೀಗೆ. ೩೦–೩೨ ಧಾತುಗಳು ವಿಶಿಷ್ಟ ರೀತಿಯಲ್ಲಿ ಹೋಗುತ್ತವೆ.

೨. ಅಲ್ಲ, ಇಲ್ಲ, ಬೇಕು, ಬೇಡು, ಉಂಟು, ಸಾಕು, ಇದೆ, ಅದೆ, ಗಳು ಪೂರ್ಣ ಕ್ರಿಯಾಪದಗಳಂತೆಯೂ ಬರುತ್ತವೆ. ಅಪೂರ್ಣ ಕ್ರಿಯಾವಾಚಿಯನ್ನೂ ಅನುಸರಿಸುತ್ತವೆ. ಅವುಗಳಲ್ಲಿ ಪ್ರತ್ಯಯ ಪ್ರಕೃತಿಗಳನ್ನು ಗುರುತಿಸಲು ಸಾಧ್ಯವಾಗುವದಿಲ್ಲ.

ಇಲ್ಲಿ ಸಂಬಂಧಿಸಿದ ಕೆಲವು ಸಂಧಿ ನಿಯಮುಗಳನ್ನು ಹೇಳಬೇಕು ;

೧. ಧಾತುಗಳು ಮೊದಲಸಲ ಸ್ವರ ಪರವಾದಾಗ ಅಂತ್ಯಸ್ವರವನ್ನು ಕಳೆದು ಕೊಳ್ಳುತ್ತವೆ.

೨) ಪ್ರತ್ಯಯ ಪೂರ್ವ ವರ್ಣ ಅಥವಾ ವರ್ಣಗಳಿಗೆ ಕರ್ಕಶವರ್ಣಪರವಾದರೆ ಪೂರ್ವದ ವರ್ಣವೂ ಪರವಾದ ವರ್ಣದಂತೆಯೇ ಆಗುತ್ತದೆ. ಉದಾ ಮುಟ್ಟು-ಇದ್–ತು > ಮುಟ್ಟಿತ್ತು.

೩) ವಿಶಿಷ್ಟ ರೂಪುಗಳಿಗೆ ( oblique forms ) ಮೃದು ವರ್ಣದಿಂದ ಪ್ರಾರಂಭವಾಗುವ ಪ್ರತ್ಯಯ ಪೂರ್ವ ವರ್ಣ ಅಥವಾ ವರ್ಣಗಳು ಪರವಾದರೆ, ವಿಶಿಷ್ಟ ರೂಪದ ಕೊನೆಯ ವರ್ಣದಂತೆಯೇ ಪರವಾದ ವರ್ಣದ ಸ್ವರೂಪವಾಗುತ್ತದೆ.

ಉದಾ: ಹೊಕ್-ದಿದ್- >ಹೊಕ್ಕಿದ್-(-ತು>ಹೊಕ್ಕಿತ್ತು)

ಮಿಕ್-ದಿದ್->ಮಿಕ್ಕಿದ್-( ತು>ಮಿಕ್ಕಿತ್ತು)

೪) ವಿಶಿಷ್ಟರೂಪದ ಕೊನೆಯ ಣ್ ಕಾರಕ್ಕೆ ಮೂರ್ಧನ್ಯೇತರ ಮೃದು ವರ್ಣ ಪರವಾದರೆ-ಪರವಾದ ವರ್ಣವು ಮೂರ್ಧನ್ಯ ಮೃದುವರ್ಣವಾಗುತ್ತದೆ. ಉದಾ. ಕಣ್ ದಹ್->ಕಣ್ಡಹ್- (ಕಂಡಹ)

ನಾಮಪದ, ಕ್ರಿಯಾಪದ ರೂಪಗಳ ವಿಭಾಗದಲ್ಲಿ ಹೇಳಲಾದ ಸಂಧಿ ನಿಯಮಗಳು ಪದ ಮಧ್ಯಸಂಧಿಗಳು. ಆದ್ದರಿಂದ ನಿತ್ಯಗಳು. ಉಳಿದ ಸಂಧಿನಿಯಮಗಳು. ಹೆಚ್ಚು ಕಡಿಮೆ ಇಂದಿನಂತೆಯೇ ಇವೆ. ಪದಾಂತಸಂಧಿಗಳು ವಿಕಲ್ಪದಿಂದ ನಡೆಯುತ್ತವೆ. ಸಂಹಿತರೂಪ ದೊಂದಿಗೆ ಅದೇ ಸನ್ನಿವೇಶದಲ್ಲಿ ಅಸಂಹಿತ ರೂಪಗಳೂ ದೊರೆಯುತ್ತವೆ. (ಸ್ಥಳಾಭಾವ ಮೂಲಕ ವ್ಯುತ್ಪತ್ತಿ ಪ್ರತ್ಯಯಗಳನ್ನು ( Derivational suffixes ) ವಿವರಿಸಲಾಗಿಲ್ಲ.

## ವಾಕ್ಯರೂಪ

ವಚನ ಸಾಹಿತ್ಯದ ವಾಕ್ಯರೂಪವನ್ನು ಕುರಿತು ಹೆಚ್ಚು ಹೇಳಬೇಕಾದ ಅಗತ್ಯವಿಲ್ಲ. ವಾಕ್ಯದಲ್ಲಿ ಪದಗಳ ಕ್ರಮ ( Word order ) ನಿರ್ಬಂಧವಿಲ್ಲ. ಸಾಮಾನ್ಯವಾಗಿ ಎರಡು ಪೂರ್ಣ ವಿರಾಮಗಳ ಮಧ್ಯೇ ಸಾಮಾನ್ಯ ವಾಕ್ಯ ( Simple sentence ) ವಿರುತ್ತದೆ, ಅಂದರೆ ಒಂದೇ ಒಂದು ಪೂರ್ಣ ಕ್ರಿಯಾಪದವನ್ನು ಅದು ಒಳಗೊಂಡಿರುತ್ತದೆ. ಕೆಲ ವೊಮ್ಮೆ ಪೂರ್ಣ ಕ್ರಿಯಾಪದದ ಅಧ್ಯಾಹಾರವಿರುವದೂ ಉಂಟು. ( ಮುದ್ರಿಕೆಗಳನ್ನು ಇಲ್ಲಿ ಲಕ್ಷಿಸಿಲ್ಲ. ಏಕೆಂದರೆ ಅವುಗಳ ವಿನ್ಯಾಸ ಹಲವು ವಿಧವಾಗಿದೆ.) ಒಂದು ಸಾಮಾನ್ಯ ವಾಕ್ಯದಲ್ಲಿ ಒಂದು ಅಥವಾ ಹೆಚ್ಚು ಅಪೂರ್ಣ ಕ್ರಿಯಾವಾಚಿಗಳು ಇರಬಹುದು, ಅಥವಾ ಇರದೇ ಇರಬಹುದು. ಪೂರ್ಣ ಕ್ರಿಯಾಪದದಂತೆ ಅಪೂರ್ಣ ಕ್ರಿಯಾವಾಚಿಗ ಗಳು ಷಟ್ಕಾರಗಳಲ್ಲಿ ಒಂದನ್ನು ಅಥವಾ ಹಲವನ್ನು ಒಳಗೊಂಡಿರಬಹುದು ಅಥವಾ ಒಳಗೊಳ್ಳದೇ ಇರಬಹುದು. ಆರೂ ಕಾರಕಗಳು ಆಯಾ ಪೂರ್ಣ ಕ್ರಿಯಾಪದ ಅಥವಾ ಅಪೂರ್ಣ ಕ್ರಿಯಾವಾಚಿಯೊಡನೆ ಅರ್ಥದ ದೃಷ್ಟಿಯಿಂದ ಸಂಬಂಧವನ್ನು ತಾಳುತ್ತವೆ. ಅದನ್ನು ಸನ್ನಿವೇಶದಲ್ಲಿಯೇ ತಿಳಿಯಬೇಕು. ಕೆಲವೆಡೆ ಆ ಸಂಬಂಧ ಸಂದಿ ಗ್ಧವಾಗಿದೆ. ಉದಾಹರಣೆ, "ಹೊನ್ನಶೂಲದಲ್ಲಿ ಇಕ್ಕಿದರೆನ್ನ, ಹೊಗಳಿ" ಎಂದೋ "ಹೊನ್ನಶೂಲದಲ್ಲಿ ಇಕ್ಕಿದರು, ಎನ್ನ ಹೊಗಳಿ" ಎಂದೋ ನಿರ್ಣಯಿಸಲು ಆಧಾರ ಸಾಲವು. ಏಕೆಂದರೆ ಇಲ್ಲಿ "ಎನ್ನ" ಎರಡೂ ಕಡೆಗೆ ಹತ್ತಿಕೊಳ್ಳಬಲ್ಲ ಸಾಮರ್ಥ್ಯ ವುಳ್ಳದ್ದು. "ಅಲ್ಲದೆ" ಎಂಬುದು ಸಮುಚ್ಚಾಯಕದ ಹಾಗೆ ಕೆಲವೆಡೆ ಪ್ರಯೋಗ ವಾಗಿದೆ. ಅಂಥ ವಾಕ್ಯದಲ್ಲಿ ಎರಡು ಪೂರ್ಣ ಕ್ರಿಯಾಪದಗಳಿರುತ್ತವೆ. ಉದಾ: "ಅರಸೆಂಬರಲ್ಲದೆ ಬಂಟರೆಂಬುದಿಲ್ಲ." ಉಳಿದೆಡೆ ಅದು ತದ್ಭಿನ್ನ ನಿರ್ಧಾರಣೆಯನ್ನು ಸೂಚಿಸುತ್ತದೆ. ಬೇರೆ ಸಮುಚ್ಚಾಯಕಗಳನ್ನೂ ಹೀಗೆ ಸಂಗ್ರಹಿಸಬಹುದು.ಅದೇ ಪ್ರಕಾರ

ಬಹಳ ಸ್ವಲ್ಪ ಕಡೆ "ಹೇಂಗೆ ಮನ ಹಾಂಗೆ ನಿಮ್ಮ ಘನ" ಇಂಥ ಸಂಬಂಧಕಗಳನ್ನೂ ಬಳಸಲಾಗಿದೆ. ಅಂತೂ ಸಾಮಾನ್ಯ ವಾಕ್ಯಗಳು ಹೆಚ್ಚು ಸಹಜವಾಗಿವೆ. ಕರ್ಮಣಿ ಪ್ರಯೋಗಗಳಾಗಲಿ, ದ್ವಿಕರ್ಮಕ ಪ್ರಯೋಗಗಳಾಗಲಿ, ಈವರೆಗೆ ಸಂಗ್ರಹಿಸಲಾದ ಸಾಮಗ್ರಿಯಲ್ಲಿ ದೊರೆತಿಲ್ಲ. ಇ ಎ ಕಾರಾಂತ ಧಾತುಗಳಿಗೆ –ಸು ವನ್ನೂ ಉಕಾರಾಂತ ಗಳಿಗೆ –ಇಸು ವನ್ನೂ ಸೇರಿಸಿ ಪ್ರಯೋಜಕಗಳನ್ನು ಮಾಡುತ್ತಾರೆ. ಪ್ರಯೋಜಕ ಧಾತುಗಳು ಉಕಾರಾಂತಗಳಂತೆ ವರ್ತಿಸುತ್ತವೆ. –ಇಸು ಸೇರಿಸಿದಾಗ ಧಾತ್ವಂತ್ಯದ ಸ್ವರ (–ಉ ವೇ) ಲೋಪವಾಗುತ್ತದೆ.

ಗುಣವಾಚಕ, ಸಂಖ್ಯಾವಾಚಕ, ಪರಿಪೂರ್ಣವಾಚಕ ವಿಶೇಷಣಗಳು, ಕ್ರಿಯೆಯ ಕಾಲ, ಸ್ಥಳ, ರೀತಿಗಳನ್ನು ಸೂಚಿಸುವ ಕ್ರಿಯಾವಿಶೇಷಣಗಳು ಯಾವ ಪ್ರತ್ಯಯವನ್ನೂ ತೆಗೆದುಕೊಳ್ಳುವದಿಲ್ಲ. ವಿಶೇಷಗಳು ಸಾಮಾನ್ಯವಾಗಿ ನಾಮಪದಗಳ ಪೂರ್ವದಲ್ಲೂ, ಕ್ರಿಯಾವಿಶೇಷಣಗಳು ಕ್ರಿಯಾಪದ ಅಥವಾ ಕ್ರಿಯಾವಾಚಿಯ ಪೂರ್ವದಲ್ಲೂ ಬರುತ್ತವೆ. ಬೇರೆಡೆಗೆ ಬಂದರೂ ಅವುಗಳ ಕಾರ್ಯಕ್ರಮದಲ್ಲಿ ವ್ಯತ್ಯಾಸವಿರುವದಿಲ್ಲ. ಷಷ್ಠೀಯುಕ್ತ ಪದಗಳು ತಾವು ಸೂಚಿಸುವ ಸಂಬಂಧದಲ್ಲಿ ನಾಮಪದ ಪೂರ್ವ ದಲ್ಲಿಯೇ ಬರುತ್ತವೆ. ಬೇರೆಡೆಗೆ ಬಂದರೆ ಅರ್ಥ ಬಾಧೆ ಬರುತ್ತದೆ. ಸಂಗ್ರಹದಲ್ಲಿ ಹೇಳುವದಾದರೆ ಇದು ವಾಕ್ಯರೂಪ.

## ಉಪಸಂಹಾರ

ಈ ವಿಶ್ಲೇಷಣೆಯನ್ನು ಕೊಡುವಾಗ ಒಂದು ಮಾತು ಉಳಿದಿರಬಹುದು, ಒಂದು ಮಾತು ಬೆಳೆದಿರಬಹುದು. ಆಧುನಿಕ ಭಾಷಾಶಾಸ್ತ್ರದ ನೀತಿಯ ಮೇಲೆ ಪರಂಪರಾಗತ ವ್ಯಾಕರಣದ ರೀತಿಯನ್ನು ಹೊಂದಿಸಲಾಗಿದೆ. ಕೆಲವೊಂದು ಹೊಸ ಶಬ್ದಗಳನ್ನು ಸೃಷ್ಟಿಸಿಕೊಳ್ಳಲಾಗಿದೆ. ಇಂಥ ಪ್ರಯತ್ನಗಳೇ ಹೊಸವೆನಿಸಬಹುದಾದ್ದರಿಂದ ಮೊದಲ ಅನುಪಾನ ಮಿತವಾಗಿದೆ. ಗೊತ್ತಿದ್ದ ಭಾಷೆ, ಗೊತ್ತಿದ್ದ ಸಾಹಿತ್ಯವಾದ್ದರಿಂದ ಖರ್ಚಿಕನಂತೆ ಉದಾಹರಣೆಗಳನ್ನು ಬಳಸಿಲ್ಲ. ಉದಾಹರಿಸಿಕೊಂಡಾಗ ಈ ವಿಶ್ಲೇಷಣೆಯ ಸತ್ಯತೆ ಸ್ವಾರಸ್ಯಗಳು ವಿದಿತವಾಗಬಲ್ಲವು,

ಕಾಲಕಾಲದ ಸಾಹಿತ್ಯದ ವರ್ಣನಾತ್ಮಕ ವಿಶ್ಲೇಷಣೆಗಳು ಸಿದ್ಧವಾದರೆ ಭಾಷೆಯ ಇತಿಹಾಸವನ್ನು ನಿಶ್ಚಿತ ಆಧಾರಗಳ ಮೇಲೆ ಕಟ್ಟಬಹುದು. ಆ ಕಟ್ಟಡಕ್ಕೆ ಇದೂ ಒಂದು ಸಾಮಗ್ರಿ. □

# ಅದ್ವೈತ ಹಾಗೂ ಪಾಶ್ಚಾತ್ಯ ತತ್ತ್ವಜ್ಞಾನ

ಶ್ರೀ ಬಿ. ಡಿ. ಜತ್ತಿ

ಈಶೋಪನಿಷತ್ತಿನ ಕೊನೆಯಲ್ಲಿ ಬರುವ 'ಯೋಸಾವಸೌ ಪುರುಷ ಸೋಽಹಮಸ್ಮಿ', ಈಶೋಪನಿಷತ್ತಿನಲ್ಲಿ ಉಮಾದೇವಿಯು 'ಬ್ರಹ್ಮೇತಿ ಸೋವಾಚ', ಕಠೋಪನಿಷತ್ತಿನಲ್ಲಿಯ 'ಮಹತಂ ವಿಭೂಂ ಆತ್ಮಾನಂ' ಮುಂಡಕ ಉಪನಿಷತ್ತಿನಲ್ಲಿಯ 'ದ್ವಾ ಸುಪರ್ಣಾ', ಮಾಂಡೂಕ್ಯದಲ್ಲಿಯ ಶಾಂತಂ ಶಿವಂ ಅದ್ವೈತಂ ಚತುರ್ಥಂ', ತೈತ್ತರೀಯದಲ್ಲಿ ಬರುವ ಪರಮಾನಂದದ ವಿಚಾರ, ಛಾಂದೋಗ್ಯದಲ್ಲಿಯ 'ಸದೇವ ಸೌಮ್ಯ ಇದಮಗ್ರ ಆಸೀತ್' ಬೃಹದಾರಣ್ಯಕದಲ್ಲಿ ಆತ್ಮ ಆನಂದ ಅಕ್ಷರಗಳ ಮಾತು, ಶ್ವೇತಾಶ್ವತರದಲ್ಲಿಯ ಮಾಯಾ ಮಾಯಿನ್ ವಿಚಾರ, ಆತ್ಮ ಪರಮಾತ್ಮರ ಏಕತ್ವದ ಬಗ್ಗೆ ಇತರ ಉಪನಿಷತ್ತುಗಳಲ್ಲಿ ಬರುವ ಹೇಳಿಕೆಗಳು ಅದ್ವೈತ ಸಿದ್ಧಾಂತದ ಮೂಲೆ-ಗಲ್ಲುಗಳಾಗಿದ್ದು ದಿವ್ಯ ಸಾಕ್ಷಾತ್ಕಾರದ ಚತುರ್ಮಹಾವಾಕ್ಯಗಳಲ್ಲಿ ಪ್ರಕಾಶಿಸುತ್ತಿವೆ. ಇಂಥ ಸುಸ್ಪಷ್ಟತೆ ಗಾಂಭೀರ್ಯಗಳನ್ನು ಪಾಶ್ಚಾತ್ಯ ಸಾಹಿತ್ಯದಲ್ಲಾಗಲಿ ತತ್ತ್ವಜ್ಞಾನ-ದಲ್ಲಾಗಲಿ ನಾವು ಕಾಣಲಾರೆವು. ಏಕೆಂದರೆ ಮಹಾಧರ್ಮಗಳ ತವರೂರು ಏಶಿಯಾ ಆಗಿದ್ದು ಭಾರತ ಅದರ ಹೃದಯವಾಗಿದೆ. ಶ್ರೇಷ್ಠ ತತ್ತ್ವಜ್ಞಾನದ ನೆಲೆವೀಡೆಂದರೇ ಭಾರತ. ಆತ್ಮ – ಪರಮಾತ್ಮರ ಐಕ್ಯಾನುಭವದ ವಿಷಯದಲ್ಲಿ ಅಧ್ಯಾತ್ಮದಾಗಸದಲ್ಲಿ ಭಾರತೀಯರಷ್ಟು ಎತ್ತರವನ್ನು ತಲುಪಿದವರು ಜಗತ್ತಿನಲ್ಲಿ ಇನ್ನಾರೂ ಇಲ್ಲ. ಆದರೆ ಮಾನವ ಜನಾಂಗದ ಮನಸ್ಸೆಂಬುದು ಒಂದು, ಆದುದರಿಂದ ಪಾಶ್ಚಾತ್ಯ ತತ್ತ್ವಜ್ಞಾನ – ಸಾಹಿತ್ಯಗಳು ಕೂಡ ಖಂಡಿತವಾಗಿ, ಪದೇ ಪದೇ ಅಲ್ಲದಿದ್ದರೂ, ಆಗೀಗ ಭಾರತೀಯ ಅದ್ವೈತ ಸಿದ್ಧಾಂತದ ಉನ್ನತ ಮಟ್ಟಕ್ಕೆ ಏರುವುದನ್ನು ಕಾಣುತ್ತೇವೆ.

ಪಾಶ್ಚಾತ್ಯ ತತ್ತ್ವಜ್ಞಾನದಲ್ಲಿಯ ಅದ್ವೈತದ ಬೆಳವಣಿಗೆಯನ್ನು ಪರಾಮರ್ಶಿಸುವ ಪೂರ್ವದಲ್ಲಿ ಶ್ರೀ ಶಂಕರಾಚಾರ್ಯರ ಮಹಾತ್ಮ್ಯವನ್ನು ಪಾಶ್ಚಾತ್ಯ ಸಾಹಿತಿಗಳು ಬಣ್ಣಿಸಿರುವದನ್ನು ಅರಿತುಕೊಳ್ಳುವದು ಉದ್ಬೋಧಕವಾದೀತಂ.

## ಸಿಸ್ಟರ್ ನಿವೇದಿತಾ

"ಪಾಶ್ಚಾತ್ಯರು ಶಂಕರಾಚಾರ್ಯರಂಥ ವ್ಯಕ್ತಿಯನ್ನು ಊಹಿಸುವದೇ ಕಠಿಣ. ಕೆಲವೇ ವರ್ಷಗಳ ಅವಧಿಯಲ್ಲಿ ಅವರು ಸ್ಥಾಪಿಸಿದ ಹತ್ತು ಮಠಗಳಲ್ಲಿ ನಾಲ್ಕು ಮಠಗಳು ಇಂದಿಗೂ ತಮ್ಮ ಪ್ರತಿಷ್ಠೆಯನ್ನು ಸಂಪೂರ್ಣವಾಗಿ ಕಾಪಾಡಿಕೊಂಡು ಬಂದಿವೆ. ಸಂಸ್ಕೃತದಲ್ಲಿ ಪ್ರಕಾಂಡ ಪಾಂಡಿತ್ಯವನ್ನು ಸಂಪಾದಿಸಿ, ಹನ್ನೆರಡು ನೂರು ವರ್ಷಗಳ ನಂತರವೂ ಸುಭದ್ರವಾಗಿ ಉಳಿಯುವಂಥ ಸಿದ್ಧಾಂತವನ್ನು ಸ್ಥಾಪಿಸಿ ಅಂದಿನ ವಿದ್ವಾಂಸರನ್ನು ಬೆರಗುಗೊಳಿಸಿದರು. ಪಾಶ್ಚಾತ್ಯ ಪಾಮರರನ್ನೂ ರಂಜಿಸುವಂಥ ಭಕ್ತಿ ಗೀತೆಗಳನ್ನು ಬರೆದರು. ಶಿಷ್ಯರ ಜೊತೆಗಿದ್ದುಕೊಂಡು ಸಂನ್ಯಾಸಿಯ ಉದಾತ್ತ ಸರಳ ಜೀವನವನ್ನು ನಡೆಸಿದರೂ ಈ ಮಹಾತ್ಮ್ಯವನ್ನು ನಾವು ಪ್ರಶಂಸಿಸಬೇಕಷ್ಟೇ; ಅರ್ಥ ಮಾಡಿಕೊಳ್ಳಲಾರೆವು. ಅಸಿಸಿಯ ಫ್ರಾನ್ಸಿಸ್‌ನ ಭಕ್ತಿಯನ್ನು, ಅಬೆಲಾರ್ಡ್‌ನ ಬುದ್ಧಿ ಶಕ್ತಿಯನ್ನು, ಮಾರ್ಟಿನ್ ಲ್ಯೂಥರನ ಅದಮ್ಯ ಸ್ವಾತಂತ್ರ್ಯಕಾಂಕ್ಷೆಯನ್ನು ಇಗ್ನೇಶಿಯಸ್ ಲೊಯೋಲಾನ ರಾಜಕೀಯ ದಕ್ಷತೆಯನ್ನು ನಾವು ಅನಂದಾಶ್ಚರ್ಯಗಳಿಂದ ಆರಾಧಿಸುತ್ತೇವೆ. ಆದರೆ ಇವೆಲ್ಲ ಗುಣಗಳನ್ನು ಒಂದು ವ್ಯಕ್ತಿಯಲ್ಲಿಯೇ ಕಾಣಬಹುದು ಎಂಬುದನ್ನು ಯಾರು ತಾನೇ ಊಹಿಸಬಲ್ಲರು?"

## ಚಾರ್ಲ್ಸ್ ಜಾನ್‌ಸ್ಟನ್

ಸೂರ್ಯಾತಪದಲ್ಲಿ ತೊಳಗಿ ಬೆಳಗುವ ಅಥವಾ ರಾತ್ರಿಯಲ್ಲಿ ಅಗಣಿತ ತಾರಾಗಣವನ್ನು ಪ್ರತಿಬಿಂಬಿಸುವ ಅನಂತ ಹಿಮಾಲಯದಿಂದ ಹರಿದು ಬರುವ ಅಗಾಧ ಪ್ರಶಾಂತ ನಿರ್ಝರಿಣಿಗಳೆಂದರೆ ಮಹಾ ಉಪನಿಷತ್ತುಗಳು ಎಂದು ಹೇಳೋಣವೇ? ಭಾರತೀಯರ ಚರಿತ್ರಾರಣ್ಯದಲ್ಲಿ ಪ್ರವಹಿಸಿ ಬಂದ ಈ ಜ್ಞಾನ ರಾಶಿಯೇ ಪರ್ವತದ ಅಡಿಯಲ್ಲಿ ಒಬ್ಬುಳಿಗೂಡಿ ಗೀತಾ ಸರೋವರವಾಯಿತೆನ್ನಬೇಕು. ಈ ಪವಿತ್ರ ಜ್ಞಾನ ರಾಶಿಯೆ ಮಾನವರ ಸದುಪಯೋಗಕ್ಕಾಗಿ ಬ್ರಹ್ಮಸೂತ್ರಗಳಲ್ಲಿ ವ್ಯವಸ್ಥಿತವಾಗಿ ಮಡುವುಗಟ್ಟಿ ನಿಂತಿದೆ, ಆ ಶಂಕರಾಚಾರ್ಯರ ಬಗೆಗೆ ನಾವೇನು ಹೇಳಬಲ್ಲೆವು? ಕಾಲಾನುಕ್ರಮದಲ್ಲಿ ಉಪನಿಷತ್ಪ್ರವಾಹಗಳಲ್ಲಿ, ಗೀತಾ ಸರೋವರಗಳಲ್ಲಿ ಬ್ರಹ್ಮ ಸೂತ್ರಗಳಲ್ಲಿ ಕಂಡು ಬಂದ ಕುಂದುಕೊರತೆಗಳನ್ನೆಲ್ಲ ಶಂಕರಾಚಾರ್ಯರು ತಮ್ಮ ಅಪಾರ ಪಾಂಡಿತ್ಯ ಬಲದಿಂದ ನಿವಾರಿಸಿ ಅವುಗಳಿಗೊಂದು ಮೆರುಗನ್ನು ತಂದುಕೊಟ್ಟರು."

ಇನ್ನು ಪಾಶ್ಚಾತ್ಯ ತತ್ತ್ವಜ್ಞಾನದಲ್ಲಿ ಕಂಡು ಬರುವ ಅದ್ವೈತದ ವಿಚಾರವನ್ನು ನೋಡೋಣ, ಪ್ರಾಚೀನ ಗ್ರೀಕ ತತ್ವಜ್ಞಾನದಲ್ಲಿ ಅನೇಕ ಹೋಲಿಕೆಯನ್ನು ಭಾರತೀ ತತ್ವ ಜ್ಞಾನದೊಂದಿಗೆ ಕಾಣುತ್ತೇವೆ. ಅಪ್ಪು (ಜಲ) ಸಕಲ ವಸ್ತುಗಳಿಗೆ ಮೂಲ ಎಂಬುವ ಥೇಲ್ಸನ, ಎಲ್ಲರಲ್ಲಿಯೂ ದೈವೀ ಚೈತನ್ಯವಿದೆ ಎನ್ನುವ ಹೆರಾಕ್ಲಿಟಸ್‌ನೂ ಪ್ರಾಣಿ ಮಾತ್ರರಲ್ಲಿ ಮಾನವನ ಆತ್ಮ ಸಂಚರಿಸುತ್ತದೆ ಎನ್ನುವ ಪೈಥಾಗೊರಸ್ ಮತ್ತು ಪ್ಲೇಟೊ ಇವರ, ಪಂಚಭೂತಗಳಿವೆ ಎನ್ನುವ ಅರಿಸ್ಟಾಟಲನ, ಮಾಂಸಾ

ಹಾರ ನಿಷಿದ್ಧವೆನ್ನುವ ಎಂಪಿಡೊಕ್ಲಿಸ್ ಮತ್ತು ಓರ್ಫಿಕ್ಸರ ವಿಚಾರಗಳನ್ನು ಯಗಳನ್ನು ಪೌರ್ವಾತ್ಯ ತತ್ತ್ವ ಜ್ಞಾನದಲ್ಲಿ ನಾವು ಕಾಣಬಹುದಾದರೂ ಅ ಶ್ಚಾತ್ಯರು) ಎರವಲು ತಂದಿದ್ದಾರೆ ಅಥವಾ ಅಪ್ರಾಮಾಣಿಕ ರೀತಿಯಿಂದ ದು ಗಪಡಿಸಿಕೊಂಡಿದ್ದಾರೆ ಎಂಬುದನ್ನು ಸಿದ್ಧಪಡಿಸಲು ಇನ್ನೂ ಆಧಾರಗಳನ್ನು ಕಷ್ಟ"ಎಂದು ಮಾಕ್ಸಮುಲ್ಲರ ಬರೆದಿದ್ದಾನೆ. (Psychological Religion ಆದರೆ ಇದೇ ಗ್ರಂಥವಲ್ಲಿಯ ಈ ಕೆಳಗಿನ ಅವತರಣಿಕೆಯು ಗ್ರೀಕ ತತ್ವ ಮೇಲೆ ಉಂಟಾಗಿರಬಹುದಾದ ಭಾರತೀಯ ತತ್ವಜ್ಞಾನದ ಪ್ರಭಾವವ ಸುತ್ತದೆ.

"ಒಂದು ವಿಷಯದತ್ತ ನೀಡಬೇಕಾದ ಗಮನವನ್ನು ನಾವು ನೀ ತೋರುತ್ತದೆ, ಭಾರತೀಯ ತತ್ವಜ್ಞಾನಿಯೊಬ್ಬನು ಗ್ರೀಸಕ್ಕೆ ಬಂದು ಸಾಕ್ರೆ ಅಥೆನ್ಸದಲ್ಲಿ ಚರ್ಚೆ ನಡೆಸಿದ ಎಂದು ಅರಿಸ್ಟಾಟಲನ ಶಿಷ್ಯ ಆರಿಸ್ಟೋಕ್ಸೆನೋ ವದಾಗಿ ಎನ್‌ಸಿಬಿಯಸ್‌ನು ತಾನು ಅರಿಸ್ಟಾಟಲನ ಬಗೆಗೆ ತತ್ತ್ವಜ್ಞಾನದ ಬ ವೊಂದರಲ್ಲಿ ಕಾಣಿಸಿದ್ದಾನೆ. ಇದರಲ್ಲಿ ಸಂದೇಹಾಸ್ಪದವಾದುದೇನೂ ಇಲ್ಲ ಭಾರತೀಯ ತತ್ವಜ್ಞಾನಿಯು ಸಾಕ್ರೆಟಿಸನಿಗೆ ವಿವರಿಸಿದ ಅಂಶವನ್ನು ಗ ಅರಿಸ್ಟೋಕ್ಸೆನೋಸ್‌ನ ಹೇಳಿಕೆಗೆ ಪುಷ್ಟಿ ದೊರೆಯುತ್ತದೆ. ಮಾನವ ಜೀ ತನ್ನದು ಜಿಜ್ಞಾಸೆ ಎಂದು ಸಾಕ್ರೆಟಿಸ್ ವಿವರಿಸಿದಾಗ ಆ ಭಾರತೀಯ ತತ್ವ ಮೊದಲು ಅಧ್ಯಾತ್ಮಿಕ ಜ್ಞಾನವುಂಟಾಗದೆ, ಆಧಿಭೌತಿಕ ಜ್ಞಾನವಾಗಲಾರ ಉತ್ತರಿಸಿದನಂತೆ. ಈ ವಿಚಾರವು ಸಂಪೂರ್ಣವಾಗಿ ಭಾರತೀಯವಾಗಿ ಅಪ್ಪಟವಾಗಿರಬೇಕು ಎಂದು ನನ್ನ ಭಾವನೆ." (Pages 83.84)

ಮ್ಯಾಕ್ಸಮುಲ್ಲರನು ಮುಂದೆ (೨೧೧, ೨೧೨ನೇ ಪುಟಗಳಲ್ಲಿ) ಪ್ಲೇ ಗಳಿದ್ದ ಎರಡು ಕುದುರೆಗಳು ಹಾಗೂ ರಥಿಕನೊಬ್ಬನ ಉಪಮೆಯನ್ನು ಕಠೋಪನಿಷತ್ತಿನಲ್ಲಿ ಬರುವ ಆತ್ಮಾ (ರಥಿ), ದೇಹ (ರಥ), ಬುದ್ಧಿ (ಸಾರಥಿ ಕಡಿವಾಣ ಇಂದ್ರಿಯಗಳು ಕುದುರೆಗಳು ಎಂಬುದಕ್ಕೆ ಹೋಲಿಸಿದ್ದಾ "ಭಾರತೀಯ ತತ್ವ ಜ್ಞಾನ ಹಾಗೊ ಗ್ರೀಕ್ ತತ್ವಜ್ಞಾನಗಳಲ್ಲಿ ಅಷ್ಟು ಕಾಲದಲ್ಲಿಯೆ ಐತಿಹಾಸಿಕ ಸಂಬಂಧ ಸಂಪರ್ಕ ಇದ್ದಿರಬೇಕು" ಎಂದೂ (Page 212) ಈ ಚಿಕ್ಕ ಪ್ರಬಂಧದಲ್ಲಿ ಈ ಅದ್ಭುತ ವಿಷಯದ ಬಗೆ ಬರೆಯಲು ಅಸಾಧ್ಯ. ತತ್ವಜ್ಞಾನದ ವಿಷಯದಲ್ಲಿ ಝೆನೊಫೇನ್ಸ, ಪ ಝೆನೊ, ಮೆಲಿನೆಸ್‌ರಂಥವರು ಭಾರತೀಯ ವೇದಾಂತಿಗಳಿಗೆ ತೀರ ಳಾಗಿದ್ದಾರೆ.

'ಏಕಂ ಸತ್ ವಿಪ್ರಾ ಬಹುಧಾ ವದಂತಿ' ಎಂದು ಉಪನಿಷತ್ತುಗ ಮಾತನ್ನೇ ಝೆನೊಫೇನ್ಸ ಮತ್ತು ಅವರ ಉತ್ತರಾಧಿಕಾರಿಗಳು ಹೇಳುತ್ತಾ ಪ್ಲೇಟೋನ ಅಭಿಮತ. ಶೂನ್ಯದಿಂದ ಜಗತ್ತು ಹುಟ್ಟಲಾರದು ಎಂದು

ಗಳಲ್ಲಿ ಬರುವ ವಿಚಾರವನ್ನೂ ಈ ಝೆನೋಫೇನ್ಸ ಹೇಳಿದ್ದಾನೆಂದೂ ಆ ನಂತರ ಚೈತನ್ಯವೇ ಸಕಲ ಮೂಲವೆಂದೂ ಬರೆದಿದ್ದಾನೆಂದೂ ಅರಿತುಕೊಂಡರೆ ಉಪನಿಷತ್ತು ಗಳಲ್ಲಿಯ ಅನಾದಿ ಅನಂತ ಅಭವ ಮುಂತಾದ ವಿಶೇಷಣಗಳಿಗೆ ಅದು ಸರಿ ಹೋಗುತ್ತ ವೆಂದು ಕಂಡು ಬರದಿರದು. ಸಕಲ ವಸ್ತುಗಳಿಗೂ ಒಂದೇ ಮೂಲ ಎಂಬ ವಿಚಾರದಲ್ಲಿ ಉಪನಿಷತ್ತು-ಝೆನೋಫೇನ್ಸ ಇವರಲ್ಲಿ ಒಮ್ಮತವಿದೆ. ಇದರಿಂದ ಈ ಪಂಗಡದವರಲ್ಲಿ ಹಾಗೂ ಉಪನಿಷತ್ತುಗಳಲ್ಲಿ ಎಷ್ಟೊಂದು ವಿಚಾರಸಾಮ್ಯವಿದೆ ಎಂಬುದು ಸ್ಪಷ್ಟವಾ ಗುವದು. ಝೆನೋಫೇನ್ಸ ಪಂಗಡದವರ ಅಂತಿಮ ನಿರ್ಣಯ ದಿವ್ಯ ಚೈತನ್ಯ ಶಕ್ತಿ 'ತೂವ್' ಉಪನಿಷತ್ತುಗಳಲ್ಲಿ 'ಸತ್'ಅನ್ನು ಸರಿದೂಗುತ್ತಿದೆ. ಅನೇಕ ನಾಮರೂಪವಾದ ಈ ಜಗತ್ತು ಒಂದು ಮಾಯೆ ಎಂದೇ ಇವರ ಅನುಭವ. ಆದರೆ ಇವರಲ್ಲಿ ಮತ ಭೇದಗಳೂ ಸಾಕಷ್ಟಿವೆ. ಗ್ರೀಕ ತತ್ತ್ವಜ್ಞಾನಿಗಳಲ್ಲಿ ವ್ಯಕ್ತಿನಿಷ್ಠೆ ಪ್ರಬಲವಾಗಿದ್ದು, ಆತ್ಮ-ಪರಮಾತ್ಮ ವಿಚಾರವನ್ನಾಗಲಿ ಸಂಬಂಧವನ್ನಾಗಲಿ ಹೇಳುವದಿಲ್ಲ, ಇಷ್ಟೇ ಅಲ್ಲ, ಆತ್ಮ ಪರಮಾತ್ಮನಲ್ಲಿ ಬೆರೆಯುವದು ಹೇಗೆ ಎಂಬುದನ್ನೂ ತಿಳಿಸುವದಿಲ್ಲ. ಪರಮಾ ತ್ಮನಿಂದಲೇ ಆತ್ಮ ಬಂದುದು ಎಂಬುದನ್ನು ಒಪ್ಪುವದಿಲ್ಲ.

ಪ್ರಾಚೀನ ಕಾಲದಲ್ಲಿ ಭಾರತೀಯ ವೇದಾಂತಿಗಳಂತೆ ಗ್ರೀಕ ತತ್ತ್ವಜ್ಞಾನಿಗಳೂ ಸಕಲ ವಸ್ತುಗಳ ಮೂಲದ ಕುರಿತು ಸಂಶೋಧನೆ ನಡೆಸಿದರು. ಗ್ರೀಕ ತತ್ತ್ವಜ್ಞಾನದ ಮೂಲಪುರುಷ ಥೇಲ್ಸನು ಈ ಕುರಿತಾದ ತನ್ನಸಂಶೋಧನೆಯಲ್ಲಿ ಜಲವೇ ಪ್ರಪಂಚಕ್ಕೆ ಮೂಲ- ಎಂದು ಕಂಡುಕೊಂಡನು. ವಾಯು ಮೂಲ ಜಗತ್ತು ಎಂದು ಅನಾಕ್ಸಿ ಮೆನೆಸ್‌ನ ಹೇಳಿಕೆ. ಬುದ್ಧಿ ಶಕ್ತಿಗಳ ಆಗರವಾದ ಆತ್ಮ ವಿಶ್ವಕ್ಕೆ ಮೂಲವೆಂದು ಪೊಲೋನಿಯದ ಡಾಯೊಜಿನೆಸ್‌ನ ವಿವರಣೆ. 'ಅನಂತ'ವೇ ಮೂಲವೆಂದ ಮಿಲೆಟಸ್ಸಿನ ಅನಾಕ್ಸಿಮಾಂಡರ್, ಗೋಲಗಳ ಸಾಮರಸ್ಯವನ್ನು ಚರ್ಚಿಸುತ್ತ ಪೈಥೆಗೊರಸ್‌ನು ಜಗತ್ತು ಸಂಖ್ಯಾ ಮೂಲವೆಂದು ಹೇಳಿ ಸರ್ವಶಕ್ತನ ಅಸ್ತಿತ್ವವನ್ನು ಸಾರಿದ. ಝೆನೋಫೇನ್ಸ ಆಕಾಶದತ್ತ ದೃಷ್ಟಿ ಹೊರಳಿಸಿ 'ಆ ಏಕನೇ ದೇವ' ಎಂದು ಹೇಳಿದ್ದಾಗಿ ಅರಿಸ್ಟಾಟಲ್ ತಿಳಿಸುತ್ತಾನೆ. ತನ್ನ ದೇವನು ಸ್ವಯಂಭೂ, ಸ್ಥಾಣು, ಸರ್ವಜ್ಞ ಎಂದೂ ಝೆನೋಫೇನ್ಸ ಬಣ್ಣಿಸಿದ್ದಾನೆ.

ಈ ಕೆಳಗಿನ ಪದ್ಯವು ಆತನನ್ನು ಬಣ್ಣಿಸುತ್ತದೆ.

"Certainly no mortal yet knew, and never shall there be one
Knowing both well, the God and the all whose nature we treat of.
For when, by chance, he at times may utter the true and the perfect.
He wists not. unconscions; for error is spead over all things.

ಇಂದ್ರಿಯ ಮುಖೇನ ಬಂದ ವಿಚಾರವೆಲ್ಲ ಮಾಯೆ, ತರ್ಕಶುದ್ಧವಾಗಿ ಬಂದುದು ಸಂಪೂರ್ಣ ಸತ್ಯ ಎಂದು ಪರ್ಮೆನಿಡಿಸನ್ ಅಭಿಪ್ರಾಯ. ಪರ್ಮೆನಿಡಿಸ್‌ನು ಏಕನ

ಅಸ್ತಿತ್ವವನ್ನು ಪ್ರಸ್ಥಾಪಿಸಿದರೆ, ಆತನ ಶಿಷ್ಯ ಝೆನೊ ಅನೇಕಗಳ ಅಸ್ತಿತ್ವವಿಲ್ಲ ಎಬುದನ್ನು ಸಾಧಿಸಿದನು ಎಂದು ಪ್ಲೆಟೋ ಹೇಳುತ್ತಾನೆ. ಇಂದ್ರಿಯಾನುಭವದ ಜಗತ್ತು ಶಾಶ್ವತ ಮಾಯೆ ಎಂದ ಹೆರೇಕ್ಲಿಟಸ್, 'ತತ್ತ್ವಜ್ಞಾನದಿಂದ ಜಗದ ಕೇಡು, ಆತ್ಮದ ಉದ್ಧಾರ' ಎಂದು ಸಾರಿದ ಅನಾಕ್ಸಗೋರಾಸ ಇಂದ್ರಿಯಗಳು ಪ್ರತಿಬಿಂಬಗಳನ್ನು ಗ್ರಹಿಸಬಲ್ಲವು. ಬಿಂಬವನ್ನಲ್ಲ ಎಂದಿದ್ದಾನೆ. ಎಂಪಿಡೊಕ್ಲಿಸ್‌ನು ಇಂದ್ರಿಯಗಳ ಅಪರಿಪೂರ್ಣತೆಯನ್ನು ವಿವರಿಸಿ ತರ್ಕದಿಂದಲೇ ಸತ್ಯಜ್ಞಾನ ಸಿದ್ಧವೆಂದಿದ್ದಾನೆ. ಸಂವೇದನೆಯು ಆತ್ಮನಿಷ್ಠವೇ ಹೊರತು ವಸ್ತುನಿಷ್ಠವಲ್ಲ ಎಂಬುದು ಡೆಮೊಕ್ರಿಟಸ್‌ನ ವಿಚಾರ. ವ್ಯಾಖ್ಯೆಗಳನ್ನು ನೀಡುತ್ತ ಅನುಗಮನ ಪದ್ಧತಿಯಿಂದ ಸಾಗಿದವರಲ್ಲಿ ಸಾಕ್ರೆಟಿಸನೆ ಮೊದಲ ಗ್ರೀಕ ತತ್ವಜ್ಞಾನಿ. ಪರಿವರ್ತನಶೀಲವಾದ ಜಗತ್ತು ನಿಜವಾದುದಲ್ಲ, ಸತ್ಯದ ಪ್ರತಿಬಿಂಬ ಎಂದು ಪ್ಲೇಟೊ ಬೋಧಿಸಿದ. ಅರಿಸ್ಟಾಟಲನ ಪ್ರಕಾರ ಪರಿಪೂರ್ಣ ಚಿರಂತನ ವಸ್ತುವೆಂದರೆ ವಿಚಾರ, ದೇವರ ಮನಸ್ಸಿನಲ್ಲಿಯ ವಿಚಾರವೇ ಜಗತ್ತು, ಆ ದೇವರು ಸದಾ ಕ್ರಿಯಾನಿರತ; ಆತನೆಂದಿಗೂ ವಿರಮಿಸುವದಿಲ್ಲ ಎಂದಿದೆ.

ನಂತರದ ಗ್ರೀಕ ತತ್ತ್ವಜ್ಞಾನಿಗಳೆಂದರೆ ಸ್ಕೆಪ್ಟಿಕ್, ಎಪಿಕ್ಯೂರಿಮನ್ಸ, ಸ್ಟೋಯಿಕ್ಸ. ತದನಂತರ ಅಲೆಕ್ಝಾಂಡ್ರನ ತತ್ವಪ್ರಣಾಲಿ ದೇವರ ಅಸ್ತಿತ್ವವನ್ನು ಅರಿಯಬಹುದಾದರೂ ಆತನ ಸ್ವರೂಪವನ್ನು ತಿಳಿಯಲಿಕ್ಕಾಗದು. ಆತನು ಇದ್ದಾನೆ ಎಂಬುದನ್ನು ತಿಳಿದುಕೊಳ್ಳುವದೆ ಆತನ ಪರಿಪೂರ್ಣ ಸ್ವರೂಪದ ಜ್ಞಾನವಾದಂತೆ ಎಂದು ಫಿಲೋ ಎಂಬ ತತ್ವಜ್ಞಾನಿ ಹೇಳುತ್ತಾನೆ. ದೇವರು ಅಚಿಂತ್ಯನಾದರೂ ಆತನ ವಿಚಾರ ಚಿಂತನೀಯವಿದೆ. ಆತನ ವಿಚಾರದಂತೆ ಈ ಜಗತ್ತು ನಿರ್ಮಾಣವಾಯಿತು ಎಂದೂ ಫಿಲೋನ ಹೇಳಿಕೆ. ಗ್ರೀಕ ತತ್ತ್ವಜ್ಞಾನವನ್ನು ಅದ್ವೈತದ ತೀರ ಸನಿಯಕ್ಕೆ ಒಯ್ದುವನೆಂದರೆ ಪ್ಲೋಟಿನಸ್. ಇಂದ್ರಿಯ ಜಗತ್ತು ಆದರ್ಶ ಜಗತ್ತಿನ ಪ್ರತಿಬಿಂಬ. ಆದರ್ಶ ಜಗತ್ತು ಆ ದೇವನ ಲೀಲೆ ಎಂಬುದು ಪ್ಲೋಟಿನಸ್‌ನ ವಿಚಾರ. ಸಾಂತವು ಅನಂತವನ್ನು ತರ್ಕದಿಂದ ಅರಿಯಲಾರದು. ಆದರೆ ಭಾವ ಸಮಾಧಿಯಿಂದ ಅನುಭವಿಸಬಲ್ಲದು ಎಂದೂ ಈತನ ಪ್ರತಿಪಾದನೆ. "ಭಾವಸಮಾಧಿಯಲ್ಲಿ ಆತ್ಮವು ದೈಹಿಕ ಪಂಜರದಿಂದ ಬಿಡುಗಡೆ ಹೊಂದಿ ಭಾವಾತೀತವಾಗಿ ತನ್ನ ಮೂಲವಾದ ಆ ಪರಮಾತ್ಮನಲ್ಲಿ ಲೀನವಾಗುತ್ತದೆ. ಭಾವಸಮಾಧಿಯಲ್ಲಿ ಆತ್ಮಕ್ಕೆ ನಿಜದ ಅರಿವಾಗುತ್ತದೆ. ನಿಜದಲ್ಲಿ ಅದು ಒಂದಾಗುತ್ತದೆ" ಎಂಬುದು ಅವನ ಬೋಧೆ.

ಇಂದಿನ ಪಾಶ್ಚಾತ್ಯ ತತ್ತ್ವಜ್ಞಾನದ ಮೇಲೆ ಕ್ರಿಶ್ಚನ್ ತತ್ತ್ವಜ್ಞಾನದ ಪ್ರಭಾವವಿದ್ದರೂ ಗ್ರೀಕ ತತ್ತ್ವಜ್ಞಾನದಿಂದಲೂ ಅದು ವಿಶೇಷ ಪ್ರಭಾವಿತವಾಗಿರುವದರಿಂದ ಗ್ರೀಕ ತತ್ತ್ವಜ್ಞಾನದ ಕುರಿತು ಇಲ್ಲಿ ಸಾಕಷ್ಟು ವಿವೇಚಿಸಿದ್ದಾಯಿತು.

ಆಧುನಿಕ ಪಾಶ್ಚಾತ್ಯ ತತ್ತ್ವಜ್ಞಾನಕ್ಕೆ ಗ್ರೀಕ ತತ್ತ್ವಜ್ಞಾನ ಹಾಗೂ ವಿಜ್ಞಾನದ ಸಹಾಯದಿಂದ ಹೊಸ ತಿರುವನ್ನು ಕೊಟ್ಟವರು ಬೇಕನ್ ಮತ್ತು ಡೆಸ್ಕಾರ್ಟಿಸ್ ಅವರು. ಕೇವಲ ವಾಗಾಡಂಬರದಿಂದ ಅಧ್ಯಾತ್ಮಿಕ ಚರ್ಚೆಯಲ್ಲಿ ತೊಡಗುವದಕ್ಕಿಂತ

ಸೃಷ್ಟಿಯ ಚಮತ್ಕಾರಗಳನ್ನು ನಿರೀಕ್ಷಿಸಿ ತರ್ಕಬದ್ಧವಾಗಿ ಅವನ್ನು ಅರ್ಥವಿಸಿಕೊಳ್ಳಲು ಜನ ಮುಂದಾಗಬೇಕು ಎಂಬ ಕರೆಯನ್ನು ಬೇಕನ್ನನು ಇತ್ತನು. Cogito Ergo sum (ನಾನು ವಿಚಾರ ಮಾಡುತ್ತೇನೆ ಅಂತೇ ನಾನಿದ್ದೇನೆ) ಎಂಬ ಬೇಕನ್ನನ ಸುಪ್ರಸಿದ್ಧ ಘೋಷಣೆಯು ಎಲ್ಲ ಸತ್ಯಕ್ಕೆ ವಿವೇಕದ ತಳಹದಿಯನ್ನು ನಿರ್ಮಿಸಿತು. ಅಲ್ಲದೆ ನಿಗಮನ ಪದ್ಧತಿಗೆ ಪ್ರಾರಂಭ ಸ್ಥಾನವಾಯಿತು. ಅಲ್ಲದೆ 'ಅಪರಿಪೂರ್ಣ ಸಾಂತ'ದ ಬಗೆಗಿನ ನಮ್ಮ ಕಲ್ಪನೆಯು 'ಪರಿಪೂರ್ಣ ಅನಂತ'ದ ಅಸ್ತಿತ್ವವನ್ನು ಎತ್ತಿ ತೋರಿಸುವಂತಾಯಿತು. ಎಂದೂ ಇವನೆನ್ನುತ್ತಾನೆ.

ಸ್ಪಿನೋಜಾ ಇದೇ ವಿಚಾರವನ್ನು ಇನ್ನಷ್ಟು ಮುಂದುವರಿಸಿ ಸಕಲ ಚರಾಚರ ವಸ್ತುಗಳಿಗೆಲ್ಲ ಆಧಾರಭೂತನಾಗಿ ವೈವಿಧ್ಯವನ್ನು ದಯಪಾಲಿಸಿರುವವನೂ ಶಾಶ್ವತನಾದ ಅನಂತನೇ ಎಂದು ಪ್ರತಿಪಾದಿಸಿದನು. ಅದ್ವೈತ ಸಿದ್ಧಾಂತಕ್ಕೆ ಈ ವಿಚಾರವೂ ಬಹಳಷ್ಟು ಸಮೀಪವಾಗಿದೆ,

ಡಬ್ಲ್ಯು. ಎಸ್. ಅರ್ಕಹಾರ್ಟನು ತನ್ನ Vedanta and Modern Thought ಎಂಬ ಗ್ರಂಥದಲ್ಲಿ ಹೀಗೆ ಹೇಳುತ್ತಾನೆ.

"ಶಂಕರ-ರಾಮಾನುಜರಿಬ್ಬರ ವಿಚಾರಗಳನ್ನೂ ಸ್ಪಿನೋಜಾ ತನ್ನಲ್ಲಿ ಅಳವಡಿಸಿ ಕೊಂಡಿದ್ದಾನೆ ಎಂದು ಹೇಳುವದು ಅಂಶಸತ್ಯವೇ ಆದೀತು. ದೇವರು ನಿರ್ಗುಣ ನಿರಾಕಾರನೆಂದೂ ಜಗತ್ತು ಮಿಥ್ಯ ಎಂದು ಹೇಳುವಲ್ಲಿ ಸ್ಪಿನೋಜಾ ಶಂಕರನನ್ನು ಅನು ಸರಿಸಿದರೆ, ದೇವರು ಸರ್ವ ಮಂಗಳಾಕಾರನು ಎಂದು ನಿರೂಪಿಸುವಾಗ ಆತನು ರಾಮಾನುಜನನ್ನು ಅನುಕರಿಸುವಂತಿದೆ. ಜಗನ್ಮಿಥ್ಯಾ ಎನ್ನುವ ಶಂಕರನ ಘೋಷಣೆ ಹಾಗೂ ಜಗತ್ತು ಅನುಭವಸಿದ್ಧ ಎನ್ನುವ ರಾಮಾನುಜನ ಸಿದ್ಧಾಂತದ ನಡುವೆ ಸ್ಪಿನೋಜಾ ಹೊಯ್ದಾಡುತ್ತಿದ್ದಾನೆ."

ಹಾಬ್ಸ. ಲಾಕ್, ಹ್ಯೂಮ ಇವರೂ ಮಹಾತತ್ತ್ವಜ್ಞಾನಿಗಳೇ ಆದರೆ ಅದ್ವೈತ ಸಿದ್ಧಾಂತದ ಸಂಪರ್ಕ ಇವರಿಗೆ ಅಷ್ಟೊಂದಿಲ್ಲ. ಇಂದ್ರಿಯಾನುಭವದ ಜಗತ್ತು ಇವರ ತತ್ತ್ವಜ್ಞಾನಕ್ಕೆ ತಳಹದಿ. ನಿಜಜ್ಞಾನದ ಮೀಮಾಂಸೆ ಇವರು ಅಷ್ಟೊಂದಾಗಿ ಮಾಡು ವದಿಲ್ಲ. ಅನುಭವಜನ್ಯವಲ್ಲದೆ ಬೇರೆ ಜ್ಞಾನವಿಲ್ಲ-ಮತ್ತು ಯಾವ ವಸ್ತುವಿನ ಜ್ಞಾನವೂ-ನಮಗದರ ಸಂಬಂಧದಿಂದ ಮಾತ್ರವಲ್ಲದೆ-ಆಗಲಾರದು, ಎಂದಿವರು ಅರಿತುಕೊಂಡು ಬೋಧಿಸಿದರು. ಆದರೆ ಬರ್ಕ್ಲೆನು ವಿಚಾರಗಳೇ ಜ್ಞಾನವಸ್ತುಗಳಾಗ ಬಲ್ಲವು ಎಂದು ಹೇಳಿದನು. ನಿಜಜ್ಞಾನ (ನಿತ್ಯಚೈತನ್ಯ)ವನ್ನು ಅನುಭವಿಸಬಹುದಲ್ಲದೆ ಬೇರೆ ಪುರಾವೆಯಿಲ್ಲ. ಇಮಾನ್ಯುಅಲ್ ಕಾಂಟನ ಕಾಲದಿಂದ ಜ್ಞಾನ-ಅನುಭವಗಳ ಕೂಲಂಕಷ ವಿಶ್ಲೇಷಣೆ ಪ್ರಾರಂಭವಾದುದನ್ನು ನಾವು ಕಾಣುತ್ತೇವೆ. ಇಂದ್ರಿಯಾತೀತ ಜ್ಞಾನದ ಬಗ್ಗೆ ಆತ ವಿಚಾರ ಮಾಡುತ್ತಾನೆ. ಎಲ್ಲ ಇಂದ್ರಿಯಾನುಭವಕ್ಕೂ ಅನಿವಾರ್ಯ ವೆನಿಸುವ ಕಾಲ-ರೂಪಗಳ ಮೂಲವಿಚಾರವನ್ನೆತ್ತಿ ಹೇಳುತ್ತಾನೆ. ವರ್ಗೀಕರಣವೇ ನಿಜವಾದ ಜ್ಞಾನರೂಪ, ವಸ್ತುಗಳನ್ನು ಇದ್ದಂತೆ ಅರಿಯಲಾರೆವು. ಪ್ರತಿಬಿಂಬಕ್ಕೆ

ಬಿಂಬವಿದ್ದೇ ಇರುತ್ತದೆ ಎಂದೂ ಇವನು ನಿರೂಪಿಸುತ್ತಾನೆ. ಈ ವಿಚಾರದಲ್ಲಿ ಅದ್ವೈತದ ಅಂಶವನ್ನು ಕಾಣಬಹುದು. ತತ್ತ್ವಜ್ಞಾನದ ಮೂರು ಗುರಿಗಳೆಂದರೆ ದೇವ, ಸ್ವಾತಂತ್ರ್ಯ ಹಾಗೂ ಅಮೃತತ್ವ ಎಂದು ಪರಿಗಣಿಸಿದ್ದಾನೆ. ಪರಿಪೂರ್ಣ ಜೀವಿಯ ಕಲ್ಪನೆಯೇ ದೇವರ ಅಸ್ತಿತ್ವಕ್ಕೆ ಸಾಕ್ಷಿ ಎಂದು ಆತ ದೇವರ ಅಸ್ತಿತ್ವವನ್ನು ನಂಬುತ್ತಾನೆ. ೧) ವಿಶ್ವಮಾನ್ಯ ನಿಯಮವಾಗಬೇಕು ಎಂದು ನೀವು ಬಯಸುವಂಥ ನೀತಿಯಂತೆಯೇ ನಡೆದುಕೊಳ್ಳಿರಿ. ೨) ಸಾಧನಸಿದ್ಧಿಗಳೆರಡನ್ನೂ ಗಮನದಲ್ಲಿಟ್ಟುಕೊಂಡು ತನ್ನಂತೆ ಪರರ ಬಗೆಯುತ್ತ ನಡೆದುಕೊಳ್ಳಿರಿ ಎಂದು ಆತನ ಆದೇಶಗಳಿವೆ. ಆದರೆ ಶಂಕರನ ಅದ್ವೈತ ಸಿದ್ಧಾಂತವು ಕಾಂಟನ ಸಿದ್ಧಾಂತಕ್ಕಿಂತ ಅನೇಕ ರೀತಿಯಲ್ಲಿ ಭಿನ್ನವಾಗಿದೆಂಬುದನ್ನು ಮರೆಯಬಾರದು. ನಿಜತ್ವದ ಪಾರಮಾರ್ಥಿಕ–ವ್ಯಾವಹಾರಿಕ ಪದ್ಧತಿಗಳ ವರ್ಗೀಕರಣವನ್ನು ಶಂಕರನು ಸುಸ್ಪಷ್ಟ ರೀತಿಯಲ್ಲಿ ನೀಡಿದ ಹಾಗೆ ಕಾಂಟ ವಿವರಿಸಿಲ್ಲ. ವಿದ್ಯೆ, ಅವಿದ್ಯೆ, ಅನಿರ್ವಚನೀಯಗಳ ಕುರಿತು ಶಂಕರನು ತರ್ಕಶುದ್ಧ ಸುಸಂಬದ್ಧವಾಗಿ ಸಮಗ್ರವಾಗಿ ವಿವರಿಸಿದಂತೆ ಕಾಂಟನು ಮಾಡಿಲ್ಲ. ನಮ್ಮ ವಿಚಾರಗಳೆಲ್ಲ ಆ **ನಿಜಜ್ಞಾನದ** ಕಕ್ಷೆಯಲ್ಲಿಯೇ ಬರುವವದರಿಂದ ಆ ಬಗ್ಗೆ ನಾವು ಪ್ರಶ್ನಿಸುವಂತಿಲ್ಲ ಎಂದೂ ಆತನ ಅಭಿಪ್ರಾಯ.

ಫಿಟ್ಸನ ತತ್ವಜ್ಞಾನವು ಶಂಕರನ ಅದ್ವೈತಸಿದ್ಧಾಂತವನ್ನು ಕಾಂಟನ ತತ್ತ್ವಜ್ಞಾನಕ್ಕಿಂತ ಇನ್ನೂ ಸಮೀಪಿಸುತ್ತಿದೆ, 'ಅಹಂ'ದಿಂದ 'ದಾಸೋಹಂ' ಬಂದಿದೆಂದು ಆತನು ಹೇಳುತ್ತಾನೆ. "ಓ, ಅನಿರ್ವಚನೀಯನೇ ನಿನ್ನ ಅಸ್ತಿತ್ವದಲ್ಲಿ ನನ್ನ ಹಾಗೂ ಇಡೀ ಜಗತ್ತಿನ ಅಸ್ತಿತ್ವವು ಗೋಚರವಾಗುತ್ತಿದೆ ನನಗೆ. ಈ ವಿಷಯದ ಸಮಸ್ಯೆಗಳೆಲ್ಲ ನಿವಾರಣೆಹೊಂದಿ ಸಂಪೂರ್ಣ ಸಾಮರಸ್ಯವು ಕಂಡುಬರುತ್ತಿದೆ. ನಾನು ನಿಬ್ಬೆರಗಾಗಿ ಮೂಕನಾಗಿದ್ದೇನೆ" ಎನ್ನುತ್ತಾನೆ ಫಿಟ್ಸ. ಡಾ. ಹೆರಾಲ್ಡ ಹಾಫ್‌ಡಿಂಗರು ತಮ್ಮ History of Modern Philosophy ಗ್ರಂಥದಲ್ಲಿ, "ಕಾಂಟನು ಈ ಜಗತ್ತಿನಲ್ಲಿಯ ಅನೇಕತ್ವದಿಂದ ಏಕತ್ವದ ಕಡೆಗೆ ಸಾಗಿದರೆ ಫಿಟ್ಸನು ಸೋಹಂದಿಂದ ಪ್ರಪಂಚದ ನಾನತ್ವದ ಕಡೆಗೆ ಇಳಿದು ಬರುತ್ತಾನೆ." ಎಂದಿದ್ದಾರೆ. ಅನುಭವವನ್ನು ವಿವರಿಸುವದೇ ತತ್ವಜ್ಞಾನದ ಕರ್ತವ್ಯ. ಆತ್ಮದ ಆಳದಿಂದ ತತ್ವಜ್ಞಾನ ಹೊರಹೊಮ್ಮುತ್ತದೆಂದು ಫಿಟ್ಸನ ಹೇಳಿಕೆ. ಕ್ಷರದಿಂದ ಮೇಲೆದ್ದು ಅಕ್ಷರದ ಆಧಾರದಿಂದಲೇ ಮಾನವ ಉದ್ಧಾರವಾಗಬೇಕು ಎಂದು ಹೇಳುವ ಫಿಟ್ಸನ ಮಾತು ಶಂಕರನ ಅದ್ವೈತಕ್ಕೆ ತೀರ ಸಮೀಪವಾಗಿದೆ. ಅನಂತವನ್ನು ಶಬ್ದಗಳಿಂದ, ವಿಚಾರದಿಂದ ವಿವರಿಸುವದು ಅಸಾಧ್ಯ; ಯಾವದೊಂದಕ್ಕೆ ನಮ್ಮ ಕಲ್ಪನೆಯ ರೂಪನ್ನಿತ್ತರೆ ಅದು ದೇವನಾಗಲಾರದು. ದೇವತ್ವದ ಕಲ್ಪನೆ ಆದರ್ಶಕಲ್ಪನೆ ಎಂದು ಫಿಟ್ಸ ನಂಬಿದ್ದಾನೆ. ಹೀಗಾಗಿ ಪರಿಶುದ್ಧವಿಚಾರದ ಮುಕ್ತ ಸ್ವರೂಪನಾದ ಸರ್ವಪರಿಪೂರ್ಣನನ್ನು ಏಕೋದೇವನನ್ನು ಅವಿದ್ಯೆಯಿಂದಲ್ಲ ವಿದ್ಯೆಯಿಂದ ಅರಿತುಕೊಳ್ಳಬೇಕು ಎಂದು ಶ್ರೀ ಶಂಕರಾಚಾರ್ಯ ಹಾಗೂ ಫಿಟ್ಸ ಇವರಿಬ್ಬರ ಒಮ್ಮತದ ಅಭಿಪ್ರಾಯ. ಅಕ್ಷರನು ಅವ್ಯಯನೂ ಅಹುದು. ಆತನು

ಮಾಯೆಯ ಮೂಲಕವೇ ಪ್ರಪಂಚದಲ್ಲಿ ಮೆರೆಯಬಲ್ಲನು ಎಂದು ಶಂಕರನಂತೆ ಫಿಟ್ಸನೂ ವಿವರಿಸುತ್ತಾನೆ." ಅಕ್ಷರನೂ ಅನ್ವಯನೂ ಆದ ಆತನಿಗೆ ಅತೀತವಾದ ವಸ್ತು ಇಲ್ಲ. ಆದ್ದರಿಂದ ಕ್ಷಣ ಜಗತ್ತೆಲ್ಲ ಮಿಥ್ಯೆ,-ಮಾಯೆ' ಎಂದು ಫಿಟ್ಸನ ಘೋಷಣೆ. ಆದರೂ ಮಾಯೆಗಿಂತ ಅವಿದ್ಯೆಗೆ ಪ್ರಾಧಾನ್ಯ ನೀಡುತ್ತಾನೆ ಫಿಟ್ಸ. ಒಟ್ಟಾರೆ ಇವರಿಬ್ಬರ ವಿಚಾರಧಾರೆಯಲ್ಲಿ ಹೋಲಿಕೆ ಬಹಳಷ್ಟಿದೆ. "ಭಾರತೀಯ ತತ್ವಜ್ಞಾನವೇ ಜರ್ಮನಸಲ್ಲಿ ಪೂನರ್ಜನ್ಮ ತಾಳಿದೆ ಎಂದು ಹೇಳುವಷ್ಟರ ಮಟ್ಟಿಗೆ ಇವರಿಬ್ಬರ ಸಿದ್ಧಾಂತಗಳಲ್ಲಿ ಸಾಮ್ಯ ಕಂಡುಬರುತ್ತದೆ." ಎಂದಿದ್ದರೆ ಪ್ರೊಫೆಸರ ರುಡಾಲ್ಫ ಓಟ್ಟೊ.

ಷೆಲ್ಲಿಂಗನ ಸರಣಿ ಅದ್ವೈತದತ್ತ ಇನ್ನೂ ಒಂದು ಹೆಜ್ಜೆ ಮುಂದೆ ಸಾಗಿದೆ. ಡಾ. ಹೆರಾಲ್ಡ ಫೊಡ್ಡಿಂಗ ಹೇಳುತ್ತಾರೆ—

" ಈ ವಿಶ್ವವೊಂದು ಸಾಧನ, ಮರ್ಯಾದಿತವಾದದ್ದು ಎಂದು ಫಿಟ್ಸ ಹೇಳಿದರೆ ಷೆಲ್ಲಿಂಗನ ಪ್ರಕಾರ ಆದರ್ಶವಾದದ ಹೆಸರಿನನಲ್ಲಿ ವಿಶ್ವವನ್ನು ಸತ್ಯವೆಂದು ಮನ್ನಿಸಬೇಕಾಗುತ್ತದೆ. ಪ್ರಕೃತಿಯನ್ನು ದ್ವೇಷಿಸದೆ ಅರಿತು ಅರ್ಥಯಿಸಿಕೊಂಡಾಗಲೆ ಅಧ್ಯಾತ್ಮ ಜಗತ್ತಿನ ರಹಸ್ಯಗಳನ್ನು ಭೇದಿಸಲು ಸಾಧ್ಯ ಎಂದೆನ್ನುತ್ತಾನೆ ಷೆಲ್ಲಿಂಗ. ಪ್ರಕೃತಿ ಎಂಬ ವಸ್ತು ಪುರುಷನ ಪ್ರತಿಬಿಂಬವಾಗಿದ್ದಾಗ ಮಾತ್ರ ಅದನ್ನು ಅರಿತುಕೊಳ್ಳಲು ಸಾಧ್ಯ ಎನ್ನುತ್ತಾನೆ ಫಿಟ್ಸ. ಪರಮಾತ್ಮ ಶಕ್ತಿಯೆ ಪ್ರಕೃತಿಯಲ್ಲಿ ಕಂಡುಬಂದಾಗ ಜಗತ್ತಿನಲ್ಲಿ ಈಶ ಶಕ್ತಿಯ ಅಭಿವ್ಯಕ್ತಿಯನ್ನು ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತದೆ. ಏಕಚೈತನ್ಯದ ನಾನಾ ರೂಪವಾದ ಜಗತ್ತು ಪುನಃ ಆ ಪರಮ ಚೈತನ್ಯದಲ್ಲಿ ಒಂದಾಗಲು ಧಡಪಡಿಸುತ್ತಿದೆ,"

ಷೆಲ್ಲಿಂಗನು ಪರಮಾತ್ಮಶಕ್ತಿಯನ್ನು ಮೂಲವಾಗಿಟ್ಟುಕೊಂಡು ಕೆಳಮಟ್ಟದಲ್ಲಿಯ ಅದರ ಲೀಲಾವಿಲಾಸವೇ ಈ ಜಗತ್ತು ಎಂದು ಹೇಳುತ್ತಾನೆ. ಪ್ರಕೃತಿಯ ಶಕ್ತಿ ಚಮತ್ಕಾರಗಳನ್ನೆಲ್ಲ ಉತ್ಕ್ರಾಂತಿ ಸಾಧನಗಳೆಂದು ಬಣ್ಣಿಸಬೇಕು ಎಂದು ಹೇಳುವ ಷೆಲ್ಲಿಂಗ ಗೀತೆಯಲ್ಲಿಯ ಅಪರಾಪ್ರಕೃತಿ, ಪರಾಪ್ರಕೃತಿಗಳ ಕುರಿತು ಹೇಳುತ್ತಿರುವಂತೆ ಭಾಸವಾಗುತ್ತದೆ.

ಅದ್ವೈತದ ಪ್ರತಿಧ್ವನಿ ಹೆಗಲ್‌ನಲ್ಲಿ ಇನ್ನಷ್ಟು ಸ್ಪಷ್ಟವಾಗಿ ವ್ಯಕ್ತವಾಗಿದೆ. ಈತನು ಪ್ರಕೃತಿ ಪುರುಷರನ್ನು ಒಪ್ಪಿಕೊಂಡು 'ಈ ವಿರುದ್ಧಶಕ್ತಿಗಳ ಸಂಯೋಗದಿಂದಲೇ ವಿಶ್ವನಿರ್ಮಾಣವಾಯಿತು. ಪರಸ್ಪರ ಭಿನ್ನ ಶಕ್ತಿಗಳ ಸಂಯೋಗವಿಲ್ಲದೆ ಯಾವ ಸೃಷ್ಟಿಕೂಡ ಸಾಧ್ಯವಿಲ್ಲ' ಎಂದು ಸಾರುತ್ತಾನೆ ಹೆಗೆಲ್. ಜೀವ-ಅಜೀವಗಳ ಸಂಪರ್ಕದಿಂದಲೇ ಜೀವನಸೃಷ್ಟಿಯ ಕಲ್ಪನೆ ಎನ್ನುತ್ತಾನೆ ಆತ. ಈ ಕ್ಷರ ಜಗತ್ತು ಅಕ್ಷರವೆಂಬುದಿದೆ ಎಂಬುದನ್ನೇ ಎತ್ತಿ ತೋರಿಸುತ್ತದೆ ಎನ್ನುತ್ತಾನೆ ಹೆಗೆಲ್. ದೇವನೇ ಸೃಷ್ಟಿಕರ್ತಾ ಹಾಗೂ ರಕ್ಷಕನೆಂದೂ ಈತ ಹೇಳುತ್ತಾನೆ.

ಷರ್‌ಮಾಚರ್‌ನು ಅಂತಃಪ್ರೇರಣೆ ಧರ್ಮದ ಒಂದು ಸಾಧನ; ನಮ್ಮ ನಶ್ವರ ಜೀವನವನ್ನು ಅಕ್ಷರವಾಗಿಸಬೇಕು,ಆತನಿಂದ ಉದ್ಧಾರ ಹೊಂದಬೇಕು ಎಂದು ಬೋಧಿಸಿದ್ದಾನೆ.

ಷೋಪನ್‌ಹಾರ್‌ನಲ್ಲಿ ಅದ್ವೈತದ ಮಿಡಿತ ತೀವ್ರತಮವಾಗಿದೆನ್ನಬೇಕು. ಉಪ-ನಿಷತ್ತುಗಳನ್ನು ಪರ್ಶಿಯಲ್ಲಿ ಭಾಷೆಯನ್ ಓದಿಕೊಂಡ ಆತ ಬರೆಯುತ್ತಾನೆ, "ಅತ್ಯು-ದಾತ್ತ ತತ್ತ್ವಜ್ಞಾನ ಮತ್ತು ಅತ್ಯಂತ ತೃಪ್ತಿಕರ ಧರ್ಮ ಅವುಗಳಲ್ಲಿದೆ. ನನ್ನ ಜೀವನಕ್ಕೆ ಶಾಂತಿಯನ್ನು ನೀಡಿದ ಅವು ಮರಣದಲ್ಲಿಯೂ ಸಮಾಧಾನ ನೀಡುತ್ತವೆ." ಆತನ ಪ್ರಕಾರ ಈ ಸೃಷ್ಟಿಯಲ್ಲಿ ಒಂದು ಭ್ರಮೆ. ಈ ಜಗತ್ತು ಭೂತಮವಾಗಿ ಕಾಣದೆ ಹೋದರೆ ನೀವು ತತ್ವಜ್ಞಾನಕ್ಕೆ ಅರ್ಹರಲ್ಲ ಎನ್ನುತ್ತಾನೆ. ಜೀವನಾಕಾಂಕ್ಷೆಯೆ ಮಾಯಾ ಜಗತ್ತನ್ನು ಸೃಷ್ಟಿಸುತ್ತದೆನ್ನುತ್ತಾನೆ.

ಷೊಪೆನ್ ಹಾರ್ ತನ್ನ ಬಗ್ಗೆ ಹೀಗೆ ಬರೆದುಕೊಂಡಿದ್ದಾನೆ. "ಕೇವಲ ಪ್ರಾಥಮಿಕ ಶಿಕ್ಷಣವನ್ನು ಪಡೆದ ನನಗೆ, ನನ್ನ ಹದಿನೇಳನೇಯ ವರ್ಷದಲ್ಲಿಯೆ, ಜರಾಮರಣಗಳನ್ನು ಕಂಡ ಬುದ್ಧನಷ್ಟು ದುಃಖಾನುಭೂತಿಯಾಗಿತ್ತು. ಜಗತ್ತು ಸಾರಿ ಹೇಳಿದ. ಸತ್ಯವು ನಾನು ಕಲಿತ ಯಹೂದಿ ತತ್ತ್ವಗಳನ್ನೆಲ್ಲ ಮರೆಸಿಬಿಟ್ಟಿತು." ಮರ್ತ್ಯದ ಆಶೆ ಅಳಿದಲ್ಲದೆ ಜೀವನದ ಗುರಿ ಸಿದ್ಧಿಸಲಾರದು; ಜೀವನದ ದುಃಖಕಷ್ಟಗಳನ್ನು ಅನುಭವಿಸಿದವ ರೆಲ್ಲರೂ ಪರಮಶಾಂತಿಯನ್ನು ಬಯಸದಿರಲಾರರು ಎಂದೂ ಈತನ ಸಿದ್ಧಾಂತ.

ಪರಮಾನಂದವು ಒಂದು ನಿಜಸ್ಥಿತಿ ಎಂದು ಅದ್ವೈತವು ಸಾರಿಹೇಳುತ್ತಿದ್ದರೆ ಷೋಪೆನ್ ಹಾರ್‌ನು ಭಚಕ್ರದಲ್ಲಿ ಸುತ್ತುತ್ತಿರುವ ಜೀವಿಗಳಿಗೆ ದುಃಖವೇ ನಿಜಸ್ಥಿತಿ; ಅದರ ಅಭಾವವೇ ಆನಂದ ಎಂದು ಹೇಳುತ್ತಾನೆ.

ಅದ್ವೈತವನ್ನು ಮೆಚ್ಚಿಕೊಂಡಿರುವ ಆಧುನಿಕ ತತ್ತ್ವಜ್ಞಾನಿಗಳಲ್ಲಿ ಯುಕನ್, ಬರ್ಗಸನ್, ಬೊಸಾಂಕ್ವೆಟ, ಬ್ರಾಡ್ಲೆ ಇವರನ್ನು ಹೆಸರಿಸಿದರೆ ಸಾಕು. ಯುಕನ್ ಆಧ್ಯಾತ್ಮಾ ನುಭಾವಕ್ಕೆ ಪ್ರಾಧಾನ್ಯ ನೀಡುತ್ತಾನೆ. ಹೆರಾಲ್ಡ ಹೊಸ್‌ಡಿಂಗರು ತಮ್ಮ Modern Philosophers ದಲ್ಲಿ, "ಧರ್ಮ ಮೂಲವಾದ ಜಗತ್ತು ಕ್ಷರಕ್ಕಿಂತ ಅಕ್ಷರವಾಗಿ, ಸೀಮಿತಕ್ಕಿಂತ ಸೀಮಾತೀತವಾಗಿ, ಅಸಂಬದ್ಧಕ್ಕಿಂತ ಸುಸಂಬದ್ಧವಾಗಿ ಕಾಣುತ್ತದೆ. ನಾನಾ ರೀತಿಯಲ್ಲಿಯ ಅಧ್ಯಾತ್ಮಾನುಭವವು ಅನಂತವಾಗಿ ಏಕಾಕಾರವಾಗಿರುತ್ತದೆ. ಇಂಥ ಉದಾತ್ತಾನುಭವದ ಹಿನ್ನೆಲೆಯಲ್ಲಿ ನಾವು ಮೌಲ್ಯಗಳನ್ನು ನಿರ್ಣಯಿಸಬೇಕು." ಯುಕನ್ನನು ಸಾಕಾರ ದೇವನನ್ನು ಒಪ್ಪುದಿಲ್ಲವಾದರೂ ಅನೇಕತ್ವದ ಕಲ್ಪನೆಯನ್ನೂ ಸಂಪೂರ್ಣವಾಗಿ ತ್ಯಜಿಸಿಲ್ಲ.

ಅದ್ವೈತವು 'ಸತ್'ಕ್ಕೆ ಪ್ರಾಧಾನ್ಯವಿತ್ತಿದೆ ಆದರೆ ಬರ್ಗಸನ್ ಈ ಪ್ರಪಂಚ ವೊಂದು ಸೃಷ್ಟಿ ಎಂದು ಹೇಳುತ್ತಾನೆ. ಬರ್ಗಸನ್ನನ ಅಂತಃಪ್ರೇರಣೆ ತರ್ಕ-ಚಿಂತನಗಳನ್ನು ಮೀರಿದ್ದಾದರೂ ಅದ್ವೈತದ ಜ್ಞಾನಕ್ಕೆಸಮಾನವಾದುದಲ್ಲ ಬುದ್ಧಿಯು ಜೀವನದ ನಾನಾ ಸ್ವರೂಪಗಳ ಕುರಿತು ಚಿಂತಿಸಬಲ್ಲುದಾದರೆ, ಈ ಅಂತಃಪ್ರೇರಣೆ ಅಂತಃಸ್ಫೂರ್ತಿಯ ಅಂತರಂಗ ಪ್ರವೇಶ ಎಂದು ಆತ ಭಾವಿಸಿದ್ದಾನೆ. ಆದರೆ ಜ್ಞಾನ ಎಂದರೆ ಆ ಸಚ್ಚಿದಾ-ನಂದನ ಸಾಕ್ಷಾತ್ಕಾರ ಎಂದು ಅರ್ಥ.

ದೇಹವು ಆತ್ಮನ ಉಪಾಧಿ ಎಂದು ಬರ್ಗಸನ್ ಈ ಭೌತಸೃಷ್ಟಿಯ ಬಗೆಗೆ ಹೇಳು ವಾಗ ಮಾತ್ರ ಅದ್ವೈತವನ್ನು ಸಮೀಪಿಸಿದಂತೆ ತೋರುತ್ತದೆ. "ದೇಹವೆಂಬ ಕಾಲುವೆ ಯಲ್ಲಿ ಜೀವಾತ್ಮ ಪ್ರವಹಿಸುತ್ತಿದ್ದಾನೆ. ದೇಹವು ಜೀವಾತ್ಮನನ್ನು ಅದೆಷ್ಟು ಹಿಂಸಿಸಿ ದರೂ ಆತನು ಪರಮಾತ್ಮನನ್ನು ಸೇರುವದನ್ನು ತಡೆಗಟ್ಟಲಾರದು" ಎಂದು ಬರ್ಗಸನ್ ವಿವರಿಸುತ್ತಾನೆ. "ಮನೋಜ್ಞಸ್ಯ ಹಿ ಶೃಂಖಲಾ" ಎಂಬ ವಾಕ್ಯಕ್ಕೆ ಬರ್ಗಸನ್ನನ ಈ ಮೇಲಿನ ಕಲ್ಪನೆ ಸರಿ ಹೋಗುತ್ತದೆ. ಆಧುನಿಕ ತತ್ತ್ವಜ್ಞಾನವೆಂದರೆ ಉತ್ಕ್ರಾಂತಿಯು ಯಾಂತ್ರಿಕ ಕಲ್ಪನೆಯಲ್ಲ; ಅದರಲ್ಲಿ ಸೃಜನಾತ್ಮಕ ಶಕ್ತಿ ಅಖಂಡವಾಗಿ ಪ್ರವಹಿಸುತ್ತಿರು ತ್ತದೆ ಎಂದು ಬರ್ಗಸನ್ ಸ್ಪಷ್ಟ ತಿಳುವಳಿಕೆ ನೀಡಿದನು. 'ಪೂರ್ಣ'ತ್ವದ ಕಲ್ಪನೆ ನೀಡಿದ ಅದ್ವೈತವು ಬರ್ಗಸನ್ನನಿಗಿಂತ ಎಷ್ಟೋ ಮುಂದಿದೆ ಎಂದೆನ್ನಬಹುದು. ಬರ್ಗಸನ್ ಅಖಂಡಾನುಭವದ ಬಗೆಗೆ ಹೇಳುತ್ತಾನಾದರೂ ಅದ್ವೈತದ ಜ್ಞಾನ ಅನುಭವಗಳಿಗಿರುವ ಸ್ಪಷ್ಟತೆ ಪರಿಪೂರ್ಣತೆ ಅದರಲ್ಲಿಲ್ಲ.

ಬೊಸಾಂಕ್ವೆಟನ ಪ್ರಕಾರ ಆ ಪರಿಪೂರ್ಣನೆ ನಿಜವಾದ ಪುರುಷ, ಮಿಕ್ಕೆಲ್ಲ ಜೀವಿಗಳು ಆತನ ಅಂಶಮಾತ್ರರು. ಆ ಏಕೋದೇವನನ್ನು ವಿಭಜಿಸಿ ನಿನ್ನದೆಷ್ಟು, ದೇವನದೆಷ್ಟು ಎಂದು ಒಡೆದು ಹೇಳಲು ಪ್ರಯತ್ನಿಸುವವರೂ ಇದ್ದಾರೆ ಎನ್ನುವ ಇವನು, ಆ ಪರಿಪೂರ್ಣನಲ್ಲಿ ವಿಲೀನರಾಗುವದೇ ನಮ್ಮ ಗುರಿ. ಅತ್ತತ್ತ ಸಾಗುವದೇ ನಮ್ಮ ಪ್ರಗತಿ ಎಂದೂ ಬೋಧಿಸಿದ್ದಾನೆ.

ಅದ್ವೈತದ 'ಪರಿಪೂರ್ಣ' ಸಿದ್ಧಾಂತವನ್ನು ತೀರ ಸಮೀಪಿಸಿದವನೆಂದರೆ ಬ್ರಾಡ್ಲೆ. ಆತನ Appearance and Reality ಉದ್ಬೋಧಕ ತತ್ತ್ವಜ್ಞಾನಗ್ರಂಥವಾಗಿದೆ. "ಅಪ ರಿಪೂರ್ಣತೆ, ಚಂಚಲತೆ, ಅತೃಪ್ತತೆ ಇವು ಸಾಂತರ ಪಾಲಿಗೆ ಬಂದುವಾಗಿವೆ. ನಿಜ ನುಡಿಯಬೇಕೆಂದರೆ ಆ ಪರಿಪೂರ್ಣನನ್ನು ಬಿಟ್ಟರೆ ಇನ್ನಾರೂ ಪೂರ್ಣರಲ್ಲ" (ಪುಟ ೨೪೪). "ಆ ಪರಿಪೂರ್ಣನಲ್ಲಿ ಅನೇಕಾತ್ಮಗಳಿವೆಂಬುದು ನಿಜವಲ್ಲ, ಕೇವಲ ಭ್ರಮೆ" (ಪುಟ ೩೦೫,) "ಸಾಕ್ಷಾತ್ಕಾರವಾದೊಡನೆ ಸಾಂತ ಅನಂತದಲ್ಲಿ ಲೀನನಾಗು ತ್ತಾನೆ." (ಪುಟ ೪೮೯). "ಪರಿಪೂರ್ಣ ಪರಮಾತ್ಮನಲ್ಲಿ ಬೆರೆಯುವದೇ ಸಕಲ ಜೀವಾತ್ಮರ ಗುರಿ" ಎಂದು ಆತನ ಖಂಡಿತಾಭಿಪ್ರಾಯ. "ಪರಿಪೂರ್ಣವಲ್ಲದ್ದು, ನಿಜ ವಲ್ಲದ್ದು ಗತಿಶೀಲವಾಗಿರುತ್ತದೆ. ಪರಿಪೂರ್ಣನಿಗೆ ಋತುಗಳಿಲ್ಲ; ಪರ್ಣಪುಷ್ಪ ಫಲಗಳನ್ನು ಏಕಕಾಲಕ್ಕೆ ಭರಿಸುತ್ತಾನೆ, ಧರಿಸುತ್ತಾನೆ. ನಿಜಜ್ಞಾನದ ಫಲವಾಗಿ ಪರಿ ಪೂರ್ಣನನ್ನು ಸದ್ಯಃ ಸಾಕ್ಷಾತ್ಕರಿಸಿಕೊಳ್ಳಬಹುದು ಎಂದು ಈ ಸಂಸ್ಕೃತ ಅವತರ ಣಿಕೆಗಳು ಹೇಳುತ್ತವೆ.

"ಅತ್ರ ಬ್ರಹ್ಮ ಸದಶ್ನುತೆ ದೃಷ್ಟಿಂ ಜ್ಞಾನಮಯಿಂ ಕೃತ್ವಾ ಪಶ್ಯತ್ ಬ್ರಹ್ಮ-ಮಯಂ ಜಗತ್."

ಆಧುನಿಕ ಪಾಶ್ಚಾತ್ಯ ತತ್ತ್ವಜ್ಞಾನವು ನಿಜತ್ವ ಹಾಗೂ ಅನೇಕತ್ವಗಳ ಕುರಿತು ನವ-ನವೀನ ಸಂಶೋಧನೆಗಳನ್ನು ಪ್ರಾರಂಭಿಸಿದೆ. ಆದರೆ ಪಾಶ್ಚಾತ್ಯ ತತ್ತ್ವಜ್ಞಾನವು

ತನ್ನ —ಉದಾತ್ತ ಘಟ್ಟದಲ್ಲಿ ಪರಿಪೂರ್ಣನ ಏಕತ್ವವನ್ನು ಪ್ರತಿಪಾದಿಸಿದೆ. ಏಕತ್ವವು ನಾನಾತ್ವವನ್ನೂ ನಾನಾತ್ವವು ಏಕತ್ವವನ್ನು ಸ್ಪಷ್ಟೀಕರಿಸಬೇಕಾಗಿದೆ. ಡಬ್ಲೂ. ಆರ್. ಸೋರ್ಲೋನ ಈ ಅವತರಣಿಕೆ ಗಮನಾರ್ಹವಿದೆ.

"ಧರ್ಮಜಾಗ್ರುತಿಯ ಉತ್ಕ್ರಾಂತಿಯಿಂದಾಗಿ ಏಕತ್ವದ ಕಲ್ಪನೆ ಬಂದಿದೆ. ಅಧ್ಯಾತ್ಮಿಕ ಅನುಭವಕ್ಕೆ ತತ್ತ್ವಜ್ಞಾನದ ವ್ಯಾಖ್ಯೆ ದೊರೆತಿದೆ. ಆದುದರಿಂದ ಆಸ್ತಿಕವಾದವು ಧರ್ಮಜಾಗೃತಿಯ ಅಂಶಗಳಿಗೆ ಸಮರ್ಥನೆ ಮಾತ್ರ ನೀಡುವದಲ್ಲ. ವಿವಿಧತತ್ತ್ವಜ್ಞಾನಗಳ ಮೇಲೆ ಧರ್ಮವು ಬೀರಿದ ಪ್ರಭಾವವನ್ನು ಕುರಿತು ಆಳವಾದ ಕೂಲಂಕಷವಾದ ಪರಾಮರ್ಶೆ ನಡೆಸಬೇಕು." □

# ಮಠಗಳು :
# ಅವು ಏನು ಮಾಡಬಲ್ಲವು ?

ಶ್ರೀ ಪಿ. ವ್ಹಿ. ಆಚಾರ್ಯ

ನಮ್ಮ ದೇಶದಲ್ಲಿ ಮಠಗಳ ಉದಯ ಎಂದು ಆಯಿತೋ ಹೇಳುವುದು ಕಷ್ಟ. ವೈದಿಕ ಕಾಲದಲ್ಲಿ ಬಹುಶಃ ಸಂಸ್ಥಾತ್ಮಕ ಧರ್ಮ ಇದ್ದಿಲ್ಲ. ಉಪನಿಷತ್ ಮತ್ತು ಮಹಾಭಾರತ ಕಾಲದಲ್ಲಿ ತತ್ವ ಚಿಂತನ ಮತ್ತು ತತ್ವಬೋಧನಕ್ಕಾಗಿ ಅರಣ್ಯಗಳಲ್ಲಿ ಆಶ್ರಮಗಳು ಇದ್ದವಾದರೂ ಅವು ಗ್ರೀಸಿನಲ್ಲಿ ಸಾಕ್ರೆಟೀಸ್, ಪ್ಲೇಟೋ, ಅರಿಸ್ಟಾಟಲರ "ಜಿಮ್ನಾಶಿಯಂ" ಮಾದರಿಯವಾಗಿದ್ದಿರಬಹುದು. ಧರ್ಮಕ್ಕೆ ಮಠಗಳಂಥ ಕೇಂದ್ರ ಸಂಸ್ಥೆಗಳು ಬೌದ್ಧ ಮತ್ತು ಜೈನರಿಂದ ಪ್ರಾರಂಭವಾದವೆಂದು ತೋರುತ್ತದೆ. ಇದರಲ್ಲಿ ಆಶ್ಚರ್ಯಪಡತಕ್ಕದ್ದೇನೂ ಇಲ್ಲ. ಜನಸಾಮಾನ್ಯರನ್ನು ಗಮನಕ್ಕೆ ತೆಗೆದುಕೊಂಡ ಈ ಧರ್ಮಗಳು "ಸಂಘ" ಸ್ವರೂಪದ ಧರ್ಮೋಪದೇಶವನ್ನು ಅನಿವಾರ್ಯವಾಗಿಯೇ ಕೈಕೊಳ್ಳಬೇಕಾಗಿತ್ತು. ಆಶ್ರಮಗಳು ಅರಣ್ಯ ಕೇಂದ್ರಿತವಾಗಿದ್ದರೆ ವಿಹಾರ ಮೊದಲಾದ ಈ ಹೊಸ ಧರ್ಮಗಳು ಸಂಘಗಳು ನಗರ ಕೇಂದ್ರಿತವಾಗಿದ್ದವು. ನೂರಾರು ಸಾವಿರಾರು ಸಂನ್ಯಾಸಿಗಳೂ (ಸಂನ್ಯಾಸಿನಿಯರೂ) ಒಟ್ಟಾಗಿ ವಾಸಿಸುತ್ತಿದ್ದದ್ದರಿಂದ ಅವರಲ್ಲಿ ಶಿಸ್ತು ಕಾಪಾಡಿ ಕಾರ್ಯ ವಿತರಣೆ ಮಾಡಲು ಅಧಿಕಾರ ಸಂಪನ್ನರಾದ ಮುಖ್ಯಸ್ಥರಿರುವುದೂ ಅವಶ್ಯವಾಗಿತ್ತು.

ಬೌದ್ಧ ಜೈನ ಧರ್ಮಗಳ ಒಂದು ವಿಶೇಷವೆಂದರೆ (ಮುಂದೆ ಕ್ರೈಸ್ತ ಧರ್ಮವೂ ಈ ಪದ್ಧತಿಯನ್ನೇ ರೂಪಿಸಿಕೊಂಡಿತು) ಧರ್ಮವನ್ನು ಅರಸಿಕೊಂಡು ಜಿಜ್ಞಾಸುಗಳು ಬರುವುದರ ಬದಲಾಗಿ ಧರ್ಮವೇ ಜನರ ಬಾಗಿಲಿಗೆ ಬರುವಂತೆ ವ್ಯವಸ್ಥೆಯನ್ನು ಮಾಡಿದ್ದು. ಬೌದ್ಧ ಜೈನರ ಕಾಲದಲ್ಲಿ ಹೀಗೆ ಧರ್ಮಕ್ಕೆ ಸಂಘಟನಾ ರೂಪ ಬಂತು. ವೈದಿಕ ಪಂಥಗಳು ಮತ್ತು ಈ ದೇಶದಲ್ಲಿ ಬೇರೆಯೇ ಪರಂಪರೆಗಳನ್ನನುಸರಿಸಿ ಅನೂಚಾನವಾಗಿದ್ದ ಅವೈದಿಕ ಆದರೆ ಈಶ್ವರೀಯವಾದ ಪಂಥಗಳು ಕೂಡ ಕೆಲವೇ ಕಾಲದಲ್ಲಿ ಧರ್ಮಕ್ಕೆ ಸಂಘಟಿತ ಸ್ವರೂಪ ಕೂಡುವುದರಲ್ಲಿ ಮತ್ತು ಜನಸಾಮಾನ್ಯರನ್ನು ಆಕರ್ಷಿಸಿ ದೀಕ್ಷಾ ಮೂಲಕವಾಗಿ ಜನರನ್ನು ಒಂದು ಧರ್ಮಕೇತನದ ಕೆಳಗೆ ತರುವುದರಲ್ಲಿ

ಅನುಕೂಲತೆ ಇರುವುದನ್ನೂ ಅದರಿಂದ ಒದಗುವ ಶಕ್ತಿಯನ್ನೂ ಮನಗಂಡವು. ಹೀಗೆ ಶ್ರೀ ಶಂಕರಾಚಾರ್ಯರೂ ಅನಂತರ ಬಂದ ಅನೇಕ ಆಚಾರ್ಯರೂ ಮಠಪೀಠಗಳನ್ನು ಸಂಘಟಿಸಿದ್ದನ್ನು ಕಾಣುತ್ತೇವೆ. ದಕ್ಷಿಣದಲ್ಲಿ ಪೂರ್ವ ಪರಂಪರೆಯಿಂದ ನಡೆದು ಬಂದಿದ್ದ ಅವೈದಿಕ ಪಂಥಗಳೂ ಅದೇ ಸಮಯದಲ್ಲಿ ಅಥವಾ ಸ್ವಲ ಹಿಂದೆ ಮುಂದೆ, ಮಠಗಳ ಮೂಲಕ ಒಂದು ಧಾರ್ಮಿಕ ಪಂಥದ ಜನರ ಚಟುವಟಿಕೆಗಳಿಗೂ ಚಿತ್ರಕ್ಕೂ ಒಂದು ಕೇಂದ್ರವನ್ನು ಒದಗಿಸುತ್ತ ಬಂದದ್ದೂ ಗೋಚರವಾಗುತ್ತದೆ. ಬೌದ್ಧಾದಿ ನಿರೀಶ್ವರೀಯ ಪಂಥಗಳು ಕೊನೆಗೆ ತಮ್ಮ ವಿರೋಧಿಗಳ ಈ ಸಂಘಟನೆಗೆ ಸ್ರೋತ ಹಾಗೆಯೂ ತೋರುತ್ತದೆ.

ಜನರ ಅತ್ಯಂತ ಆತ್ಮೀಯ ಭಾವನೆ ನಂಬಿಕೆಗಳ ಕೇಂದ್ರಗಳಾಗಿ ಬೆಳೆದು ಬಂದ ಮಠಗಳ ಪ್ರಚಂಡ ಶಕ್ತಿಯನ್ನು ರಾಜರು ಗಮನಿಸಿ, ಅವುಗಳ ಆಶೀರ್ವಾದ ಬಲವಿದ್ದರೆ ತಮ್ಮ ಆಳಿಕೆ ಹೆಚ್ಚು ಭದ್ರವಾಗುವುದೆಂಬುದಕ್ಕಾಗಿಯಾದರೂ ಅವುಗಳಿಗೆ ದತ್ತಿ–ದಾನಗಳನ್ನು ಕೊಟ್ಟರು. ಇತರ ಅನುಕೂಲವಂತ ಜನರಿಗಂತೂ ಇಂಥ ದತ್ತಿ–ದಾನಗಳು ಪುಣ್ಯಕರ, ಪಾಪಹರಗಳಾಗಿದ್ದವು. ಈ ಪ್ರಕಾರ ಮಠಗಳ ಹತ್ತಿರ ಆಸ್ತಿಯೂ ತಕ್ಕ ಪ್ರಮಾಣದಲ್ಲಿ ಕೂಡಿ ಬಿತ್ತು. ಅದರಿಂದ ಅವುಗಳಿಗಲ್ಲಿ ಬರೇ ಧಾರ್ಮಿಕ ಸತ್ವವಲ್ಲದೆ ಲೌಕಿಕ ಶಕ್ತಿಯೂ ಸಂಚಿತವಾಯಿತು.

ಮಠಗಳ ಇಂದಿನ ಪಾತ್ರವನ್ನು ನಾವು ನಿರ್ಧರಿಸಬೇಕಾದರೆ ಹಿಂದೆ ಅವು ಆಡಿದ ಪಾತ್ರದ ಸ್ವರೂಪವನ್ನು ವಿಶದಿಸಿಕೊಳ್ಳಬೇಕಾಗುತ್ತದೆ. ರಾಜವಂಶಗಳ, ಪಾಳೆಯ ಪಟ್ಟುಗಳ ಉದಯ ಅಸ್ತಮಾನಗಳಿಂದ ಪದೇ ಪದೇ ಅವ್ಯವಸ್ಥಿತವಾಗುತ್ತಿದ್ದ ರಾಜಕೀಯ ಪ್ರಭುತ್ವದ ಅನಿಶ್ಚಿತತೆಯ ನಡುವೆ ಈ ಪರಂಪರಾಗತ ಮಠಗಳು ಒಂದು ಶಾಶ್ವತ ಶಕ್ತಿ ಕೇಂದ್ರಗಳಾಗಿದ್ದವು. ರಾಜಕೀಯ ನಿಷ್ಠೆಗಳು ಬದಲಾಗುತ್ತಿದ್ದರೂ ಧರ್ಮಪಂಥಗಳ ಪ್ರತೀಕಗಳಾಗಿದ್ದ ಮಠಗಳ ಮೇಲೆ,–ಆಯಾ ಗುಂಪಿನದೇ ಆಗಿರಲೊಲ್ಲದೇಕೆ,–ಇದ್ದ ನಿಷ್ಠೆ ಏಕರೂಪವಾಗಿತ್ತು. ಈ ದೃಷ್ಟಿಯಿಂದ ರಾಜರೂ ರಾಜಕೀಯ ಮಹತ್ವಾಕಾಂಕ್ಷೆಯುಳ್ಳವರೂ ಮಠಗಳನ್ನು ಎದುರು ಹಾಕಿಕೊಳ್ಳಲು ಧೈರ್ಯ ಮಾಡುತ್ತಿರಲಿಲ್ಲ. ಆಕಸ್ಮಾತ್ತಾಗಿ ಮಠ ಮಾನ್ಯಗಳ ಮೇಲೆ ದಾಳಿಯಾಗಿ ಅವುಗಳಿಗೆ ನಷ್ಟವೊದಗಿದರೂ ಬಹಳ ಬೇಗನೆ ಅವುಗಳಿಗೆ ಪರಿಹಾರವೊದಗಿಸಿ ಮತ್ತಷ್ಟು ದತ್ತಿ ಕೊಡುವ ಮೂಲಕ ರಾಜರು ಕ್ಷೋಭೆಯನ್ನು ತಡೆಗಟ್ಟಿದ್ದು ಶಾಸನಗಳಿಂದ ಕಂಡು ಬರುತ್ತದೆ. ರಾಜ್ಯಕರ್ತರು ಮಠಗಳಿಗೆ ಅಂಜಿಯೇ ನಡೆಯುತ್ತಿದ್ದಂತೆ ಕಾಣುತ್ತದೆ. ಸ್ವತಃ ರಾಜನ ಧಾರ್ಮಿಕ ನಂಬಿಕೆಗಳೇನೇ ಇರಲಿ, ಸಾಮಾನ್ಯವಾಗಿ ಎಲ್ಲ ಧರ್ಮಗಳ ಮಠಗಳಿಗೂ ಅಷ್ಟಿಷ್ಟು ಸಹಾಯವನ್ನು ಅವನು ಮಾಡುತ್ತಲೇ ಇದ್ದನು. ಕೆಲ ಮಟ್ಟಿಗೆ ರಾಜ್ಯ ಶಕ್ತಿಗಿಂತ ಈ ಧಾರ್ಮಿಕ ಶಕ್ತಿ ಬಲಿಷ್ಠವಾಗಿತ್ತೆಂದೇ ಹೇಳಬಹುದು. ಕ್ರೈಸ್ತ ಜಗತ್ತಿನಲ್ಲಿ ರೋಮಿನ ಪೋಪರು ಸಂಪಾದಿಸಿದ ರಾಜಕೀಯ ಪ್ರಭಾವವನ್ನು ಭಾರತದಲ್ಲಿ ಯಾವ ಮಠಗಳೂ ಸಂಪಾದಿಸಲಿಲ್ಲ ಎಂಬುದು ನಿಜ. ಆದರೂ ಮುಸಲ್ಮಾನರ ರಾಜ

ಕೀಯ ಪ್ರಭುತ್ವಕ್ಕೆದುರಾಗಿ ಹಿಂದೂ ಪ್ರಭುತ್ವವನ್ನು ಕಟ್ಟುವುದಕ್ಕೆ ಮಠಗಳು ಯಶಸ್ವಿ ಪ್ರಯತ್ನ ಮಾಡಿದ ಉದಾಹರಣೆ ಒಂದಾದರೂ ನಮಗೆ ಸಿಗುತ್ತದೆ.

ಈ ಮಠಗಳು ವಹಿಸುತ್ತಿದ್ದ ಸಾಮಾಜಿಕ ಪಾತ್ರವೇನು ? ಒಂದು ಹೊಸ ಮತ ಪ್ರಾರಂಭವಾದಾಗ ಅದಕ್ಕೆ ಒಂದೆಡೆ ವಿದ್ವಾಂಸರಲ್ಲಿ ಮತ್ತು ಇನ್ನೊಂದೆಡೆ ಜನ-ಸಾಮಾನ್ಯರಲ್ಲಿ ಅನುಯಾಯಿಗಳನ್ನು ಸಂಪಾದಿಸುವ ಕಾರ್ಯವನ್ನು ಅವು ನಿರ್ವಹಿಸಿರಬೇಕು. ಹಾಗೆಯೆ ಪ್ರತಿವಾದಿಗಳನ್ನು ಎದುರಿಸಿ ತಮ್ಮ ಮತದ ಸಮಂಜಸತ್ವವನ್ನು ನಿರಂತರವಾಗಿ ಎತ್ತಿ ಹಿಡಿಯುವುದಕ್ಕಾಗಿ ವಿದ್ವಾಂಸರನ್ನು ತರಬೇತಿಗೊಳಿಸುವ ನೆಲೆ-ಗಳಾಗಿಯೂ ಅವು ವರ್ತಿಸಿದವು. ಹಾಗೆಯೇ ತಮ್ಮ ಸಾಮಾನ್ಯ ಅನುಯಾಯಿಗಳಿಗೆ ತಮ್ಮ ಮತದ ಮೂಲ ತತ್ವಗಳ ಬಗ್ಗೆ ಸಾಮಾನ್ಯ ತಿಳುವಳಿಕೆಯನ್ನಾದರೂ ಪ್ರವಚನಾದಿಗಳ ಮೂಲಕ ಒದಗಿಸುವ ವ್ಯವಸ್ಥೆಯನ್ನೂ ಅವು ಮಾಡಿದವು. ಅನುಷ್ಠಾನಗಳ ಮೂಲಕ ಜನರಿಗೆ ಆಧ್ಯಾತ್ಮಿಕ ಮನಸ್ಸಮಾಧಾನವನ್ನು ನೀಡುವ ಕೇಂದ್ರಗಳು ಅವಾದವು. ಮಠದ ಮತ್ತು ಅದರ ಸ್ವಾಮಿಗಳ ಮೇಲೆ ಭಕ್ತಿಯೂ ಭಯವೂ ಕೂಡುವಂತೆ ಮಾಡಿ ಅನುಯಾಯಿಗಳ ಸಂಘಟನೆಗೆ ಅವು ಅಧ್ಯಾತ್ಮಶಕ್ತಿಯನ್ನು ಪ್ರಭುತ್ವಶಕ್ತಿಯನ್ನೂ ತಮ್ಮಲ್ಲಿ ಏಕತ್ರಿತಗೊಳಿಸಿಕೊಂಡವು. ಮಠಗಳ ಧನ ಸಂಪತ್ತು ಅವುಗಳ ಪ್ರಭುಶಕ್ತಿಗೆ ಬಲವನ್ನು ನೀಡಿತು. ಧರ್ಮ ಮತ್ತು ಅರ್ಥಶಾಸ್ತ್ರಗಳಲ್ಲಿ ಪ್ರಜೆಯ ಹೆಚ್ಚಿನ ಲೌಕಿಕ ಸಾಮಾಜಿಕ ಆಚರಣೆಗಳಲ್ಲಿ ಬಹು ಭಾಗ ರಾಜನ ಅಥವಾ ರಾಜಪ್ರತಿನಿಧಿಯ ನ್ಯಾಯಸ್ಥಾನದ ನಿರ್ಣಯಗಳಿಗೆ ಒಳಪಟ್ಟಿತ್ತು. ಮಠಗಳು ಪ್ರಬಲವಾದ ನಂತರ,ಒಂದು ಸಮಾಜದೊಳಗಿನ ಆಚರಣೆಗಳಲ್ಲಿನ ನಿಯಮ ಭಂಗ ಮತ್ತು ವಿವಾದಗಳ ಮೇಲೆ ನಿರ್ಣಯ ನೀಯುವ ಅಧಿಕಾರವನ್ನು ಆ ಸಮಾಜದ ಮಠಗಳು ವಶಪಡಿಸಿಕೊಂಡಂತೆಯೂ ಕಾಣುತ್ತದೆ. ಹೀಗೆ ದಾನ ದಂಡ ಶಕ್ತಿಗಳನ್ನು ಸಂಪಾದಿಸಿಕೊಂಡ ಮಠಗಳು ಒಂದು ಮಿತಿಯ ವರೆಗೆ ರಾಜ್ಯ ಶಕ್ತಿಗೆ ಸಮಾಂತರವಾದ ಪ್ರಭುಶಕ್ತಿಯಾದವು. "ಸ್ವಾಮಿ" ಶಬ್ದವೇ ಈ ಅಂಶವನ್ನು ಸೂಚಿಸಲು ಸಾಕು. ಅದು ಸಾಲದಿದ್ದರೆ, ಅನೇಕ ಮಠಾಧಿಪತಿಗಳು ತಮ್ಮನ್ನು "ಮಹಾರಾಜ"ರೆಂದು ಹೆಸರಿಸಿಕೊಳ್ಳುವುದನ್ನೂ ಅವರು "ಪಟ್ಟವೇರು"ವುದನ್ನು ಅವರ ಅಸನವೂ " ಸಿಂಹಾಸನ "ವೆನಿಸುವುದನ್ನೂ ಅವರದನ್ನು "ಆಧ್ಯಾತ್ಮ ಸಾಮ್ರಾಜ್ಯ" ಎಂದು ಕರೆಯುವುದನ್ನು ಸಾರ್ವಜನಿಕ ಸಮಾರಂಭಗಳಲ್ಲಿ ಅವರು ರಾಜಸದೃಶ ವೇಷಭೂಷಿತರಾಗಿ ರಾಜಸದೃಶ ಪರಿವಾರ ಸಮೇತವಾಗಿ ಕಾಣಿಸಿಕೊಳ್ಳುವದನ್ನು ಉಲ್ಲೇಖಿಸಬಹುದು. ಸರ್ವಸಂಗಪರಿತ್ಯಾಗಿಗಳಾದ ಯತಿಗಳಿಗೆ ಈ ವೈಭವದ ಸಂಗವಾಗುವುದು ಅವರ ಅಧಿಕಾರದಲ್ಲಿ ಧಾರ್ಮಿಕ ರಾಜಕಗಳೆರಡೂ ಮಿಶ್ರವಾಗಿದ್ದುದನ್ನೇ ತೋರಿಸುತ್ತದೆ. ರಾಜನ ಹಾಗೆಯೇ ಮಠಾಧಿಪತಿಯೂ ತನ್ನ ಅನುಕೂಲವಂತ ಅನುಯಾಯಿಂದ ಇಷ್ಟು ಕೊಟ್ಟುಬಿಡಬೇಕು ಎಂದು ಆಜ್ಞಾಪೂರ್ವಕವಾಗಿ ತೆಗೆದುಕೊಳ್ಳುವಷ್ಟು ಅಧಿಕಾರವನ್ನು ಸಂಪಾದಿಸಿದ ಉದಾಹರಣೆಗಳುಂಟು.

ಇದು ಕಳೆದ ಶತಮಾನದ ಅಂತ್ಯದಲ್ಲಿ ಇದ್ದ ಸ್ಥಿತಿ, ಎಲ್ಲಾ ಅಧಿಕಾರದ ಹಾಗೆ

ಮಠಗಳ ಅಧಿಕಾರವೂ ಕಾಲ ಕಳೆದಂತೆ ಸ್ವಾರ್ಥದ ಸೆಳವಿಗೆ ಸಿಕ್ಕು ಬಾಹ್ಯ ನಿಯಂತ್ರಣವಿಲ್ಲದ್ದರಿಂದ ಕೊಳೆತ ನೀರಾಗತೊಡಗಿತ್ತು. ಮಠಗಳು ನಡೆಸಬೇಕಾಗಿದ್ದ ಸಾಮಾಜಿಕ ಕರ್ತವ್ಯಗಳು ಕೇವಲ ಸಾಂಕೇತಿಕವಾಗಿಬಿಟ್ಟಿದ್ದವು. ಹೊರತು ಅರ್ಥವತ್ತಾಗಿ ಉಳಿದಿರಲಿಲ್ಲ. ಅವುಗಳ ಮೇಲೆ ಜನರಿಗಿದ್ದ ನಿಷ್ಠೆ ಒಂದು ಗತಾನುಗತಿಕ ಅಭ್ಯಾಸವಾಗಿತ್ತೇ ಹೊರತು ಆ ನಿಷ್ಠೆಯಲ್ಲಿ ಸತ್ಯ ಉಳಿದಿರಲಿಲ್ಲ. ವಿವಿಧ ಧರ್ಮಗಳೂ ಮಠಗಳು ಆ ವೇಳೆಗಾಗಲೇ ಭಾರತೀಯ ಸಮಾಜದಲ್ಲಿ ಒಂದು ಪಾರಸ್ಪರಿಕ ಸಮತೋಲಕ್ಕೇ ಬಂದು ಬಿಟ್ಟಿದ್ದುದರಿಂದ ತಂತಮ್ಮ ಅಸ್ತಿತ್ವವನ್ನು ಎತ್ತಿ ಹಿಡಿಯುವುದಕ್ಕಾಗಿ ಅವು ಧಾರ್ಮಿಕ ವಿದ್ಯಾರಂಗದಲ್ಲಿ ಕೂಡ ಹೊಸಹೊಸ ಪ್ರಯತ್ನಗಳನ್ನು ಕೈಕೊಳ್ಳಬೇಕಾದ ಅಗತ್ಯ ಉಳಿದಿರಲಿಲ್ಲ. ಜಾತಿನಿಷ್ಠವಾದ ಈ ದೇಶದಲ್ಲಿ ಜಾತಿ ಭೇದ ವಿರೋಧಿಗಳಾಗಿ ತಲೆಯೆತ್ತಿದ ಮತಗಳು ಕೂಡ ಜಾತಿಪದ್ಧತಿಗೆ ಹೊಂದಿಕೊಂಡು ಬಿಟ್ಟಿದ್ದರಿಂದ ಪರಮತದವರನ್ನು ಒಲಿಸಿಕೊಂಡು ತಮ್ಮ ಮತವನ್ನು ವಿಸ್ತರಿಸುವ ಹಂಬಲವೂ ಇಲ್ಲವಾದೆ ಧಾರ್ಮಿಕ ವಿದ್ಯೆಯೂ ಒಂದು ವಿಧವಾದ ಬಾಯಿಪಾಠದ ಮಟ್ಟಕ್ಕಿಳಿದು ಹೋಗಿತ್ತು, ಇಸ್ಲಾಮಿನ ಕೈಕಸುವು ತಗ್ಗಿದ ಮೇಲೆ ಕೂಡ ಅವರ ಅನುಯಾಯಿಗಳನ್ನು ಮತಾಂತರ ಮಾಡಿಕೊಳ್ಳುವ ವಿಚಾರ ಯಾವ ಪಂಥದವರಿಗೂ ಹೊಳೆಯದಿದ್ದುದನ್ನು ನೋಡಿದರೆ ಹಿಂದೂ ಮತ ಎಷ್ಟು ಮಟ್ಟಿಗೆ ಕೊರಡಾಗಿ ಹೋಗಿತ್ತೆಂದು ಗೊತ್ತಾಗುತ್ತದೆ. ಇದರ ಮೇಲೆ ಕ್ರೈಸ್ತಮತ ತನ್ನ ಹೆಚ್ಚು ನವಿರಾದ ಪದ್ಧತಿಯಿಂದ ಹೊಸ ಮತಾಂತರದ ಸೂತ್ರವನ್ನು ಪ್ರಾರಂಭಿಸಿತ್ತು. ಅದನ್ನು ಹಿಂದೂ ಮಠಗಳು ಅಸಹಾಯದೃಷ್ಟಿಯಿಂದಲೇ ಕಂಡವು. ಸಾಮಾನ್ಯ ಅನುಯಾಯಿಗಳು ಕೂಡ ಇದು ಅಪರಿಹಾರ್ಯವಾದ ವಿಪತ್ತೆಂದು ಬಗೆದರೇ ಹೊರತು ಆ ಬಗ್ಗೆ ಏನೂ ಮಾಡಬೇಕೆಂದು ಎಣಿಸಲಿಲ್ಲ. ಬಳಗದಲ್ಲಿ ಉಳಿಯಬೇಕೆಂದವರು ಉಳಿದರು; ಹೋದವರು ಹೋಗಿಬಿಟ್ಟರು. ಹೀಗಿತ್ತು ಪರಿಸ್ಥಿತಿ.

ನಮ್ಮಲ್ಲಿ ಅನೇಕ ಸಂಪ್ರದಾಯವಂತರೂ ಧರ್ಮಾಭಿಮಾನಿಗಳೂ ಪಾಶ್ಚಾತ್ಯವಿದ್ಯೆ ನಮ್ಮನ್ನು ಕೆಡಿಸಿತೆಂದು ಹೇಳುವುದುಂಟು. ಆದರೆ ನಮ್ಮ ಧರ್ಮಗಳ ವಿಷಯದಲ್ಲಿ ನಮಗೆ ಅರ್ಥ ಪೂರ್ಣವಾದ ಆಸಕ್ತಿಯನ್ನು ಹುಟ್ಟಿಸುವುದಕ್ಕೆ ಪಾಶ್ಚಾತ್ಯ ವಿದ್ಯೆಯೇ ನೆರವಾಯಿತೆಂಬ ಮಾತು ನಮಗೆ ಅಷ್ಟೊಂದು ಅಭಿಮಾನದ ಸಂಗತಿಯಾಗದಿದ್ದರೂ ಸತ್ಯವಾದ ಮಾತು. ಪಾಶ್ಚಾತ್ಯರ ಸರ್ವಭಕ್ಷಕವಾದ ಬೌದ್ಧಿಕ ಹಸಿವು ಹಿಂದೂ ಧರ್ಮದಲ್ಲಿರುವ ಗುಣಗಳನ್ನು ಎತ್ತಿ ತೋರಿಸಿದ್ದನ್ನು ನಾವು ಓದಿಕೊಂಡ ಮೇಲೆಯೆ ನಮ್ಮ ಪುರಾತನರ ವೌಲ್ಯ ಪದ್ಧತಿ. ವಿಚಾರಧಾರೆಗಳ ಬಗ್ಗೆ ನಮಗೆ ನಿಜವಾದ ಆಸಕ್ತಿ ಮೂಡಿದ್ದು.

ಕೇವಲ ಲೌಕಿಕ ಪ್ರಯೋಜನಾಪೇಕ್ಷೆಯಿಂದ ನಾವು ಪಾಶ್ಚಾತ್ಯವಿದ್ಯೆಯನ್ನು ಅಭ್ಯಸಿಸಿದರೂ ಅದು ನಮ್ಮ ಮನೋವೃತ್ತಿಯ ಮೇಲೆ ಗಾಢವಾದ ಪ್ರಭಾವ ಬೀರದಿರಲಿಲ್ಲ. ತರ್ಕದ ಒರೆಗಲ್ಲಿಗೆ ಹಚ್ಚಿ ಪ್ರತಿಯೊಂದನ್ನೂ ಪರೀಕ್ಷಿಸುವ ಮತ್ತು ಯಾವುದನ್ನೂ ಕೇವಲ "ಬಾಬಾ ವಾಕ್ಯ ಪ್ರಮಾಣ"ದ ಮೇಲೆ ಅಂಗೀಕರಿಸ

ದಿರುವ ಪ್ರವೃತ್ತಿಯನ್ನು ಅದು ನಮಗೆ ದಯಪಾಲಿಸಿತು. ಹಿಂದೂ ಧರ್ಮದ ನಾನಾ ಮತ ಸಂಪ್ರದಾಯಗಳಲ್ಲಿ ಪ್ರತಿಯೊಂದರಲ್ಲಿಯೂ ಗುಣಗಳಿದ್ದರೂ ಆ ಗುಣಗಳಿಗೆ ಆಯಾ ಮತದ ಸಂಸ್ಥೆಗಳು ಉತ್ತಮ ಉದಾಹರಣೆಗಳಾಗಿಲ್ಲ ಎಂಬುದನ್ನು ಸುಶಿಕ್ಷಿತರು ಗಮನಿಸಿದರು. ಮಠಗಳೂ ಪುರೋಹಿತ ವರ್ಗದವರೂ ಸಮಾಜಕ್ಕೆ ಯಾವ ಪ್ರತಿಫಲವನ್ನೂ ಕೊಡದೆ ಸಮಾಜದಿಂದ ಸಾಧ್ಯವಿದ್ದಷ್ಟು ಸೆಳೆದುಕೊಳ್ಳುವ ಪರೋಪಜೀವಿಗಳೆಂಬ ಭಾವನೆ ಬೆಳೆದುಬಿಟ್ಟಿತು. ಹೀಗಾಗಿ ಮಠಗಳ ಮೇಲೆ ಅಸಡ್ಡೆ ಮತ್ತು ಒಂದು ತರಹದ ನಿಷ್ಕ್ರಿಯವಾದ ಬಂಡಾಯ ಪ್ರಾರಂಭವಾಗಿ ಬಿಟ್ಟಿತು. ನಿಯಮಾನುಷ್ಠಾನಗಳನ್ನು ಬಹಿರಂಗವಾಗಿ ಧಿಕ್ಕರಿಸಿದವರ ಮೇಲೆ ಕೂಡ ಕ್ರಮಕೈಕೊಳ್ಳುವ ಚೈತನ್ಯ ಮಠಗಳಲ್ಲಿ ಉಳಿಯಲಿಲ್ಲ,

ಈ ಶತಮಾನದ ಪೂರ್ವಾರ್ಧದಲ್ಲಿದ್ದ ಮಟ್ಟಿಗಲ್ಲದಿದ್ದರೂ ಬಹುಮಟ್ಟಿಗೆ ಇಂದಿಗೂ ಮಠಗಳ ಬಗ್ಗೆ ವಿದ್ಯಾವಂತರ ದೃಷ್ಟಿ ಇದೇ ಆಗಿದೆ. ಇದನ್ನು ನೋಡಿಯೇ ಸರಕಾರ ಹಿಂದೂಧರ್ಮದ ವೈಯಕ್ತಿಕ ರೀತಿನೀತಿಗಳಲ್ಲಿ ನಿರ್ಭಯವಾಗಿ ಕೈಹಾಕತೊಡಗಿತು,

ಮಠಗಳ ಇಳಿದುಹೋದ ಪ್ರತಿಷ್ಠೆಯ ಕಾರಣಗಳನ್ನು ಬದಕಿದರೆ ಅವು ಅನೇಕ ಕಾಲದಿಂದ ದೇಶದಲ್ಲಿ ಬದಲಾಗುತ್ತಿರುವ ಪರಿಸ್ಥಿತಿಯನ್ನು ಗಮನಿಸದಿರುವದೇ ಕಾರಣವೆಂದು ಹೇಳಬಹುದು. ಮಠಗಳಿಗೆ ಸಾಮಾಜಿಕ ಕರ್ತವ್ಯಗಳಿವೆ ಎಂಬ ಪ್ರಜ್ಞೆಯನ್ನು ಅವು ಕಳೆದುಕೊಂಡದ್ದರಿಂದಲೇ ಅವುಗಳ ಬಗ್ಗೆ ಅಸಡ್ಡೆ ಮೂಡಿತು. ಬಹುತರ ಮಠಗಳು ಬದಲಾದ ಪರಸ್ಥಿತಿಯಲ್ಲಿ ತಮ್ಮ ಸಾಮಾಜಿಕ ಪಾತ್ರವನ್ನು ಕುರಿತು ಚಿಂತಿಸದಿರುವುದು ಅವುಗಳ ಒಂದು ಕೊರತೆಯಾಗಿತ್ತು. ಪೂಜಾನುಷ್ಠಾನ ಉತ್ಸವಾದಿಗಳನ್ನು ಏರ್ಪಡಿಸುವುದರಿಂದ ಮಾತ್ರವೇ ತಮ್ಮ ಕರ್ತವ್ಯಪಾಲನೆಯಾಯಿತೆಂದು ಅವು ಎಣಿಸಿಕೊಂಡಿದ್ದವು. ಇಂದಿಗೂ ಈ ವಿಚಾರ ಧಾರೆ ಸಾಕಷ್ಟು ಮಠಾಧೀಶರಲ್ಲಿ ಉಳಿದುಕೊಂಡಿದೆ.

ಮಠಗಳ ಸಾಮಾಜಿಕ ಹೊಣೆಗಾರಿಕೆಗಳೇನು? ಎಂದು ಕೇಳಿದರೆ, ಜನರ ಸುಖದುಃಖಗಳಿಗೆ ಗಮನಕೊಡುವುದು ಎಂದು ಒಂದು ಮಾತಿನಲ್ಲಿ ಹೇಳಬಹುದು. ಆಧ್ಯಾತ್ಮಿಕವಾಗಿ ತೀರಾ ಮುಂದುವರಿದವರಿಗೆ ಹೇಳುವಂತೆ ಈ ಸಂಸಾರವೇ ದುಃಖದ ಮೂಲ ಎಂದು ಉಪದೇಶಿಸಿದರೆ ಸಾಲದು. ಈ ಉಪದೇಶವನ್ನು ಅರಗಿಸಿಕೊಳ್ಳಬಲ್ಲವರ ಸಂಖ್ಯೆ ಕಡಿಮೆ. ಇಹದ ದಿನ ದಿನದ ತಾಪತ್ರಯಗಳ ನಿವೃತ್ತಿಗೆ ವ್ಯವಸ್ಥೆ ಆಗಬೇಕು. ದೇವರನ್ನು ಆರಾಧಿಸಿರಿ, ಅಥವಾ ಇಂಥ ಯೋಗಿಯನ್ನು ನಂಬಿರಿ, ನಿಮ್ಮ ದುಃಖ ನಿವೃತ್ತಿಯಾಗುತ್ತದೆ. ಸಂಪತ್ತು ಬರುತ್ತದೆ ಇತ್ಯಾದಿ ಉಪದೇಶಗಳು ಟೊಳ್ಳಾಗಿ ಭಾಸವಾಗುತ್ತವೆ.

ನಮ್ಮ ಮಠಗಳು ಕ್ರೈಸ್ತ ಮಠಗಳಿಂದ ಕಲಿಯಬೇಕಾದ್ದು ಬಹಳ ಇದೆ. ಕ್ರೈಸ್ತ ಮತದಲ್ಲಿಯೂ ಕರ್ತವ್ಯ ಹೀನವಾದ ಅಧಿಕಾರದಿಂದ ಮಠಗಳು ತೀರ ಮಲಿನವಾದ ಕಾಲವೊಂದಿತ್ತು, ಆದರೆ ಪ್ರೊಟೆಸ್ಟಂಟ್ ಬಂಡಾಯದ ನಂತರ ಅವು ಎಚ್ಚೆತ್ತು ತುಂಬಾ ಕರ್ತವ್ಯ ಪರವಾಗಿವೆ.

ಮೊದಲನೆಯದು ವಿದ್ಯೆ. ವಿದ್ಯೆ ಪುರಾತನದಿಂದಲೂ ನಮ್ಮ ಮಠಗಳ ಒಂದು ಕಾರ್ಯರಂಗವಾಗಿತ್ತು. ಆದರೆ ಅದು ಕೇವಲ ಮತಸಂಬಂಧವಾದದ್ದಾಗಿತ್ತು. ಜೀವನೋಪಾಯಕ್ಕೆ ಸಾಧಕವಾದ ವಿದ್ಯೆಗಳು ಆಗ ವಂಶಪಾರಂಪರ್ಯವಾಗಿದ್ದುದರಿಂದ ಮಠಗಳಿಗೆ ಆ ಯೋಚನೆ ಇಲ್ಲದಿದ್ದುದು ಸಹಜವಾಗಿತ್ತು. ಆದರೆ ಈ ಶತಮಾನದಲ್ಲಿ ಯಾವ ಅಲ್ಪ ಜೀವನೋಪಾಯಕ್ಕೂ ಸಂಘಟಿತ ಸ್ವರೂಪದ ವಿದ್ಯೆ ಅಗತ್ಯವಾಗಿದೆ. ಅದಕ್ಕಾಗಿ ಲೌಕಿಕ ವಿದ್ಯಾಲಯಗಳ ಮಹತ್ವ ಹೆಚ್ಚಾಗಿದೆ. ಸುದೈವದಿಂದ ಈಗ ಎರಡು ಮೂರು ದಶಕಗಳಿಂದ ಮಠಗಳು, ಈ ಕಡೆಗೆ ಹೆಚ್ಚು ಗಮನ ಹರಿಸುತ್ತಿವೆ. ಮಠಗಳ ನೆರವಿನಿಂದ ದೇಶದಲ್ಲೆಲ್ಲಾ ವಿದ್ಯಾಲಯಗಳು ನಡೆಯುತೊಡಗಿವೆ. ಇದೊಂದರಿಂದಲೇ ನನ್ನಂತೆ ಮಠ ಸಂಸ್ಥೆಗಳನ್ನು ತಿರಸ್ಕಾರದಿಂದ ಕಾಣುತ್ತಿದ್ದ ನನ್ನಂಥವರು ತಂತಾವೇ ಮಠಗಳ ಕಡೆ ಆಕರ್ಷಿತರಾಗತೊಡಗಿದ್ದಾರೆ.

ಆದರೂ ಮಠಾಧಿಪತಿಗಳು. ಇನ್ನೂ ಸ್ವಲ್ಪ ಮುಂದೆ ಹೋಗಬಾರದೇ ಎನಿಸುತ್ತಿದೆ. ಕೇವಲ ಮತ ಸಂಬಂಧದ ಅಭ್ಯಾಸವಲ್ಲದೆ ಲೌಕಿಕ ವಿದ್ಯೆಗಳನ್ನು ಸ್ವತಃ ಅಧ್ಯಯನ ಮಾಡಿ ಪಾಂಡಿತ್ಯ ಸಂಪಾದಿಸಿ ವಿಶ್ವವಿದ್ಯಾಲಯಗಳಲ್ಲಿ ಅವರು ಅಧ್ಯಾಪಕರಾಗಲಾರರೇ–ತಾವೇ ನಡೆಸುವ ವಿದ್ಯಾಲಯಗಳಲ್ಲೇ ಎನ್ನಿ. ಇದು ತರುಣ ವಯಸ್ಸಿನ ಜನರು ಹೆಚ್ಚು ನೇರವಾಗಿ ಅವರ ಕಣ್ಮುಂದೆ ಬರುವರು. ಅವರ ಚಿತ್ತಗಳನ್ನು ರೂಪಿಸುವ ಅವಕಾಶ ಇವರಿಗೆ ಪ್ರಾಪ್ತವಾದಂತೆ ಅವರ ಸುಖದುಃಖಗಳ ನೇರ ಪರಿಚಯ ಇವರಿಗಾಗಿ ಬದಲಾದ ಪರಿಸ್ಥಿತಿಗೆ ಕೈಕೊಳ್ಳಬೇಕಾದ ಕಾರ್ಯಗಳ ಪ್ರಜ್ಞೆ ಇವರಿಗೆ ದೊರಕಲಾರದೆ ?

ಎರಡನೆಯದು ವೈದ್ಯಕ. ಮಾನವನ ದುಃಖ ಪರಿಹಾರ ಕ್ರೈಸ್ತ ಧರ್ಮದಷ್ಟೇ ಅಷ್ಟೇ ಹಿಂದೂ ಧರ್ಮದ ಆದರ್ಶವೂ ಆಗಿದೆ. ಯಾಕೋ ಏನೋ ಅದಕ್ಕೆ ಸಾಕಷ್ಟು ಪ್ರಾಧಾನ್ಯ ಸಿಗಲಿಲ್ಲ. ಮಠಗಳು ಔಷಧಾಲಯ, ಆಸ್ಪತ್ರೆ, ವೈದ್ಯಕೀಯ ಸಂಶೋಧನ ಸಂಸ್ಥೆಗಳಲ್ಲಿ ತೀವ್ರವಾದ ಆಸಕ್ತಿಯನ್ನು ವಹಿಸಬೇಕೆಂದು ನನಗೆ ತೋರುತ್ತದೆ. ಇದು ಮಠಗಳ ಮುಖ್ಯ ಧ್ಯೇಯವಾದ ದೈವಭಕ್ತಿಯ ಪ್ರಸಾರಕ್ಕೂ ಒಳ್ಳೆಯ ಮಾರ್ಗ ಎನಿಸುತ್ತದೆ. ರುಗ್ಣನ ಚಿತ್ತ ದೈವಾಭಿಮುಖವಾಗಿರುವಷ್ಟು ಸ್ವಸ್ಥನ ಚಿತ್ತ ಇರುವುದಿಲ್ಲ. ಈ ವಿಷಯದಲ್ಲಿಯೂ ಮಠಾಧಿಪತಿಗಳು ಸಹಾಯ ಮಾತ್ರ ಮಾಡದೆ ನೇರವಾಗಿಯೂ ಭಾಗವಹಿಸಿದರೆ ತುಂಬಾ ಪ್ರಯೋಜನವಾದೀತು. ಕ್ರೈಸ್ತರಲ್ಲಿ ರೋಗಿಯ ಮನೆಗೆ ಹೋಗಿ ಗುರುಗಳು ಧರ್ಮೋಪದೇಶ ಮಾಡುವ ಒಳ್ಳೇ ಪದ್ಧತಿ ಇದೆ.

ನನ್ನನ್ನು ಎಲ್ಲಕ್ಕೂ ಮಿಗಿಲಾಗಿ ದುಃಖಕ್ಕೆ ಗುರಿ ಮಾಡಿರುವುದೆಂದರೆ ಬದಲಾಗಿರುವ ಸಾಮಾಜಿಕ ಆರ್ಥಿಕ ಪರಿಸರದಲ್ಲಿ ಸಮಾಜದ ರೂಢಿ ಸಂಪ್ರದಾಯಗಳಲ್ಲಿ ಆಗಬೇಕಾದ ಅನಿವಾರ್ಯ ಬದಲಾವಣೆಗಳ ವಿಷಯದಲ್ಲಿ ಮಠಗಳ ಅನಾಸಕ್ತಿ. ಕಳೆದ ಶತಮಾನದಲ್ಲಿ ಸತೀ ಪದ್ಧತಿಯ ರದ್ಧತಿಯಿಂದಾರಂಭಿಸಿ ಈ ಶತಮಾನದ ಮಧ್ಯದಲ್ಲಿ ಬಹುಪತ್ನೀತ್ವ ನಿಷೇಧದ ವರೆಗೆ ಆದ ಧಾರ್ಮಿಕ ಸ್ವರೂಪದ ಸಾಮಾಜಿಕ ಸುಧಾರಣಾ

ಕಾಯದೆಗಳೆಲ್ಲ ಕೈಬೆರಳಲ್ಲೆಣಿಸುವಷ್ಟು ಸುಧಾರಣಾವಾದಿಗಳ ಪ್ರೋತ್ಸಾಹದಿಂದ, ವಿದೇಶಿ ಮತ್ತು ದೇಶಿ ಸರಕಾರಗಳಿಂದ ಜಾರಿಯಲ್ಲಿ ತರಲ್ಪಟ್ಟವಾಗಿವೆ. ಈ ಕಾನೂನುಗಳನ್ನೆಲ್ಲ ಮಠಾಧಿಪತಿಗಳನ್ನು ಕೇಳದೆ. ಹೆಚ್ಚಿನ ವೇಳೆ ಅವರ ವಿರೋಧವನ್ನು ಲೆಕ್ಕಿಸದೇ ಮಾಡಿದ್ದಾಗಿದೆ. ಮಠ ಸಂಬಂಧದಲ್ಲಿ ಅಧಿಕಾರ ಹೊಂದಿದವರನ್ನು ಮೂಲೆಗೊತ್ತಿ ರಾಜಕೀಯ ಮುಂಗೈ ಕಸುವಿನಿಂದ ಈ ಕಾನೂನುಗಳನ್ನು ಈ ಪ್ರಜಾಸತ್ತಾತ್ಮಕ ಯುಗದಲ್ಲಿಯೂ ಮಾಡಲು ಸಾಧ್ಯವಾಗುತ್ತಿದೆ ಎಂದರೆ ಮಠಗಳ ಅಸ್ತಿತ್ವ ನಿರರ್ಥಕವಾಗಿದೆಯೆಂದೇ ಅಲ್ಲವೆ ?

ಈ ಕಾನೂನುಗಳಲ್ಲಿ ಹೆಚ್ಚಿನವು ಸಮಾಜಕ್ಕೆ ಹಿತಕರವಾಗಿವೆಯೆಂಬುದನ್ನು ಒಪ್ಪಿಬಿಡಬಹುದು. ಆದರೆ ನಮ್ಮ ಧರ್ಮಾಧಿಕಾರಿಗಳು ಅವುಗಳಿಗೆ ಅನುಕೂಲಮತದವರಾಗಿರಲಿಲ್ಲ ಎಂಬುದೂ ಅಷ್ಟೇ ನಿಜ. ಇಂಥ ಸುಧಾರಣೆಗಳು ಮಠ ಪ್ರೇರಣೆಯಿಂದ ಅಲ್ಲದಿದ್ದರೂ ಬೆಂಬಲದಿಂದ ಬಂದಿದ್ದರೆ ಎಷ್ಟು ಒಳಿತಾಗುತ್ತಿತ್ತು ! ಕೆಥೋಲಿಕ ಕ್ರೈಸ್ತ ಪೀಠಾಧಿಪತಿಗಳಲ್ಲಿ ಸಂತತಿ ನಿಯಂತ್ರಣದಂಥ ವಿಷಯದಲ್ಲಿ ಆಗುತ್ತಿರುವ ಚರ್ಚೆಯನ್ನು ನೋಡಿದರೆ ಅದಕ್ಕಿಂತ ಎಷ್ಟೋ ಮಹತ್ವದ ವಿಷಯಗಳ ಬಗ್ಗೆ ನಮ್ಮ ಮಠಾಧಿಪತಿಗಳಲ್ಲಿ ಏನೂ ಚರ್ಚೆಯಾಗದಿರುವುದು ಆಶ್ಚರ್ಯವನ್ನುಂಟು ಮಾಡುತ್ತದೆ, ಹಿಂದುಗಳಲ್ಲದ ಇತರ ಧರ್ಮೀಯರ ರೂಢಿ ಸಂಪ್ರದಾಯಗಳಲ್ಲಿ ಕೈಹಾಕಲು ಅತ್ಯಗತ್ಯವಾಗಿದ್ದರೂ ಕೂಡ – ಸರಕಾರಗಳು ಹಿಂಜರಿಯುವುದನ್ನು ನೋಡಿದರೆ ನಮ್ಮ ಧರ್ಮಸ್ಥಾನಗಳನ್ನು ಧಿಕ್ಕರಿಸಿದರೆ ಅಪಾಯವಿಲ್ಲ ಎಂಬ ಗ್ರಹಿಕೆ ಅವರಿಗಿದ್ದಂತೆ ಕಾಣುತ್ತದೆ. ಈ ಗ್ರಹಿಕೆಯನ್ನು ಪ್ರತಿಭಟಿಸುವುದು ಮಠಗಳ ಕರ್ತವ್ಯ. ಒಳ್ಳೆಯದನ್ನು ಸರಕಾರ ಮಾಡಿದರೇನು ನಾವು ಮಾಡಿದರೇನು ಎನ್ನುವುದು ಅಕರ್ಮಣ್ಯತೆಯಾಗುತ್ತದೆ. ಸರಕಾರಗಳು, ರಾಜಕಾರಣದ ಕ್ಷಣಿಕ ಅವಶ್ಯಕತೆಗಳಿಂದ ಪ್ರಚೋದಿಸಲ್ಪಟ್ಟಿರುತ್ತವೆ. ಪೀಠಾಧಿಪತಿಗಳು ಸಮ್ಮತಿ ಇಲ್ಲದೆ, ಒಂದು ಸಮಾಜವು ಧಾರ್ಮಿಕವೆಂದು ತಿಳಿಯುವ ವಿಷಯಗಳಲ್ಲಿ ಕಾನೂನು ಮಾಡಲು ಸರಕಾರಗಳಿಗೆ ಸಾಧ್ಯಮಾಡಿಕೊಟ್ಟರೆ ನಾಳೆ ರಾಜಕೀಯ ಅವಶ್ಯಕತೆಗಳಿಗಾಗಿ ಅಹಿತಕರಕಾನೂನುಗಳನ್ನು ಮಾಡುವ ಸಾಧ್ಯತೆಗೆ ಅವಕಾಶ ಕೊಟ್ಟಂತಾಗುತ್ತದೆ. ಆದರೆ ಸಮಾಜ ಸುಧಾರಣೆಯ ವಿಷಯದಲ್ಲಿ ಮಠಗಳ ಮಾತುಗಳಿಗೆ ಬೆಲೆ ಬರಬೇಕಾದಲ್ಲಿ ತಮ್ಮ ಮನೆಗಳು ತಾವೆ ರಿಪೇರಿ ಮಾಡಿಕೊಳ್ಳುವುದಕ್ಕೆ ಅವರು ಸಿದ್ಧರಾಗಬೇಕಾಗುತ್ತದೆ ಎಂದೂ ನಾವು ನೆನಪಿಡಬೇಕು.

ಧರ್ಮದ ಮೇಲೆ ಜನರ ವಿಶ್ವಾಸ ಹೆಚ್ಚುತ್ತಿದೆ. "ಪ್ರಗತಿ" ಎಂದು ಕರೆಯಲ್ಪಡುವ ಅನೇಕ ವಿಷಯಗಳ ಪೊಳ್ಳುತನದ ಅರಿವೂ ಆಗುತ್ತಿದೆ. ಮಠಾಧಿಪತಿಗಳಿಗೂ ಜನಸಾಮಾನ್ಯರಿಗೂ ದ್ವಿಮುಖ ಸಂಪರ್ಕ ಏರ್ಪಡಿಸುವುದೇ ಆದರೆ ಇಂದಿನ ಸಂದರ್ಭದಲ್ಲಿ ಅವುಗಳ ಬಲ ಖಂಡಿತವಾಗಿ ಹೆಚ್ಚುವುದು. ಅವುಗಳ ಮಾತು ನಡೆಯುವದು. ಅವುಗಳನ್ನು ಅಸಡ್ಡೆ ಮಾಡುವುದು ಸಾಧ್ಯವಾಗದು. ಇದಕ್ಕೆ ಮಠಗಳು ಬದಲಾದ ಸ್ಥಿತಿಗಳಿಗೆ ಸಂಪಾದಿಗಳಾಗಬೇಕಾಗುತ್ತದೆ. ಅವುಗಳಲ್ಲಿ ಕ್ಷಾತ್ರ ಸ್ವಲ್ಪ ಹೆಚ್ಚಾಗಬೇಕಾಗುತ್ತದೆ.

ಆದರೆ ಮಠಗಳು ಇರಬೇಕೆ? ಅವು ಯಾವಾಗಲೂ ಪ್ರಗತಿ ವಿರೋಧಿಗಳಾಗಿಲ್ಲವೇ? ನಾವು ಆರಿಸಿದ ಸರಕಾರಗಳ ಮುಖದಿಂದಲೇ ನಮ್ಮ ಉದ್ಧಾರವಾಗದೆ? ಮಠಗಳೆಂಬ ಸಮಾಂತರ ಸರಕಾರಗಳು ಅನವಶ್ಯಕವಲ್ಲವೇ? ಇದಕ್ಕೆ ಉತ್ತರ ಮಠಗಳು ನಡೆದುಕೊಳ್ಳುವ ರೀತಿಯನ್ನೇ ಅವಲಂಬಿಸಿದೆ. ಪ್ರಜಾತಾಂತ್ರಿಕ ಸರಕಾರಗಳು ತೀರ ತಾತ್ಕಾಲಿಕ ಉದ್ದೇಶಗಳಿಗೆ ದಾಸರಾಗುವ ಭಯವಿದೆ. ಮಠಗಳು ಹೆಚ್ಚು ಶಾಶ್ವತ ಮೌಲ್ಯಗಳನ್ನು ಪ್ರತಿನಿಧಿಸುವವು! ಪ್ರತಿನಿಧಿಸಿದರೆ ಸಮಾಜದ ವಾಹನವನ್ನು ಅಕ್ಷುಣ್ಣವಾಗಿರಿಸುವ ಶಕ್ತಿಯಾಗಬಲ್ಲವು. □

# ಶರಣರ ಆದರ್ಶ ದಾಂಪತ್ಯ

ಶಾಂತಾದೇವಿ ಮಾಳವಾಡ

ಹನ್ನೆರಡನೆಯ ಶತಮಾನಕ್ಕೆ ಪೂರ್ವದಲ್ಲಿ ಆಧ್ಯಾತ್ಮ ಜೀವನವನ್ನಪೇಕ್ಷಿಸುವವರು ಸಂನ್ಯಾಸಜೀವನಕ್ಕೆ ಮೊರೆಹೋಗಬೇಕಾಗಿತ್ತು, ಹೆಣ್ಣಿಗೆ ಆತ್ಮೋನ್ನತಿಯ ಮಾರ್ಗವಲ್ಲಿ ಅವಕಾಶವಿರಲಿಲ್ಲ. ಸತಿ ಪತಿಯ ಪೂಜೆಗೆ ಅನುಕೂಲ ಮಾಡಿಕೊಡುತ್ತಿದ್ದಳೆ ವಿನಾ ಪೂಜೆಗೆ ಅಧಿಕಾರಿಣಿಯಾಗಿರಲಿಲ್ಲ. ಬಸವಣ್ಣನವರು "ಸಂಸಾರದಿಂದಲೇ ಸದ್ಗತಿ" ಎಂಬುದನ್ನು ತಮ್ಮ ಬಾಳಿನಿಂದ ಜನತೆಗೆ ತೋರಿಸಿಕೊಟ್ಟರು. ಧಾರ್ಮಿಕ ಜೀವನದಲ್ಲಿ ಶೂದ್ರ ಸಮಾನಳಾಗಿದ್ದ ಹೆಣ್ಣಿಗೆ ಸಮಾನಾವಕಾಶ ಕಲ್ಪಿಸಿಕೊಟ್ಟರು.

ದೇವರ ದಾಸಿಮಯ್ಯ–ದುಗ್ಗಳೆಯರ ದಾಂಪತ್ಯವನ್ನು ತಮ್ಮ ಆದರ್ಶವಾಗಿರಿಸಿಕೊಂಡ ನೀಲಾಂಬಿಕೆ – ಬಸವಣ್ಣನವರು ಭಕ್ತಿಯ ತವನಿಧಿ, ಮುಕ್ತಿಯ ಮೂರುತಿಯಾದರು. ಕೂಡಲ ಸಂಗಮನಾಥನ ಸಾನ್ನಿಧ್ಯದಲ್ಲಿ, ನದೀತೀರದ ಗುರುಕುಲದ ಆಧ್ಯಾತ್ಮವಾತಾವರಣದಲ್ಲಿ ಬೆಳೆದ ಬಸವಣ್ಣನವರು ಸಂಸಾರಿಯಾಗಬೇಕು, ಮಂತ್ರಿ–ಯಾಬೇಕು ಎಂಬ ಆಶೆಯನ್ನಿಟ್ಟುಕೊಂಡವರಲ್ಲ. ಸಂಗಮನಾಥನನ್ನಗಲಿ ಕಲ್ಯಾಣಕ್ಕೆ ಹೋಗಲು ಒಪ್ಪಲಿಲ್ಲ. ಆಗ ಅವರ ಗುರುಗಳು ಅವರನ್ನು ಬಳಿ ಕರೆದು ಮೈದಡವಿ "ಬಸವಣ್ಣ ಸಂಸಾರದಿಂದ ಸದ್ಗತಿ ಪಡೆಯಬಹುದೆಂಬುದನ್ನು ನೀನು ಜಗತ್ತಿಗೆ ತೋರಿಸಿಕೊಡಬೇಕು, ಬಸವಣ್ಣ ನಿನ್ನ ಕಲ್ಯಾಣಮಹೋತ್ಸವ ಲೋಕಕಲ್ಯಾಣಕ್ಕೆ ಕಾರಣವಾಗಲಿ ನಿನಗೆ ಸಂಸಾರ ಬಂಧನವಾಗಲಾರದು. ಪರಿಪಕ್ವಗೊಂಡ ನಿನ್ನ ಮನ ವಿಷಯವೆಂಬ ಹಸುರಿಗೆ ಆಸೆ ಮಾಡದು. ಸಂಸಾರ ಬಂಧನವೆಂದು ಬರೆದವರ ಬಾಳಿಗೆ ನಿನ್ನ ಬಾಳು ದಾರಿದೀಪವಾಗಲಿ" ಎಂದು ಹರಿಸಿ ಕಳಿಸಿದರು. ದೈವೀ ಸಂಕಲ್ಪದಂತೆ ಬಸವಣ್ಣನವರು ಕಲ್ಯಾಣಕ್ಕೆ ಹೋಗಬೇಕಾಯಿತು. ಅಲ್ಲಿ ನೀಲಾಂಬಿಕೆಯೊಂದಿಗೆ ಬಸವಣ್ಣನವರ ವಿವಾಹವಾಯಿತು. ನೀಲಾಂಬಿಕೆ ಅತಿ ಚೆಲುವೆ. ಆಕೆಯ ಸುಂದರ ಕಣ್ಣುಗಳನ್ನು ನೋಡಿ ನೀಲಲೋಚನೆ ಎಂದೂ ಕರೆಯುತ್ತಿದ್ದರು, ನೀಲಾಂಬಿಕೆ ಸುಶಿಕ್ಷಿತಳೂ ಸುಸಂಸ್ಕೃತಳೂ ಸಂಗೀತ ಕಲಾ ಕೋವಿದಳೂ ಆಧ್ಯಾತ್ಮ ಜೀವನದ ಬಗೆಗೆ ಆಸ್ಥೆಯುಳ್ಳವಳೂ ಆಗಿದ್ದೇ ಬಸವಣ್ಣನವರ ಕೈವಿಡಿದುದರಿಂದ ಆ ಮಾರ್ಗದಲ್ಲಿ ಮುನ್ನಡೆಯಲು ನೀಲಾಂಬಿಕೆಗೆ ಸುಲಭ

ವಾಯಿತು. ದಂಪತಿಗಳಿಬ್ಬರೂ ಭಕ್ತಿಪಥವಿಡಿದು ಮುಕ್ತಿಮಾರ್ಗದತ್ತ ಸಾಗಿದರು. ಅರಿತು ನಡೆದರೆ ಸಂಸಾರ ಬಂಧನವಾಗಲಾರದು ಎಂದು ದಾಸೋಹಂಭಾವದಿಂದ ಬಾಳಿದರು, ಮೋಹ ಮಾಯೆಗಳಿಂದ ವಿಚಲಿತರಾಗದೆ ಸುಖ ದುಃಖ ಸಮ ಎಂದು ಭಾವಿಸಿದರು, ತಮ್ಮ ಚಿತ್ತವನ್ನು ಸದಾ ದೇವರಲ್ಲಿರಿಸಿ ಅರಿಷಡ್ವರ್ಗವನ್ನು ಗೆದ್ದು ಶರಣರಾದರು.

ಮಾವನ ಅಪಾರ ಸಂಪತ್ತಿನ ಒಡೆತನ ದೊರೆತರೂ 'ಕಾಯಕವೇ ಕೈಲಾಸ' ಎಂದು ಬಗೆದ ಬಸವಣ್ಣನವರು ಕರಣಿಕವೃತ್ತಿ ಕೈಕೊಂಡರು. ಸಿದ್ಧರಸ ದಣ್ಣಾಯಕರ ಏಕಮಾತ್ರ ಪುತ್ರಿಯಾಗಿ ಬಿಜ್ಜಳ ದೊರೆಯ ಸಾಕು ತಂಗಿಯಾಗಿ ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದ ನೀಲಾಂಬಿಕೆಗೆ ಪತಿ ಕರಣಿಕನೆಂದು ಅಸಮಾಧಾನವಾಗಲಿಲ್ಲ. ಬಸವಣ್ಣವರ ಬುದ್ಧಿಮತ್ತೆಯನ್ನು ಕಂಡ ಬಿಜ್ಜಳ ದೊರೆ ಅವರಿಗೆ ಮಂತ್ರಿ ಪದವಿಯನ್ನಿತ್ತನು. ಮಂತ್ರಿಯ ಪತ್ನಿಯಾದೆನೆಂಬ ಹಮ್ಮು-ಬಿಮ್ಮು ನೀಲಾಂಬಿಕೆಯ ಬಳಿ ಸುಳಿಯಲಿಲ್ಲ, ದಂಪತಿಗಳಿಬ್ಬರ ದೇಹವೆರಡಾದರೂ, ಮನಸ್ಸು, ಆತ್ಮ ಆಶೆ ಆಕಾಂಕ್ಷೆಗಳೆಲ್ಲ ಒಂದಾಗಿದ್ದವು. ಅವರಿಬ್ಬರೂ ಲೌಕಿಕಸಂಪತ್ತು, ಅಧಿಕಾರ, ಕೀರ್ತಿಗಳಿಗೆ ಬಲಿ ಬೀಳದೆ ಅಂತರಂಗದ ಆನಂದ ಸಾಗರದಲ್ಲಿ ಓಲಾಡುತ್ತಿದ್ದರು.

ಭಾವನಾಜೀವಿ, ಭಕ್ತಿ ಭಂಡಾರಿ, ಮೃದು ಹೃದಯದ ಬಸವಣ್ಣನವರು ಸಕಲ ಜೀವಾತ್ಮರಿಗೆ ಲೇಸಾಗಬೇಕೆಂದು ಹಾರೈಸುತ್ತಿದ್ದರು. ಸ್ತ್ರೀಯರನ್ನು ಶೂದ್ರಸಮನಾಗಿ ಕಾಣುವ ಅಲ್ಪತನ ಅಳಿಯಬೇಕು. ಹೆಣ್ಣು ಆತ್ಮಸಂಗಾತಿಯಾಗಬೇಕು. ಮುಕ್ತಿವನಿತೆಯಾಗಬೇಕು. ಡಂಭಾಚಾರದ ಪೂಜೆಗಿಂತ ಅಂತರಂಗ ಅರಳಿ ಆತ್ಮವಿಕಾಸವಾಗಬೇಕು. ಆತ್ಮೋನ್ನತಿಯನ್ನು ಬಯಸುವ ಪ್ರತಿಯೊಬ್ಬ ಜೀವಿಗೆ ಧಾರ್ಮಿಕ ಜೀವನದಲ್ಲಿ ಅವಕಾಶವಿರಬೇಕು. ಸಂಕುಚಿತ ಜಾತೀಯತೆ ಅಳಿಯಬೇಕು. ಈ ಕಾರ್ಯಕ್ಕೆ ತಮ್ಮ ಮನೆ, ಮಹಾಮನೆಯಾಗಿ ಬಂದವರಿಗೆಲ್ಲ ಅನ್ನದಾಸೋಹ ಜ್ಞಾನದಾಸೋಹದ ಕೇಂದ್ರವಾಗಬೇಕು. ಕಲ್ಯಾಣವೇ ಕೈಲಾಸವಾಗಬೇಕು; ಕಾಯಕವೇ ಕೈಲಾಸವೆಂಬ ತತ್ವದಿಂದ ಆರ್ಥಿಕ ಅಭಿವೃದ್ಧಿಯಾಗಬೇಕು. ಜನಸಾಮಾನ್ಯರು ನೆಮ್ಮದಿಯಿಂದ ಬಾಳಬೇಕು ಎಂಬ ನೂರೆಂಟು ಹೊಂಗನಸುಗಳನ್ನು ಕಟ್ಟಿದ್ದರು. ನೀಲಾಂಬಿಕೆ ಇಚ್ಛೆಯನರಿವ ಸತಿಯಾದಳು. ಬಸವಣ್ಣನವರ ಕನಸು ನನಸಾಗಲು ಸಹಧರ್ಮಿಣಿಯಾಗಿ ನಿಂತಳು. ಅದರಿಂದಾಗಿ ಬಸವಣ್ಣನವರ ಮನೆ ಮಹಾಮನೆಯಾಯಿತು. ನೀಲಾಂಬಿಕೆ ಅನ್ನದಾಸೋಹದ ಅನ್ನಪೂರ್ಣೆಯಾದಳು.

"ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ ಸತಿಪತಿಗಳೊಂದಾಗದ ಭಕ್ತಿ ಅಮೃತದೊಳು ವಿಷಬೆರಸಿದಂತೆ ಕಾಣಾ ರಾಮನಾಥಾ" ಎಂಬ ದಾಸಿಮಯ್ಯನವರ ನುಡಿಯನ್ನು ನೀಲಾಂಬಿಕೆ-ಬಸವಣ್ಣನವರು ತಮ್ಮ ಜೀವನದಲ್ಲಿ ಅಳವಡಿಸಿಕೊಂಡರು ಬಸವಣ್ಣನವರ ಆಶೆ ಆಕಾಂಕ್ಷೆಗಳೇ ತನ್ನ ಆಶೆ ಆಕಾಂಕ್ಷೆಗಳೆಂದು ನಂಬಿ ಬಸವಣ್ಣನವರು. ಪ್ರಾರಂಭಿಸಿದ ಹೊಸ ಸಮಾಜ ರಚನೆಗೆ ನೀಲಾಂಬಿಕೆ ಶಕ್ತಿಸ್ವರೂಪಿಣಿಯಾಗಿ ನಿಂತಳು, ಬಸವಣ್ಣನವರು ನೀಲಾಂಬಿಕೆಗೆ ಕೇವಲ ಪತಿಯಾಗಿರಲಿಲ್ಲ, ಆಧ್ಯಾತ್ಮ ಜೀವನದಲ್ಲಿ

ಕೈಮಿಡಿದು ಮುನ್ನಡೆಸಬಲ್ಲ ಗುರುವಾಗಿದ್ದರು ಎಂಬುದನ್ನು ನೀಲಾಂಬಿಕೆ ತನ್ನ ವಚನದಲ್ಲಿ ಹೀಗೆ ಹೇಳಿದ್ದಾಳೆ.

"ಎನಗೆ ಲಿಂಗವು ನೀವೆ ಬಸವಯ್ಯಾ;
ಎನಗೆ ಸಂಗವು ನೀವೆ ಬಸವಯ್ಯಾ,
ಎನಗೆ ಪ್ರಾಣವು ನೀವೆ ಬಸವಯ್ಯಾ,
ಎನಗೆ ಪ್ರಸಾದವು ನೀವೆ ಬಸವಯ್ಯಾ,
ಎನಗೆ ಪ್ರಭೆಯು ಮೂರ್ತಿಯು ನೀವೆ ಬಸವಯ್ಯಾ,
ಎನಗೆ ಸಂಗಯ್ಯನು ನೀವೆ ಬಸವಯ್ಯಾ"

ಎಂದು. ಬಸವಣ್ಣನವರ ಭಕ್ತಿಭರಿತ ವಚನಗಳನ್ನು ನೀಲಾಂಬಿಕೆ ನಿತ್ಯ ಬೆಳಿಗ್ಗೆ ಭಾವ ಭರಿತಳಾಗಿ ಹಾಡುತ್ತಿದ್ದಳು. ಬಸವಣ್ಣನವರ ಭಕ್ತಿಗೆ ನೀಲಾಂಬಿಕೆ ಶಕ್ತಿಯಾದಳು. ಬ್ರಾಹ್ಮಿಮುಹೂರ್ತದಲ್ಲೆದ್ದು ಪತಿಯ ಪೂಜೆಗೆ ಅಣಿಗೊಳಿಸುತ್ತಿದ್ದಳು, ಪತಿ ಯೊಂದಿಗೆ ಲಿಂಗಾರ್ಚನೆ ಮಾಡಿಕೊಳ್ಳುತ್ತಿದ್ದಳು. ಮನೆಗೆ ಬರುವ ಜಂಗಮರಿಗೆ ಪ್ರಸಾದ ಸಿದ್ದಗೊಳಿಸುತ್ತಿದ್ದಳು. ಬರಬರುತ್ತ ಬಸವಣ್ಣನವರ ಮನೆಗೆ ಬರುವ ಅತಿಥಿಗಳ ಸಂಖ್ಯೆ ಬೆಳೆಯಿತು, ಮುಗಿದ ಕೈ ಬಾಗಿದ ಶಿರದ ಬಸವಣ್ಣನವರ ಭಕ್ತಿ-ವಿನಯಗಳಿಗೆ ಮನಸೋತು ಕೆಲವರು ಮಹಾಮನೆಗೆ ಬಂದರೆ, ಆಧ್ಯಾತ್ಮ ಜೀವನ ವನ್ನಪೇಕ್ಷಿಸಿ ಭಾರತದ ನಾನಾ ಭಾಗದಿಂದ ಜನ ಬರಹತ್ತಿದರು. ನೀಲಾಂಬಿಕೆ ದಣಿವು ಬೇಸರವಿಲ್ಲದೆ ಮಾತೃವಾತ್ಸಲ್ಯದಿಂದ ಬಂದ ಅತಿಥಿಗಳ ಆದರೋಪಚಾರಗೈ ಯ್ಯುತ್ತಿದ್ದಳು. ಜಂಗಮಪ್ರೇಮಿ ಬಸವಣ್ಣನವರ ಇಚ್ಛೆಯ ಮೇರೆಗೆ ಮಹಾಮನೆಗೆ ಬರುವ ಜಂಗಮರ ಇಷ್ಟಾರ್ಥಗಳನ್ನು ಅವರವರಿಗೆ ಎಡೆ ಮಾಡುತ್ತಿದ್ದಳು. ಬಂದ ಜಂಗಮರು ಒಬ್ಬೊಬ್ಬರೂ ಒಂದೊಂದನ್ನು ಅಪೇಕ್ಷಿಸುತ್ತಿದ್ದರು. ಒಬ್ಬರು ಹೋಳಿ ಗೆಯೆಂದರೆ ಮತ್ತೊಬ್ಬರಿಗೆ ಪಾಯಸ, ಮಗದೊಬ್ಬರಿಗೆ ಅಕಾಲ ಮಾವಿನಹಣ್ಣೇ ಬೇಕಾಗುತ್ತಿತ್ತು. ಜಂಗಮರ ಪ್ರಸಾದ ಪ್ರಾರಂಭವಾದೊಡನೆ ಬಸವಣ್ಣನವರು ಎಲ್ಲರ ಹೋಗಿ 'ಸ್ವಾಮಿ ನಿಮಗೇನು ಬೇಕೋ ಕೇಳಿ ಎಡೆಮಾಡಿಕೊಂಡು ಪ್ರಸಾದ ಸೇವಿಸಿರಿ, ಸಂತೃಪ್ತರಾಗಿರಿ, ಜಂಗಮ ತೃಪ್ತಿಯೇ ಲಿಂಗತೃಪ್ತಿ ಎಂದು ನಮಸ್ಕರಿಸುತ್ತಿದ್ದರು. ಆಗ ನೀಲಾಂಬಿಕೆ ಹಸನ್ಮುಖದಿಂದ ಅವರವರಿಗೆ ಬೇಕಾದದನ್ನು ಎಡೆಮಾಡುತ್ತಿದ್ದಳು. ಅವಳು ಭಕ್ತಿಯಿಂದ ಸಿದ್ಧಗೊಳಿಸಿದ ಅಮೃತಾನ್ನವನ್ನು ಸೇವಿಸಿದವರು ಧನ್ಯರಾಗುತ್ತಿದ್ದರು. ಸಂತೃಪ್ತರಾಗುತ್ತಿದ್ದರು. ನಿತ್ಯ ಅಸಂಖ್ಯಾತರ. ಆರೋಗಣೆಯನ್ನು ಅಚ್ಚುಕಟ್ಟಾಗಿ ನಿರ್ವಹಿಸುತ್ತಿದ್ದ ನೀಲಾಂಬಿಕೆ ಮಹಾಮನೆಯ ಅನ್ನಪೂರ್ಣೆಯಾದಳು. ದಾಸೋಹಕ್ಕಾಗಿ ತನ್ನ ದೇಹವನ್ನು ಗಂಧದ ಕೊರಡಿನಂತೆ ಸವೆಯಿಸಿದಳು, ನೀಲಾಂಬಿಕೆಯ ಸೇವಾಭಾವ, ತ್ಯಾಗ, ಸಹನೆಗಳನ್ನು ಕಂಡ ಬಸವಣ್ಣನವರಿಗೆ ಹೆಣ್ಣುಮಕ್ಕಳ ಬಗೆಗೆ ಹೆಚ್ಚಿನ ಗೌರವಭಾವವುಂಟಾಯಿತು. ಹೆಣ್ಣು—ಗಂಡು ಪರಸ್ಪರ ಅರಿತು ಬಾಳಿದರೆ ಇಹ ಪರ ಜೀವನ ಸುಖಕರ ಎಂಬು

ದನ್ನು ತಮ್ಮ ಜೀವನದಿಂದ ಇತರರಿಗೆ ತೋರಿಸಿಕೊಟ್ಟರು. ಈ ದಂಪತಿಗಳು ಎತ್ತು ಏರಿಗೆ ಎಳೆದರೆ ಕೋಣ ಕೇರಿಗೆ ಎಳೆಯಿತು ಎನ್ನುವಂತಹರ ವಿರಸದಾಂಪತ್ಯವನ್ನು ಕುರಿತು ಬಸವಣ್ಣನವರು

"ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ,
ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ
ಇದ್ದರೇನೋ ಶಿವ ಶಿವ ಹೋದರೇನೊ ?
ಕೂಡಲ ಸಂಗಮದೇವಯ್ಯಾ
ಊಡದ ಆವಿಗೆ ಉಣ್ಣದ ಕಟ್ಟುವ ಬಿಟ್ಟಂತೆ"

ಎಂದು ನ್ಯಾಯ ನಿಷ್ಠುರರಾಗಿ ನುಡಿದಿದ್ದಾರೆ, ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ, ಲಿಂಗದ ಮೇಲೆ ನಿಷ್ಠೆ ಇಲ್ಲದ ಭಕ್ತ ಇಬ್ಬರೂ ವ್ಯರ್ಥ ಎಂದು ಹೇಳಿದ್ದಾರೆ. ಡಂಭಾಚಾರದ ಪತಿ ಪ್ರೇಮ ತೋರಿಸುವ ಹೆಣ್ಣನ್ನು ಕಂಡು "ಹಸಿದು ಬಂದ ಗಂಡನಿಗೆ ಉಣಲಿಕ್ಕದೆ ಬಾಯಿ ಮಾತಿನಿಂದ ಗಂಡ ಬಡವಾದನೆಂದು" ಉಪಚರಿಸುವವಳನ್ನು ಖಂಡಿಸಿದ್ದಾರೆ. 'ಗಂಡ ಶಿವಲಿಂಗದೇವರ ಭಕ್ತ, ಹೆಂಡತಿ ಮಾರಿಮಸಣೆಯ ಭಕ್ತಳಾದರೆ ಶಿವನೊಲಮೆ ದೊರೆಕೊಳ್ಳುವುದೆಂತು? ಇಬ್ಬರೂ ಏಕೋಭಾವದಿಂದ ಲಿಂಗಾರ್ಚನೆ ಗೈದರೆ ಶಿವನೊಲುಮೆ ಕೈಸಾರಿ ಬರುವದೆಂದು ತಮ್ಮ ವಚನಗಳ ಮೂಲಕ ಜನತೆಗೆ ತಿಳಿ ಹೇಳಿದರು. ಬಸವಣ್ಣನವರು ನುಡಿದಂತೆ ನಡೆದೂ ತೋರಿದರು. ಮಹಾಮನೆಯಲ್ಲಿ ಅನುಭವಮಂಟಪದಲ್ಲಿ ಮಹಿಳೆಯರಿಗೆ ಸಮಾನಸ್ಥಾನ ಕಲ್ಪಿಸಿಕೊಟ್ಟರು. ಧಾರ್ಮಿಕ ಸ್ವಾತಂತ್ರ್ಯ ಕೊಟ್ಟರು. ಆಧ್ಯಾತ್ಮ ಮಾರ್ಗದಲ್ಲಿ ಸ್ತ್ರೀ ಪುರುಷನ ಸಮನಾಗಿ ಮುಂದು ವರಿಯುವ ಮಾರ್ಗವನ್ನು ತೋರಿದರು. ಅದರಿಂದಾಗಿ ನೂರಾರು ಜನ ಶಿವಶರಣೆಯರು ಭಕ್ತಿಮಾರ್ಗವಿಡಿದು ಬಾಳಿದರು.

ಬಸವಣ್ಣನವರ ಪ್ರಭಾವದಿಂದ ನೀಲಾಂಬಿಕೆಯೂ ವಚನಕಾರ್ತಿಯಾದಳು. ಬಸವಣ್ಣನವರು ಪರವಧುವನ್ನು ಮಹದೇವಿ ಎಂದು ಗೌರವದಿಂದ ಕಾಣುತ್ತಿದ್ದರು. ನೀಲಾಂಬಿಕೆ ಮಹಾಮನೆಗೆ ಬರುವ ಶರಣ ಶರಣೆಯರಿಗೆಲ್ಲ ತಾಯಿಯಾಗಿದ್ದಳು. ವೀರ ವಿರಾಗಿಣಿ ಅಕ್ಕಮಹಾದೇವಿ, ಮಹಾ ಶಿವಶರಣೆ ಗುಡ್ಡಾಪುರ ದಾನಮ್ಮ ಮೊದಲಾದವರಿಗೆಲ್ಲ ಮಹಾಮನೆ ತವರು ಮನೆಯಾಗಿತ್ತು. ಅಕ್ಕ ತನ್ನ ಒಂದು ವಚನದಲ್ಲಿ ಹೇಳಿದ್ದಾಳೆ "ಅವ್ವ ನೀಲವ್ವನ ಮೋಹದ ಮಗಳಾಗಿ, ಅಪ್ಪ ಬಸವಣ್ಣನ ಸುಚಿತ್ತದ ಪುತ್ಥಳಿಯಾಗಿ" ಮಹಾಮನೆಯಲ್ಲಿದ್ದೇನೆಂದು ಶಣರ ಸಮೂಹವೆಲ್ಲ, ನೀಲಾಂಬಿಕೆ ಬಸವಣ್ಣನವರ ಶಿಶುಗಳೋಪಾದಿಯಲ್ಲಿ ಬೆಳೆದು ಬಂದರು, ಮಹಾ ಮಹಿಮ ಅಲ್ಲಮಪ್ರಭುದೇವರು "ಬಸವಣ್ಣ ನಿಮ್ಮ ಪ್ರಸಾದ ಶಿಶು ನಾನು ನೋಡಯ್ಯ" ಎಂದುಸುರಿದ್ದಾರೆ, ಸಿದ್ಧರಾಮೇಶ್ವರರು ಈ ದಂಪತಿಗಳನ್ನು ಕಂಡು ಪ್ರಭುದೇವರಿಗೆ "ನಿಮ್ಮ ಸಂಗನ ಬಸವಣ್ಣನವರು ಕಲ್ಯಾಣದಲ್ಲಿ ಮನೆಯ ಕಟ್ಟಿದರೆ

ಮರ್ತ್ಯ ಲೋಕವೆಲ್ಲವು ಭಕ್ತಿ ಸಾಮ್ರಾಜ್ಯವಾಯಿತ್ತು ಆ ಮನೆಗೆ ತಲೆವಾಗಿ ಹೊಕ್ಕವರೆಲ್ಲರು ನಿಜಲಿಂಗ ಪದಮಂ ಪಡೆದರು" ಎಂದಿದ್ದಾರೆ ರುದ್ರಮುನಿ ದೇವರು. ನೀಲಾಂಬಿಕೆಯು ಪ್ರಸಾದ ತೀರದ ತವನಿಧಿ ಎಂದು ವರ್ಣಿಸಿದ್ದಾರೆ.

ಬಸವಣ್ಣ—ನೀಲಾಂಬಿಕೆಯರ ಬಾಳ ಬಳ್ಳಿಯು ಕುಸುಮವಾಗಿ ಜನಿಸಿದನು ಸಂಗನಬಸವನೆಂಬ ಪುತ್ರ. ದಂಪತಿಗಳಿಬ್ಬರೂ ಸಂಗಮನಾಥನೇ ಮಗನ ರೂಪದಲ್ಲಿ ಬಂದಿರುವನೆಂದು ಭಾವಿಸಿ ಪ್ರೀತಿಯಿಂದ ಸಲುಹಿದರು. ಮಹಾಮನೆಯಲ್ಲಿ ಅವನ ಆಟ–ಪಾಟ ಕಂಡು ಎಲ್ಲರೂ ಸಂತಸಪಡುತ್ತಿದ್ದರು. ಮಗು ಬೆಳೆದು ದೊಡ್ಡವನಾಗುವ ಮುನ್ನವೇ ಶಿವಪಾದ ಸೇರಿದನು. ಅನುಭಾವಿಗಳಾದ ದಂಪತಿಗಳು ಮಗ ಸತ್ತ ದುಃಖವನ್ನು ನುಂಗಿಕೊಂಡು ಎಲ್ಲ ಶಿವಚಿತ್ತವೆಂದು ಬಗೆದರು. ಅವರಿಬ್ಬರ ಮನಸ್ಸು ಹೆಚ್ಚು ಹೆಚ್ಚಾಗಿ ಸಂಗಮನಾಥನ ಧ್ಯಾನದಲ್ಲಿ ಮಗ್ನವಾಯಿತು. ಬಸವಣ್ಣ-ನೀಲಾಂಬಿಕೆಯರು ಬ್ರಹ್ಮಚರ್ಯ ವ್ರತಬದ್ಧರಾಗಿ ಇಬ್ಬರೂ ಸಂಗಮನಾಥನ ಶಿಶುಗಳೋಪಾದಿಯಲ್ಲಿ ಬಾಳುವೆ ನಡೆಸಿದ ಬಗಗೆ ನೀಲಾಂಬಿಕೆ ಒಂದು ವಚನದಲ್ಲಿ ಹೀಗೆ ಹೇಳಿದ್ದಾಳೆ:—

> "ಮಡದಿಯನ್ನಲಾಗದು ಬಸವಂಗೆ ಎನ್ನನು.
> ಪುರುಷನೆನ್ನಲಾಗದು ಬಸವನ ಎನಗೆ.
> ಉಭಯಕುಳವ ಹಱಿದು ಬಸವಂಗೆ ಶಿಶುವಾನಾದೆನು,
> ಬಸವನೆನ್ನ ಶಿಶುವಾದನು
> ಪ್ರಮಥರು ಪುರಾತರು ಸಾಕ್ಷಿಯಾಗಿ
> ಸಂಗಯ್ಯನಿಕ್ಕಿದ ದಿಬ್ಬವ ಮೀಱಿದೆ ಬಸವನೊಳಗಾನಡಗಿದೆ."

ಬಸವಣ್ಣ–ನೀಲಾಂಬಿಕೆಯರ ದೇಹ ಭಿನ್ನವಾಗಿದ್ದರೂ ಮನ, ಆತ್ಮ ಒಂದಾಗಿತ್ತು. ಆಶೆ–ಅಭಿಲಾಷೆಗಳು ಒಂದಾಗಿದ್ದವು. ಬಸವಣ್ಣನವರ ಲೌಕಿಕ ಜೀವನದಲ್ಲಿ ಪತ್ನಿಯಾಗಿ ಬಂದ ನೀಲಾಂಬಿಕೆ ಅವರ ಆಧ್ಯಾತ್ಮ ಜೀವನದಲ್ಲಿ ಆತ್ಮಸಖಿಯಾದಳು. ಅವರ ಭಕ್ತಿಗೆ ಶಕ್ತಿಯಾದಳು. "ಮಡದಿ ಎನಲಾಗದು ಎನ್ನನು ಬಸವಂಗೆ" ಎಂದು ಸ್ಪಷ್ಟವಾಗಿ ಹೇಳಿದ್ದಾಳೆ. ಇಬ್ಬರೂ ಪಶುಭಾವವ ತೊರೆದು ಶಿಶುಭಾವವುಳ್ಳವರಾದುದರಿಂದ. ಮೋಹ ಮಾಯೆಗಳನ್ನು ಜನಿಸಿದರು. "ಅಂಗದ ಸಂಗಿಗನಲ್ಲ ನಮ್ಮ ಬಸವಯ್ಯ. ಪ್ರಾಣದ ಭ್ರಮೆಯುವನಲ್ಲ ನಮ್ಮ ಬಸವಯ್ಯನು." ಎಂದು ನೀಲಾಂಬಿಕೆ ಅಭಿಮಾನ ಪಟ್ಟುಕೊಂಡಿದ್ದಾಳೆ. ದಂಪತಿಗಳು ಭಕ್ತಿಯ ಬಲದಿಂದ ಆತ್ಮಶಕ್ತಿಯಿಂದ "ಮರ್ತ್ಯ ಲೋಕವನೆ ಮಹಾ ಪ್ರಮಥರ ಬಿಡಾರವ ಮಾಡಿದರು,"

ಭಾರತದ ಸಂಸ್ಕೃತಿಯಲ್ಲಿ ಪತ್ನಿಯಾದವಳು ಪತಿಯು ಜೀವನಕ್ಕೆ ಹೊಂದಿಕೊಂಡು ಹೋಗುವುದು ಸ್ವಾಭಾವಿಕ. ಆದರೆ ಮಹಾನುಭಾವರ ಕೈಹಿಡಿದವರು ಸಹನೆಯ ಸಾಕಾರಮೂರ್ತಿಯಾಗಬೇಕಾಗುವುದು. ಕಾಷಾಯಕ್ಕೆ ಶರಣೆಂಬ ವಿಶಾಲಹೃದಯದ ಬಸವಣ್ಣನವರ ಕೈವಿಡಿದ ನೀಲಾಂಬಿಕೆ ತ್ಯಾಗ, ಸೇವೆ, ಸಹನೆಗಳ ಸಾಕಾರ ರೂಪಾಗಿ ಜೀವನ ನಡೆಸಿದಳು. ಒಂದು ಸಲ ಜಂಗಮವೇಷಧಾರಿ ಕಳ್ಳನೊಬ್ಬ ಮಹಾಮನೆ

ಪ್ರವೇಶಿಸಿದ. ರಾತ್ರಿ ಎಲ್ಲರೂ ಮಲಗಿದ ಮೇಲೆ ಬಸವಣ್ಣನವರ ಶಯನಗೃಹ ಪ್ರವೇಶಿಸಿದ. ನೀಲಾಂಬಿಕೆಯ ವಜ್ರಾಭರಣಗಳನ್ನು ಅಪಹರಿಸಲು ಪ್ರಯತ್ನಿಸಿದ. ಆಗ ಎಚ್ಚೆತ್ತ ನೀಲಾಂಬಿಕೆ ಕಳ್ಳ-ಕಳ್ಳ ಎಂದು ಕೂಗಿದಳು. ಅವಳ ಧ್ವನಿ ಕೇಳಿದ ಎಚ್ಚೆತ್ತ ಬಸವಣ್ಣನವರು ಕಳ್ಳನ ಜಂಗಮವೇಷ ಕಂಡು ' ನೀಲಾ ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದರೆ ಕೂಡಲ ಸಂಗಮದೇವನಲ್ಲದೆ ಮತ್ತಾರೂ ಅಲ್ಲ. ನಿನ್ನ ಆಭರಣಗಳನ್ನೆಲ್ಲ ಕಳಚಿ ಕೊಡು ' ಎಂದರು. ಪತಿಯ ಮಾತಿಗೆ ಎದುರಾಡದೆ ನೀಲಾಂಬಿಕೆ ಆಭರಣಗಳನ್ನೆಲ್ಲ ಕಳಚಿ ಕಳ್ಳನಿಗೆ ಕೊಟ್ಟಳು. ಇನ್ನೊಂದು ಸಂದರ್ಭದಲ್ಲಿ ಮೇಯಲು ಹೋದ ಮಹಾಮನೆಯ ಆಕಳ ಹಿಂಡನ್ನು ಕಳ್ಳರು ಕದ್ದೊಯ್ದರು. ಆಕಳ ಕರುಗಳು ಹಸಿದು ಹಲುಬಹತ್ತಿದವು. ಕರುಗಳ ಗೋಳನ್ನು ಕೇಳಲಾರದೆ ನೀಲಾಂಬಿಕೆ ಸಮಾಚಾರವನ್ನು ಬಸವಣ್ಣನವರಿಗೆ ತಿಳಿಸಿದಳು. ಅದನ್ನು ಕೇಳಿದ ಬಸವಣ್ಣನವರು ಬಳಿ ಇದ್ದ ಶರಣರನ್ನು ಕರೆದು

" ಆಕಳ ಕಳ್ಳರು ಕೊಂಡೊಯ್ದರು ಎನ್ನದಿರಿ "

ಎಲ್ಲಾದರೂ ಉಣ್ಣುವವನು ಸಂಗಮನಾಥನೇ ಈ ಕರುಗಳನ್ನೊಯ್ದು ಆಕಳ ಬಳಿ ಬಿಟ್ಟು ಬನ್ನಿರಿ ಎಂದರು. ಇಂಥ ವಿಶಾಲ ಹೃದಯದ ಮಹಾನುಭಾವ ಬಸವಣ್ಣನವರ ಕೈಹಿಡಿದು ಮಹಾಮನೆಯ ದಾಸೋಹ ನಡೆಸುವದು ಸುಲಭದ ಮಾತಾಗಿರಲಿಲ್ಲ. ನೀಲಾಂಬಿಕೆ ಪತಿ ಭಕ್ತಿ, ಲಿಂಗನಿಷ್ಠೆಗಳಿಂದ ದಾಸೋಹಂಭಾವದಿಂದ ಮಹಾಮನೆಯ ಕಾರ್ಯನಡೆಸಿದಳು. ಬಸವಣ್ಣನವರನ್ನು ಸರಿಯಾಗಿ ಅರ್ಥಮಾಡಿಕೊಂಡ ನೀಲಾಂಬಿಕೆ ಅವರನ್ನು ಕುರಿತು ಹೀಗೆ ಹೇಳಿದ್ದಾಳೆ.

"ಪ್ರಣವದ ಬೀಜವ ಬಿತ್ತಿ ಪಂಚಾಕ್ಷರಿಯ ಬೆಳೆಯ ಬೆಳೆದು ಪರಮ ಪ್ರಸಾದ ವನೊಂದುಮಾಡಿ ಮೆಜಿದು ಭಕ್ತಿಫಲವನುಂಡಾತನೆಮ್ಮ ಬಸವಯ್ಯನು" ಬಸವಣ್ಣ ನವರು ಬೆಳೆದ ಭಕ್ತಿಫಲದಲ್ಲಿ ಸಮಭಾಗಿಯಾದ ನೀಲಾಂಬಿಕೆ ಪತಿಯ ಮಾರ್ಗದರ್ಶನ ದಲ್ಲಿ ಮುನ್ನಡೆದಳು.

" ಶಿವತತ್ತ್ವವ ಕಾಣದ ಮುನ್ನ ಅನುಭವ ತತ್ತ್ವವ ಕಾಣಲಾಯಿತ್ತಯ್ಯಾ, ಬಸವಾ ಆನು ಅನುಭವ ಶೀಲವನರಿದು ಮುಕ್ತ್ಯಂಗನೆಯಾದೆನಯ್ಯಾ ಬಸವಾ" ಎಂದು ಹೇಳಿದ ನೀಲಾಂಬಿಕೆ ಐಕ್ಯಸ್ಥಾನ ಪಡೆದಳು.

ನೀಲಾಂಬಿಕೆ-ಬಸವಣ್ಣನವರು ಲೌಕಿಕ ಪಾರಮಾರ್ಥಿಕ ಜೀವನವನ್ನೊಂದುಗೂಡಿ ಸಿದರು. ಅವರಿಬ್ಬರೂ ಭಕ್ತಿಸಾಗರದಲ್ಲಿ ಮಿಂದು, ಜ್ಞಾನಾಮೃತ ಸವಿದರು. ಅನು- ಭಾವದ ಆಗರವಾದರು. ಮುಕ್ತಿಯ ತವರ್ಮನೆಯಾದರು. ಆದರ್ಶ ದಂಪತಿಗಳಾದರು.

□

# ಹೆಣ್ಣು — ಪ್ರಾಚೀನ ಸಾಹಿತ್ಯ ಮತ್ತು ಶಾಸನಗಳಲ್ಲಿ

**ಡಾ. ಎಂ. ಚಿದಾನಂದಮೂರ್ತಿ**

ಕನ್ನಡದಲ್ಲಿ ನಮಗೆ ತಿಳಿದ ಮಟ್ಟಿಗೆ ಮೊದಲು ಸಾಹಿತ್ಯಸೃಷ್ಟಿ ಮಾಡಿದವರು ಜೈನರು. ದಕ್ಷಿಣ ಭಾರತದಲ್ಲಿ ಹಿಂದೆ ಪ್ರಚಲಿತವಾಗಿದ್ದುದು ದಿಗಂಬರ ಪಂಥದ ಜೈನ ಧರ್ಮ. ದಿಗಂಬರ ಸಂಪ್ರದಾಯದ ಪ್ರಕಾರ, ಸ್ತ್ರೀಯರು ಈ ಜನ್ಮದಲ್ಲಿ ಮೋಕ್ಷಕ್ಕೆ ಅಧಿಕಾರಿಗಳಾಗದಿದ್ದರೂ, ಅವರು ತಮ್ಮ ಸತ್ಕಾರ್ಯಗಳಿಂದ ಮುಂದಿನ ಜನ್ಮದಲ್ಲಿ ಪುರುಷರಾಗಿ ಹುಟ್ಟಿ ಬಳಿಕ ಮೋಕ್ಷವನ್ನು ಪಡೆಯಬಹುದು. ಎಂದರೆ, ಸ್ತ್ರೀಯರು ಧ್ಯಾನ, ಜ್ಞಾನ, ತಪಸ್ಸುಗಳಿಗೆ ಸಂಪೂರ್ಣವಾಗಿ ಅರ್ಹರು ಎಂಬುದು ಇದರಿಂದ ಧ್ವನಿತವಾಗುತ್ತದೆ. ಅನೇಕ ಜೈನ ಸಾಹಿತ್ಯ ಕೃತಿಗಳಲ್ಲಿ, ಶಾಸನಗಳಲ್ಲಿ ಹಲವು ಜೈನ ಮಹಿಳಾಮಣಿಯರನ್ನು ಎದುರುಗೊಳ್ಳುತ್ತೇವೆ. 'ವಡ್ಡಾರಾಧನೆ'ಯ ಸುಕುಮಾರ ಸ್ವಾಮಿಯ ಕತೆಯಲ್ಲಿ ಬರುವ ನಾಗಶ್ರೀಯು ಗುರುಗಳ ಪಕ್ಕದಲ್ಲಿ ಜೈನಧರ್ಮ ಸಾಧನೆಯನ್ನು ಕೈಗೊಂಡಂತೆ ಚಿತ್ರಿತಳಾಗಿದ್ದಾಳೆ. ಅನೇಕ ಜೈನ ಸ್ತ್ರೀಯರು ಪುರುಷರಂತೆ ಸಲ್ಲೇಖನವನ್ನು ಸ್ವೀಕರಿಸಿ ಸಮಾಧಿ ಮರಣವನ್ನು ಪಡೆದಂತೆ ಶಾಸನಗಳಿಂದ ತಿಳಿದು ಬರುತ್ತದೆ. ಉದಾಹರಣೆಗೆ ಕ್ರಿ. ಶ. ೧೧೭೪ ರ ಒಂದು ಶಾಸನದಲ್ಲಿ ಹರ್ಯಲೆ ಎಂಬ ಜೈನ ಮಹಿಳೆ ಸಲ್ಲೇಖನ ವ್ರತ ತೆಗೆದುಕೊಂಡು ಮಡಿಯುವ ಮುನ್ನ ತನ್ನ ಮಗುವನ್ನು ಸರಿಯಾಗಿ ನೋಡಿಕೊಳ್ಳುವಂತೆ, ಸತ್ಯವಂತನಾಗಿ ಬದುಕುವಂತೆ ಗಂಡನನ್ನು ಬೇಡಿಕೊಳ್ಳುವುದರಲ್ಲಿ ಅವಳ ತಾಯ್ತನವೂ, ಧರ್ಮ ಶ್ರದ್ಧೆಯೂ ಅಪೂರ್ವ ರೀತಿಯಾಗಿ ಚಿತ್ರಿತವಾಗಿವೆ. ನಮಗೆ ಶಾಸನಗಳಿಂದ ಅನೇಕ ಕಂತಿಯರ, ಎಂದರೆ ಜೈನ ಸನ್ಯಾಸಿನಿಯರ ಹೆಸರುಗಳು ತಿಳಿದು ಬರುತ್ತವೆ. ಇವರು ವಿದ್ಯಾವತಿಯರಾಗಿದ್ದು ಸಮಾಜ ಕಲ್ಯಾಣದ ಅನೇಕ ಕಾರ್ಯಗಳನ್ನು ಮಾಡುತ್ತಿದ್ದರು.ಜೈನಧರ್ಮದ ಮಹಿಳೆಯರಲ್ಲಿ ಅಗ್ರಗಣ್ಯಳೆಂದರೆ ಅತ್ತಿಮಬ್ಬೆ. ಇವಳ ಕಾಲ ೧೦–೧೧ ನೇ ಶತಮಾನಗಳು. ಇವಳು ಹುಟ್ಟಿದ ಮತ್ತು ಇವಳನ್ನು ಕೊಟ್ಟ ಮನೆಗಳೆರಡೂ ಸುಸಂಸ್ಕೃತವಾದ ಮನೆತನಗಳು. ತಂದೆ ಮಲ್ಲ-ಪಯ್ಯನು ಪೊನ್ನ ಕವಿಯಿಂದ 'ಶಾಂತಿ ಪುರಾಣ'ವೆಂಬ ಕಾವ್ಯವನ್ನು ಬರೆಯಿಸಿ-ದವನು. ಆ ಪುರಾಣದ ಪ್ರತಿಗಳು ಅವಳ ಕಾಲದಲ್ಲೇ ದುರ್ಲಭವಾದುದರಿಂದ

ಆ ಕೃತಿಯ ಸಾವಿರ ಪ್ರತಿಗಳನ್ನು ಮಾಡಿಸಿ ಆಕೆ ಹಂಚಿದಳು. ಅವಳನ್ನೂ ಅವಳ ತಂಗಿ ಗುಂಡಮಬ್ಬೆಯನ್ನೂ ಒಂದೇ ಹಸೆಯಲ್ಲಿ ನಾಗಿ ದೇವ ಎಂಬಾತನಿಗೆ ಕೊಟ್ಟು ಮದುವೆ ಮಾಡಿದ್ದರು. ಯುದ್ಧದಲ್ಲಿ ನಾಗಿದೇವ ಮಡಿದಾಗ, ತಂಗಿ ಗುಂಡಮಬ್ಬೆ ಸಹಗಮನ ಮಾಡಿದಳು. ಕೇವಲ ತಂಗಿಯ ಒತ್ತಾಯದಿಂದ ಅತ್ತಿಮಬ್ಬೆ ತನ್ನ ಮಗನ ಆರೈಕೆಗಾಗಿ ಸಹಗಮನ ಮಾಡದೆ ಉಳಿದುಕೊಂಡಳು. ತನ್ನ ಜೀವವನ್ನೆಲ್ಲ ಆತ್ಮ ಸಾಧನೆಗಾಗಿ, ಜೈನಧರ್ಮದ ಏಳಿಗೆಗಾಗಿ ಸವೆಸಿದಳು. ರನ್ನನಿಂದ 'ಅಜಿತ ಪುರಾಣ' ವೆಂಬ ಕಾವ್ಯವನ್ನು ಬರೆಯಿಸಿದಳು. ಬದುಕಿದ್ದಾಗಲೇ ಅವಳು ಚಕ್ರವರ್ತಿ ಪೂಜಿತಳಾಗಿದು ದಲ್ಲದೆ, ಪವಾಡ ಪುರುಷಳೂ ಮಹಿಮಾನ್ವಿತಳೂ ಆಗಿದ್ದಳು. ಅವಳ ಮಹಾ ಕಾರ್ಯಗಳೂ ಪವಾಡಗಳೂ ರನ್ನನ 'ಅಜಿತ ಪುರಾಣ' ದಲ್ಲಿಯೂ ಅವನೇ ಬರೆದನೆಂದು ಹೇಳಲಾಗಿರುವ ಲಕ್ಕುಂಡಿ ಶಾಸನದಲ್ಲೂ ವರ್ಣಿತವಾಗಿವೆ. ಅತ್ತಿಮಬ್ಬೆಯಂತಹ ಇನ್ನೊಬ್ಬ ವ್ಯಕ್ತಿ ಶಾಂತಲೆ. (ಇವಳನ್ನು ಕಥಾವಸ್ತುವಾಗಿ ಉಳ್ಳ ಕೆಲವು ಕೃತಿಗಳು ಹೊಸಗನ್ನಡ ಸಾಹಿತ್ಯದಲ್ಲಿ ಬಂದಿವೆ.) ಹನ್ನೆರಡನೆಯ ಶತಮಾನದಲ್ಲಿ ಆಳುತ್ತಿದ್ದ ವಿಷ್ಣುವರ್ಧನನ ಪಟ್ಟದ ರಾಣಿ ಈಕೆ. ಎಲ್ಲ ಮತಗಳ ಬಗ್ಗೆ ಈಕೆಗೆ ಅಭಿಮಾನ ವಿದ್ದಿತಾದರೂ ಜೈನಧರ್ಮ ಆಕೆಯ ವೈಯಕ್ತಿಕ ಧರ್ಮವಾಗಿದ್ದಿತು. ಸ್ವತಃ ಕಲಾವಿದೆ ಯಾಗಿದ್ದ ಆಕೆ ಅನೇಕ ಕಲೆಗಳಿಗೆ ಪ್ರೋತ್ಸಾಹವನ್ನು ಕೊಟ್ಟಿದ್ದಳು. ಹೀಗೆ ಕೆಲವು ರಾಣಿವಾಸದ ಸ್ತ್ರೀಯರೂ ಬೇರೆಯವರೂ ಸಾಮಾಜಿಕವಾಗಿ ಧಾರ್ಮಿಕವಾಗಿ, ಕೆಲವೊಮ್ಮೆ ರಾಜಕೀಯವಾಗಿ, ಸಕ್ರಿಯಪಾತ್ರವನ್ನುವಹಿಸುತ್ತಿದ್ದಂತೆ ಊಹಿಸಬಹುದು.

ಸಾಮಾನ್ಯವಾಗಿ ಸ್ತ್ರೀಯರು ಬಹಿರಂಗ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿ ದ್ದುದು ಕಡಿಮೆಯಾದರೂ ವಿರಳವಾಗಿಯಾದರೂ ಅಂತಹ ನಿದರ್ಶನಗಳು ದೊರಕು ವುದು ಗಮನಿಸಬೇಕಾದ ಸಂಗತಿ. ಅಕ್ಕಾದೇವಿ ಎಂಬಾಕೆ ಚಾಳುಕ್ಯ ರಾಜ್ಯದ ಅನೇಕ ಭಾಗಗಳನ್ನು ಬಹು ಸಮರ್ಥವಾಗಿ ಆಳುತ್ತಿದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ ಸ್ತ್ರೀಯರು ನಾಡಿನ ಗೌಡಿಕೆಯನ್ನು ಯಶಸ್ವಿಯಾಗಿ ನಿರ್ವಹಿಸಿದ ನಿದರ್ಶನಗಳೂ ಇಲ್ಲದಿಲ್ಲ.

ಒಂಬತ್ತು ಹತ್ತನೇ ಶತಮಾನಗಳು ಕರ್ಣಾಟಕದ ವೀರ ಜೀವನದ ಇತಿಹಾಸದಲ್ಲಿ ಬಹು ಮುಖ್ಯವಾದುವು. ರನ್ನನ 'ಗದಾಯುದ್ಧ' ಕಾವ್ಯದಿಂದ ಆ ಕಾಲದ ಸ್ತ್ರೀ-ಯರು ಪುರುಷರ ಐಶ್ವರ್ಯಾದಿಗಳಿಗಿಂತ ಅವರು ಶೂರರಾಗಿರುವುದನ್ನು ಮಾತ್ರ ಬಯ ಸುತ್ತಿದ್ದರೆಂದು ಊಹಿಸಬಹುದಾಗಿದೆ. ತಾಯಿಯಾದವಳಿಗೆ "ವೀರಜನನಿ" ಎಂಬ ಪ್ರಶಸ್ತಿಯನ್ನು ಪಡೆಯುವುದು ಅಭಿಮಾನದ ಸಂಗತಿಯಾಗಿದ್ದಿತು. ಕರ್ಣಾಟಕದಲ್ಲಿ ದೊರಕಿರುವ ಅನೇಕ ವೀರಗಲ್ಲುಗಳನ್ನು ವೀರರ ತಾಯಂದಿರು ನಿಲ್ಲಿಸಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ರಾಜಮನೆತನದ, ಉನ್ನತ ಅಧಿಕಾರದ ಮನೆತನಗಳ ಸ್ತ್ರೀಯರನ್ನು ಸಂನ್ಯಾಸಿನಿ-ಯರನ್ನು ಬಿಟ್ಟರೆ ಉಳಿದ ಸ್ತ್ರೀಯರು ಬಹುಮಟ್ಟಿಗೆ ಓದು-ಬರಹಗಳ ದೃಷ್ಟಿ

ಯಿಂದ ಅವಿದ್ಯಾವತಿಯರಾಗಿ ಉಳಿಯುತ್ತಿದ್ದರೆಂದು ಕಾಣುತ್ತದೆ, ಸಾವಿನಿರ್ಮಾಡಿ ಎಂಬ ವಿದ್ಯಾವತಿಯ ಹೆಸರು ಶಾಸನವೊಂದರಲ್ಲಿದೆ. ವಿಜ್ಜಿಕೆ, ಗಂಗಾದೇವಿ ಎಂಬ ಕವಯಿತ್ರಿಯರ ಹೆಸರುಗಳು ತಕ್ಕಮಟ್ಟಿಗೆ ಪ್ರಖ್ಯಾತವಾಗಿವೆ. ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಸ್ತ್ರೀ ವಾತ್ಸಲ್ಯದ ತಾಯಿಯಾಗಿ, ಮಗಳಾಗಿ, ಸೊಸೆಯಾಗಿ ಚಿತ್ರಿತಳಾಗಿದ್ದಾಳೆ, ಕೆಲವೆಡೆ ದುಷ್ಟತನದ ಪ್ರತೀಕವಾಗಿದ್ದಾಳೆ. ಎಂದರೆ, ಮನುಷ್ಯನ ಗುಣಗಳೂ, ದೌರ್ಬಲ್ಯಗಳು ಅವಳಲ್ಲಿಯೂ ಇರುವಂತೆ ನಿರೂಪಿತವಾಗಿವೆ. ಆದ್ದರಿಂದ ಯಾವುದೇ ಒಂದು ಸಾಮಾನ್ಯ ಹೇಳಿಕೆಯನ್ನು ಆದರ ಬಗ್ಗೆ ಮಾಡುವುದು ಅಸಾಧ್ಯವಾಗುತ್ತದೆ. ಹನ್ನೆರಡನೆಯ ಶತಮಾನದ ವರೆಗಿನ ಚಿತ್ರವನ್ನು ಸ್ಥೂಲವಾಗಿ ಹೀಗೆ ಕೊಡಬಹುದು : ಸ್ತ್ರೀಗೆ ಸಾಮಾಜಿಕವಾಗಿ ಪುರುಷರಿಗಿದ್ದ ಸ್ಥಾನಮಾನಗಳು ಆ ಪ್ರಮಾಣದಲ್ಲಿ ಇರಲಿಲ್ಲ. ಅವಳ ಕಾರ್ಯಕ್ಷೇತ್ರವೇನಿದ್ದರೂ ಬಹುತೇಕ ಮನೆಯ ಒಳಗೆ ಕೆಲವೆಡೆ. ಪಾಪದ ಕಡೆಗೆ ಮನುಷ್ಯನನ್ನು ಸೆಳೆಯುವ ಸಾಧನವೆಂಬಂತೆ ಅವಳನ್ನು ಭಾವಿಸಿದ್ದರೂ ಆಶ್ಚರ್ಯಪಡೆಯಬೇಕಾಗಿಲ್ಲ.

ಬಸವಣ್ಣ ಮೊದಲಾದ ವೀರಶೈವ ಧಾರ್ಮಿಕ ನಾಯಕರ ಪ್ರಯತ್ನಗಳಿಂದಾಗಿ ಸ್ತ್ರೀಯರ ಸ್ವಾತಂತ್ರ್ಯಕ್ಕೆ ಅವಕಾಶವಾಯಿತು, ನಿಜವಾದ ಆತ್ಮಕ್ಕೆ ಹೆಣ್ಣು ಗಂಡು ಎಂಬ ಭೇದವೇ ಇಲ್ಲವೆಂದು ಅವರು ಸಾರಿದರು. ಸ್ತ್ರೀಯರೂ ಪುರುಷರೂ ಚರ್ಚೆಗಳಲ್ಲಿ ಸಮಾನವಾಗಿ ಕುಳಿತು ಭಾಗವಹಿಸುತ್ತಿದ್ದ ಸಂಗತಿ ಅಪೂರ್ವವಾದುದು. ಅಲ್ಲಮನಂತಹ ಜ್ಞಾನಿಯನ್ನು ಪ್ರಶ್ನಿಸಿ ಅವನಿಗೆ ಸವಾಲು ಹಾಕಿದ ಮುಕ್ತಾಯಕ್ಕನಂತಹ ಧೈರ್ಯಶಾಲಿ ಸಾಧಕಿಯನ್ನು ಆ ಕಾಲದಲ್ಲಿ ಎದುರುಗೊಳ್ಳುತ್ತೇವೆ. ತಾನು ಒಲಿದ ಆದರ್ಶಕ್ಕಾಗಿ ಸಂಸಾರದಂತಹ ಬಲಿಷ್ಠ ಸಾಮಾಜಿಕ ಸಂಸ್ಥೆಯನ್ನು ಧಿಕ್ಕರಿಸಿ ನಿಂತ ವೀರ ವಿರಾಗಿಣಿ ಅಕ್ಕಮಹಾದೇವಿಯನ್ನೂ ಎದುರುಗೊಳ್ಳುತ್ತೇವೆ. ಬಡತನದ ಸಂಸಾರದಲ್ಲೂ ಸುಖವನ್ನು ಕಾಣುತ್ತ, ಪತಿಗೆ ಅನುಕೂಲಳಾಗಿದ್ದ ರಾಣಿ ಮಹಾದೇವಿ ಅಂಥವಳೇ ಆಗಿದ್ದ ಲಕ್ಕಮ್ಮ ಇವರೂ ಉಂಟು. ಸಂಸಾರದಲ್ಲಿ ದಾರಿ ತಪ್ಪಿದ ಗಂಡಂದಿರನ್ನು ಬುದ್ಧಿವಾದಗಳಿಂದ ಸನ್ಮಾರ್ಗಕ್ಕೆ ಒಯ್ದುದ್ದೂ ಉಂಟು. ಇವರೆಲ್ಲರೂ ಸಾಧಕರೂ ಅನುಭಾವಿಗಳೂ ಆಗಿದ್ದು ವಚನಗಳನ್ನು ಬರೆದರು. ವಚನಕಾರ್ತಿಯರ ಸಂಖ್ಯೆ ಇಪ್ಪತ್ತೈದಕ್ಕೂ ಮೀರಿದೆ. ಕನ್ನಡದಲ್ಲಿ ಮೊತ್ತ ಮೊದಲು ಸಾಹಿತ್ಯ ಸೃಷ್ಟಿ ಮಾಡಿದ ಶ್ರೇಯಸ್ಸು ಈ ವಚನಕಾರ್ತಿಯರಿಗೆ ಸಲ್ಲುತ್ತದೆ. ನಾನಾ ಕಾಯಕಗಳನ್ನು ಅವಲಂಬಿಸಿದ್ದ ಇವರಲ್ಲಿ ಅನೇಕರ ವಚನಗಳು ಕಾವ್ಯ ದೃಷ್ಟಿಯಿಂದಲೂ ಗಮನಾರ್ಹವಾದುವಾಗಿವೆ.

ಇಲ್ಲಿಯೂ ಕೂಡ, ಸ್ತ್ರೀಯು ಆದರ್ಶ ಪತ್ನಿಯಾಗಿರಬೇಕೆಂಬ ಭಾವನೆ ಪ್ರಬಲವಾಗಿದೆ. ಸ್ತ್ರೀ ಸಾಮಾಜಿಕವಾಗಿ, ತತ್ವಶಃ ಪುರುಷರಿಗೆ ಸಮಾನ. ಆಧ್ಯಾತ್ಮಿಕವಾಗಿ ಪುರುಷರ ಎಲ್ಲ ಸವಲತ್ತುಗಳು ಅವಳಿಗೂ ಇವೆ. ಆದರೆ ಅವಳ ಕಾರ್ಯಕ್ಷೇತ್ರ ಮುಖ್ಯವಾಗಿ ಮನೆಯಲ್ಲಿ, ವಚನಕಾರ್ತಿಯರಲ್ಲಿ ಕೆಲವರು ರಾಟೆ ಕಾಯಕ, ದೋಸೆ

ಮಾಡುವ ಕಾಯಕದಂತಹ ಮನೆಯೊಳಗೆ ಮಾಡುವ ವೃತ್ತಿಗಳನ್ನು ಅವಲಂಬಿಸಿದ್ದರು. ಮುಖ್ಯವಾಗಿ, ಗಂಡ ದುಡಿದು ತಂದದ್ದನ್ನು ಪೆರಣಗೊಳಿಸುವ, ಮನೆಯನ್ನು ನೋಡಿಕೊಳ್ಳುವ ಕಾರ್ಯ ಅವಳದು. ಅಕ್ಕಮ್ಮ ಎಂಬಾಕೆ 'ಪುರುಷನ ಆಚಾರದಲ್ಲಿ ಸತಿ ನಡೆಯಬೇಕಲ್ಲದೆ ಸತಿಗೆ ಸ್ವತಂತ್ರ ಉಂಟೆ?' ಎಂದು ಹೇಳುವಲ್ಲಿ ಅದನ್ನು ಗುರುತಿಸಬಹುದು. ಬಸವಣ್ಣನಂತಹ ಸಾರ್ವಜನಿಕ ವ್ಯಕ್ತಿಗಳು ತಮ್ಮ ಕಾರ್ಯಕ್ಷೇತ್ರಗಳಲ್ಲಿ ಯಶಸ್ವಿಯಾಗಲು ಅವರ ಅನುಕೂಲೆಯರಾದ ಪತ್ನಿಯರೂ ಕಾರಣರೆಂಬುದನ್ನು ನಾವು ಮರೆಯಬಾರದು.

ಸಾಹಿತ್ಯ ಕ್ಷೇತ್ರದಲ್ಲಿ ವಚನಕಾರ್ತಿಯರನ್ನು ಬಿಟ್ಟರೆ ಮತ್ತೆ ಸ್ತ್ರೀಯರನ್ನು ಕಾಣಲು ಚಿಕ್ಕ ದೇವರಾಜ ಒಡೆಯರ ಕಾಲಕ್ಕೇ ಬರಬೇಕು. ಹೊನ್ನಮ್ಮ ತನ್ನ 'ಹದಿಬದೆಯ ಧರ್ಮ'ವನ್ನು ರಚಿಸಿದ್ದು ಅವರ ಕಾಲದಲ್ಲಿಯೇ. ಅವಳು ತನ್ನ ಕೃತಿಯಲ್ಲಿ ತನ್ನ ಕಾಲದ ಸ್ತ್ರೀಯ ಆದರ್ಶಗಳನ್ನು ಬಹು ಮನೋಹರವಾಗಿ ಚಿತ್ರಿಸಿದ್ದಾಳೆ. ಮಗಳಾಗಿ, ಪತ್ನಿಯಾಗಿ, ತಾಯಿಯಾಗಿ ಸಂಸಾರದಲ್ಲಿ ನಾನಾ ಪಾತ್ರವನ್ನು ವಹಿಸುವ ಸ್ತ್ರೀಯ ಸಾಂಪ್ರದಾಯಿಕ ಆದರ್ಶಗಳು ಇಲ್ಲಿವೆ.

ತಾಯ್ತನದ ಆದರ್ಶದ ಒಂದು ಚಿತ್ರ ಹದಿನೈದನೇ ಶತಮಾನದ ಶಾಸನವೊಂದರಲ್ಲಿ ದೊರಕುತ್ತದೆ. ತಾಯಿ ಕೇವಲ ವಾತ್ಸಲ್ಯದ ಮೂರ್ತಿ ಮಾತ್ರವಲ್ಲದೆ, ಮಗುವಿನ ಮೊದಲ ಉಪಾಧ್ಯಾಯಿನಿಯೂ ಹೌದು. ಲಕ್ಷ್ಮೀಧರ ಅಮಾತ್ಯನಿಗೆ ಅವನ ತಾಯಿ ಅನೇಕ ಬುದ್ಧಿವಾದಗಳನ್ನು ಹೇಳುತ್ತ ಬೆಳೆಯಿಸಿದಳೆಂದು ಕ್ರಿ. ಶ. ೧೪೧೧ ರ ಹಂಪೆಯ ಶಾಸನವು ವರ್ಣಿಸುತ್ತದೆ.

ಕೆರೆಯಂ ಕಟ್ಟಿಸು ಬಾವಿಯಂ ಸವಸು ದೇವಾಗಾರಮಂ ಮಾಡಿಸ ।
ಜ್ಜೆರೆಯೊಳ್ ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯಿ ನಂಬಿದ ।
ರ್ಗೆರೆವಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ನಿಂದೆ ತಾ ।
ಯೆರೆದಳ್ ಪಾಲೆರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ ॥

ಈ ಗುಣಗಳನ್ನು ಬಾಲ್ಯದಲ್ಲಿ ಮೈಗೂಡಿಸಿಕೊಂಡು ಬೆಳೆದ ಲಕ್ಷ್ಮೀಧರ ಮುಂದೆ ಮಹಾವ್ಯಕ್ತಿಯಾದನೆಂದು ಶಾಸನ ವರ್ಣಿಸುತ್ತದೆ,

ಅತೃಪ್ತ ಬಯಕೆಯ ಹೆಣ್ಣಿನ ಚಿತ್ರವನ್ನು ನಂಜುಂಡ ಕವಿ ತನ್ನ 'ಕುಮಾರರಾಮ ಸಾಂಗತ್ಯ'ದ ರತ್ನಾಜಿಯಲ್ಲಿ ಚಿತ್ರಿಸಿದ್ದಾನೆ. ತೃಪ್ತ ಸಂಸಾರದ ಚಿತ್ರವನ್ನು ರತ್ನಾಕರನ 'ಭರತೇಶ ವೈಭವ' ದಲ್ಲಿ ನೋಡಬಹುದು. ಅಲ್ಲಿ ಭರತನೇ ಕೇಂದ್ರ ವ್ಯಕ್ತಿಯಾಗಿದ್ದು, ಅವನ ಪಾತ್ರ ಚಿತ್ರಣಕ್ಕೆ ಇಡೀ ಕಾವ್ಯ ಮೀಸಲಾಗಿದ್ದರೂ, ಅವನ ಮಡದಿಯರ ಪತಿಪ್ರೇಮ, ಪರಸ್ಪರ ಸ್ನೇಹ ಭಾವ, ರಸಿಕತೆ ಇತ್ಯಾದಿ ಗುಣಗಳ ಒಂದು ಆದರ್ಶ ಚಿತ್ರ ಅಲ್ಲಿ ದೊರಕುತ್ತದೆ. 'ಸಾರಂ ಅನಂಗ ಜಂಗಮ ಲತಾ ಲಲಿತಾಂಗಿಯರಿಂದಮಲ್ತೆ ಸಂಸಾರಂ' ಎಂಬ ಉಕ್ತಿ ಕಾವ್ಯದುದ್ದಕ್ಕೂ ನೆನಪಿಗೆ ಬರುತ್ತದೆ.

ಪ್ರಾಚೀನ ಸಾಹಿತ್ಯ, ಶಾಸನಗಳಲ್ಲಿ ಕಂಡು ಬರುವ ಹೆಣ್ಣಿನ ಚಿತ್ರ ಇಷ್ಟು ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಆವಳ ಕಾರ್ಯ ಕ್ಷೇತ್ರ ಪ್ರಮುಖವಾಗಿ ಮನೆಯ ಒಳಭಾಗವಾಗಿದ್ದರೂ ಅವಳಲ್ಲಿ ಪುರುಷನ ಎಲ್ಲಾ ಗುಣಗಳೂ ದುರ್ಗುಣಗಳೂ ಇವೆ ಎಂಬಂತೆ ಕಂಡುಬರುವುದು ಸಹಜವಾಗಿದೆ. ಪರಪುರುಷನ ಆಕ್ರಮಣಕ್ಕೆ ಒಳಗಾಗಿಯೂ ಹಠದಿಂದ ಸತೀತ್ವವನ್ನು ಕಾಪಾಡಿಕೊಂಡ ಸುನಂದೆಯ ಚಿತ್ರ ಒಂದು ಕಡೆಯಿದ್ದರೆ, ಸಂಸಾರದಲ್ಲಿ ಎಲ್ಲ ರೀತಿಯ ಸುಖವಿದ್ದರೂ ಕುರೂಪಿಯೊಬ್ಬನನ್ನು ಬಯಸಿ, ಕೊನೆಗೆ ತನ್ನ ಗಂಡನನ್ನೇ ಕೊಲೆ ಮಾಡಲು ಹೇಸದ ಅಮೃತಮತಿಯ ಚಿತ್ರ ಇನ್ನೊಂದೆಡೆ ದೊರಕುತ್ತದೆ. ವೈರಾಗ್ಯದ ಮಾತು ಬಂದಾಗ ಎಲ್ಲ ಪಾಪ ಕಾರ್ಯಗಳಿಗೂ ಹೆಣ್ಣೇ ಮೂಲ ಎಂಬ ಮಾತುಗಳೇನೋ ಬರುತ್ತವೆ. ಅದು ಪುರುಷರ ಅನ್ನಿಸಿಕೆ. ಆದರೆ ಆ ಮಾತುಗಳನ್ನು ಅಷ್ಟಾಗಿ ಲಕ್ಷಿಸಬೇಕಾಗಿಲ್ಲ. ಪುರುಷರಿಗೆ ಕೆಲವೊಮ್ಮೆ ಹಾಗನ್ನಿಸಿದ್ದರೆ, ಸ್ತ್ರೀಯರಿಗೆ ಪುರುಷರು ಪಾಪ ಕಾರ್ಯಗಳಿಗೆ ಮೂಲ ಎಂದು ಅನ್ನಿಸಬೇಕು. ಜೊತೆಗೆ 'ಮಾಯೆ' ಸ್ತ್ರೀ ಲಿಂಗದ ಪದ. ಒಟ್ಟಿನಲ್ಲಿ ಆದರ್ಶ ಸುಖಮಯ ಸಂಸಾರದ ಚಿತ್ರಗಳಲ್ಲಿ ಹೆಣ್ಣನ್ನು ಬಹು ಗೌರವದಿಂದ ರೂಪಿಸಿರುವುದು ಮುಖ್ಯ ಸಂಗತಿಯಾಗುತ್ತದೆ. ಅವಳಿಗೂ ವ್ಯಕ್ತಿತ್ವವೊಂದು, ಕರ್ತವ್ಯವೊಂದು ಇದೆ ಎಂಬುದನ್ನು ಗುರುತಿಸಿದ್ದರೆಂಬುದೂ ಅಷ್ಟೇ ಮುಖ್ಯ ಸಂಗತಿಯಾಗುತ್ತದೆ. □

# ಮಹಾದೇವಿಯಕ್ಕನ ಮಹತಿ

ಪ್ರೊ. - ಲಲಿತಾಂಬಾ ವೃಷಭೇಂದ್ರಸ್ವಾಮಿ

ಶರಣ–ಶರಣೆಯರ ಜೀವನಗಳು ಸಮಾಜ ಸುಧಾರಣೆಯಲ್ಲಿ ಅಮೋಘ ಪಾತ್ರ ವಹಿಸಿವೆ. ಅವರ ವಚನಗಳು ಸಮಾಜಕ್ಕೆ ಮಾರ್ಗದರ್ಶನವನ್ನು ಕೊಡುವದರ ಜೊತೆಗೆ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಗಳಾಗಿವೆ. ಶರಣ ಜೀವನದಲ್ಲಿ ಶ್ರೇಷ್ಠರಾದ ಅಣ್ಣ ಬಸವಣ್ಣ, ಅಕ್ಕಮಹಾದೇವಿ, ಪ್ರಭುಅಲ್ಲಮ ಇವರುಗಳು ಎಲ್ಲ ಕಾಲಕ್ಕೂ ಎಲ್ಲ ಜನರಿಗೂ ಮಾರ್ಗದರ್ಶನದ ವಚನಗಳಿಂದ ಅಣ್ಣ, ಅಕ್ಕ ಮತ್ತು ಪ್ರಭುಗಳಾಗಿದ್ದಾರೆ.

ಅಕ್ಕಮಹಾದೇವಿ ಸಮಾಜ ಸುಧಾರಣೆಗೆಂದಾಗಲೀ, ಲೋಕದ ಡೊಂಕು ತಿದ್ದಲೆಂದಾಗಲೀ ಪ್ರಯತ್ನಿಸಲಿಲ್ಲ. ಆಕೆಯ ವಚನಗಳು ಹೆಚ್ಚಾಗಿ 'ಮೊರೆ, ಭಕ್ತಿ, ನಿಷ್ಠೆ, ಪರಮಾತ್ಮ, ಆತ್ಮ ಇವುಗಳ ಬಗ್ಗೆ ರಚಿತವಾಗಿವೆ; ಅಕ್ಕಮಹಾದೇವಿ ಒಂದು ಧರ್ಮದ ಅಥವಾ ಒಂದು ಮತದ ವ್ಯಕ್ತಿಯಲ್ಲ; ಎಲ್ಲಾ ಕಾಲದ, ಎಲ್ಲಾ ಧರ್ಮದ, ಎಲ್ಲಾ ದೇಶದ ಜನರೂ ಅನುಸರಿಸಬಹುದಾದ ಅನೇಕ ಸದ್ಗುಣಗಳ ಖಣಿ. ಆದಕ್ಕಾಗಿಯೇ ಆಕೆ ಎಲ್ಲರಿಗೂ ಎಲ್ಲ ಕಾಲಕ್ಕೂ ಅಕ್ಕ. ಆಕೆಯ ವಿಷಯಗಳನ್ನು ಆಕೆಯ ಬಗ್ಗೆ ದೊರೆತಿರುವ ವಚನಗಳನ್ನೋ ಬರಹಗಳನ್ನೋ ಅವಲಂಬಿಸಿ ತಿಳಿದುಕೊಳ್ಳಬಹುದಾಗಿದೆ. ಅವುಗಳ ಆಧಾರದ ಮೇಲೆ ಜನರು ಆಕೆಯ ಜೀವನವನ್ನು ತಮ್ಮ ಬುದ್ಧಿಗೆ ಹಾಗೂ ಅನುಭವಕ್ಕೆ ಸಿಲುಕಿದ ರೀತಿಯಲ್ಲಿ ಚಿತ್ರಿಸಿದ್ದಾರೆ. ದೊರೆತ ಆಧಾರದ ಮೇಲೆ ಅನೇಕ ಊಹಾಪೋಹಗಳನ್ನು ಹೆಣೆದಿದ್ದಾರೆ. ದೊರೆತಿರುವ ಆಧಾರಗಳು ಎಷ್ಟರ ಮಟ್ಟಿಗೆ ಸತ್ಯವೋ ಎಷ್ಟರಮಟ್ಟಿಗೆ ಮಿಥ್ಯವೋ ಯಾರಿಂದಲೂ ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಈಗಿಂದೀಗ ನಡೆದ ಘಟನೆಗಳೇ ಒಬ್ಬರ ಬಾಯಿಂದ ಒಬ್ಬರಿಗೆ ಹೋಗುವುದರೊಳಗೆ ಕಾಗೆಯಂತೆ ಕಪ್ಪಾಗಿ ವಾಂತಿಮಾಡಿದನೆಂಬ ಸುದ್ದಿ ಮೂರು ಕಾಗೆಗಳನ್ನೇ ವಾಂತಿ ಮಾಡಿದನಂತೆ ಎಂದು ಹರಡುವಾಗ, ಎಂಟು ನೂರು ವರ್ಷಗಳ ಹಿಂದಿನ

ಸುದ್ದಿಯ ಬಗ್ಗೆ ಎಷ್ಟು ಸತ್ಯವಾದ ವಿಷಯಗಳು ಬರಬಹುದೋ ಖಚಿತವಾಗಿ ಹೇಳಲು ಸಾಧ್ಯವಿಲ್ಲ. ವಚನಗಳನ್ನೂ ಬಿಟ್ಟರೆ, ಅಕ್ಕನ ಕಾಲಕ್ಕೆ ಅತೀ ಸಮೀಪದಲ್ಲಿ ಸಿಕ್ಕುವ ಆಧಾರ ನ್ಯಾಯ ನಿಷ್ಠುರನಾದ ಹರಿಹರನು ಬರೆ ರಗಳೆ,. ಇದು ಸುಮಾರು ಎಂಬತ್ತು ವರ್ಷಗಳ ನಂತರ ಬರೆದದ್ದು. ಹರಿಹರನು ಇದ್ದುದನ್ನು ಇದ್ದಂತೆಯೇ ಚಿತ್ರಿಸುವ ಕವಿ ಎಂದುಕೊಂಡರೂ ಕವಿ ಕವಿಯೆ. 'ರವಿ ಕಾಣದುದ ಕವಿ ಕಂಡ' ಎಂದು ಸಾಹಿತ್ಯದ ಚೌಕಟ್ಟಿನಲ್ಲಿ ವಿಷಯ ಜೋಡಣೆ ಮಾಡುವಾಗ, ಓದುಗರ ಮೆಚ್ಚುಗೆ, ಜನಪ್ರಿಯತೆ ಗಳಿಸಲು ರೂಪಾಂತರ ಆಗಿಯೇ ತೀರುತ್ತದೆ. ಮೇಲಾಗಿ ಕವಿಯೂ ಮನುಷ್ಯನೇ. ತಾನು ರಚಿಸಿರುವ ಸಾಹಿತ್ಯದಲ್ಲಿ ತನ್ನ ಸ್ವಂತ ಅಭಿಪ್ರಾಯ, ವಿಚಾರಗಳನ್ನು ಬರಹದ ಮೂಲಕ ತಿಳಿಪಡಿಸುವುದು ಸಹಜವೆ. ಆದುದರಿಂದ ಕವಿಗಳ ಬರಹಗಳಾಗಲೀ ಪುರಾಣ ಗಳಾಗಲಿ ಎಷ್ಟರ ಮಟ್ಟಿಗೆ ಸತ್ಯಕ್ಕೆ ಹತ್ತಿರವಾಗಿವೆ, ಎಂಬುದನ್ನು ನಿಖರವಾಗಿ ಹೇಳಲು ಅಸಾಧ್ಯ. ಒಟ್ಟಿನಲ್ಲಿ ಈಕೆ ಒಬ್ಬ ಮಹಾಶಿವಶರಣೆ. ನಶ್ವರನಲ್ಲದ ಈಶ್ವರನ ನಿಸ್ಸೀಮ ಭಕ್ತೆ.ಅವನ ಪದತಲದಲ್ಲಿ ತನ್ನನ್ನೇ ತಾನರ್ಪಿಸಿಕೊಂಡ ಜ್ಞಾನ ನಿಧಿ.ಪ್ರಪಂಚದ ಪ್ರಲೋಭ ನೆಗಳೆಲ್ಲ ಕೈಚಾಚಿ ಕರೆದರೂ ಮೈ ಒಡ್ಡದ ಮಹಾವೀರೆ. ಯೌವ್ವನ, ಐಶ್ವರ್ಯ. ಸ್ಥಾನ, ಗೌರವಾದಿಗಳು ಪದತಲದಲ್ಲಿ ಬಿದ್ದರೂ ಕೌಮಾರ್ಯದಲ್ಲಿಯೇ ಅವುಗಳ ನಶ್ವರತೆಯನ್ನರಿತು ನಡೆದ ವೈರಾಗ್ಯ ನಿಧಿ. ಯಾವ ವಯಸ್ಸಿನಲ್ಲಿ ಉಳಿದವರಾರೇ ಆಗಿದ್ದರೂ ಪ್ರಲೋಭನೆ ಗಳಿಗೆ ಸುಲಭವಾಗಿ ಒಳಗಾಗುಬಹುದಾಗಿತ್ತೋ ಆ ವಯಸ್ಸಿನಲ್ಲಿ ಪ್ರಲೋಭನೆಗಳನ್ನೆಲ್ಲಾ ತುಚ್ಛೀಕರಿಸಿ, ಮಾಯೆಯನ್ನು ದಾಟಿ ನಿರ್ಮಾಯೆಯನ್ನು ಮುಟ್ಟಿದ ಸಾಧ್ವಿ. ಈ ದಿಟ್ಟ ತನ. ಯೌವ್ವನದಲ್ಲಿಯೇ ನಿರ್ವಿಕಾರ ಸುಖದ ಸುಪ್ಪತ್ತಿಗೆಯಲ್ಲಿಯೇ ವೈರಾಗ್ಯವನ್ನು ಪಡೆಯುವುದು ಅಸಾಮಾನ್ಯರಿಗೂ ಅಸಾಧ್ಯವೇ ಏಕೆ, ಇಂತಹ ಉದಾಹರಣೆ ಮತ್ತೊಂದಿ ರಲಾರದು. ಅಸಾಧ್ಯವನ್ನು ಸಾಧ್ಯವಾಗಿಸಿದ ನಿಸ್ಸೀಮೆ ಈಕೆ. ಮೈಯ ನಾಚಿಕೆಯನ್ನು ಯೌವ್ವನದಲ್ಲಿ ಅದರಲ್ಲಿಯೂ ಹೆಣ್ಣಾದವಳು ತೊರೆಯುವುದು ಸುಲಭದ ಮಾತೇನಲ್ಲ. ಆಗಿನ ಸಮಾಜದ ಪರಿಸ್ಥಿತಿಯಲ್ಲಿ ಇಪ್ಪತ್ತನ್ನು ದಾಟದ ಹರೆಯದ ಹೆಣ್ಣು ಸಮಾ ಜವನ್ನೇ ಎದುರಿಸಿ, ಹುಟ್ಟು ದಿಗಂಬರೆಯಾಗಿ, ನಟ್ಟಡವಿಯಲಿ ಒಂಟಿಯಾಗಿ ಅಲೆದು ಗುರಿಯನ್ನು ಮುಟ್ಟಿದುದು ಅದ್ಭುತವ ಸಂಗತಿಯಲ್ಲದೆ ಆಕೆ ಅಸಾಮಾನ್ಯ ವ್ಯಕ್ತಿ, ದೈವಾಂಶ ಸಂಭೂತೆ ಎಂಬ ವಿಷಯವನ್ನು ಪುಷ್ಟೀಕರಿಸುತ್ತದೆ.

ಅಕ್ಕನ ವಚನಗಳಲ್ಲಿ ಕೊಟ್ಟಿರುವ ಉಪಮೆಗಳು, "ಹೇಳುವ ಅರ್ಥವನ್ನು ಪುಷ್ಟಿ ಕರಿಸಿ ವಿಷಯಗಳನ್ನು ಸುಲಭಗ್ರಾಹ್ಯವಾಗುವಂತೆ ಮಾಡಿವೆ. ಎಲ್ಲ ಉಪಮೆಗಳು, ಜೀವಂತ ಉಪಮೆಗಳು. ದಿನ ದಿನದ ಲೋಕಾನುಭವದಿಂದ ನೇರವಾಗಿ ಸೆಳೆದುಕೊಂಡ ವುಗಳು," ಅಕ್ಕನ ವಚನಗಳಿಂದ ಆಕೆಯ ಗುಣ, ಶೀಲ, ಸ್ವಭಾವ ಚಾರಿತ್ರ್ಯಗಳ ಕಲ್ಪನೆ ಪಡೆಯುಬಹುದಾಗಿದೆ.ಪ್ರಭುದೇವರೊಡನೆ ಸಂವಾದದಲ್ಲಿ ಆಕೆಯು ಡಾ। ಹುಣಶ್ಯಾಳರು ತಿಳಿಸಿರುವಂತೆ.

"She with her ingenious appealing logic convinced Allamma Prabhu of the status of woman and their just claims in Society and in every walk of life."

ಹೀಗೆ ಶೂನ್ಯ ಸಿಂಹಾಸನಾಧೀಶ್ವರನೂ, ಬಸವೇಶ್ವರನ ಗೌರವ, ಪೂಜ್ಯತೆಗಳಿಗೆ ಪಾತ್ರನೂ ಆದ ಅಲ್ಲಮಪ್ರಭುವಿಗೇ ಮೆಚ್ಚುಗೆ ಎನಿಸುವ ಉತ್ತರ ಕೊಟ್ಟು ಎಲ್ಲರ ದೃಷ್ಟಿಯಲ್ಲಿ ಸ್ತ್ರೀಯ ಸ್ಥಾನಮಾನಗಳನ್ನು ಉನ್ನತಿಸಿದ್ದಾಳೆ.

ಇಂಥಹ ಉನ್ನತ ಶಿಖಾಮಣಿಯಾದ ಅಕ್ಕನ ಬಗ್ಗೆ ಎಲ್ಲರೂ ತಿಳಿಯುವುದು ಆವಶ್ಯಕ. ವಿಧವಿಧವಾದ ಕಥೆಗಳು ಆಕೆಯ ಬಗೆಗಿದ್ದರೂ ಮುಖ್ಯ ವಿಷಯದಲ್ಲಿ ಮಾತ್ರ ಎಲ್ಲವುಗಳಲ್ಲಿಯೂ ಏಕತೆ ಇದೆ. ಈಗ ಹರಹರನು ಬರೆದಿರುವ ರಗಳೆಯನ್ನೇ ತೆಗೆದುಕೊಳ್ಳೋಣ. ಅದರಲ್ಲಿ ಚಿತ್ರಿಸಿರುವಂತೆ ಅಕ್ಕಮಹಾದೇವಿ ಪಾರ್ವತಿಯ ಒಡ್ಡೋಲಗದಲ್ಲಿದ್ದ ಮಹಾದೇವಿ ಎಂಬ ರುದ್ರಕನ್ನಿಕೆ. ಒಮ್ಮೆ ಪರಮೇಶ್ವರನಿಂದ ಕಳಿಸಲ್ಪಟ್ಟ ಗುಪ್ತಗಣನಾಥನು ಪಾರ್ವತಿಯ ಓಲಗಕ್ಕೆ ಬಂದು ಆಕೆಗೆ ನಮಸ್ಕರಿಸುವಾಗ ಅವನ ಕಾಲು ಈ ರುದ್ರಕನ್ನಿಕೆಗೆ ತಗಲುತ್ತದೆ. ಇದರಿಂದ ಕುಪಿತಳಾದ ಮಹಾದೇವಿಯು 'ಭವೀ ನೋಡಿ ನಮಸ್ಕರಿಸು' ಎಂದು ನಿಂದಿಸುತ್ತಾಳೆ. ಶಿವನ ಭಕ್ತರಿಗೆ "ಭವಿ" ಎಂಬುದಕ್ಕಿಂತ ಹೀನವಾದ ಶಬ್ದ ಮತ್ತೊಂದಿಲ್ಲ. ಶಿವನ ಪರಮಭಕ್ತನಾದ ತನ್ನನ್ನು "ಭವಿ" ಎಂದು ಕರೆದುದಕ್ಕಾಗಿ ಕಾದ ಎಣ್ಣೆಯಲ್ಲಿ ಹಾಕಿ ಕುದಿಸಿದಷ್ಟು ನೊಂದುಕೊಳ್ಳುತ್ತಾನೆ ಗಣನಾಥ. ಅವನ ಸಂಕಟವನ್ನು ನೋಡಿ ಮಹಾಮಾತೆಯಾದ ಪಾರ್ವತಿಗೆ ಕನಿಕರವಾದುದಲ್ಲದೆ ರುದ್ರಕನ್ನಿಕೆಯ ಮುಂಗೋಪಕ್ಕೆ ಸಿಟ್ಟೂ ಬರುತ್ತದೆ. "ನೀನು ಮರ್ತ್ಯದಲ್ಲಿ ಶಿವಭಕ್ತೆಯಾಗಿ ಹುಟ್ಟಿ ಭವಿಗೆ ಹೆಂಡತಿಯಾಗಿ, ಶ್ರೀಶೈಲಕ್ಕೆ ತೆರಳಿ ನಂತರ ಇಲ್ಲಿಗೆ ಬಾ" ಎಂದು ಶಪಿಸುತ್ತಾಳೆ. ಆದರಂತೆ ಶಿವಭಕ್ತೆಯರ ಮಗಳಾಗಿ ಜನ್ಮ ತಾಳುತ್ತಾಳೆ. ರುದ್ರಕನ್ನಿಕೆಗೆ ತಾನು ಮರ್ತ್ಯದಲ್ಲಿ ಜನಿಸಿ ಜಗನ್ಮಾತೆಯಿಂದ ದೂರವಿರಬೇಕಾದ ದುಃಖದ ಜೊತೆಗೆ "ಭವಿ"ಯ ಪತ್ನಿಯಾಗಬೇಕಾದ ಪರಿಸ್ಥಿತಿ ನುಂಗಲಾರದ ತುತ್ತಾಗುತ್ತದೆ. ಆದರೆ ತಪ್ಪಿಗೆ ತಕ್ಕ ಪ್ರಾಯಶ್ಚಿತ ಅನುಭವಿಸಲೇಬೇಕು. ಅದಕ್ಕಾಗಿ ಶಿವಭಕ್ತ-ಶಿವಭಕ್ತೆಯರ ಮುದ್ದಿನ ಮಗಳಾಗಿ ಉಡತಡಿಯಲ್ಲಿ ಜನ್ಮತಾಳುತ್ತಾಳೆ. ಪೂರ್ವ ಸಂಸ್ಕಾರದಿಂದ ಈಕೆ ಬಾಲ್ಯದಿಂದಲೇ ಶಿವಭಕ್ತಿ ಸಂಪನ್ನಳಾಗಿರುತ್ತಾಳೆ.ಸದಾ ಶಿವಧ್ಯಾನ-ಶಿವಪೂಜೆಯಲ್ಲಿಯೇ ಮಗ್ನಳಾಗಿರುತ್ತಾಳೆ. "ಬೆಳೆಯುವ ಸಸಿಯನ್ನು ಮೊಳಕೆಯಲ್ಲೇ ನೋಡು" ಎಂಬಂತೆ ಬಾಲ್ಯದಿಂದಲೇ ಶಿವಶರಣೆಯ ಲಕ್ಷಣಗಳೆಲ್ಲ ಈಕೆಯಲ್ಲಿದ್ದುವು. "ಲಿಂಗಪತಿ ಶರಣಸತಿ" ಎಂಬ ಶರಣರ ಬೀಜಮಂತ್ರವು ಈಕೆಯ ಮನಸ್ಸಿಗೆ ತುಂಬಾ ನಾಟಿತು. ಚನ್ನಮಲ್ಲಿಕಾರ್ಜುನನು ತನ್ನ ಪತಿ, ಸಾಮಾನ್ಯರಾದ "ಸಾವ ಕೆಡುವ ಗಂಡರನ್ನು" ತಾನು ಮಾಡಿಕೊಳ್ಳುವುದಿಲ್ಲೆಂಬ ನಿರ್ಧಾರವನ್ನು ಬಾಲ್ಯದಿಂದಲೇ ನೀರೆರೆದು ಪೋಷಿಸಿದಳು. ಇಂತಹ ಭಾವನೆಗಳನ್ನೇ ರಕ್ತಗತ ಮಾಡಿಕೊಳ್ಳುತ್ತ ಪ್ರೌಢ ತರುಣಿಯಾದಳು. ನವಯೌವನ ದಿಂದೊಡಗೂಡಿ, "ಇದಾವ ಕಾಮುಕರಂ ಕೀಳ್ ಮಾಡಲಿರ್ದಪುದು ಇದಾವ ರಸಿಕರ

ಭಾವವಂ ಬರಿ ಕೈಯಲಿರ್ದಪುದು, ಇದಾವ ಸಜ್ಜನರಂ ನೀತಿಗೆಡಿಸಲಿರ್ದಪುದು " ಎಂಬ ಅಚ್ಚರಿ ಪಡುವಂತೆ ಬೆಳೆದು ನಿಂತಳು.

ಇಂದು ಗ್ರಾಮವಾಗಿ ಉಳಿದಿರುವ 'ಉಡುತಡಿ'ಯು ಅಂದು ಕೌಶಿಕನೆಂಬ ಅರಸನ ರಾಜಧಾನಿಯಾಗಿತ್ತು. ಒಮ್ಮೆ ರಾಜನು ವೈಹಾಳಿಯಿಂದ ಹಿಂತಿರುಗಿ ಅರಮನೆಗೆ ಹೋಗುತ್ತಿರುವಾಗ ರಾಜನ ದರ್ಶನಾರ್ಥ ನಿಂತ ಜನರ ಸಮೂಹದಲ್ಲಿ ಷೋಡಶ ಕಳಿಗಳಿಂದ ಕಂಗೊಳಿಸುತ್ತಿದ್ದ ಮಹಾದೇವಿ ರಾಜನ ದೃಷ್ಟಿಗೆ ಬಿದ್ದಳು. ಅವಳ ದಿವ್ಯರೂಪವನ್ನು ಕಂಡು ಮೋಹಿತನಾಗಿ ಆಕೆಯಂತಹ ರೂಪರಾಶಿ ತನ್ನರಮನೆಯಲ್ಲಿಲ್ಲದಿದ್ದರೆ ತನ್ನ ಅಂತಃಪುರಕ್ಕೆ ನ್ಯೂನತೆ ಎಂದು ಯೋಚಿಸಿ ಆಕೆಯನ್ನು ವಿವಾಹಮಾಡಿಕೊಳ್ಳಬೇಕೆಂದು ನಿಶ್ಚಯಿಸಿಯೇ ತನ್ನ ಅರಮನೆಯನ್ನು ಪ್ರವೇಶಿಸುತ್ತಾನೆ. ಎಂಟುನೂರು ವರ್ಷಗಳ ಹಿಂದೆ ರಾಜನ ಅಭಿಲಾಷೆಯನ್ನು ವಿರೋಧಿಸುವವರಾರು ! ತಡೆಹಿಡಿಯುವವರಾರು ! ಯುಕ್ತಾಯುಕ್ತವೋ ಧರ್ಮಾಧರ್ಮವೋ ವಿಚಾರಿಸುವಂತಿಲ್ಲ. ಪ್ರಜೆಗಳು ರಾಜಾಜ್ಞೆಗೆ ಶಿರಬಾಗಲೇಬೇಕು. ವಿಜಯನಗರದ ಅರಸರು ಆಳುವಕಾಲದಲ್ಲೇ 'ರಾಜನು' ಹೇಳಿ ಕಳುಹಿಸಿದನೆಂದು ಬಂಡೆ ಬೆನ್ನುಮೇಲೆ ಹೊತ್ತು ನಿಲ್ಲಬೇಕೆಂದು ರಾಜನ ಕಡೆಯ ಒಬ್ಬ ಅಧಿಕಾರಿ ಹೇಳಿದರೆ, ಕಾರಣವನ್ನು ಕೇಳದೆಯೇ ಪ್ರಜೆಗಳು ಆಗಿನ ಕಾಲದಲ್ಲಿ ಮರು ಮಾತಿಲ್ಲದೆ ಬಂಡೆ ಹೊತ್ತು ನಿಲ್ಲುತ್ತಿದ್ದರಂತೆ. ಎಂದಮೇಲೆ ಅದಕ್ಕೂ ಶತಮಾನಗಳು ಮೊದಲು ರಾಜ ದಬ್ಬಾಳಿಕೆಗೆ ಮಿತಿ ಎಲ್ಲಿಯದು ? ರಾಜನ ಮನಸ್ಸಿಗೆ ಬಂದುದು ನಡೆಯಲೇಬೇಕು. ಎಂತಲೇ ಮರುದಿನವೇ ಅಕ್ಕಮಹಾದೇವಿಯ ತಂದೆ ತಾಯ್ಗಳಿಗೆ ರಾಜನ 'ಅಭಿಲಾಷೆ'ಯ ಸುದ್ದಿ ಬಂದಿತು. ಅವರುಗಳಾದರೋ ಕಟ್ಟಾ ಶಿವಭಕ್ತರು. ಕೌಶಿಕನಾದರೋ ಭವಿ! ರಾಜಾಜ್ಞೆ ಮೀರುವಂತಿಲ್ಲ, ಉಗುಳಲೂ ಆಗದ, ನುಂಗಲೂ ಬಾರದ ಪರಿಸ್ಥಿತಿ. ಮಹಾದೇವಿಯದಾದರೋ ಮಲ್ಲಿಕಾರ್ಜುನನೇ ಗಂಡನೆಂದು ಭಾವಿಸಿ ಬೆಳೆದವಳು. ಉಳಿದ ಶಿವಭಕ್ತರನ್ನೂ ವರಿಸುವ ಮನಸ್ಸಿಲ್ಲದ ಆಕೆ 'ಭವಿ'ಯನ್ನು ವರಿಸಲು ಒಪ್ಪಬಹುದೆ ? ಆದರೆ ವಿಧಿ ಇಲ್ಲ; ಒಪ್ಪಲೇಬೇಕಾದ ಪ್ರಸಂಗ. ಧರ್ಮಾಚಾರಗಳಿಗೆ, ಶಿವಪೂಜೆ, ಶರಣದಾಸೋಹ, ಜಂಗಮಸೇವೆ ಮೊದಲಾದವುಗಳಿಗೆ ಭಂಗತರದಿದ್ದಲ್ಲಿ ವಿವಾಹಕ್ಕೆ ಸಮ್ಮತಿ ಎಂದು, ವಿವಾಹವಾದ ಮೇಲೂ ರಾಜನ ಮೂರು ಸಾರಿ ತನ್ನ ವಚನಕ್ಕೆ ಮೀರಿ ನಡೆದರೆ ರಾಜನನ್ನೇ ತೊರೆದು ಹೋಗುವುದಾಗಿ ಷರತ್ತುಗಳನ್ನು ಹಾಕುತ್ತಾಳೆ.ಕಾಮಾತುರನಾದ ರಾಜ ವಿವಾಹದ ನಂತರ ಎಲ್ಲವೂ ತನ್ನಿಚ್ಛೆಯಂತೆ ಮಾರ್ಪಡುವುದೆಂದು ಭಾವಿಸಿ ಎಲ್ಲಾ ಷರತ್ತುಗಳಿಗೂ ಒಪ್ಪುತ್ತಾನೆ. ವಿವಾಹವಾಗುತ್ತದೆ. ಕೆಲವು ಕಾಲ ಕೌಶಿಕನ ಅರಸಿಯಾಗಿದ್ದು ನಂತರ ಅವನು ಮೂರು ತಪ್ಪುಗಳನ್ನು ಮಾಡಿದ ತಕ್ಷಣ ಸರ್ವವನ್ನು ತ್ಯಜಿಸಿ ವೈರಾಗ್ಯ ನಿಧಿಯಾಗಿ ಮಲ್ಲಿಕಾರ್ಜುನನ್ನು ಹುಡುಕಿಕೊಂಡು ಹೊರಡುತ್ತಾಳೆ. ಇದು ರಸವತ್ತಾಗುವಂತೆ ಹೆಣೆದಿರುವ ಕಥೆ, ಆದರೆ ಈಕೆಯ ವಿವಾಹ ಕೌಶಿಕನೊಡನೆ ಆಯಿತೆ ಇಲ್ಲವೆ, ಅವನೊಡನೆ ವೈವಾಹಿಕ ಜೀವನ ನಡೆಯಿತೆ ಇಲ್ಲವೆ ಎಂಬ ಬಗ್ಗೆ ವಿವಿದಾಭಿಪ್ರಾಯಗಳು ಇವೆ. ಆದರೆ ಈಕೆ ಮಾತ್ರ ;

" ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚೆಲುವಂಗಾನೊಲಿದೆನವ್ವಾ,
ಎಡೆ ಇಲ್ಲದ ಕಡೆ ಇಲ್ಲದ ತೆರಹಿಲ್ಲದ ಕುರುಹಿಲ್ಲದ ಚೆಲುವಂಗಾನೊಲಿದೆ
ಎಲೆ ಅವ್ವಾ; ನೀನು ಕೇಳಾ ತಾಯೆ !
ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ ನಾನು
ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ
ಇದು ಕಾರಣ ಚನ್ನಮಲ್ಲಿಕಾರ್ಜುನ ಚಲುವ ಗಂಡನೆನಗೆ
ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು "

ಎಂದು ಹೇಳಿರುವುದನ್ನು ನೋಡಿದರೆ, ಮದುವೆಯಾಗೆಂದು ಒಪ್ಪಿಸಲು ಬಂದ ತಾಯಿಗೆ ಕೊಟ್ಟ ಅಕ್ಕನ ಉತ್ತರವೆಂಬಂತೆ ತೋರುತ್ತದೆ. ಆದ್ದರಿಂದ ಆಕೆ ಕೌಶಿಕನೊಡನೆ ವಿವಾಹವಾದಳೆ ? ವೈವಾಹಿಕ ಜೀವನ ನಡೆಸಿದಳೆ ಎಂಬ ಬಗ್ಗೆ ಊಹಾಪೋಹಗಳಿಗ ವಕಾಶಗಳಿವೆ. ಅಕ್ಕನು ಕೌಶಿಕನ ಮನೆಯಲ್ಲಿದ್ದುದನ್ನು ಒಪ್ಪಿಕೊಂಡರೆ, ಅವನೊಡನೆ ವಿವಾಹವಾದುದನ್ನೂ ಅವನೊಡನೆ ವೈವಾಹಿಕ ಜೀವನ ನಡೆಸಿದಳೆಂಬುದನ್ನೂ ಒಪ್ಪಿಕೊಳ್ಳಬೇಕಾಗುತ್ತದೆ. ಅಂತಹ ನೇಮ ನಿಷ್ಠೆಯಲ್ಲಿ ಬೆಳೆದ ಆಕೆಯಾಗಲೀ, ಗೌರವಾನ್ವಿತರೂ, ಶ್ರೇಷ್ಠ ಶಿವಭಕ್ತರೂ ಆದ ಆಕೆಯ ತಂದೆ–ತಾಯಿಗಳಾಗಲೀ ವಿವಾಹ ಸಂಸ್ಕಾರವಿಲ್ಲದೆ ಅಂತಃಪುರದಲ್ಲಿ ಬೆಲೆವೆಣ್ಣಿನಂತೆ ಇರಲು ಒಪ್ಪಿರಲಾರರು. ಅಂದ ಮೇಲೆ ವಿವಾಹವಾಗಿ ಧರ್ಮದ ಹಾಗೂ ಸಮಾಜದ ಒಪ್ಪಿಗೆಯ ಮುದ್ರೆಯೊತ್ತಿದ ಮೇಲೆ ಕಾಮಾಂಧನಾದ ಕೌಶಿಕನು ತನ್ನ ವಶದಲ್ಲೇ ಇದ್ದ ಪತ್ನಿಯೊಡನೆ ವೈವಾಹಿಕ ಜೀವನ ನಡೆಸದಷ್ಟು ವಿಚಾರಶೀಲನಾಗಿದ್ದ ಎನ್ನುವದಾದರೆ ಬಲವಂತವಾಗಿ ಆಕೆಯನ್ನು ವರಿಸಲು ಒತ್ತಾಯಿಸುವವನಲ್ಲ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ ಈ ದಿಶೆಯಲ್ಲಿ ಚರ್ಚಿಸುವುದು ವ್ಯರ್ಥವೆನ್ನಿಸುವುದು. ಆಕೆಯ ವಿವಾಹ ಕೌಶಿಕನೊಡನೆ ಆಗಿರಲಿ–ಆಗದಿರಲಿ ಆ ವಿಷಯ ವೈರಾಗ್ಯ ಲೋಕದಲ್ಲಿ ಅಕ್ಕನ ಸ್ಥಾನವನ್ನು ಕಿಂಚಿತ್ತೂ ಕಿರಿದನ್ನಾಗಿ ಮಾಡಲಾರದು. ವಿವಾಹಕ್ಕೆ ಒಪ್ಪದೇ ಎಲ್ಲವನ್ನು ತೊರೆದು ಹೋಗಿದ್ದರೂ ಅದ್ಭುತ ಸಂಗತಿಯೆ ! ವಿವಾಹವಾಗಿಯೂ ಅದರ ಕಾಲ್ತೊಡಕುಗಳನ್ನೆಲ್ಲಾ ಹರಿದೊಗೆದು, ಸಂಸಾರ ಬಂಧನಕ್ಕೆ ಸಿಕ್ಕಿಯೂ ಕಮಲ ಪತ್ರದ ಮೇಲಿನ ನೀರ ಹನಿಯಂತೆ ಅದಕ್ಕೇ ಅಂಟಿಕೊಳ್ಳದೆ ಮರಳಿ ಬರುವುದು ಮಹಿಮಾನ್ವಿತರಿಗಲ್ಲದೆ ಸಾಧಾರಣರಿಗೆ ಸಲ್ಲುವ ಮಾತಲ್ಲ. ಆ ಬಂಧನಕ್ಕೆ ಆಕೆಯನ್ನು ಸಿಲುಕಿಸಿದ ಸನ್ನಿವೇಶ ಅಕ್ಕನನ್ನು ಒರೆಗೆ ಹಚ್ಚಿದಂತಾಯ್ತು, ಚಿನ್ನಕ್ಕೆ ಪುಟವಿಟ್ಟಂತೆ ಆಕೆಗೆ ಮತ್ತಷ್ಟು ಪ್ರಭೆಯನ್ನು ಕೊಟ್ಟಿತೇ ವಿನಾ ಯಾವ ರೀತಿಯಲ್ಲಿಯೂ ಅಕ್ಕನ ಮಹತಿಯನ್ನು ಕಡಮೆ ಮಾಡುವುದಿಲ್ಲ. ಆದುದರಿಂದ 'ಭವಿ' ಯನ್ನು ವಿವಾಹವಾದಳೆಂಬ ಸಂಗತಿ. ಆಕೆಗೆ ಅವಮಾನ ಮಾಡೀತೋ ಎಂದು ಅದು ನಡೆದೇ ಇಲ್ಲ ಎಂದು ವಿಚಾರಿಸುವುದಕ್ಕಿಂತ ಅದು ವಿವಾದಾಸ್ಪದ ಎಂದು ವಿಚಾರ ಮಾಡುವುದು ಅಥವಾ ನಡೆದರೂ ಆಕೆಯ ಘನತೆಯನ್ನು ಹೆಚ್ಚಿಸುತ್ತದೆ ಎಂಬ ದೃಷ್ಟಿಯಿಂದ ನೋಡುವುದು ಉತ್ತಮವಾಗಿ ತೋರುತ್ತದೆ.

ಅಂತೂ ಅಕ್ಕನು ಎಲ್ಲವನ್ನೂ ತ್ಯಜಿಸಿ ವಿರಾಗಿಣಿಯಾಗಿ, ದೇಹಮೋಹವನ್ನು ತೊರೆದು ಉಟ್ಟ ಬಟ್ಟೆಯನ್ನು ಬಿಸುಟು ಹೊರಟಳು. ಅಲ್ಲಿಂದ ಕಲ್ಯಾಣಕ್ಕೆ ನಡೆದು ಶರಣರ ಸಂಗದಿಂದ ಮತ್ತಷ್ಟು ಜ್ಞಾನ ಸಂಪಾದನೆ ಮಾಡಿ. ಅಲ್ಲಿ ಬಸವಾದಿ ಶರಣರ ಪ್ರೀತಿ, ಆದರ, ಗೌರವಗಳಿಗೆ ಪಾತ್ರಳಾಗಿ ಶ್ರೀಶೈಲಕ್ಕೆ ತನ್ನ ಒಲುಮೆಯ ಚನ್ನ-ಮಲ್ಲಿಕಾರ್ಜುನನನ್ನು ಕಾಣಲು ಹೋಗಿ ಅಲ್ಲಿ ಬಯಲಾದಳು.

ಎಸ್. ವಿ. ಪರಮೇಶ್ವರ ಭಟ್ಟರು ಹೇಳುವಂತೆ, "ಆ ಜೀವ ಕೇವಲ ಜೀವವಲ್ಲ, ಜ್ಯೋತಿ; ಆ ದೇಹ, ಕೇವಲ ದೇಹವಲ್ಲ ಹಣತೆ" ಎನ್ನಬೇಕು, ಆಕೆಯ ವಚನಗಳು ಆಣಿ ಮುತ್ತುಗಳು. ಇವುಗಳಿಂದ "ಮಹಾದೇವಿಯಕ್ಕ ಹೆಂಗುಸಾದರೂ ಆಕೆಯಲ್ಲಿ ಲೋಕಾನುಭವ ಜ್ಞಾನ; ಅಂತರಂಗದ ಅನುಭವಜ್ಞಾನ ಬಹಳ ಸೊಗಸಾಗಿ ಮಿಳಿತ-ವಾಗಿವೆ. ಬಸವಣ್ಣಾದಿಗಳಲ್ಲಿ ಕೂಡ ಕಂಡು ಬಾರದ ಅಪೂರ್ವ ಭಾವಗಳು ಕೆಲವು ಪ್ರತಿಭೆಯಲ್ಲಿ ಮಿಂಚುವವು" ಎಂಬ ಸಂಗತಿ ಕಂಡು ಬರುತ್ತದೆ.

ವೀರಶೈವರು ಲಿಂಗ ಧರಿಸದಿದ್ದವನನ್ನು 'ಭವಿ' ಎಂದು ರೂಢಿಯಲ್ಲಿ ಕರೆಯುತ್ತಾರೆ. ಆದರೆ ಆಕೆ 'ಭವಿ'ತನ ಹುಟ್ಟಿನಿಂದ ಬರುವುದಲ್ಲ. ವ್ಯಕ್ತಿಯ ಅಯೋಗ್ಯತನದಿಂದ ಬರುವುದು. ಎಂತಹವನು ಭವಿ ಎಂಬುದನ್ನು ಸರಳವಾಗಿ ಎಲ್ಲರಿಗೂ ಸುಲಭ ಗ್ರಾಹ್ಯವಾಗುವಂತೆ,

" ಕಾಮ ಒಂದನೆಯ ಭವಿ. ಕ್ರೋಧ ಎರಡನೆಯ ಭವಿ.
ಲೋಭ ಮೂರನೆಯ ಭವಿ. ಮೋಹ ನಾಲ್ಕನೆಯ ಭವಿ
ಮದ ಐದನೆಯ ಭವಿ. ಮತ್ಸರ ಆರನೆಯ ಭವಿ. ಆಮಿಷ ಏಳನೆಯ ಭವಿ
ಇಂತೀ ಏಳು ಭವಿಗಳ ತಮ್ಮೊಳಗಿಟ್ಟುಕೊಂಡು
ಲಿಂಗವಿಲ್ಲದವರ ಭವಿ, ಭವಿ ಎಂಬರು
ತಮ್ಮಂತರಂಗದಲ್ಲಿದ್ದ ಲಿಂಗಾಂಗದ ಸುದ್ದಿಯನರಿಯದೆ
ಅಚ್ಚ ಪ್ರಸಾದಿ ನಿಚ್ಚಪ್ರಸಾದಿ, ಸಮಯ ಪ್ರಸಾದಿಗಳೆಂದು
ಜಲಕ್ಕೆ ಕನ್ನವನಿಕ್ಕಿ ಉದಕವ ತಂದು ಲಿಂಗಕ್ಕೆ ಮಜ್ಜನಕ್ಕೆರೆವ
ಹಗಲುಗಳ್ಳರ ಮೆಚ್ಚುವನೇ ಚನ್ನಮಲ್ಲಿಕಾರ್ಜುನಾ

ಎಂದು ತಿಳಿಸಿದ್ದಾಳೆ. ಶಿವಭಕ್ತನಾದವನು ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಗೆದ್ದಿರಬೇಕು. ಅಂದರೆ ಮಾತ್ರ ಅವನ 'ಭವಿ'ತನ ಅಳಿಯುತ್ತದೆ ಎಂದು ತಿಳಿಸುವ ಈ ವಚನ ರಾಮಾನುಜಾಚಾರ್ಯರು 'ಶೂದ್ರನಾರು' ನಿಜವಾದ 'ಬ್ರಾಹ್ಮಣನಾರು' ಎಂದು ತೋರಿಸಿಕೊಟ್ಟ ಕಥೆಯನ್ನು ನೆನಪಿಗೆ ತಂದುಕೊಡುತ್ತದೆ.

ಒಬ್ಬರ ಕಷ್ಟ, ನೋವು ಇನ್ನೊಬ್ಬರಿಗೆ ಅನುಭವಿಸದೆ ಅರ್ಥವಾಗುವುದಿಲ್ಲ ಎಂಬ ವಿಚಾರವನ್ನು ದಿನನಿತ್ಯದ ಉದಾಹರಣೆಯಿಂದ ಸುಲಲಿತವಾದ ವಚನದಲ್ಲಿ ತಿಳಿಸಿದ್ದಾಳೆ.

" ಬಂಜೆ ಬೇನೆಯನರಿಯಳು ಮಲತಾಯಿ ಮುದ್ದಬಲ್ಲಳೆ
ನೊಂದನೋವ ನೋಯದವರೆತ್ತಬಲ್ಲರು ಚನ್ನಮಲ್ಲಿಕಾರ್ಜುನ
ನೀನಿರಿದ ಅಲಗು ಒಡಲಲ್ಲಿ ಮುರಿದು ಹೊರಳುವಳ......"

ಹೀಗೆ ಹೃದಯ ವೇದ್ಯವಾಗುವಂತೆ ರಚಿಸಿರುವ ಅಕ್ಕನ ವಚನಗಳು ಬಹುಹಿತ.

ಆಗಿನ ಕಾಲದಲ್ಲಿಯೂ 'ರತ್ನ'ವನ್ನು ರತ್ನವೆಂದು ಕಂಡುಕೊಳ್ಳಲಾಗದ ಬಹು ಜನವಿದ್ದಿರಬೇಕು. ಒಳಿತಿನಲ್ಲಿಯೂ ಕೆಡುಕನ್ನೇ ಕಾಣುವ, ಅಕ್ಕನ ಔನ್ನತ್ಯವನ್ನು ಅರಿಯಲು ಅಸಮರ್ಥರಾದ ಅಸಂಖ್ಯಾತ ಮೂಢ ಜನ. ಪ್ರಾಯದಲ್ಲೇ ದಿಗಂಬರೆಯಾಗಿ, ಶಿವಶರಣರೊಡನೆ ಸೌಹಾರ್ದತೆಯಿಂದಿರುತ್ತ ಕಾಡುಮೇಡೆನ್ನದೆ, ಹಗಲು ರಾತ್ರಿ ಎನ್ನದೆ ಭಯ, ಮೋಹ, ಸಂಕೋಚಗಳನ್ನೆಲ್ಲಾ ತೊರೆದು ವ್ಯವಹರಿಸುವುದನ್ನು ನೋಡಿ ತಮ್ಮ ಮಟ್ಟದಲ್ಲಿಯೇ ಆ ಮಹಿಮಳನ್ನೂ ಅಳೆದಿರಬೇಕು. ಆಗ ಅಸಾಮಾನ್ಯ ವ್ಯಕ್ತಿಯಾದ ಅಕ್ಕ ಅದಕ್ಕಾಗಿ ದುಃಖಿಸದೆ ಅವರುಗಳ ವಿಚಾರಕ್ಕೆ ಬೆಲೆಕೊಡುವುದರಲ್ಲಿ ಅರ್ಥವಿಲ್ಲ ಎಂದುಕೊಂಡಿರಬಹುದು. ಏನೇ ಆದರೂ ಕೊಳಚೆಯನ್ನು ಬಿಟ್ಟು ಮೇಲೇಳಲಾರದ ಜನರ ಅಭಿಪ್ರಾಯಗಳಿಗೆ ಸಿಟ್ಟು, ದುಃಖ ಪಡುವುದಕ್ಕಿಂತ ಕೇಳಿಯೂ ಕೇಳದಂತೆ ಇರುವುದು ಮೇಲೆನ್ನಿಸಿ,

"ಬೆಟ್ಟದ ಮೇಲೊಂದು ಮನೆಯಮಾಡಿ ಮೃಗಗಳಿಗಂಜಿದಡೆಂತಯ್ಯ!
ಸಮುದ್ರದ ತಡಿಯಲ್ಲಿ ಮನೆಯಮಾಡಿ ನೊರೆತೆರೆಗಳಿಗಂಜಿದಡೆಂತಯ್ಯ!
ಸಂತೆಯೊಳಗೊಂದು ಮನೆಯಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ!
ಚನ್ನಮಲ್ಲಿಕಾರ್ಜುನದೇವ ಕೇಳಯ್ಯ, ಲೋಕದೊಳಗೆ ಹುಟ್ಟಿದ ಬಳಿಕ
ಸ್ತುತಿ ನಿಂದೆಗಳು ಬಂದಡೆ ಮನದಲ್ಲಿ ಕೋಪವತಾಳದೆ .
ಸಮಾಧಾನಿಯಾಗಿರಬೇಕು"

ಎಂಬ ವಚನವನ್ನು ರಚಿಸಿರಬೇಕೆನ್ನಿಸುತ್ತದೆ. ಈ ವಚನವು ಗೀತೆಯಲ್ಲಿರುವ "ಸುಖೇ ದುಃಖೇ ಸಮೇಕೃತ್ವಾ" ಎಂಬ ನಿರ್ವಿಕಾರಿ ಮನೋಭಾವ ಬೆಳೆಸಿಕೊಳ್ಳಬೇಕೆಂಬ ತತ್ತ್ವವನ್ನು ನೆನಪಿಸುತ್ತದೆ. ಈಕೆಯ ಅರಿವು ತನ್ನ ಅನುಭವಕ್ಕೆ ಮೀರಿದುದು; ವೈರಾಗ್ಯ ವಯಸ್ಸಿಗೆ ಮೀರಿದುದು. ಬಹುಶಃ ಕೌಶಿಕನು ಆಕೆಯ ದೇಹದ ಬಗ್ಗೆ ಮೋಹಗೊಂಡಾಗ ಅವನ ಕಾಮ ಪಿಪಾಸೆಗೆ ಜಿಗುಪ್ಸೆಗೊಂಡು ದೇಹದ ನಶ್ವರತೆ ಮತ್ತು ನ್ಯೂನತೆಗಳ ಬಗ್ಗೆ ವಿವರಿಸಿ, ಇಂತಹ ದೇಹದ ಬಗ್ಗೆ ಮೋಹಗೊಂಡು ಕೆಟ್ಟು ಹೋಗದೆ, ಪರಮಾತ್ಮನನ್ನು ಅರಿತು ಜೀವನ ಸಾರ್ಥವ ಪಡಿಸಿಕೊ ಎಂದು ವಿವೇಕದ ಹಾದಿಯನ್ನು,

"ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ,
ಕೀವಿನ ಹಡಿಕೆ ಸುಡಲೀ ದೇಹವ ಒಡಲವಿಡಿದು ಕೆಡದಿರು
ಚನ್ನಮಲ್ಲಿಕಾರ್ಜುನನರಿ ಸುರುಳೆ"

ಎಂಬ ವಚನದಿಂದ ಮಾರ್ಗದರ್ಶನ ಮಾಡಲು ಪ್ರಯತ್ನಿಸಿದಂತೆ ತೋರುತ್ತದೆ. ಇದೆಲ್ಲಾ ನಿಜವಾದರೂ, ಎಲ್ಲವೂ ತಿಳಿದಿದ್ದರೂ ಆ ಕೊಳಚೆಯಲ್ಲಿಯೇ ಹೊರಳಾಡುವ ಜನರೇ ಹೆಚ್ಚು. ಈ ಮಾರ್ಗದರ್ಶನದಲ್ಲಿ ನಡೆಯುವ ಶಕ್ತಿ, ಈ ಉಪದೇಶವನ್ನು

ಪಾಲಿಸುವ ಯೋಗ್ಯತೆ ಎಷ್ಟು ಮುಂದಿಗೆ ತಾನೆ ಇದೆ? ಇದರಿಂದ ಎಲ್ಲರಿಗೂ 'ಅಕ್ಕ' ನಾಗಿ ಸದಾಕಾಲಕ್ಕೆ ಉಳಿಯುವ ಹಿರಿಯತನವನ್ನು ಪಡೆದಿದ್ದಾಳೆ ಈ ತಪಸ್ವಿನಿ.

ವಿರಾಗಿಣಿಯಾಗಿ ಹೊರಟ ನಂತರ ಅಕ್ಕನನ್ನೂ ಸಹ ಈ ಲೋಕಮಾಯೆ ಆವರಿಸಲು ಹವಣಿಸಿರಬೇಕು. ಆಗ ಆ ಮಾಯೆಯನ್ನು ಗೆಲ್ಲುವ ಶಕ್ತಿಯನ್ನು ಕರುಣಿಸಲೆಂದು ಬೇಡಿ ಆಕೆಯೂ ಬವಣೆಗೆಟ್ಟಿರಬಹುದೆಂದು ಕೆಳಗಿನ ವಚನದಿಂದ ಅನ್ನಿಸುತ್ತದೆ.

" ಹರಿಯ ನುಂಗಿತ್ತು ಮಾಯೆ, ಅಜನ ನುಂಗಿತ್ತು ಮಾಯೆ, ಇಂದ್ರನ ನುಂಗಿತ್ತು ಮಾಯೆ
ಚಂದ್ರನ ನುಂಗಿತ್ತು ಮಾಯೆ, ಬಲ್ಲನೆಂಬ ಬಲುಗೈಯರ ನುಂಗಿತ್ತು ಮಾಯೆ ಅರಿವೆನೆಂಬ
ಅಜ್ಞಾನಿಗಳ ನುಂಗಿತ್ತು ಮಾಯೆ, ಈರೇಳು ಭುವನವನಾವರಿಸಿಗೊಂಡಿತ್ತು ಮಾಯೆ
ಚನ್ನಮಲ್ಲಿಕಾರ್ಜುನಯ್ಯ ಎನ್ನ ಮಾಯೆ ಮಾಣಿಸಾ ಕರುಣೆ "

ಎಂದು ಮಾಯೆಯ ಪ್ರಬಲ ಪ್ರಭಾವದಿಂದ ಬಿಡಿಸಲು ಚನ್ನಮಲ್ಲಿನಕಾರ್ಜುನನಲ್ಲಿ ಮೊರೆ ಹೊಕ್ಕಿದ್ದಾಳೆ. ಆದರೂ ಆ ಮಾಯೆ ಬಿಡದಿರಲು ತನ್ನ ಆತ್ಮ ಶಕ್ತಿಯ ಬಲವನ್ನು ಕ್ರೋಢೀಕರಿಸಿ ನಿಗ್ರಹ ಶಕ್ತಿಯನ್ನು ಭಗವಂತನ ಕರುಣೆಯಿಂದ ಸಾಧಿಸಿ ಕೊಂಡು ಏನೇ ಆದರೂ ಚನ್ನಮಲ್ಲಿಕಾರ್ಜುನನಾಣೆಯಾಗಿಯೂ ತಾನು ಆ ಮಾಯೆಯ ಬಲೆಗೆ ಬೀಳುವುದಿಲ್ಲ. ಅದರ ಬೆದರಿಕೆಗೆ ಬೆದರುವುದಿಲ್ಲವೆಂಬ ತನ್ನ ಧೃಡ ನಿಶ್ಚಯವನ್ನು ಸಾರಿದ್ದಾಳೆ.

" ಬಿಟ್ಟನೆಂದರೆ ಬೀಡದೀ ಮಾಯೆ ಬಿಡದಿದ್ದರೆ ಬೆಂಬತ್ತಿತ್ತು ಮಾಯೆ.
ಯೋಗಿಗೆ ಯೋಗಿಣಿಯಾಗಿತ್ತು ಮಾಯೆ, ಸವಣಗೆ ಸವಣಿಯಾಯಿತ್ತು ಮಾಯೆ.
ಯತಿಗೆ ಪರಾಕಿಯಾಯಿತ್ತು ಮಾಯೆ
ನಿನ್ನ ಮಾಯೆಗೆ ನಾನಂಜುವವಳಲ್ಲ, ಚೆನ್ನಮಲ್ಲಿಕಾರ್ಜುನ ದೇವಾ ನಿಮ್ಮಾಣೆ

ಹೀಗೆ ಪ್ರಾರಂಭದಲ್ಲಿ ಈ ಪ್ರಪಂಚದ ಆಶಾಪಾಶಾಗಳಿಗೆ ಒಮ್ಮೊಮ್ಮೆ ಮನಹರಿದರೂ ಅದನ್ನು ಸ್ವಿಮಿತದಲ್ಲಿ ತಂದುಕೊಂಡು ಸ್ಥಿರತೆಯನ್ನು ಕಂಡುಕೊಂಡಿದ್ದಾಳೆ. ಎಲ್ಲದರ ಬಗ್ಗೆ ನಿಜವಾದ ಅರಿವಾದ ಮೇಲೆ, ಈ ಲೌಕಿಕ ವ್ಯವಹಾರಗಳಲ್ಲಿ ಅಲಿಪ್ತರಾಗಿ ಅರಿಷಡ್ವರ್ಗಗಳಿಗೆ ದಾಸರಾಗಿದ್ದರೂ ದೇವರನ್ನು ತೃಪ್ತಿಗೊಳಿಸಲು ವೇದ, ಶಾಸ್ತ್ರ, ಪುರಾಣಗಳ ಮೂಲಕ ಪ್ರಯತ್ನಿಸುವವರನ್ನು ನೋಡಿ ಈಕೆಗೆ ಹುಚ್ಚುತನವೆನ್ನಿಸುತ್ತದೆ. ಸುಲಭವಾಗಿ ದೇವನನ್ನೊಲಿಸುವ ಸರಳ ಮಾರ್ಗ ಬಿಟ್ಟು ಅರ್ಥಶೂನ್ಯ ಮಾರ್ಗ ಕ್ರಮಿಸುವದನ್ನು ನೋಡಿ ಅವರ ಬಗೆಗೆ ಕನಿಕರಿಸಿ,

" ವೇದಶಾಸ್ತ್ರ ಪುರಾಣಾಗಮಂಗಳೆಲ್ಲ ಕೊಟ್ಟಣವ ಕುಟ್ಟುತ್ತ
ನುಚ್ಚು ತೌಡು ಕಾಣಿಭೊ! ಇವಕುಟ್ಟಲೇಕೆ? ಅತ್ತಲಿತ್ತ
ಹರಿವ ಮನದ ಶಿರವನರಿದಡೆ ಬಚ್ಚಬರಿಯ ಬಯಲು ಚೆನ್ನಮಲ್ಲಿಕಾರ್ಜುನಾ "

ಎಂದು ಪಾಮರರಿಗೆ ನಿಜಮಾರ್ಗ ತೋರಿಸಿದ್ದಾಳೆ ಮಹಾದೇವಿ. ಈ ಒಂದೇ ವಚನದಲ್ಲಿ ದೇವನೊಲುಮೆಯ ಬಗ್ಗೆ ಬಸವಣ್ಣನವರು ಹೇಳಿರುವ ತತ್ವಗಳನ್ನೆಲ್ಲಾ ಸಂಗ್ರಹಿಸಿದ್ದಾಳೆ. ವಚನ ಸಾಹಿತ್ಯದಲ್ಲಿ ಅಕ್ಕನ ಪ್ರತಿಭೆಯನ್ನು ಆಗಿನ ಕಾಲದಲ್ಲಿಯೇ ಮಹಾ ಶರಣರಾದ ಚನ್ನ ಬಸವಣ್ಣನವರು.

" ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತುವಚನ
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತುವಚನ
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದುವಚನ
ಅಜಗಣ್ಣನ ಐದುವಚನಕ್ಕೆ ಚೆನ್ನಮಲ್ಲಿಕಾರ್ಜುನಯ್ಯನ
ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ......"

ಎಂದು ಕೊಂಡಾಡಿದ್ದಾರೆ. ಆಕೆಯ ವಚನಗಳಷ್ಟೇ ಮಹತ್ತರವಾದುವಲ್ಲ. ಸ್ವತಃ ಅಕ್ಕನೇ ಚಿಕ್ಕವಳಾದರೂ ಹಿರಿಯತನದ ಗೌರವಕ್ಕೆ ಪಾತ್ರಳೆಂಬುದನ್ನು ಆಗಲೇ ಶರಣರೆಲ್ಲ ತಿಳಿದಿದ್ದರೆಂಬುದಕ್ಕೆ ಚನ್ನ ಬಸವಣ್ಣನವವರ ಈ ಕೆಳಗಿನ ವಚನವೇ ಸಾಕ್ಷಿ.

" ಅಜಕೋಟಿ ವರುಷದವರೆಲ್ಲರೂ ಹಿರಿಯರೇ ? ಹುತ್ತೇರಿ
ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೆ ? ನಡುಮುರಿದು
ಗುಡ ಗೂರಿ ತಲೆ ನಡುಗಿ ನರೆತೆರೆ ಹೆಚ್ಚಿ ಮತಿಗೆಟ್ಟು ಒಂದನಾಡ ಹೋಗಿ
ಒಂಬತ್ತನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೆ ? ಅನುವರಿದು
ಘನವ ತೀರಿಸಿ ಹಿರಿದು ಕಿರಿದೆಂಬ ಭೇದವ ಮರೆದ, ಕೂಡಲ
ಚನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ
ಮಹಾದೇವಿಯಕ್ಕಂಗಾಯಿತ್ತು "

ಈ ವಚನವು ವರ್ಷಾನುಗಟ್ಟಲೆ ತಪಸ್ಸು ಮಾಡಿದವರಿಗಿಂತಲೂ, ವಯಸ್ಸಿನಲ್ಲಿ ಕೂದಲು ಹಣ್ಣಾಗಿ ತಲೆನಡುಗತ್ತ ನಡುಬಾಗಿರುವ ಅನೇಕ ಅಜ್ಞಾನಿ ವಯೋವೃದ್ಧರಿಗಿಂತ, ಜ್ಞಾನದಲ್ಲಿ ಹಣ್ಣಾದ ಅಕ್ಕಮಹಾದೇವಿಯೇ ಶಿವನಿಗೆ ಸಮಾನವಾದ ಹಿರಿಯತನ ಪಡೆದವಳು ಎಂದು ಸೂಚಿಸುತ್ತದೆ.

ಮಹಾದೇವಿಯಕ್ಕನು ಮಾನವ ಇತಿಹಾಸದಲ್ಲಿಯೇ ಅಪರೂಪವಾದ ಬಾಳನ್ನು ಬಾಳಿ ಅಮರಳಾಗಿದ್ದಾಳೆ. ಅಂದಿನವರಿಗೂ ಅಕ್ಕನಾದ ಅವಳು, ಇಂದಿನವರಿಗೂ ಅಕ್ಕನಾಗಿದ್ದಾಳೆ. ಎಂದೆಂದಿಗೂ ಅಕ್ಕನಾಗಿ ಉಳಿಯಬಲ್ಲವಳಾಗಿದ್ದಾಳೆ. ಅಕ್ಕಮಹಾದೇವಿಯಂತಹ ಪುಣ್ಯಜೀವಿ ಆಗಾಗ್ಗೆ ಹುಟ್ಟಲು ಸಾಧ್ಯವಿಲ್ಲ. ಒಮ್ಮೆಯ ಅವತಾರದಿಂದ ಸಾವಿರಾರು ವರ್ಷಗಳವರೆಗೆ ಕೋಟ್ಯಂತರ ಜನರು ಪ್ರಭಾವಿತರಾಗಿ ಬಾಳಲು ಸಾಧ್ಯ. ಆಕೆಯ ಬದುಕು ಎಲ್ಲರ ಬಾಳಿಗೂ ಯಾವಾಗಲೂ ನಂದಾದೀವಿಗೆ. ಇಂತಹ ಅಕ್ಕನ ಜೀವನ ಚರಿತ್ರೆಯನ್ನು ಅರಿಯುವುದು, ಅವಳ ಪುಣ್ಯಸ್ಮರಣೆ ಮಾಡುವುದು, ಮುಂದಿನ ಪೀಳಿಗೆಗೆ ಆಕೆಯ ಮಾರ್ಗದರ್ಶನ ಪಡೆಯಲು ಅನುವು ಮಾಡಿಕೊಡುವುದು ಎಲ್ಲರ

ಕರ್ತವ್ಯ. ಎಲ್ಲ ಶರಣರ ವಚನಗಳಂತೆ "ಸುಲಿದ ಬಾಳೆಯ ಹಣ್ಣಿನಂದದಿ" ಕಳೆದ ಸಿಗುರಿನ ಕಬ್ಬಿನಂದದಿ ಎಲ್ಲರಿಗೂ ಸುಲಭವಾಗಿಯೂ, ಸರಳವಾಗಿಯೂ. ಇರುವ ತಿಳಿಗನ್ನಡದ ಆಡುಮಾತಿನಲ್ಲಿ ರಚಿತವಾಗಿರುವ ಅಕ್ಕನ ವಚನಗಳನ್ನೋದುವುದರಿಂದ ಒಂದಲ್ಲ ಒಂದು ರೀತಿಯಾಗಿ ಒಮ್ಮೆಯಲ್ಲ ಒಮ್ಮೆ ಓದುಗರ ಮನಸ್ಸಿನ ಮೇಲೆ ಒಳ್ಳೆಯ ಪ್ರಭಾವ ಬೀರದೆ ಸಾಧ್ಯವಿಲ್ಲ. ಈಕೆಯ ಚರಿತ್ರೆ ಮನೆಮಾತಾಗಿ ಮನೆ ಮನೆಯನ್ನೂ ಮನ ಮನವನ್ನೂ ಬೆಳಗಲಿ. □

# ಬಸವೇಶ್ವರರು–ಕಬೀರದಾಸರು

ಪ್ರೊ. ಬಸವಯ್ಯ ಶಿರೋಳ

ಮಹಾಪುರುಷರು ಸಮಯದ ದೇಣಿಗೆಯಾಗಿರುವರು. ಧರ್ಮದ ಅವನತಿಯು ದೇಶದಲ್ಲಿ ಉಂಟಾದಾಗ ಮಹಾಪುರುಷರು ಅದರ ಅಭ್ಯುದಯಕ್ಕಾಗಿ ಜನ್ಮ ತಾಳುವರು ಹೀಗೆಯೇ ಉತ್ತರ ಭಾರತದಲ್ಲಿ ಧರ್ಮವು ತಂತ್ರ–ಮಂತ್ರಗಳ ಬಲೆಯಲ್ಲಿ ಸಿಕ್ಕು, ಅರ್ಥಶೂನ್ಯ ಬಾಹ್ಯವಿಧಿಗಳು, ತೀರ್ಥಾಟನೆ, ಕರ್ಮಕಾಂಡಗಳ ಪ್ರಚಾರಗಳು ಧರ್ಮವನ್ನು ಮುತ್ತಿದಾಗ ೧೫ನೆಯ ಶತಮಾನದಲ್ಲಿ ಕಿಂಕರ್ತವ್ಯವಿಮೂಢತೆ ಆವರಿಸಿದಾಗ ಕಬೀರದಾಸರು ಧರ್ಮಾವತಾರಿಗಳಾಗಿ ಬಂದರೆನ್ನಬಹುದು. ಹಾಗೆಯೇ ದಕ್ಷಿಣ ಭಾರತದಲ್ಲಿ ಅದಕ್ಕಿಂತಲೂ ಎರಡು ಶತಮಾನ ಪೂರ್ವದಲ್ಲಿ ಬಸವೇಶ್ವರರು ಸಹ ಧರ್ಮಾಭಿವೃದ್ಧಿಗಾಗಿ ಅವತರಿಸಿದ್ದರು. ದಕ್ಷಿಣ ಭಾರತದಿಂದಲೇ ಭಕ್ತಿಪ್ರವಾಹವು ಉತ್ತರದೆಡೆಗೆ ಸಾಗಿದ್ದನ್ನು ಲಕ್ಷಿಸಬೇಕಾದುದು ಅತ್ಯಗತ್ಯ,

## ಜನನ

ಶ್ರೀ ಕಬೀರದಾಸರ ಜನ್ಮದ ಕಥೆಯು ಒಂದು ಒಗಟು. ವಿಲಕ್ಷಣ ಸ್ವರೂಪದ್ದಾಗಿದೆ. ಕಾಶಿಯಲ್ಲಿ ಸ್ವಾಮಿ ರಾಮಾನಂದರಿದ್ದರು. ಅವರ ಭಕ್ತ ಬ್ರಾಹ್ಮಣನಿಗೆ ಒರ್ವ ವಿಧವೆ ಕನ್ಯೆಯಿದ್ದಳಂತೆ. ಅವಳು ಒಮ್ಮೆ ತನ್ನ ತಂದೆಯು ಸಂಗಡ ದರ್ಶನಕ್ಕೆಂದು ಹೋದಾಗ, ವಿಧವೆ ಬ್ರಾಹ್ಮಣ ಕನ್ಯೆಯು ಸ್ವಾಮಿಗಳವರನ್ನು ನಮಸ್ಕರಿಸಿದಾಗ 'ಪುತ್ರವತೀ ಭವ' ಎಂದು ಆಶೀರ್ವದಿಸಿದರಂತೆ. ಮಹಾತ್ಮರ ನುಡಿ ಹುಸಿಯಾಗುವುದುಂಟೆ? ಅದರಂತೆ ಅವಳು ಗಂಡು ಕೂಸಿಗೆ ಜನ್ಮವಿತ್ತಳು. ಜನಾಪವಾದ ಹಾಗೂ ರಕ್ಷಣೆಗಾಗಿ ಆಕೆ ಆ ಕೂಸನ್ನು 'ಲಹರತಾರಾ' ಎಂಬ ಹೆಸರಿನ ಕೆರೆಯ ದಂಡೆಯ ಮೇಲೆ ಒಗೆದಳಂತೆ. ಅದನ್ನು ನೋಡಿದ 'ಅಲೀ' ಅಥವಾ 'ನೀರೂ' ಎಂಬ ನೇಕಾರನು ಕೂಸನ್ನು ಮನೆಗೆ ತಂದು ಜೋಪಾನ ಮಾಡಿದನು. ಸಂತಾನಹೀನರಾದ ನೀಮಾ, ನೀರೂ ದಂಪತಿಗಳೇ ಅವನನ್ನು ಜೋಪಾನ ಮಾಡಿದ ತಂದೆ–ತಾಯಿಗಳಾಗಿರುವರು.

ಶ್ರೀ ಬಸವೇಶ್ವರರ ಜನ್ಮವು ಸಹ ಪವಾಡಮಯವಾಗಿದೆ. ಗುರುಕೃಪೆಯಿಂದ ಇಂಗಳೇಶ್ವರ ಬಾಗೇವಾಡಿಯಲ್ಲಿ ಮಾದರಸ–ಮಾದಲಾಂಬಿಕೆಯರ ಗರ್ಭದಲ್ಲಿ ಜನಿಸಿದರು

ಅವರು ಪರಶಿವನ ಆಜ್ಞೆಯಂತೆ ದ್ವಿತೀಯ ಶಂಭುವಿನ, ನಂದಿಯ ಅವತಾರ ತಾಳಿ ಬಂದಿದ್ದರು.

ಶ್ರೀ ಕಬೀರದಾಸರ ಜನ್ಮಕಾಲದ ನಿರ್ಣಯದ ಬಗ್ಗೆ ನಿಶ್ಚಿತ ನಿರ್ಧಾರಗಳಾಗಿಲ್ಲವಾದರೂ ಅವರ ಪ್ರಧಾನ ಶಿಷ್ಯ ಹಾಗೂ ಉತ್ತರಾಧಿಕಾರಿ ಧರ್ಮದಾಸನು ಹೇಳಿದ ಪ್ರಕಾರ ಜನ್ಮ ದಿನ ಸಂ. ೧೪೫೫ನೆಯ ಜ್ಯೇಷ್ಠ ಶುಕ್ಲ ಪೂರ್ಣಿಮೆ ಚಂದ್ರವಾರವೆಂದು ತಿಳಿಯಬಹುದು. ಶ್ರೀ ಬಸವೇಶ್ವರರ ಜನ್ಮವು ಕ್ರಿ. ಶ. ೧೧೦೬ ರಂದು ಆಯಿತೆಂದು ಗ್ರಹಿಸಬಹುದು. ಕಬೀರದಾಸರು ಸಂ. ೧೫೭೫ರ ಸುಮಾರು ಅಂತ್ಯರಾದರೆ, ಬಸವೇಶ್ವರರು ಕಪ್ಪಡಿ ಸಂಗಮದಲ್ಲಿ ಕ್ರಿ.ಶ. ೧೧೬೭-೬೮ರ ಸುಮಾರು ಲಿಂಗೈಕ್ಯರಾದರೆನ್ನಬಹುದು. ಬಸವೇಶ್ವರರು ಸುಮಾರು ಅರವತ್ತು ವರುಷಗಳ ವರೆಗೆ ಜೀವಿಸಿದ್ದರೆ ಕಬೀರದಾಸರು ೧೧೯ ವರ್ಷಗಳ ವರೆಗೆ ಜೀವಿಸಿದ್ದರು.

ಬಸವಣ್ಣನವರು ವಿಪ್ರವಂಶದ ಸಂಖ್ಯಾಯನಗೋತ್ರದಲ್ಲಿ ಹುಟ್ಟಿ, ನಂತರ ವೀರಶೈವ ಧರ್ಮವನ್ನು ಪ್ರವರ್ತಿಸಿದರು. ಹಿಂದೆ ಹೇಳಿದಂತೆ ಕಬೀರದಾಸರು ಬ್ರಾಹ್ಮಣ ವಂಶದಲ್ಲಿ ಜನಿಸಿ, ಮುಸಲ್ಮಾನರ (ನೇಕಾರರ) ಮನೆತನದಲ್ಲಿ ಬೆಳೆದರು. 'ಬಸವ'ನೆಂಬುದು ಶ್ರೀ ಬಸವೇಶ್ವರರ ಜನ್ಮನಾಮವಿದ್ದರೆ, ಶ್ರೀ ಕಬೀರದಾಸರಿಗೆ ಹೀಗೆ ನಿಶ್ಚಿತ ನಾಮಕರಣವಿಲ್ಲ. ಜೋಪಾನ ಮಾಡಿದ ತಂದೆ-ತಾಯಿಯವರು 'ಕಬೀರದಾಸ'ರೆಂದು ಕರೆದರು.

ಶ್ರೀ ಬಸವೇಶ್ವರರಿಗೆ ಬಲದೇವನ ಮಗಳಾದ ಗಂಗಾಂಬಿಕೆ ಬಿಜ್ಜಳನನುಜ ಕನ್ನರಿ (ಕರ್ಣದೇವ) ಯಿಂದ ಕಿರಿಯಳಾದ ನೀಲಾಂಬಿಕೆಯೆಂಬ ಇರ್ವರು ಹೆಂಡಂದಿರರು. ನೀಲಾಂಬಿಕೆಯ ಮಗನ ಹೆಸರು ಸಂಗಯ್ಯ, ಗಂಗಾಬಿಕೆಯ ಮಗನ ಹೆಸರು ಸಿದ್ಧರಸ. ಶ್ರೀ ಕಬೀರದಾಸರಿಗೂ ಇರ್ವ ಹೆಂಡತಿಯರು, ಲೋಯಿ ಮತ್ತು ಧನೀಯಾರು. ಲೋಯಿಯು ಹೆಂಡತಿಯೆಂದೂ ಹಾಗೂ ಕೆಲವರು ಆಕೆಯು ಶಿಷ್ಯಳೆಂದೂ ಹೇಳಿರುವರು. ಆಕೆಯು ಕಮಾಲನೆಂಬ ಪುತ್ರ ಹಾಗೂ ಕಮಾಲಿಯೆಂಬ ಪುತ್ರಿಯರಿಗೆ ಜನ್ಮವಿತ್ತಳು. ಪುತ್ರ ಕಮಾಲನು ಅವನ ತಂದೆಯ ಸಿದ್ಧಾಂತಗಳ ವಿರೋಧಿಯಾಗಿದ್ದನು. ಹೀಗೆ ಇರ್ವರು ಗೃಹಸ್ಥರಾಗಿದ್ದರು.

ಶ್ರೀ ಬಸವೇಶ್ವರರಿಗೆ ಇಬ್ಬರು ಗುರುಗಳು. ಈಶಾನ್ಯ ಗುರುಗಳು ವಿದ್ಯಾಗುರುಗಳಾದರೆ, ದೀಕ್ಷಾಗುರು ನಂದಿಕೇಶ್ವರನೆಂದು ಹರಿಹರ ಕವಿಯ ಹೇಳಿಕೆ. ಶ್ರೀ ಕಬೀರದಾಸರೂ ಗುರುಗಳನ್ವೇಷಣೆಯಲ್ಲಿದ್ದರು. ಆದರೆ ಆಗ ಯಾರೂ ಶಿಷ್ಯನನ್ನಾಗಿ ಮಾಡಿಕೊಳ್ಳಲು ಒಪ್ಪಲಿಲ್ಲ, ಮುಸಲ್ಮಾನ ವಂಶದವನೆಂದು ಸ್ವಾಮಿ ರಾಮಾನಂದರು ಧಿಕ್ಕರಿಸಿದರು. ನಂತರ ಒಮ್ಮೆ ಪ್ರಾತಃಕಾಲ ಬ್ರಾಹ್ಮಿ ಮುಹೂರ್ತದಲ್ಲಿ ಪಂಚಗಂಗಾದ ಘಾಟದಲ್ಲಿ ಸ್ನಾನ ಮಾಡಿ ಹೋಗುವಾಗ ಘಟ್ಟದ ಪಾವಟಣಿಗೆಯ ಮೇಲೆ ಪೂರ್ವವೇ ಹೋಗಿ ಮಲಗಿದ್ದರು. ಸ್ವಾಮಿಗಳವರು ಕತ್ತಲೆಯಲ್ಲಿ ನೋಡದೆ ಪಾದವನ್ನು ಕಬೀರರ ತಲೆಯ ಮೇಲಿಟ್ಟರು. ಆಗ ಸ್ವಾಮಿಗಳ ಮುಖದಿಂದ ಬಂದ 'ರಾಮ-ರಾಮ' ಶಬ್ದವೇ

ತಮ್ಮ ಮಂತ್ರವೆಂದು ಆಶೀರ್ವದಿಸಿ ಗುರುಗಳಾದಿರಿ ಎಂದು ಕಬೀರರು ಉತ್ತರಿಸಿದಾಗ ಅವರು ಸುಮ್ಮನೇ ಹೋದರು. "ಕಾಶಿ ಮೆ ಹಮ್ ಪ್ರಗಟ ಭಯ ಹೈಂ ರಾಮಾನಂದ ಚೇತಾಯಿ" ಎಂಬುದರ ಮೇಲಿಂದ ರಾಮಾನಂದರೇ ಗುರುಗಳು. ಯಾವದಕ್ಕೂ ದೃಢ ಪ್ರಮಾಣಗಳಿಲ್ಲ. ಮುಸಲ್ಮಾನ ಕಬೀರಪಂಥದವರು ಕಬೀರರು ಸೂಫಿ ಮುಸಲ್ಮಾನ ಫಕೀರ ಶೇಖಕಿಯರಿಂದ ದೀಕ್ಷೆ ಪಡೆದಿರುವದಾಗಿ ತಿಳಿಸಿರುವರು. 'ಘಟ ಘಟ ಹೈ ಅವಿನಾಶಿ ಸುನಹು ತಕೀ ತುಮ ಶೇಖ' ಎಂಬಲ್ಲಿ ಗುರುಗಳ ಆದರಭಾವವಿಲ್ಲ. ಅಂತೂ ಈರ್ವ ಗುರುಗಳ ಸಂಪರ್ಕ, ಸಂಗತಿಗಳು ಕಂಡು ಬರುತ್ತವೆ. ಆದರೆ ಕಬೀರರಿಗೆ ವಿದ್ಯಾಗುರುಗಳಿದ್ದಿಲ್ಲ, ಅವರಿಗೆ ಅಕ್ಷರಜ್ಞಾನವಿದ್ದಿಲ್ಲವೆಂಬುದು.

'ಮಸಿ ಕಾಗದ ಛುವ್ಯೋ ನಹೀಂ, ಕಲಮು ಗಹ್ಯೋ ನಹೀಂ ಹಾಥ'

ಮಸಿಕಾಗದಗಳನ್ನು ಮುಟ್ಟಿಲ್ಲ, ಕೈಯಲ್ಲಿ ಲೇಖನಿಯನ್ನು ಹಿಡಿದಿಲ್ಲ ' ಎಂಬಲ್ಲಿ ಗೋಚರಿಸುವದು. ಆದರೂ ಅವರಿಗೆ ಪುಸ್ತಕೀಯ ಜ್ಞಾನಕ್ಕಿಂತ ಅನುಭವಜನ್ಯ ಜ್ಞಾನ ವಿತ್ತು. ಶ್ರೀ ಬಸವೇಶ್ವರರು ಈಶಾನ್ಯಗುರುಗಳಲ್ಲಿ ವೇದ, ಆಗಮ, ಪುರಾಣ, ಶಾಸ್ತ್ರ, ತರ್ಕ, ಕಾವ್ಯ ಮೊದಲಾದ ವಿಷಯಗಳನ್ನು ಸಾಕಷ್ಟು ದೀರ್ಘವಾಗಿ ಅಭ್ಯಾಸ ಮಾಡಿದ್ದರು.

ಕಬೀರದಾಸರ ಅಂತ್ಯಸಂಸ್ಕಾರದ ವಿಷಯಗಳಲ್ಲಿಯೂ ವದಂತಿಗಳಿಲ್ಲದಿಲ್ಲ. ಹಿಂದುಗಳು ಅವರ ಶವಕ್ಕೆ ಅಗ್ನಿಸಂಸ್ಕಾರಮಾಡಬೇಕೆಂದೂ, ಮುಸಲ್ಮಾನರು ಅದನ್ನು ಗೋರಿಯಲ್ಲಿಡಬೇಕೆಂದು ಬಯಸಿದ್ದರಂತೆ. ಅವರ ಜಗಳ ಯುದ್ಧಸ್ವರೂಪವನ್ನು ತಾಳಿ ತಂತೆ. ಇದನ್ನು ನೋಡಿದ ಅವರ ಆತ್ಮವು ಆಕಾಶವಾಣಿಯಲ್ಲಿ " ಜಗಳಾಡಬೇಡಿರಿ, ನನ್ನ ಶವವನ್ನು ಎತ್ತಿ ನೋಡಿರಿ " ಎಂದಾಗ, ಎತ್ತಲು ದೇಹ ಮಾಯವಾಗಿ ಹೂವಿನ ರಾಶಿಯಾಯಿತಂತೆ. ಬಿಜ್ಜಳ ಅರಸನು ಮತಾಂಧಕಾರದ ಮಬ್ಬಿನಲ್ಲಿ ಹರಳಯ್ಯ, ಮಧುವಯ್ಯರ ಕಣ್ಣುಗಳನ್ನು ಕೀಳಿಸಿದಾಗ, ವೀರಶೈವರಿಗೂ ಬಿಜ್ಜಳನ ಸೈನಿಕರಿಗೂ ಯುದ್ಧವಾಗಿ ಬಿಜ್ಜಳನ ಕೊಲೆಯಾಗುವದು. ಅದನ್ನು ನೋಡಲಾರದೆ. ಏನನ್ನೂ ಆಡದೆ ಶ್ರೀ ಬಸವೇಶ್ವರರು ಕೂಡಲಸಂಗಮನಾಥನಲ್ಲಿ ಐಕ್ಯರಾಗುವರು. ಇರ್ವರ ಅಂತ್ಯಕಾಲದಲ್ಲಿ ಸಮಾಜದಲ್ಲಿಯ ಯುದ್ಧಪ್ರೀತಿ, ಪರಸ್ಪರ ಧರ್ಮದ ಕಚ್ಚಾಟಗಳು ವ್ಯಕ್ತವಾಗಿವೆ. ಅವರು ಏನನ್ನು ಮಾಡಬೇಕೆಂದರೂ ಅದಕ್ಕೆ ವಿರೋಧಪ್ರಕ್ರಿಯೆ ಗಳುಂಟಾಗಿರುವವೆಂಬುದು ಸ್ಪಷ್ಟವಾಗಿ ಗೋಚರಿಸುವದು.

**ಸಿದ್ಧಾಂತಗಳು :**

ಕಬೀರದಾಸರ ಸೈದ್ಧಾಂತಿಕ ವಿಷಯಗಳಲ್ಲಿ ಬ್ರಹ್ಮ, ಜೀವ, ಜಗತ್ತು, ಮಾಯೆ, ನಿವೃತ್ತಿ, ಸೃಷ್ಟಿ, ಮೋಕ್ಷಗಳಿವೆ. ಇವೆಲ್ಲವುಗಳಲ್ಲಿ ಆಧ್ಯಾತ್ಮ–ಅನುಭೂತಿಗಳ ಆಳವಾದ ಸಂಬಂಧವಿದೆ.

**ಬ್ರಹ್ಮ :**

ಬ್ರಹ್ಮನ ಯಥಾರ್ಥ ಸ್ವರೂಪವನ್ನು ಯಾರೂ ಅರಿಯಲಾರರು. ಅವನಿಗೆ ವ್ಯಕ್ತ ಹಾಗೂ ಅವ್ಯಕ್ತಗಳೆಂಬ ಎರಡು ರೂಪಗಳಿವೆ.

> **ರೂಪ ವರುಣ ಬಾಕೆ ಕಛು ನಾಹೀಂ, ಸಹಜೋ ರಂಗ ನ ದೇಹ ।**
> **ತೋಲ ನ ಮೋಲ ಮಾಪ ಕಿಛು ನಾಹೀಂ, ಗಿನ್ಯೆ ಜ್ಞಾನ ಹೋಈ ।**
> **ನಾಸೊ ಭಾರಾ, ನಾಸೊ ಹಲುಆ, ಲೌಕೀ ಪಾರೀಖ ಲಖೈ ನ ಕೋಈ ।**

ಬ್ರಹ್ಮನಿಗೆ ರೂಪ, ರಂಗ, ದೇಹಗಳಿಲ್ಲ. ಅವನನ್ನು ಅಳೆಯಲಾಗದು. ತೂಕ ಮಾಡಲಾಗದು. ಅವನು ಹಗುರು ಅಲ್ಲ, ಭಾರವಲ್ಲ, ಅವನನ್ನು ಯಾರೂ ನೋಡಿಲ್ಲ. ಜ್ಞಾನದಿಂದ ಎಣಿಸಿಸಲಾರನು. ಅವನು ನಿರಾಕಾರನಾದಾಗ್ಯೂ—

> **ಅವರನ ಏಕ ಅಕಲ ಅವಿನಾಶೀ ಘಟ ಘಟ ಆಪ ರಹೆ ।**

ಜಗತ್ತಿನ ಕಣಕಣಗಳಲ್ಲಿರುವನು. ಅವಿನಾಶಿಯೂ, ಸರ್ವಾಂತರ್ಯಾಮಿಯೂ, ಜ್ಯೋತಿಸ್ವರೂಪ, ಅಲಖನಿರಂಜನ. ಸುರತಿರೂಪ, ಅಕ್ಷಯ ಪುರುಷ, ಸತ್ಪುರುಷನಾದ ಅವನ ನಿರೂಪಣೆಯನ್ನು ನಾಮರೂಪಗಳಲ್ಲಿ ಕಾಣಬಹುದು.

ಶ್ರೀ ಬಸವೇಶ್ವರರ ವೀರಶೈವ ಧರ್ಮಕ್ಕೆ ಅಷ್ಟಾವರಣಗಳು ಅಂಗವಾಗಿ, ಪಂಚಾಚಾರಗಳು ಪ್ರಾಣವಾಗಿ, ಹಾಗೂ ಷಟ್‌ಸ್ಥಲಗಳು ಆತ್ಮವಾಗಿರುವವು. ಷಟ್ ಸ್ಥಲದಲ್ಲಿಯ 'ಸ್ಥಲ' ವಿಚಾರದಲ್ಲಿ ಆ ಸೃಷ್ಟಿ, ಸ್ಥಿತಿ ಮತ್ತು ಲಯಗಳಿಗೆ ಕಾರಣನಾದ ಪರಮತತ್ತ್ವದ (ಬ್ರಹ್ಮನ) ವಿವೇಚನೆಯಿದೆ. ಅವನ ಅವ್ಯಕ್ತರೂಪವು ಲಿಂಗದ ವ್ಯಕ್ತರೂಪದಲ್ಲಿ ಅಂಗದ ಮೇಲಿದೆ. ಕಬೀರರ ಬ್ರಹ್ಮ ಸ್ವರೂಪ ದರ್ಶನವನ್ನು ನಾವು ಬಸವೇಶ್ವರರ ಲಿಂಗದ ಸ್ವರೂಪದಲ್ಲಿ ಕಾಣಬಹುದು. ಆದರಿಲ್ಲಿ ವಿಶಿಷ್ಟಾದ್ವೈತವಿದೆ. ಅಲ್ಲಿ ದ್ವೈತಾದ್ವೈತ ಸ್ವರೂಪಗಳಿವೆ.

> **ಜಗದಗಲ, ಮುಗಿದಗಲ, ಮಿಗೆಯಗಲ, ನಿಮ್ಮಗಲ ;**
> **ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ ;**
> **ಬ್ರಹ್ಮಾಂಡದಿಂದತತ್ತ, ನಿಮ್ಮ ಶ್ರೀ ಮುಕುಟ !**
> **ಅಗಮ್ಯ, ಅಗೋಚರ, ಅಪ್ರತಿಮ ಲಿಂಗವೇ, ಕೂಡಲ ಸಂಗಯ್ಯಾ,**
> **ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ.**

ಕಬೀರರು ಗ್ರಹಿಸಿದ ಬ್ರಹ್ಮನೇ ಇಲ್ಲಿ ಇಷ್ಟಲಿಂಗ ರೂಪಧರಿಸಿ ಚಿಕ್ಕವನಾಗಿದ್ದಾನೆ. 'ವಿಶ್ವತೋ ರೂಹು'ವನ್ನು ಲಿಂಗದಲ್ಲಿ ಹಿಡಿದಿಡಲಾಗಿದೆ. ಸರ್ವಂ ಲಿಂಗಮಯಂ ಇದಂ ಜಗತ್ ಎಂಬಂತೆ ಜಗತ್ತಿನ ಎಲ್ಲ ಪದಾರ್ಥಗಳಲ್ಲಿ ಅವನನ್ನು ಕಾಣಬಹುದು. ಕಬೀರರ ಬ್ರಹ್ಮನು ಭಕ್ತವತ್ಸಲನು, ದೀನದಯಾಳು, ಕರುಣಾಮಯಿ. ಅಂತಹವನ ಸೇವೆ ಸಲ್ಲಿಸಲು ತುಂಬಾ ಆತುರ.

**ಅಲಹ ಅಲಖ ನಿರಂಜನದೇವ ।**
**ಕಿಹಿ ವಿಧಿ ಕಕೌ ತುಮ್ಹಾರಿ ಸೇವ ।**

ನಿರಂಜನ ರೂಪಿಯಾದ ನಿನಗೆ ಯಾವ ರೀತಿಯಿಂದ ಸೇವೆ ಸಲ್ಲಿಸಲಿ ? ಎಂದು ಪ್ರಶ್ನಿಸಿದ್ದಾರೆ. ಅವನ ನಿಶ್ಚಿತ ರೂಪ ತಿಳಿಯದೆ ಸಂದಿಗ್ಧತೆಯಲ್ಲಿ.

**ಏಕ ಕಹೂ ತೂಹ್ಯೆ ನಹೀಂ, ದೋಯು ಕಹೂs ತೊ ಗಾರಿ ।**
**ಹ್ಯೆ ಜ್ಯೆಸಾ ತ್ಯೆಸಾ ರಹೆ ಕಹ್ಯೆ ಕಬೀರ ವಿಚಾರಿ ॥**

ಒಬ್ಬನೆಂದರೂ ಅಲ್ಲ. ಇಬ್ಬರೆಂದರೂ ಅಲ್ಲ. ಅವನು ಹೇಗೋ ಹಾಗೆಯೇ ಇರುವನು. ಸಗುಣ – ನಿರ್ಗುಣಗಳೆರಡನ್ನೂ ದಾಟಿರುವನು. ಇಂತಹ ಅನಿಶ್ಚಿತತೆಯು ಶ್ರೀ ಬಸವೇಶ್ವರರಲ್ಲಿ ಇದ್ದಿಲ್ಲ. ಸಂತರು ಬ್ರಹ್ಮನನ್ನು ತಮ್ಮ ಆತ್ಮರೂಪದಲ್ಲಿ ಕಂಡಿರುವರು. 'ಜಹs ಆತಮ ತಹs ರಾಮ ಹ್ಯೆ ಸಕಲ ರಹ್ಯಾ ಭರಪುರ' ಎಲ್ಲಿ ಆತ್ಮವಿದೆಯೋ ಅಲ್ಲಿ ರಾಮನಿರುವನು. ಎಲ್ಲಲ್ಲಿಯೂ ಅವನ ರೂಪವು ತುಂಬಿರುವದು. ತ್ರಿಗುಣಾತೀತನಾದ ಅವನ ಅವ್ಯಕ್ತ ಸತ್ತೆಯು ರೂಪಕ್ಕೊಂದು ವಿಲಕ್ಷಣ ವ್ಯಕ್ತಿತ್ವವನ್ನು ಕಲ್ಪಿಸಿರುವರು. ಯಾವ ಸತ್ತೆಯನ್ನು ಸಂತರು ತಿಳಿಯಲು ಬಹಳ ಪ್ರಯತ್ನಪಟ್ಟರೋ, ಗೊಂದಲಕ್ಕೀಡಾದರೋ, ಅದನ್ನೇ ಶಿವಶರಣರು ಬಹಳೇ ಸಹಜ – ಸ್ವಾಭಾವಿಕ ರೀತಿಯಲ್ಲಿ ಕಂಡಿರುವರು. ಜೀವತತ್ತ್ವ – ಪರಮತತ್ತ್ವಗಳು ಒಂದೇ. ಜೀವ–ಬ್ರಹ್ಮ–ರಲ್ಲಿ ಕಂಡುಬರುವ ಭಿನ್ನತೆಗಳು ಕೇವಲ ಭ್ರಮಾತ್ಮಕ, ಮಿಥ್ಯಾಜನಕ.

ಸಂತರ ಬ್ರಹ್ಮನಂತೆಯೇ ಶರಣರ ಶಿವನು. ಅಂತರಂಗದ ಶುದ್ಧಿಯನ್ನು ಪಡೆಯುವ ಸಾಧನೆಯಲ್ಲಿ ಇದ್ದವರಿಗೆ ಶಿವನು ಒಲಿಯುವನು. 'ನಂಬಿ ಕರೆದೊಡೆ 'ಓ' ಎನ್ನನೇ ಶಿವನು. ನಂಬದೆ, ನಚ್ಚದೆ ಬರಿದೆ ಕರೆವರೆ ? ಮೆಚ್ಚಿ ಕೂಗೆಂದ ಕೂಡಲ ಸಂಗಮದೇವಾ.' ಅಂತರಂಗದಲ್ಲಿ ಮೂರ್ತೀಭವಿಸಿರುವ ಆ ಸರ್ವಚೈತನ್ಯ ಸ್ವರೂಪನು, ಸಕಲೇಂದ್ರಿಯಗಳಲ್ಲಿಯೂ ಪ್ರಕಾಶಿತನಾಗಿ ರೂಪ, ರಸ, ಗಂಧಾದಿ ಗಳನ್ನು ಸ್ವೀಕರಿಸುತ್ತಿರಲು ಭಕ್ತನೊಳಗು ಲಿಂಗ, ಲಿಂಗದೊಳಗು ಭಕ್ತನಾಗಿ, ಎರಡಳಿದು ಒಂದಾಗಿ, ಲಿಂಗಾಂಗಸಾಮರಸ್ಯದ ಸುಖವನ್ನು ಪಡೆಯುವನು. ಜೀವತತ್ವ– ಪರಮ ತತ್ವಗಳ ಸಂಯೋಗವೇ ಲಿಂಗಾಂಗ ಸಾಮರಸ್ಯವಾಗಿದೆ.

**ಮಾಯೆ:**

ಸಂತರು ಮಾಯೆಯನ್ನು ಘೋರವಾಗಿ ನಿಂದಿಸಿರುವರು. 'ಸತ, ರಜ, ತಮ ಮ್ಯೆ ಕಿನ್ಹೀಮಾಯಾ' ಈ ಮಾಯೆಯು ಸೃಜನವು ಸತ್, ರಜಸ್ ಮತ್ತು ತಮಸ್ಸು ಗಳಿಂದಾಗಿದೆ. ಪರಮ ಸುಂದರಿಯಾದ ಈಕೆಯು ಮೋಸಗಾರ್ತಿಯು.

**ವಹ ವ್ಯೆಶ್ಯಾ ಹ್ಯೆ, ಡಾಕಿನೀ ಹ್ಯೆ ಕಡವಿ ಬ್ಯೆಲ ಹ್ಯೆ ।**
**ಅಂಗನ ಬೆಲ, ಆಕಾಶಫಲ, ಅನವ್ಯಾವಹ ಕಾ ದೂಧ ।**
**ನಸಾ ಸಿಂಗ ಕಿ ಥುನಹಪೀ, ರವ್ಯೆ ಬಾಂಝುಕಾ ಪೂತ ।**

ವೇಶ್ಯಳು ಮೋಸಗಾರ್ತಿಯು, ಆಕಾಶಫಲದಂತೆ, ಮೃಗಜಲದಂತೆ ನಿರಾಶೆಯೆಡೆಗೆ ಕರೆದುಕೊಂಡು ಹೋಗುವವಳು. ಭೇದ ಬುದ್ಧಿ ಜನಕಳು. ಕನಕ–ಕಾಮಿನಿಯರು ಆಕೆಯ ಗೆಳೆತಿಯರು. ಆಕೆಗೆ ಸತ್ಯ–ಮಿಥ್ಯಗಳೆಂಬೆರಡು ರೂಪಗಳು. ಸತ್ಯಮಾಯೆಯು ಬ್ರಹ್ಮ ಪ್ರಾಪ್ತಿಗೆ ಸಹಾಯಕಳು.

ಕಬೀರ ಮಾಯಾ ಮೋಹಿನಿ ಜೈಸೆ ಮೀಠಿ ಖಾಂಡ ।
ಸತಗುರು ಕಿ ಕರುಪಾ ಭಈ ನಹೀಂ, ತೌಂ ಕರತಿ ಭಾಂಡ ।

ಕಬ್ಬಿನ ಸಿಹಿಯಂತೆ 'ಮಾಯೆ ಮೋಹಿನಿಯಾಗಿರುವಳು. ಗುರುಕೃಪೆಯಿಂದ ಆಕೆಯು ಸಮ್ಮಾಧೀನಳಾಗುವಳು.

ಶರಣರು ಸಂತರಂತೆ ಮಾಯೆಯನ್ನು ನಿಂದಿಸಲಿಲ್ಲ. ಅವರ ದೃಷ್ಟಿಯಲ್ಲಿ ಹೆಣ್ಣು ಮಾಯೆಯಲ್ಲ, ಮಣ್ಣು ಮಾಯೆಯಲ್ಲ. ಆದರೆ ಮನದ ಮುಂದಣ ಆಸೆಯೇ ಮಾಯೆ. ಮಾಯೆಯ ಮಾನವೀಕರಣ ಮಾಡಿದ್ದಾರೆ. ಆಕೆಯ ಪೂರ್ವನಿಶ್ಚಿತ ಅಭಿಪ್ರಾಯವನ್ನು ಹೊಡೆದು ಹಾಕಿ ನವೀನ ರೂಪವನ್ನಿತ್ತಿರುವರು. ಶ್ರೀ ಬಸವೇಶ್ವರರು ಹರಿವ ಹಾವಿಗೆ, ಉರಿವ ನಾಲಿಗೆಗಳಿಗೆ ಅಂಜದೆ ಪರಸ್ತ್ರೀ–ಪರಧನಗಳಿಗೆ ಮಾತ್ರ ಅಂಜಿದ್ದರು. ಮಾಯಾ ಕೋಲಾಹಲವನ್ನು ಅಂಕಿತಗೊಳಿಸಿಕೊಂಡಿದ್ದರು. ತಮಸ್ಸನ್ನು ಸತ್ವರೂಪದಲ್ಲಿ ಅಳವಡಿಸಿದ ಮಹಾತ್ಮರು ವೇಶ್ಯಾ ಪದ್ಧತಿಯನ್ನು ನಿರ್ಮೂಲಗೊಳಿಸಿ ಅವರನ್ನು ಕುಲಸತಿಯರನ್ನಾಗಿ ಮಾಡಿದರು. ಸ್ತ್ರೀಯನ್ನು ಸಾಕ್ಷಾತ್ ಮಹಾದೇವಿಯಕ್ಕನಂತೆ ಕಂಡಿದ್ದರು. ಭಾರತದ ಧಾರ್ಮಿಕ ಕ್ಷೇತ್ರದಲ್ಲಿ ಪುರುಷರಂತೆ ಸ್ತ್ರೀಗೆ ಸಮಾನ ಅವಕಾಶ ಕಲ್ಪಿಸಿದ ಸರ್ವಪ್ರಥಮ ಶ್ರೇಯಸ್ಸು ಅವರದು. ಸಂಸಾರವೆಂಬುದೊಂದು ಮಾಯೆ, ಒಂದು ಆಕರ್ಷಣೆ ಎಂದು ಬಗೆದಿದ್ದರು.

ಹಠಯೋಗವನ್ನು ಕಬೀರರು ಈಶ್ವರಪ್ರಾಪ್ತಿಯ ಸಾಧನವನ್ನಾಗಿ ಮಾಡಿಕೊಂಡಿದ್ದರು. ಸಿದ್ಧ–ನಾಥ–ಪಂಥ ಪರಂಪರೆಗಳ ಪಿಷ್ಟಪೇಷಣವಾದ ಹಠಯೋಗದ ಜಟಿಲ ರೂಪಕ್ಕನುಸಾರವಾಗಿ ೧೬ ಆಧಾರ, ೧೦ ಬಾಗಿಲುಗಳು. ೫೨ ಕೋಣೆಗಳ. ೧೪ ಚಂದಾಗಳಂ, ೬೪ ದಿಯಾ, ೧೨ ಕೋಶ, ೭ ಸುರತಿಗಳ ೭೨ ನಾಡಿಗಳ ವಿವರ ಚರ್ಚೆಗಳನ್ನು ಮಾಡಿರುವರು. ಆದರೆ ಶ್ರೀ ಬಸವೇಶ್ವರರು ಶಿವಯೋಗದ ಮಾರ್ಗವನ್ನು ಅನುಸರಿಸಿದರು, ಬದ್ಧಜೀವನು ವೇಧಾ. ಮಂತ್ರ, ಕ್ರಿಯಾದೀಕ್ಷೆಗಳಿಂದ ಶುದ್ಧವಾಗಿ, ಆಣವ, ಮಾಯಾ, ಕಾರ್ಮಿಕ ಮಲಗಳನ್ನು ತಗೆದುಹಾಕಿಸಿಕೊಳ್ಳುವನು. ಶುದ್ಧಾಂತಜೀವಿಯು ಅಂಗದಾಗಿ ಸತ್ಕ್ರಿಯೆಗಳ ಮೂಲಕ ಭಕ್ತಿಯಿಂದ ಶಿವನ ಪೂಜೆ ಮಾಡುತ್ತ ಶಿವಯೋಗವನ್ನು ಸಾಧಿಸುವನು. ಷಟ್‌ಸ್ಥಲ ಮಾರ್ಗದ ಪಾವಟಣೆಗಳನ್ನು ಅನುಕ್ರಮವಾಗಿ ಹತ್ತುತ್ತ ಮುಂದುವರೆಯುವನು. ಕಾಯಕ ಮತ್ತು ಯೋಗ ಎರಡನ್ನೂ ಒಂದೇ ಎಂಬ ಭಾವನೆಯನ್ನು ತಾಳಿದ್ದರು,ಸರ್ವಕಾರ್ಯಗಳನ್ನು ಮಾಡುವಾಗ ಶಿವನ ಕಾರ್ಯವೆಂದು. ಶಿವಪೂಜೆಯೇ ಕರ್ಮಪೂಜೆಯೆಂದು ಯೋಗವನ್ನು ಆಚರಿಸುವರು.

ಕಬೀರರ ಶಬ್ದಸುರತಿಯೋಗದಲ್ಲಿ ಶಬ್ದದ ಪ್ರತೀಕ ಓಂಕಾರಪ್ರಣವ. ಬಸವರ ಅಷ್ಟಾವರಣದಲ್ಲಿಯ ಮಂತ್ರದಲ್ಲಿ ಕಬೀರರ ಶಬ್ದದ ಪ್ರತೀಕ ಒಡಮೂಡಿದೆ.

ಓಂನಮಃ ಶಿವಾಯ ಎಂಬ ಮಂತ್ರವ ಮೀರಲಮ್ಮದೆ ನಿಂದವು ವೇದ, ಶಾಸ್ತ್ರ, ತರ್ಕ. ಭಯಂಕರ ಭಯಂಕರ ಭ್ರಮೆಗೊಂಡಿತ್ತು ಯಂತ್ರ ತಂತ್ರ! ಎಂದು ಮಂತ್ರ ಮಹಿಮೆಯನ್ನು ಹೇಳಿದ್ದಾರೆ. ಮನಸ್ಸಿನ ಚಾಂಚಲ್ಯವನ್ನು ಅಧೀನವಿರಿಸುವದಕ್ಕಾಗಿ ತ್ರಿಕೂಟದಲ್ಲಿ ಸುರತಿಯನ್ನು ಕೇಂದ್ರೀಕರಿಸುವ ಸಲಹೆ ಕಬೀರರಲ್ಲಿದೆ, ಜಾಪ ಶಬ್ದವು ಅಜಪಾಜಾಪದಲ್ಲಿ ಕೂಡುವದು. ಅಜಪಾಜಪತ ಸುನಿ ಅನಿ ಅತಶಿಯಹು ತತ ಜಾನೆ ಸೋಈ ಇದು ಸ್ಮರಣೆಯ ಕೊನೆಯ ಸೀಮೆಯು.

ಸಹಜಶೀಲ ಸಾಧನೆಯು ಕಬೀರಮತದ ಸಾರವು.

> ಸತೀ ಸಂತೋಷ ಸಾವಧಾನ, ಸಬದ ಬೋಧ ಸುವಿಚಾರ।
> ಸತಗುರುಕೆ ಪ್ರಸಾದ ಥೆಂ, ಸಹಜಶೀಲಮತಸಾರ।

ಹಾಗೂ ಸಹಜೆಹೋಯೆ ಸೊ ಹೋಯರೇ ಆಗಿದೆ. ಶಬ್ದ ಭೇದಗಳ ಒಳ್ಳೆ ವಿಚಾರವು ಸಂತೋಷವನ್ನುಂಟುಮಾಡುವದು. ಸದ್ಗುರುವಿನ ಕೃಪೆಯಿಂದ ಮುಕ್ತಿಯು ಸಹಜವಾಗಿ ದೊರೆಯುವದು. ಶ್ರೀ ಬಸವೇಶ್ವರರು ಶಿವಪಥವನರಿವೊಡೆ ಗುರುಪಥವೇ ಮೊದಲು ಎಂದ ಹಾಗೆಯೇ ಅಲ್ಲಮನು ಅವರ ಅನುಗ್ರಹಕ್ಕಾಗಿ ಕಲ್ಯಾಣಕ್ಕೆ ಬಂದಿದ್ದನು. ಗುರುಪಥವ ಮೀರಿ ಮಾಡುವ ನೇಮ ಸಲ್ಲವು, ಸಲ್ಲವು ಎಂದು ಗುರುಕೃಪೆಯೇ ಮೋಕ್ಷ ಸಾಧನೆಗೆ ಜೀವಾಳವೆಂದು ತಿಳಿಸಿರುವರು.

'ಭಕ್ತಿ ನಸ್ಸೈನಿ ಮುಕ್ತಿಕಿ' ಎಂಬ ಕಬೀರರ ವಾಣಿಯಂತೆ ಮೋಕ್ಷ ಸಂಪಾದನೆಗೆ ಭಕ್ತಿಯೇ ಸುಮಾರ್ಗ. ಭಕ್ತಿಯೇ ಕರಗಸದಂತೆ ಹೋಗುತ್ತ ಕೊಯ್ಯುವದು, ಬರುತ್ತ ಕೊಯ್ಯುವದು. ಅದು ಬಹಳ ಕಠಿಣಮಾರ್ಗ. ತಿಳಿದಷ್ಟು ಸರಳವಲ್ಲ. ಶಿವನು ಭಕ್ತನ ತನು, ಮನ, ಧನಗಳನ್ನು ಪರೀಕ್ಷಿಸಿ, ಅಲ್ಲಾಡಿಸಿ ನೋಡುವನು. ಇವಕ್ಕೆಲ್ಲಕ್ಕಂಜದಿದ್ದರೆ ಭಕ್ತ ಕಂಪಿತನು ಕೂಡಲಸಂಗಮದೇವನಾಗಿರುವನು. ಕಬೀರ

> ಕಬೀರ ನಿಜ ಘರ ಪ್ರೇಮಕಾ, ಮಾರಗ ಅಗಮ ಅಗಾಧ।
> ಸೀಸ ಉತಾರಿ ಪಗಶಾಲಿ ಧರ್ಕೈ, ತಬ ನಿಕರಿ ಪ್ರೇಮಕಾಸ್ವಾದ।

ಪ್ರೇಮಮಾರ್ಗವು ಅಗಾಧವಾಗಿದೆ ಎಂದಿದ್ದಾರೆ. ಶಿವನ ಮೇಲಿನ ಪ್ರೇಮವೇ ಭಕ್ತಿ ಎಂಬರ್ಥದಲ್ಲಿ ಕಬೀರದಾಸರು,

> ಪ್ರೇಮ ನ ಖೆತ್ಮೆ ಉಪಜ್ಯೆ, ಪ್ರೇಮ ನ ಹಾಟ ಬಿಕಾಯ।
> ರಾಜಾ ಪರಜಾ ಜಿಸ ರೂಚ್ಯೆ, ಸಿರದ ಖೋಲೊ ಜಾಈ।

ಪ್ರೇಮವು ಹೊಲದಲ್ಲಿ ಬೆಳೆಯುವಂತಹದಲ್ಲ. ಬಜಾರದಲ್ಲಿ ಸಿಗುವಂತಹದಲ್ಲ. ತ್ಯಾಗವೇ ಅದಕ್ಕೆ ಕೊಡಬೇಕಾದ ಯೋಗ್ಯ ಬೆಲೆಯಾಗಿದೆ,

ಕಬೀರದಾಸರ ಭಕ್ತಿಮಾರ್ಗವು ಎಲ್ಲರಿಗೂ ಮುಕ್ತದ್ವಾರವಾಗಿತ್ತು. ಇಲ್ಲಿ ವರ್ಣಾಶ್ರಮಗಳಿಗೆ ಆಸ್ಪದವಿದ್ದಿಲ್ಲ.

ಜಾತಿ ಪಾಂತಿ ಪೂಛೈ ನಹಿಂ ಕೊಈ ।
ಹರಿಕೊ ಭಜೈ ಸೊ, ಹರಿ ಕಾ ಹೊಈ ।

ಯಾರ ಜಾತಿಯನ್ನು ಕೇಳಬಾರದು. ಹರಿಯನ್ನು ಪೂಜಿಸಿದವರೆಲ್ಲರೂ ಭಕ್ತರೇ. ಭಕ್ತಜಾತಿಯೊಂದೇ ಇದೆ. ಶ್ರೀ ಬಸವೇಶ್ವರರು ಸಹ ಲಿಂಗವನ್ನು ಧರಿಸಿದವರೆಲ್ಲರೂ ಒಂದೇ, 'ಕೊಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ' ಲಿಂಗ ವಿಲ್ಲದವನೇ ಹೊಲೆಯ 'ಹುಸಿವವನೇ ಹೊಲೆಯ' ಶ್ವಪಚನಾದರೇನು ? ಶಿವಭಕ್ತನೇ ಕುಲಜನು ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಶಿವಭಕ್ತಿ ಸಂಪ್ರದಾಯ ವನ್ನು ಹಿಡಿದು ತಮ್ಮ ತಂದೆ ಮಾದರ ಚೆನ್ನಯ್ಯ, ಬೊಪ್ಪ ಡೋಹರ ಕಕ್ಕಯ್ಯ, ಚಿಕ್ಕಪ್ಪ ಚಿಕ್ಕಯ್ಯನೆಂದು. ಕಿನ್ನರಬೊಮ್ಮಯ್ಯನು ಅಣ್ಣನೆಂದು. ಶಿವಭಕ್ತರೆಲ್ಲರೂ ತನ್ನ ಬಂಧು-ಬಳಗವೆಂದು ಹೇಳಿರುವರು. ಸಾಮಾಜಿಕವಾಗಿ ಹೀನವೆಂದು ಪರಿಗಣಿಸಿದ ಅಸ್ಪೃಶ್ಯರಿಗೆ ಉಚ್ಚಸ್ಥಾನವನ್ನಿತ್ತರು. ಕಾಸಿ ಕಮ್ಮಾರನಾದ. ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ. ವೇದವನೋದಿ ಹಾರುವನಾದ ಎಂದು ಎಲ್ಲರ ಉದ್ಯೋಗಗಳು ಸಮಾನ. ಕುಲಗಳು ಸಮಾನವೆಂದು ಹೇಳಿರುವರು. ಸರ್ವರಿಗೂ ಸಮಾನವಕಾಶವನ್ನೂ ಕಲ್ಪಿಸಿದ್ದರು.

ಕಬೀರದಾಸರ ಪ್ರಕಾರ ಆತ್ಮನು ಸ್ತ್ರೀ, ಪರಮಾತ್ಮನು ಅಥವಾ ಬ್ರಹ್ಮನು ಪುರುಷನು. "ರಾಮ ಮೇರೆ ಪಿವ, ಮೈ ರಾಮಕಿ ಬಹುರಿಯಾ' ರಾಮನು ನನ್ನ ಪ್ರಿಯತಮ. ನಾನು ಆವನ ಪ್ರೇಯಸಿಯು. 'ಹರಿ ಮೇರಾ ಪೀವ, ಹರಿಬಿನ ರಹಿ ನ ಸಕ್ಕೈ ಮೇರಾ ಜೀವ" ಹರಿಯಿಲ್ಲದೆ ನನ್ನ ಜೀವವಿರಲಾರದು. ಹಾಗೆಯೇ ಶ್ರೀ ಬಸವೇ-ಶ್ವರರು ಸಹ "ಲಿಂಗಪತಿ-ಶರಣ ಸತಿ' ಎಂದು ಹೇಳಿದ್ದಾರೆ. ನಂಬಿದ ಹೆಂಡತಿಗೆ ಗಂಡ-ನೊಬ್ಬನಿರುವಂತೆ. ಶರಣನು ಲಿಂಗವನ್ನೇ ಪತಿಯೆಂದು ಗ್ರಹಿಸಿ ಪತಿಸೇವಾತತ್ಪರ-ನಾಗುತ್ತಾನೆ. ಕಬೀರದಾಸರು ಭಕ್ತಿ ಮತ್ತು ಪತಿವ್ರತಗಳನ್ನು ಒಂದೇ ಸಾಲಿ ಪಂಕ್ತಿರಿಸಿದ್ದಾರೆ.

ಮೇರಾ ಮುಝಮೆ ಕುಝು ನಹೀಂ, ಜೋ ಕುಝು ಹೈ ಸೋ ತೇರಾ ।
ತೇರಾ ತುಝುಕೊ ಸೌಂಪ ತೊಂ, ಕ್ಯಾ ಲಗ್ಗೈ ಹೈ ಮೇರಾ ॥

ನನ್ನಲ್ಲಿ ಏನಿರುವದಿಲ್ಲ. ನನ್ನಲ್ಲಿರುವದೆಲ್ಲವೂ ನಿನ್ನದು. ನಿನ್ನದನ್ನು ನಿನಗೆ ಕೊಟ್ಟರೆ ನನಗೇನೂ ಉಳಿಯುವದಿಲ್ಲ. ಹೀಗಿರುವದು ಕಬೀರರ ಸರ್ವಾರ್ಪಣವು. ಹಾಗೆಯೇ ಶ್ರೀ ಬಸವೇಶ್ವರರು ಎನ್ನ ಮಾನಾಪಮಾನ, ಹಾನಿ ಅಭಿವೃದ್ಧಿ, ಯೋಗಕ್ಷೇಮ, ನಿಮ್ಮದೆಂದು, ಅರ್ಪಿಸಿ ಜತೆಗೆ 'ಬಳ್ಳಿಗೆ ಕಾಯಿ ದಿಮ್ಮಿತ್ತು' ಎಂದು ನಿರಾಭಾರಿ-ಗಳಾಗಿದ್ದಾರೆ.

ಕಬೀರರ ಮಾನಸಿಕ ಭಕ್ತಿಯಲ್ಲಿ ಪ್ರೇಮದ ಪ್ರಧಾನತೆಯಿದೆ. ಅವರ ಪ್ರೇಮ ಲೀಲೆಯು ಬಹಳ ವ್ಯಾಪಕ, ಹೃದಯಸ್ಪರ್ಶಿ ತನ್ಮಯಪೂರ್ಣವಾಗಿದೆ. ಅವರ ಪ್ರಿಯತಮನು ದುಃಖಿದೊಡೆಯನು. ದಾರಿ ಕಾಯ್ದು ವಿರಹವೇದನಾಲಿಪ್ತಳಾಗಿರುವಳು ಆತ್ಮಸ್ತ್ರೀ. ವಿರಹಿಣಿಯು ಮಾರ್ಗದಲ್ಲಿ ಪ್ರಿಯನ ಪ್ರತೀಕ್ಷೆಯಲ್ಲಿ ನಿಂತು, ಹೋಗುವ ಬರುವ ಪಥಿಕನನ್ನು ಯಾವ ಪ್ರಕಾರ ಉತ್ಕಂಠೆಯಿಂದ ಪ್ರಿಯನಾಗಮನದ ಮಿಲನದ ಸಮಾಚಾರ ಕೇಳುವಳೊ ಹಾಗೆಯೇ ಸಾಧಕನು ಬ್ರಹ್ಮವಿಮುಕ್ತ ಆತ್ಮ ಗುರುವಿನಿಂದ (ಬ್ರಹ್ಮನ) ಪ್ರಿಯನ ಚರ್ಚೆಯನ್ನು ಕೇಳುತ್ತ ಪ್ರಭುವಿನೊಂದಿಗೆ ಕೂಡಲು ಬಯಸುವನು. ವಿರಹದಿಂದ ಪತ್ರಬರೆಯುವ ಪ್ರಸಂಗದಲ್ಲಿ ಸ್ವಾಧೀನತೆಯಿದೆ. ದೃಢ ವಿಶ್ವಾಸಗಳಿವೆ. ತೀವ್ರಾನುಭೂತಿಯಿದೆ. ಕಬೀರರ ಪ್ರಿಯಳಿಗೆ ಪ್ರಭು ದೊರೆತನೆಂದರೆ ಆಕೆಯು ಎಂದಿಗೂ ಅವನನ್ನು ಬಿಡಳು. ಪ್ರಿಯನನ್ನು ಕಣ್ಣುಗಳೆಂಬ ಕೋಣೆಯಲ್ಲಿ ಪಲ್ಲಂಗವನ್ನು ಹಾಕಿ, ಕಣ್ಮುಚ್ಚಿ ಯಾರೂ ನೋಡದ ಹಾಗೆ ಹಾಗೂ ಅವನು ಬಿಟ್ಟು ಹೋಗದಂತೆ ಇಟ್ಟುಕೊಳ್ಳುವಳು. ಇಷ್ಟು ಮಿಲನದಾತುರತೆ. ಶ್ರೀ ಬಸವೇಶ್ವರರಲ್ಲಿಯೂ ಇಂತಹ ದಾಂಪತ್ಯಯೋಗದ ಪ್ರಸಂಗಗಳಿವೆ. ಎಲೆ ಗಿರಕಿಂದೊಡೆ ಶಬ್ದವಾದೊಡನೆಯೇ ಪ್ರಿಯನೇ ಬಂದನೆಂದು ನೋಡುವ ಹಂಬಲ ಅಂಗನಿಗೆ. 'ಸತಿ-ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂದು ನಿತಾಂತ ಮಿಲನದ ದೃಶ್ಯವಿದೆ.

ಕಬೀರ ಕುತಾ ರಾಮಕಾ, ಮುತಿಯಾ ಮೇರಾ ನಾವುಂ ।
ಗಲ್ಮೆರಾಮ ಕಿ ಜೆಬಡಿ, ಜಿತ ಖೈಂಚ್ಕೆ ತಿತ ಜಾವುಂ ।

ಕಬೀರರು ತಾವು ರಾಮನ "ಮುತಿಯಾ" ಎಂಬ ಹೆಸರಿನ ನಾಯಿಯೆಂದೂ ತಮಗೆ ರಾಮನ ಮುಗದಾಣವಿದೆ. ಒಡೆಯನು ಜಗ್ಗಿದಂತೆ ಹೋಗುವದೇ ತಮ್ಮ ಕೆಲಸವೆಂದು ಹೇಳುವಲ್ಲಿ ಸೇವ್ಯ-ಸೇವಕಭಾವವು ಗೋಚರಿಸುವದು. 'ಪಶುವಾನು, ಪಶುಪತಿ ನೀನು" ಎಂಬಲ್ಲಿ, ಶ್ರೀ ಬಸವೇಶ್ವರರು ತಮ್ಮನ್ನು ಬಡಪಶು. ತುಡುಗುಣಿ ಎಂದು ತಿಳಿದಿರುವರು. ಪಶುತ್ವವನ್ನು, ಗುಲಾಮಗಿರಿಯನ್ನು ನೀಗಿಸುವದೇ ಭಕ್ತಿಯ ಲಕ್ಷಣ. ಭಕ್ತ ಮತ್ತು ದೇವನಲ್ಲಿ ಜೀವಿ ಮತ್ತು ಕರ್ತಾರನೆಂಬ ಸಂಬಂಧವಿದೆ. ಹೀಗೆಯೇ ಉಭಯರಲ್ಲಿ ಭಕ್ತಿ ಸಂಬಂಧದ ಎಲ್ಲ ಸ್ವರೂಪಗಳು ಒಡಮೂಡಿವೆ.

ಕಬೀರದಾಸರ ಜೀವನದ ಧ್ಯೇಯ ಹಿಂದೂ-ಮುಸ್ಲಿಮರಲ್ಲಿ ಐಕ್ಯವನ್ನುಂಟು ಮಾಡುವದಾಗಿತ್ತು. " ನಾ ಹಿಂದೂ, ನಾ ಮುಸಲ್ಮಾನ "ರೆಂದು ತಮ್ಮ ಬಗ್ಗೆ ಹೇಳಿದುದನ್ನು ನೋಡಿದರೆ ಯಾವದೇ ಧರ್ಮ-ಜಾತಿಗಳಿಗೆ ಹೊಂದದವರಾಗಿದ್ದರು. ಏಕ ಧರ್ಮೀಯ ಭಾವನೆಯಿತ್ತು. ಶ್ರೀ ಬಸವೇಶ್ವರರು ಸಹ "ಆಸು ಹಾರವನೆಂದು, ನೇರವಾಗಿ ತಿಳಿಸಿ, ಲಿಂಗವಂತರೆಲ್ಲರೂ ಒಂದೇ ಎಂಬ ಮನೋಭಾವನೆ ಬಲಿಸಿ, ಅವರ ಏಕತೆಗಾಗಿ ಜೀವನಪರ್ಯಂತ ಶ್ರಮಿಸಿದರು.

ಹಿಂದೂಗಳ ಮೂರ್ತಿಪೂಜೆಯನ್ನು ಕುರಿತು—

ಪತ್ಥರ ಪೂಜ್ಕೆ ಹರಿ ಮಿಲ್ಕೆ ಹರಿ ಮಿಲ್ಕೆ, ತೂ ಮ್ಕೆ ಪೂಜಾಂ ಪಹಾಡ ।

ಕಲ್ಲಿನ ಪೂಜೆಯನ್ನು ಮಾಡಿದರೆ ಹರಿಯು ದೊರಕುವದಾದರೆ, ನಾನು ಕಲ್ಲು ಗಳಿಂದ ಕೂಡಿದ ಪರ್ವತವನ್ನೇ ಪೂಜಿಸುವೆನೆಂದರು. ಮುಸ್ಲಿಮರ ಕಲ್ಲು-ಮಣ್ಣುಗಳ ಮಸೂದೆಯಲ್ಲಿರುವ ಮುಲ್ಲಾಗಳ ನಡತೆಯನ್ನು ವಿರೋಧಿಸಿರುವರು.

ಶ್ರೀ ಬಸವೇಶ್ವರರು ಸಹ ಕಿರುಕುಳದೇವರ ಅಸ್ತಿತ್ವವನ್ನು ಖಂಡಿಸಿದರು. ದೇವ ನೊಬ್ಬ ನಾಮ ಹಲವು ಎಂದು ಏಕೇಶ್ವರವಾದವನ್ನು ಪ್ರತಿಪಾದಿಸಿದರು. 'ಕಲ್ಲನಾಗರ ಕಂಡರೆ ಹಾಲನೆರೆಯೆಂಬರು'--'ಮರವ ಕಂಡಲ್ಲಿ ಸುತ್ತುವರಯ್ಯಾ' 'ನಂಬ ಬಲ್ಲ ಭಕ್ತರಿಗೆ ದೇವನೊಬ್ಬ ಕಾಣಿರೋ' ಅನ್ಯದೇವರಿಗೆರಗಿದರೆ ಆ ದೇವನು ಮೂಗು ಕೊಯ್ಯದೆ ಬಿಡನೆಂದೂ. ಆ ಭಕ್ತನು ಪತಿವ್ರತಾಸ್ತ್ರೀಯು ಹಾದರಮಾಡಿದಂತಾಗುವ ದೆಂದು, ಕಲ್ಲು ಮರಗಳ ಹಾಗೂ ಇತರ ಮೂರ್ತಿಪೂಜೆಗಳನ್ನು ನೇರವಾಗಿ ಟೀಕಿಸಿ ದ್ದಾರೆ. ಧರ್ಮಸಾಧಕರಿಗೆ ಬಾಹ್ಯಾಡಂಬರಗಳನ್ನು ಬಿಡುವಂತೆ ಹೇಳಿ ನವೀನ ಸಹಜ ಧರ್ಮದ ಮಾರ್ಗದರ್ಶನಮಾಡಿದರು. 'ಜೋ ಕಬಿರ ವಿಷಯಾ ತಜ್ಯೈ, ಸಹಜ ಕಹೀ ಜೈ ಸೋಯ| ವಿಷಯಾ ಸಕ್ತಿಗಳನ್ನು ತ್ಯಜಿಸಿದವನು ಧಾರ್ಮಿಕನು. ಶ್ರೀ ಬಸವೇಶ್ವರರು ಡಾಂಭಿಕ ಭಕ್ತರನ್ನು, ವೇಷದ ಧರ್ಮಿಷ್ಠರನ್ನು, ಕೀರ್ತಿವಾರ್ತೆಗೆ ದಾನಮಾಡುವವರನ್ನು ಖಂಡಿಸಿದ್ದಾರೆ, ಶಿವನ ಡಂಗುರವು ಏಡಿಸಿ ಕಾಡಿಸುವದೆಂದು ಹೆದರಿಸಿದ್ದಾರೆ.

ಮಾಲಿ ಆವತ ದೇಖಕರ, ಕಲಿಯಾಂ ಕರೀ ಪುಕಾರ।
ಫೂಲೆ ಫೂಲೆ ಚುನಲಿಯೆ, ಕಲ ಹಮಾರೀ ಬಾರ।

ತೋಟದಲ್ಲಿಯ ಮೊಗ್ಗೆಗಳು ಹೂವಾಡಿಗನು ಬರುವದನ್ನು ನೋಡಿ ಹೇಳಿದವು. ಇಂದು ಅರಳಿದ ಹೂಗಳನ್ನು ತಗೆದುಕೊಂಡು ಹೋದನು. ನಾಳೆಯೇ ನಮ್ಮ ಸರತಿಯು. ಕಾಲಮೃತ್ಯುಗಳ ಅಧೀನನಾದ ಮನುಷ್ಯನ ಜೀವನವು ಎಂದಾದರೂ ಹೋಗುವಂಥದಿದು ಎಂದು ಕಬೀರದಾಸರು ಜೀವನದ ಕ್ಷಣಿಕತೆಯನ್ನು ಮಾರ್ಮಿಕವಾಗಿ ಚಿತ್ರಿಸಿರುವರು. ಶ್ರೀ ಬಸವೇಶ್ವರರು ನಾಳೆ ಬಪ್ಪುದು ನಮಗಿಂದೆ ಬರಲೆಂದು, ಬರುವ ಮೃತ್ಯುವಿಗೆ ಅಂಜದೆ, ಅಳುಕದೆ ಅಹ್ವಾನಿಸಿರುವರು. ಅವರಿಗೆ ಮರಣವೇ ಮಹಾನವಮಿಯಾಗಿತ್ತು, ಜೀವನದ ಕ್ಷಣಿಕತೆಯನ್ನು ಸಂತೆಯಮಂದಿಗೆ, ನೀರಮೇಲಣಗುರುಳೆಯಂತೆ ತಿಳಿಸಿದ್ದಾರೆ.

ಕಬೀರದಾಸರು ನಡೆನುಡಿಗಳು ಒಂದಾಗಿರಬೇಕೆಂದು ಹೇಳಿದರು.

ಕಥನೀ ಮೀಠೀ ಖಾಂಡಸೀ, ಕರನಿ ವಿಷಕಿಲೋಯ।
ಕಥನಿ ತಜೆ ಕರನೀ ಕರೈ, ವಿಷಸೆ ಅಮೃತ ಹೋಯ।

ಹೇಳುವದು ಕಬ್ಬಿನಂತೆ ಸಿಹಿಯಾಗಿದೆ. ಆದರೆ ಮಾಡುವದು ವಿಷ ರೂಪವು, ಹೇಳುವದನ್ನು ಬಿಟ್ಟು ಮಾಡುವದನ್ನು ಮಾಡಿದರೆ ವಿಷವೆಲ್ಲ ಅಮೃತವಾಗುವದು. ಶ್ರೀ ಬಸವೇಶ್ವರರು 'ನುಡಿದಂತೆ ನಡೆದರೆ ಇದೇ ಜನ್ಮ ಕಡೆ, ಆಚಾರವೇ ಸ್ವರ್ಗ, ಅನಾಚಾರವೇ ನರಕ' ಎಂದು ಭಕ್ತಿಯ ಸುಭಾಷೆಯ ನುಡಿವೆ, ನುಡಿದಂತೆ ನಡೆವೆ, ನಡೆ

ಯೊಳಗೆ ನುಡಿಯ ಪೂರೈಸುವೆ, ಮಾತಿನಂತೆ ಮನವಿಲ್ಲದವರನ್ನು ಮೆಚ್ಚ ಶಿವನೆಂದು ಹೇಳಿರುವರು.

ಸಮಾಜದಲ್ಲಿಯ ಭಿಕ್ಷಾಟನದ ರೂಢಿಗತ ಅನಿಷ್ಟಪರಂಪರೆಯನ್ನು ವಿರೋಧಿಸುತ್ತ ಕಬೀರರು

> ಮಾಂಗನ ಮರನ ಸಮಾನ ಹೈ, ಮತ ಕೋಇ ಮಾಂಗ್ಯೆ ।
> ಮಾಂಗನತೆ ಮರನಾ ಭಲಾ ಯಹ ಸತ್ಗುರುಕೆ ಸೀಖ ।

ಬೇಡುವುದು ಸಾವಿನ ಸಮಾನ. ಯಾರೂ ಬೇಡಬಾರದು. ಬೇಡಿದಲ್ಲಿ ಸತ್ತಂತೆಯೇ ಎಂದು ಗುರುಗಳ ಉಪದೇಶವಾಗಿದೆಯೆಂದರು. ಶ್ರೀ ಬಸವೇಶ್ವರರು ಸಮಾಜದಲ್ಲಿ 'ಕಾಯಕವೇ ಕೈಲಾಸ' ಎಂಬ ಮಹಾನ್ ಸಂದೇಶವನ್ನು ಬೀರಿದರು. ಪ್ರತಿಯೊಬ್ಬರು ಈ ಕಾಯಕದಲ್ಲಿ ತೊಡಗಬೇಕೆಂದು ತಿಳಿಸಿ, ಭಿಕ್ಷೆ ಬೇಡುವ ಪರಂಪರೆಗೆ ಪೆಟ್ಟನ್ನು ಹಾಕಿದರು.

ಕಬೀರದಾಸರು ನಿಂದಕರನ್ನು ಸ್ವಾಗತಿಸುತ್ತಾ,

> ನಿಂದಕ ನಿಯರ ರಾಖಿಯೆ, ಆಂಗನ ಕುಟಿ ಛವಾಯ ।
> ಬಿನಾ ಪಾನೀ ಸಾಬುನ ಬಿನಾ ನಿರ್ಮಲ ಕರ್ಕೆ ಸುಭಾಯ ।

ನಿಂದೆ ಮಾಡುವವರನ್ನು ಅಂಗಳದಲ್ಲಿ ಒಂದು ಗುಡಿಸಲು ಹಾಕಿಸಿ ಇಟ್ಟುಕೊಳ್ಳಬೇಕು. ಯಾಕೆಂದರೆ ನೀರಿಲ್ಲದೆ, ಸಾಬೂನಿಲ್ಲದೆ ಅವರು ಹೃದಯವನ್ನು ಸ್ವಚ್ಛ ಮಾಡುವರು. ಇದೇ ಅವರ ಸ್ವದೋಷಜ್ಞಾನದ ಪಿಪಾಸೆ, ಹಾಗೂ ಆತ್ಮೋದ್ಧಾರದ ಮಾರ್ಮಿಕತೆಯು. ಸತ್ಯದ ಪ್ರತಿಪಾದನೆ ಮಾಡುವಾಗ, 'ಆರು ಮುನಿದು ನಮ್ಮನೇನ ಮಾಡುವರು' ಹೊಯ್ದರೆ ಹೊಯ್ಗಳು ಕೈಯ್ಯ ಮೇಲೆ, ಎಂದು ನಿಂದಕರ ಮಾತನ್ನು ಕೇಳದೆ, ಗಮನ ಕೊಡಬಾರದೆಂದು ಶ್ರೀ ಬಸವೇಶ್ವರರು ತಿಳಿಸಿರುವರು. ನಿಂದಕರಿಂದ ಆತ್ಮಸ್ವರೂಪ ತಿಳಿದುಕೊಳ್ಳುವದಕ್ಕಿಂತ ಆತ್ಮಜ್ಞಾನ ಅರಿವಿಗೆ (ಆತ್ಮ ವಿಮರ್ಶೆಗೆ) ಹೆಚ್ಚು ಮಹತ್ವ ಕೊಟ್ಟಿರುವರು.

ಕಬೀರರು ತಮ್ಮ ರಚನೆಗಳನ್ನು ವಿಶೇಷವಾಗಿ 'ದೋಹಾ' ಎಂಬ ಹೆಸರಿನ ಛಂದಗಳಲ್ಲಿ ನೀಡಿರುವರು. ಆದರೆ ಶ್ರೀ ಬಸವರು ಎಲ್ಲ ಧರ್ಮಸಾರವನ್ನು 'ವಚನ' ಗಳ ರೂಪದಲ್ಲಿ ತಿಳಿಪಡಿಸಿದರು.

ಕಬೀರದಾಸರು ಜ್ಞಾನಪ್ರಧಾನ ಭಕ್ತಿಯ ಅಗ್ರದೂತರು. ಶುಷ್ಕವಾದ ಜ್ಞಾನವು ಜನರಿಗೆ ಹಿಡಿಸದು. ಅವರ ವಿಚಾರಗಳು ಅಪರಿಪಕ್ವ, ಅಶಾಸ್ತ್ರೀಯಗಳು. ವಿರೋಧಿ ತತ್ವಗಳ ಮಿಶ್ರಣ, ಸ್ವಮತ ಪ್ರಚಾರದ ಸಲುವಾಗಿ ಖಂಡನಾತ್ಮಕ ಪ್ರಣಾಲಿಯ ಆಶ್ರಯವನ್ನು ಹಿಡಿದರು. ನಿರ್ಗುಣಭಾವದಲ್ಲಿ ಆದರ್ಶದ ಅಭಾವವಿತ್ತು. ಸ್ವತಃ ಅಂತ್ಯಜರಾದುದರಿಂದ ಸುಶಿಕ್ಷಿತ ಉಚ್ಚ ಜಾತಿಯ ಜನರು ವಿರೋಧಿಗಳಾದರು. ಹೀಗಾಗಿ ಇವರ ಪರಂಪರೆ ಬಹಳ ದಿನಗಳ ನಂತರ ಬೆಳೆದು ಬರಲಿಲ್ಲ. ಕೇವಲ ಕಬೀರರ ಕಾಲದ

ಲ್ಲಿಯೇ ಸ್ವಲ್ಪ ಪ್ರಭಾವ ಕೆಲ ಅಂತ್ಯಜ, ದೀನದಲಿತರ ಮೇಲೆ ಬಿದ್ದಿತು, ಶಿಷ್ಯರಾದ ರೈದಾಸ (ಹೊಲೆಯ), ಧನ್ನ (ಜಾಟ್) ಸೇನಾ (ಹಜಾಮ) ಪೀಪಾ (ರಾಜಪೂತ), ಭವಾನಂದ, ಸುಖಾನಂದ, ಆಶಾನಂದ, ಸುರಸಾನಂದ, ಪರಮಾನಂದ, ಮಹಾನಂದ ಶ್ರೀ ಆನಂದರೆಲ್ಲ ಕೀಳು ಕುಲದವರಾಗಿದ್ದರು.

ಕಬೀರರ ಸಾಹಿತ್ಯಕ್ಕೆ ಹಿಂದೀ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಸ್ಥಾನವು ಇದೆಯೆಂಬುದರಲ್ಲಿ ಸಂಶಯವಿಲ್ಲ. ವ್ಯಷ್ಟಿಯು ಸಮಷ್ಟಿಯ ವಾತಾವರಣದ ಮೇಲೆ ಬೀರಿದ ಪ್ರಭಾವವು ಸ್ಮರಣೀಯವು. ಡಾ॥ ರಾಮಚಂದ್ರ ಶುಕ್ಲರದರ ಅಭಿಪ್ರಾಯದಂತೆ.

"ರಸವಾದೀ ವಿಮರ್ಶ ಸಂಕೀರ್ಣ, ಸೀಮಿತ ದೃಷ್ಟಿಕೋನಗಳು ಕಬೀರರ ನಿರ್ಲಕ್ಷತೆಗೆ ಕಾರಣಗಳಾಗಿರಬೇಕೆನ್ನಬಹುದಾದರೂ ದೇಶ-ವಿದೇಶೀಯ ಅನೇಕ ಸಾಹಿತ್ಯಕಾರರು ಅವರನ್ನು ಯುಗಧರ್ಮಪ್ರವರ್ತಕ, ಧರ್ಮ ಸುಧಾರಕ, ಯುಗ ಸೃಷ್ಟಾರರೆಂದು ಮನತುಂಬ ಪ್ರಶಂಸಿರುವರು."

ಡಾ॥ ಹಜಾರಿ ಪ್ರಸಾದ ದ್ವಿವೇದಿಯವರು ಹೇಳಿದಂತೆ.

" ಸಾಧನೆಯ ಕ್ಷೇತ್ರದಲ್ಲಿ ಯುಗಯುಗದ ಗುರುಗಳು. ಹಾಗೂ ಸಾಹಿತ್ಯದ ಕ್ಷೇತ್ರದಲ್ಲಿ ಭವಿಷ್ಯದೃಷ್ಟಾರರು, "

ಹಿಂದೀ ಸಾಹಿತ್ಯ ಹಾಗೂ ಹಿಂದೂ ಸಮಾಜದಲ್ಲಿ ಕಬೀರರು ಜಾಗರಣ ಯುಗದ ಅಗ್ರದೂತರು. ಭಾರತದ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ನವೀನ ಚೇತನೆಯ ಸ್ವರವನ್ನು ಊದಿದವರಲ್ಲಿ ಸರ್ವಶ್ರೇಷ್ಠರು, ಮತ್ತು ಸರ್ವ ಪ್ರಥಮರು.

ಶ್ರೀ ಬಸವೇಶ್ವರರ ವ್ಯಕ್ತಿತ್ವವು ಬಹುಮುಖವಾದುದು. ಅವರನ್ನು ಉಚ್ಚ ದರ್ಜೆಯ ಕವಿಗಳೆನ್ನಿ, ಧರ್ಮಬೋಧಕರೆನ್ನಿ, ಭಕ್ತಿ ಭಂಡಾರಿಗಳೆನ್ನಿ, ಜನನಾಯಕರೆನ್ನಿ ಉದಾತ್ತ ವಿಚಾರವಾದಿಗಳೆನ್ನಿ, ಮಾನವಜೀವನದಿಂದ ದೈವೀಜೀವನದ ಸಿದ್ಧಿ ಪಡೆಯಲು ಹೋರಾಟ ಮಾಡಿದ ಮಹಾಧೀರರೆನ್ನಿ, ಕ್ರಾಂತಿಕಾರರೆನ್ನಿ, ದೇಶದ ಆರ್ಥಿಕ, ರಾಜಕೀಯ, ಸಾಮಾಜಿಕ, ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ನವ್ಯ ವಿಚಾರ-ಆಚಾರಗಳನ್ನು ತುಂಬಿದವರನ್ನಿ ಎಲ್ಲವೂ ಅವರಾಗಿದ್ದರು.

' ಎನಗಿಂತ ಕಿರಿಯರಿಲ್ಲ-ಶಿವಭಕ್ತರಿಗಿಂತ ಹಿರಿಯರಿಲ್ಲ ' ಎಂದು ತಮ್ಮ ಕಿರಿತನ ದಲ್ಲಿಯೇ ಶಂಕರತ್ವವನ್ನು ಪ್ರಕಟಗೊಳಿಸಿದ್ದಾರೆ. ಅವರು ಜೀವನವನ್ನು ಅಲ್ಲಗಳೆದವರಲ್ಲ, ಸೃಷ್ಟಿಯ ವಸ್ತುಗಳನ್ನು ನಿರಾಕರಿಸಿದವರಲ್ಲ. ಸಹಕಾರ ತತ್ವ-ಸಮಾಜ ವಾದಗಳಲ್ಲಿ ಬಲವಾದ ನಂಬುಗೆಯುಳ್ಳವರು. ಅವರು ಎರಡನೆಯವರ ಹೊಗಳಿಕೆಗೆ ಹಿಗ್ಗಲಿಲ್ಲ, ತೆಗಳಿಕೆಗೆ ಕುಗ್ಗಲಿಲ್ಲ. ' ಎನ್ನ ಹೊಗಳಿ ಹೊಗಳಿ ಹೊನ್ನ ಶೂಲದಲ್ಲಿಕ್ಕಿದರು ' 'ಎನ್ನ ಸಮಯಾಚಾರಿ ಎನ್ನುವರು' 'ಎನ್ನನು ಭಕ್ತಿ ಭಂಡಾರಿ ಎನ್ನುವರು' ಎಂಬುದನ್ನು ಹೇಳಿ 'ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದಿಸಿತಲ್ಲ' ಎಂದು ಮನವನ್ನು ಬಹಿರಂಗಕ್ಕೆ ಬಿಚ್ಚಿಟ್ಟಿ ದ್ದಾರೆ. ಅಂತರಂಗಶುದ್ಧಿ ಬಹಿರಂಗಶುದ್ಧಿಗಳನ್ನು ಬಲಪಡಿಸಿ ಶಿವನನ್ನು ಒಲಿಸಿದ್ದಾರೆ. ತಪ್ಪು ಮಾಡುವದು ಮನುಷ್ಯನ ಸಹಜ ಸ್ವಭಾವ. ತಪ್ಪನ್ನು ಪ್ರಾಂಜಲ ಮನದಿಂದ

ಒಪ್ಪಿದರೆ ಸಾಕು. ಪ್ರಾಯಶ್ಚಿತವು ತಪ್ಪಿನ ದೋಷ ನಿವಾರಣೆಯು, 'ಎನ್ನ ತಪ್ಪು ಅನಂತ ಕೋಟಿ' ನಿಮ್ಮ ಸೈರಣೆಗ ಲೆಕ್ಕವಿಲ್ಲಾ 'ಇನ್ನು ತಪ್ಪಿದರೆ ನಿಮ್ಮ ಪಾದವೇ ದಿಬ್ಬ' ಎಂದು ತಪ್ಪು ಮಾಡುವದರಿಂದ ದೂರವಾಗಿದ್ದಾರೆ. ತಮ್ಮ ಧರ್ಮ ಪ್ರಚಾರಕ್ಕೆ ಕಬೀರರಂತೆ ನಾಡಿನ ಮೂಲೆ–ಮೂಲೆಗಳಿಗೆ ಸಂಚರಿಸಲಿಲ್ಲ. ಆದರೆ ತಮ್ಮ ವ್ಯಕ್ತಿತ್ವ ಘನತೆಯಿಂದ ಪ್ರಪಂಚವನ್ನೇ ತಮ್ಮ ಪ್ರಭಾವಕ್ಕೆ ಒಳಪಡಿಸಿಕೊಂಡರು. ಅವರ ಘನತೆಯನ್ನು ಶಬ್ದಗ ಳಲ್ಲಿಡುವದು ಹೆಳವನು ಹಿಮಾಲಯ ಹತ್ತಿದ ಪ್ರಯತ್ನದಂತೆಂದು ಹೇಳದಿರಲಾರೆ.

ಶ್ರೀ ಬಸವೇಶ್ವರರು ಕಬೀರದಾಸಕ್ಕಿಂತಲೂ ಎರಡು ಶತಮಾನಗಳ ಪೂರ್ವವೇ ಧರ್ಮತತ್ವಗಳನ್ನು ಸಾರಿ ಹೋಗಿರುವರು. ಕಲ್ಯಾಣವೆಂಬ ಪಣತಿಯಲ್ಲಿ ಇವರ ಭಕ್ತಿ ರಸವೆಂಬ ತೈಲದಿಂದ ಜ್ಞಾನಜ್ಯೋತಿಯು ಬೆಳಗುತ್ತಲಿದೆ. ಈಗಲೂ ಅವರ ಧರ್ಮದ ಸಾಹಿತ್ಯ–ಸಂಸ್ಕೃತಿಗಳ ಪರಂಪರೆಗಳು ಸಾಗಿ ಬಂದಿವೆ, ಸಾಗಿವೆ. ವೀರಶೈವರಿಗೆ ಅವರು ಆರಾಧ್ಯ ದೇವರಾಗಿದ್ದಾರೆ. ಲಿಂಗಸ್ವರೂಪಿಗಳಾಗಿದ್ದಾರೆ. ಆದರೆ ಕಬೀರರ ವ್ಯಕ್ತಿತ್ವ ಪ್ರಕಾಶ ಹಾಗಿಲ್ಲ.

ಈರ್ವರ ತುಲನೆಯನ್ನು ಮಾಡುವದು ಅತಿ ಕಠಿಣ. ನಾವಿಲ್ಲಿ ಕೇವಲ ಕಬೀರರ ತತ್ವ ಗಳೊಂದಿಗೆ ಬಸವರ ತತ್ವಗಳನ್ನು ಹೊಂದಿಸುವ ಪ್ರಥಮ ಪ್ರಯತ್ನ ಮಾಡಿರುವೆ. ಕಬೀರರ ಎಲ್ಲ ಸರ್ವಸಾಮಾನ್ಯ ಸಿದ್ಧಾಂತಗಳ ನಿರೂಪಣೆಯಾದಂತೆ ಬಸವೇಶ್ವರರ ಎಲ್ಲ ಧಾರ್ಮಿಕ ಸಿದ್ಧಾಂತಗಳ ನಿರೂಪಣೆಯಾಗಿಲ್ಲ ಎಂಬುದೂ ಲಕ್ಷ್ಯದಲ್ಲಿರಬೇಕು. ಪರಸ್ಪರರಲ್ಲಿ ತಮ್ಮ ಕಾಲ, ಸ್ಥಳಗಳ ನಿಚ್ಚಳ ಪ್ರಭಾವವಿದೆ. ಬಸವೇಶ್ವರರು ನಿಜವಾಗಿಯೂ ಕನ್ನಡ ಸಾಹಿತ್ಯದಲ್ಲಿ ಬಸವಯುಗ ಸೃಷ್ಟಾರರು. ಅವರ ವ್ಯಕ್ತಿತ್ವ ಅನುಪಮ, ಅಮರ. ಆದರೆ ಕಬೀರದಾಸರ ನಿರ್ಗುಣ ಭಕ್ತಿಯ ಜ್ಞಾನ ಶಾಖೆಯು ಹಿಂದೀ ಸಾಹಿತ್ಯದ ಭಕ್ತಿಕಾಲದಲ್ಲಿ ಸ್ವಲ್ಪ ಪ್ರಸರಿಸಿ, ನಂತರ ಮುಂದೆ ಬಂದ ತುಲಸಿದಾಸ–ಸೂರದಾಸರ ರಾಮಕೃಷ್ಣ ಭಕ್ತಿ ಪ್ರವಾಹಗಳ ಜನಮೆಚ್ಚುಗೆಯಿಂದ ಹೇಳಹೆಸರಿಲ್ಲದೆ ಹೋಗಿದೆಯೆನ್ನಬಹುದು. ಇಂತಹ ದರಲ್ಲಿಯೂ ಸಮಾಜ ಸುಧಾರಕರಾಗಿ, ಕ್ರಾಂತಿಕಾರರಾಗಿ, ಯುಗ ಪ್ರವರ್ತಕರಾಗಿ ತಮ್ಮ ವ್ಯಕ್ತಿತ್ವವನ್ನು ಕಾಯ್ದುಕೊಂಡಿರುವರು. □

# ಛಲದಂಕ ಭಕ್ತಶ್ರೇಷ್ಠ ಆದಯ್ಯ

ಸಿ. ವ್ಹಿ. ಕೆರಿಮನಿ

" ಸೊಕ್ಕಿರ್ದ ಹುಲಿಗೆರೆಗೆ ಸೊಡ್ಡಳನ ತಂದಲ್ಲದಿಕ್ಕೆನೊಡಲೊಳಗೆನ್ನವಸು " ಎಂದು ಪ್ರತಿಜ್ಞೆಮಾಡಿ ಸೌರಾಷ್ಟ್ರದ ಸೋಮೇಶ್ವರನನ್ನು ಪ್ರತ್ಯಕ್ಷಮಾಡಿಕೊಂಡು ತಂದ ಮಹಾಭಕ್ತ ಆದಯ್ಯನು. ಈತ ತನ್ನ ಸತ್ವಸಿದ್ಧಿಯಿಂದ, ಕರ್ತೃತ್ವ ಶಕ್ತಿಯಿಂದ ವೀರಶೈವ ಧರ್ಮವನ್ನು ಪುನರುತ್ಥಾನಗೊಳಿಸಿ, ಲೋಕದ ಜನಗಳಲ್ಲಿ ಸ್ವಧರ್ಮದ ಪ್ರತಿಷ್ಠೆಯನ್ನು ಹೆಚ್ಚಿಸುವದರಲ್ಲಿ ಸತತ ಪ್ರಯತ್ನಿಸಿದ ಮಹಾನುಭಾವನಾಗಿದ್ದಾನೆ. ಯಾವ ಧರ್ಮದವರೇ ಇರಲಿ ಏಕನಿಷ್ಠೆ, ದೃಢನಂಬಿಕೆ ಇದ್ದುವಾದರೆ ಆ ಶಕ್ತಿ–ಪುರುಷ ತಾನೇ ಒಲಿಯುವನು ಎಂಬ ಮಾರ್ಗದರ್ಶನ ನೀಡಿದ ದಾರ್ಶನಿಕನೀತನು.

ಹಂಪೆಯ ಹರೀಶ್ವರರು ಬರೆದ ಆದಯ್ಯನ ರಗಳೆ, ರಾಘವಾಂಕ ವಿರಚಿತ ಸೋಮನಾಥ ಚಾರಿತ್ರ ಮತ್ತು ಇತರರು ಬರೆದ ಲೇಖನಗಳಲ್ಲಿ ಅವನ ಕಾಲ, ಸ್ಥಳಗಳ ಬಗ್ಗೆ ಅಲ್ಪ ಸ್ವಲ್ಪ ಬದಲಾವಣೆಗಳನ್ನು ಕಂಡರೂ ಕೆಲವೊಂದು ಸಂಗತಿಗಳಲ್ಲಿ ಸಾಮ್ಯತೆ ಕಂಡುಬರುತ್ತಿದೆ. ಸೌರಾಷ್ಟ್ರದಲ್ಲಿ ಪುಣ್ಯವತಿ ಮತ್ತು ಘೋರದತ್ತರೆಂಬ ಶ್ರೀಮಂತ ವರ್ತಕರ ಮಗನೀತ. ರಾಘವಾಂಕನ ಪ್ರಕಾರ ಆದಯ್ಯನ ಹುಟ್ಟಿದ ಹಿನ್ನೆಲೆಯು ಶಿವನ ಕೈಲಾಸದಲ್ಲಿಯ ಆದಿಗಣನಾಥನು ನಾರದನ ಅರಿಕೆಯ ಮೇರೆಗೆ ಶೈವ ಮತದ ಏಳ್ಗೆಗಾಗಿ ಭೂಲೋಕಕ್ಕೆ ಬಂದನೆಂದು ಪ್ರಸ್ತಾಪಿಸಲ್ಪಟ್ಟಿದೆ. ಅಂತೂ ಇವನೊಬ್ಬ ದೈವೀಪುರುಷನೆಂದು ನಂಬಬಹುದು. ೧೨ನೆಯ ಶತಮಾನದ ಆದಿ ಭಾಗದಲ್ಲಿದ್ದವನು. ರೇವಣಸಿದ್ಧೇಶ್ವರ, ನಾವದಿಗಿಯ ದಾನಮ್ಮ, ಅಬ್ಬಲೂರಿನ ಏಕಾಂತ ರಾಮಯ್ಯ ಮತ್ತು ಭಕ್ತಶ್ರೇಷ್ಠ ಆದಯ್ಯ ಒಂದೇ ಕಾಲವರೆಂದು ಗಣಿಸಬಹುದು. ಈತನ ಇಷ್ಟದೇವತೆ ಸೋಮೇಶ್ವರನು. ಮನೆಯ ಸಂಸ್ಕಾರದಂತೆ ಈತನೂ ವ್ಯವಹಾರದಲ್ಲಿ ಸಾಕಷ್ಟು ಕುಶಲತೆಯನ್ನು ಹೊಂದಿದ್ದನು. ಒಂದು ಸಲ ಹೇರಳವಾಗಿ ಸರಕನ್ನು ಹೇರಿಕೊಂಡು ಪುಲಿಗೆರೆ ಮತ್ತು ಅಣ್ಣಿಗೇರಿ ಮುಂತಾದ ಪಟ್ಟಣಗಳಲ್ಲಿ ವ್ಯಾಪಾರಕ್ಕಾಗಿ ಬರುವನು. ಪುಲಿಗೆರೆಯಲ್ಲಿ ಚಂದ್ರಾದಿತ್ಯನೆಂಬ ಜೈನಮತೀಯ ರಾಜನು ರಾಜ್ಯವಾಳುತ್ತಿದ್ದನು. ಜೈನರ ಆಗರ ಪುಲಿಗೆರೆಯಾಗಿತ್ತು. ಅನ್ಯಮತೀಯರು ಅಲ್ಪ

ವಿರುವದರಿಂದ ಅವರಿಗೆ ಪ್ರೋತ್ಸಾಹವು ಅಷ್ಟಕಷ್ಟೇ ಇತ್ತೆಂದು ಹೇಳಬಹುದು. ಸುಮಾರು ೭೭೨ ಜೈನಬಸದಿಗಳು ಊರುತುಂಬೆಲ್ಲ ಇದ್ದವು. ಶೈವಸಂಪ್ರದಾಯದವನಾದ ಆದಯ್ಯ ಊರಮಧ್ಯದಲ್ಲಿದ್ದ ಹೋಜೇಶ್ವರ ದೇವಾಲಯದಲ್ಲಿ ಬೀಡಾರ ಮಾಡಿಕೊಂಡು ನಿತ್ಯ ಶಿವಪೂಜೆ ಮಾಡುತ್ತ, ತನ್ನ ಕಾಯಕಮಾಡುತ್ತ ಕಾಲವನ್ನು ಕಳೆಯುತ್ತಿದ್ದನು.

ಒಂದು ದಿವಸ ಊರ ಸೊಬಗನ್ನು ಸವಿಯುವದಕ್ಕಾಗಿ ತನ್ನ ಸಹ ವ್ಯಾಪಾರಿ–ಗಳೊಂದಿಗೆ ಬರುತ್ತಿರಲಾಗಿ, ಹುಲಿಗೆರೆ ಬಣದಲ್ಲಿ ಆಕಸ್ಮಾತ್ ರತಿಯನ್ನು ಹೋಲುವ ಪದ್ಮಾವತಿಯನ್ನು ನೋಡುತ್ತಾನೆ. ಅವರು ಪ್ರಥಮ ನೋಟದಲ್ಲಿಯೇ ಮೋಹಿಸಿ, ನೋಟಗಳು ತಾಕಲಾಡಿ, ಪ್ರೇಮವಾಗಿ ಪರಿಣಮಿಸಿ, ಕಾಮಭರದಲ್ಲಿ ಪ್ರೇಮ ಬಂಧನ–ವಾಗಿ ಮದುವೆಗೆ ಸಾಧ್ಯವಾಯಿತು. ಪದ್ಮಾವತಿ ಜೈನ ಮತೀಯಳಾದರೂ ಪೂರ್ಣವಾಗಿ ಮೆಚ್ಚಿಕೊಂಡ ಆದಯ್ಯನ ಆಜ್ಞೆಯ ಪ್ರಕಾರ ಮೃಢಭಕ್ತೆಯಾಗುತ್ತಾಳೆ. ಪಾರೀಶನು ಮೊದಮೊದಲು ಮಗಳ ಈ ಕಾರ್ಯಕ್ಕೆ ಕಡುನೊಂದು ಈ ಸಂಬಂಧಕ್ಕೆ ವಿರೋಧಿಸಿದನು. ಅವರು ಅದಕ್ಕೆ ಜಗ್ಗದೇ ಇದ್ದುದಕ್ಕೆ ಇದ್ದೊಬ್ಬ ಮಗಳು ಹೇಗಾದರೂ ಸಂತೋಷದಿಂದ ಇರಲಿ ಎಂದು ಸುಮ್ಮನಾದನು.

ಒಂದು ಸಲ ಬಸವಳಿದು ಬಂದ ಭಕ್ತರು ಆದಯ್ಯನಿಗೆ ಆರಿಕೆ ಮಾಡಿಕೊಳ್ಳಲು ಅವನು ಹೆಂಡತಿಗೆ ಅನ್ನ ತಯಾರಿಸಲು ಹೇಳಿ, ಅವರಿಗೆ ಸ್ನಾನ ಮಾಡಿಸಿಕೊಂಡು ಬರುವದಕ್ಕಾಗಿ ಹೊಂಡದ ಕಡೆಗೆ ಹೋಗುವನು. ಕೆಲ ಸಮಯದ ನಂತರ ಕೋಪಣ ನಗರದಿಂದ ಕೆಲವು ಸವಣರು ಪಾರೀಶನ ಮನೆಗೆ ಬರುವರು. ಅವರಿಗೆ ಊಟಕ್ಕೆ ಹಾಕಬೇಕೆಂದು ಸಿದ್ಧತೆ ನಡೆಸಲಾಗಿ ತನ್ನ ಮನೆಯಲ್ಲಿದ್ದ ಅನ್ನ ಸಾಲದ್ದಕ್ಕಾಗಿ ಪದ್ಮಾವತಿಯ ಮನೆಯಿಂದ ಅವಳು ಅದೇ ಆಗ ತಯಾರಿಸಿದ ಎಲ್ಲ ಆಹಾರ ಸಾಮಗ್ರಿಗಳನ್ನೂ ಮಗಳು ಒಪ್ಪಿಗೆ ಕೊಡದೆ ಬೇಡವೆಂದರೂ ತಂದು ಸವಣರಿಗೆ ತೃಪ್ತಿ ಪಡಿಸಿ ಕಳಿಸುವನು. ಇತ್ತ ಕಡೆ ಶಿವಭಕ್ತರು ಬರಲಾಗಿ ಮನೆಯಲ್ಲಿ ಊಟದ ವ್ಯವಸ್ಥೆ ಏನೂ ಇಲ್ಲದ್ದು ಕಂಡು ನಡೆದ ಸಂಗತಿ ತಿಳಿದು ಕೊನೆಗೆ ಅವರಿಗೆ ಹಾಲು ಹಣ್ಣನ್ನಿತ್ತು ಕಳಿಸುವನು. ಆದರೆ ಅವರಿಗೆ ಹೊಟ್ಟೆ ತುಂಬ ಊಟ ಮಾಡಿಸಲಿಲ್ಲವೆಂದು ಶಂಕಿಸಿ ಅದೇ ಚಿಂತೆಯಲ್ಲಿ ಮಲಗಿಕೊಳ್ಳಲಾಗಿ ಪಾರೀಶನು ಬಂದು ವಿಚಾರಿಸುತ್ತಾನೆ. ಇಬ್ಬರಿಗೂ ಮಾತಿಗೆ ಮಾತು ಬೆಳೆದು ಪಾರೀಶನು ಹೇಳುತ್ತಾನೆ. 'ನೀನು ಛಲಗಾರ, ಆಡಿದಂತೆ ಮಾಡುವದು ನಿನ್ನ ರೂಢಿ. ನಿನ್ನ ಕುಲದೇವರನ್ನು ತಂದು, ಹುಲಿಗೆರೆಯ ಬಸದಿಯಲ್ಲಿ ನಿಲ್ಲಿಸಿ ಆ ಮೇಲೆ ಊಟ ಮಾಡುವಂತೆ ಕಾಣುತ್ತದೆ.' "ಲೇಸನಾಡಿದೆ, ನೀನಾಡಿದುದನ್ನು ನಾನು ಮಾಡದಿದ್ದರೆ ಆದಯ್ಯನಲ್ಲ." ತಿಂಗಳೊಳಗಾಗಿಯೇ ಸೋಮೇಶನನ್ನು ಸ್ಥಾಪಿಸುವದು ನಿಶ್ಚಿತವೆಂದು ಪೈಜೆ ತೊಡುವನು. ಪದ್ಮಾವತಿಯೂ ಆದಯ್ಯನಲ್ಲಿದ್ದ ಅತುಲ ನಿಷ್ಠೆಗೆ ಮೆಚ್ಚಿದ್ದಳು. ಅವಳು ಹೇಳುತ್ತಾಳೆ – ' ಅಂಜದಿರಿ, ಅಳುಕದಿರಿ, ಸೋಮಯ್ಯ ಬಾರದಿರೆ ತಿರುಗಿ ಬಾರದಿರಿ ' ತನ್ನ ಪತಿದೇವ ಮರಳಿ

ಬರುವವರೆಗೂ ತಾನೂ ಊಟ ಮಾಡುವದಿಲ್ಲವೆಂದು ಹೇಳುತ್ತಾಳೆ. ಇಲ್ಲಿಂದಲೇ ಆತನ ನಿಜವಾದ ಭಕ್ತಿಯ ಪರೀಕ್ಷೆ ಕಾಲ ಪ್ರಾರಂಭವಾಗಿದೆ. ಆತನ ಎರಡನೆಯ ಜೀವನದ ಘಟ್ಟವೂ ಆರಂಭವಾಯಿತೆನ್ನಬಹುದು.

ಆದಯ್ಯ ಕಾಡುಮೇಡುಗಳನ್ನು ದಾಟುತ್ತ ತನ್ನ ಗುರಿ ಸಾಧನೆಯ ಮಾರ್ಗದೆಡೆಗೆ ಮುನ್ನುಗ್ಗುತ್ತಿರುವಾಗ ಈಶ ಪರಿಪರಿಯಿಂದ ಕಾಡಿ–ಬೇಡಿ, ಅರೆದು_ಒರೆದು ಈತನನ್ನು ಪರೀಕ್ಷಿಸಿದರೂ ಆ ದೇವನನ್ನು ಕುರಿತು–' ಕಾಡಿದಪೆ ತಂದೆ, ನಾನಿತ್ತವಧಿ ಬಂದುದದು, ಏಗುವೆನು ಕರುಣಿಸಿ ಬಾರ ಬಾರದೊಡೆ ಬಂದು ಕೊಂದಾದರೂ ಹೋಗು, ಭಕ್ತನ ಛಲಕ್ಕೆ ಮೆಚ್ಚಿ ಕರುಣೆಗೊಂಡು ಶಿವ ಪ್ರತ್ಯಕ್ಷನಾಗಿ ಆಶೀರ್ವದಿಸಿದನು. ತನ್ನ ಇಚ್ಛೆ ವ್ಯಕ್ತಪಡಿಸಿದಾಗ ಶಿವ ಈ ರೀತಿ ಕುರುಹು ದೋರುವನು.

ತವೆ ಚೈತ್ರ ಶುದ್ಧ ಚಾತುರ್ದಶಿಯ ಸೋಮವಾ
ರವು ನಾಳೆ ಮಧ್ಯ ರಾತ್ರಿಯೊಳು ಬಂದಪ್ಪೆವೆನೆ
ಶಿವನೆ ನೀ ಬಂದುದಕ್ಕೆನಗೆ ಕುರುಹಾವುದೆನಲುದಯ ಸಮಯದೊಳು ಬಂದ
ಸವಣಗಳ ಕದವ ತೆರೆಯದುದೊಂದು ಹಲಕಾಲ
ನವೆವುತಲಿರ್ದ ಹೆಳವಂಗೆ ಕಾಲ್ಕುರುಡಂಗೆ
ನವನಯನ ಬರಲೆರಡು ನಿನ್ನಿಂದ ಕದದೆರೆದಪುದು ಮೂರು ಕುರುಹೆಂದನು.

**ಸೋಮನಾಥ ಚಾರಿತ್ರ :** ಸೋಮನಾಥನನ್ನು ಪ್ರತಿಷ್ಠಾಪಿಸಿದ ಕಾಲ ಸುಮಾರು ಕ್ರಿ. ಶ. ೧೧೦೦ ದೇವ ಸೋಮಂವೃತನೆಂಬ ಸ್ಥಾನಾಚಾರ್ಯನೇ ಮೊದಲನೆಯ ನೆಂದು, ತೈಲಪದೊರೆ ೧೧೦೨ ರಲ್ಲಿ ಕೆಲವು ಆಸ್ತಿಯನ್ನು ದತ್ತಿಯಾಗಿ ಕೊಟ್ಟನೆಂದು ಉಲ್ಲೇಖವಾಗಿವೆ. ಗುಡಿಯ ದಕ್ಷಿಣ ದಿಕ್ಕಿಗಿರುವ ದ್ವಾರದ ಬಲಬದಿಯಲ್ಲಿ ಅವರ ಸಮಕಾಲೀನರಾದ ಶಿವರಾಮ ಒಡೆಯರು, ಸೋಮನಾಥ ದೇವರು, ಪೂಜಾಕಾರಿ ಚಿಕ್ಕರಸ (ಮೂಲ ಪೂಜಾರಿ) ಇವರ ಶಿಲಾಮೂರ್ತಿಗಳು ನೋಡಲು ಸಿಗುತ್ತವೆ. ಅದರ ಸಮೀಪದಲ್ಲಿಯೇ ಸೋಮನಾಥ ದೇವರ, ಆದಯ್ಯ ಮತ್ತು ಪೂಜಾರಿ ಚಿಕ್ಕರಸನ ಮೂರ್ತಿಗಳು ಕಾಣುವವು. ಆತನೊಬ್ಬ ಮಹಾಕ್ರಾಂತಿ ಪುರುಷನಾಗಿ ಸೋಮೇಶನನ್ನು ಪುಲಿಗೆರೆಗೆ ತಂದು ಸ್ಥಾಪಿಸಿದನು.

ಆದಯ್ಯನ ನಿಷ್ಠೆಯ ಹೋರಾಟವು ಅವನ ಅನುಭಾವ ಜೀವನಕ್ಕೆ ತಳಹದಿಯಾಗಿದ್ದಿತು. ಅನುಭವ ವಚನಗಳಲ್ಲಿ ವಿಶಾಲವಾಗಿ ಹರಿಯುತ್ತಿದೆ. ಸತ್ಯ, ನ್ಯಾಯ, ನಿಷ್ಠುರಗಳನ್ನೇ ನಂಬಿ ಅದರಂತೆ ಆಡಿ ನಡೆದು ತೋರಿಸಿದ. ಅಸತ್ಯ ಅನ್ಯಾಯಗಳ ವಿರುದ್ಧ ಸತತ ಹೋರಾಟ ನಡೆಸಿದ್ದಾನೆ.

" ಅಂಗವಿಲ್ಲದ ಕೂಟ ಸಮರಸದಿಲ್ಲವ ಬೇಟ
ಸಮರತಿಯಿಲ್ಲದ ಆನಂದ ಸನ್ನಿಹಿತವಾಯಿತ್ತೆನಗೆ"

ಎನ್ನುವಲ್ಲಿ ಶಿವನಿಲ್ಲದೆ ಆನಂದ ಹೊಂದಲಾರೆನು ಎಂಬ ಕಲ್ಪನೆಯಿತ್ತು. ಹೋರಾಟದಲ್ಲಿ ಶಕ್ತಿಯು ಸೊಬಗನ್ನರಿತ ಆದಯ್ಯನಿಗೆ ಯಾವುದನ್ನು ಹೇಳಿದರೂ ಅರ್ಥವತ್ತಾಗಿ ಹೇಳುವ

ಕಲೆ ಕರಗತವಾಗಿತ್ತು. ಆಚರಣೆಯೆ ಅನುಭವಕ್ಕೆ ನಾಂದಿಯಾಗಿ ಷಟ್‌ಸ್ಥಲ ಬ್ರಹ್ಮಿಯಾಗಿ ಜೀವನ ಮೌಲ್ಯವನ್ನು ಚೆನ್ನಾಗಿ ಅರಿತುಕೊಂಡು ಉಚ್ಚಮಟ್ಟದ ನಿಲುವನ್ನು ಹೊಂದಿದವನಾಗಿದ್ದನು. ಅವನ ಬೆಡಗಿನ ವಚನದಲ್ಲಿ ಒಂದಾದ–

" ಆಕಾಶದಲಾಡುವ ಹದ್ದನೊಂದು ಸರ್ಪ ನುಂಗಿತ್ತು ಕಂಡೆ
ಆ ಸರ್ಪ ಕಿಚ್ಚಿನೊಳು ಬಿದ್ದು ಸಿಂದುರಿವುದ ಕಂಡೆ "

ಇಲ್ಲಿ ಅಂತರಂಗದ ಮಹಿಮೆಯ ಅಧ್ಯಾತ್ಮಿಕತೆಯ ತಾತ್ವಿಕತೆಯನ್ನು ನೀಡುತ್ತಾನೆ.

ಪಂಚಾಕ್ಷರಿ ಮಂತ್ರದ ಮಹಿಮೆ —

" ತ ವರ್ಗದ ಕಡೆಯಲಿದೆ ಪ ವರ್ಗದ ಅಂತ್ಯದಲ್ಲಿದೆ
ಶ ವರ್ಗದ ಮೊದಲಲಿದೆ ಯ ವರ್ಗದ ತುದಿ ಮೊದಲಲಿದೆ "

ಪಂಚಾಕ್ಷರಿ ಮಂತ್ರವನ್ನು ಬಾಹ್ಯದಲ್ಲಿ ಉಚ್ಚರಿಸಲಾಗದೆಂದು ತಿಳಿದು ಅದನ್ನು ವರ್ಣಮಾಲೆಯ ಮುಖಾಂತರ ತಿಳಿಸಿ ಕೃತಕೃತ್ಯನಾಗಿದ್ದಾನೆ, ಲೌಕಿಕ ಉದಾಹರಣೆ ಕೊಡುವಲ್ಲಿಯೂ ಆತನು ಮೇಲುಗೈ,

" ಕತ್ತೆಗೆ ಕರ್ಪುರ ಯೋಗ್ಯವೇ ?
ಮರ್ಕಟಂಗೆ ಮುಕುರ ಸಾಧ್ಯವೇ ? "

ಇಂಥ ಸಾವಿರಾರು ವ್ಯಾವಹಾರಿಕ ಉದಾಹರಣೆಗಳೊಂದಿಗೆ ಧರ್ಮದ ವಿವರಣೆ ನೀಡುತ್ತ ಲೋಕದ ಕೊಳೆಯನ್ನು ತೊಳೆಯುವುದಕ್ಕಾಗಿ ಹಗಲಿರುಳು ಚಿಂತಿಸಿದ ವ್ಯಕ್ತಿ ಈತನು.

ಸಂಸ್ಕೃತ ಕನ್ನಡ ದ್ವಿಭಾಷಾ ಪಂಡಿತನು. ಶಬ್ದ ಸಂಪತ್ತು ವಿಪುಲವಾದದು. ಅವನ ವಚನಗಳಲ್ಲಿ ಅನುಭವ ತುಂಬಿರುವದರಿಂದ ನೇರವಾಗಿ ಹೃದಯ ತಲುಪಿ ಮನಸ್ಸಿಗೆ ಶಾಂತಿ ನೀಡುವಂಥವುಗಳು. ವಚನಗಳಲ್ಲಿ ಪದಮೈತ್ರಿಯಿದೆ. ಈತ ಬರೆದ ಸುಮಾರು ೪೦೦ ವಚನಗಳು ಉಪಲಬ್ಧವಾಗಿವೆ. ಸೌರಾಷ್ಟ್ರ ಸೋಮೇಶ್ವರ ಎಂಬ ಅಂಕಿತವು ವಚನಗಳ ಕೊನೆಗೆ ಬರುತ್ತದೆ.

ಸೋಮೇಶ್ವರನ ಬಲಬದಿಯಲ್ಲಿರುವ ಗದ್ದುಗೆಗೆ 'ಹಾವಳೇಶ್ವರ' ಎಂದು ಕೆಲವರು ಈಗಲೂ ಕರೆಯುತ್ತಾರೆ. ಕೆಲವರು ಆದಯ್ಯನ ಗದ್ದುಗೆಯೆಂದು ಕರೆಯುವರು. ಹಿಂದಿನ ಕಾಲದಲ್ಲಿ ಚೋಳರು ಇಲ್ಲವೆ ಮಹಮ್ಮದೀಯರು ಮೂರ್ತಿ ಭಂಜಕರಿದ್ದುದರಿಂದ ಅವರು ಮೂಲ ಸೋಮೇಶನಿಗೆ ಧಕ್ಕೆ ಹಚ್ಚಬಾರದೆಂಬ ಉದ್ದೇಶದಿಂದ ಅವರ ಹಾವಳಿಯ ಕಾಲಕ್ಕೆ ಅಲ್ಲಿಯೇ ಕಟ್ಟೆಯ ಕಟ್ಟಿ ಅಲ್ಲಿ ಲಿಂಗ ಸ್ಥಾಪನೆ ಮಾಡಿರಬೇಕು. ಆದಯ್ಯನ ಗದ್ದುಗೆ ಆಗಿದ್ದರೆ ಮೇಲೆ ಈಶ್ವರನ ಮೂರ್ತಿ ಇರುತ್ತಿದ್ದಿಲ್ಲ. ಇದಕ್ಕೆ ಐತಿಹಾಸಿಕ ಆಧಾರಗಳಿಲ್ಲ.

ಗುಡಿಯ ಉತ್ತರ ಬದಿಯಲ್ಲಿ ಗುಡಿಗೆ ಹೊಂದಿಕೊಂಡು 'ಚಿಕ್ಕ ಆದೀಶ್ವರ' ನೆಂಬ ಗುಡಿಯಿದೆ. ಅದು ಆದಯ್ಯನ ಸ್ಮರಣಾರ್ಥವಾಗಿ ನಂತರ ಕಟ್ಟಿರಬೇಕೆಂದು ಊಹಿಸಲಾಗಿದೆ. ಇದರ ಬಗೆಗೆ ಶಾಸನಗಳಲ್ಲಿ ಎಲ್ಲಿಯೂ ಉಲ್ಲೇಖವಿಲ್ಲ.

ಲಕ್ಷ್ಮೇಶ್ವರದ ಪೂರ್ವದಿಕ್ಕಿಗೆ 'ಶೆಟ್ಟಿ ಕೆರೆ' ಎಂಬ ಮಹಾ ಕರೆಯುಂಟು. ಇದೂ ಸಹ ಆದಿಶೆಟ್ಟಿಯ ಹೆಸರಿನಿಂದ ಕಟ್ಟಿರಬೇಕು.

ಗುಡಿಯ ಪೂರ್ವಭಾಗದಲ್ಲಿ ಮಹಾದ್ವಾರದ ಮುಂಭಾಗದಲ್ಲಿ ಚಂದ್ರಶಾಲೆಯುಂಟು. ಅಲ್ಲಿ ಪೂರ್ವಕಾಲದಲ್ಲಿ ಮುತ್ತುರತ್ನಗಳನ್ನಿಟ್ಟು ಮಾರುತ್ತಿದ್ದರು. ಈ ನಗರ ಮುತ್ತುರತ್ನಗಳ ವ್ಯಾಪಾರಕ್ಕೆ ಒಳ್ಳೆ ಪ್ರಸಿದ್ಧಿಯನ್ನು ಪಡೆದಿದ್ದಿರಬೇಕು. ಅದಕ್ಕಾಗಿ ಪರಪ್ರಾಂತದವರು ಇಲ್ಲಿಗೆ ಸಾಕಷ್ಟು ವ್ಯಾಪಾರಿಗಳು ಬರುತ್ತಿರಬೇಕು. ಹಾಗೆ ಬಂದವರಲ್ಲಿ ಸೌರಾಷ್ಟ್ರದಿಂದ ಬಂದ ಆದಯ್ಯನು ಒಬ್ಬನಿರಬೇಕೆಂದು ಖಚಿತವಾಗಿ ಹೇಳಬಹುದು.

ಸೌರಾಷ್ಟ್ರದಲ್ಲಿ ಜನಿಸಿ, ಕರ್ನಾಟಕದಲ್ಲಿ ಬೆಳೆದು, ಅಧ್ಯಾತ್ಮದ ಅನುಭವದ ಸೌರಭವನ್ನು ಬೀರಿ, ನಿರ್ಮಲವಾದ, ಪರಿಶುದ್ಧವಾದ ಬಾಳನ್ನು ಬಾಳಿ ಶಿವನ ಸಾನ್ನಿಧ್ಯವನ್ನು ಪಡೆದ ಶರಣಶ್ರೇಷ್ಠ ಆದಯ್ಯನೀತನು. □

# ಕೊಂಡಗುಳಿ ಕೇಶಿರಾಜನ ಇನ್ನೊಂದು ಶಾಸನ ಇನ್ನೊಂದು ಕೃತಿ

ಎಂ. ಎಂ. ಕಲಬುರ್ಗಿ

ಕಲ್ಯಾಣ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ದಂಡನಾಯಕನಾದ ಕೊಂಡಗುಳಿ ಕೇಶಿರಾಜ. ಬಸವಪೂರ್ವ ಯುಗದ ಸುಪ್ರಸಿದ್ಧ ಶಿವಭಕ್ತ, ಕವಿ, ಮತ್ತು ರಾಜಕಾರ್ಯಧುರಂದರ. ಮೂರು ವರುಷಗಳ ಹಿಂದೆ " ಕೊಂಡಗುಳಿ ಕೇಶಿರಾಜ: ಒಂದು ಹೊಸ ಶಾಸನ, ಒಂದು ಹೊಸ ಕೃತಿ" ಎಂಬ ಲೇಖನವನ್ನು ಪ್ರಕಟಿಸುತ್ತ ಈತನ 'ಕೊಂಡಗುಳಿ ಶಾಸನ' ಮತ್ತು ' ಲಿಂಗಸ್ತೋತ್ರದ ಕಂದ 'ಗಳನ್ನು ಬೆಳಕಿಗೆ ತಂದಿದ್ದೆನು.[೧] ಈಗ ಇನ್ನೊಂದು ಶಾಸನ, ಇನ್ನೊಂದು ಕೃತಿಯನ್ನು ಈ ಲೇಖನದ ಮೂಲಕ ಬೆಳಕಿಗೆ ತರುತ್ತಲಿದ್ದೇನೆ.

× × × ×

ಈ ಮೊದಲು S. I. I. XX No. 69 ರಿಂದ ಆಯ್ದುಕೊಂಡು ಪ್ರಕಟಿಸಿದ್ದ ಶಾಸನ ( ಕ್ರಿ. ಶ. ೧೧೦೭ ) ಕೊಂಡಗುಳಿ ( ಸಿಂದಗಿ ತಾಲೂಕು. ವಿಜಾಪುರ ಜಿಲ್ಲೆ ) ಗ್ರಾಮಕ್ಕೆ ಸಂಬಂಧಿಸಿದ. ಇದೇ ಗ್ರಾಮಕ್ಕೆ ಸಂಬಂಧಿಸಿದ ಇನ್ನೊಂದು ಶಾಸನ Epigrapica Indica vol XXXvii. Part iv ದಲ್ಲಿ ಇದ್ದುದಾಗಿ ಕೆಲವುದಿನಗಳ ಹಿಂದೆ ನನ್ನ ಗಮನಕ್ಕೆ ಬಂದಿತು.[೨] ಇವುಗಳಲ್ಲಿ ಮೊದಲಿನದನ್ನು " ಶಾಸನ-೧ " ಎಂದೂ, ಇದನ್ನು " ಶಾಸನ-೨ " ಎಂದೂ ಅನುಕೂಲ ದೃಷ್ಟಿಯಿಂದ ಕರೆಯಬಹುದು. ಕಲ್ಯಾಣ ಮನೆತನದ ಭೂಲೋಕಮಲ್ಲ ಸೋಮೇಶ್ವರ ( ೧೧೨೬–೧೦೩೮ )ನ ಕಾಲಕ್ಕೆ ಸಂಬಂಧಿಸಿದ ಈ " ಶಾಸನ ೨" ರ ಕಾಲ ಕ್ರಿ. ಶ. ೧೧೩೨. ಇದರ ಪೂರ್ತಿ ಪಾಠ ಹೀಗಿದೆ.

---

೧. ಪ್ರ. ಕ. ೫೮–೯

೨. Agrahārās in ancient Karnatak (1970)—S. Leela Shantakumari (unpublished)

೧. ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ
೨. ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ
೩. ಪರಮೇಶ್ವರ ಪರಮ ಭಟ್ಟಾರಕ್ಕ ಸತ್ಯಾ
೪. ಶ್ರಯ ಕುಲತಿಲಕ ಚಾಲ್ಯುಕ್ಯಾಭರ
೫. ಣ ಶ್ರೀ ಮಚ್ಚಾಲುಕ್ಯ ಭೂಲೋಕ ಮಲ್ಲದೇ
೬. ವರ ವಿಜಯರಾಜ್ಯಮುತ್ತರೋತ್ತರಾ
೭. ಭಿವೃದ್ಧಿ ಪ್ರವರ್ಧಮಾಣ ಮಾಚಂದ್ರಾ
೮. ರ್ಕ ತಾರಂಬರಂ ಸಲುತ್ತಮಿರೆ ಮಾಹುರ
೯. ದ ನೆಲೆವೀಡಿನೊಲು ಸುಖಸಂಕಥಾ
೧೦. ವಿನೋದದಿಂ ರಾಜ್ಯಂಗೆಯ್ಯುತ್ತಮಿರಲು
೧೧. ಶ್ರೀಮಚ್ಚಾಲುಕ್ಯ ಭೂಲೋಕ ವರ್ಷದ ೭ ನೆ
೧೨. ಯ ಪರಿಧಾವಿ ಸಂವತ್ಸರದ ಪುಷ್ಯದ
೧೩. ಪೌರ್ಣಮಾಸ್ಯೆ ಆದಿತ್ಯವಾ [ರ] ದುತ್ತರಾ
೧೪. ಯಣ ಸಂಕ್ರಮಣ ಪರ್ವದಂದು ಶ್ರೀಮತ್ಸ
೧೫. ರ್ವ್ವನಮಸ್ಯದಗ್ರಹಾರಂ ಕೊಂಡಂಗು
೧೬. ಳ್ಯಸೇಪ ಮಹಾರಾಜನಂಗಲಿ[ಳ]ಗೆ
೧೭. ಶ್ರೀಮತ್‌ಕೇಸಿಮಯ ದಂಡನಾಯಕರುಂ ಗ
೧೮. ಣಪತಿ ದಂಡನಾಯಕರು [೦] ಕೂಡಿ ವಿದ್ಯ [ದಾ]
೧೯. ನ ನಿಮಿತ್ತವಾಗಿ ಸೂತ್ರಸ [ಂಹಿ] ತ ಪಿರಿ
೨೦. ಯ ಗ್ರಂಥಂಗಲ[ಳ]ಂಪೇಳ್ವವುಪಾಧ್ಯಾಯರ್ಗೆ ಪೊಂನ
೨೧. ವ್ರಿದ್ದಿಯಲೆ ಗ್ರಾಸನಡವಂತಾಗಿ
೨೨. ಪೊಂಗೆ ತಿಂಗಲಿ [ಳ]ಂಗೆ ವೀಸಂ ನಾ
೨೩. ನಾಲ್ಕಱ ವಡ್ಡಿಯುಲು ಕೊಟ್ಟ ವರ್ತಕ
೨೪. ಲೊಕ್ಕಿ ಗದ್ಯಾಣ ೨೦ ಮತ್ತ [೦]
೨೫. ಸಂಹಿತೆಯುಂ ಕಿ [ಱ]ಯ ಗ್ರಂಥಂಗ
೨೬. ಲು (ಳು)ಂ ಯಾಜ್ಞ್ಯವಲ್ಕಿ ಸಹಿತ ಪೇಲ್ವ (ವ)
೨೭. ಉಪಾಧ್ಯಾಯರ್ಗೆ ಪೊಂನ ವಿ (ವ್ರಿ)ದ್ಧಿಯ
೨೮. ಲೆ ಗ್ರಾಸ ನಡವಂತಾಗಿ ಪೊಂ
೨೯. ಗೆ ತಿಂಗಲಿ (ಳ)ಂಗೆ ವೀಸಂ ನಾಲ್ಕ
೩೦. ರ ವೃದ್ಧಿಯುಂ ಕೊಟ್ಟ ವರ್ತಕ ಲೊ
೩೧. ಕ್ಕಿ ಗದ್ಯಾಣ ೨೦ ಮತ್ತ ವೃಕ್ಷ
೩೨. ರ ವ್ಯಾಕರಣ ರೂಪಾವತಾರ ಮಿಂ

೩೩. ತಿನಿತುಂ ಪೇರ್ದು ವಾ (ಬಾ)ಲ ಶಿಕ್ಷೆ
೩೪. ಯುಂ ಮಾರ್ಪ ಉಪಾಧ್ಯಾಯರ್ಗೆ ಪೊಂ
೩೫. ನ ವೃದ್ಧಿಯಲೆ ಗ್ರಾಸಂ ನಡವಂ
೩೬. ತಾಗಿ ಪೊಂಗೆ ತಿಂಗಲಿ (ಳ)ಂಗೆ
೩೭. ವೀಸಂ ನಾಲ್ಕ [ಱ] ವೃದ್ಧಿಯುಂ ಕೊ
೩೮. ಟ್ಟ ವರ್ತಕ ಲೊಕ್ಕಿ ಗದ್ಯಾ
೩೯. ಣ ೨೦ ಈ ಧರ್ಮವಂ ಮಹಾಜ
೪೦. ನಂಗಲು (ಳು)ಂ ನಡಸುವರು ||
೪೧. ಶ್ರೀ ಮತು ಭಾಂಡಾರಿಗೆ ರಾಮದೇ
೪೨. ವ ನಾಯಕರು ಸೌಪರ್ಣ
೪೩. ದ ತಾಂಬೂಲ ದಾನಕ್ಕೊ (ಕ್ಕೆ) ಪೊಂ(ಗೆ)
೪೪. ತಿಂಗಲಿ( ಳ)ಂಗೆ ವೀಸಂ ೪ ]ಱ] ವೃ [ದ್ಧಿ]
೪೫. ಯಲು ಕೊಟ್ಟ ಕಟಕ ಪ್ರಿಯ
೪೬. ಗದ್ಯಾಣ ೧೦ ಮತ್ತಂ ಬ್ರಹ್ಮದೇ
೪೭. ವ ಭಟ್ಟರು ತಾಂಬೂಲದಾನಕ್ಕಾ
೪೮. ವೃದ್ಧಿಯಲೆ ಕೊಟ್ಟ ಕಟಕಂಗ
೪೯. ದ್ಯಾಣ ೨ ಶ್ರೀ ಮತ್ಸರ್ವನಮ
೫೦. ಸ್ಯದಗ್ರಹಾರ ಕೊಂಡಂಗುಲಿ (ಳಿ)ಯ
೫೧. ಶೇಷಮಹಾಜನಂಗಲು (ಳು)ಶ್ರೀ
೫೨. ಕೇಶವದೇವರ್ಗೆ ದೀಪ ದಾ
೫೩. ನವಾಗಿ ಗಾಣವಾಯಿಲೆಯ
೫೪. ಲ್ಲಿ ದೇವಸ (ದ)ಲು ಸೊಲ್ಲಗೆ
೫೫. ಯೆಣ್ಣೆಯುಂ ಕೊಟ್ಟರು ಮತ್ತಂ ಪು
೫೬. ಷ್ಪದಾನವಾಗಿಯರೆವತ್ತರು
೫೭. ತೋಂಟಮುಂ ಕೊಟ್ಟರು.[೩]

ಈ ಶಾಸನದಲ್ಲಿ ಒಟ್ಟು ಮೂರು ಬಗೆಯ ದತ್ತಿಗಳಿವೆ.

**ದತ್ತಿ ೧ (ಪಙ್ತಿ ೧೭–೪೦) :** ಕೇಶಿಮಯ್ಯದಂಡನಾಯಕ ಗಣಪತಿ ದಂಡ ನಾಯಕರು ಕೂಡಿ,

---

೩. EI XXXVII. Part IV P. 189.

"ಪಿರಿಯ ಗ್ರಂಥಗಳಂ ಪೇಳ್ವ" ಉಪಾಧ್ಯಾಯರಿಗೆ ವರ್ತಕ ಲೊಕ್ಕಿ ಗದ್ಯಾಣ ೨೦
"ಕಿಱಿಯ ಗ್ರಂಥಗಳುಂ ಯಾಜ್ಞ್ಯವಲ್ಕ್ಯಸಹಿತಪೇಳ್ವ" ಉಪಾಧ್ಯಾಯರಿಗೆ
ವರ್ತಕಲೊಕ್ಕಿಗದ್ಯಾಣ ೨೮
"ಆಕ್ಷರ ವ್ಯಾಕರಣ ರೂಪಾವತಾರಳ್.ಮಿಂತಿನಿತುಂ ಪೇರ್ದು (ಳ್ದು) ವಾ (ಬಾ)ಲ
ಶಿಕ್ಷೆಯಂ ಮಾರ್ಪ (ಱ್ಪ)" ಉಪಾಧ್ಯಾಯರಿಗೆ ವರ್ತಕ ಲೊಕ್ಕಿಗದ್ಯಾಣ ೨೦

ಹೀಗೆ ೬೦ ಗದ್ಯಾಣಗಳನ್ನು ದಾನ ನೀಡಿರುವರು.

**ದತ್ತಿ ೨ (ಪಙ್ತಿ ೪೧–೪೯):** ಭಾಂಡಾರಿಗ ರಾಮದೇವನಾಯಕರು ಸೌಪರ್ಣದ ತಾಂಬೂಲದಾನಕ್ಕೆ, ಬ್ರಹ್ಮದೇವ ಭಟ್ಟರು ತಾಂಬೂಲ ದಾನಕ್ಕೆ ಕೆಲವು ಗದ್ಯಾಣಗಳನ್ನು ದಾನ ನೀಡಿರುವರು.

**ದತ್ತಿ ೩ (ಪಙ್ತಿ ೪೯–೫೭):** ಅಗ್ರಹಾರ ಕೊಂಡಗುಳಿಯ ಮಹಾಜನಂಗಳು "ಶ್ರೀ ಕೇಶವದೇವರ್ಗೆ" ದೀಪದಾನ, ಪುಷ್ಪದಾನಗಳಿಗಾಗಿ ಎಣ್ಣೆ ಹೂದೋಟಗಳನ್ನು ದಾನನೀಡಿರುವರು.

ಈ ಮೂರರಲ್ಲಿ ಶರಣ ಕೇಶಿರಾಜನ ಚರಿತ್ರೆಗೆ ಸಂಬಂಧಿಸಿದುವು ಒಂದು ಮತ್ತು ಮೂರನೆಯದತ್ತಿಗಳು. ತ್ರಿಭುವನಮಲ್ಲ ವಿಕ್ರಮಾದಿತ್ಯನ ಸಮಯದ "ಶಾಸನ–೧"ರ ಕಾಲ ಕ್ರಿ. ಶ. ೧೧೦೭. ಈತನ ಮಗ ಭೂಲೋಕಮಲ್ಲ ಸೋಮೇಶ್ವರನ ಸಮಯದ "ಶಾಸನ–೨"ರ ಕಾಲ ಕ್ರಿ.ಶ. ೧೧೩೨ ಕ್ಕೆ ಹೀಗಾಗಿ ಕೇಶರಾಜ ದಂಡನಾಯಕನು ಕ್ರಿ.ಶ. ೧೧೦೭ ಕ್ಕೆ ಮೊದಲು ಹುಟ್ಟಿ ಕ್ರಿ.ಶ. ೧೧೩೨ಕ್ಕೆ ತರುವಾಯ ಲಿಂಗೈಕ್ಯನಾಗಿರುವುದು ಸತ್ಯ. ತ್ರಿಭುವನಮಲ್ಲ ವಿಕ್ರಮಾದಿತ್ಯ (ಹೆಮ್ಮಾಡಿರಾಯ)ನಿಗೂ ಈತನಿಗೂ ಕೊನೆ ಕೊನೆಗೆ ವಿರಸಹುಟ್ಟಿ ಈತನು ದಂಡನಾಯಕ ಪದವಿಯನ್ನು ತ್ಯಜಿಸಿದನೆಂದು ವೀರಶೈವ ಪುರಾಣಗಳು ಹೇಳುತ್ತವೆ. ಈ ವಿಕ್ರಮಾದಿತ್ಯನ ಆಳಿಕೆಯ ಕೊನೆ ಕ್ರಿ. ಶ. ೧೧೨೬. ಆದಕ್ಕಾಗಿ ಕೇಶಿರಾಜನು ಕ್ರಿ. ಶ. ೧೧೨೬ಕ್ಕೆ ಮೊದಲು ಮಂತ್ರಿಪದವಿಯನ್ನು ತ್ಯಜಿಸಿರಬೇಕು. ಆದಕ್ಕಾಗಿಯೇ "ಸ್ವಸ್ತಿ ಸವಧಿಗತ ಪಞ್ಚಮಹಾಶಬ್ದ ಮಹಾ ಸಾಮನ್ತಾಧಿಪತಿ (ಮ) ××× ಮಹಾ ಪ್ರಚಣ್ಡ ದಣ್ಡನಾಯಕ......" ಎಂದು "ಶಾಸನ–೧" (ಕ್ರಿ, ಶ, ೧೧೦೭)ಕರೆದರೆ "ಶ್ರೀಮತ್ ಕೇ[ಸಿ] ಮಯ್ಯ ದಂಡನಾಯಕರು" ಎಂದು ರಾಜಕೀಯ ಬಿರುದುಗಳಿಲ್ಲದ್ದೆ ಈ 'ಶಾಸನ–೨' (ಕ್ರಿ.ಶ. ೧೧೩೨) ಕರೆದಂತಿದೆ. ಒಟ್ಟಿನಲ್ಲಿ ಈ ಕೇಶಿರಾಜನು ಬಸವಣ್ಣನವರ ಕಾಲಕ್ಕೆ ಸಮೀಪ ಸಮೀಪದವನಾಗಿ ಕನಿಷ್ಠಪಕ್ಷ ಕ್ರಿ. ಶ. ೧೧೩೨ರ ವರೆಗೆ ಬದುಕಿದ್ದನೆಂದು ತಿಳಿದುಬರುತ್ತದೆ.

ಈ ಶಾಸನದಲ್ಲಿ "ಶ್ರೀ ಮತ್ ಕೇ [ಸಿ] ಮಯ ದಂಡನಾಯಕರುಂ ಗಣಪತಿ ದಂಡನಾಯಕರುಂ ಕೂಡಿ" ದತ್ತಿ ನೀಡಿದ್ದಾರೆ. ಈ ರೀತಿ ಅನ್ಯೋನ್ಯರಾಗಿ ನಿಂತು

---

೪. ಈ ಗ್ರಂಥದ ಉಲ್ಲೇಖ ಚೋಳ ವೀರಕೇಸರಿವರ್ಮನ ತಮಿಳುಶಾಸನ (EI. XXXVII P. 190) ಮತ್ತು ತಾಳಗುಂದಶಾಸನ (EI VII SK, 185)ಗಳಲ್ಲಿಯೂ ಬರುತ್ತದೆ.

ದತ್ತಿ ನೀಡಿರುವ ವಿಷಯ. ಅವರಲ್ಲಿ ಕೌಟುಂಬಿಕ ಸಂಬಂಧವನ್ನು ಕಲ್ಪಿಸಲು ಪ್ರಚೋದನೆ ನೀಡುತ್ತದೆ. "ಶಾಸನ-೧" ರ ಪ್ರಕಾರ ನಿಂಬಣ ದಂಡನಾಯಕನ ಮಗ ಕೇಶಿರಾಜ ದಂಡನಾಯಕ. ಹಾಗೆಯೇ ಈ ಗಣಪತಿ-ದಂಡನಾಯಕನೂ ಇನ್ನೊಬ್ಬ ಮಗನಾಗಿರಲು, ಅಂದರೆ ಕೇಶಿರಾಜದಂಡನಾಯಕನ ತಮ್ಮನಾಗಿರಲು ಸಾಧ್ಯವಿದೆ. ಈ ಮಾತಿಗೆ ಇನ್ನೂ ಆಧಾರ ಬೇಕು.

ಕೊಂಡಗುಳಿ, ಪ್ರಾಚೀನ ಕರ್ನಾಟಕದ ಸುಪ್ರಸಿದ್ಧ ಅಗ್ರಹಾರಗಳಲ್ಲಿ ಒಂದು ಎಂಬ ವಿಷಯ ಇತ್ತೀಚೆ ಬೆಳಕಿಗೆ ಬಂದಿದೆ.[೫] ಈ ಅಗ್ರಹಾರದಲ್ಲಿ ಒಂದು ವಿದ್ಯಾಪೀಠವಿದ್ದಿತು. ಇಲ್ಲಿಯ ಬೇರೆ ಶಾಸನಗಳೂ ಇದನ್ನು ಉಲ್ಲೇಖಿಸುತ್ತವೆ.[೬] ಬಹುಶಃ ಬ್ರಾಹ್ಮಣರಿಂದ ನಡೆಯುತ್ತಿದ್ದ ವೈದಿಕ ಶಿಕ್ಷಣ ಕ್ರಮವನ್ನೊಳಗೊಂಡ ಈ ಶಾಲೆಗೆ ಅನ್ಯಮತೀಯನಾದ ಕೇಶಿರಾಜನು ನೀಡಿದ ದತ್ತಿ. ಅವನ ಉದಾರ ಭಾವವನ್ನು ವಿದ್ಯಾ ಪ್ರೇಮವನ್ನೂ ಸಾರುತ್ತದೆ. ದಂಡನಾಯಕ ಕೇಶಿರಾಜನು ಶರಣನಾಗಿದ್ದ ಕಾರಣ ಈ ಶಾಸನದ ಮಹಾ ಜನಂಗಳಿಗೆ ವರ್ಣನಪರ ವಿಶೇಷಣಗಳನ್ನಾಗಲೀ, ದತ್ತಿ ಕೊಡುವಲ್ಲಿ "ಮಹಾಜನಂಗಳ ಕಾಲಂ ಕರ್ಚಿ" "ಸರ್ವ ನಮಸ್ಯವಾಗಿ" ಎಂಬ ಪದಗಳನ್ನಾಗಲೀ. ಬಳಸಿಲ್ಲವೆಂದು ಭಾವಿಸಲಾಗಿದೆ.

ಕೇಶಿರಾಜನು ಮಹಾಜನರಿಗೆ ವಿದ್ಯಾ ನಿಮಿತ್ತ ದತ್ತಿ ಕೊಟ್ಟರೆ ಮಹಾ ಜನರು ಆ ಊರ "ಕೇಶವದೇವರ್ಗೆ" ದೀಪದಾನ ಪುಷ್ಪದಾನಕ್ಕೋಸುಗ ಎಣ್ಣೆ ತೋಟಗಳನ್ನು ನೀಡಿದ್ದಾರೆ. ಹೀಗೆಂದಾಗ ಈ ಸಮಯದಲ್ಲಿ ಕೇಶಿರಾಜನು ಲಿಂಗೈಕ್ಯನಾಗಿ ಅವನ ಹೆಸರಿನಲ್ಲಿ ಒಂದು ದೇವಾಲಯ ನಿರ್ಮಾಣವಾಗಿದ್ದಿತೆಂದು ಭಾವಿಸುವ ಕಾರಣವಿಲ್ಲ. ಪ್ರಾಚೀನ ಕಾಲದಲ್ಲಿ ತಮ್ಮ ಹೆಸರಿನ ಲಿಂಗ ಪ್ರತಿಷ್ಠೆಯಿಂದ ತಮಗೆ ದೇವತ್ವ ಪ್ರಾಪ್ತವಾಗುವದೆಂಬ ನಂಬಿಕೆಯಿದ್ದುದರಿಂದ ಸ್ವತಃ ಕೇಶಿರಾಜನೇ ಒಂದು ದೇವಾಲಯವನ್ನು ಕಟ್ಟಿಸಿ ತನ್ನ ಹೆಸರಿನ ಲಿಂಗವನ್ನು ಸ್ಥಾಪಿಸಿರಬಹುದು.[೭] ಅಂತಹ ದೇವಾಲಯಕ್ಕೆ ಈ ಮಹಾಜನರು ಕೇಶಿರಾಜನ ಸಮ್ಮುಖದಲ್ಲಿ ದತ್ತಿ ನೀಡಿರಬೇಕು. ಒಟ್ಟಿನಲ್ಲಿ ಕೇಶಿರಾಜನು ತನ್ನ ಅಧಿದೈವ ಸೋಮೇಶ್ವರನ ದೇವಾಲಯವನ್ನು ಕಟ್ಟಿಸಿದನೆಂದು 'ಶಾಸನ-೧' ಹೇಳಿದರೆ, ತನ್ನ ಹೆಸರಿನ ಕೇಶವ ದೇವಾಲಯವನ್ನು ಕಟ್ಟಿಸಿರಬಹುದೆಂದು ಈ "ಶಾಸನ-೨" ರಿಂದ ಊಹಿಸಲು ಸಾಧ್ಯವಿದೆ.

× × × ×

---

೫. Agraharas in Ancient Karnataka (1920) S. Leela.

೬. "ಸಾಲೆಯ ಸುತ್ತಲುಂ ನಾಲ್ಕು ಬೀದಿಯುಲು" —SII XX. 302.
"ಸಾಲೆಯಕೇರಿ" —SII.XX. 319.

೭. ಇಲ್ಲವೆ 'ಕೇಶವದೇವ' ಹೆಸರಿನ ಒಂದು ದೇವರು ಪ್ರಾಚೀನಕಾಲದಿಂದಲೂ ಆ ಗ್ರಾಮದಲ್ಲಿ ಇದ್ದು. ಆ ಹೆಸರನ್ನೇ ಈ ದಣ್ಣಾಯಕನಿಗೆ ಇಟ್ಟಿರಬಹುದು.

ಒಂದು ಹಸ್ತಪ್ರತಿಯ ಆಧಾರದಿಂದ ಈ ಮೊದಲು ಪ್ರಕಟಿಸಿದ್ದ ಕೇಶಿರಾಜಕೃತ "ಲಿಂಗಸ್ತೋತ್ರದ ಕಂದ"ದ, ಎರಡನೆಯ ಓಲೆ ಕಳೆದ ಕಾರಣ ೧೨ನೇಯ ಪದ್ಯದ ಉತ್ತರಾರ್ಧದಿಂದ ೨೬ನೆಯ ಪದ್ಯದ ಪೂರ್ವಾರ್ಧದ ವರೆಗಣ ಪದ್ಯಗಳೂ. ಲಿಪಿಕಾರನ ವಿಸ್ಮೃತಿಯಿಂದಾಗಿ ೮೭ನೆಯ ಪದ್ಯವೂ ಕೈಬಿಟ್ಟುಹೋಗಿವೆಯೆಂದು ತಿಳಿಸಿದ್ದೆನು. ಆಮೇಲೆ ಕರ್ಣಾಟಕ ಕವಿಚರಿತೆಯಲ್ಲಿ (ಪರಿಷತ್ ಮುದ್ರಣ ೧೯೬೧. ಪು ೫೧೨) "ಶಿವಪ್ರಾರ್ಥನಾಶತಕ" ಎಂಬ ಹೆಸರಿನ ಕೆಳಗೆ

ನೋಡಿನಲಿನಲಿದು ಭಕ್ತಿಯೊ ।
ಳಾಡಿ ಮನಂ ಬೆರಸು ಪಾಡಿ ಮೃಡನೊಳ್ ಚಿತ್ತಂ ॥
ಕೂಡಿ ಸುಖಜಲಧಿಯೋಳ್ ಮುಟು ।
ಗಾಡಿ ಕರಂ ಲೀಲೆಯಿಂದಮೆಂದಿರ್ದಪೆನೋ ॥
ಹರನಪದಯಾಮೃತ ವರ್ಷದ ।
ಸರಿವೊನಲಿಂ ನಾಂದು ನಾಂದು ತನುಮನವೆಂಬು ॥
ರ್ವರೆವಣೆದು ಭಕ್ತಿ ಬೀಜಾಂ ।
ಕುರಮಡು ತಾನೆಂದು ಬೆಳೆದು ಬೆಳೆದು ಫಲಮಾದಪುದೋ ॥
ಬಾಲಂ ಜನನಿಯುಗಲ್ಕೆಗೆ ।
ನಾಲಗೆಗಿಟ್ಟವ್ವಿತೆ ಬಿನಿರುಳುಂ ಪಗಲುಂ ॥
ನೀಲಗ್ರೀವನ ಪದಯುಗ ।
ದೋಲಗಕಾಂ ಬಾಲಸಂತೆ ಮಱುಗಲ್ವೇಡಾ ॥

ಎಂಬ ಮೂರು ಕಂದಗಳು ಕಂಡುಬಂದವು. ಇವು "ಲಿಂಗ ಸ್ತೋತ್ರದ ಕಂದ" ದಲ್ಲಿರುವ ಕಂದಪದ್ಯಗಳೇ ಆಗಿರುವುದರಿಂದ, 'ಈ ಲಿಂಗಸ್ತೋತ್ರದ ಕಂದ'ದ ಇನ್ನೊಂದು ಹೆಸರು 'ಶಿವಪ್ರಾರ್ಥನಾ ಶತಕು'ವೆಂದೂ ಈ ಕೃತಿ ಎ. ಆರ್. ನರಸಿಂಹಾಚಾರ್ ಅವರಿಗೆ ಲಭಿಸಿದ್ದಿತೆಂದೂ ಗೊತ್ತಾಯಿತು. ಇಷ್ಟರಲ್ಲಿ ಶ್ರೀ ಎಸ್. ಶಿವಣ್ಣ ಅವರ "ಕರ್ನಾಟಕ ಕವಿ ಚರಿತ್ರೆಯ ಅನುಕ್ತ ಕೃತಿಸೂಚಿ"ಯ ೬೫ನೆಯ ಪುಟದ "ಶಿವಪ್ರಾರ್ಥನಾ ಶತಕ" ಎಂಬ ಕೃತಿಯ ಉಲ್ಲೇಖ ನನ್ನ ಗಮನಕ್ಕೆ ಬಂದಿತು. ಈ ಕೃತಿಯ ಬಗ್ಗೆ ವಿವರಗಳನು ಒದಗಿಸಬೇಕೆಂದು ಅವರಿಗೆ ಬರೆದೆನು. ತಮ್ಮ "ಅನುಕ್ತಕೃತಿ ಸೂಚಿಯಲ್ಲಿಯ" ಶಿವ ಪ್ರಾರ್ಥನಾ ಶತಕ" ಮತ್ತು ಕವಿಚರಿತೆಕಾರರು ಹೇಳುವ "ಶಿವಪ್ರಾರ್ಥನಾ ಶತಕಗಳು ಬೇರೆ ಬೇರೆಯಾಗಿರಬಹುದೆಂದು ತಿಳಿಸಿದರಲ್ಲದೆ, ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಕೇಶಿರಾಜನ 'ಲಿಂಗಸ್ತೋತ್ರದ ಕಂದ'ದ ಹಸ್ತಪ್ರತಿ(K೪೪೮) ಇದ್ದುದಾಗಿ ಸೂಚಿಸಿದರು. ಆದರೆ ಆ ಹಸ್ತಪ್ರತಿಯ ಮೊದಲ ೫ ಓಲೆಗಳು ಕಳೆದುಹೋದ ಕಾರಣ ಪ್ರಾರಂಭದ ೨೯ ಪದ್ಯಗಳಿಲ್ಲ. ಹೀಗಾಗಿ ನನಗೆ ದೊರೆತ ಹಸ್ತಪ್ರತಿಯಲ್ಲಿ ಕಳೆದು ಹೋದ ೧೧ ನೆಯ ಪದ್ಯದ ಉತ್ತರಾರ್ಧದಿಂದ ೨೬ ನೆಯ ಪದ್ಯದ ಪೂರ್ವಾರ್ಧದ ವರೆಗಣ ಭಾಗವನ್ನು ತುಂಬಿಕೊಳ್ಳಲು ಈ ಹಸ್ತಪ್ರತಿಯಿಂದಲೂ ಸಾಧ್ಯವಾಗುವುದಿಲ್ಲ.

ಆದರೆ ಲಿಪಿಕಾರನ ವಿಸ್ಮೃತಿಯಿಂದ ಬಿಟ್ಟು ಹೋದ ೮೭ ನೆಯ ಪದ್ಯಮಾತ್ರ ಮೈಸೂರ ಪ್ರತಿಯಲ್ಲಿ ಹೀಗಿದೆ.

ಎನ್ನ ವಶವಲ್ಲ ಮನವಿದು ।
ನಿನ್ನ ಪದಂಗಳ ನೆನೆಯಲ್ ಈಯದು ತಾನಿದು ॥
ನಿನ್ನ ವಶವೆಂಬುದಱಿತೆಂ ।
ನಿನ್ನ ನೆನೆವಂತೆ ಪೇಳ್ಮಸಕ್ಕಾಣತಿಯಾ ॥

ಈ ರೀತಿ 'ಲಿಂಗಸ್ತೋತ್ರದ ಕಂದ'ದ ನಷ್ಟ ಭಾಗವನ್ನು ತುಂಬಿಕೊಳ್ಳಲು ನಾನು ಪ್ರಯತ್ನಿಸುವಲ್ಲಿ, ಕೇಶಿಜನ 'ಲಿಂಗಸ್ತೋತ್ರದಕಂದ' ಎಂಬ ಹೆಸರಿನ ಇನ್ನೊಂದು ಕೃತಿ ನನ್ನ ಕಣ್ಣಿಗೆ ಬಿದ್ದಿತು. ಮೊದಲನೆಯದರಲ್ಲಿ ೧೦೦ ಕಂದ ಪದ್ಯಗಳಿದ್ದರೆ ಇದರಲ್ಲಿ ೧೦೮ ಕಂದಗಳಿವೆ. ಅಭ್ಯಾಸದ ಅನುಕೂಲಕ್ಕಾಗಿ ಒಂದನ್ನು "ಲಿಂಗಸ್ತೋತ್ರದ ಕಂದ-೧" ಇನ್ನೊಂದನ್ನು "ಲಿಂಗಸ್ತೋತ್ರದ ಕಂದ-೨" ಎಂದು ಕರೆಯಬಹುದು. ಹೊಸದಾಗಿ ಸಿಕ್ಕ ಈ ಕೃತಿಯ ಸ್ಥಿತಿ ಮತ್ತು ಸ್ವರೂಪ ಹೀಗಿದೆ.

ಕರ್ನಾಟಕ ವಿಶ್ವವಿದ್ಯಾಲಯದ ವಚನ ಭಾಂಡಾರದಲ್ಲಿ 327 B ನಂಬರಿನ ಮಧ್ಯಮ ಆಕಾರದ ಒಂದು ಓಲೆ ಪ್ರತಿಯಿದೆ. "ಶ್ರೀ ಗುರುಬಸವ ಲಿಂಗಾಯನಮಃ ಸಂಪಾದನೆಯ ಸಿದ್ಧವೀರೇಶ್ವರ ದೇವರು ಸೇರಿಸಿದ ಕೇಶಿರಾಜ XXXX" ಎಂದು ಪ್ರಾರಂಭವಾಗಿ "ಲಿಂಗಸ್ತೋತ್ರದ ಕಂದ ಸಮಾಪ್ತ ಮಂಗಳ ಮಹಾಶ್ರೀ" ಎಂದು ಮುಕ್ತಾಯಗೊಂಡಿದೆ, ಈ ಮೊದಲು ನನ್ನಿಂದ ಪ್ರಕಟವಾದ 'ಲಿಂಗಸ್ತೋತ್ರದ ಕಂದ-೧' ಎಂಬ ಕೃತಿಯಲ್ಲಿಯ ೪೦ ಪದ್ಯಗಳು ಇದರಲ್ಲಿ ಇದ್ದು, ೭೮ ಮಾತ್ರ ಹೊಸ ಪದ್ಯಗಳಾಗಿವೆ. ಹುಳುತಿಂದ ಕಾರಣ ಎಲ್ಲ ಎಲೆಗಳ ಒಂದು ಮೂಲೆ ನಷ್ಟವಾಗಿ ಒಂದೂ ಪದ್ಯ ಪೂರ್ಣಸ್ಥಿತಿಯಲ್ಲಿ ಸಿಗುವದಿಲ್ಲ. ಆದರೆ ೪೦ ಪದ್ಯಗಳಿಗೆ ಪಾಠಾಂತರ ಲಭಿಸುವುದರಿಂದ ೭೮ ಹೊಸ ಪದ್ಯಗಳಿರುವುದರಿಂದ ಈ ಕೃತಿಯನ್ನು ಇಲ್ಲಿ ಸಂಪಾದಿಸುತ್ತಿದ್ದೇನೆ.

## ಲಿಂಗಸ್ತೋತ್ರದ ಕಂದ

[೧] ಶ್ರೀಮದಮದಮರಾ[೧] ಸುರಾರ್ಚಿತ |
ಕಾಮಾಂತಕದೇವ ಭಕ್ತಜನವನ ಚೈತ್ರಾ ||
[೨] ವ್ಯೋ[೨]ಮ ಮರುದವನಿ[೨] ರವಿ ಶಿಖಿ |
ಸೋಮ ಜಲತ್ಮಾಷ್ಟಪತಿಯೆ ರಕ್ಷಿಪುದೆ[೨]ನ್ನಂ || ೧ || [೧]

೧-೧ X ಮರ (II) ೨-೨ ವ್ಯಾ (II) ಶಿಖಿರವಿ ವಿ X (II).

ಶ್ರೀಯಯಂ ಶಾಶ್ವತ ಭಕ್ತಿ |
ಶ್ರೀಯಯಂ [೧]ತ್ವ[೧]ತ್ಪದವನೆನೆವ ಪರಮಾನಂ[೨]ದ[೨] ||
ಶ್ರೀಯನೊಲಿದಿತ್ತು [೩]ಕರುಣದಿ[೩] |
[೪]ಜೀಯ ಶ್ರೀ ಸೋಮನಾಥ ರಕ್ಷಿಪುದೆಸ್ನಂ[೪] || ೨ || [೨]

೧-೧ ತ (II) ೨-೨ ದಂ (II) ೩-೩ ಕೃಪೆಯಿಂ (I) ೪-೪ X (II).

ಸೋಮಂ ಸೋಮಾವರನುಂ |
ಸೋಮಂ ಸೋಮಾಂಗಧರನು ಸೋಮಸಹಾಯಂ |
[೧]ಸೋಮ [೦][೧] ನಿಸ್ಸೀಮನೆನಿಪ |
[೨]ಭಿ(೯)[೨] × × × × ಮಂ || ೩ ||

೧-೧ ಸೋಮ (II), ೨-೨ ಭಿ (II).

ಪರಮೇಶಂ ಭವನಾಶಂ |
ಉರುತರ ತೇಜಪ್ರಕಾಶ ಭವಭಯ ನಾಶಂ
ಶರಣರ ಹೃದಯಾವಾಸಂ |
× × × × || ೪ ||

ಎನ್ನಾನಂಡ ಸುಖಾಬ್ಧಿಯೆ |
ಎನ್ನಯ ಹೃತ್ಕಮಲ ಹಂಸನಾಗಿಂ ಹೊದ್ದಿಯೆ |
ಎನಂ ಸಲಹುಗೆ ಕಪ × × |
× × × × ದ ಕೃಪಾರ್ದಿಯೇ || ೫ ||

ಮಂಗಳಮಯ ಘನಲಿಂಗಂ |
ಹಿಂಗದೆ ನೆನೆವವರ ಸಲಹುತಿಹ ಮಹಿಮಾಂಗಂ |
[೧]ಪೊಂಗು × × × × | [೧]
× × × ಸಲಹೆನ್ನ ನೀನೇ ಸೋಮ ಮಲಿಂಗಂ* || ೬ ||

೧-೧ ಮೂರನೆಯ ಚರಣವನ್ನು ಲಿಪಿಕಾರ ವಿಸ್ಮೃತಿಯಿಂದ ಬರೆದಿಲ್ಲ.
* ನಾಲ್ಕನೇ ಚರಣದ ಛಂದಸ್ಸಿಗೆ ಚ್ಯುತಿ ಬಂದಿದೆ.

ಸತ್ಯರ ನೆನಹಿಗೆ ಬಂಪು ಜ |
ಗುತ್ಪತ್ತಿಯ ದೆಸೆಗೆ ನಾದಬಿಂದುವದೆಂದು ]೦] |
[೧][ತ್ವ][೧]ತ್ಪದಮ × × × × |
× × × × ಲಿಂಗವಾಗಿ ನಿಂದುದು ಬಂದು || ೭ ||

೧-೧ ತ (II).

ಇದು ಕಾರಣ ಕ್ರೀಲಿಂಗವೆ |
ಮುದದಿಂದಲಿ ಇಷ್ಟಲಿಂಗವೆಂಬುದದಾಯ × |
× × × × ಡಿಸುವುದುಂ |
ಇದು ಶಿವನಾನಂದವಿದು ಮಹಾಘನಲಿಂಗಂ ‖ ೮ ‖

ಅಮೃತದೊರಕೊಂಡರುಂಬೊಡೆ |
ಸು × × × × ಱಸಲುಂಟೆ ಪುಣ್ಯೋದಯ ಸಂ |
ಭ್ರಮನಂ ಪೂಜಿಸು ಬೇಗದಿ |
ವಿಮಲಂ ಸುಮುಹೂರ್ತವರ [ನ] ನರ್ಚಿಸು ಶಿವನಂ ‖ ೯ ‖

× × × × ಕಾಲೊಂದೆಸೆ |
ಮೈಯ್ಯೊಂದೆಸೆಯಾಗಿ ತಟ್ಟುಗೆಡೆಯುದ ಮುನ್ನಂ |
ಆಯ್ಯೊ ಜಗದೇಕ ಗುರುವಂ |
ಕೈಯಿಂ ಕಣ್ಣಾರೆನೋಡಿ ಪೂಜೆ × × × × ‖ ೧೦ ‖

ಲಿಂಗ[1] [ವ][1] ಭಜಿಯಿಸಿ ನೆನೆವುದು |
ಲಿಂಗವನಾರಾಧಿಸುತ್ತ ಧರಿಸಿರುತಿಹುದುಂ ‖
ಲಿಂಗವಿಡಿದೆಲ್ಲ ದೇವರು |
ಲಿಂಗವನುಂ ಭಜಿಸಿ ಋಷಿಯರಾದರು ‖ ೧೧ ‖
೧-೧ ವಂ (II)

ಮುಟ್ಟೆಪರಶಿವನ ನೆನದಡೆ |
ಕಟ್ಟಕ್ಕಱಲಭವನೋಡಿ ಸಲಹುವನವನಂ ‖
ಮುಟ್ಟದೆ ಮತ್ಸಂ ಶಿಶಿವಂ |
ನಿಟ್ಟಿಸಿ ತಾಂ ನೋಡಿ ಸಲಹುವೊಲು ಸಲ × ‖ ೧೨ ‖

ಮುದದಿಂದ ನೆನೆಯೆ ಶಿವನಂ |
ಪದುಳದಲುಂ ಸಲಹಿ ತನ್ನರೂಪನೆ ಮಾಳ್ಪಂ ‖
ಹು[1] [ದು][1] ಗಿಸಿ ಪಕ್ಷಿಯು ತತ್ತಿಯು |
ನದು ತನ್ನಯು ರೂಪ ಮಾಡುವೊಲು × × × ನುಂ ‖ ೧೩ ‖
೧-೧ ದುಂ (II)

ಶಿವ ಶಿವ ಶಿವಯೆಂದೆಂಬಂ |
ಶಿವನೆಯುವನವನೆ ಶಿವನು ಸಲೆ ಬೇಱಿಲ್ಲವು ‖
ತವೆ ಕೂರ್ಮ ಶಿಶುವ ನೆನೆಯಲ್ |
ಜವದಿಂ ತೃಪ್ತಿಯನು ಯ್ಯೆದುವ × × × × ‖ ೧೪ ‖

ಶಿವನೊಲುಮೆ ಜನನಿಯಾಗಿಯೆ |
ಶಿವನನುಭವ ಸುಖದ ರಸವೆ ಸುಧೆಯಾಗಿಯೆ ತಾಂ ||
ಶಿವನೆನಹೆ ಬೆಣ್ಣೆಯಾಗಿಯೆ |
ಶಿವಸೀಮೆಯು ತೊಟ್ಟಿ × × × × ದಿರ್ದಪೆನೋ || ೧೫ ||

ಶಿವನೊಲವೆ ಜೀವವಾಗಿಯೆ |
ಶಿವನನುಭವ ಸುಖದ ಸುಖವೆ ತನುವಾಗಿಯೆ ತಾಂ |
ಶಿವನ ದಯವುಂಡು ಬದುಕುವ |
ಶಿವದಯದಾ × × × × ನಗದೆಂದಾದಪುದೋ || ೧೬ ||

ಶಿವಯೆಂಬ ತೊದಲದಾಗಿಯೆ |
ಶಿವಸದ್ಭಾವೈ ¹]ಕ]¹ ದಟ್ಟೆಯಿಂ ಬೆಳಗಾಗಿಯೆ ।
ಶಿವಸುಖದ ನಿದ್ರೆಯಾಗಿಯೆ |
ಶಿವನಡಿಗಂ ಹೊ × × × × ಪದೆಂದಾದಪುದೋ || ೧೭ ||

೧-೧ ಕಂ (II).

ಭವದೀಯ ಚರಣ ¹ಕಮಲದ¹,
ನವಕುಸುಮಾ²ರಸವ ಎನ್ನ² ಮಾನಸ ಭೃಗಂ ||
ಸವಿನಯದಿನೀಂಟಿ ಸೊಕ್ಕುತೆ |
ಶಿವ ಶಿವ³ಶಿವ³ಯೆಂದು ಜಿನುಗುತೆಂದಿರ್ದ⁴ಪುದೋ⁴ || ೧೮ || [೬೧]

೧-೧ಸರಸಿಜ (I), ೨-೨ ಸವವನೆನ್ನ (I), ೩-೩ × (II), ೪-೪ ಪೆನೋ (II).

ದಾನಿನೀನೆಂದು ಪಿರಿಯದಿ |
ನಾನಾರುವ ಬಿಟ್ಟು ನಿಮ್ಮದೆಸೆಗಂ ಸಾರ್ವೆಂ ||
ಆನಂದಾಕರ ಶುಭಕರ |
ನೀನೇಮಾ × × × × ನವನೆಲೆಗೊಳ್ಳಭವಾ || ೧೯ ||
(ಮೊದಲ ಚರಣದಲ್ಲಿ ಛಂದಸ್ಸು ತಪ್ಪಿದೆ)

ಮಾರಮದ ಹರನೆ ನಿನ್ನಾ |
ಕಾರಂ ಸಾನಂದಮಪ್ಪ ಮಚ್ಚಿತ್ತ ಸುಧಾ ||
ವಾರಿಧಿಯೊಳಗಗಲ¹ದೆ¹ ತಿಳಿ |
ನೀರೊಳಗಣ ತಿಂಗ²ಳಂತಿರೆಂದಿ³ರ್ದಪುದೋ² || ೨೦ || [೬೪]

೧-೧ ದ (III), ೩-೩೪× (II), ೩-೩ ಪೆನೋ.

ಆನಂದಾಮೃತ ಸರದೊಳ್ |
ಧ್ಯಾನದ ಚೂಣಿಕೆಯ ನಾಗಳಂಟಂಟಿ ಕರಂ ||
ಮಾನಸ ಪಟದೊಳ್ಭಕ್ತಿವ |
ರಾನನೆ ಚಿತ್ರಿಸುಗೆ ರೂಪನಹಿ× × × × ನಂ || ೨೧ ||

ತ್ವಚ್ಚರಣ [೧]ಮೆ[೧]ನ್ನ ಮನದೊ |
ಳ್ಪೆಚ್ಚಂತಮರ್ದಂತೆ ಕ[೨]ಡೆ[೨]ದು ಕಂಡರಿಸಿರ್ದ[೩][೦] ||
[ತ][೩]ಜ್ಯೋತ್ತಿದಂ[೪] ತಿರಗಲದೆ[೪]
ನಿಚ್ಚಂ ನೆಲಸಿರ್ಕೆ ರಾಜರಾಜತ ಚೂಡಾ || ೨೨ || [೭]

೧-೧ ಪೆ (II), ೨-೨ ಡ (II), ೩-೩ × (II), ೪-೪ ತೆ ನೆಟ್ಟನೆ (I).

[೧]ಒದ[೧]ವಿರ್ದಪಾಯ ಕೋಟಿಗ |
ಳಿದಿರ್ವಂದೊ[೨]ಡಪಿಂದ್ರ[೨]ಪದವಿ ಸಾರ್ದೊಡ[೩]ಮೆಂದುಂ[೩] ||
ಬೆದಱಿಮನವೇಱಿ ಮಱೆಯದ |
ಪದುಳಂ ನಿಲ್ಕೆನ್ನ ಮನದೊಳಭ[೪]ವಪದಂ[೪]ಗಳ್ || ೨೩ || [೨೯]

೧-೧ × (II), ೨-೨ ಡೆ ಇಂದ್ರ (II), ೩-೩ ದೆಂತುಂ (I) ೪-೪ × (II).

ನೋಡಿ ಕಣ್ ಪಾಡಿನಾಲಗೆ |
ಯಾಡಿಪದಂ ಬಿಡದೆಯರ್ಚಿಸುತ್ತುಂ ಕರದೊಳ್ ||
ಕೂಡಿ ಮನನಿಮ್ಮೊಳಿರ್ಪುದ |
ಮಾಡು ಗಡಾ ಕೂರ್ಪೊಡೆನಗೆ ಪರಮ × × ವೇ || ೨೪ ||

ಆಡಿಗಡಿಗಾಡುವ ಪಾಡುವ |
ಕೆಡೆನೋಡುವ ಮುಂದುವರಿವ ಕರಣ ವಿಕಾರಕೆ ||
ಯೆಡೆಗುಡದೆ ಭಕ್ತಿ – ರಸದೊಳು |
ಮೃಡನಂ ಮನ್ಮನದೊಳೆಂದು × × × ಟ್ಟಪೆನೋ || ೨೫ ||

ಎನ್ನಮನವೆಂಬ ಶುಕನಂ |
[೧]ನಿನ್ನಗ್ಗ[೧]ದ ಭಕ್ತಿವನಿತೆ ಪಿಡಿದೊಯ್ವಾ ಶಿವಾ ||
ಯೆನ್ನೆಂದೋದಿಸಿ ನಿಜ ಪಾ |
ದೋನ್ನತ ಪಂಜರದೊಳೆಂದು × × × × ಟ್ಟಪಳೋ || ೨೬ || [೮೯]

೧-೧ ನಿನ್ನಂಗದ (I).

ಸುಳಿವುತ್ತಯೆನ್ನವಮುಂದಂ |
ಹೊಳವುತ್ತಂ ಮನದ ಕೊನೆಯೊಳಗೆ ನಿಂದೀಗಂ ||
ತೊಳಗಿ ಬೆಳಗಿಪ್ಪ ತೇಜೋ
ವಳಯುನ ತನ್ಮೂರ್ತಿನೆನಹದೆ × × ದೊ || ೨೭ ||

ಆರಣ್ಯದೊಳಗೆ ರಭಸ[೧]ದೆ[೧] |
ಭೋರನೆ ಪರಿತರ್ಪ ನದಿಯ ತಟದೊಳ್ಕು[೨]ಳ್ಳಿ[೨] ||
ದಾರ್‍ರೊಡನೆಡಬಲನಿಲ್ಲದೆ[೩]
ಮಾರಾರಿಯು[೩] ಚರಣ[೪]ಧ್ಯಾನ[೪]ವೆಂದಾದಪುದೋ || ೨೮ || [೯೮]

೧-೧ ದಿ (II), ೨-೨ ಳ್ತಿ (I) ೩-೩ಃ ದುಮಾತವುಣನ (I), ೪-೪ ಸಂಗ (I)

ಹಿಂದುಮುಂದೇನನಱಿಯದೇ |
ನಿಂದುಮನಂ ಶಿವಸುಖಾಮೃತವ ದಣಿಯುಂಡುಂ ||
ಬಂದುದ ಹೋದುದನಱಿಯದೆ |
ನಿಂದಾನಂ × × × × ಲದೆಂದಿರ್ದಪುದೋ || ೨೯ ||

ಕರೆದೊಡೆ ಕೇಳದೆ ನುಡಿಸಿದೊ |
ದಱಿಯದೆ ಶಿವಲಿಂಗ ತಂದೆಯನುಭವದಿಂದಂ ||
ಕರಗಿ ಮನವಳಿದು ನೆಟ್ಟನೆ |
ಮರವಾ × × × × ನೆಂದಿರ್ದಪೆನೋ || ೩೦ ||

ಎಡೆವಿಡದ ಸ್ನೇಹವೊರ್ಬರ |
ನುಡಿಸೊಗಸದ ಚಿತ್ತ ಸುತ್ತಲಾಲಿಸದ ಮನಂ ||
ಒಡಗೂಡಿ ಲಿಂಗದೇವನ |
ಬಿಡಲಾಱದ × × × × ದೆಂದಾದಪುದೋ || ೩೧ ||

ಧ್ಯಾನಂ ಲಿಂಗದಿ ಕುಱಿಗೊಂ |
ಡುನೋಟಂ ನಟ್ಟುಸಿಕ್ಕಿ ತಾನೆಂದಿದಿರೆಂ ||
ದೇನುವನೇನಂದಱಿಯದ |
ಧ್ಯಾನಾ × × × × ದಾದಪುದೋ || ೩೨ ||

ಹಸಿವೇನೆಂದಱಿಯದೆ ಬಹು |
ತೃಷೆಕಿಂಚಿತ್ತೇನುವಱಿಯ ನಿದ್ರೆಯ ಸುಖವಿ ।
ಘ್ನ × × × × ಯಿಲ್ಲದೆ |
ಪಶುಪತಿ[೧] ನೆನಹೊಂದಿ ಮುಸುಕಿ ಮರವಟ್ಟಿಹೆನೋ || ೩೩ ||

೧+ ಯ (II).

ಮರದು ಮನವಿಂದ್ರಿಯಾರ |
ಕ್ಕೆಱಗದೆ ಮಜ್ಜ× × × ×ಕ್ಕರಮಂ ||
ತೆಱಹಿಲ್ಲದೆ ಶಿವಲಿಂಗಡೆ |
ಎಱಗಿ ಸುಖಾಂಬುಧಿಯೊಳಗಲದೆಂದಿರ್ದಪೆನೋ || ೩೪ ||

ಪರವ ಪಾತುವ ಭಕ್ತ್ಯಾ |
ವರಿಸ× × × ×ళిದು ಮನಂ ||
ಹರಹರಯೆಂಬಾಳಾಪದಿ |
ನಿರುತಂ ನೆನೆಹೊಂದಿ ಸುಖದಲೆಂದಿರ್ದಪೆನೋ || ೩೫ ||
(ಮೊದಲ ಚರಣದಲ್ಲಿ ಛಂದೋಭಂಗವಿದೆ)

ಲಿಂಗಾನುಭವದ ಸುಖ× × |
× × × ×ಪಿ ಪುಳಕಾಂಕುರದಿಂ ||
ಪೊಂಗಿ ಪೊಱಕರಿಸಿ ಮನದೊಳು |
ಲಿಂಗಾವಸ್ಥೆಯೊಳದೆಂದು ಸುಖಿಯಾದಪೆನೋ || ೩೬ || [೩೮]

ಪರಮ ಪ್ರಭು[೧] ಲಿಂ (ವಿಂ?) ಗಾಶ್ರಿತ |
ವರಗಂ (ದಂ?) ಗಹಿಕಂಕಣಂ[೧]ಗೆ ರಾಜಿತ ರಾಜಾ ||
ಭರಣಂಗೆ ಮನವನೊಪ್ಪಿಸಿ |
ಪರಮ ಸುಖಾಶ್ರಯದೊಳಲ್ದು ರಮಿಯಿಸ[೨]ವೇ[೨]ಡಾ || ೩೭ || [೭೮]
೧-೧ × (II) ೨-೨ ಜೇ (I).

ಲಿಂಗದ ಹಂ × × × × |
× × × × ಮನವನಾವರಿಸಿಹವೊಲು ||
ಲಿಂಗಮಯವಾಗಿ ತೋರ್ಪ ಬೆ |
ಡಂಗಿನಕಂದೆಱವೆ ಸುಖವದೆಂದಾಪುದೋ || ೩೮ ||

ನಿಜ × × × × |
× × × × ನೋಟ ಕೇಳಿಯೊಳೆಲ್ಲಂ ||
ಲಿಂಗಮಯವಾಗಿ ತೋರ್ಪಬೆ |
ಡಂಗಿನ ಕಣ್ದೊಳಲ ಸುಖಮದೆಂದಾಪಪುದೋ || ೩೯ ||

ಲಿಂಗವನೆ ನಿಱಿಸಿ ಮನದೊ |
ಳ್ಪಿಂಗದೆ ತಾಂ ಕೂರ್ಪೆಯಿಂ[೧]ದೆ[೧] ಹೃದ[೨]ಯಾಂ[೨]ಬುಜದೊಳ್ ||
ಲಿಂಗಮಯವಾಗಿ ತೋರ್ಪಬೆ |
ಡಂಗಿನ ಕಂದೊಳಲ ಸುಖಮ[೩]ದೆಂ[೩]ದಾದಪುದೋ || ೪೦ || [೯೫]
೧-೧ ದ (I), ೨-೨ ಯುಂ (II), ೩-೩ × (II)

× × × × |
× × × ದಲುಂ ಕಳೆಯ ಮನವನಾವರಿಸಿಹವೊಲು |
ಲಿಂಗಮಯವೆತ್ತ ತೋರ್ಪ ಬೆ |
ಡಂಗಿನ ಕಂದೊಳಲ ಸು × × × × || ೪೧ ||

× × × × ಲಿ |
ಪುಡುಪುಂ ಬೇಡೆ ಕೊಡುವ ಕೊಂಬ ತಸ್ಕರನಿಹಂ ||
ಪಡುವೆಡೆಯಲಿ ಶಿವಲಿಂಗವ |
ಬಿಡದಿಹಪಕ್ಕಿಂ × × × × || ೪೨ ||

× × × × ನಡವ ಯಡಹುವ |
ಪೊಡುವಾ ಪೊಡಮಡುವ ಪಾಡುವ ಪೆಱತೊಂ ||
ದೆಡೆಯೊಳೆಡೆಯಡಗದೆಂದ × × |
× × × × × || ೪೩ ||

[1]ನಡೆವ[1] ನುಡಿವೆಡೆಯೊಳೊರ್ಮೆಯು |
ಯೆಡೆಯುಡುಗ[2]ದೆ[2] ಕಮಳನಾಳ ಸೂತ್ರದ ತೆಱದಿಂ ||
ಮೃಡಚರಣ ಧ್ಯಾ[3]ನಮನಾಂ
ಪಡೆದು ಸುಖಾಸ್ಪದದೊಳೊಂದಿ ಬಱಿಸಂದಪೆನೋ || ೪೪ || [೪೨]

೧-೧ ನುಡಿವ (I), ೨-೨ ದ (I), ೩-೩ × (II)

ಒಳಗಂ ಪೊಱಗಂ ಎನ್ನಯ |
ಕಳೆಗಂ ನೀನಲ್ಲದನ್ಯವೇನಱಿಯದೊಲುಂ ||
ತಳೆದಿಲ್ಲಿ ನಿನ್ನ ಪಾದದ |
ಬೆಳಗೆ ಸ × × × × || ೪೫ ||

× × × × ಘುಂ |
ನಡೆನೋಡಿ ಮನೋನುರಾಗವಗಲದೆ ಯೋಗಂ ||
ಮಿಡಿದು ಕಡೆಗೊಡದು ಪಡೆಯದೆ |
ಮೃಡಮೂರ್ತಿ × × × × || ೪೬ ||

[1]ಅಡಿಗಡಿಗೆ ಶಿವನ ರೂಪಂ[1] |
ನಡೆ ನೋಡಿ ಮನೋನುರಾಗದಿಂ [2]ಪ[2]ಣಿಯದೆ ಕೈ ||
ಪಿಡಿದು ಮನದತ್ತ ತೋಱುವ |
ಮೃಡನನುಭವ ಸುಖದ[3] ಸೊಗಸದೆಂದಾದಪುದೋ[3] || ೪೭ || [೫೧]

೧-೧ × (II), ೨-೨ ತ (II), ೩-೩ ಸೊಬಗದೇಂ × (II)

೧ಪರಿದೈದಿ ಲಿಂಗದೇವನ।
ಚರಣಂ೧ಗಳನಿರದೆ ನೋಡಿ ಹಿಮ್ಮೆಟ್ಟದೆ ಕಾ॥
ತರಿಸಿ ಪೆ೨ಜ೨ ಪಿಂಗ೩ಲಱಿಯು೩ದೆ।
ಬಿರಿಮುಗು೪ಳೊಳು೪ ತುಂಬಿಯಂತಿರೆಂದಿರ್ದಪೆನೋ. ॥ ೪೮ ॥ [ ೬೭ ]

೧-೧ × (II), ೨-೨ ಜೆ (II) ೩-೩ ಲಾಱದೆ (II), ೪-೪ ಳ್ಗಳ (I)

೧ ಸೆಜ್ಜೆಯನೆತೆಗೆದು ನೋಡ।
ಲ್ಕುಜ್ಜಳಿಸುವ ಲಿಂಗವೆ೧ಸೆಯೆ ೨ಕಣ್ಣಂ೨ ಮನಕಂ॥
ಪಜ್ಜಳಿಪ ಕಾಂತಿಯೊಳ೩ಗಾಂ೩।
ಜಜ್ಜನೆ ಜರಿವು೪ತ್ತೆ೪ ಶಿವ೫ನನೆಂದರ್ಜ೫ಪೆನೋ ॥ ೪೯ ॥

೧-೧×(II)೨-೨ ಕಣ್ಣಂ (II ೩-೩)ಗಂ.(II)೪-೪ ತ್ತ (II) ೫-೫ ನೊಳೆಂದಿರ್ದ (I)

ಉರಸೆಜ್ಜೆಯ ಲಿಂಗವನಾ।
ಕ × × × ×॥
ಞಾರೆಗುವಶ್ರಾಂಬುವಿನಿಂ।
ಪರಮಂಗಭಿಷೇಕವೆಱವುದೆಂದಾಪುದೋ ॥ ೫೦ ॥

ಅಂಗೈಯೊಳಾಲಿಕ೧ಲ್ಲಂ೧।
ಪಿಂಗದೆ ನಡೆ೨ನೊಡೆ ನೋಡೆ ಕರಗುವ ತೆರದಿಂ॥
ಲಿಂಗವನೋಡಿ೨ ಮತ್ಸ
ರ್ವಾಂಗಂ ನೆಱೆ೩ಕರೆಗಿ ಕೊಱಗುತೆಂದಿರ್ದಪೆನೋ ॥ ೫೧ ॥ [ ೬೨ ]

೧-೧ (ಲ್ಲ?) ದು (I) ೨-೨ × (II)

ಅಡವಿಯ ಹಸಲೆಯ ಮಂಜಿನ।
ನಡುವಸರುವೊಲೆಸೆವರೋಮ × × × ×॥
× × × × ಗ।
ಳೆಡೆಯುಡಗದೆ ಶಿವನ ನೋಡುತೆಂದಿರ್ದಪೆನೋ ॥ ೫೨ ॥

ನಡೆನೋಡಿ ಲಿಂಗದೇವನೊ।
ಳೆಡೆಯುಡುಗದೆ ಲಿಂಗ ನೆನೆದು ಮನದೊಳನಿ ×. ×॥
× × × ×।
× × × ವ-ಡುಗಳೊಳೋಲಾಡುತೆಂದಿರ್ಧಪೆನೋ ॥ ೫೩ ॥

ನೋಡಿ ನಲಿನಲಿದು ಭಕ್ತಿಯೊ |
ಕಾಡಿ ಮನಂ ಬೆರಸಿ ಪಾಡಿ ಮೃಡನೊಳ್ಚಿತ್ತಂ ||
ಗೂಡಿ ಸುಖ [೧]ಜಲಧಿಯೊಳ್ಮುಮಿ |
ಗಾಡಿ ಕರಂ ಲೀಲೆಯಿಂದಮೆಂ[೧]ದಿರ್ದಪೆನೋ || ೫೪ || [೩೨]

೧-೧ ಸಂಧಿಯಾ × × × × ಲೆಂ (II).

ಲಿಂಗವನೆ ನೋಡಿ ಚಿತ್ತಂ |
ಪಿಂಗದೆ [೧]ತನುಮಯುವದಾಗೆ[೧] ಪೆಱತಂ ಮಱೆ[೩]ದಾ ||
ಸಂಗದೊಳೆ[೨]ಲ್ಲಾ ಶಿವನ ಮ[೨] |
ನಂಗೊಳಿಸುವ[೩] ಭಕ್ತಿಯೆನಗದೆಂದಾಪುದೋ[೩] || ೫೫ || [೬೫]

೧-೧ ತಲ್ಲೀಯುಮಾಗಿ. (I) ೨-೨ ನಿಂದು ಶಿವನವ ( ಮ ? ) (I),
೩-೩ ದೋ (II).

ಲಿಂಗವನೋಳ್ಪ ( ಳ್ಪಾ? ) ನೋಟಂ |
ಪಿಂಗದೆ ಪರಿಯದೆ ಪೊಗಳ್ದು ಪೊರೆಯಾಗದೆ ತಾಂ ||
ಮುಂಗಡೆ ಪಿಂಗಡೆ ಕೆಲಬಲ |
ಕಂಗೈಸದೆ ನಟ್ಟ ದೃ × × × × || ೫೬ ||

ನೋಡುತಲುಂ ಶಿವಲಿಂಗವ |
ನೀಡುತಲುಂ ಸಕಲ ಕುಸುಮ ವೃಂದಂಗಳವಂ ||
ಬೇಡುತಲು ನಿಮ್ಮ ಕರುಣವ |
ನೀಡಿತ್ತೆವರವು ಕರುಣಿ × × × × || ೫೭ ||

ಮೃಡನಂ ಪೂಜಿಸಿ ಪೂಜೆಯು |
ನಡಿಗಡಿ[೧]ಗಂ[೧] ನೋಡಿ ನೋಡಿ ಪೂಜಾಮೃತಮಂ ||
ಕುಡಿಕುಡಿದು[೨] ತಣಿದಾಗಳು |
ಮೆ[೨]ಡೆವಱಿಯದ [೩]ಭಕ್ತಿಯೆನಗದೆಂದಾ[೩]ದಪುದೋ || ೫೮ || [೭೫]

೧-೧ ಗಾಂ (I), ೨-೨ ತಣಿಯುಲಾಜಿದೆಯು (II) ೩-೩ × (II).

ಮೃಢ ಭಕ್ತಿ ರಸ ಸಮುದ್ರದ |
ಮಡುವಿನೊಳವಗಾಹಮಿರ್ದು [೧]ತಣಿಮೊದಗುವಿನಂ[೧] ||
ಕುಡಿದು ಸುಖ ಮೂರ್ಛೆಯಿಂ[೨]ದಂ |
ಕೆಡೆದು ಸದಾಶಿವನನಾಗಳಾಂ ಕಂಡಪೆನೋ || ೫೯ || [೩೯]

೧-೧ ತಣಿವಡ್ಡಗುವಿನಂ (I), ೨-೨ ದೆನ್ನೊಡೆಯುನದಾ × (II).

ಆನಂದದಿಂದ ನೋಡಿ ಸ।
ದಾನಂದದಿಯಿಂದುಮೌಳಿಯಂ ಶೂಲಿಯನೊ ||
ಲ್ದಾನಂದ ಬಾಷ್ಪಸಲಿಲ।
ಸ್ಥಾನಮನಾನೆಂದು ಕಂಡು ಸುಖಿಯಾದಪೆನೋ ||೬೦||

೧[ಪದ್ಮಾಸ]೧ನದಲಿ ಕುಳಿತುಂ।
ಪದ್ಮಾಕರ ಹೃದಯು ವಿಕಸಿತ ಮುಖದಿಂ ||
ಪದ್ಮಾ ೨[ಕ್ಷ]೨ ಪೂಜಿತ ಪದ।
ಪದ್ಮವನಾನೆಂದು ಕಂಡು ಸುಖಿಯಾದಪೆನೋ ||೬೧||

೧–೧ × (ii) ೨–೨ ಕ್ಷಿ (ii)

ಕಪ್ಪುರವುರಿಯಿಂ೧ ನೀರಿಂ।
ದುಪ್ಪು೧ ಕರಂ ಕರಗುವಂತೆ ತನುಮನವೆರ೨ಡುಂ।
ತಪ್ಪುವದಲ್ಲಿಂ೨ ಶಂಕರ।
ನೊಪ್ಪವನಾನೆಂದು ಕಂಡು ಸುಖಯಾದಪೇನೋ ||೬೨|| [೬೬]

೧–೧ × (II) ೨–೨ ದಂ। ತಪ್ಪುತವೆದಲ್ಲಿ (I)

ಮನವುಡುಗಲ್ತನು ಕರಗ।
೧ಲ್ಕೊ೧ನೆದೋ೨ಱಲ್ ರೋಮರಾ೨ಜಿ ಲಿಂಗದೊಳನಿ೩ಸುಂ ೩||
ತನಿನೇಹದಿನಶ್ರುಜಲಂ।
ಜನಿಯಿಸಲಾನೆಂದು ಕಂಡು ಸುಖಯಾದಪೆನೋ ||೬೩|| [೬೮]

೧–೧ ಲ್ಕೋ, ೨–೨ × (II), ೩–೩ ಶಂ (I),

ಅಗೆ೧ಹೊಯ್ದು೧ ತೆಱಿದೆ ಪುಳಕಂ।
ನೆಗೆಯಲ್ಸರ್ವಾಂಗದಿಂದೆ ೨ಕಣ್ಣುಂ೨ಮನಮುಂ ||
ಬಗ೩ರಿ೩ಗೆಯುಂದ೪ದಿ೪ನೊಸರ।
ಲ್ಕಗಜೇಶನ ಕಂಡು ಕರಗುತೆಂದಿರ್ದಪೆನೋ ||೬೪|| [೩೫]

೧–೧ ಯು (II), ೨–೨ × (II), ೩–೩ರ (I), ೪–೪ ದಿಂ(II)

ಎಱಗಿ ಮನಬೇರ್ವರಿದಿರೆ।
ಹೊಱತೆಗೆಯದೆ ನಟ್ಟ ದೃಷ್ಟಿ ನಟ್ಟಂತಿರೆ × × × × ||
× × ದು ನೆಱೆಕರಗಿವುಱ ಜೋ
ಲ್ದೊಱಗಿ ಪರಾವಸ್ಥೆ ಶಿವನೊಳೊಂದಾದಪುದೋ ||೬೫||

ಕಂಗಳರೆ ಮುಗಿಯೆ ಕರಣಕು |
ಳಂಗಳು ಹಾರೈಸೆ ಮನವು ಮಹದೊಳಿರೆಸ × × ||
× × ಗ ಜೊಮ್ಮಿಡೆ ಕರತಳ |
ಕಂಗೈಸುವ ಲಿಂಗಸಂಗವೆಂದಾದಪುದೋ || ೬೬ ||

ಅವಸರ ¹ವಱಿಯದ¹ ನೋಟಂ |
ತವಿಲಱಿಯದ ಬೇಟವೆರ²ಡನ²ಱಿಯದ ಕೂಟಂ ||
ಶಿವಭಕ್ತಿ ³ರತಿಯೊಳಾಟಂ³ |
ಸವೆಯದ ಸುಖವೆನ್ನೊಳೆಂದು ನೆಲೆಗೊಂಡಪುದೊ || ೬೭ || [೫೨]

೧-೧ ವಿಲ್ಲದ (II), ೨-೨ ಡುವ (II), ೩-೩ × ಳಾಪಂ (II)

ಎಸೆವ ಶಿವಭಕ್ತಿಯಿನಿದುಂ |
ಪಸರಿಸಿ ತನುಮನವ ಮುಸುಕಿ ಕಣ್ಣಂ ಮನಕಂ ||
ಒಸೆದಿ × × × ಯಱಿಯದೆ |
ಶಶಿಮೌಳಿಯು ನೆರೆವ ತುರಿಯುವೆಂದಾದಪುದೋ || ೬೮ ||

ಕಡೆಗೆ ಜಡಿವಱಿಯೆ ಕಂಬನಿ |
ನುಡಿತಡಬಡವಾಗೆ ರೋಮಕೂಪದೊಳೆಲ್ಲಂ ||
ಬಿಡದೊಗೆ¹ಯೆ¹ ಪು²ಳಕವಾ²ಯೆ |
ನ್ನೊಡೆಯನ ಮುಂದಱಿಯದಾಡುತೆಂದಿರ್ದಪೆನೋ || ೬೯ ||

೧-೧ ವ (II), ೨-೨ × (II)

ಶಿವ ಶಿವ ಶಿವಯೆಂದೆನುತಂ |
ಶಿವಮಂತ್ರಾಕ್ಷರದ ಜಪವನಳವಡಿಸುತ್ತಂ ||
ಶಿವನ ನಿಜ¹ಮೂರ್ತಿಯಂ ಸಲೆ¹ |
ಭವಭವದೊ²ಳ್ನೋಟ್ಟಪ್ಪೆದೆನಗ²ದೆಂದಾವಪುದೋ || ೭೦ || [೭೪]

೧-೧ × ರ್ತಿಯ ತವೆ (II) ೨-೨ ಳಗೆ ನೋಟ್ಟಪ್ಪ (II)

ಒಗೆವಶ್ರುಪುಳಕ ತತಿಯಿಂ |
ದಗಲದೆ ಶಿವಶಿವಶಿವ ಪ್ರ¹ಘೋಷದೊಳೆಂದುಂ¹ ||
ಪಗಲಿರುಳೆಂ²ಬುದನ²ಱಿಯದೆ |
³ಅ³ಗಜಾವಲ್ಲಭನೊಳಾಮಿತೆಂದಿರ್ದಪೆನೋ || ೭೧ || [೫೮]

೧-೧ ಘೋಷದಿನೆಂದುಂ (II) ೨-೨ × (II) ೩-೩ನ (II)

ಅಸ್ತಿಯೊಳ್ಪೆಮರುವನ್ನೆರ |
ಮಸ್ತಕ ದಣಿವನಕ ಶರಣೆನುತ ಶಿವಯೆನುತಂ ||
ಸುಸ್ಥಿರದಲಭವ × × × ಯುಂ |
ವಿಸ್ತರಿಸಿಹ ಭಾಗ್ಯವೆನಗದೆಂದಾದಪುದೋ || ೭೨ ||
(ಮೊದಲ ಪಾದ ಛಂದೋದೋಷ ಹೊಂದಿದೆ)

[1]ಪಾಡಿ[1] ರಹದಿಂ[2]ದೆ[2] ನಲಿ[3]ದೊ |
ಲ್ದಾಡಿ[3] ಸುಖಾನಂದದಿಂದೆ ತಾಮಸವಂ ಜೇ ||
ಕ್ಕಾಡಿ ನಿಜ[4]ಚಿತ್ತದೊಳ್ನೆಲೆ[4] |
ಕೂಡಿ[5]ದಶಾವಸ್ಥೆ[5] ಶಿವನೊ[6]ಳ್[6]ಂದಾಪುದೋ || ೭೩ || [೨೮]
೧–೧ ಹಾ (I), ೨–೨ ದಂ (II), ೩–೩ ದೆದ್ದಾಡಿ (II), ೪–೪ × (II), ೫–೫ ದವಸ್ಥೆ (II) ೬–೬ ಳೆನಗದೆಂ (II).

ನಿಮ್ಮಡಿಗೆಱಗುಗೆ ತಲೆ ಶಿವ |
ನಿಮ್ಮಂ ಪೂಜಿಸುಗೆ ಎನ್ನ ನಿಜಕರ[1]ಯುಗಳಂ ||
ನಿಮ್ಮಂ ಪಾಡುಗೆ × × ೧ |
ನಿಮ್ಮಂ ಬಲಗೊಳ್ಗೆ ಕಾಲ್ಗಳೇಳುಂ ಭವದೊಳ್[1] || ೭೪ || [೧೨]
೧-೧ × (II).

ಒಂದುಮನಱಿಯದೆ ಶಿವಶಿ[1]ವ[1] |
[2]ಯೆಂದೆಂದು ಬೋಲ್ದು[2] ಬೋಲ್ದು ಶಿವಪೂಜೆಯೊ[3]ಳಂ[3] ||
ಬಂ[4]ದರ ಪೋದರ[4]ನಱಿಯದೆ |
[5]ನಿಂದು[5] ಮನಂ ಲಿಂಗದೊಳಗದೆಂದಾದಪುದೊ || ೭೫ ||
೧-೧ × (II), ೨-೨ ಯೆಂದು ಮನ ಬಳಲಿ (II), ೩-೩ ಳುಂ (II), ೪-೪ ದು × × ದ (II), ೫ಂದ ೫-೫ (II).

[1]ಹ[1]ರಚರಣ ಭಕ್ತಿರಸಮಂ |
ಹರುಷದಿ [2]ಕುಡಿಕುಡಿದು ಸೊಕ್ಕಿ[2] [3]ಪ[3]ರವಶದಿಂದಂ ||
[4]ಸ್ಮರಿಯಿ[4]ಸಲುಂ ಪೂಜಿಸಲುಂ |
ನಿರುತಂ ಬಣ್ಣಿಸಲುಮಱಿಯದೆಂದಿರ್ದಪೆನೋ || ೭೬ || [೪೧]
೧–೧ ಚ (I) ೨–೨ ಕುಡಿದುರ್ಕಿ ಸೊರ್ಕಿ (I). ೭–೩ ಭ (II), ೪–೪ × (II).

ಹಿರಿದುಂ ತುರಿಯದಲಾನುಂ |
ಕರ ಕರದುಂ ಕಂಡು ಕಾಲ × × × × ಲು ನೀನುಂ ||
ಕರುಣಮದಿಲ್ಲದೆ ಕಾಲಂ |
ಮುಱಿವಂಪವಿದೇನು ನಮ್ಮ ಘನಸೋಮೇಶಾ || ೭೭ ||

ಬಿಡೆಬಿಡೆನುಮೇಶ ನಿಮ್ಮಂ |
ಬಿಡೆ ಬಿಡೆನಾನ × × × ಲೇಪದ ತೆಱದಿಂ ||
ಪಿಡಿದು ಬಿಡೆನೆಂಬ ನುಡಿಯುಱೆ³ |
ಪೊಡಲೊಳಡಂಗಿತ್ತು ಸತ್ತೊಡಾಂ ಬಿಟ್ಟಪೆನೇ || ೭೮ ||

ಪೊಡಮಟ್ಟು ¹ಪೋಗಿ¹ ಪೋಗದೆ |
²ತಡೆವೆಟ್ಟುತ್ತಡಿಯಡಿಯು²ನೊಯ್ಯನೆ ಸಾರ್ತಂ ||
ಪಡಿಗಡಿಗೆ ಪಿಡಿದು ಲಿಂಗವ |
ಬಿಡಲಾಱದ ನೇಹವೆನ³ಗದೆಂದಾದಪುದೋ³ || ೭೯ || [೫೬]

೧-೧ ಪೊಂಗಿ (II) ೨-೨ × ತ್ತೊಡೆಯಃನಡಿಯು (II) ೩-೩ಗೆ ಗಿರಿಜಾರಮಣಾ (II).

¹[ನ]¹ನೆಯುಂ ಪಿಡಿದಿಹ × × × ದು |
ತನಿವಣ್ಣಾಗಲ್ಕೇ ಮೆಲ್ಲನದು ಬಿಡುವವೊಲುಂ ||
ಘನಮಹಿಮ ನಿಮ್ಮ ಕೃಪೆ ತೊ |
ಟ್ಟನು ನಾಂ ಬಿಡೆನಯ್ಯ ಸೋಮನಾಥಪ್ರಭುವೆ || ೮೦ ||

೧-೧ ಸ (ii).

ಗತಿಗೆ × × × × ಟ್ಟುಂ |
ಧೃತಿಗೆಟ್ಟುಂ ನಾಣುಗಟ್ಟು ಲಜ್ಜೆಯ ಬಿಟ್ಟುಂ ||
ನರ್ತಿಸಿ ನಿಮಗಾನೊಲಿದಿ |
ರಲ್ತುಟಿಮಿಡುಕಿರಿದೇಕೆ ನಮ್ಮ ಘನಸೋಮೇಶಾ || ೮೧ ||

(ಉತ್ತರಾರ್ಧದಲ್ಲಿ ಛಂದಸ್ಸು ಕೆಟ್ಟಿದೆ)

× × ನೀಂ ನುಡಿಯದಿರ್ದೊಡೆ |
ಹರವೊಳಗೆ ನೀ ಬೆಳಗಿ ತೋಱಲದ ಕೈಕೊಂಬೆಂ ||
ಮಱೆಯದೆನ್ನಂಗವಂ ನೀಂ |
ನೆ × × × × ಯ್ಯ ಸೋಮನಾಥ ಪ್ರಭುವೆ || ೮೨ ||

ನೀನಿರಿಸಿದಂತೆ ಯಿರಲುಂ |
ನೀಂ ಸಲಹಿದೊಲೆನ್ನಯುಸುವು ನೀನೆ ಕರ್ತನ್ ||
ನೀನೆಭರ್ತನ್ ಹರ್ತನ್ |
× × × × ನಯ್ಯ ಗಿರಿಜಾರಮಣಾ || ೮೩ ||

ನೀನೆ ಕುಲಂ ನೀನೆ ಧನಂ |
ನೀನೆ ಕುಲಸ್ವಾಮಿ ನೀನೆ ದೇವತೆಯುಂ ||
ನೀನೆ ಕುಲವಿದ್ಯೆಪುರ × × |
× × × ವೆನಗೆ ಪರಮ ಪ್ರಭುವೆ || ೮೪ ||

ಆರಾಧ್ಯನಮರವದ್ಯನೆ |
ಯೀರೇಳುಂ ಭುವನದೊಡೆಯನೆಂದೊಡೆ ನಿಮ್ಮಂ ||
ಸಾರಥವ × × × × |
× × × × ಗೆ ಬಿಟ್ಟಿರ್ದೆ ನಿತ್ತಲವಧಾರಭವಾ || ೮೫ ||

ಅರಸಂ [1]ಮಂಚಕ್ಕೇರಲ್[1] |
ಸಿರಿಯಕ್ಕಂ ಮಂಚವೇರದಿರ್ಪಳೆ ನಿಮ್ಮಂ ||
[2]ಸ್ಪರ್ಶನ[2] ಮಾಳ್ಪತಿ[3] ಸುಖದಿಂ |
ಹರ ನಿಮ್ಮ ದೇವ[3]ನೆಂಬೆ ದೇವುಗನೆಂಬಂ || ೮೬ || [೯೦]

೧-೧ ಮಂಚಕೆ ತರಸಲು (II), ೨-೨ ಪರಿಸನ (I), ೩-೩ ತೆಜ × × × (II)

ದಾಸಿಯರಸಂ ಕರ[1]ಸಲು[1] |
ಪಾಸಂ [2]ಬಂದೆಱಗುವಂತೆ[2] ನಿಮ್ಮನುಭವದಾ ||
[3]ವೇಸದೆ[3] ಮೆಯ್ಮಱೆ[4]ದೊಲ[4]ವಿಂ |
ದೋಸರಿಸದೆ ದೇವನೆಂ[4]ಬೆ ದೇವುಗನೆಂಬಂ || ೮೭ || [೯೨]

೧-೧ ಲ್ (I) ೨-೨ ಬಂದೇಜುವಂತೆ (I), ೩-೩ ಲೇಸನದಿ (II), ೪-೪ × (II)

ಸರಸದೆ ದೇವುಗನೆಂಬಂ |
[1]ಹರುಷದೆ[1] ನಾಂದೇವನೆಂಬೆ ನಿಮ್ಮನುಭವ [2]ದೊಳ್[2] ||
ಪರವಶನಾ[3]ದುದಱಿಂದಂ |
ಕರುಣಾಕರ ದೇವನೆಂ[3]ಬೆ ದೇವುಗನೆಂಬಂ || ೮೮ || [೯೧]

೧-೧ ಹರಿಸದೆ (II) ೨-೨ ದಾ (II) ೩-೩ × (II)

ಓಪನ ರತಿಯೊಳ್ಸಲವಿಂ |
ಚಾಪಳೆ ನಲಿನಲಿದು ಸುಖವನನುಭವಿಸುವವೊಲ್ ||
[1]ಪಾಪಹರನಂಗ ಸಂಗದೊ |
ಳಾಪೊಱ್ತುಂ ಸುಖದ ಸೊಗಸದೆಂದಾದಪುದೋ[1] || ೮೯ || [೮೦]

೧-೧ ತಾಪಹ × ವನಭವನ ಮೂಲಸ್ತಂಭಂ (II).

ಅಂಬುಜದ ರಜವ[1]ನ[1]ವರುವ |
[2]ತಂಬೆಲರೊಳ್ಪೊರೆದು[2] ಬೆಳೆದ ಘನ[3]ಸೌರಭಮಂ ||
ಕಂಬಾಯ್ತುನದಿಂದುಂಬಾ |
ತುೞ[3]ಂಬಿಯು ಲವಲವಿಕೆ ಶಿವನೊಳೆಂದಾದಪುದೋ || ೯೦ || [೫೪]

೧-೧ ನೆ (II), ೨-೨ ತಂಬೆಲರೊಳ್ಪೊರೆದು (i), ೩-೩ಸಾರ × (ii).

ಬಿರಿವರಳ ಪರಿಮಳವನುಂ |
ಪಿರಿದುಣ್ಣಲು ತುಂಬಿಯೊ × × × × ||
× × × × ಧ್ರಿವರಲುಂ |
ಬಿರಿವದು ಗಡವೆಂದೋ ಸೋಮನಾಥ ಪ್ರಭುವೆ ||೯೧||

ಗಿರಿಜಾರಮಣನ ಪದ[1]ಪಂ |
ಕರುಹಂಗಳ ಭಕ್ತಿರತಿಯ ಸುಖಮಲ್ಲದೆ ಮ ||
ತ್ತೆ[1]ರಡನೆಯ ಸುಖ[2]ವನಱಿಯದ[2] |
ಪರಮಾರ್ಥದ ತುಟ್ಟತುದಿಯನೆಂದೈದುವೆನೋ ||೯೨|| [೪೩]
೧-೧ ಸರಬರು × (II) ೨-೨ ವಱಿಯದೆ (II).

ತಣಿ[1]ವಱಿಯದೆ ಶಿವಭಕ್ತಿಯೊ |
ಲ ( ಳ? )ಣಿಯುರವಾಗುತ್ತೆ[1] ಪೊಣ್ಮೆಪುಳಕಂ [2]ಮನದೊಂ[2] ||
ದೆಣಿಕೆಯನಱಿಯದೆ [3]ಭರದಿಂ |
ತ್ರಿಣೇತ್ರನ ಪಾ[3]ಯ್ದು ಪಿಡಿದು ಬಿಡದಿರುಬೇಡಾ ||೯೩|| [೩೧]
೧-೧ × (II); ೨-೨ ದಮದೊಂ (II), ೩-೩ ತವಕದಿ । ತ್ರಿಣಯನ ಪಾ × (II).

× × × × ಶಿವಭಕ್ತಿಯ |
ದಣಿಯಲು ಮಾಡುತ್ತ ಮುನ್ನ ಪುಳಕಂ ಮಯ್ಯಂ ||
ದೆಣಿಕೆಯನ × × × × |
× × × × × ಬಿಡದಿರವೇಡಾ ||೯೪||

ಅಂಗಜ ಹರನೆನಿಸಿದ ಶಿವ |
ಲಿಂಗಕ್ಕಾನೆಱಗಿ ದಣಿಯಲಾರದ × × × × ||
× × × × |
× × × × ಗ ಸಂಗವೆಂದಾದಪುದೋ ||೯೫||

ಭವವಡುವುದು ಸುಖವೆನಗೀ |
ಭವನಿಂದಲೆಯಭವನಿಮ್ಮೊಳ × × × × ||
× × × + |
× × ದೆ ಸಾಕು ನಿಮ್ಮೊಳಗಜಾರಮಣಾ ||೯೬||

ಪರಿವಗ್ಗವಣೆಯ ತಂದುಂ |
ಪರಿಮಳಿಸುವ ಫಲವು × × × ||
× × × |
× × ಪೂಜಿಸುವ ಭಾಗ್ಯವೆಂದಾದಪುದೋ ||೯೭||

ಇರವಂತಿ ಜಾಜಿ ಪಡ್ಡಳಿ ।
ಸುರಹೊನ್ನೆದಿರ್ಗಂತಿ ಮೊ × × ||
× × × × |
× × ಸುವಂದವೆಂದಾದಪುದೋ || ೯೮ ||

೧-೧ ಸ್ನದ್ರುಗಂತಿ (II).

ಮಂದಾರದ ಮುಚುಕುಂದದ |
ಕುಂದೇಂದೀವರದ ಪಾರಿಜಾತದ [೧]ಪೂವಂ ||
ತಂದಾನಂದದೆ ಹಿಮಗಿರಿ |
ಕಂದರದೊಳಗಿಂದುಧರನನೆಂದರ್ಚಿಪೆನೋ || ೯೯ || [೪೫]

೧-೧ × (II)

ಬೆಟ್ಟದ ಘಟ್ಟದ ಗುಹೆ[೧]ಯೊಳ |
ಗ[೧]ಟ್ಟಡವಿಯೊಳೆಯ್ದಿ [೨]ಶಿವನನುರು[೨]ಗಹ್ವರದೊ ||
[೩]ಳಟ್ಟೇಕಾಂತದೆದುರಿತಘ |
ರಟ್ಟನನನುಭವಿಪ ಸುಖಮು[೩]ದೆಂದಾದಪುದೋ || ೧೦೦ || [೪೬]

೧-೧ ಗಳೊಳ (II) ೨-೨ ಗುಹೆ (II) ೩-೩ × (II)

ಒಂದು ಬಿರಿವರಳನೊಯ್ಯನೆ |
ತಂದಾ ಶಿವಲಿಂಗ [ ದ ] ಮಕುಟದೊಳ್ನಿಲಿಸಿ ಮ ||
ತ್ತೊಂ × × × × |
× × × × ಸುಖಮುದೆಂದಾದಪುದೋ || ೧೦೧ ||

ಧ್ಯಾನಾಮೃತದಿಂ ಲಿಂಗ |
ಕ್ಕಾನಂದ ಸ್ನಾನ ಮನವೆ ಪುಷ್ಪವು ಗಂಧಂ ||
× × × × |
× × + ನಾಥಪ್ರಭುವೇ || ೧೦೨ ||

ಹಮ್ಮಳಿದಾರೋಗಣೆಯದು |
ನೆಮ್ಮಿದ ಪರಿಣಾಮ ವೀಳೆಯವೆ ತಾನೆನಿಕುಂ ||
ವುಂಹ × × × × |
× × × × ನಾಥ ಪ್ರಭುವೇ || ೧೦೩ ||

ಕಂಗಳ ಬೆಳಗಾರತಿಯುಂ |
ಹಿಂಗ [೧][ದ][೧] ನಬಿಸೂಯಧೂಪ ಮನವೇ ಪುಷ್ಪ[೨]ಂ[೨] ||
ಲಿಂಗೆಂಬರಸನ × × × |
× × × × ಥ ಪ್ರಭುವೇ || ೧೦೪ ||

೧-೧ ದೆ (II), ೨-೨ ವು (II).

ಎರಡೆಂಬನೆ ಕರಸಂಥುಂ |
ಎರಡಳದಿಹೆನೆಂಬ ನಂಬುಗಿಯೆ ಸಂಧಲ್ಲವು ||
ಎರಡೊಂದಳಿದಿಹೆ × × × × |
× × × × ಥ ಪ್ರಭುವೇ || ೧೦೫ ||

ಕಡಲೊಳಗಣನೊರೆ ಬೇಱೊಂ |
ಪೆಡೆಯೊಳಡಗುವುದೆಯಲ್ಲಿಯಡಗುವ ಲೆನ್ನೀ ||
ಯಿಡಿದಿಹ ಮನವ × × × |
× × × ನಾಥ ಪ್ರಭುವೇ || ೧೦೬ ||

ಘಟಮಠದೊಳಗಣ ಬಯಲುಂ |
ಘಟಿಯಿಸಲೆಲ್ಲಿಂದ ಬಂದವಾಕಾಶವೆಯಾ ||
ಘಟಮಠವಾಕಾಶವೆಯ × × |
× × × ನಾಥ ಪ್ರಭುವೇ || ೧೦೭ ||

ಪದದಿಂದ್ರಿಯಂಗಳ [೦] ಮನ |
ಹುದುಗಿರಿಸಿರ್ಪವೊಲೆನ್ನ [ಯ] ದೇಹವ ನಿನ್ನೀ ||
ಪದದ ಕೃಪೆ ಹುದುಗಿ × × × |
× × × ಗಾಯ್ತುಯ್ಯ ಸೋಮನಾಥ ಪ್ರಭುವೇ || ೧೦೮ ||

ಲಿಂಗಸ್ತೋತ್ರದ ಕಂದ ಸಮಾಪ್ತ ಮಂಗಳ ಮಹಾಶ್ರೀ

ಈ ಮೊದಲು ಪ್ರಕಟಿಸಿದ್ದ 'ಲಿಂಗಸ್ತೋತ್ರದ ಕಂದ-೧' ರಲ್ಲಿಯ ೪೦ಪದ್ಯಗಳು ಈ "ಲಿಂಗ ಸ್ತೋತ್ರದ ಕಂದ-೨" ರಲ್ಲಿಯೂ ಕಂಡು ಬರುತ್ತವೆ. ಇದನ್ನು ಗಮನಿಸಿ ಈ ಪದ್ಯಗಳ ರಚನೆಯ ಬಗ್ಗೆ ಸಂದೇಹ ತಾಳಕೂಡದು. "ಪದ್ಯಂಗಳಂ ಶಿವಂಗನುದಿನಂ ಪೇಳುತಂ" ಇದ್ದ ಕೇಶಿರಾಜನು ಲಿಂಗ ಸ್ತೋತ್ರ ಪರವಾದ ಹಲವು ನೂರು ಪದ್ಯಗಳನ್ನು ಬರೆದಿರಬಹುದು. ಈ ಸಂಚಯದಿಂದ ವೀರಶೈವ "ಸಂಕಲನ ಸಾಹಿತ್ಯ" ಪರಂಪರೆಯ ವ್ಯಕ್ತಿಗಳು ತಮ್ಮ ಅಭಿರುಚಿಗೆ ತಕ್ಕಂತೆ, ತಮಗೆ ಬೇಕಾದಷ್ಟು ಪದ್ಯಗಳನ್ನು ಆಯ್ದು

ಕೊಂಡಿರಬೇಕು. ಈ " ಲಿಂಗ ಸ್ತೋತ್ರದ ಕಂದ–೧ " ರ ಆರಂಭದಲ್ಲಿ " ಸಂಪಾದನೆಯ ಸಿದ್ಧವೀರೇಶ್ವರ ದೇವರು ಸೇರಿಸಿದ ಕೇಶಿರಾಜ [ದಣ್ಣಾಯಕರ ಲಿಂಗಸ್ತೋತ್ರದ ಕಂದ] " ಎಂಬ ಮಾತಿನಿಂದ ಈ ಅಂಶ ಸ್ಪಷ್ಟವಾಗುತ್ತದೆ.

ಇದೇ ರೀತಿ ಮಂತ್ರ ಮಹತ್ವವನ್ನು ಕುರಿತು ಈತನು ಬರೆದಿರಬಹುದಾದ ಹಲವು ಕಂದ ಪದ್ಯಗಳಲ್ಲಿ, ೧೧೦ ಕಂದಗಳನ್ನಾಯ್ದುಕೊಂಡು " ಮಂತ್ರ ಮಹತ್ವದ ಕುದ " ಎಂಬ ಇನ್ನೊಂದು ಕೃತಿಯನ್ನು ಈ ಸಂಪಾದನಾ ವ್ಯಕ್ತಿಗಳೇ ಸಂಯೋಜಿಸಿದಂತೆ ಕಾಣುತ್ತದೆ. ನಾನು ನೋಡಿದ ಈ "ಮಂತ್ರ ಮಹತ್ವದ ಕಂದ"ದ ೧೭ ಹಸ್ತಪ್ರತಿಗಳಲ್ಲಿ ೬ ಪ್ರತಿಗಳು ಈ ಮಾತಿಗೆ ಹೀಗೆ ಪುಷ್ಟಿ ನೀಡುತ್ತವೆ.

೧. 'ಯಳಮಲೆಯ ಗುರುಶಾಂತದೇವರು ಸೇರಿಸಿದ ಷಡಕ್ಷರಿಯ ಕಂದ' (ಹ.ಪ್ರ.ನಂ. ೫೮೩)

೨. 'ಯಳೆಮಲಿಯ ಗುರುಶಾಂತದೇವರು ಸೇರಿಸಿದ ಷಡಾಕ್ಷರಿಯ ಕಂದ' — ಪ್ರಾರಂಭ
'ಡಣಾಯಕರ ಕಂದ ಮಂಗಳಮಹಾಶ್ರೀ' — ಅಂತ್ಯ (ಹ. ಪ್ರ. ನಂ. ೮೪೦)

೩. 'ಯಳಮಲೆಯ ಗುರುಶಾಂತದೇವರು ಸೇರಿಸಿದ ಷಡಾಕ್ಷರಿಯ ಕಂದ — ಪ್ರಾರಂಭ
'ಯಳಮಲೆಯ ಗುರುಶಾಂತದೇವರು ಸೇರಿಸಿದ ಮಂತ್ರ ಮಹತ್ವದ ಕಂದ ಸಂಪೂರ್ಣ ಮಂಗಳ ಮಹಾ" — ಅಂತ್ಯ. (ಹ.ಪ್ರ.ನಂ. ೧೪೦೯)

೪. '' ಯಳಮಲೆಯ ಗುರುಶಾಂತದೇವರು ಸೇರಿಸಿದ ಷಡಕ್ಷರ ದೇವರ ಕಂದ'' (ಹ.ಪ್ರ.ನಂ. ೭೯೨)

೫. '' ಯಳಮಲೆಯ ಗುರುಶಾಂತದೇವರು ಸೇರಿಸಿದ ಷಡಾಕ್ಷರಿಯ ಕಂದ" (ಹ.ಪ್ರ.ನಂ. ೫೦೭)

೬. 'ಷಟ್‌ಸ್ಥಲ ಚಕ್ರವರ್ತಿ ಯಳಮಲೆಯ ಗುರುಶಾಂತದೇವರು ನಿರೂಪಿಸಿದ ಮಂತ್ರ ಮಹತ್ವದ ಕಂದ' — ಪ್ರಾರಂಭ
'ಯಳಮಲೆಯ ಗುರುಶಾಂತದೇವರು ನಿರೂಪಿಸಿದ ಮಂತ್ರ ಮಹತ್ವದ ಕಂದ ಸಮಾಪ್ತ ಮಂಗಳಂ ಮಹಾ' — ಅಂತ್ಯ. (ಹ. ಪ್ರ. ನಂ. ೫೦೦)

———————

೮. ಕರ್ನಾಟಕ ವಿಶ್ವವಿದ್ಯಾಲಯದ ವಚನ ಭಾಂಡಾರಕ್ಕೆ ಸಂಬಂಧಪಟ್ಟ ಪ್ರತಿಗಳಿವು.

ಈ ಆರು ಉದ್ಧರಣೆಗಳಲ್ಲಿ ಎಲ್ಲವೂ ಎಳಮಲೆಯ ಗುರುಶಾಂತ ದೇವರು 'ಸೇರಿಸಿದ' ಎಂದರೆ ಆರನೆಯದು ಮಾತ್ರ 'ನಿರೂಪಿಸಿದ' ಎಂದು ಹೇಳಿದ್ದು ಈ ಕಂದಗಳ ಕರ್ತೃ ಗುರುಶಾಂತ ದೇವನೆ ? ಎಂಬ ಸಂದೇಹ ಹುಟ್ಟಿಸುತ್ತದೆ, ಬಹುಶಃ ಇದು ಅರ್ಥಪ್ರಮಾದದಿಂದ ಬರೆದ ಮಾತಾಗಿರಬಹುದು. ಆದಕ್ಕಾಗಿ ಬಹು ಸಂಖ್ಯೆ ಪ್ರತಿಯಲ್ಲಿಯ 'ಸೇರಿಸಿದ' ಎಂಬುದೇ ಯೋಗ್ಯಪಾಠವೆನ್ನಬೇಕು. ಇದಲ್ಲದೆ ೨ ನೆಯ ಉದ್ಧರಣೆಯು ಎಳಮಲೆಯ ಗುರುಶಾಂತದೇವರು 'ಸೇರಿಸಿದ' ಎಂದು ಸಂಯೋಜಕನನ್ನು ಸೂಚಿಸಿ, 'ಡಣಾಯಕರ ಕಂದ' ಎಂದು ನುಡಿದು ಕರ್ತೃವನ್ನೂ ಇನ್ನೂ ಸ್ಪಷ್ಟ ಪಡಿಸುತ್ತದೆ. ಇದಲ್ಲದೆ

೧. "ಡಣಾಯಕರ ಕಂದ ಸಮಾಪ್ತ ಮಂಗಳ ಮಹಾಶ್ರೀ" — ಅಂತ್ಯ (ಹ.ಪ್ರ.ನಂ. ೭೯೧)

೨. "ಕೇಸಿರಾಜ ಡಣಾಯಕರು ನಿರೂಪಿಸಿದ ಮಂತ್ರಮಹತ್ವದ ಕಂದ" — ಪ್ರಾರಂಭ. (ಹ. ಪ್ರ. ನಂ. ೬೮೬)

೩. "ಕೇಶಿರಾಜ ಡಣಾಯಕರ ಕಂದ ಮಂಗಳಮಹಾಶ್ರೀ"–ಅಂತ್ಯ (ಹ. ಪ್ರ. ನಂ. ೧೨೦೪)

ಎಂಬ ಉದ್ಧರಣೆಗಳು ಕೇಶಿರಾಜನ ಕರ್ತೃತ್ವವನ್ನು ನಿಸ್ಸಂಸಯವಾಗಿ ಹೇಳುತ್ತವೆ. ಅದಕ್ಕಾಗಿ ಈ ಪದ್ಯಗಳ ರಚಕ ಕೇಶಿರಾಜನೆಂದೂ, ಸಂಯೋಜಕ ಎಳಮಲೆಯ ಗುರುಶಾಂತದೇವನೆಂದೂ ಒಪ್ಪಿಕೊಳ್ಳುವ ಮಾತಿನಲ್ಲಿ ಎರಡಿಲ್ಲ.

ಹೀಗೆ 'ಮಂತ್ರ ಮಹತ್ವದ ಕಂದ'ವನ್ನು (ಸಂಪಾದನೆಯು) ಎಳಮಲೆಯ ಗುರಶಾಂತದೇವರು ಸಂಯೋಜಿಸಿದರೆ, ಈ "ಲಿಂಗ ಸ್ತೋತ್ರದ ಕಂದ"-೨ವನ್ನು ಸಂಪಾದನೆಯ ಸಿದ್ಧವೀರೇಶ್ವರದೇವರು ಯೋಚಿಸಿದ್ದಾರೆ.

'ಲಿಂಗಸ್ತೋತ್ರದ ಕಂದ–೧' ರಲ್ಲಿ ವೀರಶೈವರ ಕೆಲವು ಸೂಚನೆಗಳಿವೆ. ಆದರೆ ಈ 'ಲಿಂಗಸ್ತೋತ್ರದ ಕಂದ–೨' ರಲ್ಲಿ ಈ ಸೂಚನೆಗಳು ಇನ್ನೂ ಅಧಿಕ ಪ್ರಮಾಣದಲ್ಲಿವೆ. ಈ ಮಾತಿಗೆ ಪದ್ಯ ೮,೧೧,೧೩ ೩.೨.೩೬.೪೦,೪೯,೫೦,೫೧,೬೬ ೧೧೭ ಗಳನ್ನು ಅವಲೋಕಿಸಬಹುದು. ಪದ್ಯ ೮೬ ರಲ್ಲಿ ಬರುವ

"ಅರಸಂ ಮಂಚಕ್ಕೇರಲ್ ಸಿರಿಯಕ್ಕಂ ಮಂಚವೇರದಿರ್ಪಳೆ"

ಎಂಬುದು ಮಾಂಗಾಯಕ್ಕನನ್ನು ಸೂಚಿಸುವಂತಿದೆ. ಬಸವಣ್ಣನವರು

ಅರಸರು ಮಂಚಕ್ಕೆ ಬರಿಸಿ ಎನ್ನ ಬೆರಸಿದ ಬಳಿಕ
ಆನಂಜುವಳೆ? ಆನು ಸಿರಿಯಕ್ಕನೇ.
ಪರುಷ ಮುಟ್ಟಿದಬಳಿಕ ಲೋಹವೆ ?
ಕೂಡಲ ಸಂಗಮದೇವ ಎನ್ನನೊಲ್ಲದಡಾನು ಬದುಕುವೆನೇ ?

ಎಂಬ ವಚನ (೭೩೮) ದಲ್ಲಿಯೂ ಈಕೆಯ ಉಲ್ಲೇಖ ಬರುತ್ತದೆ.

ಇನ್ನು ಸಾಹಿತ್ಯದ ದೃಷ್ಟಿಯಿಂದಲೂ ಈ ಕೆಲವು ಪದ್ಯಗಳು ಮುತ್ತಿನಂತಹ ಮುಕ್ತಕಗಳಾಗಿವೆ. ಒಟ್ಟುಕೃತಿಯ ಅಂತರಂಗದಲ್ಲಿ ಭಕ್ತಿ ನಿರ್ಭರತೆ ಜೀವಂತ ತೊರೆಯಾಗಿ ಪ್ರವಹಿಸಿದೆ.

ಹೀಗೆ ಈ 'ಲಿಂಗಸ್ತೋತ್ರದ ಕಂದ-೨' ವೀರಶೈವ ತತ್ವದ ಕೆಲವು ಸೂಚನೆ ಪ್ರಾಚೀನ ಶಿವಭಕ್ತರ ಉಲ್ಲೇಖ, ಸಾಹಿತ್ಯಕ ಗುಣಮಟ್ಟ ಇವುಗಳ ದೃಷ್ಟಿಯಿಂದ 'ಲಿಂಗಸ್ತೋತ್ರದ ಕಂದ-೧' ಕ್ಕಿಂತ ಮಿಗಿಲಾಗಿದೆ. □

# ಯೋಗಪರಂಪರೆಯ ಇತಿಹಾಸ

ಸಂಗನಬಸವದೇವರು, ಎಂ. ಎ.
ವಾರಾಣಸಿ

ಯೋಗವೆಂದರೇನು ? ಈ ಪ್ರಶ್ನೆಗೆ ಸರ್ವಸಮ್ಮತ ಉತ್ತರವನ್ನೀಯುವದು ಅಸಂಭವ. ನಮ್ಮ ಆಚಾರ್ಯರು ಯೋಗ ಶಬ್ದದ ವ್ಯಾಖ್ಯೆಯನ್ನು ನಾನಾ ಪ್ರಕಾರವಾಗಿ ಮಾಡಿದ್ದಾರೆ.[೧] ಭಾಷಾವಿಜ್ಞಾನಿಗಳ ಪ್ರಕಾರ ಭಾರತದ ಅತ್ಯಂತ ಪ್ರಾಚೀನಗ್ರಂಥವಾದ ಋಗ್ವೇದದಲ್ಲಿ ರಥಕ್ಕೆ ಹೂಡುವ ಪಶುಗಳ ಬಂಧನಕ್ಕೆ ಯೋಗ ವೆಂದು ಹೇಳಲಾಗಿದೆ. ಇದು ಯೋಗ ಶಬ್ದದ ಪ್ರಾಚೀನವಾದ ಅರ್ಥ. ಯದ್ಯಪಿ ಋಕ್‌ಸಂಹಿತೆಯ ಕೆಲವು ಕಡೆ ಯೋಗ, ಯೋಗಕ್ಷೇಮ ಶಬ್ದಗಳು ಬಂದಿವೆ. ಆದರೆ ಅವುಗಳ ಅರ್ಥ ಯೋಗಸೂತ್ರ, ಉಪನಿಷತ್ತು ಹಾಗೂ ಮಹಾಭಾರತಗಳಲ್ಲಿ ಕೊಡುವ ಅರ್ಥಕ್ಕಿಂತ ಅತ್ಯಂತ ಭಿನ್ನವಾಗಿದೆ.

ಪ್ರಾಚೀನ ವೈದಿಕಗ್ರಂಥಗಳಲ್ಲಿ ಯೋಗಶಬ್ದದ ಘನಿಷ್ಠ ಸಂಬಂಧವು ತಪಸ್ಸು, ಯಜ್ಞ, ಜಾದು, ತಂತ್ರ, ಮಂತ್ರ ಶಬ್ದಗಳ ಜೊತೆಗೆ ಇತ್ತೆಂದು ವೇದ್ಯವಾಗುತ್ತದೆ. ಇದಲ್ಲದೇ ಐತಿಹಾಸಿಕ ಯುಗದಲ್ಲಿ ತಪಸ್ಸಿನಿಂದ ಪ್ರಾಪ್ತವಾಗುವ ಶಕ್ತಿಗಳ ಮತ್ತು ಧ್ಯಾನದಿಂದ ಸಿದ್ಧಿಸಿದ ಸಿದ್ಧಿಗಳ ಅರ್ಥದಲ್ಲಿ ಯೋಗಶಬ್ದದ ಪ್ರಯೋಗವು ಕಂಡು ಬರುತ್ತದೆ.

ಹರಪ್ಪಾ ಮೊಹಂಜೋದಾರೊ ಸಂಸ್ಕೃತಿಯ ಸಮಯದಲ್ಲಿ ಯೋಗ ಮತ್ತು ಧ್ಯಾನ ಶಬ್ದಗಳ ಪ್ರಯೋಗದ ಬಗ್ಗೆ ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಆದರೆ ಆ ಕಾಲದಲ್ಲಿ ದೊರೆತ ಕೆಲವು ನಾಣ್ಯಗಳ ಮೇಲೆ ಮತ್ತು ಪಾಷಾಣಖಂಡಗಳ ಮೇಲೆ ಕೆತ್ತಿದ ಧ್ಯಾನಸ್ಥ ಪುರುಷರನ್ನು ತಪಸ್ವಿಗಳನ್ನು ನೋಡಬಹುದು. ಅತಃ ಯೋಗ ಪರಂಪರೆಯು ಐದುಸಾವಿರ ವರ್ಷಗಳ ಪೂರ್ವದಲ್ಲಿ ಊರ್ಜಿತಾವಸ್ಥೆಯಲ್ಲಿ ಇತ್ತೆಂದು ಖಚಿತವಾಗಿ ಹೇಳಬಹುದು.

---

೧. " ಯೋಗಶ್ಚಿತ್ತ ವೃತ್ತಿನಿರೋಧಃ " —ಯೋಗಸೂತ್ರ ೧-೨.
" ಯೋಗಃ ಕರ್ಮಸು ಕೌಶಲಮ್ " —ಭಗವದ್ಗೀತಾ ೨-೫೦.
" ಸಮತ್ವಂ ಯೋಗ ಉಚ್ಯತೆ " ,, ೨-೪೮.

ವೈದಿಕಮಧ್ಯಕಾಲವು ವೈದಿಕ ಮತ್ತು ಅವೈದಿಕ ಸಂಸ್ಕೃತಿಗಳ ಸಂಗಮ ಕಾಲವು. ಈ ಸಂಗಮದ ಪ್ರಭಾವವು ಜೈನ, ಬೌದ್ಧ, ಸಾಂಖ್ಯ, ಆಜೀವಿಕ ಮತ್ತು ಪ್ರಾಚೀನ ಉಪನಿಷತ್ತುಗಳ ಮೇಲೆ ಸ್ಪಷ್ಟವಾಗಿ ಗೋಚರವಾಗುತ್ತದೆ. ಮೋಕ್ಷೋಪಾಯ ವಾದ ಯೋಗಮಾರ್ಗದಲ್ಲಿ ಸರ್ವಜಾತೀಯ ಮುಮುಕ್ಷುಗಳಿಗೆ ಪ್ರವೇಶ ಸಿಗಬೇಕಾದರೆ ಈ ಎರಡೂ ಸಂಸ್ಕೃತಿಗಳ ಸಂಗಮದ (ಸಮ್ಮಿಶ್ರಣ) ಪರಿಣಾಮವೆಂದೇ ಹೇಳಬಹುದು. ಆದರೆ ಈ ಉದಾರತೆಯು ವೀರಶೈವ, ಜೈನ, ಬೌದ್ಧಧರ್ಮಗಳಲ್ಲಿ ಮೊದಲಿನಿಂದಲೂ ವಿದ್ಯಮಾನವಾಗಿತ್ತು. ಬ್ರಾಹ್ಮಣಪರಂಪರೆಯಲ್ಲಿ ಮಾತ್ರ ಈ ಪ್ರಗತಿಶೀಲ ವಿಚಾರವು ಕಾಲಾಂತರದಲ್ಲಿ ಪ್ರವೇಶ ಮಾಡಿತು.

ಐತಿಹಾಸಿಕ ಹಾಗೂ ಸೈದ್ಧಾಂತಿಕ ದೃಷ್ಟಿಯಿಂದ ಯೋಗವು ಶ್ರಮಣಯೋಗ ಬ್ರಾಹ್ಮಣಯೋಗವೆಂದು ಎರಡು ಪ್ರಕಾರ. ಶ್ರಮಣಯೋಗವು ಅನೀಶ್ವರವಾದಿ ಯಾದರೆ ಬ್ರಾಹ್ಮಣಯೋಗವು ಬ್ರಹ್ಮಾತ್ಮವಾದಿಯು, ಈಶ್ವರವಾದಿಯು ಮತ್ತು ಪುರುಷವಾದಿಯೂ ಆಗಿದೆ. ವೈದಿಕಮಧ್ಯಕಾಲದಲ್ಲಿ ಸಾಂಖ್ಯ ಮತ್ತು ಯೋಗದ ಮೇಲೆ ಸೇಶ್ವರಿವಾಖ್ಯೆಗಳ ರಚನೆಯ ನಂತರ ಇವೆರಡುಗಳ ಗಣನೆಯು ಷಡ್‌ದರ್ಶನ ಗಳಲ್ಲಿ ಪ್ರಾರಂಭವಾಯಿತು.

ಮಹಾಭಾರತದ ಶಾಂತಿಪರ್ವದಲ್ಲಿ ಸಂಕಲಿತ ಯೋಗ ವಿಷಯಕ ಸಾಮಗ್ರಿಯು ಪ್ರಾಚೀನಕಾಲದಿಂದ ಕೇಳುತ್ತ ಬಂದಿರುವ ವಿವಿಧ ಕಥನಗಳನ್ನು ಆಶ್ರಯಿಸಿದೆ. ಕಾರಣ ಕ್ರಿ.ಶ. ಪೂರ್ವ ೬ ಅಥವಾ ೫ ನೆಯ ಶತಮಾನದ ಯೋಗಪರಂಪರೆಯನ್ನು ತಿಳಿಯ ಬೇಕಾದರೆ ಪ್ರಾಚೀನ ಪಾಲೀಸೂತ್ರಗಳನ್ನು ಉಪನಿಷತ್ತುಗಳನ್ನು ಹಾಗೂ ಜೈನಸೂತ್ರ ಗಳನ್ನು ಆಶ್ರಯಿಸಬೇಕು. ಪ್ರಾಚೀನ ಪಾಲೀಸಾಹಿತ್ಯವು ಮೂರು ಭಾಗಗಳಲ್ಲಿ ವಿಭಕ್ತ ವಾಗಿದೆ. ಆ ಮೂರು ಭಾಗಗಳು ವಿನಯಪಿಟಕ, ಸುತ್ತಪಿಟಕ, ಅಭಿಧಮ್ಮ ಪಿಟಕಗಳೆಂದು ಕರೆಯಲ್ಪಡುತ್ತಿವೆ.[೧] ಅಶೋಕನ ಸಮಯದಲ್ಲಿ ರಚಿತ ಸುತ್ತಪಿಟಕದ ಖುದ್ದಕನಿಕಾಯಗಳಲ್ಲಿ ಬೌದ್ಧ ಯೋಗ ವಿಷಯಕ ಸಾಮಗ್ರಿಯು ಪರ್ಯಾಪ್ತವಾಗಿ ದೊರೆಯುತ್ತದೆ. ಭಗವಾನ ಗೌತಮಬುದ್ಧನು ಪೂರ್ವಾಶ್ರಮದಲ್ಲಿ ಅತ್ಯಂತ ಕಠೋರವಾದ ಯೋಗಸಾಧನೆಯನ್ನು ಮಾಡಿದನೆಂದು ಪ್ರತೀತಿ ಇದೆ. ಇಷ್ಟೆ ಅಲ್ಲ, ಆತನು ಕೈಕೊಂಡ ಅತಿ ಕಟುತರ ಯೋಗದ್ಯೋತಕವೂ ಕೇವಲ ಅಸ್ಥಿಪಂಜರವೂ ಆದ ಆತನ ಶಿಲಾಪ್ರತಿಮೆಗಳು ಇನ್ನೂ ಅನೇಕ ಕಡೆಗೆ ದೊರೆಯುವವು. ಆ ಕಾಲದಲ್ಲಿ ಆವನು ಸರ್ವಶ್ರೇಷ್ಠಯೋಗಿ ಮತ್ತು ಧ್ಯಾನಮಾರ್ಗದ ಸರ್ವಶ್ರೇಷ್ಠ ಉಪದೇಶಕ ನೆಂದು ಪಾಲಿಸಾಹಿತ್ಯವು ಘೋಷಿಸುತ್ತದೆ.[೨]

---

೧. "मूल पालि साहित्य तीन भागो म विभक्त हैं जिन्हें पिटक कहा गया है विनयपिटक, सुत्तपिटक और अभिधम्मपिटक" । हिन्दीविश्वकोश खण्ड ६.

೨ झायि चेव सो भवं गोतमो अघोसि झानसीली च ।
लवं च पनसो भवं गोतमो झानं वण्णेसी " ॥

ನಿರ್ವಾಣಧಾತು(ಧರ್ಮಧಾತು)ವಿನ ಪ್ರಾಪ್ತಿಯೇ ಬೌದ್ಧಯೋಗದ ಪರಮೋದ್ದೇಶ. ಈ ಯೋಗದಲ್ಲಿ ಸ್ಮೃತಿ, ಧ್ಯಾನ ಸಮಾಧಿ. ಶಮಥ, ವಿಪಶ್ಯನಾ ಮೊದಲಾದವುಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡಲಾಗಿದೆ. ಬೌದ್ಧಯೋಗದ ಅಷ್ಟಾಂಗಗಳಲ್ಲಿ೪ ಸಮ್ಯಕ್ ದೃಷ್ಟಿಗೆ ಪ್ರಥಮಸ್ಥಾನವಿದೆ, ಹಾಗೂ ಬೌದ್ಧರ ದಾರ್ಶನಿಕ ಪಕ್ಷವು ಸಮಾವೇಶಗೊಂಡಿದೆ. ಬೌದ್ಧರ ಅನೇಕ ಗ್ರಂಥಗಳಲ್ಲಿ ನಾನಾ ಪ್ರಕಾರದ ಧ್ಯಾನ-ಸಮಾಧಿಗಳ ವರ್ಣನೆಯು ಮತ್ತು ಅನೇಕ ಯೋಗಿಗಳ ಉಲ್ಲೇಖವು ಆ ಕಾಲದ ಭವ್ಯಯೋಗಪರಂಪರೆಯನ್ನು ಸೂಚಿಸುತ್ತದೆ.

ಯೋಗಪರಂಪರೆಯ ಇತಿಹಾಸದಲ್ಲಿ ಪತಂಜಲಿ ಮಹರ್ಷಿಗಳಿಗೆ ವಿಶಿಷ್ಟ ಸ್ಥಾನವಿದೆ. ಅವನ ಕಾಲ ೩ನೆಯ ಶತಮಾನ, ಅವನ ಕಾಲದಲ್ಲಿಯೇ ಯೋಗವು ವ್ಯಾವಹಾರಿಕ ಮಾರ್ಗದಿಂದ ಐಶ್ವರೀಯ ದಾರ್ಶನಿಕ ಸ್ವರೂಪವನ್ನು ಪೈದಾಳಿತು. "ಯೋಗಸೂತ್ರ"ದಲ್ಲಿ ಉಪನಿಷದ್‌ವೇದಾಂತ, ಸಾಂಖ್ಯ ಮತ್ತು ಪ್ರಾಚೀನಯೋಗ ಪದ್ಧತಿಯ ಸಮನ್ವಿತ ರೂಪವನ್ನು ನಿರೂಪಿಸಲು ಪ್ರಯಾಸಮಾಡಲಾಯಿತು. 'ಯೋಗ ಶ್ಚಿತ್ತವೃತ್ತಿನಿರೋಧಃ' ವೆಂಬ ವ್ಯಾಖ್ಯೆಯು ಸರ್ವತ್ರ ಪ್ರಸಾರವಾಯಿತು.

ಪಾತಂಜಲಯೋಗದ ಪರಮಲಕ್ಷ್ಯವು ವಿವೇಕಖ್ಯಾತಿ. ಭೇದಜ್ಞಾನವೇ ವಿವೇಕ ಖ್ಯಾತಿ. ಇದರ ಪ್ರಾಪ್ತಿಗಾಗಿ ಏಕಾಗ್ರಭೂಮಿಯ೫ ಅನುಸಂಧಾನ ಪರಮಾವಶ್ಯಕ ವಾಗಿದೆ. ಸಾಧಕನು ಏಕಾಗ್ರಭೂಮಿಯ ಅನುಸಂಧಾನದಿಂದ ನಿರೋಧಭೂಮಿಯಲ್ಲಿ ಪ್ರವೇಶಮಾಡುವನು. ಅಲ್ಲಿ ಅವನಿಗೆ ಪ್ರಕೃತಿ ಪುರುಷರ ವಿಯೋಗಾವಸ್ಥೆಯ ಅನುಭವವು ಆಗುವದು. ಈ ಅನುಭವವು ನಿರ್ಮಲ ಪುರುಷನ ಅನುಭವವು ಇದುವೇ ಸಮಾಧಿ೬ ಪಾತಂಜಲ ಯೋಗಾನುಸಂಧಾನದಲ್ಲಿ ವ್ಯಷ್ಟಿಗತ ಮತ್ತು ಸಮಷ್ಟಿಗತ-ರೂಪದ ಅಸ್ತಿತ್ವಕ್ಕೆ ಸ್ಥಾನವಿಲ್ಲ. ಕಾರಣ ಪ್ರಭುದೇವರು ಇದಕ್ಕೆ ಅಳಿದುಕೊಡುವ ಯೋಗವೆಂದು ಕರೆದಿದ್ದಾರೆ.

ಶೈವಶಾಸ್ತ್ರಗಳು ಮೊದಲಿನಿಂದಲೂ ಯೋಗಕ್ಕೆ ಅತಿ ಮಹತ್ವದ ಸ್ಥಾನವನ್ನು ಕೊಟ್ಟಿವೆ. ಪಾಶುಪತಸೂತ್ರದಲ್ಲಿ ಯೋಗವು ಐದು ತತ್ವಗಳಲ್ಲಿ ಒಂದಾಗಿದೆ ಎಂದು ಉಕ್ತವಾಗಿದೆ. ಶೈವರಿಗೆ ಪ್ರಮಾಣ ಗ್ರಂಥಗಳಾದ ಆಗಮಗಳಲ್ಲಿ ಪ್ರತಿಪಾದಿತವಾದ ಕ್ರಿಯಾ, ಚರ್ಯಾ, ಯೋಗ, ಜ್ಞಾನಗಳೆಂಬ ನಾಲ್ಕು ಪಾದಗಳಲ್ಲಿ ಯೋಗದ ಸ್ಥಾನವು ಜ್ಞಾನದ ನಂತರ ಇರುತ್ತದೆ. ಇದರಿಂದ ಆಗಮ ವಾಙ್ಮಯದಲ್ಲಿ ಯೋಗಕ್ಕಿದ್ದ

---

೪. "ಸಮ್ಯಕ್ ದೃಷ್ಟಿ, ಸಮ್ಯಕ್ ಸಂಕಲ್ಪ, ಸಮ್ಯಕ್ ವಾಕ್, ಸಮ್ಯಕ್ ಕರ್ಮಾಂತ, ಸಮ್ಯಗ್ ಜೀವನ, ಸಮ್ಯಗ್ ವ್ಯಾಯಾಮ, ಸಮ್ಯಕ್ ಸ್ಮೃತಿ, ಸಮ್ಯಕ್ ಸಮಾಧಿ ಯೊಷ್ಟಾಂಗಾನಿ"

೫. ಪಾತಂಜಲಿಯ ಪ್ರಕಾರ ಮೂಢ, ಕ್ಷಿಪ್ತ, ವಿಕ್ಷಿಪ್ತ, ಏಕಾಗ್ರ, ನಿರೋಧ ಎಂದು ಚಿತ್ತದ ಐದು ಅವಸ್ಥೆಗಳು.

೬. ಪಾತಂಜಲಿಯೋಗಸೂತ್ರವನ್ನು ನೋಡಿರಿ.

ಮಹತ್ವವು ಸ್ಪಷ್ಟವಾಗುವದು. ಸುಪ್ರಭೇದಾಗಮ ಮತ್ತು ಈಶಾನ ಶಿವಯೋಗಿಗಳ "ಈಶಾನ ಶಿವ ಗುರುದೇವ ಪದ್ಧತಿ "ಗಳಲ್ಲಿ ವರ್ಣಿತವಾದ ಯೋಗವು ಯೋಗ ದರ್ಶನದಿಂದ ವಿಶೇಷವಾಗಿ ಭಿನ್ನವಾಗಿಲ್ಲ. ಆದರೂ ಕಿಂಚಿತ್ ವ್ಯತ್ಯಾಸ ಇಲ್ಲದೇ ಇಲ್ಲ. ಈಶ್ವರನ ಪ್ರತಿಬಿಂಬವನ್ನು ಮುಂದಿಟ್ಟುಕೊಂಡು ಅದರ ಮೇಲೆ ದೃಷ್ಟಿಯನ್ನು ಚೆಲ್ಲಿ, ಅದರಲ್ಲಿಯೇ ಮನಸ್ಸಿನ ವ್ಯಾಪಾರವನ್ನೆಲ್ಲ ಕೇಂದ್ರೀಕರಿಸಿ, ಧ್ಯಾನವನ್ನು ಬಲಿಸಿ ಸಮಾಧಿಯನ್ನು ಸಾಧಿಸುವ ಮಾರ್ಗಕ್ಕೆ ಶೈವಾಗಮಗಳು ಪ್ರಾಮುಖ್ಯತೆಯನ್ನು ಕೊಟ್ಟಂತೆ ತೋರುತ್ತದೆ. ರಾಜಯೋಗದ ತತ್ವಗಳು ಶೈವಾಗಮಗಳ ಯೋಗದಲ್ಲಿ ಅಡಕವಾಗಿವೆಯಾದರೂ ಮೂರ್ತಿಯನ್ನು ಮುಂದಿಟ್ಟುಕೊಂಡು ಧ್ಯಾನಿಸುವದೊಂದು ಅದರ ವೈಶಿಷ್ಟ್ಯ.

ಶಿವಯೋಗ ಪ್ರದೀಪಕಾರರು ಯೋಗವನ್ನು ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ ಶಿವಯೋಗವೆಂದು ಐದು ವಿಧವಾಗಿ ಹೇಳುವರು. ಓಂಕಾರ ಮೊದಲಾದ ಮಂತ್ರಗಳನ್ನು ಜಪಿಸುವವರು ಮಂತ್ರಯೋಗಿಗಳೆಂದೂ,[೭] ಮನೋಮಾರುತನೊಡನೆ ಕೂಡುವ ಚಿತ್ತವನ್ನು ಆತ್ಮಧ್ಯೇಯದಲ್ಲಾಗಲಿ ಅಥವಾ ನಾದದಲ್ಲಾಗಲಿ ತಲ್ಲೀನವನ್ನಾಗಿ ಮಾಡುವವರು ಲಯಯೋಗಿಗಳೆಂದೂ,[೮] ಅಷ್ಟಾಂಗ ಮಾರ್ಗಗಳಿಂದಲೂ ಮುದ್ರಾಕರಣ ಬಂಧಗಳಿಂದಲೂ ಅಥವಾ ಕುಂಭಕದಿಂದಲೂ ವಾಯುವನ್ನು ಸ್ವಾಧೀನಪಡಿಸಿಕೊಂಡವರು ಹಠಯೋಗಿಗಳೆಂದೂ,[೯] ಮನೋವೃತ್ತಿಯಿಲ್ಲದವರೂ, ಜ್ಞಾನದಿಂದ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದವರೂ ರಾಜ-ಯೋಗಿಗಳೆಂದೂ,[೧೦] ಶಿವಜ್ಞಾನ, ಶಿವಭಕ್ತಿ ಮತ್ತು ಶಿವಧ್ಯಾನದಿಂದ ಕೂಡಿದ ಶಿವಾರ್ಚನೆಯನ್ನು ಮಾಡುವವರು ಶಿವಯೋಗಿಗಳೆಂದೂ ಚನ್ನಸದಾಶಿವಯೋಗೀಂದ್ರರು ಹೇಳುವರು. ಇವೆಲ್ಲವುಗಳಲ್ಲಿ ಶಿವಯೋಗವೇ ಮಿಗಿಲಾದುದು. ಯದ್ಯಪಿ ರಾಜ-ಯೋಗಕ್ಕೂ ಶಿವಯೋಗಕ್ಕೂ, ನಿಜವಾಗಿ ಭೇದವಿಲ್ಲವೆಂದು ಸಾಧಕರ ಜ್ಞಾನಶಕ್ತಿಯ ಬೆಳವಣಿಗೆಯ ಸಲುವಾಗಿ ಭೇದವು ಹೇಳಲ್ಪಟ್ಟಿದೆ ಎಂದು ಶಿವಯೋಗ ಪ್ರದೀಪಕಾರ

---

೭. 'ಏಕಾಕ್ಷರಂ ದ್ವ್ಯಕ್ಷರಂ ವಾಷಡಕ್ಷರಮಥಾಪಿವಾ ।
ಅಷ್ಟಾಕ್ಷರಂವಾಮೋಕ್ಷಾಯ ಮಂತ್ರಯೋಗೀ ಜಪೇತ್‌ಸದಾ ಶಿ.ಪ್ರ. ೧-೫

೮. ಯಸ್ಯಚಿತ್ತಂ ನಿಜಧ್ಯೇಯ ಮನಸಾ ಮರುತಾ ಸಹ ।
ಲೀನಂಭವತಿ ನಾದೇವಾ ಲಯಯೋಗೀ ಸಏವಹಿ ‖ ಶಿ.ಪ್ರ. ೧-೬

೯. ಭವೇದಷ್ಟಾಂಗ ಮಾರ್ಗೇಣ ಮುದ್ರಾಕರಣ ಬಂಧನೈಃ ।
ತಥಾ ಕೇವಲ ಕುಂಭೆವಾ ಹಠಯೋಗಿ ವಶಾನಿಲಃ ‖ ಶಿ.ಪ್ರ. ೧-೭

೧೦. ತ್ರಿಷುಲಕ್ಷ್ಯೇಷು ಯೋ ಬ್ರಹ್ಮ ಸಾಕ್ಷಾತ್ಕಾರಂ ಗಮಿಷ್ಯತಿ
ಜ್ಞಾನೇವಾಥ ಮನೋವೃತ್ತಿರಹಿತೊ ರಾಜಯೋಗವಿತ್ ‖ ಶಿ.ಪ್ರ. ೧-೮

ಮತ.೧೧ ಅವರೆ ಪ್ರಭುದೇವರು ಕೆಳಗಿನ ವಚನದಿಂದ ಎರಡೂ ಯೋಗಗಳಲ್ಲಿ ಮಹದಂತರವಿದೆಯೆಂದು ವ್ಯಕ್ತವಾಗದೇ ಇರಲಾರದು,

" ಅಷ್ಟಾಂಗಯೋಗದಲ್ಲಿ ಯಮನಿಯಮಾಸನ ಪ್ರಾಣಾಯಾಮ
ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿಯೆಂದು ಎರಡು
ಯೋಗ ಉಂಟು. ಅಲ್ಲಿ ಅಳಿದು ಕೂಡುವದೊಂದು
ಯೋಗ. ಅಳಿಯದೇ ಕೂಡುವದೊಂದು ಯೋಗ. ಈ
ಎರಡೂ ಯೋಗದೊಳಗೆ ಅಳಿಯದೇ ಕೂಡುವ
ಯೋಗವರಿಪು ಕಾಣಾ ಗುಹೇಶ್ವರಾ ''

ಇಲ್ಲಿ ಅಳಿದುಕೂಡುವ ಯೋಗ ಮತ್ತು ಉಳಿದು ಕೂಡುವ ಯೋಗದ ಬಗ್ಗೆ ಸಂಕ್ಷಿಪ್ತವಾಗಿ ವಿವೇಚಿಸೋಣ. ಪತಂಜಲಿಯು ರಾಜಯೋಗವೇ ಅಳಿದು ಕೂಡುವ ಯೋಗ. ಅಳಿದು ಕೂಡುವ ಯೋಗದಲ್ಲಿ ಬ್ರಹ್ಮಸಾಕ್ಷಾತ್ಕಾರವಾದ ನಂತರ ಜೀವದ ಅಸ್ತಿತ್ವವೇ ಉಳಿಯಲಾರದು. ಅರ್ಥಾತ್ ಮುಕ್ತಾವಸ್ಥೆಯಲ್ಲಿ ಜೀವನಿಗೆ ತನ್ನ ಸ್ವರೂಪದ ಬೋಧವು ಆಗಲಾರದು. ತನ್ನ ಸ್ವರೂಪದ ಬೋಧವಿಲ್ಲದ ಪರಬ್ರಹ್ಮ ಸಾಕ್ಷಾತ್ಕಾರ ಸಾಧನವಾದ ರಾಜಯೋಗವು- ಸರ್ವಶ್ರೇಷ್ಠಯೋಗವು ಆಗಬಹುದೆ ! ಕಾರಣ ಅಲ್ಲಮಪ್ರಭುದೇವರು ಈ ಯೋಗವನ್ನು ಖಂಡಿಸಿದ್ದಾರೆ.

ಉಳಿದು ಕೂಡುವ ಯೋಗವೇ ಶಿವಯೋಗ. ಶಿವಯೋಗದಲ್ಲಿ ಅಂಗನಿಗೆ ತನ್ನ ಸ್ವರೂಪದ ಬೋಧವು ಇರುತ್ತದೆ. ಕಾರಣ ಪ್ರಭುದೇವರು ಇದಕ್ಕೆ ಉಳಿದುಕೂಡುವ ಯೋಗವೆಂದು ಕರೆದಿದ್ದಾರೆ, ಶಿವಯೋಗದಲ್ಲಿ ಸಾಮರಸ್ಯಕ್ಕೆ ಅತಿಮಹತ್ವವಿದೆ. ಸಮಾನ ಅಸ್ತಿತ್ವಗಳಾದ ಎರಡರ (ಅಂಗ-ಲಿಂಗ) ಹೊಂದಾಣಿಕೆಯೇ ಸಾಮರಸ್ಯ. ಸಾಮರಸ್ಯವು ಭಾವಗತ ಸಾಮರಸ್ಯ, ಜ್ಞಾನಗತ ಸಾಮರಸ್ಯ. ಸ್ವರೂಪಗತ ಸಾಮರಸ್ಯ ವೆಂದು ಮೂರು ಪ್ರಕಾರವಾಗಿವೆ. ಹಲವಾರು ತಾಂತ್ರಿಕಯೋಗಗಳು ಜ್ಞಾನಗತ ಮತ್ತು ಭಾವಗತ ಸಾಮರಸ್ಯದಲ್ಲಿ ಇತಿಶ್ರೀಯನ್ನು ಹೊಂದಿದರೆ ಕೆಲವು ಶೈವಯೋಗ ಗಳು ಸ್ವರೂಪಗತ ಸಾಮರಸ್ಯದಲ್ಲಿ ಮುಕ್ತಾಯಗೊಳ್ಳುತ್ತವೆ. ಈ ಎಲ್ಲ ಯೋಗಗಳು ಅಪೂರ್ಣಗಳಾಗಿವೆ. ಉಪರೋಕ್ತ ಮೂರು ಪ್ರಕಾರದ ಸಾಮರಸ್ಯಗಳು ಶಿವಯೋಗ ದಲ್ಲಿ ಪ್ರಾಪ್ತವಾಗುತ್ತವೆ. ಈ ತ್ರಿವೇಣಿ ಸಂಗಮವು ಶಿವಯೋಗವನ್ನು ಬಿಟ್ಟು ಇನ್ನುಳಿದ ಯಾವ ಯೋಗದಲ್ಲಿಯೂ ಆಗಲು ಸಾಧ್ಯವಿಲ್ಲ. ಜೀವಸ್ವರೂಪದ ಕೇಂದ್ರಬಿಂದುವಿ ನಿಂದ ಸತ್ಯಾನ್ವೇಷಣ ಪ್ರಾರಂಭವಾಗಿ ಪುನಃ ಅದೇ ಬಿಂದುವಿನಲ್ಲಿ ಸಮಸ್ತಸ್ವರೂಪ ವನ್ನು ಕಾಣುವದೇ ಪೂರ್ಣತತ್ವವೆನಿಸಿಕೊಳ್ಳುತ್ತದೆ, ಅಂಗಭಾವದಿಂದ ಲಿಂಗದ ಕಲೆ ಗಳನ್ನು ಭಕ್ತಗಳನ್ನು ಅಳವಡಿಸಿಕೊಂಡು ಅಂಗಗತಸ್ವರೂಪವನ್ನೇ ಲಿಂಗಗಳಸ್ವರೂಪವೆಂದು ಭಾವಿಸುವುದೇ ಪೂರ್ಣತ್ವ. ಇದುವೇ ಶಿವಯೋಗ ಇದುವೇ ಪರಮಯೋಗ.

---

೧೧. ನಹ್ಯೇಪಶ್ಶಿವಯೋಗಸ್ಯ ರಾಜಯೋಗಸ್ಯ ತತ್ವತಃ ।
ಶಿವಾರ್ಥಿನಾಂ ತಥಾಪ್ಯೇವ ಮುಕ್ತ್ಯೋ ಬುದ್ಧೇಃ ಪ್ರವೃತ್ತಯೆ ॥ ಶಿ. ಪ್ರ ೧-೧೩

ಶಿವಯೋಗದ ಪ್ರಾಚೀನತೆಯ ಬಗ್ಗೆ ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಆಗಮ ವಾಙ್ಮಯದಲ್ಲಿ ಶಿವಯೋಗ ಶಬ್ದದ ಪ್ರಯೋಗವು ಕಂಡುಬರುತ್ತದೆ. ಪ್ರಾಚೀನ ಶೈವಾಚಾರ್ಯರು ತಮ್ಮನ್ನು ಶಿವಯೋಗಿಗಳೆಂದು ಕರೆದುಕೊಂಡಿದ್ದಾರೆ. ಸೋಮಾನಂದನು ನಿರಂತರ ಶಿವಸಮಾವೇಶ ಭಾವದಲ್ಲಿ ಇರುವೆನೆಂದು ಹೇಳಿಕೊಂಡಿರುತ್ತಾನೆ. ಹಾಗೆ ಶಿವಯೋಗವು ಬಹುಪ್ರಾಚೀನದ ವರೆಗೆ ಹೋಗುತ್ತದೆ. ಆದರೆ ಮೊಟ್ಟಮೊದಲು ಅದರ ನಿಶ್ಚಿತ ರೂಪವನ್ನು ಸಿದ್ಧಾಂತಶಿಖಾಮಣಿ ಮತ್ತು ಶಿವಯೋಗ ಪ್ರದೀಪಿಕೆಯಲ್ಲಿ ಕಾಣುತ್ತೇವೆ.

ಯೋಗ ಪರಂಪರೆಯಬಗ್ಗೆ ಸಂಕ್ಷಿಪ್ತವಾಗಿ ನಿರೂಪಿಸಲಾಯಿತು. ಇಂದು ಶಾಂತಮಯ ಜೀವನಕ್ಕಾಗಿ ಯೋಗವು ಅತ್ಯಾವಶ್ಯಕವಾಗಿದೆ. ಕೇವಲ ಭೌತಿಕ ಉನ್ನತಿಯಿಂದ ಜೀವನದಲ್ಲಿ ಪರಮಶಾಂತಿಯು ಸಿಗಲಾರದು. ಕಾರಣ ಯೋಗ ಕಲಿಸುವ ಶಾಲೆಗಳನ್ನು ನಮ್ಮ ಸಮಾಜದ ಧರ್ಮಗುರುಗಳು ಸ್ಥಾಪಿಸಬೇಕಾಗಿ ಸವಿನಯಪ್ರಾರ್ಥನೆ. □

# ರಾಜಯೋಗಿಗಳ ಭಾವೈಕ್ಯೋಪದೇಶ

ಪ್ರಿ. ಬಿ. ಎಚ್. ಶ್ರೀಧರ

ಸಾಹಿತ್ಯವು ಶಾಸ್ತ್ರವಲ್ಲ, ವಿಜ್ಞಾನವಲ್ಲ, ವಿಮರ್ಶೆಯಲ್ಲ ಎಂಬುದು ಸುಪ್ರಸಿದ್ಧ. ಆದುದರಿಂದ ಅದು ಮಾತ್ರ ತನ್ನ ಕಲಾನುಗುಣದಿಂದ ಭಾವೈಕ್ಯವನ್ನುಂಟು ಮಾಡ ಬಲ್ಲದು. ಭಾವೈಕ್ಯವಿಲ್ಲದ ಸಾಹಿತ್ಯಕ್ಕೆ ಕಲಾಗುಣವಿಲ್ಲ. ಕಲೆಯು ಭಾಮಹ ಹೇಳಿದಂತೆ ಸಂಕಲನ ಪ್ರಜ್ಞೆ, ಸಹಿತತೆಯ ಪ್ರಜ್ಞೆ.

Harmony ಸಾಮಶ್ರುತ್ಯವು ಒಂದು ಸತ್ಕಲಾಕೃತಿಯಲ್ಲಿರುವ ಸೌಂದರ್ಯದ ಆತ್ಮ. ಭಾವಗಳ ಸಮಶ್ರುತಿ, ಸಂಮೇಳ, ಸಾಂಗತ್ಯ, ಸುಸಂಬಂಧ ಇಲ್ಲದ್ದು ಸಾಹಿತ್ಯವೆನ್ನಿಸದು. ಎಷ್ಟೇ Diversity ವೈವಿಧ್ಯವಿದ್ದರೂ ಅದನ್ನು "ಸೂತ್ರೇ ಮಣಿಗಣಾ ಇವ" ಸಮುಚಿತ ಸಮಶ್ರುತಿಯ ರೂಪಕ್ಕೆ ತಿರುಗಿಸಿಡುವವನೇ ನಿಜವಾದ ಸಾಹಿತಿ ; ಅಂಥವ ನಲ್ಲದವನು ಸಾಹಿತಿಯಲ್ಲ.

"ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ, ಕಣ್ಣಿಗೂ ಕಣ್ಣಾಗಿ ಒಳಗಿಹುದು" ಎಂದ ವರಕವಿಸೂಕ್ತವು ಸತ್ಯವಾಕ್. ಅಂತಃಶುಚಿ ಅಥವಾ ಅಂತರಂಗ ನೈರ್ಮಲ್ಯವಿಲ್ಲದವನು ಆಷಾಢಭೂತಿ ಸಾಹಿತಿ ; ಅದು ಅರಿಷಡ್ವರ್ಗಮುಕ್ತತೆ. ಅರಿಷಡ್ವರ್ಗವು ಅಂತರಂಗದ ಮಲ. ಅದರಿಂದ ಮುಕ್ತವಾದ ಅಂತರಂಗವೇ ನಿರ್ಮಲ. ಬಾಹ್ಯ ಸೌಂದರ್ಯವು ಬಾಹ್ಯ ಶುಚಿಯಷ್ಟನ್ನು ಪ್ರತಿಫಲಿಸುತ್ತಿದೆ. ಅಂತಃಶುಚಿಯನ್ನಲ್ಲ, ಅಂತಃಶುಚಿಯನ್ನು ತನ್ನ ಇಡಿ ತಾತ್ಪರ್ಯವನ್ನಾಗಿ ಧ್ವನಿಸುವ ಕಾವ್ಯವೇ ಮಹಾಕಾವ್ಯ, ಮೇರುಕೃತಿ. ರಾಮಾ ಯಣಕ್ಕೆ ಆ ಪಟ್ಟ ಬಂದದ್ದು ಈ ಕಾರಣದಿಂದಲೇ.

ಅಂತಃಶುಚಿಯು ಶುಭ, ಶಿವ, ಮಂಗಳ. ಅದನ್ನು ಓದುಗನಲ್ಲಿ ಆತ್ಯಂತಿಕವಾಗಿ ಅಭಿವ್ಯಕ್ತಗೊಳಿಸಿದರೆ ಮಾತ್ರ ಸಾಹಿತ್ಯವು ಸಫಲವಾಗುತ್ತದೆ. ಹಾಗಲ್ಲದೆ ಅವನಲ್ಲಿ ಆಂತರಿಕ ಅಶುಚಿಭಾವವನ್ನು ಪ್ರೇರಿಸುವ ಕೃತಿಯು ಸುಕೃತಿಯಲ್ಲ. ದುಷ್ಕೃತಿಗಳ ಶ್ರವಣ, ಪಠನ, ದರ್ಶನಗಳು ದುಃಶಿಕ್ಷಣ ಸಾಧನಗಳು. ಅವುಗಳಿಂದ ಮತ್ತು ತಮಗಿಂತ ಹಿರಿಯರ ದುರ್ವರ್ತನೆಗಳು ಆಪಂಡಿತವಾಗುವದನ್ನು ಕಂಡದ್ದರಿಂದ ವಿದ್ಯಾರ್ಥಿ ಗಳಲ್ಲಿಂದು ಅಸಾಮಾಜಿಕ ಭಾವನೆಯು ಕ್ಷುಬ್ಧವಾಗಿ ಎದ್ದಿದೆ. ಈ ಕಾರಣದ್ವಯವನ್ನು

ಪರಿಹರಿಸಲು ಪ್ರಯತ್ನಿಸದೆ ಮಿಕ್ಕ ವಿವರಗಳ ಬಗೆಗೆ ಭಾಷಣೋಪಭಾಷಣಗಳನ್ನು ಮಾಡುತ್ತ ತಿರುಗಿದರೆ "ಹುತ್ತ ಬಡಿದರೆ ಹಾವು ಸಾವುದೆ ?" ಎಂದು ಕೇಳಬೇಕಾಗುತ್ತದೆ.

ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳ ಮೂಲಕ ಪರರ ಆಚಾರ, ವಿಚಾರ, ಉಚ್ಚಾರಗಳನ್ನು ಅಪಾರ್ಥ ಮಾಡಿ ವಿವರಿಸುವ ವಾಙ್ಮಯ ಪ್ರಚಾರವು ಅಹಿಂಸೆ, ಅಸ್ತೇಯ, ಸತ್ಯ, ಶೌಚ, ಇಂದ್ರಿಯನಿಗ್ರಹಗಳೆಂಬ ಭಾವೈಕ್ಯ ಕಾರಕವಾದ ಮಹಾಧರ್ಮಗಳಿಗೆ ವಿರುದ್ಧವಾದುದು ಎಂಬುದನ್ನು ವಿದ್ಯಾವಂತರು ಚೆನ್ನಾಗಿ ಮನನ ಮಾಡಬೇಕಾದ ಕಾಲವಿದು. ನಾಮ – ರೂಪಗಳಿಂದಾದ ಈ ಸೃಷ್ಟಿಯ ವಿವಿಧ ಪದಾರ್ಥಗಳಲ್ಲಿ ಸಾರಸ್ವರೂಪದ ಐಕಾತ್ಮ್ಯವನ್ನು ಕಡೆಗಣಿಸಿ ಅಲ್ಪಸಾರದ ಆ ಈ ನಾಮವನ್ನೋ ರೂಪವನ್ನೋ ಕೆಲ ಕೆಲವರು ವಿವಿಧ ಗುಂಪುಗಳಾಗಿ ನೆರೆದು ಪ್ರತ್ಯೇಕವಾಗಿ ಅದಿದರ ಹಿಂಬಾಲಕರಾಗಿ ಎತ್ತಿಹಿಡಿದು ಇತರರಿಗೆ ನೋವನ್ನುಂಟು ಮಾಡುವ ಅಪರಾಜಕೀಯ ಕಲಹಕಂಟಕ ಪ್ರವೃತ್ತಿಯಿಂದ ಸಾಹಿತ್ಯ ಕ್ಷೇತ್ರವನ್ನು ಹೊಲೆಗೆಡಿಸುವ ಸ್ವಚ್ಛಂಧವು ಅಸಾಮಾಜಿಕವೆಂದು ನಮ್ಮ ಧರ್ಮಸಂಸ್ಥೆಗಳು ಏಕಕಂಠದಿಂದ ಎಚ್ಚರಿಕೆ ಕೊಡುವ ಅಗತ್ಯವೀಗ ಉಂಟಾಗಿದೆ.

ಪಂಚಮಹಾಧರ್ಮಗಳು ಮನುಷ್ಯನ ಬುದ್ಧ್ಯತೀತ ಕೇಂದ್ರದಿಂದ ಸ್ಫುರಿಸಿದಂತಹ ಮಹಾದ್ಯೇಯಗಳು. ಅವುಗಳನ್ನು ಧಿಕ್ಕರಿಸಿ ಸ್ವಚ್ಛಂದವಾಗಿ ಹೊರಡುವ ಯಾವ ತರ್ಕ, ವಿಮರ್ಶೆ, ವಿಶ್ಲೇಷಣೆ, ವಿಜ್ಞಾನ, ಶಾಸ್ತ್ರ, ವಿಚಾರ, ವಿನೋದ, ಶೋಧ, ವಿವರಣೆಗಳೂ ಭಾವೈಕ್ಯಕಾರಕಗಳಾಗಲಾರವು. ಶ್ರೀ ಅರವಿಂದರ ಭಾಷೆಯಲ್ಲವು Suprarational ವಿಚಾರೋತ್ತರ, ವಿಮರ್ಶೋತ್ತರ. ಉಕ್ತ ಸಾಂಸ್ಕೃತಿಕ ಮೂಲ ಸೆಲೆಗಳನ್ನು ಗಣಿಸದ ಜೀವನ ಸತ್ಯ–ಆವರಣ ಸತ್ಯಗಳ ಶೋಧಬೋಧಗಳು ಮತ್ತು ನವನಿರ್ಮಿತಿಗಳು ಭಾವೈಕ್ಯಕ್ಕೆ ಕುಠಾರಪ್ರಾಯವಾಗುತ್ತವೆ. ಜೀವನ ಸೌಂದರ್ಯಕ್ಕೂ ಸಾಹಿತ್ಯ ಸೌಂದರ್ಯಕ್ಕೂ Concordantia Oppositorum ವಿರೋಧಗಳ ಸಮನ್ವಯ ಮಾಡುವ ಸೂತ್ರವು ಸಾಧಾರಣ. ಅದನ್ನು ಬಿಟ್ಟ ಆಭಾಸಿಕ ಸಮನ್ವಯ ಅಥವಾ ಒಡಕು, ಬಿರುಕು, ವಿರೋಧ ವಿಸಂಗತಿಗಳನ್ನು ಕಡೆಯತನಕವೂ ಹಾಗೇ ಉಳಿದಿರುವಂತೆ ಪ್ರಕಟಿಸುವ ಅಸಮನ್ವಯ ಮಾನವನ ಮಾನಸಿಕ ಆರೋಗ್ಯ ಮಾರಕವಾಗಲು ಅಲ್ಪ ಅಥವಾ ದೀರ್ಘಕಾಲ ಸಾಕು.

ಅಹಿಂಸೆ, ದಯೆ, ಸ್ನೇಹ, ಹೊಂದಿಕೆ, ಮಾಧುರ್ಯ, ಸೌಂದರ್ಯ, ಭ್ರಾತೃತ್ವ, ಆಕೃತಿ, ಸತ್ಯ, ಸಾಹಿತ್ಯ, ಸೌಜನ್ಯಗಳೆಂಬ ಭಾವಗಳು ಪರಸ್ಪರ ಅತ್ಯಂತ ನಿಕಟವರ್ತಿಗಳು ಮತ್ತು ಪೋಷಕಗಳು. ಇವುಗಳ ವಿರುದ್ಧಭಾವಗಳೂ ಹಾಗೆ ಪರಸ್ಪರ ಶಕ್ತಿವರ್ಧಕಗಳು; ಒಂದಕ್ಕಿನ್ನೊಂದು ಪ್ರೇರಕ, ಪ್ರೋತ್ಸಾಹಕ, ಉತ್ತೇಜಕ. ಈ ೨೨ ಶಿವರ ಮತ್ತು ರುದ್ರರ ಅನುಸಂಧಾನವನ್ನು ಆಳವಾಗಿ ಮಾಡದ ಲೇಖಕರ ಗ್ರಂಥ ಸೌಂದರ್ಯವು ದುಷ್ ಪ್ರವೃತ್ತಿ ಪ್ರೇರಕವಾದ ಮಹಾ ಪ್ರಲೋಭನಗಳಾಗದಿರುವುದು ಅಸಂಭವ.

ಹಿಂಸೆಯು ನಾಶಕರ; ನಿರ್ದಯೆಯೂ ಹಾಗೇ; ಅಸ್ನೇಹಾದಿಗಳೂ ಅದೇ ಪ್ರಕಾರ ಮಾನವ ಪ್ರಜ್ಞೆಯ ಎಲ್ಲ ಮುಖಗಳ ಅಥವಾ ಸ್ತರಗಳ ವಿಭೇದ, ವಿನಾಶಗಳಿಗೆ ಕಾರಣ ವಾಗುತ್ತವೆ. ಸರಿ–ತಪ್ಪುಗಳ ವಿಂಗಡಣೆ ಮಾನವನ ಎಲ್ಲ ಕಾರ್ಯ ಕ್ಷೇತ್ರಗಳಲ್ಲೂ ಈ ಮೂಲ ಸೂತ್ರವನ್ನೇ ಅವಲಂಬಿಸಿರುವುದು ತತ್ವಜ್ಞಾನ. ತತ್ವಜ್ಞಾನದ ಮೂಲಾಧಾರ ವಿರುವುದು ಅಂತಃಶುಚಿಯಲ್ಲಿ ಎಂಬುದನ್ನು ಗಣಿಸದ ಆಧುನಿಕತೆಯು ಸಮಾಜ ಘಾತಕ ಕೃತಿಗಳನ್ನು ಸಾಹಿತ್ಯಾದಿಕತೆಗಳ ವೇಷಗಳ ಮೂಲಕ ಹೊರಗೆಡಹುವುದು.

ಯುಕ್ತನು ಯೋಗಿ, ಯೋಗ್ಯವೆಂಬುದು ಸರಿ ಅಥವಾ ಸಮಾಹಿತ, ಸುಸಂಗತ, ಭಾವೈಕ್ಯಸಾಧಕ. ಯೋಗವು ಕರ್ಮ ಕೌಶಲ ಅಥವಾ ಕಲೆ. ಯುಕ್ತಿಯು ಅಂಥ ಕಲೆ ಯಾದಾಗಲೇ ಸಮಾಜಹಿತವನ್ನು, ಸರ್ವೋದಯವನ್ನು ಮನೋ ವಾಕ್ಕಾಯ ಕರ್ಮ ಗಳ ಮೂಲಕ ಸರ್ವ ಮನಃಪ್ರಣಾಳಿಗಳಲ್ಲೂ ಪ್ರೇರಿಸಬಲ್ಲುದು. ಅದು ಆಗಮಾನು ಸಾರಿ ತರ್ಕ—ನಿರ್ಗಮಾನುಸಾರಿ ತರ್ಕವಲ್ಲ.

" ಜೀವಿತುಂ ಯಃ ಸ್ವಯಂ ಚೇಚ್ಛೇತ್
ಕಥಂ ಸೋಽನ್ಯಂ ಪ್ರಘಾತಯೇತ್ ।
ಯುದ್ಯದಾತ್ಮನ ಇಚ್ಛೇತ
ತತ್ಪರಸ್ಯಾಪಿ ಚಿಂತಯೇತ್"

ಎಂಬುದು ಜೀವನಕ್ಕೆ ಹೇಗೋ ಹಾಗೇ ಸಾಹಿತ್ಯಕ್ಕೂ ಶಾಶ್ವತವಾದ ಯುಕ್ತಿಬದ್ಧ ಆಧಾರ ಸೂತ್ರ. ನಿರಪರಾಧಿ ಸಹಜೀವಿಗಳ ದೇಹಕ್ಕೆ, ಇಂದ್ರಿಯಕ್ಕೆ, ಮನಸ್ಸಿಗೆ, ಬುದ್ಧಿಗೆ, ಭಾವನೆಗೆ ಪ್ರಕಟವಾಗಿಯೋ ಪ್ರಚ್ಛನ್ನವಾಗಿಯೋ ಸದ್ಯಃ ಅಥವಾ ಕಾಲಾಂತರದಲ್ಲಿ ದುರ್ಗತಿಯನ್ನು ತರಬಲ್ಲ ಕೃತಿಗಳೆಲ್ಲವೂ ದುಷ್ಕೃತಿಗಳು — ಎಂಬುದನ್ನು ವಿಮರ್ಶಕರೂ ಸೆನ್ಸರ್ ಬೋರ್ಡಿನವರೂ ನ್ಯಾಯಾಧೀಶರೂ ಸರಕಾರಗಳೂ ಚೆನ್ನಾಗಿ ಅರಿಯದುದ ರಿಂದಲೇ ಸಾಮಾಜಿಕ ನೀತಿಯು ದಿನೇ ದಿನೇ ಭೀಕರ ಅಧಃಪಾತವನ್ನೀಗ ಹೊಂದುತ್ತಿದೆ. ಬೌದ್ಧಿಕವಾದ ಆಲಸ್ಯ, ಮಾಂದ್ಯ, ಅಲಕ್ಷ, ಭಾವಾವೇಶವಶ್ಯತೆ, ಅವಿಮೃಷ್ಟಪರ ದೇಶಿಯ ಅನುಕರಣೆಗಳ ದೆಸೆಯಿಂದ ಸಾಹಿತ್ಯಾದಿ ಕಲೆಗಳಲ್ಲಿ ಬರುವ ದುಷ್ಪ್ರೇರಕತೆಯು ನಿವಾರಿಸಲ್ಪಡದೆ ಉಳಿಯುಂವಂತಾಗಿದೆ. ತತ್‌ಫಲವಾಗಿ ನಮ್ಮ ಭಾವೈಕ್ಯ ಸಾಧನೆಯ ಪ್ರಯತ್ನವು ತೂತು ಕೊಡದಿಂದ ನೀರು ಹೊಯ್ಯಲು ತೊಡಗಿದಂತಾಗುತ್ತದೆ.

" ಆರು ಶಾಸ್ತ್ರವನೋದಿದರಿಲ್ಲ
ಮೂರು ಪುರಾಣವ ಮುಗಿಸಿದರಿಲ್ಲ
ಸಾರ ಕಥೆಯನು ಕೇಳಿದರಿಲ್ಲ
ಧೀರನಾಗಿ ತಾ ಪೇಳಿದರಿಲ್ಲ "

ಏನು ಮಾಡಿದರೂ ನಮ್ಮಲ್ಲಿ ರಾಷ್ಟ್ರೀಯ ಭಾವೈಕ್ಯವು ಕಾರ್ಯಕರ ಸಾಮರ್ಥ್ಯವನ್ನು ಪಡೆಯದಾಗಲು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಅಪ್ಪಣೆ

ಕೊಡಿಸಿದಂತೆ ನಾವೂ ನಮ್ಮ ಮಕ್ಕಳುಮರಿಗಳೂ ಅಂತಃಶುಚಿಯನ್ನು ಅಂತರಂಗ ನೈರ್ಮಲ್ಯವನ್ನು ಸಾಧಿಸಿಕೊಳ್ಳಲು ದೃಢಪ್ರತಿಜ್ಞರಾಗದಿರುವುದೇ ಕಾರಣ. ಅವರಿತ್ತ ಎಚ್ಚರಿಕೆಯು ಸಾಹಿತಿಗಳನ್ನು ಚಿಂತಕರನ್ನೂ ವಿಜ್ಞಾನಿಗಳನ್ನೂ ಶಿಕ್ಷಕರನ್ನೂ ಧರ್ಮ ರಕ್ಷರನ್ನೂ ರಾಜಕಾರಣಿಗಳನ್ನೂ ಆರ್ಥಿಕ ತಜ್ಞರನ್ನೂ ಮುಟ್ಟಲಿ ಎಂದು ದೇವರಲ್ಲಿ ಪ್ರಾರ್ಥಿಸುತ್ತೇನೆ. □

# ಶೈವಾಗಮಗಳು

ಸಾಹಿತ್ಯವಿದ್ವಾನ್ ಡಾ. ಎಚ್. ಪಿ. ಮಲ್ಲೇದೇವರು

ಭಾರತೀಯ ಸಾಹಿತ್ಯ, ಧರ್ಮ ಮತ್ತು ಸಂಸ್ಕೃತಿ ಇವುಗಳನ್ನರಿಯಬೇಕಾದರೆ ವೇದಾದಿಗಳ ಮತ್ತು ಆಗಮಶಾಸ್ತ್ರಗಳ ಅಧ್ಯಯನ ಅತ್ಯಗತ್ಯ. ವೇದಾದಿಗಳು ಬೆಳಕಿಗೆ ಬಂದಷ್ಟು ಆಗಮಶಾಸ್ತ್ರಗಳು ಬಂದಿರುವುದಿಲ್ಲ. ಆದುದರಿಂದ ಆಗಮಶಾಸ್ತ್ರಗಳ ಬಗ್ಗೆ ಸಂಶೋಧನೆ ಅವಶ್ಯಕವಾಗಿದೆ.

ಆಗಮವೆಂದರೇನು? 'ಆಗಮ' ಶಬ್ದ ನಿರ್ವಚನವು ಇಂತಿದೆ. 'ಗಮ್' ಧಾತುವಿಗೆ 'ಆ' ಎಂಬ ಉಪಸರ್ಗವು ಸೇರಿ ಆಗಮ ಎಂದಾಗಿದೆ. ಸನಾತನ ಕಾಲದಿಂದಲೂ ಗುರು ಪರಂಪರೆಯಿಂದ ಬಂದ ಅಥವಾ ದೇವರಿಂದ ಅನುಗ್ರಹಿಸಲ್ಪಟ್ಟ ಶಾಸ್ತ್ರಕ್ಕೆ 'ಆಗಮ ಶಾಸ್ತ್ರ'ವೆಂದು ಹೆಸರು[೧]. ಸೃಷ್ಟಿ ಕಾಲದಲ್ಲಿ ಸಕಲ ಜೀವಾವಳಿಯ ಕಲ್ಯಾಣಕ್ಕಾಗಿ ಪರಮೇಶ್ವರನು[೨] ಪಾರ್ವತಿಗೆ ಅನುಗ್ರಹಿಸಿದ ದಿವ್ಯಜ್ಞಾನ ರಾಶಿಗೆ[೩] 'ಆಗಮ ಶಾಸ್ತ್ರ'ವೆಂದು ಹೆಸರು. 'ಗಮ್' ಧಾತುವು ಗತ್ಯರ್ಥವನ್ನು ಸೂಚಿಸುವುದು. ಗತ್ಯರ್ಥಸೂಚಕ ಧಾತುಗಳೆಲ್ಲವೂ 'ಜ್ಞಾನಾರ್ಥ'ವನ್ನು ಸೂಚಿಸುವುದರಿಂದ ಆಗಮವೆಂದರೆ "ಜ್ಞಾನ"[೪] ಎಂದೂ ಅರ್ಥವಾಗುತ್ತದೆ. ಆಗಮಗಳಲ್ಲಿ ಪ್ರತಿಪಾದಿತವಾಗಿರುವುದು ಪ್ರಶಸ್ತ

---

೧. "ಆಗಮೋ ನಾಮ ಆ ಮಹೇಶ್ವರಾತ್ ಗುರುಪಾರಂಪರ್ಯಾಗತಂ ಶಾಸ್ತ್ರಂ"
ಪಾಶುಪತ ಸೂತ್ರ ಕೌಂಡಿನ್ಯಭಾಷ್ಯ. (ಕರ್ನಾಟಕ ಲಾಕುಳಶೈವರ ಇತಿಹಾಸ ಪು. ೨)

೨. ಸೃಷ್ಟಿಕಾಲೇ ಮಹೇಶಾನಃ ಪುರುಷಾರ್ಥ ಪ್ರಸಿದ್ಧಯೇ ।
ವಿಧತ್ತೇ ವಿಮಲಂ ಜ್ಞಾನಂ ಪಂಚಸ್ರೋತೋಽಭಿಲಕ್ಷಿತಂ ॥
ಮೃಗೇಂದ್ರಾಗಮ, ಉಪೋದ್ಘಾತ ಪ್ರಕರಣ. ಶ್ಲೋ. ೨೧

೩. ಆಗತಂ ಪಂಚವಕ್ತ್ರಾತ್ತು ಗತಂ ಚ ಗಿರಿಜಾನನೇ ।
ಮತಂ ಚ ವಾಸುದೇವಸ್ಯ ತಸ್ಮಾದಾಗಮಮುಚ್ಯತೇ ॥
'ತಂತ್ರಸಾರ ಸಮುಚ್ಚಯ' ಭಾಗ ೧ ಪೀಠಿಕೆ ಪು. ೯

೪. ಯೇ ಗತ್ಯರ್ಥಾಃ ಧಾತವಃ ತೇ ಜ್ಞಾನಾರ್ಥಾಃ ।
ಸಿದ್ಧಾಂತ ಕೌಮುದಿ

ಜ್ಞಾನ, ಪರಾತ್ಪರ ಜ್ಞಾನ, ಈ ಅಂಶವು ಆಗಮಗಳ ಉಕ್ತಿಯಿಂದಲೇ ಸ್ಪಷ್ಟವಾಗುತ್ತದೆ. ಸೂಕ್ಷ್ಮ ತಂತ್ರದಲ್ಲಿ "ಶಿವಜ್ಞಾನ"[೫]ವೆಂತಲೂ ಕಾಲೋತ್ತರಾಗಮದಲ್ಲಿ "ಗುಹ್ಯಾದ್ಗುಹ್ಯತರ ಜ್ಞಾನ"[೬]ವೆಂತಲೂ, ಮೃಗೇಂದ್ರಾಗಮದಲ್ಲಿ "ನಿರಾಕುಲ ಜ್ಞಾನ"[೭]ವೆಂತಲೂ, ಲಕ್ಷ್ಮೀತಂತ್ರದಲ್ಲಿ 'ದಿವ್ಯಶಾಸ್ತ್ರ'[೮]ವೆಂದೂ, ಶಿವಯೋಗ ವರ್ಣನವೆಂಬ ಹಸ್ತಪ್ರತಿಯಲ್ಲಿ "ಅವಬೋಧರೂಪಜ್ಞಾನ"[೯]ವೆಂದೂ, ಮೃಗೇಂದ್ರಾಗಮದಲ್ಲಿ "ವಿಮಲ ಜ್ಞಾನ"[೧೦]ವೆಂದೂ, ಆಗಮಗಳಲ್ಲಿ ಹೇಳಿರುವುದು ಮೇಲಿನ ಅಭಿಪ್ರಾಯಕ್ಕೆ ನಿದರ್ಶನವಾಗಿದೆ. ವಾಚಸ್ಪತಿಮಿಶ್ರರು ಮಾನವನಿಗೆ ಅಭ್ಯುದಯ ಮತ್ತು ನಿಶ್ರೇಯಸ್ ಇವುಗಳನ್ನು ಹೊಂದಲು ಸಾಧಕವಾದ ಶಾಸ್ತ್ರವೇ ಆಗಮಶಾಸ್ತ್ರವೆಂದು[೧೧] ಹೇಳಿದರು.

ಆಗಮಗಳಿಗೆ ಕೆಲವೆಡೆ 'ತಂತ್ರಶಾಸ್ತ್ರ' ಗಳೆಂದೂ ಕರೆದಿರುವರು. 'ತಂತ್ರ' ಶಬ್ದಕ್ಕೆ ಮೇದಿನೀಕೋಶಕಾರನು ಹತ್ತು ಅರ್ಥಗಳನ್ನು ಕೊಟ್ಟಿದ್ದಾನೆ. 'ತಂತ್ರ' ಶಬ್ದದ ನಿರ್ವಚನವು ಅಜಿತಾಗಮ,[೧೨] ವಿಷ್ಣುಸಂಹಿತೆ,[೧೩] ಈಶಾನ ಶಿವಗುರುದೇವ ಪದ್ಧತಿ,

---

೫. ಸೂಕ್ಷ್ಮತಂತ್ರಮಹಂ ವಕ್ಷ್ಯೇ ಶಿವಜ್ಞಾನೈಕ ಸಾಧನಂ ।
ಸಮಾಹಿತೇನ ಮನಸಾ ತಂತ್ರಂ ಗೋಪ್ಯಮಿದಂ ಶೃಣು ॥
ಸೂಕ್ಷ್ಮಾಗಮ, ಕ್ರಿಯಾಪದ ಪಟಲ ೧-ಶ್ಲೋ. ೧೩

೬. ಏತತ್ತೇ ಶಿವಸದ್ಭಾವಃ ಶಿವವಕ್ತ್ರಾದ್ವಿನಿಸ್ಸೃತಾಃ ।
ಗುಹ್ಯಾದ್ಗುಹ್ಯತರಂ ಗುಹ್ಯಂ ಗೃಹೀತವ್ಯಂ ಪ್ರಯತ್ನತಃ ॥
ಕಾಲೋತ್ತರಾಗಮ ಪು. ೨೯ (Mss No. 14444 Govt. M. Library, Madras)

೭. "ವಕ್ಷ್ಯೇ ನಿರಾಕುಲಂ ಜ್ಞಾನಂ ತದುಕ್ತೈರೇವ ಭೂಯಸಾ"
ಮೃಗೇಂದ್ರಾಗಮ, ಉಪೋದ್ಘಾತ ಪ್ರಕರಣ. ಶ್ಲೋ. ೨೭

೮. ದಿವ್ಯಶಾಸ್ತ್ರಾಣ್ಯಧೀಯೀತ ನಿಗಮಾಂಶ್ಚೈವ ವೈದಿಕಾನ್ ।
ಸರ್ವಾನನುಚರೇತ್ ಸಮ್ಯಕ್ ಸಿದ್ಧಾಂತಾನಾತ್ಮಸಿದ್ಧಯೇ ॥
ಲಕ್ಷ್ಮೀತಂತ್ರ, ಪಟಲ ೨೮. ಶ್ಲೋ. ೨೯.

೯. ಶಿವಂ ಶಿವಜ್ಞಾನಾತ್ಮಕಂ ಅವಬೋಧರೂಪಂ ಪರಮಶಿವೇ ವಿದ್ಯತೇ ।
ಶಿವಯೋಗವರ್ಣನಂ ಪು. ೨.

೧೦. ವಿಧತ್ತೇ ವಿಮಲಂ ಜ್ಞಾನಂ
ಮೃಗೇಂದ್ರಾಗಮ, ಉಪೋದ್ಘಾತ ಪ್ರಕರಣ. ಶ್ಲೋ-೨೧

೧೧. 'ಆಗಚ್ಛಂತಿ ಬುದ್ಧಿಮಾರೋಹಂತಿ ಯಸ್ಮಾತ್ ಅಭ್ಯುದಯ
ನಿಶ್ರೇಯಸೋಪಾಯ : ಸ ಆಗಮ:'
ತತ್ತ್ವವೈಶಾರದಿ. ೧-೭.

೧೨. ತನೋತಿ ವಿಪುಲಾನರ್ಥಾಂಸ್ತತ್ತ್ವ ಮಂತ್ರ ಸಮಾಶ್ರಿತಾನ್।
ತ್ರಾಣಂ ಚ ಕುರುತೇ ಪುಂಸಾಂ ತೇನ ತಂತ್ರಮಿತಿ ಸ್ಮೃತಮ್ ॥
ಅಜಿತಾಗಮ. ಕ್ರಿಯಾಪಾದ. ಪಟಲ. ೧. ಶ್ಲೋ. ೧೧೫.

೧೩. ಸರ್ವೇಽರ್ಥಾ ಯೇನ ತನ್ಯಂತೇ ತ್ರಾಯಂತೇ ಚ ಭಯಾಜ್ಜನಾಃ ।
ಇತಿ ತಂತ್ರಸ್ಯ ತಂತ್ರತ್ವಂ ತಂತ್ರಜ್ಞಾ ಪರಿಚಕ್ಷತೇ ॥
ವಿಷ್ಣುಸಂಹಿತೆ. ಪಟಲ. ೨. ಶ್ಲೋ. ೧೦.

ಮೊದಲಾದ ಗ್ರಂಥಗಳಲ್ಲಿ[೧೪] ಉಕ್ತವಾಗಿದೆ. ಈ ಎಲ್ಲ ಗ್ರಂಥಗಳ ಮಥಿತಾರ್ಥವನ್ನು ಸಂಗ್ರಹಿಸಿ ಹೇಳುವುದಾದರೆ, ತತ್ತ್ವ, ಮಂತ್ರ ಮೊದಲಾದವುಗಳ ಬಗ್ಗೆ ನಿಖರವಾದ ವಿಷಯವನ್ನು ತಿಳಿಸಿ ಮಾನವನಿಗೆ ಅಭಯವನ್ನೀಯುವುದೇ "ತಂತ್ರ"ಶಾಸ್ತ್ರದ ಉದ್ದೇಶ. ಯಾವುದಾದರೂ ಶಾಸ್ತ್ರವನ್ನು ಸಪ್ರಮಾಣ ಪೂರ್ವಕವಾಗಿ ಪ್ರತಿಪಾದಿಸುವ ಮಹತ್ವ ಪೂರ್ಣ ಆಧಾರಗ್ರಂಥಗಳಿಗೂ "ತಂತ್ರ"ವೆಂದು ಹೇಳಿರುವುದನ್ನು ಮರೆಯಲಾಗದು. ನಿದರ್ಶನಕ್ಕೆ ಸಾಂಖ್ಯತಂತ್ರ, ನ್ಯಾಯತಂತ್ರ, ವೈನಾಶಿಕತಂತ್ರ, ಯೋಗತಂತ್ರ, ಆಯುರ್ವೇದತಂತ್ರ ಮೊದಲಾದುವು.

ವೈಷ್ಣವಾಗಮಗಳು 'ಸಂಹಿತೆ' ಎಂದು ಕರೆಯಲ್ಪಟ್ಟಿವೆ. ಆದುದರಿಂದ 'ಆಗಮ' 'ತಂತ್ರ' 'ಸಂಹಿತೆ' ಇವುಗಳನ್ನು ಪರ್ಯಾಯ ಪದಗಳೆಂದು ಬಹುಮಟ್ಟಿಗೆ ಪರಿಗಣಿಸಬಹುದಾದರೂ, 'ಆಗಮಶಾಸ್ತ್ರ'ವು ಶೈವಧರ್ಮವನ್ನೂ, 'ತಂತ್ರಶಾಸ್ತ್ರ'ಗಳು ಶಾಕ್ತಧರ್ಮವನ್ನೂ, 'ಸಂಹಿತೆ'ಗಳು ವೈಷ್ಣವ ಧರ್ಮವನ್ನೂ ಹೆಚ್ಚಾಗಿ ಪ್ರತಿಪಾದಿಸುವವು. ಆದರೆ ಇದು ಖಚಿತವಾದ ನಿಯಮವೇನಲ್ಲ.

ಆಗಮಗಳನ್ನು ವೇದಕ್ಕೆ ವಿರೋಧವಾದುವೆಂತಲೂ, ವೇದಕ್ಕೆ ಅವಿರೋಧವಾದುವೆಂತಲೂ ಎರಡು ವಿಭಾಗಗಳನ್ನು ಮಾಡಬಹುದು.[೧೫]

ಶೈವಾಗಮಗಳ ವ್ಯಾಪ್ತಿ ಅಪಾರವಾದುದು. ಪ್ರತಿಯೊಂದು ಆಗಮದಲ್ಲಿಯೂ ಉಕ್ತವಾಗಿರುವ "ತಂತ್ರಾವತಾರ ಪಟಲ"ಗಳ ಅಧ್ಯಯನದಿಂದ, ಕಾಮಿಕಾದಿ ವಾತುಲಾಂತವಾದ ಇಪ್ಪತ್ತೆಂಟು ಪ್ರಧಾನ ಶಿವಾಗಮಗಳು, 'ವಕ್ತ್ರಾ'ದಿ 'ವಿಶ್ವಾತ್ಮಕಾಂತ'ವಾದ ಇನ್ನೂರ ಇಪ್ಪತ್ತೈದು ಉಪಾಗಮಗಳು ಇರುವುವೆಂದು ತಿಳಿದು ಬರುವುದು. ಒಟ್ಟು ಎರಡುನೂರ ಐವತ್ತುಮೂರು ಆಗಮಗಳಿವೆ. ಕಾಮಿಕಾಗಮ, ಯೋಗಜಾಗಮ, ಚಿಂತ್ಯಾಗಮ, ಕಾರಣಾಗಮ, ಅಜಿತಾಗಮ, ದೀಪ್ತಾಗಮ, ಸೂಕ್ಷ್ಮಾಗಮ, ಸಹಸ್ರಾಗಮ ಅಂಶುಮದಾಗಮ. ಸುಪ್ರಭೇದಾಗಮ ಈ ಹತ್ತು ಆಗಮಗಳಿಗೆ "ಶಿವಭೇದ"ವೆಂದೂ; ವಿಜಯಾಗಮ, ನಿಶ್ವಾಸಾಗಮ, ಸ್ವಾಯಂಭುವಾಗಮ, ಅನಲಾಗಮ, ವೀರಾಗಮ, ಕೌರವಾಗಮ, ಮಕುಟಾಗಮ, ವಿಮಲಾಗಮ, ಚಂದ್ರಜ್ಞಾನಾಗಮ, ಮುಖಬಿಂಬಾಗಮ,ಪ್ರೋದ್ಗೀತಾಗಮ, ಲಲಿತಾಗಮ,ಸಿದ್ಧಾಗಮ, ಸಂತಾನಾಗಮ, ಶರ್ವೋಕ್ತಾಗಮ, ಪಾರಮೇಶ್ವರಾಗಮ, ಕಿರಣಾಗಮ, ವಾತುಲಾಗಮ ಈ ಹದಿನೆಂಟು ಆಗಮಗಳಿಗೆ 'ರುದ್ರಭೇದ'ವೆಂದೂ ಹೆಸರು.

---

೧೪. ತನುತೇ ತ್ರಾಯತೇ ನಿತ್ಯಂ ತಂತ್ರಮಿತ್ಥಂ ವಿದುರ್ಬುಧಾಃ

ಪಿಂಗಲಮತ (ಹಸ್ತಪ್ರತಿ, ದರ್ಬಾರ್ ಗ್ರಂಥಭಂಡಾರ, ನೇಪಾಳ)

೧೫. ಆಗಮಾ ದ್ವಿವಿಧಾ ಜ್ಞೇಯಾ ವೇದಾನಾಮವಿರೋಧಿನಃ ।
ವಿರೋಧಿನಶ್ಚ ತತ್ರೈತೇ ಶ್ರುತಿಮಾರ್ಗಾನುರೋಧಿನಃ ॥

ಕ್ರಿಯಾಸಾರ. ಉಪೋದ್ಘಾತ. ಭಾ- ೧ ಶ್ಲೋ. ೧೪.

## ಆಗಮಗಳ ಕಾಲ

ವೇದಗಳು ಅನಾದಿ ಹಾಗೂ ಅಪೌರುಷೇಯ ಎಂದು ಸಂಪ್ರದಾಯವಾದಿಗಳು ಭಾವಿಸಿರುವಂತೆ, ಆಗಮಗಳು ಸಹ ಅನಾದಿ ಹಾಗು ಅಪೌರುಷೇಯವೆಂದು ಶಿವಾದ್ವೈತಿಗಳು ಭಾವಿಸಿದ್ದಾರೆ. ಆದರೂ ಆಧುನಿಕ ವಿಮರ್ಶಕರಿಗೆ ಗ್ರಾಹ್ಯವಾಗುವ ರೀತಿಯಲ್ಲಿ ಆಗಮಗಳ ಕಾಲವನ್ನು ನಿರ್ಣಯಿಸಲು ಯತ್ನಿಸಲಾಗಿದೆ.

ಕನ್ನಡ ಸಾಹಿತ್ಯದಲ್ಲಿ ಮಹತ್ವಪೂರ್ಣ ಗ್ರಂಥಗಳಾದ ವಚನಶಾಸ್ತ್ರಗಳಲ್ಲಿ ಮತ್ತು ತಮಿಳು ಸಾಹಿತ್ಯದಲ್ಲಿ ಅನರ್ಘ್ಯಕೃತಿಗಳಾದ ಶಿವಜ್ಞಾನಸಿದ್ಧಿಯಾರ್, ತಿರುಮಂದಿರಂ ಮೊದಲಾದ ಗ್ರಂಥಗಳಲ್ಲಿ ಆಗಮಗಳ ಬಗ್ಗೆ ಉಲ್ಲೇಖವಿರುವುದು ಸುಸ್ಪಷ್ಟ. ನೇಪಾಳದ ದರ್ಬಾರ್ (ಲೈಬ್ರರಿ) ಗ್ರಂಥಭಂಡಾರದಲ್ಲಿ ಸಂಗ್ರಹಿಸಲ್ಪಟ್ಟಿರುವ "ಕಿರಣಾಗಮ" ಹಸ್ತಪ್ರತಿಯು ಕ್ರಿ. ಶ. ೮೫೪ ರಲ್ಲಿ ಮೂಲ ಗ್ರಂಥದಿಂದ ನಕಲು ಮಾಡಿಕೊಳ್ಳಲಾಯಿತೆಂದು ಉಲ್ಲೇಖವಿದೆ. ಶಂಕರಾಚಾರ್ಯರು "ಸೌಂದರ್ಯಲಹರಿ[೧೬]"ಯಲ್ಲಿ ೬೪ ತಂತ್ರಗಳನ್ನು ಹೆಸರಿಸಿರುವುದು; ವೈಷ್ಣವಾಗಮಗಳಲ್ಲಿ ಶೈವಾಗಮಗಳ ಬಗೆಗೆ ಅಭಿಪ್ರಾಯ ವ್ಯಕ್ತವಾಗಿದ್ದರೂ, ಶೈವಾಗಮಗಳಲ್ಲಿ ವೈಷ್ಣವಾಗಮಗಳ ಬಗೆಗೆ ಎಲ್ಲೂ ಉಲ್ಲೇಖವಿಲ್ಲದಿರುವುದು; ಕಾಂಚೀಪುರದ ಕೈಲಾಸನಾಥ ದೇವಾಲಯದಲ್ಲಿರುವ ಪಲ್ಲವ ಶಾಸನವು ಪಲ್ಲವರಾಜನಾದ ರಾಜಸಿಂಹನು "ಆಗಮಾನುಸಾರಿ" ಯೆಂದೂ; ಅಮರಾವತಿಯ ಶಾಸನವು ಪಲ್ಲವರ ಮೂಲಪುರುಷನಾದ ದ್ರೋಣಾಚಾರ್ಯನನ್ನು ವರ್ಣಿಸುತ್ತ ಆತನು "ಸಮಸ್ತಾಗಮಪಾರದೃಶ್ವಾ" ಎಂದು ಹೇಳಿರುವುದು; ಉದಯಗಿರಿ ಗುಹೆ ದೇವಸ್ಥಾನ; ಕುಮಾರಗುಪ್ತನ ಬಿಲ್‌ಗದಾ. ಕಲ್ಲಿನ ಸ್ತಂಭದ ಶಾಸನ ಇವುಗಳು; ಡಾ. ಎಸ್. ಸಿ. ನಂದೀಮಠರು, ಡಾ. ರಮಣನ್, ಡಾ. ಶಾಮಾಶಾಸ್ತ್ರಿಗಳು ಮತ್ತು ಡಾ. ಕೆ. ಸಿ. ಪಾಂಡೆ ಇವರ ಪ್ರಮಾಣಪೂರ್ವಕ ಸಂಶೋಧನಾತ್ಮಕ ಲೇಖನಗಳು; ಈ ಎಲ್ಲ ಆಧಾರಗಳಿಂದ[೧೭] ಶಿವಾಗಮಗಳು ಕ್ರಿ.ಪೂ. ಒಂದನೆಯ ಶತಮಾನಕ್ಕೆ ಮೊದಲೇ ಅಸ್ತಿತ್ವದಲ್ಲಿದ್ದುವೆಂಬುದನ್ನು ಖಚಿತವಾಗಿ ಹೇಳಬಹುದು.

ಶೈವಾಗಮಗಳಲ್ಲಿ ಕ್ರಿಯಾಪಾದ, ಚರ್ಯಾಪಾದ, ಯೋಗಪಾದ ಮತ್ತು ಜ್ಞಾನಪಾದ ಎಂದು ನಾಲ್ಕು ಪಾದಗಳಿವೆ. ಈ ಪಾದಗಳಲ್ಲಿ ನಿರೂಪಿತವಾಗಿರುವ ವಿಷಯಗಳನ್ನು ಸಂಗ್ರಹಿಸಿ ಕೊಡಲಾಗಿದೆ.

---

೧೬. ಚತುಃಷಷ್ಟ್ಯಾ ತಂತ್ರೈಃ ಸಕಲಮಭಿಸಂಧಾಯ ಭುವನಂ.
'ಸೌಂದರ್ಯಲಹರೀ' ಶ್ಲೋ. ೩೧.

17. A close study of the Hindu Society, tradition and the way of life of the people' reveals that the society was very much influenced by the Āgamic thought. The flow of the Agamic thought must be very anicent. 'Saivagamas and upanisads' Thesis. P. 39. By. H. P. Malledevaru.

## ಕ್ರಿಯಾಪಾದ

ಕ್ರಿಯಾಪಾದದಲ್ಲಿ ದೇವಾಲಯಗಳ ನಿರ್ಮಾಣ, ಮೂರ್ತಿಗಳ ಸ್ಥಾಪನೆ.[೧೮] ಮೊದಲಾದ ವಿಷಯಗಳ ಬಗ್ಗೆ ವಿವರಣೆಯಿದೆ. ದೇವಾಲಯವನ್ನು ಪ್ರಕೃತಿಸುಂದರವಾದ ಪ್ರಶಾಂತ ಪ್ರದೇಶದಲ್ಲಿ ನಿರ್ಮಿಸಬೇಕೆಂದೂ, ಅಂತಹ ಪ್ರದೇಶವನ್ನು ದೇವಾಲಯದ ನಿರ್ಮಾಣಕ್ಕಾಗಿ ಆರಿಸಿಕೊಂಡ ನಂತರ, ಅದನ್ನು ಉತ್ತು ಹಸನುಮಾಡಿ ಬೆಳಸನ್ನು ಬೆಳೆಸಿ, ಆ ಬೆಳಸನ್ನು ಪಶುಪಕ್ಷಿಗಳು ಯಥೇಚ್ಛವಾಗಿ ತಿನ್ನಲು ಬಿಡಬೇಕು. ಹೀಗೆ ಮಾಡುವುದರಿಂದ ದೋಷ ನ್ಯೂನತೆಗಳು ನಿವಾರಣೆಯಾಗುವುವೆಂದು ಶೈವಾಗಮಗಳು ಪ್ರತಿಪಾದಿಸಿವೆ. ಇಂತಹ ಪ್ರದೇಶದಲ್ಲಿ ದೇವಾಲಯದ ನಿರ್ಮಾಣಕ್ಕೆ ಶಂಕು-ಸ್ಥಾಪನೆಯನ್ನು ಮಾಡಬೇಕು. ಅದನ್ನು ಹೇಗೆ ಕಟ್ಟಬೇಕೆಂಬುದರ ಬಗ್ಗೆ ದೀರ್ಘ ವಿವರಣೆಯಿದೆ. ಕ್ರಿಯಾಪಾದದಲ್ಲಿ ನಗರ ನಿರ್ಮಾಣದ ಬಗೆಗೂ ನಿರ್ದೇಶನವಿದೆ. ಸಸ್ಯಾಹಾರಿಗಳು ಮತ್ತು ಮಾಂಸಾಹಾರಿಗಳು ಬೇರೆ ಬೇರೆಡೆ ಇರಬೇಕೆಂದೂ, ರಸ್ತೆಗಳು ನೇರವಾಗಿ ಅಗಲವಾಗಿರಬೇಕೆಂದೂ ತಿಳಿಸುವುದಲ್ಲದೆ ಗೃಹರಚನೆಯ ಬಗೆಗೂ ವಿವರಣೆಯಿದೆ.

ಮೂರ್ತಿಗಳು[೧೯] ಧ್ಯಾನ ಮತ್ತು ಮೋಕ್ಷಕ್ಕೆ ಸಾಧಕಗಳೆಂದು ವಿವರಿಸಿ, ಅಂತಹ ಮೂರ್ತಿಗಳನ್ನು ಹೇಗೆ ನಿರ್ಮಿಸಬೇಕೆಂಬುದರ ಬಗ್ಗೆ ಉಲ್ಲೇಖವಿದೆ. ಮೂರ್ತಿಗಳನ್ನು ಚಲ, ಅಚಲ, ಚಲಾಚಲವೆಂದು ಮೂರು ಪ್ರಕಾರವಾಗಿ ಹೇಳಲಾಗಿದೆ[೨೦]. ಮೂರ್ತಿ-ಗಳು ಸಕಲವೆಂದೂ, ಲಿಂಗವು ನಿಷ್ಕಲವೆಂದೂ ಪರಿಗಣಿಸಲ್ಪಟ್ಟಿವೆ. ಲಿಂಗದಪೀಠದ ಮೇಲೆ ವೃತ್ತಾಕಾರ ಅಥವಾ ಗೋಳಕಾಕಾರವಾಗಿರುವ ಮೇಲ್ಭಾಗವು ಹೊಂದಿಸಲ್ಪಟ್ಟಿರುತ್ತದೆ. ನಾಗರ, ದ್ರಾವಿಡ, ಮತ್ತು ವೇಸರ ಎಂಬುದಾಗಿ ಪೀಠವು ಮೂರು ಪ್ರಕಾರವಾಗಿರುತ್ತದೆ. ಈಶ್ವರನ ಪಂಚವಿಂಶತಿ ಲೀಲೆಗೆ ಸಂಬಂಧಿಸಿದ ಇಪ್ಪತ್ತೈದು ಮೂರ್ತಿ[೨೧]ಗಳ ಬಗೆಗೆ ಮತ್ತು ಅವುಗಳನ್ನು ಯಾವ ಭಂಗಿಯಲ್ಲಿ ಎಷ್ಟೆಷ್ಟು ಪ್ರಮಾಣಗಳನಿಟ್ಟು ರಚಿಸಬೇಕೆಂಬುದರ ಬಗೆಗೆ ವಿವರಣೆಯಿಂದೆ.[೨೨] ಲಿಂಗಗಳನ್ನು ಕೂಡ ವ್ಯಕ್ತ, ಅವ್ಯಕ್ತ ಮತ್ತು ವ್ಯಕ್ತಾವ್ಯಕ್ತ ಎಂದು ಮೂರು ಭಾಗ ಮಾಡಿದ್ದಾರೆ. ಮೂರ್ತಿಗಳು ಎಷ್ಟೇ ಸುಂದರವಾಗಿದ್ದರೂ ಪ್ರತಿಷ್ಠಾನವಿಧಿಯನ್ನು ನೆರವೇರಿಸಿದ ನಂತರವೇ ಅವು ಪೂಜಾರ್ಹವಾಗುವುವು. ಪ್ರಧಾನದೇವತೆ ಮತ್ತು ಪರಿವಾರ ದೇವತೆಗಳನ್ನು ದೇವಾಲಯದ ಯಾವ ಯಾವ ಭಾಗದಲ್ಲಿ ಪ್ರತಿಷ್ಠಿಸಬೇಕೆಂಬುದರ ಬಗೆಗೂ ಈ ಪಾದದಲ್ಲಿ ವಿವರಣೆ ಕಂಡುಬರುವುದು.

---

೧೮. ಕಾಮಿಕಾಗಮ. ಭಾ. ೧. ಪಟಲ. ೪-೬.
೧೯. ಕಾರಣಾಗಮ. ಭಾ. ೧. ಪಟಲ. ೩.
೨೦. ಸುಪ್ರಭೇದಾಗಮ. ಭಾ. ೨ ಪಟಲ. ೨೩-೩೨.
೨೧. ಕಾಮಿಕಾಗಮ. ಭಾ. ೨. ಪಟಲಗಳು ೪೩-೪೭
೨೨. ಕಾರಣಾಗಮ. ಭಾ. ೧ ಪಟಲ. ೫೭-೧೦೧.

## ಚರ್ಯಾಪಾದ

ಮಾನವನು ಪ್ರತಿದಿವಸ ಮಾಡಬೇಕಾದ ಕ್ರಿಯೆಗಳನ್ನು ಚರ್ಯಾಪಾದದಲ್ಲಿ ವಿವರಿಸಲಾಗಿದೆ. ಶೈವಾಗಮಗಳು ಬಾಹ್ಯ ಮತ್ತು ಆಂತರಿಕ ಶುದ್ಧಿ ಹೊಂದುವ ವಿಧಾನವನ್ನು ತಿಳಿಸುತ್ತವೆ. ಬಾಹ್ಯಶುದ್ಧಿಯನ್ನು ಸ್ನಾನಾದಿಗಳಿಂದ ಹೊಂದಬಹುದು. ಕಾಮಿಕಾಗಮವು[೨೩] ವಾರುಣ, ಆಗ್ನೇಯ, ಮಂತ್ರ, ಮಾನಸ, ವಾಯವ್ಯ ಮತ್ತು ಮಹೇಂದ್ರ ಹೀಗೆ ಆರು ತೆರನಾದ ಸ್ನಾನಗಳನ್ನೂ, ಆಯಾ ಸ್ನಾನಗಳನ್ನು ಮಾಡುವ ಕಾಲದಲ್ಲಿ ಉಚ್ಚರಿಸಬೇಕಾದ ಮಂತ್ರಗಳನ್ನೂ, ದೇಹದ ವಿವಿಧ ಭಾಗಗಳಿಗೆ ಮಂತ್ರೋಚ್ಚಾರಣೆಯೊಡನೆ ಮಾಡುವ ವಿಭೂತಿಧಾರಣೆಯನ್ನೂ ವಿವರಿಸುತ್ತದೆ. ಆಂತರಿಕ ಶುದ್ಧಿಯು ನೀತಿ ನಿಯಮಗಳಿಗೆ ಬದ್ಧವಾದ ಪರಿಶುದ್ಧ ಜೀವನ ಹಾಗೂ ಉಪಾಸನೆಯಿಂದ ಲಭಿಸುವುದು. ಬೇರೆ ಬೇರೆ ದೇವತೆಗಳು ಉಕ್ತವಾಗಿದ್ದರೂ ಶಿವನೇ ಪ್ರಧಾನ ದೇವತೆ, ಪಂಚಾಕ್ಷರೀ ಮಹಾಮಂತ್ರವೇ ಎಲ್ಲ ಮಂತ್ರಗಳಿಗಿಂತಲೂ ಮಿಗಿಲಾದುದು.

ಅರ್ಚನೆಯು 'ಸ್ವಾರ್ಥ' ಮತ್ತು 'ಪರಾರ್ಥ' ವೆಂಬುದಾಗಿ ಎರಡು ವಿಧ.[೨೪] ಪ್ರತಿಯೊಬ್ಬ ಶೈವನು ಸ್ವಾರ್ಥಪೂಜೆಯನ್ನು ತನಗೋಸ್ಕರವಾಗಿ ಮಾಡಬೇಕು. ಪರಾರ್ಥ ಪೂಜೆಯನ್ನು ಪುರೋಹಿತನು ಭಕ್ತರಿಗೋಸುಗವಾಗಿ ದೇವಾಲಯದಲ್ಲಿ ಮಾಡುವನು. ಭಕ್ತನು ದೇವರಿಗೆ ನೈವೇದ್ಯವನ್ನು ಅರ್ಪಿಸಿದ ನಂತರವೇ ಆಹಾರ (ಪ್ರಸಾದ)ವನ್ನು ತೆಗೆದುಕೊಳ್ಳಬೇಕು.

ವೈದಿಕ ವ್ರತಾಚರಣೆಗಳಲ್ಲಿ ಕಾಷ್ಠ (ಅರಣಿ) ಗಳನ್ನು ಮಥಿಸಿ, ಅಗ್ನಿಯನ್ನು ಹೊಂದುವಂತೆಯೇ, ಶೈವಾಗಮಗಳಲ್ಲೂ ಅಗ್ನಿಯನ್ನು ಹೊಂದಬೇಕು. ಆದರೆ ಶೈವಾಗಮಗಳು ಅಗ್ನಿಯನ್ನು ವೈದಿಕಾಗ್ನಿ, ಮಿಶ್ರಾಗ್ನಿ ಮತ್ತು ಶೈವಾಗ್ನಿ[೨೫] ಎಂದು ಮೂರು ಬಗೆಯಾಗಿ ವಿಂಗಡಿಸುವುದು.

ದೇವತೆಗಳನ್ನು ಪ್ರತಿದಿವಸ ಅರ್ಚಿಸುವ ವಿಧಾನವನ್ನೂ, ವಿಶೇಷ ಸಂದರ್ಭಗಳಲ್ಲಿ ಪೂಜಿಸುವ ವಿಧಾನಗಳನ್ನೂ, ನಿತ್ಯೋತ್ಸವ ಮತ್ತು ಮಹೋತ್ಸವಾದಿಗಳನ್ನೂ ಶೈವಾಗಮಗಳು[೨೬] ಪೂರ್ಣವಾಗಿ ವಿವರಿಸುವುವು.

ಮಾನವನ ಜೀವನವನ್ನು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸ ಎಂಬುದಾಗಿ ನಾಲ್ಕು ವಿಭಾಗಗಳನ್ನಾಗಿ ನಿರೂಪಿಸಿ, ಪ್ರತಿಯೊಂದು ಅವಸ್ಥೆಯಲ್ಲಿ ಮಾಡಬೇಕಾದ ಅವಶ್ಯ ಕರ್ತವ್ಯಗಳ ಬಗೆಗೆ ವಿವರಣೆಯಿರುವದಷ್ಟೇ ಅಲ್ಲದೆ ಗೋತ್ರಾದಿ[೨೭]ಗಳ ಬಗೆಗೂ ವಿವರಣೆಯಿದೆ.

---

೨೩. ಕಾಮಿಕಾಗಮ. ಭಾ. ೧. ಪಟಲ ೩.

೨೪. ಕಾಮಿಕಾಗಮ. ಭಾ. ೧. ಪಟಲ ೪.

೨೫. ಕಾಮಿಕಾಗಮ. ಭಾ. ೧. ಪಟಲ. ೮.

೨೬. ಕಾಮಿಕಾಗಮ. ಭಾ. ೨. ಪಟಲ ೪-೯.

೨೭. ಸುಪ್ರಭೇದಾಗಮ. ಚರ್ಯಾಪಾದ, ಪಟಲ ೧.

ಮೊದಲಾದ ಗ್ರಂಥಗಳಲ್ಲಿ[೧೪] ಉಕ್ತವಾಗಿದೆ. ಈ ಎಲ್ಲ ಗ್ರಂಥಗಳ ಮಥಿತಾರ್ಥವನ್ನು ಸಂಗ್ರಹಿಸಿ ಹೇಳುವುದಾದರೆ, ತತ್ತ್ವ, ಮಂತ್ರ ಮೊದಲಾದವುಗಳ ಬಗ್ಗೆ ನಿಖರವಾದ ವಿಷಯವನ್ನು ತಿಳಿಸಿ ಮಾನವನಿಗೆ ಅಭಯವನ್ನೀಯುವುದೇ "ತಂತ್ರ"ಶಾಸ್ತ್ರದ ಉದ್ದೇಶ. ಯಾವುದಾದರೂ ಶಾಸ್ತ್ರವನ್ನು ಸಪ್ರಮಾಣ ಪೂರ್ವಕವಾಗಿ ಪ್ರತಿಪಾದಿಸುವ ಮಹತ್ವ ಪೂರ್ಣ ಆಧಾರಗ್ರಂಥಗಳಿಗೂ "ತಂತ್ರ"ವೆಂದು ಹೇಳಿರುವುದನ್ನು ಮರೆಯಲಾಗದು. ನಿದರ್ಶನಕ್ಕೆ ಸಾಂಖ್ಯತಂತ್ರ, ನ್ಯಾಯತಂತ್ರ, ವೈನಾಶಿಕತಂತ್ರ, ಯೋಗತಂತ್ರ, ಆಯುರ್ವೇದತಂತ್ರ ಮೊದಲಾದುವು.

ವೈಷ್ಣವಾಗಮಗಳು 'ಸಂಹಿತೆ' ಎಂದು ಕರೆಯಲ್ಪಟ್ಟಿವೆ. ಆದುದರಿಂದ 'ಆಗಮ' 'ತಂತ್ರ' 'ಸಂಹಿತೆ' ಇವುಗಳನ್ನು ಪರ್ಯಾಯ ಪದಗಳೆಂದು ಬಹುಮಟ್ಟಿಗೆ ಪರಿಗಣಿಸಬಹುದಾದರೂ, 'ಆಗಮಶಾಸ್ತ್ರ'ವು ಶೈವಧರ್ಮವನ್ನೂ, 'ತಂತ್ರಶಾಸ್ತ್ರ'ಗಳು ಶಾಕ್ತಧರ್ಮವನ್ನೂ, 'ಸಂಹಿತೆ'ಗಳು ವೈಷ್ಣವ ಧರ್ಮವನ್ನೂ ಹೆಚ್ಚಾಗಿ ಪ್ರತಿಪಾದಿಸುವವು. ಆದರೆ ಇದು ಖಚಿತವಾದ ನಿಯಮವೇನಲ್ಲ.

ಆಗಮಗಳನ್ನು ವೇದಕ್ಕೆ ವಿರೋಧವಾದುವೆಂತಲೂ, ವೇದಕ್ಕೆ ಅವಿರೋಧವಾದುವೆಂತಲೂ ಎರಡು ವಿಭಾಗಗಳನ್ನು ಮಾಡಬಹುದು.[೧೫]

ಶೈವಾಗಮಗಳ ವ್ಯಾಪ್ತಿ ಅಪಾರವಾದುದು. ಪ್ರತಿಯೊಂದು ಆಗಮದಲ್ಲಿಯೂ ಉಕ್ತವಾಗಿರುವ "ತಂತ್ರಾವತಾರ ಪಟಲ"ಗಳ ಅಧ್ಯಯನದಿಂದ, ಕಾಮಿಕಾದಿ ವಾತುಲಾಂತವಾದ ಇಪ್ಪತ್ತೆಂಟು ಪ್ರಧಾನ ಶಿವಾಗಮಗಳು, 'ವಕ್ತ್ರಾ'ದಿ 'ವಿಶ್ವಾತ್ಮಕಾಂತ'ವಾದ ಇನ್ನೂರ ಇಪ್ಪತ್ತೈದು ಉಪಾಗಮಗಳು ಇರುವುವೆಂದು ತಿಳಿದು ಬರುವುದು. ಒಟ್ಟು ಎರಡುನೂರ ಐವತ್ತುಮೂರು ಆಗಮಗಳಿವೆ. ಕಾಮಿಕಾಗಮ, ಯೋಗಜಾಗಮ, ಚಿಂತ್ಯಾಗಮ, ಕಾರಣಾಗಮ, ಅಜಿತಾಗಮ, ದೀಪ್ತಾಗಮ, ಸೂಕ್ಷ್ಮಾಗಮ, ಸಹಸ್ರಾಗಮ ಅಂಶುಮದಾಗಮ. ಸುಪ್ರಭೇದಾಗಮ ಈ ಹತ್ತು ಆಗಮಗಳಿಗೆ "ಶಿವಭೇದ"ವೆಂದೂ; ವಿಜಯಾಗಮ, ನಿಶ್ವಾಸಾಗಮ, ಸ್ವಾಯಂಭುವಾಗಮ, ಅನಲಾಗಮ, ವೀರಾಗಮ, ರೌರವಾಗಮ, ಮಕುಟಾಗಮ, ವಿಮಲಾಗಮ, ಚಂದ್ರಜ್ಞಾನಾಗಮ, ಮುಖಬಿಂಬಾಗಮ,ಪ್ರೋದ್ಗೀತಾಗಮ, ಲಲಿತಾಗಮ,ಸಿದ್ಧಾಗಮ, ಸಂತಾನಾಗಮ, ಶರ್ವೋಕ್ತಾಗಮ, ಪಾರಮೇಶ್ವರಾಗಮ, ಕಿರಣಾಗಮ, ವಾತುಲಾಗಮ ಈ ಹದಿನೆಂಟು ಆಗಮಗಳಿಗೆ 'ರುದ್ರಭೇದ'ವೆಂದೂ ಹೆಸರು.

---

೧೪. ತನುತೇ ತ್ರಾಯತೇ ನಿತ್ಯಂ ತಂತ್ರಮಿತ್ಥಂ ವಿದುರ್ಬುಧಾ:
ಪಿಂಗಲಮತ (ಹಸ್ತಪ್ರತಿ, ದರ್ಬಾರ್ ಗ್ರಂಥಭಂಡಾರ, ನೇಪಾಳ).

೧೫. ಆಗಮಾ ದ್ವಿವಿಧಾ ಜ್ಞೇಯಾ ವೇದಾನಾಮವಿರೋಧಿನಃ।
ವಿರೋಧಿನಶ್ಚ ತತ್ರೈತೇ ಶ್ರುತಿಮಾರ್ಗಾನುರೋಧಿನಃ॥
ಕ್ರಿಯಾಸಾರ. ಉಪೋದ್ಘಾತ. ಭಾ- ೧ ಶ್ಲೋ. ೧೪.

## ಆಗಮಗಳ ಕಾಲ

ವೇದಗಳು ಅನಾದಿ ಹಾಗೂ ಅಪೌರುಷೇಯ ಎಂದು ಸಂಪ್ರದಾಯವಾದಿಗಳು ಭಾವಿಸಿರುವಂತೆ, ಆಗಮಗಳು ಸಹ ಅನಾದಿ ಹಾಗು ಅಪೌರುಷೇಯವೆಂದು ಶಿವಾದ್ವೈತಿಗಳು ಭಾವಿಸಿದ್ದಾರೆ. ಆದರೂ ಆಧುನಿಕ ವಿಮರ್ಶಕರಿಗೆ ಗ್ರಾಹ್ಯವಾಗುವ ರೀತಿಯಲ್ಲಿ ಆಗಮಗಳ ಕಾಲವನ್ನು ನಿರ್ಣಯಿಸಲು ಯತ್ನಿಸಲಾಗಿದೆ.

ಕನ್ನಡ ಸಾಹಿತ್ಯದಲ್ಲಿ ಮಹತ್ವಪೂರ್ಣ ಗ್ರಂಥಗಳಾದ ವಚನಶಾಸ್ತ್ರಗಳಲ್ಲಿ ಮತ್ತು ತಮಿಳು ಸಾಹಿತ್ಯದಲ್ಲಿ ಅನರ್ಘ್ಯಕೃತಿಗಳಾದ ಶಿವಜ್ಞಾನಸಿದ್ಧಿಯಾರ್, ತಿರುಮಂದಿರಂ ಮೊದಲಾದ ಗ್ರಂಥಗಳಲ್ಲಿ ಆಗಮಗಳ ಬಗ್ಗೆ ಉಲ್ಲೇಖವಿರುವುದು ಸುಸ್ಪಷ್ಟ. ನೇಪಾಳದ ದರ್ಬಾರ್ (ಲೈಬ್ರರಿ) ಗ್ರಂಥಭಂಡಾರದಲ್ಲಿ ಸಂಗ್ರಹಿಸಲ್ಪಟ್ಟಿರುವ "ಕಿರಣಾಗಮ" ಹಸ್ತಪ್ರತಿಯು ಕ್ರಿ. ಶ. ೯೨೪ ರಲ್ಲಿ ಮೂಲ ಗ್ರಂಥದಿಂದ ನಕಲು ಮಾಡಿಕೊಳ್ಳಲಾಯಿತೆಂದು ಉಲ್ಲೇಖವಿದೆ. ಶಂಕರಾಚಾರ್ಯರು "ಸೌಂದರ್ಯಲಹರಿ[೧೬]"ಯಲ್ಲಿ ೬೪ ತಂತ್ರಗಳನ್ನು ಹೆಸರಿಸಿರುವುದು; ವೈಷ್ಣವಾಗಮಗಳಲ್ಲಿ ಶೈವಾಗಮಗಳ ಬಗೆಗೆ ಅಭಿಪ್ರಾಯ ವ್ಯಕ್ತವಾಗಿದ್ದರೂ, ಶೈವಾಗಮಗಳಲ್ಲಿ ವೈಷ್ಣವಾಗಮಗಳ ಬಗೆಗೆ ಎಲ್ಲೂ ಉಲ್ಲೇಖವಿಲ್ಲದಿರುವುದು; ಕಾಂಚೀಪುರದ ಕೈಲಾಸನಾಥ ದೇವಾಲಯದಲ್ಲಿರುವ ಪಲ್ಲವ ಶಾಸನವು ಪಲ್ಲವರಾಜನಾದ ರಾಜಸಿಂಹನು "ಆಗಮಾನುಸಾರಿ"ಯೆಂದೂ; ಅಮರಾವತಿಯ ಶಾಸನವು ಪಲ್ಲವರ ಮೂಲಪುರುಷನಾದ ದ್ರೋಣಾಚಾರ್ಯನನ್ನು ವರ್ಣಿಸುತ್ತ ಆತನು "ಸಮಸ್ತಾಗಮಪಾರದೃಶ್ವಾ" ಎಂದು ಹೇಳಿರುವುದು; ಉದಯಗಿರಿ ಗುಹೆ ದೇವಸ್ಥಾನ; ಕುಮಾರುಗುಪ್ತನ ಬಿಲ್‌ಗಡಾ. ಕಲ್ಲಿನ ಸ್ತಂಭದ ಶಾಸನ ಇವುಗಳು; ಡಾ. ಎಸ್. ಸಿ. ನಂದೀಮಠರು, ಡಾ. ರಮಣನ್, ಡಾ. ಶಾಮಾಶಾಸ್ತ್ರಿಗಳು ಮತ್ತು ಡಾ. ಕೆ. ಸಿ. ಪಾಂಡೆ ಇವರ ಪ್ರಮಾಣಪೂರ್ವಕ ಸಂಶೋಧನಾತ್ಮಕ ಲೇಖನಗಳು; ಈ ಎಲ್ಲ ಆಧಾರಗಳಿಂದ[೧೭] ಶಿವಾಗಮಗಳು ಕ್ರಿ.ಪೂ. ಒಂದನೆಯ ಶತಮಾನಕ್ಕೆ ಮೊದಲೇ ಅಸ್ತಿತ್ವದಲ್ಲಿದ್ದುವೆಂಬುದನ್ನು ಖಚಿತವಾಗಿ ಹೇಳಬಹುದು.

ಶೈವಾಗಮಗಳಲ್ಲಿ ಕ್ರಿಯಾಪಾದ, ಚರ್ಯಾಪಾದ, ಯೋಗಪಾದ ಮತ್ತು ಜ್ಞಾನಪಾದ ಎಂದು ನಾಲ್ಕು ಪಾದಗಳಿವೆ. ಈ ಪಾದಗಳಲ್ಲಿ ನಿರೂಪಿತವಾಗಿರುವ ವಿಷಯಗಳನ್ನು ಸಂಗ್ರಹಿಸಿ ಕೊಡಲಾಗಿದೆ.

---

೧೬. ಚತುಷ್ಷಷ್ಟ್ಯಾ ತಂತ್ರೈಃ ಸಕಲಮಭಿಸಂಧಾಯ ಭುವನಂ.

'ಸೌಂದರ್ಯಲಹರೀ' ಶ್ಲೋ. ೩೧.

17. A close study of the Hindu Society, tradition and the way of life of the people' reveals that the society was very much influenced by the Āgamic thought. The flow of the Agamic thought must be very anicent.
'Saivagamas and upanisads' Thesis. P. 39. By. H. P. Malledevaru.

## ಕ್ರಿಯಾಪಾದ

ಕ್ರಿಯಾಪಾದದಲ್ಲಿ ದೇವಾಲಯಗಳ ನಿರ್ಮಾಣ, ಮೂರ್ತಿಗಳ ಸ್ಥಾಪನೆ[೧೮] ಮೊದಲಾದ ವಿಷಯಗಳ ಬಗ್ಗೆ ವಿವರಣೆಯಿದೆ. ದೇವಾಲಯವನ್ನು ಪ್ರಕೃತಿಸುಂದರವಾದ ಪ್ರಶಾಂತ ಪ್ರದೇಶದಲ್ಲಿ ನಿರ್ಮಿಸಬೇಕೆಂದೂ, ಅಂತಹ ಪ್ರದೇಶವನ್ನು ದೇವಾಲಯದ ನಿರ್ಮಾಣಕ್ಕಾಗಿ ಆರಿಸಿಕೊಂಡ ನಂತರ, ಅದನ್ನು ಉತ್ತು ಹಸನುಮಾಡಿ ಬೆಳೆಸನ್ನು ಬೆಳೆಸಿ, ಆ ಬೆಳೆಸನ್ನು ಪಶುಪಕ್ಷಿಗಳು ಯಥೇಚ್ಛವಾಗಿ ತಿನ್ನಲು ಬಿಡಬೇಕು. ಹೀಗೆ ಮಾಡುವುದರಿಂದ ದೋಷ ನ್ಯೂನತೆಗಳು ನಿವಾರಣೆಯಾಗುವುವೆಂದು ಶೈವಾಗಮಗಳು ಪ್ರತಿಪಾದಿಸಿವೆ. ಇಂತಹ ಪ್ರದೇಶದಲ್ಲಿ ದೇವಾಲಯದ ನಿರ್ಮಾಣಕ್ಕೆ ಶಂಕು-ಸ್ಥಾಪನೆಯನ್ನು ಮಾಡಬೇಕು. ಅದನ್ನು ಹೇಗೆ ಕಟ್ಟಬೇಕೆಂಬುದರ ಬಗ್ಗೆ ದೀರ್ಘ ವಿವರಣೆಯಿದೆ. ಕ್ರಿಯಾಪಾದದಲ್ಲಿ ನಗರ ನಿರ್ಮಾಣದ ಬಗೆಗೂ ನಿರ್ದೇಶನವಿದೆ. ಸಸ್ಯಾಹಾರಿಗಳು ಮತ್ತು ಮಾಂಸಾಹಾರಿಗಳು ಬೇರೆ ಬೇರೆಡೆ ಇರಬೇಕೆಂದೂ, ರಸ್ತೆಗಳು ನೇರವಾಗಿ ಅಗಲವಾಗಿರಬೇಕೆಂದೂ ತಿಳಿಸುವುದಲ್ಲದೆ ಗೃಹರಚನೆಯ ಬಗೆಗೂ ವಿವರಣೆಯಿದೆ.

ಮೂರ್ತಿಗಳು[೧೯] ಧ್ಯಾನ ಮತ್ತು ಮೋಕ್ಷಕ್ಕೆ ಸಾಧಕಗಳೆಂದು ವಿವರಿಸಿ, ಅಂತಹ ಮೂರ್ತಿಗಳನ್ನು ಹೇಗೆ ನಿರ್ಮಿಸಬೇಕೆಂಬುದರ ಬಗ್ಗೆ ಉಲ್ಲೇಖವಿದೆ. ಮೂರ್ತಿಗಳನ್ನು ಚಲ, ಅಚಲ, ಚಲಾಚಲವೆಂದು ಮೂರು ಪ್ರಕಾರವಾಗಿ ಹೇಳಲಾಗಿದೆ[೨೦]. ಮೂರ್ತಿ-ಗಳು ಸಕಲವೆಂದೂ, ಲಿಂಗವು ನಿಷ್ಕಲವೆಂದೂ ಪರಿಗಣಿಸಲ್ಪಟ್ಟಿವೆ. ಲಿಂಗದಪೀಠದ ಮೇಲೆ ವೃತ್ತಾಕಾರ ಅಥವಾ ಗೋಳಕಾಕಾರವಾಗಿರುವ ಮೇಲ್ಭಾಗವು ಹೊಂದಿಸಲ್ಪಟ್ಟಿರುತ್ತದೆ. ನಾಗರ, ದ್ರಾವಿಡ, ಮತ್ತು ವೇಸರ ಎಂಬುದಾಗಿ ಪೀಠವು ಮೂರು ಪ್ರಕಾರವಾಗಿರುತ್ತದೆ. ಈಶ್ವರನ ಪಂಚವಿಂಶತಿ ಲೀಲೆಗೆ ಸಂಬಂಧಿಸಿದ ಇಪ್ಪತ್ತೈದು ಮೂರ್ತಿ[೨೧]ಗಳ ಬಗೆಗೆ ಮತ್ತು ಅವುಗಳನ್ನು ಯಾವ ಭಂಗಿಯಲ್ಲಿ ಎಷ್ಟೆಷ್ಟು ಪ್ರಮಾಣಗಳನಿಟ್ಟು ರಚಿಸಬೇಕೆಂಬುದರ ಬಗೆಗೆ ವಿವರಣೆಯಿದೆ.[೨೨] ಲಿಂಗಗಳನ್ನು ಕೂಡ ವ್ಯಕ್ತ, ಅವ್ಯಕ್ತ ಮತ್ತು ವ್ಯಕ್ತಾವ್ಯಕ್ತ ಎಂದು ಮೂರು ಭಾಗ ಮಾಡಿದ್ದಾರೆ. ಮೂರ್ತಿಗಳು ಎಷ್ಟೇ ಸುಂದರವಾಗಿದ್ದರೂ ಪ್ರತಿಷ್ಠಾನವಿಧಿಯನ್ನು ನೆರವೇರಿಸಿದ ನಂತರವೇ ಅವು ಪೂಜಾರ್ಹವಾಗುವುವು. ಪ್ರಧಾನದೇವತೆ ಮತ್ತು ಪರಿವಾರ ದೇವತೆಗಳನ್ನು ದೇವಾಲಯದ ಯಾವ ಯಾವ ಭಾಗದಲ್ಲಿ ಪ್ರತಿಷ್ಠಿಸಬೇಕೆಂಬುದರ ಬಗೆಗೂ ಈ ಪಾದದಲ್ಲಿ ವಿವರಣೆ ಕಂಡು ಬರುವುದು.

---

೧೮. ಕಾಮಿಕಾಗಮ. ಭಾ. ೧. ಪಟಲ. ೪-೬.

೧೯. ಕಾರಣಾಗಮ. ಭಾ. ೧. ಪಟಲ. ೭.

೨೦. ಸುಪ್ರಭೇದಾಗಮ. ಭಾ. ೨ ಪಟಲ. ೨೩-೭೨.

೨೧. ಕಾಮಿಕಾಗಮ. ಭಾ. ೨. ಪಟಲಗಳು ೪೭-೫೭

೨೨. ಕಾರಣಾಗಮ. ಭಾ. ೧ ಪಟಲ. ೫೭-೧೦೧.

## ಚರ್ಯಾಪಾದ

ಮಾನವನು ಪ್ರತಿದಿವಸ ಮಾಡಬೇಕಾದ ಕ್ರಿಯೆಗಳನ್ನು ಚರ್ಯಾಪಾದದಲ್ಲಿ ವಿವರಿಸಲಾಗಿದೆ. ಶೈವಾಗಮಗಳು ಬಾಹ್ಯ ಮತ್ತು ಆಂತರಿಕ ಶುದ್ಧಿ ಹೊಂದುವ ವಿಧಾನವನ್ನು ತಿಳಿಸುತ್ತವೆ. ಬಾಹ್ಯಶುದ್ಧಿಯನ್ನು ಸ್ನಾನಾದಿಗಳಿಂದ ಹೊಂದಬಹುದು. ಕಾಮಿಕಾಗಮವು[೨೩] ವಾರುಣ, ಆಗ್ನೇಯ, ಮಂತ್ರ, ಮಾನಸ, ವಾಯವ್ಯ ಮತ್ತು ಮಹೇಂದ್ರ ಹೀಗೆ ಆರು ತೆರನಾದ ಸ್ನಾನಗಳನ್ನೂ, ಆಯಾ ಸ್ನಾನಗಳನ್ನು ಮಾಡುವ ಕಾಲದಲ್ಲಿ ಉಚ್ಚರಿಸಬೇಕಾದ ಮಂತ್ರಗಳನ್ನೂ, ದೇಹದ ವಿವಿಧ ಭಾಗಗಳಿಗೆ ಮಂತ್ರೋಚ್ಚಾರಣೆಯೊಡನೆ ಮಾಡುವ ವಿಭೂತಿಧಾರಣೆಯನ್ನೂ ವಿವರಿಸುತ್ತದೆ. ಆಂತರಿಕ ಶುದ್ಧಿಯು ನೀತಿ ನಿಯಮಗಳಿಗೆ ಬದ್ಧವಾದ ಪರಿಶುದ್ಧ ಜೀವನ ಹಾಗೂ ಉಪಾಸನೆಯಿಂದ ಲಭಿಸುವುದು. ಬೇರೆ ಬೇರೆ ದೇವತೆಗಳು ಉಕ್ತವಾಗಿದ್ದರೂ ಶಿವನೇ ಪ್ರಧಾನ ದೇವತೆ, ಪಂಚಾಕ್ಷರೀ ಮಹಾಮಂತ್ರವೇ ಎಲ್ಲ ಮಂತ್ರಗಳಿಗಿಂತಲೂ ಮಿಗಿಲಾದುದು.

ಅರ್ಚನೆಯು 'ಸ್ವಾರ್ಥ' ಮತ್ತು 'ಪರಾರ್ಥ' ವೆಂಬುದಾಗಿ ಎರಡು ವಿಧ.[೨೪] ಪ್ರತಿಯೊಬ್ಬ ಶೈವನು ಸ್ವಾರ್ಥಪೂಜೆಯನ್ನು ತನಗೋಸ್ಕರವಾಗಿ ಮಾಡಬೇಕು. ಪರಾರ್ಥ ಪೂಜೆಯನ್ನು ಪುರೋಹಿತನು ಭಕ್ತರಿಗೋಸುಗವಾಗಿ ದೇವಾಲಯದಲ್ಲಿ ಮಾಡುವನು. ಭಕ್ತನು ದೇವರಿಗೆ ನೈವೇದ್ಯವನ್ನು ಅರ್ಪಿಸಿದ ನಂತರವೇ ಆಹಾರ (ಪ್ರಸಾದ)ವನ್ನು ತೆಗೆದುಕೊಳ್ಳಬೇಕು.

ವೈದಿಕ ವ್ರತಾಚರಣೆಗಳಲ್ಲಿ ಕಾಷ್ಠ (ಅರಣಿ) ಗಳನ್ನು ಮಥಿಸಿ, ಅಗ್ನಿಯನ್ನು ಹೊಂದುವಂತೆಯೇ, ಶೈವಾಗಮಗಳಲ್ಲೂ ಅಗ್ನಿಯನ್ನು ಹೊಂದಬೇಕು. ಆದರೆ ಶೈವಾಗಮಗಳು ಅಗ್ನಿಯನ್ನು ವೈದಿಕಾಗ್ನಿ, ಮಿಶ್ರಾಗ್ನಿ ಮತ್ತು ಶೈವಾಗ್ನಿ[೨೫] ಎಂದು ಮೂರು ಬಗೆಯಾಗಿ ವಿಂಗಡಿಸುವುದು.

ದೇವತೆಗಳನ್ನು ಪ್ರತಿದಿವಸ ಅರ್ಚಿಸುವ ವಿಧಾನವನ್ನೂ, ವಿಶೇಷ ಸಂದರ್ಭಗಳಲ್ಲಿ ಪೂಜಿಸುವ ವಿಧಾನಗಳನ್ನೂ, ನಿತ್ಯೋತ್ಸವ ಮತ್ತು ಮಹೋತ್ಸವಾದಿಗಳನ್ನೂ ಶೈವಾಗಮಗಳು[೨೬] ಪೂರ್ಣವಾಗಿ ವಿವರಿಸುವುವು.

ಮಾನವನ ಜೀವನವನ್ನು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸ ಎಂಬುದಾಗಿ ನಾಲ್ಕು ವಿಭಾಗಗಳನ್ನಾಗಿ ನಿರೂಪಿಸಿ, ಪ್ರತಿಯೊಂದು ಅವಸ್ಥೆಯಲ್ಲಿ ಮಾಡಬೇಕಾದ ಅವಶ್ಯ ಕರ್ತವ್ಯಗಳ ಬಗೆಗೆ ವಿವರಣೆಯಿರುವದಷ್ಟೇ ಅಲ್ಲದೆ ಗೋತ್ರಾದಿ[೨೭]ಗಳ ಬಗೆಗೂ ವಿವರಣೆಯಿದೆ.

---

೨೩. ಕಾಮಿಕಾಗಮ. ಭಾ. ೧. ಪಟಲ ೩.

೨೪. ಕಾಮಿಕಾಗಮ. ಭಾ. ೧. ಪಟಲ ೪.

೨೫. ಕಾಮಿಕಾಗಮ. ಭಾ. ೧. ಪಟಲ. ೮.

೨೬. ಕಾಮಿಕಾಗಮ. ಭಾ. ೨. ಪಟಲ ೪–೯.

೨೭. ಸುಪ್ರಭೇದಾಗಮ. ಚರ್ಯಾಪಾದ, ಪಟಲ ೧.

ಶೈವಾಗಮಗಳು ಸಂಸ್ಕಾರಗಳನ್ನು ಪ್ರತಿಪಾದಿಸುವುವು. ಸುಪ್ರಭೇದಾಗಮವು ಹದಿನಾರು ಸಂಸ್ಕಾರಗಳನ್ನು ನಿರೂಪಿಸುವುದು. ಇಲ್ಲಿ ಪ್ರತಿಪಾದಿತವಾದ ಸಂಸ್ಕಾರಗಳು ಗೃಹ್ಯಸೂತ್ರಗಳಲ್ಲುಕ್ತವಾದ ಸಂಸ್ಕಾರಗಳಿಗೆ[೨೮] ಕೆಲವಂಶಗಳಲ್ಲಿ ಸಮಾನವಾಗಿ ಕಂಡು ಬಂದರೂ, ಇಲ್ಲಿಯ ಪ್ರಧಾನದೇವತೆಯು ಶಿವನೆಂಬುದನ್ನೂ, ಈ ಸಂದರ್ಭಗಳಲ್ಲಿ ಉಪ ಯೋಗಿಸುವ ಮಂತ್ರವು "ಶಿವ ಮಂತ್ರ"ವೆಂಬುದನ್ನೂ ಮರೆಯಲಾಗದು. ಉಪ-ನಯನ[೨೯] ಮತ್ತು ದೀಕ್ಷೆಗಳು[೩೦] ಸಮಾನವೆಂಬಂತೆ ತೋರಿದರೂ ಅವುಗಳಿಗೆ ಅಂತರ ವಿವೆ. ಶಕ್ತಿವಿಶಿಷ್ಟಾದ್ವೈತದಂತೆ ಜೀವಿಗೆ ಮತ್ತು ಶಿವನಿಗೆ ಭೇದವನ್ನುಂಟುಮಾಡು ವುವೇ ಮಲತ್ರಯಗಳು. ಮಲತ್ರಯಗಳಿಂದ ಪರಿವೃತನಾದ ಮಾನವನನ್ನು ಶುದ ನನ್ನಾಗಿ ಮಾಡಿ ಆತನಿಗೆ ಅಧ್ಯಾತ್ಮ ಸ್ವಾತಂತ್ರ್ಯವನ್ನಿತ್ತು ಶಿವಾದ್ವೈತ ಸಾಹಿತ್ಯವನ್ನು ಅಭ್ಯಸಿಸುವುದಕ್ಕೆ ದೀಕ್ಷೆಯು[೩೧] ಅನುವು ಮಾಡಿ ಕೊಡುವುದು. ಕಾಮಿಕಾಗಮ[೩೨] ಸುಪ್ರಭೇದಾಗಮಗಳು[೩೩] ಸಮಯದೀಕ್ಷೆ ಮತ್ತು ನಿರ್ವಾಣದೀಕ್ಷೆಯನ್ನು ವಿಶದವಾಗಿ ವಿವರಿಸುವುವು. ಗುರುವನ್ನು ಅರಸಿಕೊಂಡು ಬರುವಂಥ ಉತ್ತಮ ಶಿಷ್ಯನನ್ನು ಗುರುವು ಸ್ವೀಕರಿಸಿ, ವಿಧಿಪೂರ್ವಕವಾದ ಅರ್ಚನೆಗಳೊಡನೆ ಶಿಷ್ಯನ ಮಸ್ತಕದ ಮೇಲೆ ತನ್ನ ಹಸ್ತವನ್ನಿಟ್ಟು, ಆತನ ಮಲತ್ರಯಗಳು ಅಳಿಯುವಂತೆ ಅನುಗ್ರಹಿಸಿ, ಪ್ರಣವ ಪಂಚಾಕ್ಷರಿಯನ್ನು ಆತನ ಕರ್ಣದಲ್ಲಿ ಉಪದೇಶಿಸುವನು. ಆ ನಂತರವೇ ಶಿಷ್ಯನು ದೇವರನ್ನು ಅರ್ಚಿಸಲು ಮತ್ತು ಶೈವಧರ್ಮ ಸಾಹಿತ್ಯವನ್ನು ಅಭ್ಯಸಿಸಲು ಅರ್ಹನಾ ಗುವನು. ಇದೇ ಸಮಯದೀಕ್ಷೆ. ಈ ದೀಕ್ಷೆಯನ್ನು ಸ್ತ್ರೀಯರು ಮೊದಲ್ಗೊಂಡು ಎಲ್ಲ ರಿಗೂ ಅನುಗ್ರಹಿಸಬಹುದೆಂದು ಕೆಲವು ಗ್ರಂಥಗಳು[೩೪] ಪ್ರತಿಪಾದಿಸಿವೆ. ಮಾನವನು ಸಮಯದೀಕ್ಷೆಯಿಂದ ಪರಿಶುದ್ಧನಾಗಿ ಅಧ್ಯಾತ್ಮ ಪಥದಲ್ಲಿ ಪ್ರಗತಿ ಪಡೆದಾಗ ನಿರ್ವಾಣ ದೀಕ್ಷೆಯನ್ನು ಪಡೆಯಲು ಅರ್ಹನಾಗುವನು. ಭವ ಬಂಧನಗಳ ಮುಕ್ತಿಯೇ ನಿರ್ವಾಣ ದೀಕ್ಷೆಯ ಗುರಿ. ಈ ದೀಕ್ಷೆಯು ಅಧ್ವ ಮತ್ತು ಮಲಗಳಿಂದ ಮಾನವನನ್ನು ಪೂರ್ಣ ವಾಗಿ ಮುಕ್ತನನ್ನು ಮಾಡಿ ಆತನ ನಿಜಸ್ವರೂಪವನ್ನರಿಯಲು ಸಹಾಯವೆಸಗುವುದು. ಶೈವಾಗಮಗಳಲ್ಲಿ ಮಹತ್ವಪೂರ್ಣವಾದ ದೀಕ್ಷೆಯ ಬಗೆಗೆ ಕೆಲವು ವ್ಯತ್ಯಾಸಗಳು ಕಂಡು

---

೨೮. Hindu Samskaras " By Dr. R. B. Pandey M.A; D. Litt.

೨೯. Upanayana Samskāra and its Significance according to Pārashara Grhya Sutras" Jouranal of the Karnatak University, Humanities. Vol. IV. June 1960 By H.P. Malledevaru. (Virasaina Quar(er|y Joarnal)

೩೦. "ದೀಕ್ಷೆ" By. H.P. Malledevaru.

೩೧. ತನುತ್ರಯಗತಾನಾದಿ ಮಲತ್ರಯಮಸಾಗುರುঃ
ದೀಕ್ಷಾತ್ರಯೇಣ ನಿರ್ದಗ್ಧ್ವಾ ಲಿಂಗತ್ರಯ ಮುಪಾದಿಶೇತ್ ||

೩೨. ಕಾಮಿಕಾಗಮ. ಭಾ. ೨. ಪಟಲ ೨೦-೨೩

೩೩. ಸುಪ್ರಭೇದಾಗಮ ಚರ್ಯಾಪಾದ ಪಟಲ. ೪

೩೪. 'ಈಶಾಶನ ಶಿವಗುರುದೇವ ಪದ್ಧತಿ' ಭಾ. ೩. ೧೪೭.

ಬಂದರೂ ಮುಖ್ಯಭಾಗಗಳಲ್ಲಿ ವ್ಯತ್ಯಾಸವಿಲ್ಲದೆ ಒಂದೇ ಅಭಿಪ್ರಾಯವನ್ನೊಳಗೊಂಡಿರುವುವು. ಆಮರಣ ಪರ್ಯಂತ ಎಂಟು ಸಮಯಗಳನ್ನು ಆಚರಣೆಯಲ್ಲಿ ಅನುಷ್ಠಾನಕ್ಕೆ ತರಬೇಕೆಂದು ಶೈವಾಗಮಗಳು ವಿಧಿಸುತ್ತವೆ.

ಅಗ್ನಿಚಯನ, ಅಷ್ಟಕ, ಸಂಸ್ಕಾರ, ಸಂಪಿಡೀಕರಣ ಈ ಕ್ರಿಯೆಗಳಲ್ಲಿ ಸೂತ್ರ, ಸ್ಮೃತಿಶಾಸ್ತ್ರಗಳಿಗೆ ಮತ್ತು ಶೈವಾಗಮಗಳಿಗೆ ಸಮಾನವಾಗಿರುವ ಅಂಶಗಳು ಹಲವು ಕಂಡುಬಂದರೂ, ಅನೇಕ ಕ್ರಿಯೆಗಳಲ್ಲಿ ಭಿನ್ನತೆಯನ್ನು ಕೂಡ ಕಾಣಬಹುದು. ಮಾನವನು ಮೃತನಾದಾಗ ಹುಗಿಯಬಹುದು ಅಥವಾ ಸುಡಬಹುದು ಎಂದು ಕೆಲವು ಶೈವಾಗಮಗಳು ಹೇಳಿವೆ. ಆದರೆ ಲಿಂಗಧಾರಿಯಾದವರು ಲಿಂಗೈಕ್ಯರಾದಾಗ ಸುಡಬಾರದೆಂದೂ, ಸಮಾಧಿಮಾಡಬೇಕೆಂದು ಕೆಲವು ಆಗಮಗಳು ಪ್ರತಿಪಾದಿಸಿವೆ.[೩೫]

## ಯೋಗಪಾದ

ಯೋಗದ ವಿಷಯವನ್ನು ನಿರೂಪಿಸುವದಕ್ಕಾಗಿ ಶಿವಾಗಮಗಳಲ್ಲೆಲ್ಲ ಪ್ರತ್ಯೇಕ ಪಾದವಿದ್ದರೂ, ಲಭ್ಯವಿರುವ ಅನೇಕ ಶೈವಾಗಮಗಳಲ್ಲಿ ಈ ಪಾದವು ಲುಪ್ತವಾಗಿರುವುದು ದುರದೃಷ್ಟಕರವಾದುದು. ಆದರೆ ಸುಪ್ರಭೇದಾಗಮ[೩೬] ಮೃಗೇಂದ್ರಾಗಮ[೩೭] ಮೊದಲಾದ ಕೆಲವು ಆಗಮಗಳಲ್ಲಿ ಯೋಗದ ಬಗೆಗೆ ವಿವರಣೆಯಿದೆ. ಜೀವಾತ್ಮ ಮತ್ತು ಪರಮಾತ್ಮ ಇವರ ಐಕ್ಯವೇ ಯೋಗಶಾಸ್ತ್ರದ ಗುರಿ. ಯೋಗದಲ್ಲಿ ಸಿದ್ಧಿ ಹೊಂದಬೇಕಾದರೆ ತನುಮನಗಳ ಮೇಲೆ ಮಾನವನಿಗೆ ಸಂಪೂರ್ಣ ಪ್ರಭುತ್ವವಿರಬೇಕು. ಶರೀರ ಮತ್ತು ಇಂದ್ರಿಯಗಳನ್ನು ಈಡಾ, ಪಿಂಗಳ ಮತ್ತು ಸುಷುಮ್ನ ನಾಡಿಗಳ ಮೂಲಕ ಪರಿಶುದ್ಧಗೊಳಿಸಬೇಕು. ಅಶ್ವತ್ಥವೃಕ್ಷದ ಎಲೆಯಲ್ಲಿ ಅಸಂಖ್ಯಾತ ಗೆರೆಗಳು ಹೇಗೆ ಪಸರಿಸಿರುವುವೋ ಅಂತೆಯೇ ಮಾನವನ ಶರೀರದಲ್ಲೂ ಸು. ೭೨೦೦೦ ನಾಡಿಗಳಿರುವವು.[೩೮] ಪ್ರಧಾನವಾದ ಮೂರು ನಾಡಿಗಳು, ಅಷ್ಟು ಪ್ರಧಾನವಲ್ಲದ ಹತ್ತು ನಾಡಿಗಳು, ದಶವಾಯುಗಳು ಶರೀರದ ಯಾವ ಯಾವ ಭಾಗಗಳಲ್ಲಿದ್ದು ಏನು ಕಾರ್ಯ ಮಾಡುತ್ತವೆಂಬುದರ ಬಗೆಗೂ ವಿವರಣೆಯಿದೆ.

---

೩೫. ಶಿವಲಿಂಗಧರೋ ವಿಪ್ರೋ ವಿಪನ್ನಸ್ತಂ ನ ದಾಹಯೇತ್ ।
ಯದಿ ವಾ ದಾಹಯತ್ತಸ್ಯ ಬ್ರಹ್ಮಹತ್ಯಾ ಸದಾ ಭವೇತ್ ।
ಗೃಹೀವಾಽಥ ಯತಿರ್ವಾಪಿ ಲಿಂಗಧಾರೀ ತನುಂ ತ್ಯಜೇತ್ ।
ನ ದಹೇತ್ತಸ್ಯ ದೇಹಂ ತು ಸಮಾಧೌ ಗೋಪಯೇತ್ ಸದಾ
ಚಂದ್ರಜ್ಞಾನಾಗಮ. ಚರ್ಯಾಪಾದ. ಪಟಲ. ೧ ಶ್ಲೋ. ೯-೧೨.

೩೬. ಸುಪ್ರಭೇದಾಗಮ. ಯೋಗಪಾದ. ಪಟಲ. ೧.

೩೭. ಮೃಗೇಂದ್ರಾಗಮ. ಯೋಗಪಾದ. ಪಟಲ. ೨

೩೮. ಸುಪ್ರಭೇದಾಗಮ. ಯೋಗಪಾದ. ಪಟಲ ೧. ಶ್ಲೋ- ೨.

ಆಧಾರ, ಸ್ವಾಧಿಷ್ಠಾನ, ಮಣಿಪೂರಕ ಅನಾಹತ, ವಿಶುದ್ಧಿ ಮತ್ತು ಆಜ್ಞಾ ಈ ಆರು ಚಕ್ರಗಳ[೬೯] ಬಗೆಗೂ ಸಂಪೂರ್ಣ ನಿರೂಪಣೆಯನ್ನಿತ್ತು, ಯೋಗ ಸಾಧನೆಯಲ್ಲಿ ಸಿದ್ಧಿಗಳು ತಾವಾಗಿ ಕರಗತವಾದರೂ, ಸಾಧಕನು ಸಿದ್ಧಿಗಳನ್ನು ತ್ಯಜಿಸಿ ಶಿವ-ನೊಡನೆ ಐಕ್ಯಹೊಂದಬೇಕೆಂದು ಶೈವಾಗಮಗಳು ನಿರ್ದೇಶಿಸಿವೆ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿಗಳ ಬಗೆಗೂ ದೀರ್ಘ ವಿವರಣೆಯಿದೆ.

ಯೋಗನಿರತನಾದ ಸಾಧಕನಿಗೆ ಭೇರೀನಾದ, ಮತ್ತು ಶಂಖನಾದ ಮೊದಲಾದ ನಾದಗಳು ಆಂತರಿಕವಾಗಿ ಕೇಳಿ ಬರುವುವೆಂದೂ ಇವು ಪ್ರಗತಿಯ ಚಿಹ್ನೆಯೆಂದೂ ತಿಳಿಸಿವೆ.

ವಾತುಲಾಗಮ, ಸೂಕ್ಷ್ಮಾಗಮ, ಪಾರಮೇಶ್ವರಾಗಮ ಮೊದಲಾದ ಶಿವಾಗಮಗಳು ಲಿಂಗವನ್ನು ಪೂಜಿಸಿ, ಲಿಂಗದಲ್ಲಿ ನಿರ್ನಿಮೇಷ ದೃಷ್ಟಿಯಿಟ್ಟು ಧ್ಯಾನಮಗ್ನನಾಗುವುದೇ "ಶಿವಯೋಗ"ವೆಂದೂ, ಈ ಯೋಗವು ಬೇರೆ ಯೋಗಗಳಿಗಿಂತ ಪ್ರಶಸ್ತವೆಂದೂ ಪ್ರತಿಪಾದಿಸಿವೆ.

## ಜ್ಞಾನಪಾದ

ಜ್ಞಾನಪಾದದಲ್ಲಿ ತತ್ತ್ವಶಾಸ್ತ್ರವು ಪ್ರತಿಪಾದಿತವಾಗಿದೆ. ತತ್ತ್ವಶಾಸ್ತ್ರದಲ್ಲಿ ಪ್ರಧಾನವಾಗಿ ವಿವೇಚಿಸಬೇಕಾದ ಪತಿ (ದೇವರು), ಪಶು (ಜೀವ) ಮತ್ತು ಪಾಶ ಇವುಗಳು ಮತ್ತಿತರ ವಿಷಯಗಳು ಪ್ರತಿಪಾದಿತವಾಗಿವೆ.

ಪತಿ[೭೦] ಎಂದರೆ ಪ್ರಭು, ಪರಮಾತ್ಮ. ಪತಿಯು ನಿಷ್ಕಲ. ಶೈವಾಗಮಗಳು ಅವನನ್ನು ಈಶ್ವರ, ಸದಾಶಿವ, ಶಿವ, ಲಿಂಗ ಎಂದೂ ವರ್ಣಿಸಿವೆ. ಆತನಲ್ಲಿ ಶಕ್ತಿಯು ಅವಿನಾಭಾವಸಂಬಂಧದಿಂದ ಯಾವಾಗಲೂ ಇರುತ್ತದೆ. ಶಿವ-ಶಕ್ತಿಯರೇ ಸೃಷ್ಟಿ, ಸ್ಥಿತಿ, ಲಯ, ತಿರೋಭಾವ, ಮತ್ತು ಅನುಗ್ರಹ ಈ ಪಂಚಕೃತ್ಯಗಳಿಗೆ ಕಾರಣರು.

ಪಶುಗಳೆಂದರೆ ಆತ್ಮರುಗಳು.[೭೧] ಶಿವನಿಂದ ಭಿನ್ನರಾದ ಇವರು ಚೈತನ್ಯಯುಕ್ತರಾಗಿದ್ದರೂ ಅವರ ಚೈತನ್ಯವು ಮಲತ್ರಯ (ಪಾಶ)ದಿಂದ ಆವೃತವಾಗಿರುವುದು. ಮಲತ್ರಯದಿಂದ ಬದ್ಧರಾದ ಈ ಆತ್ಮರು ತಮ್ಮ ನಿಜಸ್ಥಿತಿಯನ್ನು ಮರೆತಿರುತ್ತಾರೆ. ಬಹು ಜನ್ಮಗಳನ್ನು ಪಡೆದು ಮುಕ್ತಿಹೊಂದುವ ಅವಧಿಯನ್ನು ಶ್ರೀಗುರುವಿನ ಅನುಗ್ರಹ ಪಡೆದು ದೀಕ್ಷೆ ಹೊಂದುವುದರ ಮೂಲಕ ಕಡಿಮೆಮಾಡಿಕೊಳ್ಳಬಹುದೆಂದು ಶಿವಾಗಮಗಳು ಪ್ರತಿಪಾದಿಸಿವೆ.

---

೬೯. ಸುಪ್ರಭೇದಾಗಮ, ಯೋಗಪಾದ ಪಟಲ ೧. ಶ್ಲೋ. ೨೯–೩೦

೭೦. ಚಂದ್ರಜ್ಞಾನಾಗಮ. ಪಟಲ ೧. ಶ್ಲೋ. ೧೭–೧೧.

೭೧. ಶೈವಾಗಮ (Mss. No. 66684 Adyar library, Madras).

ಆತ್ಮರುಗಳನ್ನು ಬಂಧನಕ್ಕೊಳಗುಮಾಡುವುದೇ ಪಾಶ. ಶಿವಾನಂದವನ್ನನುಭವಿಸಲಿಕ್ಕೆ ಅಡ್ಡಿಯಾಗಿರುವುದೇ ಪಾಶ.[೪೨] ಆಣವ,ಕಾರ್ಮಿಕ ಮತ್ತು ಮಾಯಿಕ ಎಂಬುದಾಗಿ ಪಾಶಗಳು ಮೂದೆರನಾಗಿವೆ. ಮಲತ್ರಯದ ಬಗೆಗೆ ಆಗಮಗಳಲ್ಲಿ ವಿವರಣೆಯಿದೆ.

ಶಿವಸೃಷ್ಟಿ, ಬ್ರಹ್ಮಸೃಷ್ಟಿ,[೪೩] ಮೂವತ್ತಾರು ತತ್ವಗಳು, ಷಡಧ್ವಗಳು, ಕಲೆಗಳು, ಪಂಚ ಸಾದಾಖ್ಯಗಳು ಮೊದಲಾದುವನ್ನು ಆಗಮಗಳು ದೀರ್ಘವಾಗಿ ವಿವರಿಸುತ್ತವೆ.

ತಮಿಳು ನಾಡಿನ ಶೈವ ಸಿದ್ಧಾಂತ ಮತ್ತು ಕರ್ನಾಟಕದ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತಗಳಿಗೂ ಶೈವಾಗಮಗಳು ಬುನಾದಿಯಾಗಿವೆ. ವಾತುಲ, ಸೂಕ್ಷ್ಮ, ಕಾಲೋತ್ತರ ಪಾರಮೇಶ್ವರ ಮೊದಲಾದ ಶೈವಾಗಮಗಳಲ್ಲಿ ವೀರಶೈವ ಧರ್ಮ ಮತ್ತು ತತ್ವಗಳಿಗೆ ಸಂಬಂಧಿಸಿದ ವಿಷಯಗಳು ಹೆಚ್ಚಾಗಿ ನಿರೂಪಿತವಾಗಿವೆ. ಒಟ್ಟಿನಲ್ಲಿ ಶೈವಾಗಮಗಳ ಅಧ್ಯಯನವು ಭಾರತೀಯ ಧರ್ಮ ಮತ್ತು ಸಂಸ್ಕೃತಿಗಳ ಬಗೆಗೆ ಹೆಚ್ಚಿನ ಬೆಳಕನ್ನು ನೀಡುವುದು. □

---

೪೨. ಪಾಶತ್ವಂ ನಾಮ ಶಿವಾನಂದಾಭಿವ್ಯಕ್ತಿನಿರೋಧಿತ್ವಂ ........................
ಶೈವ ಪರಿಭಾಷಾ. ಅಧ್ಯಾಯ. ೪. ಪು. ೭೨.

೪೩. ಸುಪ್ರಭೇದಾಗಮ, ಜ್ಞಾನಪಾದ. ಪಟಲ. ೧-೩.

# ಭಿಕ್ಷಾಂಕ

(ಪೂಜ್ಯ ಜಗದ್ಗುರುಗಳು ವಿದ್ಯಾರ್ಥಿ ಜೀವನದಲ್ಲಿ ರಚಿಸಿದ ಕವನ ಸಂಕಲನಗಳಲ್ಲಿ ಆಯ್ದುಕೊಂಡ ಕೆಲವು ಕವನಗಳು.)

೧

ಹಸಿದಿರುವೆ ಓ ತಂದೆ, ಬಂದಿರುವೆ ನಿನ್ನ ಬಳಿ
ಬೇಡುವೆನು ಭಿಕ್ಷೆಯನ್ನು
ನೀಡದಿರೆ ನಾನಿನ್ನು ಸಾಯುವೆನು ಬಲು ಬಳಲಿ
ನಿಂತಿಹೆನು ನೋಡು ಮುನ್ನ

೨

ಕಲಿಕಾಲವಿಹುದೀಗ ನೀಡುವರು ಬಹಳಿಲ್ಲ
ಎಲ್ಲರನು ಕೇಳಿ ಬಂದೆ
ಉತ್ತರವನಿತ್ತರೈ ನಡೆ ಮುಂದೆ ನೀನಿಲ್ಲಿ
ನಿಲ್ಲದಿರು ಹೋಗು ಮುಂದೆ.

೩

ಧನಕನಕ ಕೇಳದಲೆ ಇಂತಿವರು ಮಾಡುವರು
ಬಡಕೊಂಡೆ ಎನ್ನ ಕುಕ್ಷಿ
ಕೃಪೆಮಾಡು ಜವದಿಂದೆ ಅಂತರ್ಯಾಮಿ ಓ ಗುರುವೆ
ಬೇಡುವೆನು ಜ್ಞಾನ ಭಿಕ್ಷೆ.

'ಪಥಿಕ'ದಿಂದ

# ಪಥಿಕ

ದಾರಿಗಾಣದೆ ಗುರುವೆ ಕುಳಿತಿಹೆ
ಚಿಂತಿಸುತ್ತಲಿ ನಿನ್ನಯು
ದಾರಿದೋರುತ ಬೆಳಗು ನೀಡುತ
ಮನೆಯ ಸೇರಿಸು ಎನ್ನಯು

೧

ಕಾಳರಾತ್ರಿಯು ಮುಸುಗಿ ಮುತ್ತಿದೆ
ದಿಕ್ಕು ತಪ್ಪುತಲಿರುವೆನು
ಧುಳು ಸೂಸುವ ಭರದಿ ಬೀಸುವ
ಗಾಳಿ ಹೊಡೆತವ ಸಹಿಸೆನು
ಮೇಲೆ ಮೇಘವು ಗುಡುಗು ಹಾಕುತ
ಭಯದ ಬೆದರಿಕೆ ಕೊಡುತಿದೆ
ಕೋಲು ಮಿಂಚದು ಒಮ್ಮೆ ಒಮ್ಮೆಯೆ
ಮಿಂಚಿ ಬೆಳಕನು ತರುತಿದೆ

೨

ಬನದ ಸುತ್ತಲು ಕಳ್ಳಕಾಕರು
ವಾಸಮಾಡುತ ಹೊಂಚುತ
ಅಣಗಿಕೊಂಡಿಹರಂತೆ ಧನವನು
ಹಾದಿಗಾರರ ಸುಲಿಯುತ
ಮುಂದೆ ಹೋದಡೆ ತಗ್ಗುದಿನ್ನೆಯು
ಮತ್ತೆ ಬರುವದು ತಡೆವುದು
ಮುಂದುವರೆಯಲು ದೊಡ್ಡ ಬೆಟ್ಟವು
ಎದುರು ಕಾಣುತಲಿರುವದು

೩

ಹೊಳೆಯು, ಹಳ್ಳವು ಕೆರೆ ಸರೋವರ
ತುಂಬಿಹರಿಯುತಲಿರುವವು
ತೇಲಿ ಹೋಗಲು ಬರುವದೆಂದರೆ
ನಡುವೆ ಮೊಸಳೆಗಳೆಳೆವವು
ಕುರುಡುನಂದದಿ ಹೆಳವನಂದದಿ
ಸುತ್ತು ತಿರುಗುವದೊದಗಿದೆ
ಮಿರುಗುವಿಲ್ಲದ ಗಹ್ವರಂದದಿ
ನನ್ನ ಜೀವನವಾಗಿದೆ

'ಪಥಿಕ'ದಿಂದ

# ಶಿವನ ಪುಟ್ಟಿ

೧

ಹೃದಯ ಶಾಖದಿ ಏರಿಸು ಪುಟ್ಟಿ.
ಅದರೊಳ್ ಜ್ಞಾನಸುದೀಪವನಿಟ್ಟು
ಮುತ್ತಿದ ಕತ್ತಲೆ ಪೊತ್ತವನಟ್ಟಿ
ಸುತ್ತುತ ಬರುತಿವೆ ಗಾಳಿಯಕಟ್ಟಿ.

೨

ಬಂಧುರ ಸತ್ಯದ ಸ್ತಂಭವನೂರಿ
ಸುಂದರ ಬಕುತಿಯ ದಾರವ ತೂರಿ
ಅಷ್ಟಮದಂಗಳ ದಾರಿಯ ಮೀರಿ
ಆತ್ಮಾನಂದದ ಸೊಗವನು ತೋರಿ

೩

ನಭದಲಿ ಬೆಳಗಲಿ ಚಿನ್ಮಯ ಕಿರಣ
ತುಂಬಲಿ ಪುಟ್ಟಿಯು ದೇವರ ಸ್ಮರಣ
ಆಗಲಿ ಜನನದ ಮರಣದ ಹರಣ
ಇಂತೇರಿಸು ಶಿವಪುಟ್ಟಿಯ ಜಾಣ

'ಪಥಿಕ'ದಿಂದ

## ಆಹ್ವಾನ

೧

ಬಾಗಿಲವ ತೆರದಿರುವೆ ಬಾ ಬೇಗೆ ಓ ಗುರುವೆ
ದಾರಿಯನು ನೋಡುತ್ತ ಕುಳಿತಿರುವೆ ಬಾ
ನಿನಗಾಗಿ ಕಟ್ಟಿರುವೆ ಸುಂದರದ ಮಂಟಪವ
ಚಿತ್ರದಿಂ ಶೋಭೆಯನು ಮಾಡಿರುವೆ ಬಾ

೨

ಆಸನವ ಹಾಸಿರುವೆ ಗಂಧವನು ತೇದಿರುವೆ
ಪತ್ರಿ ಪುಷ್ಪಗಳನೆತ್ತಿರುವೆ ಬಾ ಬಾ
ನಿರ್ಮಲದ ಹೃದಯದಿಂ ಸೇವೆಯನು ಮಾಡಿರುವೆ
ಭಕ್ತಿಯಿಂ ಕೈಮುಗಿದು ಬೇಡುವೆನು ಬಾ

೩

ಸಿಂಹಾಸನಾಸೀನನಾಗುತ್ತ ಪಾವನವ
ಗೈಯುತ್ತ ಜಲವನ್ನು ಸಿಂಚಿಸುತ ಬಾ
ಹೃದಯಮಂಟಪದೆನ್ನ ಚಿಚ್ಚರಣ ಕಿರಣಗಳ
ಹರಡುತ್ತ ಕತ್ತಲೆಯ ನಶಿಸುತ್ತ ಬಾ ಬಾ

'ಪಥಿಕ'ದಿಂದ

## ಕವಿ

೧

ಕಲ್ಲಿನೆದೆಯು ಕರಗಿಸುವನು
ದೇವನಡಿಯು ತೋರಿಸುವನು
"ತತ್ವಮಸಿ"ಯ ತತ್ವವನ್ನು
ತಿಳುಹಿ ಕೊಡುವನು
ಭಾವಪುಷ್ಪವರಳಿದಾಗ
ಭಯವು ಬಂದು ಮುತ್ತಿದಾಗ
ಸುಖದುಃಖದ ಸಮಯದಲ್ಲಿ
ಹಾಡಿ ಬಿಡುವನು

೨

ನೀರಿನಲ್ಲಿ ಭೂಮಿಯಲ್ಲಿ
ಅನಿಲದಲ್ಲಿ ಅನಲದಲ್ಲಿ
ಶೈಲ ಶಿಖರದಲ್ಲಿ ತಾನು
ಹೋಗತಕ್ಕವ
ಚಂದ್ರನಂತೆ ತಂಪು ತಾಳ್ದು
ಸೂರ್ಯನಂತೆ ದೀಪ್ತಿ ಪಡೆದು
ಸಲಿಲದಂತೆ ಸರಸನಾಗಿ
ಮೆರೆಯತಕ್ಕವ

೩

ಗಗನವವಗೆ ಬಹಳ ಕಿರಿದು
ಸಘನ ವನವು ಮಿಗಿಲು ಚೆಂದ.
ಮೂರುಲೋಕ ತುಂಬ ಇವನ
ಮನೆಗಳಿರುವವು
ಅಳಿವುದೊಮ್ಮೆ ಬ್ರಹ್ಮಸೃಷ್ಟಿ
ಉಳಿವುದಂತ್ಯ ಕವಿಯ ಸೃಷ್ಟಿ
ಕವಿಯ ದಯಾದೃಷ್ಟಿ
ಪಡೆವವರೆಗೆ ಅಮರರು

'ಪಥಿಕ'ದಿಂದ

# ಮಳೆಗಾಲ

೧

ಕಳ್ಳಲೆಯು ಮುತ್ತುತಿದೆ
ಮಳೆ ಹನಿಯು ಸಿಡಿಯುತಿದೆ
ದಾರಿಯನು ಹಿಡಿದಿರುವೆ
ಮೇಲ್ಮರವ ಮುಟ್ಟಲಿಕೆ
ಮೇಘಗಳ ಗರ್ಜನೆಯು
ಭೋರ್ಗರೆದು ಕೇಳುತಿದೆ
ಕಣ್ಣನ್ನು ಕೋಲ್ಮಿಂಚು
ಕೋರೈಸಿ ಚುಚ್ಚುತಿದೆ

೨

ಕಾಡುಕಿರಿ ನಿಕರಗಳ
ಗುದ್ದಾಟದುರುಳಾಟ
ನಾಗಗಳ ಓಡಾಟ
ಗೂಬೆಗಳ ಕೂಗಾಟ
ಕೋಣಗಳ ಕಾದಾಟ
ಭೂತಗಳ ತಿರುಗಾಟ
ನಡೆದಿಹವು ಸುತ್ತೆಲ್ಲ
ಕಿರುಚಾಟದರ್ಭಾಟ

೩

ಎಂತು ನಾ ಸಾಗಲಿ
ದಾರಿಯನು ಓ ತಂದೆ
ಇಂತಿರುವ ಕಷ್ಟಗಳ
ಪರಿಹರಿಸಲಾನೆಂದು ?
ಓ ಗುರುವೆ ನಾನೀಗ
ಬೇಡುವೆನು ನಿನ್ನಲ್ಲಿ
ಜ್ಞಾನ ದೀಪವ ನೀಡಿ
ಮೋಕ್ಷಾಮೃತವ ಮುಟ್ಟಿಸೈ

'ಪಥಿಕ'ದಿಂದ

## ನಿಶೆಗೆ

---

೧

ನಿಶೆಯೇ ನಿಶೆಯೇ ಬರುತಿಹ ಏತಕೆ ?
ಯತಿಗಳನಾಶೆಯು ಬಲೆಯೊಳು ಸಿಲುಕಿಸಿ
ಜಪಮಾಲಿಕೆಯನು ಬೇಗನೆ ಹರಿಯಿಸಿ
ಘಾಸಿಯಮಾಡಲು ಬರುತಿಹೆ ಹೇಸಿ

೨

ನಿನ್ನಾವರಣವ ನೋಡಿದ ಚಣದೊಳು
ಬರುವವು ಹುಲಿಗಳು ಕರಡಿ ಸಮೂಹವು
ಕೂಗುತ ಚೀರುತ ಭೀಕರ ಧ್ವನಿಯಿಂ
ತಿನ್ನಲು ಹವಣಿಕೆ ಹಾಕುತಲಿರುವವು.

೩

ನಿಶೆಯೇ ನೀ ಬರೆ ದೇಹವು ನಡಗುತ
ಲಿರುವದು ಚೋರರು ಬಂದರೆ ಗಳಿಸಿದ
ಧನವನ್ನಪಹರಿಸೊಯ್ಯುವರೆನ್ನುವ
ಭಯವದು ತುಂಬಿದೆ ಶಸ್ತ್ರವ ನೀಡೈ

೪

ಉಷೆಯೊಳು ಇರುವದು ಒಂದೇ ಕಣ್ಣು
ನಿಶೆ ತಾ ಮುತ್ತಲು ಸಾವಿರಕಣ್ಣು
ಹಿರಿಯರು ಪೇಳ್ವರು ನಿನ್ನಯ ಬಣ್ಣ
ಸಾಧಕ ವೃಂದವು ತೆಗಳ್ವುದು ನಿನ್ನ,

೫

ಅಂತೆಯೆ ಶರಣರು ನಿನ್ನಯ ಕತ್ತಲೆ
ಮೊತ್ತವನೊತ್ತಲು ಧ್ಯಾನದ ದೀಪವ
ಹಚ್ಚುತ ಎಚ್ಚರಗೊಳ್ಳುತ ಸತ್ಯದ
ಬೆಳಕಿನ ಹಾದಿಯ ಹಿಡಿಯುತ ಪೋದರು.

'ಪಥಿಕ'ದಿಂದ

## ರತ್ನಪಕ್ಷಿ

೧

ಹಾರುತಿಹುದು ರತ್ನಪಕ್ಷಿ
ಕೋರುತಿಹುದು ಆತ್ಮಸಾಕ್ಷಿ
ಗರಿಗೆದರಿ ಗಿರಿಯೇರಿ
ಕರೆಯುವುದು ಗುರಿ ತೋರಿ

೨

ಮೇಲೊಮ್ಮೆ ಕೆಳಗೊಮ್ಮೆ
ಹಾರುವದು ಭಯುಗೊಂಡು
ತರುಗಳಿರುವ ಗುಂಪಿನೊಳು
ಕೂಡ್ರುವದು ಒಮ್ಮೊಮ್ಮೆ

೩

ತೋರುವುದು ಬಣ್ಣವನು
ರೌದ್ರವನು ನಳಿಸುವುದು
ನರರಿದನು ನೋಡುವರು
ಮರವೆಯನು ಕಳೆಯುವರು

೪

ಕಪ್ಪುಬಣ್ಣವ ಪಡೆದು
ಕಪ್ಪು ಗುಣವನು ತೆಗೆದು
ಸುಪ್ತಜೀವಿಗೆ ತಾನು
ದೀಪ್ತಿಯನು ಕೊಡುತಿಹುದು

೫

ನೋಡಿದೊಡೆ ರತ್ನಪಕ್ಷಿ
ಓಡುವವು ಪಾಪಗಳು
ಪೇಳುವರು ಬಲ್ಲವರು
ತೆರೆಯುವುದು ಅಂತಶ್ಚಕ್ಷು

೬

ಹೊಸ ದಿನದಿ ಹೊಸ ಭಾವ
ನಸುನಗುತ ಬರಲೆಂದು
ಬಸವಳಿದು ಹುಡುಕುವರು
ಜಸ ತರಲು ಪಕ್ಷಿಯನು

೭

ಹಾರುತಿರೆ ಚಿತ್ಪಕ್ಷಿ
ವ್ಯೋಮದಲಿ ತಿರುತಿರುಗಿ
ಕೊಳೆ ಕಳೆದು ನಿಶೆ ತೊಲಗಿ
ಬೆಳಗು ಬರೆ ಚಿರಮೋಕ್ಷ

೮

ಹಸಿರು ವನ ಬಳಿ ಸಾರು
ಬಿಸುಟು ನೀ ಕಸ ಬೇರು
ಜ್ಞಾನಪರಿಮಳ ಹೀರು
ಸತ್ಯ ಶಿವನೊಳು ಸೇರು

"ರತ್ನಪಕ್ಷಿ" ಕವನ ಸಂಕಲನದಿಂದ

# ಶೀಲವೇ ಧರ್ಮ

ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯ
ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯ
ಪರುಷದ ಬಲದಿಂದ ಅನಲೋಹದ ಕೇಡು ನೋಡಯ್ಯ
ನಿಮ್ಮ ಶರಣರ ಅನುಭಾವದಿಂದ ಎನ್ನ ಭವದ
ಕೇಡು ನೋಡಯ್ಯ ಕೂಡಲ ಸಂಗಮದೇವ ||

ಭಾರತ ದೇಶ ಸಂಸ್ಕೃತಿಗಳ ನೆಲೆಬೀಡು. ಧರ್ಮ ಸಾಹಿತ್ಯ ನಡೆ ನುಡಿ ಭಾವ ಶುದ್ಧಿಗಳಿಂದ ಕೂಡಿಕೊಂಡಿರುವ ಪವಿತ್ರ ನಾಡು. ಪ್ರಾಚೀನ ಕಾಲದಿಂದಲೂ ಜ್ಞಾನ ವಿದ್ಯೆಗಳ ಕೇಂದ್ರವಾಗಿದೆ. ಮೌರ್ಯ ಕಾಲದಲ್ಲಿ ಅದೇಕೆ, ಉಪನಿಷತ್ಕಾಲದಲ್ಲಿಯೂ ಕೂಡ ಸುಪ್ರಸಿದ್ಧ ವಿಶ್ವವಿದ್ಯಾನಿಲಯಗಳ ಸ್ಥಾಪನೆಯ ಮೂಲಕ ಭಾರತವು ಜನ ಜಾಗೃತಿ ಮಾಡಿ, ದೇಶ ವಿದೇಶದವರನ್ನು ಆಕರ್ಷಿಸಿ, ಭಾರತದ ಉಚ್ಚ ಸಂಸ್ಕೃತಿಯನ್ನು ತಿಳಿಯಪಡಿಸಿ. ಧಾರ್ಮಿಕ ಮನೋವೃತ್ತಿಯ ಬಲವಾದ ಆತ್ಮಶಕ್ತಿ ಪ್ರಭಾವವನ್ನು ಬೀರಿ, ಎಚ್ಚರಿಸಿ ಪುನೀತರನ್ನಾಗಿ ಮಾಡಿದೆ. ಇದೇ ಭಾರತದ ಭವ್ಯ ಪರಂಪರೆಯಂತೆ ಕನ್ನಡ ನಾಡೂ ಸಹ ನೂತನ ಚೇತನೋತ್ಪತ್ತಿಯನ್ನು ತೋರಿಸುತ್ತ, ಸಾಹಿತ್ಯದಲ್ಲಿ ನವಚೈತನ್ಯದ ಚಿಲುಮೆಯನ್ನು ಚಿಮ್ಮಿಸುತ್ತ, ಸನಾತನ ಧರ್ಮದ ಪುಣ್ಯಾಕಾಶದಲ್ಲಿ ತುಂಬಿದ್ದ ಕಾರ್ಮೋಡಗಳ ಕತ್ತಲೆಯನ್ನು ನಶಿಸಿ ಜ್ಞಾನದೀಪ್ತಿಯನ್ನು ನೀಡುತ್ತ ಬಂದಿದೆ. ಮಹಾವ್ಯಕ್ತಿಗಳು ಮಹಾಶಕ್ತಿವಾಹಿನಿಯನ್ನು ನಮ್ಮ ನಾಡಿನಲ್ಲಿ ಹರಿಬಿಟ್ಟು ಶೀಲ ಸಂಸ್ಕೃತಿಗಳ ಉಳಿಮೆಗೆ ಕಾರಣವಾಗಿದ್ದುದರ ಫಲವೇ ನಾವಿಂದು ಜ್ಞಾನಾಮೃತ ಪಾನಮಾಡುತ್ತ ಸಂಸ್ಕೃತಿಯ ಏಳಿಗೆಯ ಕಡೆ ಧಾವಿಸಬೇಕಾಗಿದೆ. ಸಾಹಿತ್ಯ ದೇವಿಯ ಪವಿತ್ರಮಂದಿರದಲ್ಲಿ ನಡೆಯುವ ಪೂಜೆಯನ್ನು ನೋಡಿ ತೃಪ್ತಿ ಮಾಡಿಕೊಳ್ಳ ಬೇಕಾಗಿದೆ. ಸಾಹಿತ್ಯ ಶೀಲ ಸಂಸ್ಕೃತಿಯನ್ನು ಸಂಗೊಳಿಸಿ, ಧರ್ಮನಿಷ್ಠ ಪೂತಾತ್ಮರಾಗಿ ಆತ್ಮಜ್ಯೋತಿಯನ್ನು ಬೆಳಗಿಸಬೇಕಾಗಿದೆ.

ವಿಶ್ವವಿದ್ಯಾನಿಲಯಗಳು ವಿದ್ಯಾರ್ಥಿಗಳನ್ನು ಸತ್ಯಾರ್ಥಿಗಳನ್ನಾಗಿ ಮಾಡುವದಲ್ಲದೆ, ಶೀಲ ಸಂಸ್ಕೃತಿಯನ್ನು ಹೃದ್ಭೂಮಿಯಲ್ಲಿ ಬಿತ್ತಿ ಅವರ ಬುದ್ಧಿಶಕ್ತಿ, ಹೃದಯಶಕ್ತಿ ಮತ್ತು ಭಾವಶಕ್ತಿಯನ್ನು ವಿಕಸನಗೊಳಿಸುವ ದೇವಮಂದಿರಗಳಂತೆ. ವಿದ್ಯಾರ್ಥಿಗಳಲ್ಲಿ ಹೆಚ್ಚಾಗಿ ಲೌಕಿಕೋದ್ದೇಶದ ಸಾಧನೆಗೆ ಪದವಿ ವಿಭೂಷಿತರಾಗಿ ಜೀವನವನ್ನು

ಸುಖಮಯ ಮಾಡಿಕೊಳ್ಳುವ ಹಂಬಲ ತುಂಬಿರಬಹುದು, ಇಷ್ಟರಿಂದಲೇ ವಿದ್ಯೆಯ ಸಾರ್ಥಕತೆಯಾಗದು. ಅನ್ನ ವಸ್ತ್ರಾದಿಗಳಿಂದ ಮನುಷ್ಯ ಬದುಕಬಹುದು. ಆ ಬದುಕು ಪಶುವಿನಂತೆ ಬದುಕಾದೀತೆ ಹೊರತು ಮನುಷ್ಯತ್ವದ ಬದುಕಾಗಲಾರದು. ವ್ಯಕ್ತಿತ್ವ ದೊರೆಯಲಾರದು. ಭಾವಪರಿಶುದ್ಧಿಯಾಗಲಾರದು. ನಾಗರಿಕತೆ ಬೆಳೆದಂತೆ ಆಧ್ಯಾತ್ಮಿಕತೆ ಬೆಳೆದು ಬೆಳಗಿದರೆ ಮಾತ್ರ ಆತ್ಮಸಂತೃಪ್ತಿಯಾಗುತ್ತದೆ, ಲೌಕಿಕ ವಿದ್ಯೆಗೆ ಆಧ್ಯಾತ್ಮಿಕ ವಿದ್ಯೆಯಿಂದ ಪುಷ್ಟಿ ದೊರೆತು ಮಿಗಿಲಾದ ಶಕ್ತಿ ಬರುತ್ತದೆ. ರೋಗಿಗೆ ಔಷಧವಿತ್ತು ಚೇತರಿಸಿದಂತೆ ಸುಖಜೀವನವಾಗುತ್ತದೆ,

ಪ್ರಾಚೀನ ಕಾಲದ ಉಪನಿಷತ್ತಿನ ಋಷಿಪುಂಗವರು

"ಅಂಧಂ ತಮಃ ಪ್ರವಿಶಂತಿ ಯೇ ಅವಿದ್ಯಾಂ ಉಪಾಸತೇ ತತೋ ಭೂಯ ಇವ ತೇ
ತಮೋ ಯೇ ವಿದ್ಯಾಯಾಂ ರತಾಃ"

ಎಂದುಸುರಿ ವಿದ್ಯೆಯ ಮಹತ್ವವನ್ನು ತೋರಿಸಿದ್ದಾರೆ. ಕೇವಲ ಅವಿದ್ಯೆಯನ್ನು ಉಪಾಸಿಸುವವರು ಅಂಧಕಾರಕ್ಕೆ ಇಳಿಯುತ್ತಾರೆ. ಯಾರು ಕೇವಲ ವಿದ್ಯೆಯನ್ನು ಬೆಳೆಸಿಕೊಂಡು ಹೋಗುತ್ತಾರೆಯೋ ಅವರೂ ಸಹ ಕತ್ತಲೆಗೆ ಇಳಿಯುತ್ತಾರೆ, ವಿದ್ಯೆಯು ನಮ್ಮನ್ನು ದೇವರ ಹತ್ತಿರ ಕರೆದೊಯ್ಯುವ ಮಹಾತ್ಸಾಧನೆ. ಅವಿದ್ಯೆ ಲೌಕಿಕ ಸುಖವನ್ನು ನೀಡುವದು.

"ಸಾ ವಿದ್ಯಾ ಯಾ ವಿಮುಕ್ತಯೇ"

ನಮ್ಮನ್ನು ಮುಕ್ತರನ್ನಾಗಿ ಯಾವುದು ಮಾಡುವದೋ ಅದೇ ವಿದ್ಯೆ ಎಂದು ಪ್ರಾಚೀನರು ತಿಳಿಸಿದ್ದಾರೆ.

ವಿದ್ಯಾದದಾತಿ ವಿನಯಂ ವಿನಯಾದ್ಯಾತಿ ಪಾತ್ರತಾಂ।
ಪಾತ್ರತ್ವಾತ್ ಧನಮಾಪ್ನೋತಿ ಧನಾಧ್ದರ್ಮಂ ತತಃ ಸುಖಂ॥

ಹಿತೋಪದೇಶದ ಈ ಹಿತೋಕ್ತಿ ನಮ್ಮನ್ನೆಚ್ಚರಿಸುತ್ತದೆ. ಬಾಳ್ವೆಳಕಿಗೆ ದಾರಿ ತೋರಿಸುತ್ತಿದೆ. ವಿನಯವಿಲ್ಲದ ವಿದ್ಯೆ ಸುಗಂಧವಿಲ್ಲದ ಪುಷ್ಪದಂತೆ ಶೋಭಿಸದು. ಮಾನವನು ಪ್ರಗತಿಪಥದತ್ತ ಸಾಗಲಾರ. ವಿದ್ಯೆಯ ಮುಖ್ಯ ಗುರಿಯು ಮಾನವನ ಅಂತರ್ ಬಾಹ್ಯ ಸುಧಾರಣೆ ಸಂಸ್ಕಾರಗಳನ್ನು ಅನುಲಕ್ಷಿಸಿ ರೂಪಗೊಳ್ಳಬೇಕು. ಆದಕ್ಕಾಗಿ ವಿಜ್ಞಾನದ ಜೊತೆಗೆ ಆತ್ಮಜ್ಞಾನವೂ ಸಮನ್ವಯಗೊಂಡು ವಿಕಾಸಮಾಡಿಕೊಳ್ಳುವಂತೆ ಸಂಸ್ಕರಿಸುವುದೇ ವಿಶ್ವವಿದ್ಯಾನಿಲಯಗಳ ವಿಶಾಲದೃಷ್ಟಿಯ ನೂತನ ಸಾಧನೆಯಾಗಿ ವಿದ್ಯಾರ್ಥಿಗಳ ಅಂತಃಸತ್ವ ಚೇತನಗೊಳ್ಳಲು ಸಾಧಿಸಿದಂತಾಗುವದು. ಅರುವಿನ ನಿಯಂತ್ರಣವಿಲ್ಲದ ವಿಜ್ಞಾನವೂ ಕೂಡ ಕಡಿವಾಣವಿಲ್ಲದ ಕುದುರೆಯಂತೆ ಸ್ವೈರ ವೃತ್ತಿಯಿಂದ ಕೊನೆಗೆ ವಿನಾಶಕ್ಕೆ ದಾರಿಯಾಗುವ ಮುನ್ಸೂಚನೆ ತೋರಿಸುತ್ತದೆಯೋ ಏನೋ ಅನ್ನಿಸುತ್ತದೆ. ಇದಕ್ಕೆ ಪಾಶ್ಚಮಾತ್ಯರ ವಿಜ್ಞಾನವೇ ನಿದರ್ಶನ. ಅಕ್ಷರ ಜ್ಞಾನ ಬೆಳೆದಂತೆ, ಅಂತರಜ್ಞಾನ ಬೆಳೆದು ಸ್ವಾವಲಂಬನ ಜೀವನವನ್ನು ಸಾಗಿಸುವ

ಹೊಣೆ ಹೊತ್ತುಕೊಳ್ಳುವ ಶಕ್ತಿ ಸಂಪನ್ನರಾಗಬೇಕು. ಆತ್ಮಶ್ರೀ ಸಮನ್ವಿತರಾಗಬೇಕು.

ಈ ಜಗತ್ತು ನಮ್ಮ ಆತ್ಮದ ಸಾಧನ ರಂಗ. ಇಲ್ಲಿ ಲೌಕಿಕ ವಿದ್ಯೆ ಆಧ್ಯಾತ್ಮ ವಿದ್ಯೆ ಎರಡನ್ನೂ ಸಾಧಿಸಬೇಕಾಗುತ್ತದೆ. ಇವು ಪರಸ್ಪರ ವಿರುದ್ಧವಾಗದಂತೆ ಅವೆರಡನ್ನು ಸಮನ್ವಯ ದೃಷ್ಟಿಯಿಂದ ಸಾಗಿಸಿಕೊಂಡು ಅದರಲ್ಲಿ ದಿವ್ಯದೃಷ್ಟಿಯನ್ನು ಕಾಣತಕ್ಕವರೇ ಸುಖವನ್ನು ಪಡೆಯುತ್ತಾರೆ.

ಒಂದೆಡೆ ನಿಜಗುಣ ಶಿವಯೋಗಿಗಳು " ಜಾಣನು ಲೌಕಿಕ ಪಾರಮಾರ್ಥವೆರಡನು ಮಾಣದೆ ಕೂಡಿ ನಡಿಸುತಿಹನು" ಎಂದು ಅದರ ಹೆಚ್ಚಳವನ್ನು ಹೆಚ್ಚಿಸಿದ್ದಾರೆ. ಆದಕ್ಕಿಂದು ವಿದ್ಯಾರ್ಥಿಗಳು ಆ ಹೆದ್ದಾರಿಯಲ್ಲಿ ನಡೆಯಬೇಕಾಗುತ್ತದೆ. ಮತ್ತೊಂದೆಡೆ ವಿವೇಕಾನಂದರೂ ಸಹ "ವಿದ್ಯಾರ್ಥಿಯ ದೇಹ. ಬುದ್ಧಿ, ಹೃದಯ, ತೋಳು, ತಲೆ ಎದೆ ಸಮತೂಕದಿಂದ ಬೆಳೆಯಬೇಕು. ಮತ್ತು ವಿದ್ಯಾರ್ಥಿಗಳಿಗೆ ಕಬ್ಬಿಣದ ಸ್ನಾಯು ಉಕ್ಕಿನ ನರಗಳು ಬೇಕೆಂದು ಎನ್ನುತ್ತಿದ್ದರಂತೆ, ಫುಟಬಾಲ್ ಆಡುವದರಿಂದ ಭಗವದ್ಗೀತೆ, ಉಪನಿಷತ್ತು ಇನ್ನೂ ಚೆನ್ನಾಗಿ ಅರ್ಥವಾಗಬಲ್ಲದು. ಏನೇನೋ ಕಗ್ಗವನ್ನು ಕಲಿತು ಅದನ್ನು ಆಚರಿಸಲಾಗದಿದ್ದರೆ ಕಲಿತಾದರೂ ಏನು ಪ್ರಯೋಜನ" ಎಂದು ಅನ್ನುತ್ತಿದ್ದರಂತೆ. ಬುದ್ಧಿ ಬೆಳೆದಂತೆ ದೇಹವೂ ಬೆಳೆಯಬೇಕು. ದೈತ್ಯ ದೇಹಕ್ಕೆ ಹೊರಗಿನಾಡಂಬರದ ಬುದ್ಧಿವಂತಿಕೆ ಬಂದರೆ ಲೋಕ ಉಳಿಯಲಾರದು. ಪರರಿಗಾಗಿ ಮರಗುವ ಮೃದು ಹೃದಯಬೇಕು. ಅದಕ್ಕಾಗಿಯೇ ದೇಹ, ಬುದ್ಧಿ, ಹೃದಯ ಈ ಮೂರೂ ಸಮತೂಕದಿಂದ ಬೆಳೆಯಬೇಕು" ಎಂದು ಪುಂತಾಗಿ ವಿದ್ಯಾರ್ಥಿಗಳ ಬಗ್ಗೆ ಮಾರ್ಮಿಕ ಧಾರ್ಮಿಕ ಸಂದೇಶವನ್ನು ನೀಡುತ್ತ, ದುರ್ಬಲತೆಯ ಅಲ್ಪತೆಗಳೆಲ್ಲ ನಿರ್ಮೂಲವಾಗಿ ಕೊಚ್ಚಿ ಹೋಗುವಂತೆ ಒಂದು ಮಹಾಶಕ್ತಿಯನ್ನು ಹೃದಯಗಳಲ್ಲಿ ಉದ್ದೀಪಿಸುವಂತೆ ಎಚ್ಚರಿಸಿದ್ದಾರೆ. ಭಾವಪರವಶರಾಗಿ ದಿವ್ಯಾನುಭವವನ್ನು ಸ್ಫುರಿಸಿದ್ದಾರೆ. ' Weakness is the one cause of suffering " ಎಂದು ಕಷ್ಟಗಳಿಗೆ, ಆತ್ಮಶಕ್ತಿಯ ಅಭಾವ, ಅಶಕ್ತತೆಯೇ ಮೂಲ ಕಾರಣವೆಂದು, ಧೀರೋದಾತ್ತ ಸಿಂಹಧೈರ್ಯದೊಡನೆ ಸರ್ವ ರಹಸ್ಯ ಹೃದಯ ಭೇದಿಯಾದ ಯೋಗದೃಷ್ಟಿಯಿಂದ ಚಿತ್ರಿಸುವ, ಅವರ ಅದ್ಭುತ ಮೇಧಾಶಕ್ತಿ, ಆಧ್ಯಾತ್ಮ ತೇಜಸ್ಸು ವರ್ಣಿಸಲಸಾಧ್ಯ. ಅದು ಇಂದಿನ ವಿದ್ಯಾರ್ಥಿಗಳಿಗೆ ಬೀಜರೂಪವಾಗಿಯಾಗಲಿ, ಸಂಸ್ಕಾರ ರೂಪವಾಗಿಯಾಗಲಿ ಬರುತ್ತ ಹೋದಲ್ಲಿ ವ್ಯಕ್ತಿತ್ವ ಸಾಧನೆಗೆ ಪ್ರಚಂಡ ಜ್ಯೋತಿ ದೊರೆಯುತ್ತದೆ. ಅದಕ್ಕಾಗಿ ವಿದ್ಯಾರ್ಥಿಗಳಾದವರು ಕೇವಲ ಪಠ್ಯ ಪುಸ್ತಕಗಳ ಸಂಕುಚಿತ ಸಂಕಲನದಲ್ಲಿ ಮಗ್ನರಾಗಿರದೆ ಅದಕ್ಕೂ ಮಿಗಿಲಾಗಿರುವ ಗುಪ್ತವಾಗಿರುವ, ಆ ಸುಪ್ತಶಕ್ತಿಯನ್ನು ಪ್ರೋಜ್ವಲಗೊಳಿಸಲು ಗುರು ಕರುಣೆಯ ದಿವ್ಯಶಕ್ತಿಯನ್ನು ಪಡೆಯಲು ಆತುರರಾಗಬೇಕಾಗುತ್ತದೆ. ಈ ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಅಹೋರಾತ್ರಿ ಪರಿಶ್ರಮಪಡಬೇಕಾಗುತ್ತದೆ. ಅಂದರೆ ವಿದ್ಯಾರ್ಥಿಗಳಾದವರು ತಪಸ್ವೀ ಜೀವನ ಸಾಧಿಸಬೇಕಾಗುತ್ತದೆ. ಅಂದಾಕ್ಷಣ ಕಣ್ಣುಮುಚ್ಚಿ ತಲೆ ಕೆಳಗು ಮಾಡಿ ಗುಹೆಯಲ್ಲಿ ಕುಳಿತು ಜಪಮಣಿ ಎಣಿಸುತ್ತ ಕುಳಿತುಕೊಳ್ಳುವ ತಪಸ್ಸನ್ನು

ನಾವೀಗ ಹೇಳುತ್ತಿಲ್ಲ. ಮತ್ತು ಶೀಲವೆಂದ ಕೂಡಲೇ ಶರೀರವನ್ನು ಉಜ್ಜಿ ತೊಳೆದು ಮಡಿ ಮೈಲಿಗೆಯ ಹೊರಗಿನ ವಿವರವನ್ನು ಹೇಳುವದು ಇಲ್ಲಿ ಅಪ್ರಾಸಂಗಿಕ. ಶರೀರ ಸ್ವಚ್ಛತೆಗೆ ಮಣ್ಣು ನೀರುಗಳು ಸಾಧನವೇ ಹೊರತು ಮುಖ್ಯೋಪಾಯಗಳಲ್ಲ. ಸದ್ಗುಣ ಒಳ್ಳೇ ಸ್ವಭಾವಗಳಿಂದ ಜ್ಞಾನೇಂದ್ರಿಯ ಮತ್ತು ಅಂತಃಕರಣಗಳನ್ನೂ ತೊಳೆಯುವವನು ಮಹಾಶೀಲ. ಪ್ರವೃತ್ತಿಯನ್ನು ತೊರೆದು ಸದ್‌ವೃತ್ತಿಗಳನ್ನು ಪಡೆಯುವದೇ ಶೀಲಾಚರಣದ ಮುಖ್ಯ ಗುರಿ. ಶೀಲದ ಆಮೂಲಾಗ್ರವನ್ನು ಅರಿತು ಕಲ್ಪನೆಯ ದವಡೆಯಲ್ಲಿ ಸಿಲುಕಿರುವ ಜ್ಞಾನಾನ್ನವನ್ನು ಅರಗಿಸಿಕೊಂಡು, ಮೈಗೆ ಹಿಡಿಸಿಕೊಂಡು, ಅನುಭವವನ್ನು ವಿಸ್ತಾರಗೊಳಿಸಿ, ಹೊರಗಿನ ಆವರಣದ ಮನರಂಜನೆಗಳನ್ನು ತ್ಯಾಗ ಮಾಡಿ ಸಾಹಿತ್ಯ ತಪೋವನದಲ್ಲಿ ಆತ್ಮಶಕ್ತಿಯನ್ನು ನಿರಂತರ ಪಡೆಯುವದೇ ವಿದ್ಯಾರ್ಥಿಯ ದಿವ್ಯ ತಪಸ್ಸು. ಕಣ್ಣುಮುಚ್ಚಿಕೊಂಡು ಗುಹೆಯಲ್ಲಿ ಕುಳಿತುಕೊಂಡು ತಪಸ್ಸುಮಾಡುವ ತಪಸ್ವಿಗಿಂತಲೂ ಈ ವಿದ್ಯಾರ್ಥಿಯ ತಪಸ್ಸು ಹೆಚ್ಚಿನದು. ಇದಕ್ಕೆ ಮಿಗಿಲಾದ ಶಕ್ತಿಬೇಕು. ಸಾಹಸ ಧೈರ್ಯ ಬೇಕಾಗುತ್ತದೆ. ಲೋಕ ವ್ಯವಹಾರದಲ್ಲಿದ್ದುಕೊಂಡು ಅಂತರ್ಮುಖತೆಯ ಅಂತಃಶಕ್ತಿಯನ್ನು ಸತ್ಕಾರ್ಯಗಳ ವಿಚಾರದಲ್ಲಿ ಮನಸ್ಸನ್ನು ಕಳುಹಿಸಿ ಸಾಹಿತ್ಯದ ಅಪಾರವಾದ ಸಾಗರದಲ್ಲಿ ಈಸಿ ಉದ್ದಾಮ ಕಾವ್ಯಗಳ ರಸಸ್ವಾದನೆ ಮಾಡಿಕೊಂಡು ರಸಸಿದ್ಧಿ ಪಡೆದುಕೊಳ್ಳುವದು ಪ್ರತಿಭಾ ಪೂರ್ಣ ವಿದ್ಯಾರ್ಥಿಗೆ ಸಾಧ್ಯವಾದೀತೇ ಹೊರತು ಅಲ್ಪಾಶೆಯ ಮಳಲಿನಲ್ಲಿ ಹೊರಳಾಡುವ ಬಹಿರ್ಮುಖ ವಿದ್ಯಾರ್ಥಿಗಳಿಗೆ ಸಾಧ್ಯವಾಗದು.

ಎಂತಹ ಕಠಿಣ ಪರಿಸ್ಥಿತಿಯಲ್ಲಿಯೂ ಮನಸ್ಸನ್ನು ಛಿದ್ರಗೊಳಿಸದೆ ಏಕಾಗ್ರದಿಂದ ಶ್ರದ್ಧೆ ಭಕ್ತಿಯಿಂದ ನಿಷ್ಠೆಯಿಂದ ಗುರಿಮುಟ್ಟುವ ತನಕ ಸಾಧಿಸುವುದೇ ನಿಜವಾದ ತಪಸ್ಸು. ಹೆತ್ತಿರುವ ತಂದೆ–ತಾಯಿಗಳಿಗೆ ಮತ್ತು ಸಮಾಜಕ್ಕೆ ದ್ರೋಹ ಬಗೆಯದೆ ಜೀವನ ನೌಕೆಯನ್ನು ಸುಸೂತ್ರವಾಗಿ ನಡೆಸುತ್ತ ರಾಷ್ಟ್ರ ಮತ್ತು ನಾಡಿನ ಸೇವೆ, ಸಾಹಿತ್ಯ ಪ್ರಚಾರ. ಜ್ಞಾನ ಪ್ರಸಾರ ಮುಂತಾದವುಗಳನ್ನು ಒಮ್ಮನಸ್ಸಿನಿಂದ ನಡೆಸಿ-ಕೊಂಡು ಹೋಗುವದೇ ಸತ್‌ಶೀಲ.

ಶೀಲವಿಲ್ಲದ ಜೀವನ ರಸವಿಲ್ಲದ ಹಣ್ಣಿನಂತೆ, ಒಣಗಿರ್ಪ ತರುವಿನಂತೆ. ಶೀಲವೇ ಸಂಸ್ಕೃತಿಗೆ ಕಣ್ಣು, ಶೀಲವೇ ಧರ್ಮಸಂಸ್ಕಾರಕ್ಕೆ ಮೂಲಾಧಾರ. ಶೀಲದಲ್ಲಿ ಶ್ರದ್ಧೆ–ಯುಳ್ಳವರು ಯಾವುದೆ ಹೊರಗಿನ ತಾಮಸಿಕ ಶಕ್ತಿಗೆ ಅಂಜಬೇಕಾಗಿಲ್ಲ. ಅಳುಕಬೇಕಾಗಿಲ್ಲ. ಶೀಲವಿದ್ದಲ್ಲಿ ಗಾಳಿ ಹಾರಿಸಿದತ್ತ ಹೋಗಲು ಸಾಧ್ಯವಾಗದು. ಉತ್ತಮ ಶೀಲ ಜೀವನದಿಂದ ಭಾವ ಪರಿಪೂರ್ಣ ಪ್ರಜ್ಞೆಯುಂಟಾಗಿ ಸೊಗಸುಬಾಳಲು ಕಾರಣವಾಗುತ್ತದೆ. ಹೃದಯವನ್ನು ಗೆಲ್ಲಲು ಶೀಲದಷ್ಟು ಉತ್ತಮ ಸಾಧನ ಬೇರೊಂದಿಲ್ಲ. ಶೀಲದಲ್ಲಿ ನಡೆಯುತ್ತ ಹೋದಂತೆ ಅದರ ಶಕ್ತಿ ಹೆಚ್ಚುತ್ತದೆ. ಸತ್ಯ ಶೀಲವನ್ನು ಆಚರಿಸುವಾಗ ಕಠಿಣ ಪ್ರಸಂಗಗಳು ಬಂದೊದಗಿದರೂ ಹೆದರದೆ ಬೆಚ್ಚದೆ ಮುಂದೆ ಸಾಗಿದರೆ ಫಲಸಿದ್ಧಿ ಗಂಟಿಟ್ಟ ಬುತ್ತಿ. ಔಷಧಿಯ ಸೇವನೆಯು ಕಹಿಯಾದರೂ

ಉದರಕ್ಕೆ ಸಿಹಿಯಾಗುವಂತೆ. ಶೀಲದ ನಡೆನುಡಿಯು ಬಾಳಿನಲ್ಲಿ ಸವಿಯನ್ನು ನೀಡುವ ದಿವ್ಯ ಔಷಧ. ಬರಿ ವಿಚಾರವೇ ಬಾಳಿನಲ್ಲಿ ಸಾಲದು. ಆಚಾರವೂ ಕೃತಿಯಲ್ಲಿ ಇಳಿದಾಗ ಮಾತ್ರ ಪರಿಪೂರ್ಣ ಜೀವನವು. ಜ್ಞಾನಕ್ಕಾಗಿ ಇರುವ ಜೀವನವು ಪವಿತ್ರವೆಂಬುದು ನಿಜವಿದ್ದರೂ. ಕೂಡ ಆ ಜೀವನದ ಹದವು ತಿಳಿಯದ ಜ್ಞಾನವೂ ನಿಷ್ಪ್ರಯೋಜಕ. ಶೀಲವಿಲ್ಲದ ಧರ್ಮ ಜೀವವಿಲ್ಲದ ದೇಹವಿದ್ದಂತೆ "ಧರ್ಮೋರಕ್ಷತಿ ರಕ್ಷಿತಃ" ಎಂಬುಕ್ತಿಯಂತೆ ಮಾನವಕುಲದ ಭವಿಷ್ಯವನ್ನು ನಿರೂಪಣೆ ಮಾಡುವವರಲ್ಲಿ ಧರ್ಮದಷ್ಟು ಪ್ರಬಲವಾದ ಶಕ್ತಿ ಮತ್ತಾವುದರಲ್ಲಿಯೂ ಇರಲಿಕ್ಕಿಲ್ಲವೆಂದು ಹೇಳಬಹುದು. ಹೃದಯದ ಶೀಲ ಬೆಳೆದಂತೆ ಧಾರ್ಮಿಕ ಶಕ್ತಿ ಬೆಳೆದು ಆತ್ಮಶಕ್ತಿ ಬೆಳೆದು ಪ್ರಭೆಯು ಪ್ರಕಾಶಮಾನವಾಗುವುದು. ತಪ್ಪು ತಡೆಗಳನ್ನು ಹತ್ತಿಕ್ಕಿ ಸದ್ಗುಣ ರಾಶಿಯನ್ನು ಹೃದಯ ಚೀಲದಲ್ಲಿ ತುಂಬಿಕೊಳ್ಳುವದೇ ಶೀಲ ಸಂಸ್ಕೃತಿಯ ಮುಖ್ಯ ಸಾಧನ. ಪಂಪಿನ ಸಹಾಯದಿಂದ ಹೋದ ನೀರು ಬೆಳೆಗಳನ್ನೂ ಸಂರಕ್ಷಿಸಿ ಉತ್ತಮ ಫಲ ನೀಡುವಂತೆ ವಿದ್ಯಾರ್ಥಿಗಳ ವಿದ್ಯೆಯೂ ಸಹ ಜಲಾಶಯ ರೂಪದಲ್ಲಿರದೆ ಝರಿಯ ರೂಪವಾಗಿ ಶೀಲ ಸಂಸ್ಕೃತಿಯೊಡನೆ ಹರಿಯುತ್ತಿದ್ದರೆ ಫಲಕಾರಿ ಮತ್ತು ಗುಣಕಾರಿ.

ಜೀವನ ಪೂದೋಟದಲ್ಲಿ ಹೂಗಳಂತೆ ಅರಳುತ್ತಿರುವ ವಿದ್ಯಾರ್ಥಿಗಳ ಆತ್ಮಪುಷ್ಟಿಗೆ ಮಹದ್ಭಾವಗಳ ಅಮೃತಾಹಾರವನ್ನು ನೀಡುವ ಹಿರಿದಾದ ಹೊಣೆ ಶಿಕ್ಷಕರದು. ಬೀಜಗಳಿದ್ದಂತೆ ವೃಕ್ಷಗಳು ಫಲ ನೀಡುವದು ನಿಸರ್ಗನಿಯಮ. ಕಟ್ಟಡಗಳು ಒಮ್ಮೆ ಮಣ್ಣು ಪಾಲಾಗಬಹುದು. ಶಿಲೆಯಲ್ಲಿ ಕೆತ್ತಿದ ಚಿತ್ರ ನಾಶವಾಗಬಹುದು. ಆದರೆ ವಿದ್ಯಾರ್ಥಿಗಳೆಂಬ ಸಸಿಗಳಿಗೆ ಈಶ್ವರಾಸಕ್ತಿ, ಸತ್‌ಶೀಲ, ರಾಷ್ಟ್ರ ಭಕ್ತಿ, ಧ್ಯಾನ, ಭಾವಶ್ರೀ ಮುಂತಾದ ಒಳ್ಳೆಡೆಗೆ ಸ್ಫುರದ್ರೂಪವಾದ ಸಂಸ್ಕಾರದ ಸಿಹಿ ನೀರನ್ನು ಮೇಲಿಂದ ಮೇಲೆ ಹಾಕುತ್ತಿದ್ದರೆ ಅವರಿಗೆ ಆತ್ಮದ ಅಮರತ್ವದ ಅಂಶವು ದೇಹಕ್ಕೂ ದೊರೆತು ಅವರ ಜೀವಮಾನವು ದೀರ್ಘಕಾಲದವರೆಗೆ ಬಾಳಿ ಬೆಳಗುವದು. ಅವರ ಅಂತಃಶ್ಶಕ್ತಿ ಪ್ರಭಾವಶಾಲಿಯಾಗಿ ನಾಡು ನುಡಿಯ ಸೇವೆಗೆ ಮಾರ್ಗದರ್ಶನ ನೀಡುವದು. ಅದಕ್ಕಾಗಿ ದಿನೇ ದಿನೇ ಬೆಳೆಯುತ್ತಿರುವ ಆಧುನಿಕ ವಿಜ್ಞಾನಯುಗದಲ್ಲಿ ಧರ್ಮದ ಅಂತರ್ಗತವಾದ ಶೀಲಕ್ಕೆ ಬೆಲೆ ಕೊಟ್ಟಲ್ಲಿ ನಾಡಿಗೆ ರಾಷ್ಟ್ರಕ್ಕೆ ಬಲಬಂದೀತು. ಕಲೆ ಬೆಳಗಿ, ಆತ್ಮ ಸಾಧನೆಯಿಂದ, ಸತ್ವಯುತ ಸಂಸ್ಕಾರದಿಂದ ಕಾಡುಜೀವನ ಪಾವನವಾದೀತು.

ಸರಸ್ವತಿದೇವಿಯ ಮಂದಿರದಲ್ಲಿ ಸಾಹಿತ್ಯಾರಾಧನೆ ಮಾಡುತ್ತಿರುವ ವಿಶ್ವವಿದ್ಯಾನಿಲಯಗಳ ಆತ್ಮದಂತಿರುವ ವಿದ್ಯಾರ್ಥಿಗಳಿಗೆ ಈ ನುಡಿಗಳು ಪೋಷಕವಾಗಿ ಬಾಳ್ಬೆಳಕಿಗೆ ದಾರಿ ದೀಪವಾಗಲಿ.

ಸತ್ಯದಲ್ಲಿ ನಡೆವುದು ಶೀಲ, ಸತ್ಯದಲ್ಲಿ ನುಡಿವುದು ಶೀಲ, ಸಜ್ಜನ ಸದಾಚಾರದಲ್ಲಿ ವರ್ತಿಸಿ ಸತ್ಯವನರಿವುದೆ ಶೀಲ ಕಾಣಿರೋ ಮಹಾಲಿಂಗಗುರುಶಿವ ಸಿದ್ಧೇಶ್ವರಪ್ರಭುವೆ. □

---

ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗಾಗಿ ಗುಲಬುರ್ಗಾ, ಧಾರವಾಡ, ಬೆಂಗಳೂರ ಬಾನುಲಿಯಿಂದ ಪ್ರಸಾರಿತವಾದ ಭಾಷಣ.

# ವ್ಯಕ್ತಿತ್ವದ ವಿಕಾಸ

ಮಹಾನ್ ವ್ಯಕ್ತಿತ್ವವು ಮನುಷ್ಯ ಜೀವನದಲ್ಲಿ ಎಲ್ಲಕ್ಕಿಂತ ಹೆಚ್ಚಿನ ಆಕರ್ಷಣೆಯಾಗಿರುತ್ತದೆ. ಸೂರ್ಯನಲ್ಲಿ ಕಿರಣ, ಹೂವಿನಲ್ಲಿ ಸೌಂದರ್ಯ, ವನದಲ್ಲಿ ಹಸಿರು, ಪಕ್ಷಿಗಳಲ್ಲಿ ಬಣ್ಣದಾಕರ್ಷಕವಿರುವಂತೆ ಮನುಷ್ಯನಲ್ಲಿಯೂ ವ್ಯಕ್ತಿತ್ವದ ಆಕರ್ಷಣವಿರುವದು ಸಹಜ. ವ್ಯಕ್ತಿತ್ವವುಳ್ಳ ಮನುಷ್ಯನ ಆಕರ್ಷಣದ ತೇಜವು ಇನ್ನುಳಿದವರಿಗೆ ಪ್ರಿಯಕರ ಮತ್ತು ಲಾಭಕರ.

ಶಕ್ತಿಶಾಲಿ ವ್ಯಕ್ತಿತ್ವವನ್ನಿಟ್ಟುಕೊಂಡವರು ಕೇವಲ ಸೃಷ್ಟಾರರಾಗದೆ ದೃಷ್ಟಾರ-ರಾಗುತ್ತಾರೆ. ಅವರು ನೋಡುತ್ತಾರೆ, ಕೇಳುತ್ತಾರೆ, ಸೃಷ್ಟಿಯನ್ನು ಮಾಡುತ್ತಾರೆ, ಇಂಥವರೆದುರಿನಲ್ಲಿ ಸಾಧಾರಣ ಮನುಷ್ಯರನ್ನು ತುಲನೆ ಮಾಡಿದರೆ ಭೂಮ್ಯಾಕಾಶ-ದಷ್ಟು ಅಂತರವಾಗುತ್ತದೆ. ಸಾಧಾರಣ ಜನರ ದೃಷ್ಟಿಯಲ್ಲಿ ಇಲ್ಲದಿರುವ ಶಕ್ತಿಯು ಇವರಲ್ಲಿ ಅಡಗಿಕೊಂಡಿರುತ್ತದೆ.

ಮಹಾನ್ ವ್ಯಕ್ತಿತ್ವವು ಮನುಷ್ಯನಿಗೆ ಅಮರನಾಗಲು ಅಮೃತವನ್ನು ಕುಡಿಸುತ್ತದೆ. ಮಹಾನ್ ವ್ಯಕ್ತಿತ್ವವುಳ್ಳವರು ಮುರುಕ ಗುಡಿಸಲಿನಲಿದ್ದರೂ ಅವರ ಆತ್ಮಿಕ ಪ್ರಕಾಶದಿಂದ ಆ ಮುರುಕು ಗುಡಿಸಲು ಸುವರ್ಣಮಂದಿರಕ್ಕಿಂತಲೂ ಹೆಚ್ಚಾಗಿ ಸುಂದರವಾಗಿ ಕಾಣಿಸುತ್ತಿದೆ. ವ್ಯಕ್ತಿತ್ವಶಾಲೀ ಮನುಷ್ಯರು ನಿರಂತರ ನಿರ್ಭೀತರಿರುತ್ತಾರೆ. ತಮ್ಮನ್ನು ದ್ವೇಷಿಸುವವರಿದ್ದರೂ ಅವರಿಗೆ ತುಂಬಾ ಆದರವಿತ್ತು ಗೌರವಿಸುತ್ತಾರೆ.

ಜಗತ್ತಿನಲ್ಲಿ ಪ್ರಕಾಶ ತೆಗೆದುಕೊಂಡು ಬಂದು ಮತ್ತೆ ಅಂಧಕಾರದಲ್ಲಿ ತಿರುಗುವವರಿಗೆ ತುಂಬಾ ದರಿದ್ರರೆನ್ನಬಹುದು. ಜೀವನದಲ್ಲಿ ಸುಖ-ಶಾಂತಿಗಳನ್ನು ಪಡೆಯದೆ ಕೇವಲ ಬಾಹ್ಯಾಡಂಬರದಲ್ಲಿಯೇ ಕಾಲಕಳೆಯುವವರಿಗೆ ವ್ಯಕ್ತಿತ್ವವೆಲ್ಲಿಯದು ?

ಅರಣ್ಯದಲ್ಲಿ ಸಿಂಹವು ತನ್ನ ವ್ಯಕ್ತಿತ್ವದ ಆಕರ್ಷಣದಿಂದ ರಾಜ್ಯವನ್ನಾಳುತ್ತದೆ. ಅಧೈರ್ಯಬರುವದು, ಮತ್ತೊಬ್ಬರನ್ನು ಬಾರಿಬಾರಿಗೆ ಅವಲಂಬಿಸುವದಾದರೂ ನಮ್ಮಲ್ಲಿ ವ್ಯಕ್ತಿತ್ವವಿಲ್ಲದಿರುವುದೇ ಮೂಲ ಕಾರಣ. ಇದಕ್ಕಾಗಿಯೇ ನಮ್ಮಲ್ಲಿಯ ಶಕ್ತಿಯನ್ನು ದಿನದಿನಕ್ಕೆ ಕಳೆದುಕೊಂಡು ಶಕ್ತಿಹೀನರಾಗುತ್ತಿದ್ದೇವೆ. ದುಃಖಸಾಗರದಲ್ಲಿ ಮುಳುಗುತ್ತಿದ್ದೇವೆ, ನಾವಿಲ್ಲಿ ಸ್ವಾಮಿ ವಿವೇಕಾನಂದರ ವಾಣಿಯನ್ನು ಲಕ್ಷಿಸಬೇಕು.

"Weakness is the one cause of suffering; we become miserable, we are weak. We lie, steal, kill and commit other crimes, because we are weak. We die because we are weak. Where there is nothing to weaken us there is no death nor sorrow.

Stand up, be bold, be strong. Take the whole responsibility on your own shoulders and know that you are the creator of your own destiny. All the strength and succour you want is within your senses. Therfore make your own future."

( ನಮ್ಮ ನರಳುವಿಕೆಗೆ ಕಾರಣ ದುರ್ಬಲತೆಯೊಂದು ಒಂದು. ನಾವು ದುರ್ಬಲರಿರುವದರಿಂದಲೇ ದುಃಖಾರ್ತರಾಗುವೆವು. ನಾವು ಹುಸಿ ನುಡಿಯುವುದು ಕಳವು ಮಾಡುವುದು ಮತ್ತು ಇತರ ಅಪರಾಧಗಳನ್ನೆಸಗುವದು ನಮ್ಮಲ್ಲಿಯ ದುರ್ಬಲತೆಯಿಂದಾಗಿಯೇ. ಸಾವು ಕೂಡ ನಮ್ಮ ದುರ್ಬಲತೆಯಿಂದಾಗಿಯೇ ಬರುವದು, ನಮ್ಮಲ್ಲಿ ದುರ್ಬಲಗೊಳಿಸುವಂತಹದೇನೂ ಇಲ್ಲದಿದ್ದಲ್ಲಿ ಸಾವು ಇರುತ್ತಿರಲಿಲ್ಲ ; ದುಃಖವೂ ಇರುತ್ತಿರಲಿಲ್ಲ.

ಎದ್ದೇಳಿರಿ! ದಿಟ್ಟರಾಗಿರಿ, ಸಂಪೂರ್ಣ ಹೊಣೆಯನ್ನು ನೀವೇ ಕೈಕೊಳ್ಳುವ ಬಲ ಪಡೆಯಿರಿ. ನಿಮ್ಮ ಭವಿತವ್ಯದ ನಿರ್ಮಾತೃ ನೀವೇ ಎಂಬುದನ್ನು ಅರಿಯಿರಿ. ನಿಮಗೆ ಬೇಕಾದ ಬಲ, ಯಶಸ್ಸು ನಿಮ್ಮಲ್ಲಿಯೇ ಹುದುಗಿದೆ. ಅದಕ್ಕಾಗಿ ನಿಮ್ಮ ಭವಿತವ್ಯವನ್ನು ನೀವೇ ರೂಪಿಸಿಕೊಳ್ಳಿರಿ.)

ಈ ಸಿಂಹವಾಣಿಯನ್ನಾಲಿಸಿದಾಗ ಅವರ ಆತ್ಮಶಕ್ತಿಯು ಪ್ರತಿಭೆಯಿಂದೊಡಗೂಡಿದ ಮಹೋಪದೇಶ ಕಣ್ಣೆದುರಿನಲ್ಲಿ ನಿಲ್ಲುತ್ತದೆ. ರೋಮಾಂಚನಗಳು ಏಳುತ್ತವೆ. ದಿಕ್ಕುಗಾಣದೆ ತಿರುಗುವವರಿಗೆ ಹುರುಪುಹುಮ್ಮಸಂಗಳು ತುಂಬುತ್ತವೆ. ಮಲಗಿದವರನ್ನು ಎಚ್ಚರಿಸುತ್ತದೆ. ಅವರ ಅಂತಃಸ್ಫೂರ್ತಿಯ ಶಕ್ತಿಯೇ ಅಂತಹದು.

**ಚಾರಿತ್ರ್ಯದ ಬಲ :**

ಮನುಷ್ಯನಿಗೆ ವ್ಯಕ್ತಿತ್ವವೆಲ್ಲಿಂದ ದೊರೆಯುತ್ತದೆಂಬುದನ್ನು ಕೇಳಿದರೆ ಚಾರಿತ್ರ್ಯ ಬಲದಿಂದ ಎಂದು ಹೇಳಬಹುದು. ಮನುಷ್ಯನು ಚಾರಿತ್ರ್ಯ ಬಲದಿಂದ ತನ್ನಲ್ಲಿ ತಾನು ಮನೋಹರ ಪ್ರಕಾಶವನ್ನು ಕಾಣುತ್ತಾನೆ. ಆಗ ಆತನಿಗೆ ಜಗತ್ತಿನ ಸಮಸ್ತ ವಸ್ತುಗಳು ತುಚ್ಛವಾಗುತ್ತವೆ. ರತ್ನವನ್ನು ಹುಡುಕುವವನು ಕಲ್ಲು ಚೂರುಗಳನ್ನೆಂದಿಗೂ ಅಪೇಕ್ಷಿಸನು. ಸಚ್ಚರಿತ್ರ ಮನುಷ್ಯನು ರಾಷ್ಟ್ರದ ರಚನೆ ಮಾಡಲು ಸಮರ್ಥನಿರುತ್ತಾನೆ. ಹೆಣದಲ್ಲಿ ಜೀವವನ್ನೂ, ಅಶಕ್ತರಲ್ಲಿ ಶಕ್ತಿಯನ್ನೂ ತಂದು ಕೊಡುತ್ತಾನೆ. ಆತನಿಗೆ ಅಗ್ನಿಯು ಶೀತಲ ಜಲವಾಗಬಹುದು. ಸರ್ಪವು ಪೂಮಾಲೆಯಾಗಬಹುದು. ಇಂಥ ಮನುಷ್ಯರ ಚರಣಗಳಲ್ಲಿ ಸಂಸಾರವು ಬಾಗುತ್ತವೆ. ಮನುಷ್ಯನು ಈ ಶಕ್ತಿಕಣಗಳಿಂದ ಜಗತ್ತನ್ನೇ ಚುಂಬಕದಂತೆ ತನ್ನತ್ತ ಎಳೆದುಕೊಳ್ಳುತ್ತಾನೆ.

ಮನುಷ್ಯನ ಬೆಲೆ ಅವನ ಚರಿತ್ರದಲ್ಲಿದೆ. ಚರಿತ್ರದಲ್ಲಿಯೇ ಅವನಿಗೆ ಆತ್ಮ ಬಲದ ಪ್ರಕಾಶ ದೊರಕುತ್ತದೆ. ಧನ, ಮಿತ್ರ, ಮಾನ ಮತ್ತು ಚರಿತ್ರವುಳ್ಳ ವ್ಯಕ್ತಿಗೆ ಆನಂದ ತನ್ನಿಂದ ತಾನೇ ಹೊಂದುತ್ತದೆ. ಮೃತ್ಯುವಾದ ಮೇಲೆಯೂ ಆತನ ಕೀರ್ತಿಲತೆ ಬೆಳೆಯುತ್ತದೆ. ಸಚ್ಚರಿತ್ರ ವ್ಯಕ್ತಿಯು ಎರಡನೆಯವರ ಆಶ್ರಯು ವನ್ನೆಂದಿಗೂ ಆಶಿಸಲಾರ. ಆತನ ಚರಿತ್ರೆಯ ಪ್ರಭಾವದಿಂದ ಅನ್ಯರು ಆತನನ್ನು ಆಶ್ರಯಿಸಿ ಉದ್ಧಾರರಾಗುತ್ತಾರೆ. ಚರಿತ್ರೆಯ ಬಲವುಳ್ಳ ಮನುಷ್ಯನ ಶರೀರದಲ್ಲಿ ಒಂದು ಪ್ರಕಾರದ ಜೀವಿತ ಜ್ಯೋತಿಯಿದ್ದುದಕ್ಕೇನೇ ನಾವು "ಮಾನವ ಜ್ಯೋತಿ" ಎಂದು ಹೇಳುತ್ತೇವೆ. ಇದೇ ಜ್ಯೋತಿಗೆ ಬೇರೆ ಬೇರೆ ರೂಪದಲ್ಲಿ ಬಿತ್ತರಿಸುತ್ತಾರೆ. ಸಂಸ್ಕೃತದಲ್ಲಿ ಇದಕ್ಕೆ "ಓಜಸ್" ಎಂದು ಹೇಳುತ್ತಾರೆ. ಮುಸಲ್ಮಾನರು "ನೂರ್" ಎಂದು ಪಾಶ್ಚಾತ್ಯ ವಿದ್ವಾಂಸರು Magnetism ಮತ್ತು Human Electricity ಇತ್ಯಾದಿಯಾಗಿ ಕರೆಯುತ್ತಾರೆ.

ವಿಚಾರದ ತೆರೆಗಳು ವಿದ್ಯುತ್ತಿನ ತೆರೆಗಳಿಗಿಂತ ಅತ್ಯಂತ ಶಕ್ತಿಶಾಲಿಗಳಾಗಿವೆ. ಇದಕ್ಕಾಗಿ ಯಾವ ಮನುಷ್ಯನು ಉನ್ನತಿ ಉತ್ಸಾಹ ಮುಂತಾದವುಗಳನ್ನು ಮನಸ್ಸಿನಲ್ಲಿ ತುಂಬಿರುತ್ತಾನೆಯೋ ಅವನ ಜೀವನಜ್ಯೋತಿ ಅತ್ಯಂತ ಬಲವುಳ್ಳದ್ದಾಗುವದಲ್ಲದೆ, ಎರಡನೆಯವರ ಕೆಟ್ಟ ವಿಚಾರಗಳು ಅವನ ಮೇಲೆ ಬೀಳಲಾರವು. ಇನ್ನಿತರರು ಅವನಿಗೆ ಕೇಡು ಬಯಸಿದರೂ ಕೇಡು ಬಯಸುವವರೆ ಬಾಧೆಗೊಳಗಾಗುತ್ತಾರೆ.

ಈಶ್ವರ ಮತ್ತು ಜಗತ್ತಿನ ಆಕರ್ಷಣವು ಜ್ಞಾನೇಂದ್ರಿಯಗಳ ಜಾಗರಣೆಯಿಂದ ಪ್ರಾಪ್ತವಾಗುತ್ತದೆ. ಈ ಆಕರ್ಷಣವು ಪ್ರತಿಭಾಶಾಲಿ ವ್ಯಕ್ತಿಗಳಲ್ಲಿ ಕವಿಯ ಕಲ್ಪನೆಯಂತೆ ವಿಲಕ್ಷಣ ಆವಿಷ್ಕಾರವುಳ್ಳದ್ದಾಗಿರುತ್ತದೆ. ಇಂದ್ರಿಯಗಳ ಜಾಗರಣವು ಮನುಷ್ಯ ಜೀವನವನ್ನು ಒಳ್ಳೇದಾರಿಗೆ ಒಯ್ಯುತ್ತದೆ. ಅದರ ಕಾರ್ಯಗಳು ಗುಪ್ತವಿರಲಿ ಅಥವಾ ಪ್ರಕಟವಿರಲಿ, ಪ್ರತ್ಯೇಕ ಕಾರ್ಯಗಳು ಮನುಷ್ಯನಲ್ಲಿ ಜಾಗೃತ ಸ್ವಭಾವಗಳನ್ನು ಉತ್ಪನ್ನ ಮಾಡುತ್ತವೆ.

### ಸ್ವಭಾವದ ಶಕ್ತಿಗಳು :

ಸ್ವಭಾವದ ಶಕ್ತಿಗಳು ವಿಚಿತ್ರವಾಗಿರುತ್ತವೆ. ಸ್ವಭಾವವನ್ನನುಸರಿಸಿಯೇ ವಿಚಾರಗಳು ಕೂಡಿಕೊಂಡಿರುತ್ತವೆ. ಇಂದ್ರಿಯಗಳನ್ನು ಎಚ್ಚರಿಸುವದರಲ್ಲಿ ಸ್ವಭಾವಗಳೇ ಪ್ರಧಾನ ಕಾರಣ. ನೋಡುವದು, ಕೇಳುವದು, ಓದುವದು ಇವೆಲ್ಲ ಸ್ವಭಾವಗಳಾಗಿ ಇದ್ದರೂ ಇವುಗಳೇ ಸತ್ಕಾರ್ಯದಲ್ಲಿ ಪರಿಣತಗೊಂಡರೆ ಇವುಗಳ ಲಾಭ ಆಗ ಗೊತ್ತಾಗುವದು. ಇವುಗಳಿಂದಲೇ ಸುಪ್ತಶಕ್ತಿಗಳು ಜಾಗೃತವಾಗುತ್ತವೆ. ಒಳ್ಳೇ ಸ್ವಭಾವವನ್ನು ಅಂಟಿಕೊಳ್ಳುವದರಿಂದ ಹಾನಿಯಾಗದೆ ಆದರಿಂದ ಸಾಕಷ್ಟು ಲಾಭವಾಗಲು ಸಂದೇಹವಿಲ್ಲ.

ಮನುಷ್ಯನಿಗೆ ಬುದ್ಧಿ, ಕಿವಿ, ಕಣ್ಣು, ಮೂಗು, ಕೈ ಮತ್ತು ನಾಲಿಗೆ ಈ ಆರು ಎಲ್ಲಕ್ಕಿಂತ ಹೆಚ್ಚಿನ ಶಕ್ತಿಯುಳ್ಳವುಗಳು. ಇವುಗಳಲ್ಲಿ ಜಾಗರಣ ಉಂಟಾ ಗುತ್ತಲೇ ಈ ಸಂಸಾರದ ರಹಸ್ಯ ಭೇದಗಳಿಂದ ಉನ್ನತಿಯನ್ನು ಪಡೆಯಬಹುದು. ನಮಗೆ ಭಾಗ್ಯವಿಲ್ಲವೆಂದು ಕೆಲವರು ಹೇಳುತ್ತಾರೆ. ಈ ಸಿದ್ಧಾಂತ ಪ್ರಮಾದವುಳ್ಳದ್ದು. ಮನುಷ್ಯನೇ ಕುರುಡು ದಾರಿಯಲ್ಲಿ ನಡೆಯುತ್ತಿರುವಾಗ ಭಾಗ್ಯವೇನು ಮಾಡೀತು ? ಭಾಗ್ಯದ ಉದ್ಧಾರ ಆತ್ಮದ ಆನಂಪದಲ್ಲಿರುತ್ತದೆ.

ಹಚ್ಚಿದ ಒಂದು ದೀಪದಿಂದ ಸಾವಿರಾರು ದೀಪಗಳನ್ನು ಹಚ್ಚಬಹುದು. ಒಳ್ಳೆಯ ಕರ್ಮಗಳನ್ನು ಆರಿಸಿಕೊಂಡವರಿಗೆ ಭಾಗ್ಯದ ಬಾಗಿಲು ತೆರೆಯುವದು. ಕೆಟ್ಟ ಕರ್ಮಗಳನ್ನನುಸರಿಸುವವರಿಗೆ ನಿರಂತರ ಕಷ್ಟ ಜೀವನದಲ್ಲಿರುವ ಪ್ರಸಂಗ ಬರಬಹುದು ಮನುಷ್ಯ ಜೀವನದ ದೈನಿಕ ಘಟನೆಗಳನ್ನು ನಿತ್ಯ ನೋಡುತ್ತೇವೆ. ಕೇಳುತ್ತೇವೆ. ಇವುಗಳಿಂದಲೇ ಮನುಷ್ಯನಿಗೆ ಮೂಲಜ್ಞಾನ ಉತ್ಪನ್ನವಾಗುತ್ತದೆ. ಮತ್ತು ಜೀವನದಲ್ಲಿ ಅನೇಕ ಮಹತ್ವಪೂರ್ಣ ಕಾರ್ಯಗಳನ್ನು ಮಾಡಲು ಸಮರ್ಥರಿರುತ್ತೇವೆ. ನಾವು ನಿತ್ಯ ದಾರಿಯಲ್ಲಿ ಹೆಣಗಳನ್ನು ನೋಡುತ್ತೇವೆ. ಆದರೆ ಮಹಾತ್ಮ ಬುದ್ಧನ ದೃಷ್ಟಿಯಲ್ಲಿ ಶುದ್ಧಿಯಿದ್ದುದಕ್ಕಾಗಿಯೇ ಆಕರ್ಷಣ ಶಕ್ತಿಯ ತೇಜ ಅವನಲ್ಲಿ ಪೂರ್ತಿಗೊಂಡಿತು. ಅವನ ದೃಷ್ಟಿಯು ಸೃಷ್ಟಿಯನ್ನು ಬದಲಿಸಿತು; ಜನವನ್ನು ಎಚ್ಚರಗೊಳಿಸಿತು. ದೃಷ್ಟಿ ಶುದ್ಧಿಯ ಬಲದಿಂದಲೇ ಅಂದಿನ ಶಿವಶರಣರು ಇಂದಿಗೂ ನಮ್ಮ ಚಿತ್ತಪಟಲದಲ್ಲಿ ಚಿತ್ರಿತರಾಗಿದ್ದಾರೆ. ಅವರು ಕಣ್ದೆರೆದು ಕೆಲಸ ಮಾಡಿದ್ದಕ್ಕಾಗಿಯೇ ಅವರ ವ್ಯಕ್ತಿತ್ವ ಆಕರ್ಷಕವಾಗಿದೆ. ಸೋತ್ಕರ್ಷವಾಗಿದೆ.

ರಷ್ಯಾದ ಪ್ರವರ್ತಕನಾದ ಮ್ಯಾಕ್ಸಿಮ್ ಗೋರ್ಕಿಯು " ಅಪರಿವರ್ತಿತ ಅವಸ್ಥೆಯಲ್ಲಿರುವದು ತುಂಬಾ ದುಃಖಮಯವಾದದ್ದು ಈ ಅವಸ್ಥೆ ಇದ್ದು, ಒಂದು ಪಕ್ಷ ನಮ್ಮ ಹೃದಯ ಸಾಯದಿದ್ದರೆ ಆ ಪರಿಸ್ಥಿತಿಯು ಮತ್ತಷ್ಟು ದುಃಖದಾಯಕ" ಎಂದು ಹೇಳಿದ್ದಾನೆ. ಇದು ತುಂಬಾ ಸತ್ಯ. ಮನುಷ್ಯನು ತನ್ನ ಅನಂತ ಶಕ್ತಿಯ ಮೇಲೆ ಅಧಿಕಾರ ಮಾಡುತ್ತಾನೆ.

**ಆಕರ್ಷಣ ಶಕ್ತಿ:**

ಜಗತ್ತಿನ ನಾಲ್ಕೂ ನಿಟ್ಟಿನಲ್ಲಿ ಆಕರ್ಷಣ ಶಕ್ತಿಯ ಪ್ರಕಾಶವಿರುತ್ತದೆ. ಎಲ್ಲಿಯ ವರೆಗೆ ಅದನ್ನು ನಾವು ಗುರುತಿಸುವದಿಲ್ಲವೋ ಅಲ್ಲಿಯವರೆಗೆ ನಮ್ಮ ಶಕ್ತಿಗಳು ಬಿದ್ದ ಹೆಣದಂತೆಯೇ. ಹೂವನ್ನು ನಮ್ಮ ಜೇಬಿನಲ್ಲಿ ಇಟ್ಟುಕೊಂಡು ಅದರ ಸುಗಂಧ ಸೇವಿಸದಿದ್ದರೆ ನಾವು ದುರ್ಭಾಗ್ಯರು. ನಮ್ಮ ಎಡೆಬಟ್ಟಲದಲ್ಲಿ ಸ್ವಾದಿಷ್ಟ ಭೋಜನ ವಿದ್ದು, ಅದನ್ನು ಸೇವಿಸಿ ಸುಖಪಡೆಯದಿದ್ದರೆ ನಮ್ಮ ದೋಷವಲ್ಲದೆ ಮತ್ತಾರದು ?

ನ್ಯೂಟನ್ನನು "ನಾನು ನನ್ನ ವಿಷಯವನ್ನು ನಿರಂತರ ನನ್ನೆದುರು ಇಟ್ಟು ಕೊಳ್ಳುತ್ತೇನೆ. ಸಾವಧಾನದಿಂದ ಅದರ ಅಂಧಕಾರವನ್ನು ನಾಶಮಾಡಿ ನನ್ನ ಮಾರ್ಗದಲ್ಲಿ

ಬೆಳಕನ್ನು ತಂದುಕೊಳ್ಳುತ್ತಿದ್ದೇನೆ." ಎಂದು ಹೇಳುತ್ತಿದ್ದನಂತೆ. ಯಾವದೇ ಕೆಲಸವನ್ನು ಶಕ್ತಿಯೊಡಗೂಡಿ ಮಾಡುವದರಲ್ಲಿ ಸಫಲತೆಯೇ ಹೊರತು ಕೇವಲ ಹಾಹಾಕಾರ ಎಬ್ಬಿಸುವದರಲ್ಲಿ ಅಲ್ಲ.

ಮನುಷ್ಯನ ಚಿತ್ತದಲ್ಲಿ ಒಂದು ವಿಲಕ್ಷಣ ಮತ್ತು ವಿಚಿತ್ರ ಜಗತ್ತು ಸ್ಥಾಪಿತವಾಗುತ್ತಿದೆ. ಅದರಲ್ಲಿ ಮೃದುವಾದ ಗುಲಾಬಿ ಹೂಗಳಿಂದ ಹರಡಿರುವ ಆಕರ್ಷಕ ಉದ್ಯಾನವನಗಳಿದ್ದಾವೆ. ಆ ಉದ್ಯಾನವನದಲ್ಲಿ ಮೃತ್ಯುವಿನಂತೆ ಅಂಧಕಾರವುಳ್ಳ ಭಯಾನಕ ನಿರಾಶೆಯ ಬಾವಿಗಳಿದ್ದಾವೆ. ಅದರ ಆಳವನ್ನು ನೋಡುತ್ತಲೇ ಹೃದಯ ಕಂಪಿಸುತ್ತದೆ. ಮತ್ತು ಆ ಉದ್ಯಾನವನದಲ್ಲಿ ತ್ಯಾಗ ಮತ್ತು ಸಹಾನುಭೂತಿ ಮುಂತಾದವುಗಳಿಂದ ತುಂಬಿ ಹರಿಯುತ್ತಿರುವ ಪ್ರೇಮದ ಹಳ್ಳಗಳಿದ್ದಾವೆ. ಅದರಲ್ಲಿ ದ್ವೇಷ, ಅಸತ್ಯ, ಅಭಿಮಾನ, ಇಂದ್ರಿಯ ಲೋಲುಪತೆ ಇತ್ಯಾದಿಗಳಿಂದ ತುಂಬಿರುವ ನರಕವೂ ಅದೆ. ಅದರಲ್ಲಿ ಸತ್ಯ, ಸಂತೋಷ, ಭಕ್ತಿ ಮತ್ತು ನಮ್ರತೆಯ ಸ್ವರ್ಗವು ಕೂಡ ಪ್ರಕಾಶಿಸುತ್ತಿರುತ್ತದೆ.

ಈ ಮನುಷ್ಯನ ಚಿತ್ತದಲ್ಲಿ ಎಲ್ಲವೂ ಇದ್ದು ಕೆಟ್ಟದ್ದನ್ನು ಬಿಟ್ಟು ಒಳ್ಳೆಯದನ್ನು ಹಿಡಿಯುವದರಲ್ಲಿ ಜಾಣ್ಮೆಯಿದೆ. ತಾಳ್ಮೆಯಿದೆ. ಶಕ್ತಿಯಿದೆ. ಅಂತೆಯೇ ಹಿರಿಯರು "ಒಂದು ಬಿಟ್ಟು ಒಂದು ಹಿಡಿ" ಎಂದು ಅನುಭವ ವಾಣಿಯಿಂದ ಉಸುರಿದ್ದಾರೆ. ನಮ್ಮ ಜೀವನದಲ್ಲಿ ಜ್ಯೋತಿ ತುಂಬಬೇಕಾಗಿದೆ; ಶಕ್ತಿಗಳಿಸಬೇಕಾಗಿದೆ. ವ್ಯಕ್ತಿತ್ವವನ್ನು ವ್ಯಕ್ತ ಮಾಡಬೇಕಾಗಿದೆ. ಅದಕ್ಕಾಗಿ ಕಲುಷಿತ ಭಾವನೆಗಳನ್ನು ಹೊರದೂಡಿದರೆ ತನ್ನಿಂದ ತಾನೆ ಆಕರ್ಷಕವಾಗುತ್ತದೆ. ಅಲ್ಲದೆ ನಾವು ವಿಶಾಲ ಮನೋಭಾವದರಾಗಬೇಕು. ಹೊರಗಿನ ವಿಶಾಲ ವಿಚಾರಗಳನ್ನು ಅರಿತುಕೊಳ್ಳಬೇಕು. ಬದಲಾದ ಜಗತ್ತಿನ ಕೂಡ ಸಾಗಬೇಕು; ಹಳೇ ಪದ್ಧತಿಗೆ ಹೊಸ ವಿಚಾರಗಳನ್ನು ಅನ್ವಯಿಸಬೇಕು. ಆದರೆ ಇದಾವುದು ಆಂತರಿಕ ವಿಚಾರಕ್ಕೆ ಬಾಧೆ ಬರದಂತೆ ನಡೆಯಬೇಕು. ಇವರಿಂದ ಮನುಷ್ಯ ಜೀವನದಲ್ಲಿ ....... ಸ್ಫೂರ್ತಿ ಬರುತ್ತದೆ. ಈ ಶಕ್ತಿಗಾಗಿ ನಿರಂತರ ಪರಿಶ್ರಮ ಪಟ್ಟಲ್ಲಿ ಅದರ ಸಫಲತೆ ಶಕ್ತಿ ಸಿದ್ಧಿಗಾಗಿ ಈ ತಿಳಿನುಡಿಗಳು ನಮಗೆ ಆಕರ್ಷಕವಾಗಲಿ! ಪಾರಿದೀಪಗಳಾಗಲಿ! □

ಉತ್ತಿಷ್ಠತ, ಜಾಗೃತ, ಪ್ರಾಪ್ಯವರಾನ್ನಿಬೋಧತ,

"Arise! Awake! and stop not
till the goal is reached!"

---

೧೯೫೮ ರಂದು ಶ್ರೀ ಶಿವಯೋಗ ಮಂದಿರದಲ್ಲಿ ಸಾಧಕರನ್ನು ಉದ್ದೇಶಿಸಿ ಅಪ್ಪಣೆ ಕೊಡಿಸಿದ ಆಶೀರ್ವಚನ.

# ಸ್ತ್ರೀ ಶಿಕ್ಷಣ

ಶಿಕ್ಷಣವಿಲ್ಲದ ಜೀವನ ಹಾಳುಮನೆಯಂತೆ, ಜಲವಿಲ್ಲದ ತಟಾಕದಂತೆ ಶೋಭಿಸದು. ಭಾವು ಪುಷ್ಟವಾಗಿ ಬುದ್ಧಿ ಪೋಷಿತವಾಗಬೇಕಾದರೆ ಶಿಕ್ಷಣವು ಅತ್ಯಾವಶ್ಯಕ. ನಮ್ಮ ಜೀವನದಲ್ಲಿ ಏನಾದರೂ ಸಾಧಿಸಬೇಕಾಗಿದ್ದರೆ ಮೊದಲು ಭಾವದಲ್ಲಿ ಬಿತ್ತಬೇಕಾಗುತ್ತದೆ. ನಂತರ ಶರೀರದಲ್ಲಿ ಪರಿವರ್ತನ ಮಾಡಿಕೊಂಡು ಮನದಲ್ಲಿ ತುಂಬಬೇಕಾಗುತ್ತದೆ. ಬುದ್ಧಿಯನ್ನೂ ಹೃದಯವನ್ನೂ ತಿದ್ದಬೇಕಾಗುತ್ತದೆ, ಸಾಹಿತ್ಯದ ಮುಖ್ಯ ಗುರಿಯಾದ ರಸಾನುಭವವನ್ನು ಹೃದಯ ಪರಿವರ್ತನೆಯಿಂದ ಪಡೆದರೆ ರಸಸಿದ್ಧಿ ಸಾಧ್ಯ. ವ್ಯಕ್ತಿತ್ವದ ಸರ್ವಾಂಗೀಣ ಅಭಿವೃದ್ಧಿಯಾಗಿ ಸಾಹಿತ್ಯ, ಸಂಸ್ಕೃತಿ, ಆಧ್ಯಾತ್ಮಿಕ ಶಕ್ತಿ ಬೆಳೆದು ಬೆಳಗಲು ಶಿಕ್ಷಣವೇ ಮೂಲ ಸಾಧನ. ಮತ್ತು ತಾಯಿಬೇರು, ಈ ಶಿಕ್ಷಣ ಸಾಧನದಿಂದ ಬುದ್ಧಿಯನ್ನು ಎಚ್ಚರಿಸಿ ಸೂಕ್ಷ್ಮಗೊಳಿಸಿ, ಆತ್ಮವಿಕಾಸ ಮಾಡಿಕೊಂಡು ನವೀನ ವೈಜ್ಞಾನಿಕ ದೃಷ್ಟಿಯನ್ನು ನೆಲೆಗೊಳಿಸಿಕೊಂಡು ವಿಚಾರ ಪರತೆಯಿಂದ ಕಾರ್ಯತತ್ಪರ ರಾದರೆ ಮಾತ್ರ ಶಿಕ್ಷಣಶಕ್ತಿ ಬಂಧುರವಾಗುವದಲ್ಲದೆ ಸಾಮಾನ್ಯ ಜನತೆಯ ಉದ್ಧಾರ ಮಾಡಲು ಅನುಕೂಲವಾಗುವದು. ಮತ್ತು ರಾಷ್ಟ್ರೋದ್ಧಾರವಾಗುವದು.

ಬುದ್ಧಿ ಶಕ್ತಿಯಿಂದ ತತ್ವ ಬೆಳೆದರೆ, ಭಾವಶಕ್ತಿಯಿಂದ ಕಾವ್ಯ ಬೆಳೆಯುತ್ತದೆ. ಈ ಸಮನ್ವಯ ದೃಷ್ಟಿ ಇಂದಿನ ಶಿಕ್ಷಣದಲ್ಲಿ ಅತ್ಯವಶ್ಯಬೇಕು. ಕೇವಲ ಲೌಕಿಕೋದ್ದೇಶದ ಸಾಧನೆಯೇ ಶಿಕ್ಷಣದ ಉದ್ದೇಶವಾಗಲಾರದು. ಲೌಕಿಕೋದ್ದೇಶದ ಜೊತೆಗೆ ಆಧ್ಯಾತ್ಮಿಕದ ಅನುಸಂಧಾನದ ವಿಚಾರಗಳು ಶಿಕ್ಷಣದೊಳಗೆ ಸೇರಿದರೆ ಚೈತನ್ಯ ವುಂಟಾಗಿ ಪೂರ್ಣ ಮಾನವನಾಗಲು ಸಹಾಯ ದೊರೆಯುತ್ತದೆ. ಇತ್ತಿತ್ತಲಾಗಿ ಅಲ್ಲಲ್ಲಿ ನಡೆಯುತ್ತಿರುವ ವಿದ್ಯಾರ್ಥಿಗಳ ಅಶಾಂತಮಯ ಅಶಿಸ್ತಿಗೆ ಈ ನುಡಿಗಳು ಆಸರಕಂಬ ವಾಗಬಹುದು. ಆತ್ಮವಿಕಾಸ ಮಾಡಿಕೊಳ್ಳಲಾರದ ಶೈಕ್ಷಣಿಕ ಜೀವನ ಸುಗಂಧವಿಲ್ಲದ ಹೂವಿನಂತೆ, ಒಣಗಿರುವ ತರುಲತೆಗಳಂತೆ ಆಗಿ ನಿರರ್ಥಕವಾದುದು. ಅದಕ್ಕಾಗಿ ಇಂದಿನ ಶಿಕ್ಷಣ ರಂಗದಲ್ಲಿ ಅಡಿಯಟ್ಟ ವಿದ್ಯಾರ್ಥಿ, ವಿದ್ಯಾರ್ಥಿನಿಯರು ಕೇವಲ ಪಠ್ಯ ಪುಸ್ತಕಗಳ ಅಧ್ಯಯನದಲ್ಲಿ ತತ್ಪರರಾಗದೆ, ಅವರ ಜೊತೆಗೆ ಅದಕ್ಕಿಂತಲೂ ಹೆಚ್ಚಾಗಿ ಸತ್ಯಾರ್ಥಿ

ಗಳಾಗಲು ಕಲಾರಾಧನೆ ಮಾಡಿದರೆ ನಾಡಿಗೂ, ರಾಷ್ಟ್ರಕ್ಕೂ ಕ್ಷೇಮಕರ. ಆ ದೃಷ್ಟಿಯಿಂದ ಅಧ್ಯಯನ ಮಾಡುವುದು ಅತ್ಯಗತ್ಯ.

ಪೂರ್ವದಲ್ಲಿ ಪುರುಷರಿಗಷ್ಟೇ ಶಿಕ್ಷಣಕ್ಕೆ ಪ್ರಾಧಾನ್ಯತೆ ನೀಡಿದ್ದರೆ, ಇದೀಗ ಸ್ತ್ರೀ ಶಿಕ್ಷಣವು ಅತ್ಯವಶ್ಯವೂ ಫಲಕಾರಿಯಾಗಿಯೂ, ರಾಷ್ಟ್ರ ಸುಧಾರಣೆ ಮಾಡಲು ಅನುಕೂಲ ವಾಗುವದೆಂಬುದು ಎಲ್ಲರ ಗಮನಕ್ಕೆ ಬರುತ್ತಲಿದೆ. ಪುರುಷರಿಗೆ ಶಿಕ್ಷಣ ನೀಡುವದರಿಂದ ಕೇವಲ ವೈಯಕ್ತಿಕವಾಗಿ ಅವರ ಅಭ್ಯುದಯವಾದರೆ, ಸ್ತ್ರೀ ಶಿಕ್ಷಣದಿಂದ ತಾವಷ್ಟೇ ಅಲ್ಲದೆ ಬಂಧು ಬಾಂಧವರು ಸಂಸ್ಕಾರಯುತರಾಗಿ ನಾಡಿನ ಕಲ್ಯಾಣವಾಗುವದರಲ್ಲಿ ಸಂದೇಹವಿಲ್ಲ.

ಯಾವ ದಾರಿಯಲ್ಲಿ ಹೋದರೆ ಸಾರ್ಥಕತೆಯಾಗುವದೆಂಬುದನ್ನು ಅರಿಯಲು ಸ್ತ್ರೀ ಶಿಕ್ಷಣವು ಸಹಕಾರಿಯಾಗುವದಲ್ಲದೆ ಭವಿಷ್ಯವನ್ನೂ ರೂಪಿಸಿಕೊಂಡು ಬಾಳ್ವೆಳಕು ಮಾಡಿಕೊಳ್ಳಲು ಅನುಕೂಲವಾಗುವದು. ಸಾಹಿತ್ಯ ಸಂಸ್ಕೃತಿಯ ದೃಷ್ಟಿಯಿಂದಲೂ ಅವರಿಗೆ ಅನುಕೂಲವಾಗಿ ಆತ್ಮಸಂಶೋಧನೆ ಮಾಡಿಕೊಂಡು ಹಿರಿಕಿರಿಯರೊಡನೆ ಮನೋವೈಜ್ಞಾನಿಕ ದೃಷ್ಟಿಯಿಂದ ಅರಿಯುವ ಭಾವನೆ ಬರುವದು. ಪ್ರಾಚೀನ ಮಹಾ ಪುರುಷರ, ಸಾಹಿತಿಗಳ ಹಾಗು ದಾರ್ಶನಿಕರ ಅನುಭವಸಾರವನ್ನು ಸಂಗಳಿಸಿಕೊಂಡು, ಸಮಾಜಕ್ಕೆ ದೇಶಕ್ಕೆ ಉಪಯೋಗವಾಗುವಂತಹ ಯೋಜನೆ ಯೋಚನೆ ಮಾಡಲು ಸ್ತ್ರೀ ಶಿಕ್ಷಣದಿಂದ ಸಾಧ್ಯ.

ಒಂದೆಡೆ ಸ್ವಾಮಿ ವಿವೇಕಾನಂದರು ಮನು ಮಹರ್ಷಿಯ ವಿಚಾರಗಳನ್ನೇ, ಸ್ತ್ರೀಯರಿಗೆ ಗೌರವ, ಹಾಗು ಶಿಕ್ಷಣ ನೀಡುವದರಿಂದ ಆಗುವ ಲಾಭವನ್ನು ಹೃದಯಂಗಮ ರೀತಿಯಲ್ಲಿ ತಮ್ಮದೇ ಆದ ಸುಂದರ ಭಾಷೆಯಲ್ಲಿ ಈ ರೀತಿ ಬಿತ್ತರಿಸಿದ್ದಾರೆ.

"Where women are respected there the gods delight; and where they are not, there all works and efforts come to naught."

"Educate your women first and leave them to themselves; then they will tell you what reforms are necessary for them."

ಸ್ವಾಮಿ ವಿವೇಕಾನಂದ ಇಂಥ ಶಕ್ತಿಸ್ಫೂರ್ತಿಯುತ ಹಾಗು ತಪಃಪೂರ್ಣವಾದ ಈ ಅಂತರ್ವಾಣಿಯು ಮಲಗಿದವರನ್ನು ಎಚ್ಚರಿಸುವ ಕೈದೀವಿಗೆ, ಹೃದಯ ದೌರ್ಬಲ್ಯವಿದ್ದ ವರಿಗೆ ದಿವ್ಯೌಷಧ ಬುದ್ಧಿಗೆ ಪುಷ್ಟಿ ಕೊಟ್ಟು ಹೃದಯಕ್ಕೆ ತೃಪ್ತಿ ಕೊಡುತ್ತದೆ.

ಒಟ್ಟಿನಲ್ಲಿ ಸ್ತ್ರೀ ಶಿಕ್ಷಣದಿಂದ ಜೀವನವೃಕ್ಷದ ಶಾಖೋಪಶಾಖೆಗಳು ಬೆಳೆದು, ಚಿಗುರೊಡೆದು ಫಲ ಪುಷ್ಪಗಳ ಸುಗಂಧವನ್ನು ಜನಾಂಗಕ್ಕೆ ನೀಡಿ ಸತ್ವಶಾಲಿಗಳನ್ನಾಗಿ ಮಾಡಲು ದಾರಿಯಾಗುತ್ತದೆ.

ವಿದ್ಯಾರ್ಥಿನಿಯರು ಸ್ತ್ರೀ ಶಿಕ್ಷಣದ ಮಹತ್ವವನ್ನರಿತು, ನಾಡಿನ, ರಾಷ್ಟ್ರದ ಮಹಾ ವ್ಯಕ್ತಿಗಳ ಆದರ್ಶ ವ್ಯಕ್ತಿತ್ವವನ್ನು ಎದುರಿಗಿಟ್ಟುಕೊಂಡು, ಅವರು ಬಿಟ್ಟು ಹೋಗಿರುವ

ಅನುಭವ ಸಂಪತ್ತನ್ನು, ಜ್ಞಾನ ವೈಭವವನ್ನು ಪಡೆದುಕೊಂಡು ಅವರು ನಡೆದು ಹೋದ ದಾರಿಯನ್ನು ಅನುಸರಿಸುವ ಬುದ್ಧಿಯನ್ನು ವಿದ್ಯಾರ್ಥಿನಿಯರಿಗೆ ಜಗದೀಶನು ನೀಡಲೆಂದು ಆಶಿಸಿ ಕೆಳಗೆ ಬರೆದ ಆಂಗ್ಲಕವಿ ಲಾಂಗಫೆಲೋನ ಕವನಗಳು ಅವರ ಜೀವನದ ದಾರಿದೀಪಗಳಾಗಲೆಂದು ಹಾರೈಸೋಣವಾಗಿದೆ.

" Lives of great men all remind us
we can make our lives sublime,
and, departing, leave behind us
Footprints, on the sands of time;
Footprints, that perhaps another
Sailing o'er life's solemn main,
A forlorn and shipwrecked brother,
Seeing, shall take heart again.

□

# ಜಾಗತಿಕ ಶಾಂತಿಗೆ ವೀರಶೈವ ದರ್ಶನದ ಕೊಡುಗೆ

"India is the land of sages and saints" – ಭಾರತವು ಸಾಧು ಸಂತರ ನೆಲೆವೀಡೆಂದು ಹೆಸರಾಗಿದೆ. ವಿದೇಶೀಯರು ಭರತ ಖಂಡವನ್ನು ಈ ದೃಷ್ಟಿಯಲ್ಲಿ ಕಾಣುವರು. ಅದಕ್ಕೆ ಕಾರಣಗಳೂ ಇಲ್ಲದಿಲ್ಲ. ಕ್ರಿ. ಶ. ಪೂರ್ವದಲ್ಲಿ ಜಗತ್ತಿನಲ್ಲಿ ಇನ್ನಾವ ಧರ್ಮವೂ ಉಗಮವಾಗದ ಪೂರ್ವದಲ್ಲಿಯೇ ನಮ್ಮವರು ವೇದಾಗಮೋಪ ನಿಷತ್ತುಗಳನ್ನು ರಚಿಸಿ ವರ್ಣಾಶ್ರಮ ಧರ್ಮಗಳನ್ನು ಸಮಾಜ ಸಂಘಟನೆಗಾಗಿ ಮನು ಧರ್ಮ ಶಾಸ್ತ್ರವನ್ನು ರಚಿಸಿಕೊಂಡುದಲ್ಲದೆ ಸುಸಂಘಟಿತವಾಗಿ ಇಹ–ಪರಗಳನ್ನು ಸಾಧಿಸುವ ಕಲ್ಯಾಣದ ನಾಗರಿಕತೆಯ ಮಾರ್ಗವನ್ನು ಸಾಧಿಸಿಕೊಂಡಿದ್ದರು. ಆದ್ದರಿಂದಲೇ ಭಾರತವು ಉಳಿದೆಲ್ಲ ಜಗತ್ತಿನ ಧರ್ಮಗಳಿಗೆ ತವರುಮನೆಯಾಗಿದೆಯೆಂದು ಹೇಳಿದರೆ ತಪ್ಪಾಗದು. ಪ್ರಪಂಚದ ವಿಖ್ಯಾತವಾದ ಧರ್ಮಗಳು ಹಲವಾರು ಭರತಖಂಡದಲ್ಲಿಯೇ ಜನಿಸಿ ಹೊರಗಡೆ ಹಬ್ಬಿದವು. ಭಾರತದ ಹೊರಗೆ ಹುಟ್ಟಿದ ಇಸ್ಲಾಂ, ಕ್ರೈಸ್ತ ಇಂತಹ ಧರ್ಮಗಳೂ ಭರತಭೂಮಿಯಲ್ಲಿ ಹುಲಸಾಗಿಯೇ ಬೆಳೆದವು. ಅಂತೆಯೇ ಭರತ ಖಂಡವು ದರ್ಶನಗಳ ನೆಲೆವೀಡೆಂದು ನೆಗಳ್ತೆವೆತ್ತಿದೆ. ಭಾರತೀಯರಿಗೆ ಭೌತಿಕ ಆಸಕ್ತಿಗಿಂತಲೂ ಪಾರಮಾರ್ಥಿಕ ಜಿಜ್ಞಾಸೆ ಹೆಚ್ಚು. ಮೊಹೆಂಜೊದಾರೂ. ಹರಪ್ಪಾ ಸಂಸ್ಕೃತಿಯ ಕಾಲದಿಂದ ಅಂದರೆ ಕ್ರಿ. ಪೂ. ೩೦೦೦ ವರ್ಷಗಳಿಂದಲೂ ಭರತ ಭೂಮಿಯಲ್ಲಿ ದರ್ಶನಗಳು ಮೈವೆತ್ತಿ ಬಂದಿವೆ. ಚಾರ್ವಾಕ, ಜೈನ, ಬೌದ್ಧ, ಸಾಂಖ್ಯ, ಯೋಗ, ಪೂರ್ವಮೀಮಾಂಸೆ ಉತ್ತರ ಮೀಮಾಂಸೆ ಇಂತಹ ಅನೇಕ ದರ್ಶನಗಳು ಭರತ ಖಂಡದಲ್ಲಿಯೇ ಹುಟ್ಟಿ ಬೆಳೆದಿವೆ. ಭಾರತೀಯ ಷಡ್ದರ್ಶನಗಳು ಜಗತ್ಪ್ರಸಿದ್ಧವಾಗಿವೆ. ಈ ಷಡುದರ್ಶನಗಳಿಗಿಂತಲೂ ಮೃಡದರ್ಶನವೊಂದು ಅತ್ಯಂತ ಪ್ರಾಚೀನ ಕಾಲದಿಂದಲೂ ಬೆಳದುಬಂದಿದೆ. ಅದೇ ಶೈವಧರ್ಮ. ಶೈವಧರ್ಮದ ಅಧಿದೇವತೆ ಶಿವ. ಶಿವ ಮತ್ತು ರುದ್ರ ಎಂಬ ಪದಗಳಲ್ಲಿ ಆರಂಭದಲ್ಲಿ ಅರ್ಥವಿಶೇಷ ದೃಷ್ಟಿಯಿಂದ ವ್ಯತ್ಯಾಸವಿದ್ದರೂ ಕಾಲಾಂತರದಲ್ಲಿ ಅವು ಪರ್ಯಾಯ ಪದಗಳಾಗಿವೆ. ಶಿವ ಎಂಬುದು ಮಂಗಲಾರ್ಥವನ್ನು ಸೂಚಿಸಿದರೆ. ರುದ್ರ ಎಂಬುದು ಭೀಕರ ಸ್ವರೂ

ಪವನ್ನು ಅಭಿವ್ಯಕ್ತಪಡಿಸುತ್ತದೆ. ಈ ವರ್ಣನೆಯನ್ನು ಋಗ್ವೇದದಲ್ಲಿ[೧] ಹಲವೆಡೆ ಕಾಣುತ್ತೇವೆ. ಋಗ್ವೇದ ಪೂರ್ವಕಾಲದುದೆನಿಸಿದ ಮೊಹೆಂಜೊದಾರೊ ಹರಪ್ಪಾ ಸಂಸ್ಕೃತಿಗಳು ಶೈವಪರವಾದುದೆಂದು ಹಲವು ಸಂಶೋಧಕರ ಅಭಿಮತ.[೨]

ಶೈವಧರ್ಮವು ಪ್ರಾಚೀನತೆಯ ದೃಷ್ಟಿಯಿಂದ ಕನಿಷ್ಟ ವೇದೋಪನಿಷತ್ತುಗಳ ಕಾಲದಷ್ಟಾದರೂ ಪುರಾತನತೆಯನ್ನು ಪಡೆದಂತೆ ವ್ಯಾಪ್ತಿಯ ದೃಷ್ಟಿಯಿಂದಲೂ ಅಷ್ಟೇ ವೈಶಾಲ್ಯವನ್ನು ಪಡೆದಿದೆ. ಶೈವರು ಆರಾಧಿಸುವ ಶಿವಲಿಂಗಗಳು ಭರತ ಖಂಡದಲ್ಲಿ ಅಷ್ಟೇ ಅಲ್ಲದೆ ಮಿಕ್ಕ ಖಂಡಗಳಲ್ಲಿಯೂ ಗೋಚರವಾಗುತ್ತಿವೆ. ಕೆಂಬೋಡಿಯಾ, ಚಂಪಾ. ಇಂಡೋನೇಶಿಯಾ, ಚೀನ ಮತ್ತು ಜಪಾನ ಮೊದಲಾದ ಪೌರಸ್ತ್ಯ ದೇಶಗಳಲ್ಲಿ ಲಿಂಗಪೂಜೆ ಕ್ರಿ. ಶ. ೫೫೦ ಕ್ಕಿಂತಲೂ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿ ಇರಬಹುದೆಂದು ಊಹಿಸಲವಕಾಶವಿದೆ. ಇದಲ್ಲದೇ ಮಧ್ಯ ಏಶಿಯಾ ಪರ್ವತಗಳ ಸುತ್ತು ಮುತ್ತು ಲಿಂಗಪೂಜೆ ಅಸ್ತಿತ್ವದಲ್ಲಿ ಇದ್ದುದಾಗಿ ತಿಳಿದುಬರುತ್ತದೆ. ಹೀಗೆ ಶೈವಧರ್ಮವು ಅತ್ಯಂತ ಪ್ರಾಚೀನತೆಯುಳ್ಳದ್ದೂ ವ್ಯಾಪ್ತಿಯನ್ನು ಪಡೆದುದೂ ಆಗಿದೆ.

**ಶೈವ ಪ್ರಭೇದಗಳು :**

ಶೈವಧರ್ಮಕ್ಕೆ ಪ್ರಮಾಣಗ್ರಂಥಗಳು ಕಾಮಿಕಾದಿ ವಾತುಲ ಪರ್ಯಂತವಾದ ೨೮ ಶೈವಾಗಮಗಳು, ಸೂಕ್ಷ್ಮ, ವೀರ ಮೊದಲಾದ ಆಗಮಗಳಲ್ಲಿ ಅನಾದಿಶೈವ. ಆದಿ ಶೈವ, ಮಹಾಶೈವ, ಅನುಶೈವ ಅವಾಂತರ ಶೈವ, ಪ್ರವರ ಶೈವ, ಅಂತ್ಯಶೈವ ಹೀಗೆ ಶೈವದ ಏಳು ಪ್ರಭೇದಗಳನ್ನು ಉಲ್ಲೇಖಿಸಲಾಗಿದೆ.[೩] ಆದರೆ ಎಲ್ಲ ಆಗಮಗಳಲ್ಲಿಯೂ ಇವೇ ಏಳು ಪ್ರಭೇದಗಳ ಹೆಸರು ಕಂಡುಬರುವುದಿಲ್ಲ. ಮೊದಲಿನ ನಾಲ್ಕನ್ನು ಅಂದರೆ ಅನಾದಿ ಶೈವ, ಆದಿಶೈವ, ಮಹಾಶೈವ, ಅನುಶೈವ ಇವುಗಳ ನಾಮನಿರ್ದೇಶಮಾಡಿ ಮಿಕ್ಕವುಗಳಿಗೆ ಪ್ರತಿಯಾಗಿ ಯೋಗಶೈವ, ಜ್ಞಾನಶೈವ, ವೀರಶೈವಗಳ ಉಲ್ಲೇಖದೊರೆಯುತ್ತದೆ. ವೀರಶೈವ ಸಿದ್ಧಾಂತವನ್ನು ಅಧಿಕೃತವಾಗಿ ವಿವರಿಸಿದ ತೋಂಟದ ಸಿದ್ಧಲಿಂಗ ಶಿವಯೋಗಿಗಳು (ಕ್ರಿ.ಶ. ೧೪೭೫) ಆದಿಶೈವ, ಮಹಾಶೈವ. ಅನುಶೈವ, ಅಂತರಶೈವ, ಅಂತ್ಯಶೈವ ಪ್ರವರಶೈವ ಎಂದು ಆರು ಪ್ರಭೇದಗಳನ್ನು ಹೇಳಿ ಅನಾದಿಶೈವವನ್ನು ಹೇಳದೇ ಅದರ ಸ್ಥಳದಲ್ಲಿ ವೀರಶೈವವನ್ನು ಹೆಸರಿಸಿರುವರು. ಆದುದರಿಂದ ಶಿವಾಗಮಗಳಲ್ಲಿ ಉಲ್ಲಿಖಿತವಾದ ಅನಾದಿ ಶೈವ ಎಂಬುದು ವೀರಶೈವದ ಪರ್ಯಾಯ ನಾಮವೆಂದು ಊಹಿಸಬಹುದಾಗಿದೆ. ಆರು ಶೈವಗಳು ವರ್ಣಾಶ್ರಮಗಳನ್ನು ಅವಲಂಬಿಸಿರುವವೆಂದೂ ವೀರಶೈವವು ವರ್ಣಾಶ್ರಮಾತೀತವಾದುದೆಂದು ವಿಧಿತವಾಗುತ್ತದೆ.

ಈ ಶೈವಪ್ರಭೇದಗಳಲ್ಲಿಯೂ ಮುಖ್ಯವಾದವು ಮೂರು. ಕಾಶ್ಮೀರಶೈವ, ತಮಿಳು ಶೈವ, ವೀರಶೈವ, ಕಾಶ್ಮೀರಶೈವವನ್ನು ತ್ರಿಕ ಇಲ್ಲವೇ ಪಾಶುಪತಮತವೆಂದು,

---

೧. ಋಗ್ವೇದ ೧. ೧೧೪. ೧. ೨, ೪, ೫, ೮, ೧೦.
೨. Sir John-Marshall Mohenjodaro and Indus Valley Civilization P. VII.
೩. ಸೂಕ್ಷ್ಮಾಗಮ, ಪಟಲ-೭, ಶ್ಲೋಕ ೮-೧೪.

ತಮಿಳು ಶೈವವನ್ನು ಶೈವ ಸಿದ್ಧಾಂತವೆಂದೂ ವೀರಶೈವವನ್ನು ಷಟ್‌ಸ್ಥಲಸಿದ್ಧಾಂತ ವೆಂದೂ ಕರೆಯುವದುಂಟು. ತ್ರಿಕ ಮತ್ತು ಶೈವಸಿದ್ಧಾಂತಗಳು ಶಿವಸಮಾನತಾವಾದ ವನ್ನು ಎತ್ತಿ ಹಿಡಿದರೆ ವೀರಶೈವವು ಶಿವಸಾಮರಸ್ಯವನ್ನು ಸಮರ್ಥಿಸುತ್ತದೆ. ಮಲ-ತ್ರಯದ ಮೂಲಕ ಪಾಶಬದ್ಧನಾದ ಜೀವಾತ್ಮನಿಗೆ ಮಲಪರಿಹಾರದಿಂದ ಶುದ್ಧ ಸ್ಥಿತಿ ಯನ್ನು ಪಡೆದು ಶಿವಪ್ರಕಾಶದಲ್ಲಿ ಮುಳುಗಿ ಕಾಣದಂತಾಗಿದ್ದರೂ ಆತನ ಸ್ವತಂತ್ರ ಅಸ್ತಿ ತ್ವಕ್ಕೆ ಚ್ಯುತಿಯಿಲ್ಲ. ಇದು ಒಂದು ದೃಷ್ಟಿಯಿಂದ ದ್ವೈತವನ್ನು ಆಧರಿಸಿದಂತೆ.

## ವೀರಶೈವ :

ವೀರಶೈವವು ಲಿಂಗಾಂಗ ಸಾಮರಸ್ಯ ಪ್ರಬೋಧಕವಾಗಿದೆ. ಬದ್ಧ ಜೀವಿಯು ವೇಧಾ, ಮಂತ್ರ, ಕ್ರಿಯಾದೀಕ್ಷಾತ್ರಯದಿಂದ ಶುದ್ಧನಾಗಿ ಆಣವ, ಕಾರ್ಮಿಕ, ಮಾಯಾ ಮಲವಿಚ್ಛೇದನದಿಂದ ಅಂಗಸ್ವರೂಪವನ್ನು ಪಡೆಯುತ್ತಾನೆ. ಅಂಗವೆಂದರೆ ಶುದ್ಧಾಂತಃ ಕರಣಜೀವಿ. ಈ ಅಂಗನು ತನ್ನೊಳಗಿನ ಭಕ್ತಿಯನ್ನು ಸತ್ಕ್ರಿಯೆಯ ಮೂಲಕ ಅರಳಿ ಸುತ್ತ ಲಿಂಗದೊಳಗಿನ ಶಕ್ತಿಯಲ್ಲಿ ಅದನ್ನು ಸಮರಸಗೊಳಿಸುತ್ತ ಕೊನೆಗೆ ಲಿಂಗಾಂಗ ಸಾಮರಸ್ಯವನ್ನು ಪಡೆಯುತ್ತಾನೆ. ಇದೇ ವೀರಶೈವದ ಮೋಕ್ಷ. ಕಾಶ್ಮೀರಶೈವ ತಮಿಳುಶೈವಗಳು ದ್ವೈತಪರವಾಗಿದ್ದರೆ ವೀರಶೈವವು ಶಿವಾದ್ವೈತವೆನಿಸಿವೆ. ಇದೇ ವ್ಯತ್ಯಾಸ ತಾತ್ವಿಕ ದೃಷ್ಟಿಯಿಂದ ೩೬ ತತ್ವಗಳು, ಮಲತ್ರಯಗಳು, ಷಡಧ್ವಗಳು ಈ ಮೂರು ಶೈವಕ್ಕೂ ಸಾಮಾನ್ಯವಾಗಿವೆ. ಆದರೆ ಇನ್ನುಳಿದ ಅವುಗಳಲ್ಲಿ ಭೇಧ ವಿಪುಲವಾಗಿವೆ.

ಶಿವಶಕ್ತಿಗಳ ಉಪಾಸನೆಯು ಅತಿ ಪ್ರಾಚೀನವಾದುದಾಗಿದೆ. ಭರತ ಭೂಮಿ ಯಲ್ಲೆಲ್ಲ ಕಾಣಬಹುದಾದ ಶೈವರ ಗುಡಿಗಳಲ್ಲಿ ನಮ್ಮ ದೃಷ್ಟಿ ಗೋಚರವಾಗುತ್ತಿರುವ ಶಿವಲಿಂಗವು ನಿರಾಕಾರ ಶಿವನ ಸಾಕಾರತೆಯನ್ನು ಮತ್ತು ಅವನು ಸ್ವಯಂಭು ಎಂಬು ವದನ್ನು ಸೂಚಿಸುತ್ತದೆ. ಈ ಶಿವಲಿಂಗ ಇಲ್ಲವೇ ಸ್ಥಾವರಲಿಂಗವನ್ನು ಗುಡಿಗುಂಡಾರ ಗಳಲ್ಲಿರಿಸಿ ಪೂಜಿಸುವದು ಶೈವಧರ್ಮದ ಹೆಗ್ಗುರುತು. ಆದರೆ ವೀರಶೈವಧರ್ಮವು ವಿಶಿಷ್ಟವಾದ ಇಷ್ಟಲಿಂಗಪೂಜೆಯಲ್ಲಿ ವ್ಯಕ್ತವಾಗುತ್ತದೆ. ದೇಹವನ್ನು ದೇವಾಲಯ ಮಾಡಿ ಅದರಲ್ಲಿ ದೇವನು ವಾಸಿಸಲು ಅದು ತಕ್ಕುದಾಗಬೇಕೆಂದು ಅನಾದ್ಯನಂತ ಪರಶಿವ ಪ್ರತೀಕವಾದ ಆ ಇಷ್ಟಲಿಂಗವನ್ನು ವೀರಶೈವನು ಎಂದೆಂದೂ ಅಗಲದಂತೆ ತನ್ನ ಅಂಗದ ಮೇಲಿರಿಸಿಕೊಳ್ಳುವನು. ಹೀಗೆ ಧರಿಸಿದ ಇಷ್ಟಲಿಂಗವು ಕಾಣದ ಪರ ಶಿವನು ಕೈಲಾಸದಲ್ಲಿಲ್ಲ, ಅವನು ಪ್ರತ್ಯಕ್ಷ ಶರೀರದಲ್ಲಿ ಇರುವನು. ದೇಹವೇ ದೇಗುಲ ವಾಗಬೇಕು. ಅದು ಮಹಾಕಾಯಕವೆನಿಸಬೇಕು. ಅಷ್ಟೇ ಅಲ್ಲ ವಿಶ್ವಕಾಯ ನಿರ್ಮಾ ಣದ ಸಿದ್ಧತೆಗೆ ಅದು ಎಡೆಗೊಡಬೇಕು. ಅದರಲ್ಲಿ ಇಡಿಯ ಆಧ್ಯಾತ್ಮಜೀವನ ತಿರುಳು ಮೈದೋರಬೇಕು. ಪರಶಿವನಲ್ಲಿ ಬೆರೆಯಲು ಅಂತರಂಗದ ಅನುಭಾವವು ಆಳವಾಗಿ ಅನುಭವಕ್ಕೆ ಅಳವಡಬೇಕು. ದೇವರ ದಿವ್ಯ ದೃಷ್ಟಿಯಲ್ಲಿ ಚೈತನ್ಯವನ್ನು ಪಡೆಯುವ

ವಿಶ್ವಗತಿ ವಿಶ್ವಶಾಂತಿಗೆ ಅನುಭಾವ ಜೀವನವು ನಾಟ್ಯರಂಗವಾಗಿ ಲೀಲಾಭೂಮಿ ಯೆನಿಸಬೇಕು ಎಂಬುದೇ ವೀರಶೈವನು ಅಂಗದ ಮೇಲೆ ಇರಿಸಿಕೊಂಡ ಆ ಇಷ್ಟಲಿಂಗದ ರಹಸ್ಯವು.

ವೀರಶೈವಕ್ಕೆ ಷಟಸ್ಥಲವೇ ಆತ್ಮ, ಪಂಚಾಚಾರವೆ ಪ್ರಾಣ. ಅಷ್ಟಾವರಣವೇ ದೇಹ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಈ ಪರಿವಿಡಿಯಲ್ಲಿ ಸಾಧಕನ ಭಕ್ತಿ, ಶ್ರದ್ಧೆ, ನಿಷ್ಠೆ, ಅವಧಾನ, ಅನುಭಾವ, ಆನಂದ, ಸಮರಸ ಈ ರೂಪ ತಳೆದು ಶಕ್ತಿಯಲ್ಲಿ ಸಮರಸವಾಗುತ್ತದೆ. ಮೊದಲು ಅಂದರೆ ಭಕ್ತಸ್ಥಲದಿಂದಲೂ ಶ್ರದ್ಧೆಯಿಂದಾಚರಿಸಿದ ಕ್ರಿಯೆ ಲಿಂಗವಾಗುತ್ತದೆ. ಚಿತ್ತ ಸುಚಿತ್ತವಾಗುತ್ತದೆ. ಆ ಸುಚಿತ್ತವೇ ಪದಾರ್ಥವನ್ನು ಪ್ರಸಾದವನ್ನಾಗಿ ಮಾರ್ಪಡಿಸುತ್ತದೆ. ಹೀಗೆ ವೀರಶೈವ ದಲ್ಲಿ Integration ಅಂದರೆ ಪದಾರ್ಥಕಾಯುವನ್ನು ಪ್ರಸಾದಕಾಯುವನ್ನಾಗಿ ಮಾರ್ಪ ಡಿಸುವದು ಮುಖ್ಯವಾದುದು. ಇದು ಮಾನಸಿಕ ಪರಿವರ್ತನೆಗೆ ಪ್ರಾಧಾನ್ಯವಿತ್ತಿದೆ. "Veersaivism is a psychological approach to God" ಪರಮಾತ್ಮನ ಅಂಶವೇ ತಾನಾದ ಅಂಗನು ತನ್ನ ಸ್ವಸ್ವರೂಪ ಜ್ಞಾನದ ಕುರುಹಾದ ಲಿಂಗವನ್ನು ಪಾವನಾತ್ಮಕನಾದ ಗುರುವಿನಿಂದ ಪಡೆದು ಅದನ್ನು ಆರಾಧಿಸುತ್ತಾನೆ. ಆತನ ಭಕ್ತಸ್ಥಲ ಆರಂಭವಾಗುವದು ಈ ಇಷ್ಟಲಿಂಗವನ್ನು ಪಡೆಯಬೇಕೆಂಬ ಅಂಕುರ ಮೊಳೆದೋರಿ ದಂದಿನಿಂದ ಪ್ರಪಂಚದಲ್ಲಿ ಬಿದ್ದು ಮುಳುಗಿ ಜನ್ಮಜನ್ಮಾಂತರಗಳನ್ನು ಪಡೆಯುತ್ತ ಬಂದ ಜೀವಿಗೆ ಇದರಿಂದ ಬಿಡುಗಡೆ ಪಡೆಯಬೇಕೆಂಬ ಬಯಕೆ ಅವುದೋ ಒಂದು ಮಂಗಲ ಮುಹೂರ್ತದಲ್ಲಿ ಉದಯವಾಗುತ್ತದೆ. ಆಗ ಅವನಿಗೆ ಉದಕದೊಳಗೆ ಬಚ್ಚಿಟ್ಟ ಬಯಕೆ ಕಿಚ್ಚಿನಂತೆ, ಸಸಿಯೊಳಗಣ ರಸದ ರುಚಿಯಂತೆ, ಕನ್ಯೆಯ ಸ್ನೇಹದಂತೆ ತನ್ನಲ್ಲಿ ಸುಪ್ತವಾ ಗಿದ್ದ ಪರಮಾತ್ಮನ ಪ್ರಜ್ಞೆಯುಂಟಾಗುತ್ತದೆ. ಷೋಡಶ ವರುಷದ ನವಯೌವನೆ ಯಲ್ಲಿ ಕಾಣುವ ಪ್ರೇಮವು ಹೊರಗಿನಿಂದ ಬಂದುದಲ್ಲ. ಜನ್ಮದಾರಭ್ಯದಿಂದಲೂ ಅದು ಸುಪ್ತವಾಗಿ ಆ ಕನ್ಯೆಯಲ್ಲಿ ಇದ್ದೇ ಇರುತ್ತದೆ. ಕಾಲ ಗತಿಸಿದಂತೆ ಅದು ಅಂಕುರಿಸಿ, ಪಲ್ಲವಿಸಿ, ಹೂತು, ಕಾತು, ಹಣ್ಣಾಗುತ್ತದೆ, ಇಷ್ಟೆ. ತೆನೆಯಾಗಿ ಕಾಳಾದ ಶಕ್ತಿ ಸಸಿ- ರೂಪದಲ್ಲಿದ್ದಾಗ ರಸವಾಗಿ ಅವರಲ್ಲೂ ಅಂತರ್ಗತವಾಗಿರುತ್ತದೆ. ಮಯೂರಾಂಡ ರಸ ದಲ್ಲಿ ಮುಂದೆ ಆ ಮಯೂರದಲ್ಲಿ ತಲೆದೋರುವ ಸಕಲ ವರ್ಣಗಳೂ ಅಂಶೋಪಾಂಗ ಗಳೂ ಹುದಗಿರುತ್ತವೆ. ಹೀಗೆ ಪರಮಾತ್ಮನ ಅನಂತ ಶಕ್ತಿ ಜೀವಾತ್ಮನಲ್ಲಿ ಹುದುಗಿ- ರುತ್ತದೆ. ಅದು ಆವಿಷ್ಕಾರಗೊಂಡು ತನ್ನ ಮೂಲ ರೂಪವನ್ನು ಪಡೆಯುವದೇ ವೀರ ಶೈವರ ಗುರಿ. ಇಲ್ಲಿ Liberation ಇದಕ್ಕಿಂತಲೂ Integration ಇದಕ್ಕೆ ಹೆಚ್ಚು ಮಹ ತ್ವವನ್ನು ಕೊಟ್ಟಿದೆ. ಈ ವಿಕಾಸಸ್ಥಿತಿಯಲ್ಲಿ ಮೊದಲು ಜೀವಾತ್ಮನಿಗೆ ತನ್ನಲ್ಲಿ ಹುದುಗಿದ್ದ ಪರಮಾತ್ಮನ ಶಕ್ತಿಯ ಪ್ರಜ್ಞೆಯುಂಟಾದೊಡನೆಯೇ ತಾನು ಗಟ್ಟಿಯಾಗಿ ಹಿಡಿದು ಕೊಂಡಿದ್ದ, ತನ್ನನ್ನು ಪ್ರಬಲವಾಗಿ ಸುತ್ತಗಟ್ಟಿದ್ದ ಪ್ರಪಂಚದ ಬಗೆಗೆ ಹೇಯಭಾವನೆ ಯುಂಟಾಗುತ್ತದೆ. ವಾಸ್ತವವಾಗಿ ಜೀವಾತ್ಮನ ಮೂಲಸ್ವರೂಪವಾದ ಆತ್ಮತತ

ಆತನನ್ನು ಆವರಿಸಿದ ಪ್ರಪಂಚ ತತ್ವ ಒಂದೆ ಮಹಾಲಿಂಗದಿಂದ ಸ್ಫುರಣಗೊಂಡಿವೆ. ಆತ್ಮ ತನಗೆ ಸಂಬಂಧವಿಲ್ಲದ ಈ ಪ್ರಪಂಚ ತತ್ವಗಳೊಡನೆ ಸಂಬಂಧವನ್ನು ಕಲ್ಪಿಸಿಕೊಂಡು ಜೀವಾತ್ಮನಾಗಿ ಭವದ ರಾಟಳದಲ್ಲಿ ತಿರುಗುತ್ತದೆ. ತನ್ನ ಮೂಲ ಸ್ವರೂಪದ ಅರಿವಾದಾಗ ಸಂಬಂಧವಿಲ್ಲದ ಸಂಬಂಧವನ್ನು ತಪ್ಪಿಸಿಕೊಳ್ಳಬೇಕೆಂಬ ಭಾವ ಉಂಟಾಗಿ ಆ ಸಂಬಂಧದ ಬಗೆಗೆ ಅಂದರೆ ಪ್ರಪಂಚದ ಬಗೆಗೆ ಹೇಯ ಭಾವ ಉಂಟಾಗುತ್ತದೆ. ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ತನ್ನ ಬಾಳುವೆ ಆಗಿದೆ ಎಂಬ ಭಾವ ಬಲಿಯುತ್ತದೆ. ಸಂಸಾರ ಸಾಗರ ಶಿರದುದ್ದ, ಉರದುದ್ದವಾದುದರ ಯಾತನೆ, ವೇದನೆ ಯುಂಟಾಗುತ್ತದೆ. 'ಕಪ್ಪೆ ಸರ್ಪನ ನೆರಳಿನಲ್ಲಿಪ್ಪಂತೆ' ತನ್ನ ಬಾಳ್ವೆಯೆಂಬ ಪ್ರಜ್ಞೆ ಪ್ರಜ್ವಲಿಸುತ್ತದೆ. ಸಂಸಾರದ ಕಾಟಲಿಗೆ, ಕೋಟಲಿಗೆ ನೊಂದು-ಬೆಂದು ಜೀವಾತ್ಮನು ಪರಮಾತ್ಮನನ್ನು ಮೊರೆಹೋಗುತ್ತಾನೆ,

ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ
ಶಿವಶಿವಾ ಎಂದೋದಿಸಯ್ಯಾ
ಭಕ್ತಿಯೆಂಬ ಪಂಜರದೊಳಿಕ್ಕಿ ಸಲಹಯ್ಯಾ

-ಎಂದು ಮೊರೆಹೋಗುತ್ತಾನೆ. ಸಂಸಾರದ ಬಗೆಗೆ ಹೇಯಭಾವವುಂಟಾಗಿ ಅನನ್ಯಭಾವದಿಂದ ಪರಮಾತ್ಮನನ್ನು ಮೊರೆಹೊಕ್ಕ ಭಕ್ತನಿಗೀಗ ಗುರುಕಾರುಣ್ಯವಾಗುತ್ತದೆ. ಪರಮಾತ್ಮನ ಸದ್ರೂಪನಾದ ಗುರುವು ನಂಬಿ ಕರೆದ ಶಿಷ್ಯನಿಗೆ ಓಗೊಟ್ಟು ಆತನಲ್ಲಿಗೆ ಬರುತ್ತಾನೆ. ಪಾವನಾತ್ಮಕವಾದ ಈ ಗುರುವು ತನ್ನ ಶಿಷ್ಯನ ಮಸ್ತಕದ ಮೇಲೆ ಹಸ್ತವನ್ನಿಟ್ಟು ಆತನ ಹೃದಯಕಮಲದಲ್ಲಿ ಹುದುಗಿದ್ದ ಶಕ್ತಿಯನ್ನು ತನ್ನ ಜ್ಞಾನಚಕ್ಷುವಿನಿಂದ ಶಿಷ್ಯನನ್ನು ನಿರೀಕ್ಷಿಸುತ್ತ ಸೆಳೆದು ಎಳೆದು ಭಾವಕ್ಕೆ ತಂದು ಭಾವಲಿಂಗವಾಗಿರಿಸಿ ಪ್ರಾಣಕ್ಕೆ ತಂದು ಪ್ರಾಣಲಿಂಗವಾಗಿರಿಸಿ ಅನಂತರ ಸ್ಥೂಲಕ್ಕೆ ಇಷ್ಟಲಿಂಗವಾಗಿ ಕರುಣಿಸುತ್ತಾನೆ. ವೇಧ, ಮಂತ್ರ, ಕ್ರಿಯಾ ದೀಕ್ಷೆಗಳು ಈಗ ಶಿಷ್ಯನಿಗೆ ಪ್ರಾಪ್ತವಾಗುತ್ತವೆ. ತತ್ಫಲವಾಗಿ ಆತನಿಗೆ ಇಷ್ಟಲಿಂಗ ದೊರೆಯುತ್ತದೆ. ಆ ಇಷ್ಟಲಿಂಗ ಆತನ ಹೃದಯದಲ್ಲೂ ಹುದುಗಿದ್ದ ಜಗದಗಲ ಮುಗಿಲಗಲ ಪಾತಾಳದಿಂದತ್ತಲಾದ ಚರಾಚರ ಸೃಷ್ಟಿಯನ್ನು ವ್ಯಾಪಿಸಿದ ಪರಮಾತ್ಮನ ಶಕ್ತಿಯ ಕುರುಹು. ಅದು ಸ್ವಸ್ವರೂಪ ಜ್ಞಾನ ಅರಿವು. ಈಗ ಭಕ್ತನಿಗೆ ಆರಾಧ್ಯ ವಸ್ತುವಾಗಿ ಆತನ ಕರಸ್ಥಲಕ್ಕೆ ಚುಳುಕಾಗಿ ಬಂದ ಇಷ್ಟಲಿಂಗ ವಾಸ್ತವವಾಗಿ ಬೇರೆ ವಸ್ತುವೇ ಅಲ್ಲ. ಅದು ಆತನ ಸ್ವರೂಪವೇ. ಸಾಧನ ಮಾರ್ಗವನ್ನು ಅನುಸರಿಸಿದ ಭಕ್ತನಿಗೆ ಆರಂಭದಲ್ಲಿ ಆರಾಧ್ಯ ವಸ್ತುವೊಂದು ಬೇಕಾಗುತ್ತದೆ ಎಂಬ ದೃಷ್ಟಿಯಿಂದ ಅದು ಬೇರೆಯಾಗಿ ತೋರುತ್ತ ಭಕ್ತನ ಧ್ಯಾನ ಪೂಜೆಗಳಿಗೆ ಅಧಿಷ್ಠಾನವಾಗುತ್ತದೆ. ಹೆಚ್ಚೇನು ಆತನಿಗೆ ಆರಾಧ್ಯ ವಸ್ತುವೂ ಆಗುತ್ತದೆ. ಆದರೆ ನಿಜ ದೃಷ್ಟಿಯಲ್ಲಿ ಪೂಜ್ಯ-ಪೂಜಕ, ಆರಾಧ್ಯ-ಆರಾಧಕ, ಭಕ್ತ-ದೇವ ಎರಡೂ ಒಂದೇ. ಭಕ್ತಿ ಶಕ್ತಿಯಾಗುವದು, ಭಕ್ತ ದೇವನಾಗುವದು ಎಂದರೆ ಮೂಲ ಸ್ವರೂಪವನ್ನು ಪಡೆಯುವದೆಂದೇ ಅರ್ಥ. ಇಲ್ಲಿ ಭಕ್ತಿ ಎಂಬುದು ಮೋಕ್ಷಕ್ಕೆ ಸಾಧನವಾದ ವಸ್ತುವಲ್ಲ. ಅದು

ಎರಡಿಲ್ಲದ ಕೂಟ, ಲಿಂಗಾಂಗ ಸಾಮರಸ್ಯ, ಅದೇ ಮೋಕ್ಷ, ಅದೇ ಪರತಮ ಪುರುಷಾರ್ಥ ಭಕ್ತಿ ಶಕ್ತಿಯಾಗುವದು, ಪದಾರ್ಥಕಾಯ ಪ್ರಸಾದ ಕಾಯವಾಗುವದು ಇದರ ಗುರಿ. ಇದೇ ಷಟ್‌ಸ್ಥಲ ಮಾರ್ಗ. ಇದರ ಸಾಧನೆಗಾಗಿ ಸ್ಥೂಲ, ಸೂಕ್ಷ್ಮ, ಕಾರಣ ತನುಗಳಲ್ಲಿ ಕ್ರಮವಾಗಿ ಇಷ್ಟ, ಪ್ರಾಣ, ಭಾವಲಿಂಗಗಳು ಪ್ರತಿಷ್ಠಾಪಿತವಾಗಿವೆ. ಸದ್ಗುರುವಿನಿಂದ. ವಿಷಯವನ್ನು ಗ್ರಹಿಸುವ ನಾಸಿಕಾದಿ ಷಡಿಂದ್ರಿಯಗಳಲ್ಲಿ ಆಚಾರಾದಿ ಷಲ್ಲಿಂಗಗಳ ಮೇಲೆ ನೆಲೆಗೊಂಡಿವೆ. ಅಂಗನು ತ್ಯಾಗಾಂಗ, ಭೋಗಾಂಗ, ಯೋಗಾಂಗ ಈ ತ್ರಿವಿಧ ರೂಪವಾಗುತ್ತಾನೆ.

ಸಂಸಾರದ ಬಗೆಗೆ ಹೇಯ ಭಾವನೆ ಹುಟ್ಟಿದ ಸದ್ಭಕ್ತನು ಸಂಸಾರವನ್ನು ತ್ಯಜಿಸುವಂತಿಲ್ಲ. ಏಕೆಂದರೆ ವೀರಶೈವವು ಜಗತ್ತು ಸತ್ಯವೆಂದು ಸಾರುತ್ತದೆ. ಭೋಗ ಭೂಮಿಯ ಭೋಗತನುವಿಗಿಂತಲೂ ಕರ್ಮೋದ್ಯೋಗ ಭೂಮಿಯಾದ ಈ ಸೃಷ್ಟಿ ಮಿಗಿಲೆಂದು ಸಾರುತ್ತದೆ. ಪರದ ಸಾಧನೆಗೆ ಇದು ಅವಶ್ಯವೆಂದು ಹೇಳುತ್ತದೆ. ಆದುದರಿಂದ ಮೋಕ್ಷಪಥವನ್ನು ಹಿಡಿದು ಸದ್ಭಕ್ತನು ಸಂಸಾರವು ಹೇಯವೆಂದು ಅದನ್ನು ಬಿಟ್ಟುಬಿಡದೆ ಗಟ್ಟಿಯಾಗಿ ಹಿಡಿದು ತನ್ಮೂಲಕವಾಗಿಯೇ ಮೋಕ್ಷವನ್ನು ಪ್ರಾಪ್ತಮಾಡಿಕೊಳ್ಳಬೇಕಾಗುತ್ತದೆ. ಪ್ರಪಂಚವೇ ಪರಮಾರ್ಥಸಿದ್ಧಿಗೆ ಸಾಧನವಾಗಬೇಕಾಗುವದು. ಈ ವಿಧದಲ್ಲಿ ಬಿಡುವಂತಿಲ್ಲ, ಹಿಡಿಯುವಂತಿಲ್ಲ. ಅಲ್ಲಿ ಇರುವಂತಿಲ್ಲ. ಇಲ್ಲದಿರುವಂತಿಲ್ಲ. ಇಂತಹದೊಂದು ಪರಮೋಪಾಯವನ್ನು ಕಂಡುಕೊಳ್ಳಬೇಕಾಗಿದೆ. ಆ ಪರಮೋಪಾಯವೆಂದರೆ ಇಂದ್ರಿಯ ಮುಖವಾಗಿ ನಡೆಯುತ್ತಿರುವ ವ್ಯಾಪಾರವನ್ನು ಲಿಂಗಮುಖವಾಗಿ ನಡೆಯುವಂತೆ ಮಾಡುವದು, ವಿಷಯವನ್ನು ಇಂದ್ರಿಯಗಳು ಭೋಗಿಸಿದರೆ ಸೀತ–ಉಷ್ಣ, ಸುಖ–ದುಃಖ ಈ ದ್ವಂದದಲ್ಲಿ ಸಿಲುಕಿ ಜೀವಾತ್ಮನು ದುಃಖಕ್ಕೆ ಈಡಾಗುತ್ತಾನೆ. ಅಂತೆಯೇ—

'ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣ ಸುಖದುಃಖದಾ
ಆಗಮಾಪಾಯಿನೋ ನಿತ್ಯಾಸ್ತಾಸ್ತಿತಿಕ್ಷಸ್ವಭಾರತ'

'ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪ ಜಾಯತೇ,
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ,
ಕ್ರೋಧಾತ್‌ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿ ವಿಭ್ರಮಃ
ಸ್ಮೃತಿ ಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ‖'

ಭಗವದ್ಗೀತೆ ಈ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತದೆ. ಆದುದರಿಂದ ಇಂದ್ರಿಯಗಳ ವ್ಯಾಪಾರವು ಲಿಂಗದ ವ್ಯಾಪಾರವಾಗಬೇಕೆಂದೂ ಷಡಿಂದ್ರಿಗಳಲ್ಲಿ ಷಲ್ಲಿಂಗಗಳನ್ನು ಸ್ಥಾಪಿಸಲಾಗಿದೆ. ಇಂದ್ರಿಯ ಮುಖಾಂತರವಾಗಿ ಬರುವ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಮೊದಲಾದ ಅನುಭವವೆಲ್ಲ ಪ್ರಸಾದವಾಗಬೇಕಾಗಿದೆ. ಅದರಿಂದ ಚಿತ್ತ, ಬುದ್ಧಿ ಅಹಂಕಾರ, ಮನಸ್ಸು, ಜ್ಞಾನ. ಭಾವ ಇವೆಲ್ಲ ಭಕ್ತಿ–ಆಚಾರಗಳ ಬಲದಲ್ಲಿ ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನಸ್ಸು, ಸುಜ್ಞಾನ, ಸದ್ಭಾವವಾಗುತ್ತವೆ. ಚಿತ್ತ, ಬುದ್ಧಿ,

ಅಹಂಕಾರ, ಮನಸ್ಸು, ಈ ದ್ವಾರದಿಂದಲ್ಲವೇ ನಮಗೆ ಸೃಷ್ಟಿಯು ಅನುಭವವಾಗುವದು. ಈಗ ಆಚಾರದ ಬಲದಿಂದ ಅವು ತಮ್ಮ ಪೂರ್ವಾಶ್ರಮವನ್ನು ಅಂದರೆ ಪ್ರಕೃತಿಗುಣವನ್ನು ಕಳೆದುಕೊಂಡು ಪ್ರಸಾದಗುಣವನ್ನು ಪಡೆಯುತ್ತವೆ. ಲಿಂಗದ ವ್ಯಾಪಾರಕ್ಕೆ ಅಂದರೆ ಪ್ರಸಾದ ಸ್ವೀಕರಣಕ್ಕೆ ತಕ್ಕ ಸಾಧನಗಳಾಗುತ್ತವೆ. ಈ ವಿಕಾಸ ಭಕ್ತಿ ಬಲಿತಂತೆ ಮುಂದುವರಿಯುತ್ತದೆ. ಆ ಭಕ್ತಿ ಬಲಿಯುವದು ಸದಾಚಾರದಿಂದ, ಈ ಸದಾಚಾರ ಅಂಕುರಿಸುವದು ಸುಜ್ಞಾನದಿಂದ, 'ಜ್ಞಾನಾದೇವ ತು ಕೈವಲ್ಯಂ' ಎಂದು ವೇದಾಂತ ಸಾರಿದರೆ ಆ ಜ್ಞಾನ ಅನುಭವವಾದುದಲ್ಲದೇ ಕೈವಲ್ಯ ಸಾಧ್ಯವಿಲ್ಲವೆಂದು ವೀರಶೈವ ಸಾರುತ್ತದೆ, ಅಂದರೆ ಜ್ಞಾನ ಕ್ರಿಯೆ ಆಗಬೇಕು, ಕ್ರಿಯೆಯಾಗಿ ಅಳವಡದ ಜ್ಞಾನ, ಜ್ಞಾನದಿಂದ ಸ್ಫುರಿಸದ ಕ್ರಿಯೆ ಎರಡೂ ಬಂಧಕಾರಿಯಾಗುತ್ತವೆ. ಆದ್ದರಿಂದ ಕ್ರಿಯೆ ಮತ್ತು ಜ್ಞಾನ ಇವು ಸಮರಸವಾಗಿ ನಡೆಯಬೇಕು. ಈ ಸಾಮರಸ್ಯದಿಂದಲೇ ಶಕ್ತಿ–ಭಕ್ತಿಗಳ ಸಾಮರಸ್ಯ, ಲಿಂಗಾಂಗ ಸಾಮರಸ್ಯ ಆಗುತ್ತದೆ. ಇದೇ ವೀರಶೈವರ ಷಟ್‌ಸ್ಥಲ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಈ ಸಾಧನೆಗಳಲ್ಲಿ ಪಡೆದ ಅನುಭವವಿದು.

### ವಿಶ್ವಶಾಂತಿ :

ವೀರಶೈವದ ಈ ಆಚರಣೆಯಿಂದ ವಿಶ್ವಶಾಂತಿ ಎಂತು ಸಾಧ್ಯವಾಗಬಲ್ಲುದು ಎಂಬುದನ್ನು ಈಗ ಅವಲೋಕಿಸಬಹುದು, ವ್ಯಕ್ತಿಯಲ್ಲಿ ಹೇಗೋ ಹಾಗೆ ವಿಶ್ವದಲ್ಲಿ ಅಶಾಂತಿ ತಲೆದೋರುವುದಕ್ಕೆ ಆಶೆಯೇ ಮೂಲಕಾರಣ. ಆಶೆಯನ್ನಳಿದ ವ್ಯಕ್ತಿ ಎಲ್ಲೆಲ್ಲಿಯೂ ಆನಂದವನ್ನು ಪಡೆಯುವನು. ಆಶೆಯೇ ದುಃಖದ ಮೂಲ "Desire is the root cause of misery" ಎಂಬ ಮಾತು ನಿತ್ಯ ಸತ್ಯ. ವ್ಯಕ್ತಿ ವ್ಯಕ್ತಿಗಳ ನಡುವೆ ಆಶೆಯೇ ಹೇಗೆ ಕಲಹಕ್ಕೆ ಕಾರಣವಾಗಬಲ್ಲುದೋ ಹಾಗೆ ರಾಷ್ಟ್ರ ರಾಷ್ಟ್ರಗಳು ಅದರ ಮೂಲಕ ಕಲಹಕ್ಕೆ ನಿಲ್ಲಬಲ್ಲವು. ಆಶೆ, ಆಕಾಂಕ್ಷೆ ಮಹತ್ವಾಕಾಂಕ್ಷೆಯಾಗಿ ಸ್ವಾರ್ಥದಲ್ಲಿ ಪರಿಣಮಿಸಿ ದೇಶ ಅನ್ಯಾಯದ ಹಾದಿಯನ್ನು ಹಿಡಿದರೂ ಚಿಂತೆಯಿಲ್ಲ ಅದಕ್ಕೆ ಅಪ್ಯಾಯನವನ್ನು ಹುಡುಕಬಯಸುತ್ತದೆ. ತನ್ನ ಸ್ವಾರ್ಥವನ್ನು ಮಹತ್ವಾಕಾಂಕ್ಷೆಯನ್ನು ಸಾಧಿಸಿಕೊಳ್ಳಲು ಎಂತಹ ಮಾರ್ಗವನ್ನಾದರೂ ಹಿಡಿಯುತ್ತದೆ. ಬಲಾಢ್ಯ ರಾಷ್ಟ್ರಗಳು ದುರ್ಬಲವಾದ ದೇಶಗಳನ್ನು ನುಂಗಲು ಯತ್ನಿಸುತ್ತಿರುವದು ಈ ಕಾರಣಕ್ಕಾಗಿಯೇ. ಇಂತಹ ಸ್ವಾರ್ಥ ಭಾವನೆಯಿಂದ ಮಹತ್ವಾಕಾಂಕ್ಷೆಗಳ ಸ್ವೈರ ವೃತ್ತಿಯಿಂದ ಜಗತ್ತಿನ ಇತಿಹಾಸದಲ್ಲಿ ಯುದ್ಧದ ಜ್ವಾಲೆಗಳು ಭುಗಿಲ್ಲೆಂದು ಎದ್ದು ಜಗತ್ತಿನ ಸಂಸ್ಕೃತಿಯನ್ನು ಸಂಹಾರಮಾಡುತ್ತ ಬಂದಿವೆ. ಹಿಂದೆ ನಡೆದ ಅನೇಕ ಯುದ್ಧಗಳು ಈ ಶತಮಾನದಲ್ಲಿಯೇ ಆಗಿ ಹೋದ ಎರಡು ಮಹಾ ಯುದ್ಧಗಳು ಇದಕ್ಕೆ ನಿದರ್ಶನ. ವೀರಶೈವವು ಇಂಥ ಸ್ವಾರ್ಥ ಭಾವವನ್ನು ಮಹತ್ವಾಕಾಂಕ್ಷೆಯನ್ನು ಬೇರು ಸಹಿತವಾಗಿ ಕಿತ್ತೊಗೆಯಲು ಒಂದು ಹಾದಿಯನ್ನು ಕಂಡುಕೊಂಡಿದೆ. ಈ

ಧರ್ಮದನ್ವಯ ಸಾಧಕನು ಬೇಕು–ಬೇಡವೆಂಬ ಭಾವಗಳೆರಡನ್ನೂ ಹುರಿದುಬಿಡ ಬೇಕಾಗುತ್ತದೆ. ಬೇಕು ಬೇಡೆಂಬೆರಡು ಭವಬೀಜಗಳ ಹುರಿದು ಲೋಕದೊಳಗೆ ಇದ್ದು ಇಲ್ಲದಂತೆ ಇರಬೇಕಾಗುತ್ತದೆ. ತನಗೆ ಬೇಕೆಂಬ ಭಾವನೆಯಿಂದ ಮಾಡಿದರೆ ಸ್ವಾರ್ಥವಾಗುತ್ತದೆ. ಅಂತಹ ಸ್ವಾರ್ಥ ಆಸುರೀಪ್ರವೃತ್ತಿಯಾಗಿ ಪರಿಣಮಿಸಿ ಜಗತ್ತಿನಲ್ಲಿ ಕೋಲಾಹಲವನ್ನೆಬ್ಬಿಸುತ್ತದೆ. ಬೇಡೆಂಬ ಭಾವ ನಿಷ್ಕ್ರಿಯೆಯನ್ನು ಉಂಟುಮಾಡುತ್ತದೆ. ಜಗತ್ತು ಮುಂಮುವರಿಯಲು ಎಲ್ಲ ರೀತಿಯಿಂದಲೂ ಅಭಿವೃದ್ಧಿಯನ್ನು ಪಡೆಯಲು ಅದು ಕ್ರಿಯಾಮುಖಿವಾಗುವದು ಅತ್ಯವಶ್ಯ. ಒಂದೆಡೆ ಸ್ವಾರ್ಥ ತೊಲಗಬೇಕು ಇನ್ನೊಂದೆಡೆ ನಿಷ್ಕ್ರಿಯೆ ನಿಲ್ಲಬೇಕು. ಅಂದರೆ ವ್ಯಕ್ತಿ–ವ್ಯಕ್ತಿಯ ವ್ಯಾಪಾರ, ದೇಶ–ವಿದೇಶಗಳ ವ್ಯವಹಾರ ತಮ್ಮ ತಮ್ಮ ಸ್ವಾರ್ಥಸಾಧನೆಯತ್ತ ನಡೆಯದೆ, ಇನ್ನೊಂದು ಮಹಾಶಕ್ತಿಯ ಆರಾಧನೆಯೆಂದು ಸಾಧನೆಯೆಂದು ನಡೆಯಬೇಕು. ಬೇಕು ಬೇಡೆಂಬೆರಡನ್ನೂ ಬಿಟ್ಟು ವ್ಯಕ್ತಿ, ಲೋಕವ್ಯವಹಾರವನ್ನು ಲಿಂಗಕ್ಕಾಗಿ, ಲೋಕ ಸಂಗ್ರಹಕ್ಕಾಗಿ, ಮಾಡುತ್ತಾನೆ. ಪ್ರತಿಯೊಬ್ಬ ವ್ಯಕ್ತಿಯೂ ಪ್ರತಿಯೊಂದು ದೇಶವೂ, ಹೀಗೆ ಲಿಂಗಕ್ಕಾಗಿ ಮಾಡುವೆನೆಂಬ ಭಾವವನ್ನು ಮುಂದಿಟ್ಟುಕೊಂಡರೆ ಅದು ಲೋಕ ಸಂಗ್ರಹ ಕಾರ್ಯವಾಗುತ್ತದೆ. ಹೀಗೆ ಜಗತ್ತಿನ ರಾಷ್ಟ್ರಗಳೆಲ್ಲವೂ ಸ್ವಾರ್ಥಸಾಧನೆಯನ್ನೂ ಅಹಮಹಮ್ಮಿಕೆಯ ಮಹಾತ್ವಾಕಾಂಕ್ಷೆಯನ್ನೂ ತೊರೆದು ಲೋಕ ಸಂಗ್ರಹಕ್ಕಾಗಿ, ವಿಶ್ವಸಂಗ್ರಹಕ್ಕಾಗಿ ದುಡಿದರೆ ಶಾಂತಿ ತಂತಾನೇ ನೆಲಸಬಲ್ಲದು.

**ಕಾಯಕ ತತ್ವ :**

ನಿಷ್ಕ್ರಿಯೆ ನಿಲ್ಲಬೇಕೆಂದು ವೀರಶೈವ ಸಾರುತ್ತದೆ ಎಂಬುದನ್ನು ಮೇಲೆ ವಿವರಿಸಲಾಗಿದೆ, ವೀರಶೈವ ಕಾಯಕವೆಂಬ ಮಹಾಮಂತ್ರವನ್ನು ಕಂಡುಕೊಂಡಿತು. ವಿಶ್ವ ಶಾಂತಿಗೆ ವೀರಶೈವದ ಶ್ರೇಷ್ಠವಾದ ಕೊಡುಗೆ ಅಂದರೆ ಈ ಕಾಯಕ ತತ್ವವೆಂದು ಹೇಳ ಬಹುದು. ವೀರಶೈವ ಧರ್ಮದ ಪ್ರಕಾರ ಪ್ರತಿಯೊಬ್ಬ ವ್ಯಕ್ತಿಯೂ ಕಾಯಕವನ್ನು ಮಾಡಲೇಬೇಕು. ಅಂದರೆ ದುಡಿಯಲೇಬೇಕು, ಕಾಯವಿರುವವರೆಗೂ ಕಾಯಕ ನಡೆಯಲೇಬೇಕು. ಹಾರುವ ಮೊದಲು ಅಂತ್ಯಜ ಕಡೆಯಾಗಿ ಪ್ರತಿಯೊಬ್ಬನು ದುಡಿದು ತನ್ನ ದುಡಿಮೆಯ ಫಲವನ್ನೇ ಉಪಭೋಗಿಸಬೇಕು.

ಅಂದರೆ ವೀರಶೈವರಲ್ಲಿ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಶೋಷಣೆಯಿಂದ ಪೋಷಣೆ ಪಡೆಯಲಾರನು. ಪಡೆಯಬಾರದು. ಆಲಸ್ಯತನಕ್ಕೆ, ಸೋಮಾರಿತನಕ್ಕೆ ನಿಷ್ಕ್ರಿಯೆ–ನಿಷ್ಕರ್ಮಗಳಿಗೆ, ಭಿಕ್ಷೆ ಮುಂತಾದ ವೃತ್ತಿಗಳಿಗೆ ವೀರಶೈವರಲ್ಲಿ ಎಡೆಯೇ ಇಲ್ಲ, ಬೇಡಿ ಉಣ್ಣುವದು "ಪಾಪ," ಮಾಡಿ ಉಣ್ಣುವದು ಪುಣ್ಯ. ಕಾಯಕದಿಂದಲೇ ಪ್ರತಿಯೊಬ್ಬ ವ್ಯಕ್ತಿ ತನ್ನ ಉದರ ಪೋಷಣೆಯನ್ನು ಮಾಡಿಕೊಳ್ಳಬೇಕಾದುದರಿಂದ ಸಮಾಜ ಪ್ರತಿಯೊಬ್ಬ ವ್ಯಕ್ತಿಗೆ ಬೇಕಾಗುವಷ್ಟು ಕಾಯಕವನ್ನು ಕಲ್ಪಿಸಲೇ ಬೇಕಾಗುತ್ತದೆ. ವ್ಯಕ್ತಿ ಸಮಾಜಕ್ಕೆ ದುಡಿಯುತ್ತಾನೆ. ಸಮಾಜ ವ್ಯಕ್ತಿಯ ಯೋಗಕ್ಷೇಮ ವಹಿ

ಸುತ್ತದೆ. ಸಮಾಜಕ್ಕೆ ದುಡಿಯುವದು ವ್ಯಕ್ತಿಯ ಹೊಣೆ; ವ್ಯಕ್ತಿ ದುಡಿಯುವದಕ್ಕೆ ಅವಶ್ಯವಿರುವ ಕಾಯಕವನ್ನು ಕಲ್ಪಿಸಿ ಕೊಡುವದು ಸಮಾಜದ ಹೊಣೆ. ಈ ಭಾವನೆಯಿಂದ ಸಮಾಜ ನಿರುದ್ಯೋಗ, ನಿರುತ್ಸಾಹಗಳಿಗೆ ಬಲಿಯಾಗದೆ ಮುನ್ನಡೆಯಬಲ್ಲದು. ಕಾಯಕವನ್ನು ಮಾಡಲೇಬೇಕೆಂದು ವಿಧಿಸಿದ ವೀರಶೈವ ಅದರ ಬಗೆಗೆ ಉಚ್ಚಭಾವನೆಯನ್ನು ಕಲ್ಪಿಸಿಕೊಟ್ಟಿತು. ಆವಾವ ಕಾಯಕವ ಮಾಡಿದಡೆಯೂ ಅದು ಪರಮಾತ್ಮ-ನಿಗೆ ಸಲ್ಲುತ್ತದೆ. ಕಾಯಕದಲ್ಲಿ ಮೇಲು-ಕೀಳು ಎಂಬುದಿಲ್ಲ, ಉಚ್ಚ-ನೀಚವೆಂಬ ಭಾವವಿಲ್ಲ. ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ ಹಾಸನಿಕ್ಕಿ ಸಾಲಿಗನಾದ ಎಲ್ಲವೂ ಪರಮಾತ್ಮನ ಕ್ರಿಯೆ. ಎವೆ ಇಕ್ಕುವದೂ, ಲಿಂಗದ ವ್ಯಾಪಾರವೆಂದಮೇಲೆ ಆ ಲಿಂಗದ ವ್ಯಾಪಾರದಲ್ಲಿ ತರ-ತಮ ಭಾವವುಂಟೆ ? ಅಂಗದ ಕ್ರಿಯೆಗಳೆಲ್ಲ ಲಿಂಗದ ಕ್ರಿಯೆಗಳು. ಅಂಗಕ್ರಿಯೆಯಾಗಿ ನಡೆಯುವ ಕಾಯಕ ಲಿಂಗಕ್ರಿಯೆ, ಅಂದ ಮೇಲೆ ಕಾಯಕವು ಪರ-ಮಾತ್ಮನ ಸ್ವರೂಪ. "ಕಾಯಕವೇ ಕೈಲಾಸ". 'Work is Worship' ಎಂಬುದು ವೀರಶೈವದ ಮಹಾಪತಾಕೆ. ಪ್ರತಿಯೊಂದು ದೇಶ ತನ್ನ ಕಾಯಕದಲ್ಲಿ ನಿರತವಾದರೆ ಅನ್ಯರ ಗೋಜಿಗೆ ಹೋಗುವ ಸಂಗೇಕೆ ಬರಬಲ್ಲದು ? ಈ ಕಾಯಕ ತತ್ವದಲ್ಲಿ ಇನ್ನೂ ವಿಶಾಲವಾದ ಅರ್ಥ ಹುದುಗಿದೆ. ಪ್ರತಿಯೊಬ್ಬ ವ್ಯಕ್ತಿ ದುಡಿಯಲೇಬೇಕು ಅಂದರೆ ಕಾಯಕ ಮಾಡಲೇಬೇಕು, ಕಾಯಕ ಮಾಡುವಾಗ ಮಾಡಿದನೆಂಬ ಭಾವ ಮನದಲ್ಲಿ ಹೊಳೆಯದಂತೆ ಲಿಂಗಕ್ಕಾಗಿ ಮಾಡಿದೆನೆಂಬ ಭಾವನೆಯಿಂದ ಕಾಯಕವನ್ನು ಮಾಡಬೇಕು. ಹೀಗೆ ಕಾಯಕ ಮಾಡಿ ಬಂದ ಪ್ರತಿಫಲದಲ್ಲಿ ಒಂದಿನಿತನ್ನಾದರೂ. ನಾಳಿಂಗೆಂದು ಸಂಗ್ರಹಿಸಕೂಡದು. ಇಂದಿನದು ನಾಳಿಂಗೆ ಎಂಜಲು ಕಹಿ, ವಿಷ.

"ಹೊನ್ನಿನೊಳಗೊಂದೆರೆಯ ಸೀರೆಯೊಳಗೊಂದೆಳೆಯ ಇಂದಿಂಗೆಂದು ನಾಳಿಂಗೆಂದು ಚಿಂತಿಸಿದೆನಾದೊಡೆ ಎನಗದೇ ದಂಡ," ಎಂದು ಮಹಾತ್ಮಾ ಬಸವಣ್ಣನವರು ಸಾರಿರುವರು. ಸಂಗ್ರಹಣಿ (Dysentry) ರೋಗವಿದ್ದಂತೆ. ಜಗತ್ತಿನ ಅಶಾಂತಿಗೆ ಈ ಸಂಗ್ರಹ ಪ್ರವೃತ್ತಿಯೇ ಮೂಲ ಕಾರಣ. ಅದನ್ನು ತೊಡೆದು ಹಾಕಿದರೆ ಶಾಂತಿ ವ್ಯಕ್ತಿಯ ಮನದಲ್ಲಿ ದೇಶದ ನೆಲೆಯಲ್ಲಿ, ಜಾಗತಿಕ ರಂಗದಲ್ಲಿ ಸ್ಥಿರವಾಗಿ ನೆಲೆಸಬಲ್ಲುದು.

ವೀರಶೈವ ಶರಣರ ಚರಿತ್ರೆಗಳಲ್ಲಿ ಕಾಯಕದ ಮಹಾತತ್ವವನ್ನು ಪ್ರಕಟಿಸುವ ಅನೇಕ ಕಥೆ, ಘಟನೆಗಳು ಕಂಡು ಬರುತ್ತವೆ.

ಮಾರಯ್ಯನೆಂಬ ಒಬ್ಬ ಶರಣ ಕಾಶ್ಮೀರದ ದೊರೆ, ಆತನು ತನ್ನ ರಾಜ್ಯವನ್ನು ಬಿಟ್ಟು ೧೨ನೆಯ ಶತಮಾನದಲ್ಲಿ ಕಲ್ಯಾಣದ ಬಸವಣ್ಣನ ಮಹಾ ಮನೆಗೆ ಬಂದನು. ಅಲ್ಲಿ ಕಟ್ಟಿಗೆಯ ಹೊರೆಯನ್ನು ಹೊರುವ ಮೋಳಿಗೆಯ ಕಾಯಕವನ್ನು ಕೈಕೊಂಡನು. ಅದರಿಂದ ಬಂದ ಪ್ರಸಾದವನ್ನು ಸೇವಿಸುತ್ತಿದ್ದನು ಒಂದು ದಿನ ಬಸವಣ್ಣನು ಪ್ರಚ್ಛನ್ನ ವೇಷದಿಂದ ಮಾರಯ್ಯನವರಿಲ್ಲದಾಗ ಅವರ ಮನೆಗೆ ಬಂದು ಪ್ರಸಾದ ಸ್ವೀಕರಿಸಿ, ಹೊನ್ನ ತುಂಡನ್ನಿಟ್ಟು ಹೋಗಿದ್ದನು. ಅದನ್ನು ಕಂಡು ಮಾರಯ್ಯ ಕಿಡಿಕಿಡಿಯಾಗಿ ಶರಣರು ಮುಟ್ಟಿದುದನ್ನೆಲ್ಲ ಹೊನ್ನು ಮಾಡಬಲ್ಲರು; ಸತ್ಯಶುದ್ಧ ಕಾಯಕದಿಂದ ಬಾರದ ಈ

ಹೊನ್ನನ್ನು ಎಂದಿಗೂ ಸ್ವೀಕರಿಸಲಾರರು ಎಂದು ಹೇಳಿ, ಅದನ್ನು ತೆಗೆದು ಬಿಸುಟಿ ಬಿಡುವನು.

ಇನ್ನೊಬ್ಬ ಶರಣ ? ಆತನ ಹೆಸರೂ ಮಾರಯ್ಯನೆಂಬುದೆ. ಆತ ಬೀದಿಯಲ್ಲಿ ಬಿದ್ದ ಅಕ್ಕಿಯ ಕಾಳನ್ನು ಆಯುವ ಕಾಯಕವನ್ನು ಹಿಡಿದುದ್ದರಿಂದ ಆತನಿಗೆ ಆಯ್ದಕ್ಕಿ ಮಾರಯ್ಯನೆಂಬ ಹೆಸರಾಯಿತು. ನಿತ್ಯವೂ ಮಾರಯ್ಯ ತನಗೆ ಬೇಕಾದಷ್ಟು ಅಕ್ಕಿಯನ್ನು ಮಾತ್ರ ಆಯ್ದು ತರುತ್ತಿದ್ದ. ಒಂದು ದಿನ ಮಾರಯ್ಯನವರು ತಮ್ಮ ಜೋಳಿಗೆಯಲ್ಲಿ ಹೆಚ್ಚು ಅಕ್ಕಿಯನ್ನು ಆಯ್ದು ತರಲು, ಇದು ಅಮರೇಶ್ವರ ಲಿಂಗಕ್ಕೆ ಸಲ್ಲದು ಎಂದು ಹೇಳಿ ಆತನ ಪತ್ನಿ ಲಕ್ಕ ಮಿಕ್ಕುದನ್ನು ಮರಳಿ ಕಳಿಸುವಳು.

ಈ ಘಟನೆಗಳು ಸತ್ಯ ಶುದ್ಧ ಕಾಯಕದ ಬಗೆಗೆ ವೀರಶೈವರು ಇಟ್ಟುಕೊಂಡ ಕಲ್ಪನೆಯನ್ನು ಸ್ಪಷ್ಟಪಡಿಸುತ್ತವೆ. ರಾಜನಿರಲಿ–ಮಹಾರಾಜನಿರಲಿ, ಪ್ರತಿಯೊಬ್ಬ ವ್ಯಕ್ತಿ ಕಾಯಕ ಮಾಡಲೇಬೇಕು. ಕಾಯಕದಿಂದ ಬಂದ ಪ್ರತಿಫಲವನ್ನು ಸಂಗ್ರಹಿಸಲಾಗದು, ಕಾಯಕದಲ್ಲಿ ನಿರತನಾದಡೆ ಗುರುವನಾದೊಡೆಯೂ ಮರೆಯಬೇಕು. ಲಿಂಗವನಾದೊಡೆಯೂ ಮರೆಯಬೇಕು. ಏಕೆಂದರೆ ಕಾಯಕವೇ ಕೈಲಾಸ ! ಕಾಯಕದಿಂದ ಕೈಲಾಸವಲ್ಲ. ಹಾಗೆಂದರೆ ಕಾಯಕ ಒಂದು ಸಾಧನ ಮಾತ್ರವಾಗುತ್ತದೆ. ಸತ್ಯಶುದ್ಧ ಕಾಯಕದಲ್ಲಿ ದೊರೆಯುವ ಆನಂದವೇ ಪರಮಾನಂದ! ಅದೇ ಕೈಲಾಸ. ಈ ಕಾಯಕತತ್ವದಿಂದ ಜಗತ್ತಿನಲ್ಲಿ ಶಾಂತಿ ಸ್ಥಿರವಾಗಿ ನೆಲೆಸುವದರಲ್ಲಿ ಸಂದೇಹವಿಲ್ಲ.

ಕಾಯಕ ಮಾಡುವಾಗ ಅಥವಾ ಕಾಯಕದ ಪ್ರಸಾದವನ್ನು ಸ್ವೀಕರಿಸುವಾಗ ಪ್ರತಿಯೊಬ್ಬ ವ್ಯಕ್ತಿಯೂ ಸರ್ವಾರ್ಪಣ ಭಾವನೆಯಿಂದ ಮಾಡಬೇಕಾಗುತ್ತದೆ. ವೀರಶೈವದಲ್ಲಿ ಗುರು, ಲಿಂಗ, ಜಂಗಮಕ್ಕೆ ತನುಮನ, ಧನಗಳನ್ನು ಅರ್ಪಿಸಬೇಕೆಂದು ಹೇಳಲಾಗುತ್ತದೆ. ಗುರು ತತ್ವ ಪರಮಾತ್ಮನ ಸದ್ರೂಪ, ಲಿಂಗತತ್ವ ಆತನ ಚಿದ್ರೂಪ, ಜಂಗಮ ತತ್ವ ಆನಂದ ರೂಪ, ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನೇ ಜಗಹಿತಾರ್ಥವಾಗಿ ಗುರುಲಿಂಗಜಂಗಮನಾಗಿ ಮೈದೋರಿರುವನು. ಭಕ್ತನು ತನ್ನ ಕಾಯದಲ್ಲಿ ಗುರು ಲಿಂಗ ಜಂಗಮ ತತ್ವಗಳನ್ನು ಅಳವಡಿಸಿಕೊಳ್ಳಬೇಕಾಗಿದೆ. ಅಂದರೆ ಅಣವ, ಕಾರ್ಮಿಕ, ಮಾಯಾ ಮಲಗಳ ಮೂಲಕ ಆತ್ಮಕ್ಕೆ ಪ್ರಾಪ್ತವಾಗಿದ್ದ ಕಿಂಚಿದ್ ವ್ಯಾಪಕತ್ವ ಕಿಂಚಿದ್ ಕರ್ತೃತ್ವ ಕಿಂಚಿಜ್ಞತ್ವ ಇವುಗಳೊಳಗಿನ ಕಿಂಚಿತ್ತನ್ನು ಕಳೆದುಕೊಂಡು ಸರ್ವವ್ಯಾಪಕತ್ವ ಸರ್ವಕರ್ತೃತ್ವ, ಸರ್ವಜ್ಞತ್ವವನ್ನು ಪಡೆಯಬೇಕಾಗಿದೆ. ಇದನ್ನು ಪಡೆಯುವದೆಂದರೆ ಆತನು ತನ್ನ ಕಾಯದಲ್ಲಿ ಗುರು ಲಿಂಗ ಜಂಗಮವನ್ನು ಅಳವಡಿಸಿಕೊಳ್ಳಬೇಕಾಗುವದು. ಅದಕ್ಕಾಗಿ ಗುರು ಲಿಂಗ ಜಂಗಮಕ್ಕೆ ತನು ಮನ ಧನಗಳನ್ನು ಅರ್ಪಿಸಿ ಆತನು ತ್ರಿವಿಧ ದಾಸೋಹಿ ಆಗಬೇಕು. ಗುರು ಜಂಗಮವಾದರೂ ಅದನ್ನು ಸಮಾಜಕ್ಕೆ ವಿತರಣೆ ಮಾಡಿ, ಲೋಕ ಸಂಗ್ರಹಕ್ಕೆ ಹೆಣಗಬೇಕು. ಈ ಸಾಮಾಜಿಕ ಸಂಯೋಜನೆಯಲ್ಲಿ ಪರಸ್ಪರ ಅಭಿವೃದ್ಧಿ ಸ್ಪಷ್ಟವಾಗಿ ಕಂಡು ಬರುತ್ತದೆ, ಆತ್ಮ ಕಲ್ಯಾಣ ಲೋಕ ಕಲ್ಯಾಣಗಳೆರಡೂ ಇದರಿಂದ ಸಾಧಿಸುತ್ತವೆ. ಇಂತಹ ಕಲ್ಯಾಣದಿಂದ ವಿಶ್ವಶಾಂತಿ ನೆಲೆಗೊಳ್ಳದೆ?

**ದಾಸೋಹಂ-ಭಾವ :**

ವೀರಶೈವ ಸದ್ಭಕ್ತನು ತ್ರಿವಿಧ ದಾಸೋಹಿಯಾಗಬೇಕೆಂದು ಹೇಳಲಾಗಿದೆ. ಆತನು ಸೋಹಂ ಎನ್ನುವದಿಲ್ಲ. ದಾಸೋಹಂ ಭಾವ ತಳೆಯುವನು. ಅಂದರೆ ವಿನಯವೇ ಆತನ ವ್ಯಕ್ತಿತ್ವದ ಮೂಲವಾಗುವದು, ವೀರಶೈವ ಧರ್ಮದನ್ವಯ ಸದುವಿನಯವೇ ಸಮಾಜದ ತಳಹದಿಯಾಗಿದೆ.

" ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ...... ಇದಕ್ಕೆ ನೀವೇ ಪ್ರಮಾಣ ಕೂಡಲ ಸಂಗಮದೇವಾ. "

" ಕೀಳಾಗಲೊಲ್ಲದೆ ಮೇಲಾಗಲೊಲ್ಲೆನು, ಕೀಳಿಂಗಲ್ಲದೆ ಪಯನು ಕರೆವ್ವದೆ... "

" ನಿಮ್ಮ ಶರಣರ ಚಮ್ಮಾವುಗೆಯ ಹೊರಿಸಯ್ಯಾ... " ಹೀಗೆ ಬರುವ ಶರಣ ವಾಣಿಯನ್ನು ನೋಡಿದರೆ ಕೈಂಕರ್ಯವು ವೀರಶೈವದ ಉಸಿರಾಗಿದೆ ಎಂಬುದು ಸ್ಪಷ್ಟ ವಾಗುತ್ತದೆ. ಸದ್ಭಾವನೆಯಿಂದ ವ್ಯಕ್ತಿ ಎಷ್ಟೆಷ್ಟು ಕೈಂಕರ್ಯವನ್ನು ತಳೆಯುವನೋ ಅಷ್ಟಷ್ಟು ಅವನ ವ್ಯಕ್ತಿತ್ವ ಮೇಲಕ್ಕೆ ಏರುತ್ತದೆ.

ಬಸವಣ್ಣನವರು " ಎನಗಿಂತ ಕಿರಿಯರಿಲ್ಲ " ಎಂಬ ಭಾವ ತಳೆದು ಅದರಂತೆ ನಡೆದರು. ಶರಣರು ಆತನನ್ನು ಸಮಯಾಚಾರಿಯೆಂದು ಕಂಡರು. ಪ್ರಮಥಾಚಾರಿ ಯೆಂದು ಭಾವಿಸಿದರು. ಆದುದರಿಂದ ಈ ಕೈಂಕರ್ಯದಿಂದ ವ್ಯಕ್ತಿ ಹಾಗು ದೇಶಗಳ ಉನ್ನತಿಯಾಗುವದಲ್ಲದೆ ಅವನತಿಯಾಗಲಾರದು. ಮಹತ್ವಾಕಾಂಕ್ಷೆಯ ಅಹಮಹಮಿಕೆ ಯಿಂದ ಮಿಕ್ಕವರ ತಲೆಯನ್ನು ಮೆಟ್ಟಲೆಳಿಸುವ ರಾಜ್ಯ ಒಂದು ದಿನ ಮಣ್ಣು ಪಾಲಾಗ ಬಲ್ಲದು. ಎನಗಿಂತ ಕಿರಿಯರಿಲ್ಲ ಎಂಬ ಸದ್ಭಾವನೆಯನ್ನು ತಳೆದು– ' Live and let live ' ಎಂಬ ತತ್ವವನ್ನು ಅನುಸರಿಸಿದರೆ ಅಂತಹ ವ್ಯಕ್ತಿ ಇಲ್ಲವೇ ದೇಶ ಸಮಸ್ತ ನಾಡಿನ ನಾಯಕರತ್ನವಾಗಬಲ್ಲದು. ಇಂತಹ ಭಾವನೆಯಿಂದ ಶಾಂತಿ, ಸುವ್ಯವಸ್ಥೆ ಜಗತ್ತಿನಲ್ಲಿ ನೆಲೆಗೊಳ್ಳಬಲ್ಲವು.

**ಸಮತೆ :**

ಸಮತೆ ವೀರಶೈವರ ಮುಖ್ಯಸೂತ್ರ. ಭಾರತೀಯ ಸಂಸ್ಕೃತಿಯ ಬೇರನ್ನು ಸಡಿಲಿಸಿದ ಜಾತಿಯ ವಿರುದ್ಧ ವೀರಶೈವ ಕೋಲಾಹಲವೆಬ್ಬಿಸಿತು. ಅದರ ಮೂಲೋ ತ್ಪಾಟನ ಮಾಡಲು ಸಿದ್ಧವಾಯಿತು. ಅಂತೆಯೇ ಉತ್ತಮ ವರ್ಣೀಯರಿಂದ ಅಂತ್ಯಜರ ವರೆಗೆ ವೀರಶೈವ ಎಲ್ಲರನ್ನು ಒಂದೇ ಎಂದು ಕಂಡಿತು. ಚಾತುರ್ವರ್ಣ್ಯಗಳ ವಿಂಗಡನೆ ವೀರಶೈವಕ್ಕೆ ಒಪ್ಪಿಗೆಯಾಗಲಿಲ್ಲ. ಆದುದರಿಂದ ಯಾವ ವರ್ಣದವರಿರಲಿ, ಯಾವ ಯಾವ ಕಾಯಕದವರಿರಲಿ, ಅಂಗದ ಮೇಲೆ ಲಿಂಗವಿದ್ದವರೆಲ್ಲರೂ ಸಂಗಮನಾಥನಿಗೆ ಸರಿ ಸಮಾನರೆಂಬ ಭಾವ ವೀರಶೈವದಲ್ಲಿ ಒಡಮೂಡಿತು. "ದೇವಸಹಿತ ಭಕ್ತ ಮನೆಗೆ ಬಂದರೆ ನಿಮ್ಮ ಕಾಯಕವಾವುದೆಂದು ಬೆಸಗೊಂಡೆನಾದೊಡೆ ನಿಮ್ಮ ರಾಣಿವಾಸದಾಣೆ " ಎಂದು ಬಸವಣ್ಣನು ಹೇಳಿದುದು ಈ ಅರ್ಥದಲ್ಲಿಯೇ. ಉಚ್ಚ ವರ್ಣೀಯರಿಂದ

ಹಿಡಿದು ನೀಚ ವರ್ಣೀಯರವರೆಗೆ ಶಿವಭಕ್ತರೆಲ್ಲರೂ ಒಂದಾದರು, ಶಿವಭಾವದಿಂದ ಕೂಡಿದವರೆಲ್ಲರೂ ಒಂದೇ ಅಲ್ಲವೇ ? ಆವ ಜಾತಿಯೇನು, ಶ್ರೀಗುರುವಿನ ಹಸ್ತ ಮುಟ್ಟಿದ ಮೇಲೆ ಎಲ್ಲರೂ ಶಿವಸಂಭೂತರಲ್ಲವೇ ? ಹೀಗೆ ಕುಲಮದ, ಜಾತಿಮದ, ವರ್ಣಭೇದ ಇವುಗಳನ್ನು ವೀರಶೈವ ಕಿತ್ತು ಹಾಕಿತು. ವರ್ಣ ಭೇದ, ಕುಲ ಭೇದ, ಜಾತಿ ಭೇದಗಳಿಂದ ಜಗತ್ತಿನಲ್ಲಿ ಎಂತಹ ಘನ ಘೋರ ಸಂಗ್ರಾಮಗಳಾಗಿವೆ ಎಂಬುದನ್ನು ಇತಿಹಾಸ ಹೇಳುತ್ತದೆ, ಪಶ್ಚಿಮ ದೇಶದ ನಿಗ್ರೋ ಕಲಹ, ಭಾರತದ ಜಾತೀಯ ಕಲಹ ಇಂತಹ ಉದಾಹರಣೆ ಬೇಕಾದಷ್ಟಿವೆ. ಆದುದರಿಂದ ಎಲ್ಲಿಯ ವರೆಗೆ ಸಮತಾಭಾವ ಜಗತ್ತಿನಲ್ಲಿ ನೆಲೆಗೊಳ್ಳುವದಿಲ್ಲವೋ ಅಲ್ಲಿಯ ವರೆಗೆ ಅಶಾಂತಿ ತಪ್ಪಿದುದಲ್ಲ, ವೀರಶೈವ ಇಂತಹ ಸಮತೆಯನ್ನು ವ್ಯಕ್ತಿ – ವ್ಯಕ್ತಿಗಳ ನಡುವೆ ಸ್ಥಾಪಿಸಿತು.

ಇಷ್ಟೇ ಅಲ್ಲ, ಸಹಸ್ರಾರು ವರ್ಷಗಳಿಂದ ಜಗತ್ತಿನ ಜನತೆಯಲ್ಲಿ ಬೇರೂರಿದ್ದ ಹೆಚ್ಚು ಕೀಳೆಂಬ ಭಾವನೆಯನ್ನು ವೀರಶೈವ ತೊಡೆದುಹಾಕಿತು.

"ಹೊನ್ನು ಮಾಯೆ ಎಂಬರು, ಹೆಣ್ಣು ಮಾಯೆ ಎಂಬರು, ಮಣ್ಣು ಮಾಯೆ ಎಂಬರು, ಹೊನ್ನು ಮಾಯೆಯಲ್ಲ. ಹೆಣ್ಣು ಮಾಯೆಯಲ್ಲ, ಮಣ್ಣು ಮಾಯೆಯಲ್ಲ. ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ." ಎಂದು ವೃಷ್ಟಿಯ ಶುದ್ಧಿಯೇ ನಿಜಶಾಂತಿಗೆ ಮೂಲ ಸಾಧನವೆಂದು ಹೇಳಿದ್ದಾರೆ. "ಹೆಣ್ಣು ಹೆಣ್ಣಲ್ಲ, ಹೆಣ್ಣು ಮಾಯೆಯಲ್ಲ ಹೆಣ್ಣು ಪ್ರತ್ಯಕ್ಷ ಕಪಿಲಸಿದ್ದ ಮಲ್ಲಿಕಾರ್ಜುನ ನೋಡಾ." ಎಂಬಲ್ಲಿ ಹೆಣ್ಣು ಮಕ್ಕಳ ಮಹತ್ವವನ್ನು ತಿಳಿಸಿದ್ದಾರೆ, ಮತ್ತು ಮೊಲೆ ಮುಡಿಗಳಿದ್ದರೆ ಹೆಣ್ಣೆಂಬರು, ಗಡ್ಡ ಮೀಸೆಗಳಿದ್ದರೆ ಗಂಡೆಂಬರು, ಒಳಗೆ ಸುಳಿವ ಆತ್ಮ ಹೆಣ್ಣೂ ಅಲ್ಲ ಗಂಡೂ ಅಲ್ಲ, ಎಂದು ಸರ್ವ ಸಮತೆಯನ್ನು ಸಾರಿದರು. Equality ಎಂಬ ತತ್ವ ಜಗತ್ತಿನ ಶಾಂತಿಗೆ ಮೂಲ ಮಂತ್ರ.

## ಸ್ವಾತಂತ್ರ್ಯ :

Liberty ಅಂದರೆ ಸ್ವಾತಂತ್ರ್ಯ ಪ್ರತಿಯೊಬ್ಬ ವ್ಯಕ್ತಿಯ ಜನ್ಮಸಿದ್ಧಹಕ್ಕು. ವೀರಶೈವ ಧರ್ಮ ಅದನ್ನು ಸಂಪೂರ್ಣವಾಗಿ ಗಮನಿಸಿತು. ಪ್ರತಿಯೊಬ್ಬ ತನ್ನ ಆತ್ಮೋದ್ಧಾರವನ್ನು ಮಾಡಿಕೊಳ್ಳಲು ಸ್ವತಂತ್ರನು, ಬಂಧನ ಯಾವ ದೃಷ್ಟಿಯಿಂದಲೂ ಸಲ್ಲದು. ಸ್ವಾತಂತ್ರ್ಯವೇ ಜಗದ ಜೀವನ ಉಸಿರು, ಆದ್ದರಿಂದ ಹೆಣ್ಣು–ಗಂಡು ಉಚ್ಚ ಕುಲ–ನೀಚ ಕುಲ. ಈ ಯಾವ ತಾರತಮ್ಯ ಭಾವವಿಲ್ಲದೆ ಪ್ರತಿಯೊಬ್ಬ ವ್ಯಕ್ತಿಯ ಸ್ವಾತಂತ್ರ್ಯವನ್ನು ವೀರಶೈವ ಮನ್ನಿಸಿತು. ಸಾಧಿಸಿತು. ಪ್ರತಿಯೊಬ್ಬ ವೀರಶೈವನ ಅಂಗದ ಮೇಲೆ ಕಾಣುವ ಇಷ್ಟಲಿಂಗ ಧಾರ್ಮಿಕ ರಂಗದಲ್ಲಿ ವೀರಶೈವ ಸಾಧಿಸಿದ ವ್ಯಕ್ತಿಸ್ವಾತಂತ್ರ್ಯದ ಕುರುಹು. ಅದು ಸಾಮಾಜಿಕ ರಂಗದಲ್ಲಿಯೂ ಆತನ ಸ್ವಾತಂತ್ರ್ಯ ವನ್ನು ಸೂಚಿಸುತ್ತದೆ. ಹೀಗೆ ಒಬ್ಬನು ಇನ್ನೊಬ್ಬನನ್ನು ಅವಲಂಬಿಸದೆ, ಒಬ್ಬನಿಗೆ

ಇನ್ನೊಬ್ಬನು ದಾಸನಾಗದೆ ತಮ್ಮ ತಮ್ಮ ಸ್ವಾತಂತ್ರ್ಯವನ್ನು ಕಾಯ್ದುಕೊಂಡು ಹೋಗ ಬೇಕೆಂಬುದು ವೀರಶೈವರ ಗುರಿ.

**ಬಾಂಧವ್ಯ :**

ಇದರಂತೆ Fraternity ಒಂದು ವಿಶ್ವಧರ್ಮದ ತಿರುಳು, Fraternity ಎಂದರೆ ಬಾಂಧವ್ಯ. ಅಂಗದ ಮೇಲೆ ಲಿಂಗವಿದ್ದವರೆಲ್ಲರೂ ಸಂಗಮನಾಥನಿಗೆ ಸರಿಸಮಾನರು, ಎಲ್ಲರೂ ಬಂಧುಗಳು ಎಂಬ ತತ್ವವನ್ನು ವೀರಶೈವ ಸಾಧಿಸುತ್ತದೆ. "ಕಾಗೆಯೊಂದ ಗುಳ ಕಂಡರೆ ಕೂಗಿ ಕರೆಯದೆ ತನ್ನ ಕುಲವೆಲ್ಲವ. ಕೋಳಿಯೊಂದು ಗುಟುಕ ಕಂಡರೆ ಕರೆಯದೆ ತನ್ನ ಕುಲವೆಲ್ಲವ ಶಿವಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದರೆ ಕಾಗೆ ಕೋಳಿಗಿಂತ ಕರ ಕಷ್ಟ" ಅಂದರೆ ಶಿವಭಕ್ತನಾದ ಮೇಲೆ ಎಲ್ಲರೂ ಸರಿಸಮಾನರು, ಬಂಧುಗಳು ಎಂಬ ಭಾವನೆಯಿಂದ ವರ್ತಿಸಬೇಕು, ಹಾಗೆ ನಡೆಯದಿದ್ದರೆ ಅವರು ಶಿವಭಕ್ತಿ ಪಂಥಕ್ಕೆ ಸಲ್ಲರು. ಈ ಬಾಂಧವ್ಯದಿಂದಲೇ ಲೋಕ ಮುನ್ನಡಯಬಲ್ಲದು. ಇದಕ್ಕೆ Love ಎಂದರೆ ಪ್ರೇಮವೇ ಮುಖ್ಯಸ್ಥಾಯಿ. "Love they neighbour as thyself" ಎಂಬ ಮಂತ್ರವನ್ನು ವೀರಶೈವವು ಒಪ್ಪಿಕೊಂಡಿದೆ. ಇಷ್ಟೇ ಅಲ್ಲ ಅದನ್ನು ಸಕಾರಣವಾಗಿ ಒಪ್ಪಿಕೊಂಡಿದೆ. ಎಲ್ಲರೂ ಶಿವಾಂಶ ಸಂಭೂತರು; ಎಲ್ಲರಲ್ಲಿರುವ ಆತ್ಮ ಒಂದೇ; ಒಂದೇ ಒಂದೇ, ಎಂಬ ಭಾವ ಬಲಿತು ಬಾಂಧವ್ಯ ನೆಲೆಗೊಂಡರೆ ಜಾಗತಿಕ ಶಾಂತಿ ಕರತಲಾಮಲಕ.

ಶಿವಶರಣರು ತಮ್ಮ ಪ್ರತಿಯೊಂದು ಕಾರ್ಯದಲ್ಲಿಯೂ ಸಾಮ್ಯವಾದದ ಅಚ್ಚು ಮೂಡಿಸಿದುದು ಸಾಮಾನ್ಯವಾದ ಮಾತಲ್ಲ. ಜಾತಿಯಲ್ಲಿಯೂ ಸಾಮ್ಯವಾದ, ರೀತಿ ಯಲ್ಲಿಯೂ ಸಾಮ್ಯವಾದ. ಹೀಗೆ ನಡೆ ನುಡಿಗಳಲ್ಲಿಯೂ ಸಾಮ್ಯವಾದವನ್ನು ಉಪ ಯೋಗಿಸಿ ಅಸಾಧಾರಣ ಕ್ರಾಂತಿ ಮಾಡಿದರು. ಆರ್ಥಿಕ ಸಮಸ್ಯೆಯನ್ನು ಬಹಳ ಸುಲಭವಾಗಿ ಅಂದಿನ ಶಿವ ಶರಣರು ಬಿಡಿಸಿದ್ದುಂಟು. ಫ್ರಾನ್ಸಿನ ಮಹಾಕ್ರಾಂತಿ, ಕಾರ್ಲಮಾರ್ಕ್ಸನಿಂದ ರಶ್ಯಾದ ಮಹಾಕ್ರಾಂತಿ. ಮೊದಲಾದ ಸಮಾಜಸತ್ತಾವಾದಿಗಳಿಂದ ಬಗೆಹರಿಯದ ಆರ್ಥಿಕ ಪರಿಸ್ಥಿತಿಯನ್ನು ಶರಣರು ಎಂಟನೂರು ವರ್ಷಗಳ ಹಿಂದೆಯೇ ಬಿಡಿಸಿದ್ದುದು, ಮಹಾನ್ ಅರ್ಥಶಾಸ್ತ್ರಜ್ಞ-ಪಂಡಿತರನ್ನು ಬೆರಗುಗೊಳಿಸಬಹುದಾಗಿದೆ.

ಹೀಗೆ ವೀರಶೈವ Liberty, Fraternity ಮತ್ತು Equality ಎಂಬ ತ್ರಿಪುಟಿ ಯನ್ನು ಎತ್ತಿ ಹಿಡಿದು ವಿಶ್ವಶಾಂತಿಗೆ ಹೆದ್ದಾರಿಯನ್ನು ಹಾಕಿಕೊಟ್ಟಿದೆ.

**ದಯೆ :**

ಪ್ರೇಮ ವಿಶ್ವಶಾಂತಿಗೆ ಮೂಲವಾದಂತೆ ದಯೆಯೂ ಅದಕ್ಕೆ ಪರಮ ಸಾಧನ. ಒಬ್ಬ ವ್ಯಕ್ತಿ ಇಲ್ಲವೆ ಒಂದು ದೇಶ ಇನ್ನೊಬ್ಬರನ್ನು ಶೋಷಿಸುವಲ್ಲಿ, ದಬ್ಬಾಳಿಕೆಯನ್ನು ನಡೆಸುವಲ್ಲಿ ದಯೆ ಎಂಬುದೊಂದಿದ್ದರೆ ಅಂತಹ ಮನೋ

 

ವೃತ್ತಿ ತನ್ನಿಂದತಾನೆ ನಿಂತುಬಿಡುತ್ತಿತ್ತು. ದಯೆ ಆರಿದಾಗಲೇ ಇಂತಹ ಅಸುರೀಭಾವ ತಾಂಡವವಾಡುತ್ತದೆ. ಜೈನ ಬೌದ್ಧ ಧರ್ಮಗಳಂತೆ ವೀರಶೈವಕ್ಕೂ ದಯೆಯೇ ಮೂಲವಾಯಿತು.

ದಯವಿಲ್ಲದ ಧರ್ಮವಾವುದಯ್ಯಾ. ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ ದಯವೇ ಧರ್ಮದ ಮೂಲವಯ್ಯಾ.... ಎಂದು ಭಕ್ತಿ ಭಾಂಡಾರಿ ಬಸವಣ್ಣನವರು ಸಾರಿದರು. ವೀರಶೈವ ಧರ್ಮಕ್ಕೆ ದಯವೇ ಮೂಲ. ದಯವಿಲ್ಲದೆ ಧರ್ಮವಾಗ ಲಾರದೆಂದು ಶರಣರು ಸ್ಪಷ್ಟಪಡಿಸಿರುವರು, ಹಿಂಸೆ ಎಲ್ಲ ದೃಷ್ಟಿಯಿಂದಲೂ ತ್ಯಾಜ್ಯ. ಕಾಯಾ, ವಾಚಾ ಮನಸಾ ಹಿಂಸೆ ನಡೆಯಕೂಡದು. ಹಿಂಸೆಯಿಂದ ಯಾವ ಕಲ್ಯಾ ಣವೂ ಉಟಾಗಲಾರದು, ತನ್ನ ಮೇಲೆ ತನಗೆ ಕರುಣ ಇಲ್ಲದೆ ಪ್ರವೃತಿಗಳನ್ನು ನಿಗ್ರಹಿಸಿ ವ್ರತ ನಿಯಮಗಳನ್ನು ಆಚರಿಸಿ ದೇಹ ದಂಡಿಸುವದನ್ನು ವೀರಶೈವರು ಒಂದು ದೃಷ್ಟಿಯಿಂದ ಹಿಂಸೆಯೆಂದೇ ಬಗೆದರು. ಅಂಹಿಸೆ ವೀರಶೈವರಲ್ಲಿ ಒಂದು ಉಚ್ಚ ಸ್ಥಾನವನ್ನು ಪಡೆಯಿತು. ದಯಭರಿತ ವ್ಯಕ್ತಿ ಹಾಗೂ ದೇಶಗಳು ಆಕ್ರಮಣ ವೃತ್ತಿಗೆ ಎಂದೂ ಮನಸ್ಸು ಮಾಡಲಾರವು. ವಿಶ್ವಶಾಂತಿಗೆ ದಯವೇ ಅಡಿಗಲ್ಲು.

**ಆಚಾರ :**

ವೀರಶೈವ ಆಚಾರಕ್ಕೆ ಪ್ರಾಧಾನ್ಯವಿತ್ತಿದೆ. ದೇವಲೋಕ ಮರ್ತ್ಯಲೋಕವೆಂಬವು ಬೇರಿಲ್ಲ ಕಾಣಿರೋ, ಆಚಾರವೇ ಸ್ವರ್ಗ ಅನಾಚಾರವೇ ನರಕ. ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯ ಲೋಕ, ಹೀಗೆ ದೇವಲೋಕ ಮರ್ತ್ಯ ಲೋಕವೆಂಬಿವು ಎಲ್ಲವೂ ಇಲ್ಲಿಯೇ ಉಂಟು. ಸದಾಚಾರದಿಂದ ನುಡಿದಂತೆ ನಡೆ ದರೆ ಇದೇ ಜನ್ಮ ಕಡೆಯಾಗುತ್ತದೆ. ನುಡಿಯಲ್ಲಿ ಎಚ್ಚತ್ತು ನಡೆಯಲು ತಪ್ಪಿದರೆ ಹಿಡಿದಿರ್ದ ಲಿಂಗ ಘಟಸರ್ಪ, ಆದುದರಿಂದ ನುಡಿಯೊಂದು ಪರಿ, ನಡೆಯೊಂದು ಪರಿಯಾಗಬಾರದು. ನಡೆನುಡಿಗಳಲ್ಲಿ ಸಾಮರಸ್ಯವಿರಬೇಕು. ರಾಜಕೀಯ ಗಲಭೆಯಲ್ಲಿ ಕಾಣುವ ಕ್ಷೋಭೆ, ನಡೆನುಡಿಗಳಲ್ಲಿ ಹೊಂದಿಕೆ ಇಲ್ಲದಿರುವದರಿಂದಲೇ ಉಂಟಾಗಿದೆ. ಧಾರ್ಮಿಕ ಹಿನ್ನೆಲೆ ಇಲ್ಲದ ರಾಜಕೀಯ ಇಂತಹ ಸ್ಥಿತಿಗೆ ಗುರಿಯಾಗುತ್ತದೆ. ಧರ್ಮ ಮತ್ತು ರಾಜಕಾರಣಗಳು ಒಂದುಗೂಡಿರಬೇಕು ಹೊಂದಿಕೊಂಡಿರಬೇಕು ಎಂದು ಹೇಳಿದ ಮಹಾತ್ಮಾ ಬಸವಣ್ಣ ಹಾಗೂ ಮಹಾತ್ಮಾ ಗಾಂಧೀಜಿಯವರ ರಾಜತಂತ್ರದಲ್ಲಿ ನುಡಿ ನಡೆಗಳ ಸಾಮರಸ್ಯವನ್ನು ಕಾಣುತ್ತೇವೆ, ವೀರಶೈವ ಧರ್ಮ ಇಂತಹ ರಾಜತಂತ್ರಕ್ಕೆ ಮನ್ನಣೆ ಇತ್ತಿದೆ. ಅದರ ಪುರಸ್ಕರ್ತನಾದ ಬಸವಣ್ಣನು ಕಲಚೂರ್ಯ ಸಾಮ್ರಾಜ್ಯದ ಮಹಾಮಂತ್ರಿಯಾಗಿ ಇಂತಹ ರಾಜ್ಯ ತಂತ್ರವನ್ನು ನಡೆದು ತೋರಿದನು.

" ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು."

ಎಂದು ವೀರಶೈವವು ಮರ್ತ್ಯದ ಬಾಳಿಗೆ ಮಹತ್ವ ಕೊಟ್ಟಿರುವದು, ಮರ್ತ್ಯ

ಲೋಕವನ್ನೇ ಮಹದನ್ನಾಗಿ ಮಾರ್ಪಡಿಸಲು ಅವರು ಹೆಣಗಾಡಿದರು. ಅವರು ಭೂಲೋಕದಲ್ಲಿ "Kingdom of heaven" ಅಂದರೆ ದೇವಲೋಕವನ್ನು ಸ್ಥಾಪಿಸಲು ಯತ್ನಿಸಿದರು, ಆದುದರಿಂದ ಶರಣರು ಇಹಲೋಕವನ್ನು ಬಿಟ್ಟು ಪರಲೋಕಕ್ಕೆ ಹೋಗಲು ನಿರಾಕರಿಸುವರು, ಇಲ್ಲಿದ್ದ ಶಿವಶರಣರು ಅಲ್ಲುಂಟೆ? ಇಲ್ಲಿದ್ದ ಪ್ರಸಾದ ಅಲ್ಲುಂಟೇ ? ಎಂದು ಪ್ರಶ್ನೆ ಕೇಳಿ ಮರ್ತ್ಯದ ಮಹವನ್ನು ಹೆಚ್ಚಿಸಿರುವರು. ಹೀಗೆ ಮರ್ತ್ಯವನ್ನು ಬೆಳಗಿದ ಶರಣರು ಮರ್ತ್ಯಲೋಕದಲ್ಲಿ ಉಳಿದು ಅದನ್ನೇ ಜನ್ಮದ ನಡೆಯನ್ನಾಗಿ ಮಾಡಿಕೊಂಡಿರುವರು. ಈ ಬೆಳಗಿನ ಭಾವ ಬಲಿತರೆ ಕತ್ತಲೆಯ ಅಶಾಂತಿಗೆ ನೆಲೆಯೆಲ್ಲಿ ? ಹೀಗೆ ವೀರಶೈವ ಧರ್ಮ ವಿಶ್ವಶಾಂತಿಗೆ ತನ್ನ ಕಾಣಿಕೆಯನ್ನು ನೀಡಬಲ್ಲದು.

## ಅನುಭವ ಮಂಟಪ :

ಈ ವೀರಶೈವ ಧರ್ಮದ ತತ್ವಗಳಿಗೆ ಸಾರ್ವತ್ರಿಕ ಸ್ವರೂಪ ಕೊಡುವದಕ್ಕೆ ವೀರ ಶೈವ ಮತೋದ್ಧಾರಕ, ಯುಗಪ್ರವರ್ತಕ ಬಸವಣ್ಣನವರು ೧೨ ನೆಯ ಶತಮಾನದಲ್ಲಿ "ಅನುಭವ ಮಂಟಪ"ವನ್ನು ಸ್ಥಾಪಿಸಿ, ಆಧ್ಯಾತ್ಮಿಕ ಪರಮಹಂಸಗಳ ತಿಳಿಗೊಳವನ್ನಾಗಿ ಮಾಡಿ ಮಾನವ ಕುಲವನ್ನೇ ಎಚ್ಚರಿಸಿದರು. ಸಾಮಾಜಿಕ ಕ್ಷೇತ್ರದಲ್ಲಿದ್ದ ಜಾತಿ 'ಪಕ್ಷ' ಮೇಲು-ಕೀಳು-ಈ ಭೇದಗಳನ್ನು ಕಿತ್ತೊಗೆದರು. ಧಾರ್ಮಿಕ ಕ್ಷೇತ್ರದಲ್ಲಿದ್ದ ಆ ಅಂಧವಿಶ್ವಾಸ, ಕರ್ಮಕಾಂಡಗಳ ನಗ್ನ-ನೃತ್ಯವನ್ನು ಖಂಡಿಸಿ, ವಿಶ್ವ ಕಲ್ಯಾಣವನ್ನೇ ಮುಖ್ಯವಾಗಿಟ್ಟುಕೊಂಡು, ಸಕಲರಿಗೆ ಲೇಸನೇ ಬಯಸುವವನೇ ಕುಲಜನು ಎಂದು ಸಾರಿ, ವೀರಶೈವ ಧರ್ಮದ-ನೆಲೆ ಕಲೆಗಳನ್ನು ಎಲ್ಲರೂ ತಿಳಿಯುವಂತೆ, ಅನುಭವ ಮಂಟ ಪದಲ್ಲಿ ಶರಣ-ಶರಣೆಯರಿಗೆ ಸ್ಥಾನವನ್ನು ಕಲ್ಪಿಸಿ, ಅವರಿಗೆ ಆತ್ಮೋದ್ಧಾರ ಮಾಡಿ ಕೊಳ್ಳಲು ದಾರಿ ಮಾಡಿಕೊಟ್ಟರು. ಆಗಿನ ಅನುಭವ ಮಂಟಪವು ಶಿವಜ್ಞಾನದ ವಿಶ್ವ ವಿದ್ಯಾನಿಲಯವಾಗಿತ್ತೆಂದರೂ ಅಡ್ಡಿಯಿಲ್ಲ.

ಈಗಿನ ಕಾಲದಲ್ಲಿ ಯಾವುದಾದರೊಂದು ಮಹತ್ಕಾರ್ಯವನ್ನು ಮಾಡಬೇಕಾದರೆ ದುಂಡು ಮೇಜಿನ ಸಭೆಯನ್ನು ಕರೆದು ಅದರಲ್ಲಿ ಬಹುಮತದಿಂದ ನಿರ್ಣಯ ಮಾಡಿ ಅದನ್ನು ಜನರೆದುರಿಗೆ ಇಟ್ಟು ಕೃತಿಯಲ್ಲಿ ತರುವದನ್ನು ನಾವು ನೋಡುತ್ತೇವೆ. ಶಿವಾ-ನುಭವ ಮಂಟಪವಾದರೂ ಕರ್ನಾಟಕದಲ್ಲಿ ಸುಪ್ರಸಿದ್ಧವಾದ ಧಾರ್ಮಿಕ, ಐತಿಹಾಸಿಕ ಸಂಸ್ಥೆಯಾಗಿದ್ದಿತು. ನೀತಿ ನಿಪುಣರೂ, ಭಕ್ತಿ ಸಂಪನ್ನರೂ, ಲಿಂಗನಿಷ್ಠರೂ ಆದ ಸಹ ಸ್ರಾರು ಶಿವ-ಶರಣ-ಶರಣೆಯರು ಒತ್ತೊಟ್ಟಿಗೆ ಕೂಡಿ, ವೀರಶೈವ ಧರ್ಮದ ಮಾನ ವತಾವಾದ, ಜಗತ್ತಿಗೆ ಶಾಂತಿ-ಸುಖ ದೊರೆಯಬೇಕಾದರೆ ಏನೇನು ಮಾಡಬೇಕು. ಹೇಗೆ ಜೀವನ ಸಾಗಿಸಬೇಕು ಎಂಬ ಮಹದ್ವಿಚಾರಗಳನ್ನು ತಮ್ಮ ಅನುಭವ ಪೂರ್ಣ ವಚನರಚನೆಯಿಂದ ಜನತೆಗೆ ತಿಳಿಸಿ ಅತ್ಯದ್ಭುತವಾದ ಕಾರ್ಯವನ್ನು ಮಾಡಿದರು. ಮುಖ್ಯವಾಗಿ ಆ ಅನುಭವ ಮಂಟಪದಲ್ಲಿ ಕಾಯಕವೇ ಕೈಲಾಸವೆಂಬ ಕಾಯಕ ತತ್ವ ವನ್ನೂ, ದಯವೇ ಧರ್ಮದ ಮೂಲವೆಂಬ ಕಾರುಣ್ಯ ತತ್ವವನ್ನೂ ಹಾಗೂ ಸಕಲ-

ಸನೆ ಬಯಸುವ ವಿಶ್ವಬಂಧುತ್ವ ತತ್ವವನ್ನು ಅವರು ಸವಿಸ್ತಾರವಾಗಿ
ಂತಹ ಸಂಘ ಸಂಸ್ಥೆಗಳು ಭರತಖಂಡದಲ್ಲಿಯೆ ಏಕೆ ಜಗತ್ತಿನ ಇನ್ನಿತರ
ಕಡಿಮೆ ಎಂದು ಹೇಳಬಹುದು. ಕೆಲವರು ಶಿವಾನುಭವ
ರ್ಮಿಕ ಕಾರ್ಯಕಲಾಪಗಳನ್ನು ಪ್ಲೇಟೋ ಸಂಗ್ರಹಿಸಿದ ಸಾಕ್ರೆಟೀಸನ
, ತಮಿಳು ನಾಡಿನ ಸಂಘ ಸಾಹಿತ್ಯಕ್ಕೂ, ಮತ್ತೆ ಕೆಲವರು ಉಪನಿಷ-
ಜನ ಸಭೆಗೂ ಮತ್ತೂ, ಅಶೋಕನ ಸಭೆಗೂ ಹೋಲಿಸುತ್ತಾರೆ.
ಮಂಟಪದಲ್ಲಿ ಚರ್ಚೆ ನಡೆದು ಸಿದ್ಧಾಂತ ಪಡಿಸಿದ ಕೆಲವು ವಿಷಯಗ-
ದನೆಯೆಂದು ಗ್ರಂಥವು ಸಿದ್ಧವಾಗಿರುತ್ತದೆ. ಈ ಗ್ರಂಥವು ಅನು
ಕ್ಕ ಕೈಪಿಡಿ ಎನ್ನಬಹುದು.

ವಾಗಿ ಸಕಲ ಜಾತಿಯವರಿಂದ ಕೂಡಿ, ೧೨ನೇ ಶತಮಾನದಲ್ಲಿ ಕರ್ನಾ-
ಸುತ್ತಿದ್ದ ಈ ಧಾರ್ಮಿಕ ಶಿವಾನುಭವ ಮಂಟಪವನ್ನು ನೋಡಲು
ರೆ ಈಗಿನ ಕಾಲದ ಎಷ್ಟೋ ಸಮಾಜದ ಸುಧಾರಕರು ಹಿರಿ ಹಿರಿ
ಕುಲಜಾತಿ, ಬಣ್ಣ, ಭಾಷೆ, ಸ್ತ್ರೀಯರು, ಪುರುಷರು, ಸಣ್ಣವರು
ರು ಬಲ್ಲಿದರು, ವಿದ್ಯಾವಂತರು, ನಿರಕ್ಷರಿಗಳು, ಕರಿಯರು ಬಿಳಿಯರು
ಳನ್ನು ಕಿತ್ತೊಗೆದು, ಲಿಂಗ ನಿಷ್ಠರಾದವರೆಲ್ಲ ಪರಸ್ಪರ ಭೋಜನ,
ಜ್ಞಾನ, ಮೊದಲಾದ ವಿಷಯಗಳಲ್ಲಿ ಅದೆಷ್ಟು ಪ್ರೇಮದಿಂದ ಇರು
ನ್ನು ನೋಡಿದರೆ ಹಿಂದುಸ್ಥಾನದ ಇತಿಹಾಸದಲ್ಲಿಯೇ ಇದು ಅದ್ವಿತೀ
ಯವೂ ಆಗಿರುತ್ತದೆ. ಈ ಶಿವಾನುಭವ ಮಂಟಪಕ್ಕೆ ಅಧ್ಯಕ್ಷರನ್ನಾಗಿ
ಅಲ್ಲಮ ಪ್ರಭುಗಳನ್ನು ಮಾಡಿ, ಅನೇಕ ಚರ್ಚೆಗಳ ವಿಚಾರದ
ಣೆಗೆ, ಇವರ ಅನುಭವ ವಚನಗಳಿಂದ ನಿರ್ಣಯ ಕೊಡುತ್ತಿದ್ದರು.
ದವನು ಪರಸ್ಪರ ದ್ವೇಷ ಕಾಮಕ್ರೋಧಾದಿ–ದುರ್ಗುಣಗಳನ್ನು, ನಾ
ಎಂಬುವ ಹುಚ್ಚುತನವನ್ನು ದೂರೀಕರಿಸಿ, ಜಗತ್ತನ್ನೆ ಬೆರಗುಗೊಳಿ
ಮಂಟಪ-ಕಾರ್ಯಗಳನ್ನು ನೆನೆದುಕೊಂಡು, ಅದರಂತೆ ಆಚರಿಸಿ
ಹೋರಾತ್ರಿ ಹೋರಾಡುವದೇ ನಿಜವಾದ ವೀರಶೈವನ ಕರ್ತವ್ಯ.
ರ್ಮದಲ್ಲಿ ಮಾನವತಾ ವಾದವನ್ನೇ ಪ್ರಧಾನ ಗುರಿಯನ್ನಾಗಿ ಮಾಡಿ
ಕಲ್ಯಾಣವೇ ಜಗತ್ತಿನ ಕಲ್ಯಾಣ, ಮತ್ತು ವೀರಶೈವ ಧರ್ಮದ
ು ಹೇಳಲಾಗಿದೆ. ವೀರಶೈವ ಧರ್ಮದ ಜಾಗ್ರುತಿಗಾಗಿ ಅನುಭವ
ರಬಂದ ನುಡಿಮುತ್ತುಗಳೇ ಇಂದಿನ ಅಶಾಂತಮಯ ಜಗತ್ತಿಗೆ
ಶಾಂತಿಗೆ ದಾರಿದೀಪಗಳೆಂದು ಹೇಳಬಹುದು.

ಗಳು :

ಮಂಟಪದ ಶರಣ ಶರಣೆಯರ ವಿಚಾರ ಮಂಥನದಿಂದ ಪರಿಶುದ್ಧಿ

ಗೊಂಡು, ಕಾರ್ಯರಂಗಕ್ಕೆ ಇಳಿದ ವೀರಶೈವ ಧರ್ಮದ ಪ್ರಧಾನವಾದ ವೈಶಿಷ್ಟ್ಯಗಳನ್ನು ಕೆಳಗಿನಂತೆ ಕ್ರೋಢೀಕರಿಸಬಹುದು.

(೧) ಪ್ರತಿಮಾ ಪೂಜೆಯಿಂದ ತುಂಬಿದ ಹಿಂದೂ ದೇಶದಲ್ಲಿ ಶಿವನನ್ನು ಹೊಸ ರೀತಿಯಿಂದ ಪೂಜಿಸುವ ವಿಧಾನವು ಆರಂಭವಾಯಿತು. ಈ ನೂತನ ಪದ್ಧತಿಗೆ ಇಷ್ಟಲಿಂಗ ಪೂಜೆಯೆಂದು ಹೆಸರು.

ಇಷ್ಟಲಿಂಗವು ಆತ್ಮಲಿಂಗದ ಪ್ರತಿಚ್ಛಾಯೆಯಾಗಿದ್ದು ; ವ್ಯಕ್ತಿಗತವಾಗಿರುವದರಿಂದಲೂ, ಅದು ಗುಡಿಯೊಳಗಿನ ಯಾವ ದೇವತೆ ಇಲ್ಲವೆ ಸ್ಥಾವರ ಲಿಂಗಗಳಂತೆ, ಸಾಮಾನ್ಯವಾಗಿ ಸರ್ವರಿಂದ ಪೂಜಿಸಲ್ಪಡದೆ ಇರುವದರಿಂದಲೂ, ಇಷ್ಟಲಿಂಗವು ಚಿಲ್ಲಿಂಗಕ್ಕೆ ಸಾಂಕೇತಿಕವಾಗಿರುವದರಿಂದಲೂ ಇಷ್ಟಲಿಂಗ ಪೂಜೆಯು ಮೂರ್ತಿ ಪೂಜೆಯಲ್ಲವೆಂದು ವೀರಶೈವ ಸಿದ್ಧಾಂತ.

ಇದು ಇಷ್ಟಲಿಂಗ ಮೂಲಕವಾಗಿ ತನ್ನ ಧರ್ಮದ ದ್ವಾರವನ್ನು ಜಗತ್ತಿನ ಎಲ್ಲ ಜಾತಿಯ ಸ್ತ್ರೀ ಪುರುಷರಿಗೆ ತೆರೆದಿಟ್ಟಿದೆ. ಇಷ್ಟಲಿಂಗಕ್ಕೆ ಒಬ್ಬ ಪಾಶ್ಚಿಮಾತ್ಯ ಪಂಡಿತರು "ಸಾಮಾಜಿಕ ತಗ್ಗು ದಿನ್ನೆಗಳನ್ನು ಸಮ ಮಾಡುವ ಸಾಧನ" ಎಂದು ಕರೆದಿದ್ದಾರೆ.

(೨) ಆಧ್ಯಾತ್ಮಿಕ ವಿಷಯದಲ್ಲಿ ಸ್ತ್ರೀಯರು ಪುರುಷರಿಗಿಂತ ಯಾವ ರೀತಿಯಿಂದಲೂ ಕಡಿಮೆಯವರಿಲ್ಲವೆಂದು ವೀರಶೈವ ಧರ್ಮ ತೋರಿಸಿ ಕೊಟ್ಟಿದೆ. ಇದರಿಂದ ಜಗತ್ತಿನ ಸ್ತ್ರೀಯರಿಗೆ ಆತ್ಮೋನ್ನತಿ ಪಡೆಯಲು ಸುಗಮವಾಗಿದೆ.

(೩) ವೀರಶೈವ ಧರ್ಮವು ಪ್ರತಿಯೊಬ್ಬ ವ್ಯಕ್ತಿಗೆ ವಿಚಾರ ಸ್ವಾತಂತ್ರ್ಯವನ್ನೂ ಆಚಾರ ಸ್ವಾತಂತ್ರ್ಯವನ್ನೂ ಕೊಟ್ಟಿದೆ.

(೪) "ಕಾಯಕವೇ ಕೈಲಾಸ" ಎಂದು ಹೇಳಿ, ಪ್ರತಿಯೊಬ್ಬನು ಯಾವದಾದರೊಂದು ಕಾಯಕವನ್ನು ಕೈಕೊಳ್ಳಬೇಕೆಂದು ಕಟ್ಟು ಮಾಡಿದ್ದರಿಂದ ಉದ್ಯೋಗದ ಗೌರವವು ಬೆಳೆದಿದೆ. ವೀರಶೈವ ಸಮಾಜದಲ್ಲಿ ಸರ್ವ ತರಹದ ಉದ್ಯೋಗಗಳು ದೊರೆಯುವದರಿಂದ ಅದು ಆ ಸಮಾಜಕ್ಕೆ ಸ್ವಾವಲಂಬನದ ಮೂಲಾಕ್ಷರಗಳನ್ನೇ ಕಲ್ಪಿಸಿಕೊಟ್ಟಿದೆ. ಜಗತ್ತಿನ ಅರ್ಥ ಶಾಸ್ತ್ರವನ್ನೇ ನವೀನ ರೀತಿಯ ಭದ್ರ ತಳಹದಿಯ ಮೇಲೆ ರಚಿಸಿದೆ.

(೫) ಭಕ್ತಿ ಮತ್ತು ಕರ್ಮ, ಜ್ಞಾನ ಈ ಮೂರರೊಳಗೆ ಯಾವದು ಹೆಚ್ಚಿನದೆಂಬುವ ವಾದವನ್ನು ನಿಲ್ಲಿಸಿಬಿಟ್ಟಿದೆ, ಮತ್ತು ಅವು ಮೂರು ಸಮವಾಗಿಯೇ ಮಹತ್ವವಾದವುಗಳೆಂಬುದನ್ನು ಸಾರಿ ಹೇಳಿದೆ. ಗುರು, ಲಿಂಗ, ಜಂಗಮಗಳೆಂಬುವೇ ಇದರ ಬಾಹ್ಯ ಕುರುಹುಗಳು.

(೬) ವೀರಶೈವ ಧರ್ಮವು ಗೃಹಸ್ಥಾಶ್ರಮಕ್ಕೆ ಬಹಳ ಗೌರವವನ್ನು ಕೊಟ್ಟಿದೆ. ಜೈನ-ಬೌದ್ಧಾದಿ ಧರ್ಮಗಳು ಸಂನ್ಯಾಸಕ್ಕೆ ಮನ್ನಣೆ ಕೊಟ್ಟಿರುವದರಿಂದ, ಸಮಾಜದ

ಮೇಲೆ ಕೇವಲ ನಿವೃತ್ತಿ ಮಾರ್ಗದ ಪರಿಣಾಮವಾಗಿದೆ, ಈ ಭಾವನೆಯನ್ನು ದೂರ ಮಾಡಿ, ಸಮಾಜವನ್ನು ಸುಧಾರಿಸಿ, ಸಂನ್ಯಾಸಿಯಂತೆ ಗೃಹಸ್ಥನೂ ಅಧಿಕಾರಿ ಎಂದು ಸಾರಿದೆ.

(೭) ಯಾವ ಅಸ್ಪೃಶ್ಯರು ಮಾನವ ಜಾತಿಗಿರುವ ತಮ್ಮ ಹಕ್ಕುಗಳನ್ನು ಕಳೆದುಕೊಂಡು ಇದುವರೆಗೆ ಹಿಂದೂ ಸಮಾಜದ ಹೊರಗೆ ನಿಂತುಕೊಂಡಿರುವರೋ, ಯಾವ ಜನರ ಉದ್ಧಾರದ ಮೇಲೆ ಹಿಂದೂ ದೇಶದ ಭಾವೀ ರಾಜಕೀಯ ಸ್ಥಿತಿಯು ಅವಲಂಬಿಸಿಕೊಂಡಿರುವದೋ, ಅಂತಹ ಅಸ್ಪೃಶ್ಯರನ್ನು ಮಹಾತ್ಮಾ ಬಸವಣ್ಣನವರು ಪ್ರೀತಿಯಿಂದ ಬಿಗಿದಪ್ಪಿಕೊಂಡು ಅವರೊಡನೆ ಸಹಕರಿಸಿ. ಆತ್ಮೋನ್ನತಿಯ ಶಿಕ್ಷಣವನ್ನು ಕೊಟ್ಟು ಉದ್ಧಾರ ಮಾಡಿದ್ದಾರೆ, ಮಹಾತ್ಮಾ ಗಾಂಧಿಯವರ ಈ ತತ್ವವನ್ನು ೮೦೦ ವರ್ಷಗಳ ಪೂರ್ವದಲ್ಲಿಯೇ ಬಸವಣ್ಣನವರು ಸಹಜವಾಗಿ ಆಚರಣೆಯಲ್ಲಿ ತಂದು ಜಗತ್ತನ್ನೇ ಎಚ್ಚರಿಸಿದ್ದಾರೆ. ಇದೇ ರೀತಿಯಾಗಿ ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿಯೂ ಬಸವಣ್ಣನವರ ತರುವಾಯ ಮೈಸೂರ ರಾಜ್ಯದಲ್ಲಿ ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳವರು ವೀರಶೈವ ಧರ್ಮದ ತತ್ವಗಳನ್ನು ವಿಶ್ವ ಶಾಂತಿಯ ತಳಹದಿಯ ಮೇಲೆಯೇ ಪ್ರಚಾರಪಡಿಸಿ ಅದಕ್ಕಾಗಿ ಅಹೋರಾತ್ರಿ ಪರಿಶ್ರಮಿಸಿ ಲೋಕ ಕಲ್ಯಾಣವನ್ನು ಮಾಡಿದ್ದಾರಲ್ಲದೆ, ಶಿವಯೋಗ ಮಂದಿರ ಸಂಸ್ಥೆ, ಹಾಗು ಅಖಿಲ ಭಾರತೀಯ ವೀರಶೈವ ಮಹಾಸಭೆಯನ್ನು ಸಂಸ್ಥಾಪಿಸಿ ದ್ವಿತೀಯ ಬಸವನೆಂದು ಹೆಸರು ಪಡೆದಿದ್ದಾರೆ.

**ಸಂದೇಶ :**

ಒಟ್ಟಿನಲ್ಲಿ ವೀರಶೈವ ಧರ್ಮ ಕೇವಲ ವ್ಯಕ್ತಿ ವೈಶಿಷ್ಟ್ಯವನ್ನು ಸಾರುವದಕ್ಕಾಗಲಿ, ವ್ಯಕ್ತಿಯ ವಿಮುಕ್ತಿಯನ್ನು ಸಾಧಿಸುವದಕ್ಕಾಗಲಿ ಜನ್ಮ ತಾಳಲಿಲ್ಲ. ಪಾಂಡಿತ್ಯದ ಕೆಚ್ಚಿನಿಂದ ಒಂದು ಗಹನ ತತ್ವವನ್ನು ಪ್ರತಿಪಾದಿಸಿ ಜನತೆಯನ್ನು ದಂಗುಗೊಳಿಸುವದಕ್ಕೂ ಪ್ರಯತ್ನಿಸಲಿಲ್ಲ. ಆಧ್ಯಾತ್ಮಿಕ ಸಾಧನೆಯಿಂದ ಯಾವ ಆನಂದ, ನೈರ್ಮಲ್ಯ ಶಾಂತಿಗಳು ದೊರಕುವವೋ ಅವುಗಳ ಲಾಭ ಎಲ್ಲರಿಗೂ ದೊರೆಯಬೇಕು ; ಲೋಕವೆಲ್ಲ ಕೆಳೆಯರಂತೆ, ಸಹೋದರರಂತೆ ಬಾಳಿ, ಬದುಕುವದಲ್ಲದೆ, ಬಾಳುವೆಯನ್ನು ಮರೆತು ಸದಾ ಪರಲೋಕದ ಚಿಂತೆಯಲ್ಲಿರುವದೂ ನಿರರ್ಥಕ; ಮತ್ತು ಇಹಪರ ಲೋಕಗಳನ್ನು ಎರಡು ಜಗತ್ತುಗಳನ್ನಾಗಿ ವಿಭಾಗಿಸದೆ, ಒಂದು ಮತ್ತೊಂದರ ಪೂರಕವೆಂದು ಭಾವಿಸುವದೇ ಮೊದಲಾದವು ವೀರಶೈವ ಧರ್ಮದ ಮೂಲೋದ್ದೇಶಗಳು.

ಹೀಗೆ ವೀರಶೈವವು ಸಂಕುಚಿತ ಮನೋಭೂಮಿಕೆಯುಳ್ಳದ್ದಲ್ಲ. ಅದರ ದೃಷ್ಟಿಯಲ್ಲಿ ವಿಶ್ವವೇ ನೆಲೆಸಿರುವದು ವಿಶ್ವದ ಉದ್ಧಾರವೇ ಅದರ ಗುರಿಯು.

"ಎಲ್ಲರೂ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸಿದ್ಧರಾಗಿರಿ. ಎಲ್ಲರೂ ಅಕ್ಷಯವಾದ ಆನಂದ ಹೊಂದಿರಿ. ನೀವು ಜೀವತ್ವದ ಬೇಡಿಕೆಯನ್ನು ಕಡಿದೊಗೆದು ದೇವರ ಕಡೆಗೆ

ಹೊರಡಿರಿ. ಅಲ್ಲಿ ಅನಂತತೆಯ ಅನುಭವ ಪಡೆಯಿರಿ. ಪುರುಷರು, ಸ್ತ್ರೀಯರು, ಉಚ್ಚರು ನೀಚರು, ಎಲ್ಲರಿಗೂ ಶಿವಸುಖದ ಬಾಗಿಲು ತೆರೆದಿದೆ." ಎಂಬುದೇ ವೀರಶೈವದ ವೀರಸಂದೇಶ.

## ನಮ್ಮ ಪ್ರತಿಜ್ಞೆ :

ಇಂದು ಪ್ರಪಂಚದಲ್ಲಿ ಸುತ್ತೆಲ್ಲ ಯುದ್ಧಭೀತಿಯ ಭಯವೇ ಹೆಚ್ಚಾಗಿ ಕಾಣುತ್ತಲಿದೆ. ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರವನ್ನು ಹತ್ತಿಕ್ಕಬೇಕು, ಅದರ ಶಕ್ತಿಯನ್ನು ಹೀರಬೇಕು ಎಂಬ ಇದೇ ಹೊಂಚಿನ ತಾಮಸೀಯ ಪ್ರವೃತ್ತಿಯು ಬೆಳೆಯುತ್ತಿರುವಾಗ ಪ್ರಪಂಚದ ಎಲ್ಲ ರಾಷ್ಟ್ರದ ಧರ್ಮಗುರುಳಗು, ತತ್ವ ಜಿಜ್ಞಾಸುಗಳು ಆಲೋಚನೆ ಮಾಡಿ ವಿಶ್ವಶಾಂತಿಗೆ ಈ ಪ್ರಸಂಗದಲ್ಲಿ ಹೋರಾಡುವದು ಅತ್ಯವಶ್ಯಕ. ಇದೇ ಮುಂಧೋರಣೆಯಿಟ್ಟುಕೊಂಡೇ 'International Inter-Religious Symposium on Peace' ಎಂಬ ಈ ವಿಚಾರಗೋಷ್ಠಿಯನ್ನು ಹಮ್ಮಿಕೊಂಡಿರುವದು.. ಪ್ರಪಂಚದ ದೃಷ್ಟಿಯಿಂದ ಅತ್ಯಂತ ಯೋಗ್ಯವಾದುದಾಗಿದೆ. ಪ್ರಪಂಚದ ಧರ್ಮಗುರುಗಳು ಮೇಲಿಂದ ಮೇಲೆ ಹೀಗೆ ಸೇರಿ ಪ್ರಪಂಚಕ್ಕೆ ಧಾರ್ಮಿಕ ಸಂದೇಶವನ್ನು ಬೀರುತ್ತಿದ್ದರೆ, ಪ್ರಪಂಚದಲ್ಲಿ ಹಬ್ಬಿರುವ ಈರ್ಷೆ–ದ್ವೇಷಗಳ ಜ್ವಾಲೆಯು, ಸ್ವಲ್ಪಾದರೂ ನಂದೀತು. ಪ್ರಪಂಚಕ್ಕೆ ಶಾಂತಿ ಸಿಕ್ಕೀತು, ವಿಕಾಸಮಯ ವಾತಾವರಣ ಉಂಟಾದೀತು. ಸರ್ವಧರ್ಮಗಳ ಧಾರ್ಮಿಕ ಶಕ್ತಿಯ ಕಿರಣಗಳು ರಾಷ್ಟ್ರ ರಾಷ್ಟ್ರಗಳ ಮೂಲೆ ಮೂಲೆಗಳಿಗೂ ಹೋಗಿ ಪ್ರೋಜ್ವಲನಗೊಳಿಸಿ, ತಾಮಸಿಯ ಪ್ರವೃತ್ತಿಯನ್ನು ನಷ್ಟಗೊಳಿಸಲು, ಸಹಾಯವಾದೀತು. ಆದರಿಂದ ಇಂದಿನ ರಾಜಕಾರಣದಲ್ಲಿರುವ ಅನೇಕ ಭಿನ್ನಾಭಿಪ್ರಾಯಗಳು ನಶಿಸಿ ಹೋಗಬಹುದು. ಅದಕ್ಕಾಗಿ ಪ್ರಪಂಚದ ಧರ್ಮಗುರುಗಳೆಲ್ಲರೂ ಇಂದು ಹಸಿದು ಜಗತ್ತಿಗೆ ಬೇಕಾದ ಸುಧಾರಣೆ, ಸ್ವಸಂರಕ್ಷಣೆ, ಆರ್ಥಿಕ ಯೋಜನೆ, ಸ್ತ್ರೀಸುಧಾರಣೆ, ಎಲ್ಲಕ್ಕೂ ಮಿಗಿಲಾದ ಧಾರ್ಮಿಕ ಭಾವನೆ ಹಾಗು ಆಧ್ಯಾತ್ಮಿಕ ವಿಚಾರಗಳು ಪ್ರಪಂಚದ ತುಂಬೆಲ್ಲ ಹಬ್ಬುವಂತೆ ಮಾಡಿ, ಲೋಕವೆಲ್ಲ ಸುಂದರವಾಗುವಂತೆ ಕಾರ್ಯರೂಪಕ್ಕೆ ತರುವದೇ ನಮ್ಮ ಕರ್ತವ್ಯ. ಇಂದು ನಾವೆಲ್ಲರೂ ಆ ಪ್ರತಿಜ್ಞೆಗೈಯ್ಯೋಣ.

" ದೇವನೊಬ್ಬ ನಾಮ ಹಲವು " ಹಾಗು" " ಏಕಂ ಸದ್ವಿಪ್ರಾ ಬಹುಧಾ ವದಂತಿ " | ಜಗತ್ತಿಗೆ ದೇವನೊಬ್ಬ ಮುಕ್ತಿಮಾತ್ರ ಒಂದು. ಜಗತ್ತಿನಲ್ಲಿ ಅನೇಕ ವ್ಯಕ್ತಿಗಳು, ಅನೇಕ ರುಚಿಗಳು. ಅನೇಕ ಹಾದಿಗಳು ಇರುವಂತೆ ದೇವನನ್ನು ಸೇರುವ ಧರ್ಮಾಚರಣೆಗಳು ಬಹುಮುಖವಾಗಿರುವವಾದರೂ ಇವುಗಳಿಗೆಲ್ಲ ಪ್ರಚೋದಕವಾಗಿದ್ದ ಒಂದೇ ನಿತ್ಯ ಸತ್ಯ ಧರ್ಮವು ಸದಾ ಜಾಗೃತವಾಗಿರುವದು. ನಾವೆಲ್ಲರೂ ಒಬ್ಬ ದೇವ, ಮಕ್ಕಳು ಒಂದೇ ಲೋಕದಲ್ಲಿ ಬಾಳುವವರು. ಈ ಜಗತ್ತೆಂಬ ರಂಗ–ಭೂಮಿಗೆ ಬಂದ ನಾವೆಲ್ಲರೂ ನಮ್ಮ ನಮ್ಮ ಪಾತ್ರಗಳನ್ನು ಸಹಕಾರದಿಂದ ಸರಿಯಾಗಿ

ನಿರ್ವಹಿಸೋಣ. ಹಳಿದೆಲ್ಲವನ್ನೂ ಅಳಿದು ಬಿಡದೆ ಹಿತವಾದ ರೀತಿಯಲ್ಲಿ ಹೊಸ-ತನಕ್ಕೆ ಹೊಂದಿಸಿಕೊಳ್ಳೋಣ. ಭರತಖಂಡದ ಕೇಂದ್ರಜೀವಗುಣವಾದ ಧರ್ಮದಿಂದ ನಮ್ಮ ಸಕಲ ಜೀವನವನ್ನು ಸುಂದರವಾಗಿ ರೂಪಿಸಿಕೊಳ್ಳೋಣ ಪ್ರತಿಯೊಂದು ಧರ್ಮ ಮತಗಳಲ್ಲಿರುವ ಒಂದು ಬೆಳಕನ್ನು ನಮ್ಮ ಅಂತರಂಗದ ಕಡೆಗೆ ಎಳೆದುಕೊಂಡು "ವಿಶ್ವ ಶಾಂತಿ"ಗೆ ಅಹೋರಾತ್ರಿ ಪರಿಶ್ರಮಿಸಿ ಇಂದೇ ನಾವೆಲ್ಲರೂ ಪ್ರತಿಜ್ಞೆಗೈದು ಕಾರ್ಯ-ಪ್ರವೃತ್ತರಾಗೋಣ,

सहानाववतु सहनौ भुनक्तु
सहवीर्यं करवावहै ।
तेजस्विनावधीतमस्तु
माविद्विषावहै ।
ॐ शान्ति : शान्ति : शान्ति :

---

ಜನವರಿ ೧೯೬೨ ರಂದು ದಿಲ್ಲಿಯಲ್ಲಿ ಜರುಗಿದ ವಿಶ್ವಧರ್ಮ ಸಮ್ಮೇಳನದಲ್ಲಿ ಹಿಂದಿ ಭಾಷೆಯಲ್ಲಿ ಮಾಡಿದ ಭಾಷಣದ ಸಾರ.

# ಧರ್ಮ ಮತ್ತು ಶಾಂತಿ

[ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಮೂರುಸಾವಿರಮಠ ಹುಬ್ಬಳ್ಳಿ ಅವರು ಜಪಾನದ ಕಿಯೋಟೋ ನಗರದಲ್ಲಿ ಜರುಗಿದ ಜಾಗತಿಕ "ವಿಶ್ವಧರ್ಮ ಮತ್ತು ಶಾಂತಿ" ಸಮ್ಮೇಲನದಲ್ಲಿ ಮಾಡಿದ ಇಂಗ್ಲೀಷ ಭಾಷಣದ ಅನುವಾದ. ]

ಜಗತ್ತಿನ ರಾಷ್ಟ್ರಗಳಲ್ಲಿ ಜಪಾನವು ಅತ್ಯಂತ ಸುಂದರ ರಾಷ್ಟ್ರವಿದ್ದಂತೆ ಧರ್ಮದ ಬೀಡು ಸಹ ಆಗಿದೆ. ಬುದ್ಧನು ಅಹಿಂಸಾತ್ಮಕ ತತ್ವಗಳನ್ನು ಪ್ರಚಾರ ಮಾಡಿದ ಪವಿತ್ರ ದೇಶವಾಗಿದೆ. ಜಪಾನವು ಪ್ರಗತಿಪರ ರಾಷ್ಟ್ರಗಳಲ್ಲಿ ಹೆಚ್ಚು ಹೆಸರು ಪಡೆದಿದೆ. ಜಪಾನಿನ ವಾತಾವರಣವು ಪುನರುಜ್ಜೀವನ ಮತ್ತು ಪುನರ್ನಿರ್ಮಾಣದ ಮಹಾಕಾರ್ಯೋತ್ಸಾಹದಲ್ಲಿ ತುಂಬಿ ತುಳುಕಿದೆ. ಕೈಗಾರಿಕಾ ಪ್ರಗತಿಸಾಧನೆಯೇ ಜಪಾನಿಯರ ಮೂಲ ಮಂತ್ರವಾಗಿದೆ. ಉದ್ಯಮ ಹಾಗೂ ಆರ್ಥಿಕ ಪ್ರಗತಿಯಲ್ಲಿ ಜಪಾನಿಯರ ಸಾಹಸ ಮೆಚ್ಚತಕ್ಕದ್ದಾಗಿದೆ. ಕಾಯಕನಿಷ್ಠೆ ರಾಷ್ಟ್ರೀಯತೆ ವೈಜ್ಞಾನಿಕ ಮನೋವೃತ್ತಿ ವಿಶ್ವ ಬಂಧುತ್ವ ಜಪಾನಿಯರನ್ನು ಮುನ್ನಡೆಯಿಸುತ್ತಿರುವವು. ಜಪಾನದ ಆರ್ಥಿಕ ಪ್ರಗತಿಯು ಇತಿಹಾಸವಂತೂ ಆಶ್ಚರ್ಯಕರವಾಗಿದೆ. ಏಶಿಯಾಖಂಡದಲ್ಲಿಯೇ ಅತ್ಯಂತ ವೈಭವ ಪೂರ್ಣವಾದ ಪ್ರಗತಿಯನ್ನು ಸಾಧಿಸಿದ್ದು ನೋಡಿದರೆ, ಅನ್ಯರಾಷ್ಟ್ರವಾದರೂ ಸಹ ಅನುಕರಣ ಮಾಡುವಂತೆ ಕಾರ್ಯಗೈದಿದ್ದಾರೆ. ಅವರ ಉತ್ಕಟ ದೇಶಾಭಿಮಾನವೇ ಈ ಉದ್ಯಮಶೀಲತೆಗೆ ಕೈಹಾಕಿಸಿದೆ. ಜಪಾನೀಯರು ಇಷ್ಟು ಮುಂದುವರಿಯಲು ಅವರ ಶ್ರಮ ಸಹಿಷ್ಣುತೆ, ವೇಳೆಯ ಸದುಪಯೋಗ ಶ್ರದ್ಧಾಪೂರ್ಣ ಸಾಹಸ, ಹಿಡಿದ ಕಾರ್ಯಗಳನ್ನು ಬಿಡದೇ ಮಾಡುವದು ಇವುಗಳೇ ಪ್ರಗತಿಗೆ ಮೂಲ ಕಾರಣ. ಅಂತೆಯೇ ಮೊನ್ನೆಯೇ ಜರುಗಿದ ವಿಶ್ವವನ್ನೇ ಆಕರ್ಷಿಸಿದ ಔದ್ಯೋಗಿಕ ವಿಶ್ವಪ್ರದರ್ಶನವೇ ಸಾಕ್ಷಿ. ಜಪಾನೀಯರು ಆರ್ಥಿಕ ಹಾಗೂ ಔದ್ಯಮಿಕ ಪ್ರಗತಿಗಾಗಿ ಶ್ರಮ ಪಡೆಯುತ್ತಿರುವಂತೆಯೇ ಜಗತ್ತಿನ ಎಲ್ಲ ರಾಷ್ಟ್ರಗಳು ಶಾಂತಿ ಪಡೆದು ಅತ್ಯುನ್ನತ ಆತ್ಮಿಕ ಆನಂದವನ್ನು ಅನುಭವಿಸಿ ಎಲ್ಲ ರಾಷ್ಟ್ರಗಳು ಪರಸ್ಪರ ಸಹಕಾರದೊಡನೆ ಧರ್ಮದ ಪ್ರೋಜ್ವಲ ಶಕ್ತಿಯನ್ನು ವಿಜ್ಞಾನದ ಜೊತೆಗೆ ಅಂಗೀಕರಿಸಿಕೊಂಡು ರಾಷ್ಟ್ರೋತ್ಥಾನ ಮಾಡಬೇಕೆಂಬುವ ಸದುದ್ದೇಶದಿಂದ ಇಂದು (kyoto) ಇಲ್ಲಿ ವಿಶ್ವಧರ್ಮ ಸಮ್ಮೇಲನ

ವನ್ನು ಜಾಗತಿಕ ಶಾಂತಿಗಾಗಿ ಕರೆದು ಜಗತ್ತನ್ನು ಬೆಳಕಿನ ಕಡೆಗೆ ಒಯ್ಯಬೇಕೆಂಬುವ ಜಪಾನಿಯರ ಮಹಾತ್ಸಾಧನೆ ಮತ್ತು ಮಹಾಸಾಹಸವನ್ನು ನೋಡಿ ನಮಗಿಂದು ಅತೀವ ಆನಂದವಾಗಿದೆ.

ಎಲ್ಲಿಯು ವರೆಗೆ ಜಗತ್ತಿನಿಂದ ಅಧರ್ಮ ಅನ್ಯಾಯ ಅನಾಚಾರಗಳು ತೊಲಗುವದಿಲ್ಲವೋ, ಎಲ್ಲಿಯುವರೆಗೆ ಅಸತ್ಯ ಅಂಹಿಸೆಗಳು ನಿರ್ನಾಮವಾಗುವದಿಲ್ಲವೋ, ಎಲ್ಲಿಯ ವರೆಗೆ ಏರಿಳಿತಗಳ ಸಂಕೋಲೆ ಬಿಡುವದಿಲ್ಲವೋ; ಎಲ್ಲಿಯ ವರೆಗೆ ಪ್ರಪಂಚದ ಧರ್ಮಗುರುಗಳು ಒಂದಾಗಿ ಜಗತ್ತೆಂಬ ಬೃಹದಾಕಾಶದಲ್ಲಿ ಕಾರ್ಮೋಡಗಳು ಕವಿಯಲಾರದಂತೆ ನೋಡಿಕೊಳ್ಳುವದಿಲ್ಲವೋ, ಅಲ್ಲಿಯ ವರೆಗೆ ಜಾಗತಿಕ ಶಾಂತಿ ಸಿಗುವದು ದುರ್ಲಭವೆಂದು ಹೇಳಬಹುದು. ಮಾನವ ಕುಲದ ಭವಿಷ್ಯವೆಂದು ರೂಪಿಸುವಲ್ಲಿ ಧರ್ಮದಷ್ಟು ಪ್ರಬಲವಾದ ಶಕ್ತಿ ಮತ್ತಾವುದೂ ಇರಲಾರದು. ಧರ್ಮವೆಂದಾಕ್ಷಣ ಸಂಕುಚಿತ ಬೇಲಿಯನ್ನು ಹಾಕಿ ಅಷ್ಟಕ್ಕೆ ತೃಪ್ತಿಪಡುವ ಸಾಧನ ಮಾತ್ರವಲ್ಲ. ಧರ್ಮಶಕ್ತಿಯನ್ನು ರಾಷ್ಟ್ರೋತ್ಥಾನಕ್ಕೆ ಪರಿವರ್ತಿಸಿ ಪೂರ್ಣತ್ವವನ್ನು ಪಡೆಯುವ ಮಹಾವ್ಯಕ್ತಿತ್ವವನ್ನು ಮತ್ತು ದಿವ್ಯತೇಜಸ್ಸನ್ನು ನೀಡುವ ಶಕ್ತಿಸ್ಫೂರ್ತಿಯನ್ನು ಸಂಗಳಿಸಿ, ಸಾಧಿಸಿದರೆ ಮಾತ್ರ, ಧರ್ಮದ ಸಾರ್ಥಕತೆ.

"ಪತಿತಂ, ಪತಂತಂ, ಪತಿಷ್ಯಂತಂ, ಧರತೀತಿ ಧರ್ಮಃ." ಧಾರಣಾತ್ ಧರ್ಮಃ ವಿನಾಶದತ್ತ ಸಾಗಿರುವ ಜಗತ್ತನ್ನು ಮೇಲಕೆತ್ತಿ ಎಚ್ಚರಿಸಿ ಶಕ್ತಿಯನ್ನಿತ್ತು ಸಂರಕ್ಷಿಸುವದೇ ಧರ್ಮದ ಮೂಲ ಗುರಿ. ವ್ಯಕ್ತಿಯಲ್ಲಿ ಹುದುಗಿರುವ ತಮಸ್ಸನ್ನು ಜಾಗೃತಗೊಳಿಸುವದೇ ಧರ್ಮ.
ಉಪನಿಷತ್ತಿನಲ್ಲಿ ಹೇಳಿದ.

ಅಸತೋಮಾ ಸದ್ಗಮಯ, ತಮಸೋ ಮಾ ।
ಜ್ಯೋತಿರ್ಗಮಯ, ಮೃತ್ಯೋರ್ಮಾ ಅಮೃತಂ ಗಮಯ ॥

"ಪರಮಾತ್ಮ! ನಮ್ಮನ್ನು ಕೆಡುಕಿನ ತೊಡಕನ್ನು ಬಿಡಿಸಿ ಒಳ್ಳೆಯ ದಾರಿಗೆ ಕರೆದು ಕೊಂಡು ಹೋಗು. ಕತ್ತಲೆಯಿಂದ ಬೆಳಕಿನೆಡೆ ಕರೆದೊಯ್ಯು. ಸಾವಿನಿಂದ ಸಾವಿಲ್ಲದ ಸ್ಥಳಕ್ಕೆ ನಮ್ಮನ್ನು ಸಾಗಿಸು" ಎಂದು ತಿಳಿಸುವ, ಕಲಿಸುವ ಮಂತ್ರವೇ ಧರ್ಮ. ಧರ್ಮ ಎಂದರೆ ಕೇವಲ ತರ್ಕ ಬುದ್ಧಿಯಿಂದ ಬುದುದಲ್ಲ ಮತ್ತು ಬರೀ ತತ್ವವಲ್ಲ. ಧರ್ಮ ಎಂದರೆ ಅನುಭವ ಮತ್ತು ಆಚರಣೆ ದೇವರನ್ನು ನಮ್ಮ ಹೃದಯದಲ್ಲಿ ಕಾಣುವದು. ಅದನ್ನು ಪೂಜಿಸಿ ಅನುಭವಿಸುವುದೇ ಧರ್ಮ. ವಿವೇಕದ ಒರೆಗಲ್ಲಿಗೆ ತಿಕ್ಕಿನೋಡಿ ಪರೀಕ್ಷೆಯಲ್ಲಿ ಉತ್ತೀರ್ಣವಾಗುವಂತಹ ಧರ್ಮವಾದರೆ ಉಪಯೋಗ. ಇಲ್ಲವಾದರೆ ಅದು ಧರ್ಮದ ಸೋಗಾದೀತು. ಬಿದ್ದ ಬಂಡೆಗಲ್ಲಿನಂತೆ ನಿರರ್ಥಕವಾದೀತು.

ಮಹಾತ್ಮಾ ಗಾಂಧಿಯವರು ಒಂದೆಡೆ ಧರ್ಮದ ವಿವರಣೆ ಕುರಿತು ಹೀಗೆ ಹೇಳಿದ್ದಾರೆ.

"ದೀನ ಸೇವೆಯೇ ಧರ್ಮ. ದೀನರ ಮತ್ತು ಪೀಡೆಗೊಂಡವರ ರೂಪದಲ್ಲಿ ದೇವರು ನಮಗೆ ಪ್ರತ್ಯಕ್ಷನಾಗುತ್ತಾನೆ. ಸೇವಾಧರ್ಮದ ಆಚರಣೆಯನ್ನು ಬಿಟ್ಟು ನಾನು ಅಹಿಂಸೆಯನ್ನು ಆಚರಿಸಲಾರೆ" ಅಹಿಂಸಾ ಧರ್ಮವನ್ನು ಆಚರಿಸದೆ ಸತ್ಯವನ್ನು ನಾನು ಕಾಣಲಾರೆ. ಸತ್ಯವಿಲ್ಲದೇ ಬೇರೊಂದು ಧರ್ಮವಿಲ್ಲ" ಈ ರೀತಿ ಧರ್ಮದ ಸತ್ಯಾಂಶ ಅರುಹಿದ್ದಾರೆ.

ಪ್ರಪಂಚದಲ್ಲಿ ಹಲವು ಧರ್ಮಗಳು ಉದ್ಭವಿಸಿದ್ದರೂ ದಾರಿಗಳು ಬೇರೆ ಇದ್ದರೂ, ಮುಟ್ಟುವ ಕೊನೆಯ ಗುರಿ ಮಾತ್ರ ಒಂದೇ ಆಗಿದೆ. ಅದನ್ನು ತಿಳಿದುಕೊಳ್ಳುವ ಮತ್ತು ಅರಗಿಸಿಕೊಳ್ಳುವ ಹೃದಯವಿದ್ದರೆ ಅದು ಅರ್ಥವಾಗುತ್ತದೆ. ಧರ್ಮ ನಿಂತ ನೀರಿನಂತಾಗದೇ ಹರಿಯುವ ತಿಳಿಜಲದಂತೆ ನಿರಂತರ ಹರಿಯುತ್ತಿರಬೇಕು. ಸಮಯಕ್ಕೆ ತಕ್ಕಂತೆ ವಿಕಾಸ ಗೊಳ್ಳುತ್ತಿದ್ದರೆ ರಾಷ್ಟ್ರದ ಶಕ್ತಿಯನ್ನು ಹೆಚ್ಚಿಸಲು ಅನುಕೂಲವಾಗುತ್ತದೆ. ಧರ್ಮವು ಸಂಸ್ಕೃತಿಯನ್ನು ತೋರಿಸುವ ಪ್ರತಿಬಿಂಬದಂತೆ ಇರಬೇಕಲ್ಲದೆ ಐಶ್ವರ್ಯೋಪಾಸನೆಯ ಮೂಲಕ ಭೋಗದ ಹೆಸರಿನಲ್ಲಿ ಸ್ವಾರ್ಥತೆಯ ಕಾಳ್ಗಿಚ್ಚಿನಲ್ಲಿ ಬೆಂದು ಹೋಗುವ ಧರ್ಮ ಪ್ರಚಾರ, ಕ್ಷಣಿಕ. ಅಷ್ಟೇ ಅಲ್ಲ ತತ್ವವಿಲ್ಲದ ಧರ್ಮ, ಮೂಢ ಶ್ರದ್ಧೆಯಲ್ಲಿ ಕೊನೆಗೊಂಡು ಒಂದಿಲ್ಲೊಂದು ದಿನ ನಾಶವಾಗಲೇಬೇಕು. ಲೋಕವೇ ನನ್ನ ಮನೆ, ಮಾನವ ಕುಲವೇ ನನ್ನ ಬಂಧು ವರ್ಗ. ಎನ್ನುವ ಸುಮಧುರ ಭಾವನೆ ಬಂದಾಗ ಧರ್ಮದ ಸಾರ್ಥಕತೆ ಉಂಟಾಗುವದು. ಹೀಗೆಂದಾಕ್ಷಣ ಸ್ವಧರ್ಮವನ್ನು ಬಿಡಬೇಕೆ ? ಹೇಗೆ? ಯಾವುದೇ ಧರ್ಮದ ತತ್ವದೊಳಗೆ ಬೆಳಕಿಲ್ಲದಿದ್ದರೆ ಬಾವಿಯಲ್ಲಿದ್ದ ಕಪ್ಪೆಯಂತೆ, ಶುಷ್ಕ ವೃಕ್ಷದಂತೆ ನಿರರ್ಥಕವಾಗುವದು. ಧರ್ಮದಲ್ಲಿ ಮತಾಂಧತೆ ತುಂಬಿದ್ದರೆ ಸಮುದ್ರದಲ್ಲಿ ಈಸಲು ಕಷ್ಟವಾಗುವದು. ಯಾವಾಗಲೂ ಹಳೆಯದೆ ಸರಿ ಎಂಬ ಪ್ರಾಚೀನ ಪೂಜೆಯ ಮನೋ ಭಾವ ನಮ್ಮಲ್ಲಿ ಬೆಳೆಯುತ್ತ ಬಂದಿದೆ. ಹೊಸದನ್ನು ಯೋಚಿಸೋಣ ಅನ್ನುವದು ಮರೆತು ಹೋಗಿದೆ. ನಾವು ಎಡವಿ ಬೀಳಬಹುದು. ಎಡವಿದಂತೆ ಹೆಚ್ಚು ಸುಧಾರಿಸುತ್ತ ಹೋಗುತ್ತೇವೆ. ಧರ್ಮದಲ್ಲಿ ಸಂಕುಚಿತದ ಅಡ್ಡಗೋಡೆಯನ್ನೇ ಹಾಕಿದರೆ ಅದು ಕೊನೆಯ ವರೆಗೆ ಗೋಡೆಯಾಗಿಯೇ ಉಳಿಯುತ್ತದೆಯೇ ಹೊರತು ಮಾನವನಿಗೆ ಶಾಂತಿ ಸಮಾಧಾನ ದೊರೆಯಲಾರದು. ಮನುಷ್ಯನು ಸುಳ್ಳಾಡುತ್ತಾನೆಂಬುದು ನಿಜ. ಜೊತೆಗೆ ದೇವರೂ ಆಗಬಲ್ಲ ಶಕ್ತಿಯಿದೆ. ಯಾರು ಸ್ವಂತ ಯೋಚಿಸಿ ಪ್ರಕಾಶದ ಕಡೆಗೆ ಧಾರ್ಮಿಕ ಲೋಕದಲ್ಲಿ ಕಾಲಿರಿಸುವದಿಲ್ಲವೋ ಅವರಿಗೆ ಧರ್ಮದ ಅರಿವು ಅರ್ಥವಾಗು ವದಿಲ್ಲ. ಧರ್ಮವು ವಿಶಾಲ ತಳಹದಿಯ ಮೇಲಿದ್ದು ಎಲ್ಲರನ್ನು ಒಳಕೊಳ್ಳುವ ವೈಶಾಲ್ಯ ಬಂದರೆ ಭಾವೈಕ್ಯ ಸಾಧ್ಯ. ಆಗ ಸ್ವಧರ್ಮ ನಿಷ್ಠೆ ಪರಧರ್ಮ ಸಹಿಷ್ಣುತೆ ಉಂಟಾಗುತ್ತದೆ. ಹೃದಯವನ್ನು ಮೃದು ಮಾಡುವ ಮಹತ್ಸಾಧನೆಯು ಧರ್ಮವೇ ಹೊರತು ಮತ್ತೊಂ ದಿಲ್ಲ. ಧರ್ಮದ ಹೆಸರಿನಿಂದ ಘೋರತಮ ಆಸುರೀದ್ವೇಷಗಳು ಉಂಟಾಗಿ, ಮತಭ್ರಾಂತಿ ಹೆಚ್ಚಾಗಿ, ಕೊಲೆ-ಸುಲಿಗೆ ಸಾಕಷ್ಟಾಗಿದ್ದು ಕೇಳಿದ್ದೇವೆ. ಮತಗಳ ಪರಸ್ಪರ ತಿಕ್ಕಾಟದಿಂದ ದ್ವೇಷಾಸೂಯೆಗಳು ಹೆಚ್ಚಾದಾಗ ಮಹಾನ್ ವ್ಯಕ್ತಿಗಳು ಉದ್ಭವಿಸಿ ಶಾಂತಿ ಸೌಹಾರ್ದ

